

ಕರ್ನಾಟಕ ಸರಕಾರ

ಕಾದಂಬರಿ

C.No-879

# ಮೃತ್ಯುಂಜಯ

ನಿರಂಜನ

ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ





38

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ

ಜ್ಞಾನ ಮಂದಿರಕ್ಕೆ ದಾವಣಗೆರೆ ಶ್ರೀ|| ವಿ. ಎಂ. ಚನ್ನಬಸಯ್ಯನವರು

ಸಮರ್ಪಿಸಿದ್ದು.

ತಾ. 20-1-1988 ನೇ ಬುಧವಾರ

# ಮೃತ್ಯುಂಜಯ

ನಿರಂಜನ




ವಿಶ್ವ ಕನ್ನಡ ಸಮ್ಮೇಳನ
14–3ಎ, ನೃಪತುಂಗ ರಸ್ತೆ
ಬೆಂಗಳೂರು–560 002

MRUTYUNJAYA—A novel in Kannada by Niranjana. Published by K. Jayacharya, K.A.S. Additional Director. Directorate of Kannada & Culture (Viswa Kannada Sammelana) 14/3A, Nrupathunga Road, Bangalore-560 002. Pages xii + 696. 5,000 Copies.







ಬೆಲೆ : ೬–೦೦ ರೂಪಾಯಿಗಳು

ಮುದ್ರಕರು
ಜಯಲಕ್ಷ್ಮಿ ಪ್ರಿಂಟರ್ಸ್,
ಮೈಸೂರು–570 004

ಆರ್. ಗುಂಡೂರಾವ್
ಮುಖ್ಯ ಮಂತ್ರಿ




ವಿಧಾನ ಸೌಧ
ಬೆಂಗಳೂರು

ದಿನಾಂಕ : ೧೮–೯–೧೯೮೨

# ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ, ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾ ವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

## 'ಮೃತ್ಯುಂಜಯ' ಚಿತ್ರಶಾಲೆ

ಈ ಕಾದಂಬರಿಯಲ್ಲಿ ಚಿತ್ರಿತವಾಗಿರುವ—ಪ್ರಸ್ತಾಪಿಸಲ್ಪಟ್ಟಿರುವ—ವ್ಯಕ್ತಿಗಳು, ದೇವರು, ದೇವತೆಯರು, ನದಿ, ಸ್ಥಳ, ವಸ್ತು, ಪ್ರದೇಶ, ದೇಶಗಳು :

ಅನ್ಪು : ನೀರಾನೆಪ್ರಾಂತದ ಮುಖ್ಯ ಪಟ್ಟಣದ ಬಡ ನೇಕಾರ.

ಅನೂಬಿಸ್ : ಸತ್ತವರ ವಿಚಾರಣೆ ನಡೆಸಲು ಪರಲೋಕದ ನ್ಯಾಯಮೂರ್ತಿ ಒಸ್ಸೈರಿಸ್‌ಗೆ ನೆರವಾಗುವ ತೋಳ ತಲೆಯ ದೇವತೆ; ಶವಲೇಪನದ ದೇವತೆ ಕೂಡಾ.

ಅಪೆಟ್ : ನೀರಾನೆಪ್ರಾಂತದ ಮುಖ್ಯ ಪಟ್ಟಣದ ದೇವಮಂದಿರದ ಅರ್ಚಕ.

ಅಪೋಫಿಸ್ : ರಾಜಧಾನಿಯಲ್ಲಿ ದೇವತಾಮೂರ್ತಿಗಳನ್ನು ಮಾರುವ ಅಂಗಡಿಕಾರ.

ಅಬ್ಟು : ಒಸ್ಸೈರಿಸ್ ದೇವತೆಯ ಗೋರಿ ಇರುವ ಯಾತ್ರಾಸ್ಥಳ; ಐಗುಪ್ತದ ಪರಮ ಪುಣ್ಯಕ್ಷೇತ್ರ; ಮುಂದೆ ಗ್ರೀಕರಿಟ್ಟ ಹೆಸರು ಅಬಿಡೊಸ್.

ಅಮನ್ : ರಾ, ಪ್‌ಟಾ, ಅಮನ್—ಐಗುಪ್ತದ ಮೂವರು ಪರಮ ಶ್ರೇಷ್ಠ ದೇವರು. ಆರಂಭದಲ್ಲಿ ಅಮನ್ ದಕ್ಷಿಣ ಐಗುಪ್ತದಲ್ಲಷ್ಟೇ ಹಿರಿಯ ದೇವರೆಂದು ಪ್ರಸಿದ್ಧ.

ಅಮೆನೆಮೊಪೆಟ್ : ಐಗುಪ್ತದ ಸೇನಾನಿ.

ಅಮೋಸೆಸ್ : ಲಿಪಿಕಾರ.

ಅಹಮೋಸ್ : ತೀರಾ ಪ್ರಾಚೀನ ಫೆರೋ.

ಅಹೂರಾ : ನೀರಾನೆಪ್ರಾಂತದ ಗ್ರಾಮೀಣ ಮಹಿಳೆ.

ಆಂಖ್ : ರಾಜಲಾಂಛನ: ಉರುಳಿನಾಕಾರದ ತಲೆಯ, ಹಸುರು ಹೊಳಪಿನ ಕಿರಿಯ ಶಿಲುಬೆಯಾಕೃತಿ.

ಆನ್ : ರಾ ದೇವರ ಮಹಾಮಂದಿರವಿರುವ ನಗರಿ; ಮುಂದೆ ಗ್ರೀಕರು ಅದನ್ನು ಹಿಲಿಯೊಪೊಲಿಸ್—ಸೂರ್ಯನಗರಿ—ಎಂದು ಕರೆದರು.

ಆಪಿಸ್ : ಮರಣಾನಂತರ ದೇವತೆಯಾದ ಪವಿತ್ರ ಹೋರಿ.

ಆಮೆರಬ್ : ಐಗುಪ್ತದ ಅಮಾತ್ಯ.
ಇನೇನಿ : ರಾಜಧಾನಿಯಲ್ಲಿ ಅರಮನೆಯ ದೇವಮಂದಿರದ ಅರ್ಚಕ.
ಇಪ್ಯುವರ್ : ನೀರಾನೆಪ್ರಾಂತದ ರಾಜಗೃಹದ ಲಿಪಿಕಾರ.
ಉಟೆನ್ : ತಾಮ್ರದ ಕಡ್ಡಿಯ ಸಾಂಕೇತಿಕ ಮೌಲ್ಯಮಾಪಕ.
ಎಡ್ಫು : ದುಷ್ಟ ಸೆತ್‌ನನ್ನು ವೀರ ಹೋರಸ್ ಸಂಹರಿಸಿದ ಸ್ಥಳ.
ಐಗುಪ್ತ : ಪ್ರಸ್ತುತ ಈಜಿಪ್ಟ್.
ಐಸಿಸ್ : ಒಸ್ಯೆರಿಸ್ ಪತ್ನಿ ; ಈಕೆಯೂ ದೇವತೆ.
ಒಸ್ಯೆರಿಸ್ : ಸೃಷ್ಟಿಕರ್ತ ರಾನ ಪುತ್ರ ; ರಾ 'ಸಹಸ್ರಾರು' ವರ್ಷ ಆಳಿ ಕಾಲವಾದಮೇಲೆ ಪಟ್ಟಕ್ಕೆ ಬಂದವನು.
ಔಟ : ನೀರಾನೆಪ್ರಾಂತದ 'ಐವತ್ತರ ಶ್ರೇಷ್ಠ'—ಐವತ್ತು ಭಟರ ಮುಖಂಡ ; ನಾಯಕ ಮೆನ್‌ಪ್‌ಟಾನ ಅಂಗರಕ್ಷಕ.
ಕಾಪೀರು : ಮೇಸ್ತ್ರಿ.
ಕಾಫ್‌ರಾ : ಪ್ರಖ್ಯಾತ ಪೆರೋ ; ಐತಿಹಾಸಿಕ ವ್ಯಕ್ತಿ.
ಕೆಫ್ಟಿಯು : ಕ್ರೀಟ್ ದ್ವೀಪದ ಹಳೆಯ ಹೆಸರು.
ಕೆಫ್ಟು : ಕೆಫ್ಟಿಯು ದ್ವೀಪದ ವರ್ತಕ.
ಖೂಫೂ : ಸುಪ್ರಸಿದ್ಧ ಪೆರೋ ; ಐತಿಹಾಸಿಕ ವ್ಯಕ್ತಿ.
ಖ್ನೆಮ್‌ಹೊಟೆಪ್ : ನೀರಾನೆಪ್ರಾಂತದ ಕಾವಲು ಭಟರ ದಳಪತಿ.
ಖ್ನೆಮು : ನೀಲನದಿಯ ದೇವತೆ.
ಖೇಟಾ : ಹಿಟ್ಟೈಟ್ ಜನರು.
ಖೊನ್ಸು : ಐಗುಪ್ತದ ಪ್ರವಾಸಿಗಳ ಅಧಿಕಾರಿ.
ಗೇಬು : ನೀರಾನೆಪ್ರಾಂತದ ಪ್ರಾಂತಪಾಲ.
ಚೆಯ್ಯಾಕ್ಲೆ : ತಿಂಗಳ ಹೆಸರು.
ಜಜ್‌ಮಂಖ್ : ಗೋರಿ ದರೋಡೆಗಾರ.
ಜೋಸೆರ್ : ಪ್ರಖ್ಯಾತ ಪೆರೋ ; ಐತಿಹಾಸಿಕ ವ್ಯಕ್ತಿ.
ಟೆಹುಟಿ : ಐಗುಪ್ತದ ಒಬ್ಬ ಮುಖ್ಯ ಕಂದಾಯ ಅಧಿಕಾರಿ ; ಮಹತ್ವಾಕಾಂಕ್ಷಿ.
ತಬುಬುವಾ : ನೀರಾನೆ ಪ್ರಾಂತದ ಪ್ರಮುಖ ಪ್ರಜೆ ಸೆಬೆಕ್ಖುವಿನ ಪತ್ನಿ.
ಥಾನಿಸ್ : ನೀರಾನೆಪ್ರಾಂತದ ಹಿರಿಯರ ಸಮಿತಿಯ ಒಬ್ಬ ಸದಸ್ಯ.

ಥೊಎರಿಸ್ : ಬಸಿರಿನ ರಕ್ಷಣೆಯ ಮತ್ತು ಸುಖಪ್ರಸವದ ದೇವತೆ; ಸ್ತ್ರೀ ದೇಹ —ನೀರಾನೆ ಮುಖ.

ಥೊಥ್ : ವಿದ್ಯಾ ದೇವತೆ ; ತಿಂಗಳ ಹೆಸರು ಕೂಡಾ.

ದೆಂದೆರೆ : ಹಾಥೊರ್ ದೇವತೆಯ ದೇವಾಲಯವಿರುವ ಊರು.

ದೆಬೆನ್ : ಬಂಗಾರದ ತೂಕ; ಎರಡೂವರೆ ಔನ್ಸ್.

ನೀರಾನೆಪ್ರಾಂತ : ಪ್ರತಿಪ್ರಾಂತಕ್ಕೂ ಅಲ್ಲಿನ ಬುಡಕಟ್ಟಿನ ರಕ್ಷಕ ಸಂಕೇತದ ಹೆಸರಿಡುತ್ತಿದ್ದರು ; ಈ ಬಗೆಯವು ಮೊಸಳೆಪ್ರಾಂತ, ಜಿಂಕೆ ಪ್ರಾಂತ, ಟಗರುಪ್ರಾಂತ, ಇತ್ಯಾದಿ. ಪೆರೋನ ವಿರುದ್ಧ ದಂಗೆ ಎದ್ದದ್ದು ನೀರಾನೆಪ್ರಾಂತ.

ನೀಲ : ನೈಲ್.

ನುಟ್‌ವೋಸ್ : ನೀರಾನೆಪ್ರಾಂತದ ಹಿರಿಯ ಭೂಮಾಲಿಕ.

ನುಬಿಯ : ಐಗುಪ್ತದ ದಕ್ಷಿಣಕ್ಕಿರುವ ದೇಶ ; ಈಗಿನ ಉಗಾಂಡ.

ನೆಖೆನ್ : ಹಿರಿಯ ಶಿಲ್ಪಿ.

ನೆಜಮುಟ್ : ನೀರಾನೆಪ್ರಾಂತದ ಪ್ರಮುಖ ಕುಶಲ ಕರ್ಮಿ ಸ್ನೊಫ್ರುವಿನ ಪತ್ನಿ.

ನೆಫರ್‌ಟೀಮ್ : ಮಹಾರಾಣಿ : ಪೆರೋ ಪೇಪಿಯ ಪಟ್ಟದ ಮಹಿಷಿ.

ನೆಫರುರಾ : ದಾಸ್ಯದಿಂದ ಮುಕ್ತಳಾಗುವ ಸ್ತ್ರೀ.

ನೆಫಿಸ್ : ನೀರಾನೆಪ್ರಾಂತದ ಜನನಾಯಕ ಮೆನೆಪ್‌ಟಾನ ಮಡದಿ.

ನೆಬೆತ್‌ಪೆರ್ : ಮನೆಯೊಡತಿ.

ನೆಹನವೇಯ್ಟ್ : ಪ್ರಾಂತಪಾಲ ಗೇಬುವಿನ ಪತ್ನಿ.

ಪ್‌ಟಾ : ಕುಶಲಕರ್ಮಿಗಳ ದೇವರು. ಅವನೇ ಸೃಷ್ಟಿಕರ್ತ ಎಂದು ಒಂದು ಮತ. ರಾ, ಪ್‌ಟಾ, ಅಮನ್—ಐಗುಪ್ತದ ಮೂವರು ಪರಮ ಶ್ರೇಷ್ಠ ದೇವರು.

ಪಂಟ್ : ಭಾರತದ ತುಳುನಾಡು.

ಪಾವೊಫಿ : ತಿಂಗಳ ಹೆಸರು.

ಪೆರೋ : ಐಗುಪ್ತದ ದೊರೆ, ಸಮ್ರಾಟ. ಪೆರು : ಮಹಾಮನೆ ; ಪೆರೋ : ಮಹಾಮನೆಯ ನಿವಾಸಿ ; ಹೀಬ್ರೂ ಭಾಷೆಯಲ್ಲಿ ಪೆರೋನನ್ನು

ಆಮೆರಬ್ : ಐಗುಪ್ತದ ಅಮಾತ್ಯ.

ಇನೇನಿ : ರಾಜಧಾನಿಯಲ್ಲಿ ಅರಮನೆಯ ದೇವಮಂದಿರದ ಅರ್ಚಕ.

ಇಪ್ಯುವರ್ : ನೀರಾನೆಪ್ರಾಂತದ ರಾಜಗೃಹದ ಲಿಪಿಕಾರ.

ಉಟೆನ್ : ತಾಮ್ರದ ಕಡ್ಡಿಯ ಸಾಂಕೇತಿಕ ಮೌಲ್ಯಮಾಪಕ.

ಎಡ್ಫು : ದುಷ್ಟ ಸೆತ್‌ನನ್ನು ವೀರ ಹೋರಸ್ ಸಂಹರಿಸಿದ ಸ್ಥಳ.

ಐಗುಪ್ತ : ಪ್ರಸ್ತುತ ಈಜಿಪ್ಟ್.

ಐಸಿಸ್ : ಒಸ್ಯೆರಿಸ್ ಪತ್ನಿ ; ಈಕೆಯೂ ದೇವತೆ.

ಒಸ್ಯೆರಿಸ್ : ಸೃಷ್ಟಿಕರ್ತ ರಾನ ಪುತ್ರ ; ರಾ 'ಸಹಸ್ರಾರು' ವರ್ಷ ಆಳಿ ಕಾಲ
ವಾದಮೇಲೆ ಪಟ್ಟಕ್ಕೆ ಬಂದವನು.

ಔಟ : ನೀರಾನೆಪ್ರಾಂತದ 'ಐವತ್ತರ ಶ್ರೇಷ್ಠ'—ಐವತ್ತು ಭಟರ ಮುಖಂಡ ;
ನಾಯಕ ಮೆನ್‌ಪ್‌ಟಾನ ಅಂಗರಕ್ಷಕ.

ಕಾಪೀರು : ಮೇಸ್ತ್ರಿ.

ಕಾಫ್‌ರಾ : ಪ್ರಖ್ಯಾತ ಪೆರೋ ; ಐತಿಹಾಸಿಕ ವ್ಯಕ್ತಿ.

ಕೆಫ್ಟಿಯು : ಕ್ರೀಟ್ ದ್ವೀಪದ ಹಳೆಯ ಹೆಸರು.

ಕೆಫ್ಟು : ಕೆಫ್ಟಿಯು ದ್ವೀಪದ ವರ್ತಕ.

ಖೂಫೂ : ಸುಪ್ರಸಿದ್ಧ ಪೆರೋ ; ಐತಿಹಾಸಿಕ ವ್ಯಕ್ತಿ.

ಖ್ನೆಮ್‌ಹೊಟೆಪ್ : ನೀರಾನೆಪ್ರಾಂತದ ಕಾವಲು ಭಟರ ದಳಪತಿ.

ಖ್ನೆಮು : ನೀಲನದಿಯ ದೇವತೆ.

ಖೇಟಾ : ಹಿಟ್ಟೈಟ್ ಜನರು.

ಖೊನ್ಸು : ಐಗುಪ್ತದ ಪ್ರವಾಸಿಗಳ ಅಧಿಕಾರಿ.

ಗೇಬು : ನೀರಾನೆಪ್ರಾಂತದ ಪ್ರಾಂತಪಾಲ.

ಚ್ಯೊಯಾಕ್ಲೆ : ತಿಂಗಳ ಹೆಸರು.

ಜಜ್‌ಮಂಖ್ : ಗೋರಿ ದರೋಡೆಗಾರ.

ಜೋಸರ್ : ಪ್ರಖ್ಯಾತ ಪೆರೋ ; ಐತಿಹಾಸಿಕ ವ್ಯಕ್ತಿ.

ಟೆಹುಟ : ಐಗುಪ್ತದ ಒಬ್ಬ ಮುಖ್ಯ ಕಂದಾಯ ಅಧಿಕಾರಿ ; ಮಹತ್ವಾಕಾಂಕ್ಷಿ.

ತಬುಬುವಾ : ನೀರಾನೆ ಪ್ರಾಂತದ ಪ್ರಮುಖ ಪ್ರಜೆ ಸೆಬೆಕ್ಖುವಿನ ಪತ್ನಿ.

ಥಾನಿಸ್ : ನೀರಾನೆಪ್ರಾಂತದ ಹಿರಿಯರ ಸಮಿತಿಯ ಒಬ್ಬ ಸದಸ್ಯ.

ಥೊಎರಿಸ್ : ಬಸಿರಿನ ರಕ್ಷಣೆಯ ಮತ್ತು ಸುಖಪ್ರಸವದ ದೇವತೆ; ಸ್ತ್ರೀ ದೇಹ —ನೀರಾನೆ ಮುಖ.

ಥೊಥ್ : ವಿದ್ಯಾ ದೇವತೆ; ತಿಂಗಳ ಹೆಸರು ಕೂಡಾ.

ದೆಂದೆರೆ : ಹಾಥೊರ್ ದೇವತೆಯ ದೇವಾಲಯವಿರುವ ಊರು.

ದೆಬೆನ್ : ಬಂಗಾರದ ತೂಕ; ಎರಡೂವರೆ ಔನ್ಸ್.

ನೀರಾನೆಪ್ರಾಂತ : ಪ್ರತಿಪ್ರಾಂತಕ್ಕೂ ಅಲ್ಲಿನ ಬುಡಕಟ್ಟಿನ ರಕ್ಷಕ ಸಂಕೇತದ ಹೆಸರಿಡುತ್ತಿದ್ದರು ; ಈ ಬಗೆಯವು ಮೊಸಳೆಪ್ರಾಂತ, ಜಿಂಕೆ ಪ್ರಾಂತ, ಟಗರುಪ್ರಾಂತ, ಇತ್ಯಾದಿ. ಪೆರೋನ ವಿರುದ್ಧ ದಂಗೆ ಎದ್ದದ್ದು ನೀರಾನೆಪ್ರಾಂತ.

ನೀಲ : ನೈಲ್.

ನುಟ್‌ಮೋಸ್ : ನೀರಾನೆಪ್ರಾಂತದ ಹಿರಿಯ ಭೂಮಾಲಿಕ.

ನುಬಿಯ : ಐಗುಪ್ತದ ದಕ್ಷಿಣಕ್ಕಿರುವ ದೇಶ ; ಈಗಿನ ಉಗಾಂಡ.

ನೆಖೆನ್ : ಹಿರಿಯ ಶಿಲ್ಪಿ.

ನೆಜಮುಟ್ : ನೀರಾನೆಪ್ರಾಂತದ ಪ್ರಮುಖ ಕುಶಲ ಕರ್ಮಿ ಸ್ನೊಫ್ರುವಿನ ಪತ್ನಿ.

ನೆಫರ್‌ಟೀಮ್ : ಮಹಾರಾಣಿ : ಪೆರೋ ಪೇಪಿಯ ಪಟ್ಟದ ಮಹಿಷಿ.

ನೆಫರುರಾ : ದಾಸ್ಯದಿಂದ ಮುಕ್ತಳಾಗುವ ಸ್ತ್ರೀ.

ನೆಫಿಸ್ : ನೀರಾನೆಪ್ರಾಂತದ ಜನನಾಯಕ ಮೆನೆಪ್‌ಟಾನ ಮಡದಿ.

ನೆಬೆತ್‌ಪೆರ್ : ಮನೆಯೊಡತಿ.

ನೆಹನವೇಯ್ಟ್ : ಪ್ರಾಂತಪಾಲ ಗೇಬುವಿನ ಪತ್ನಿ.

ಪ್‌ಟಾ : ಕುಶಲಕರ್ಮಿಗಳ ದೇವರು. ಅವನೇ ಸೃಷ್ಟಿಕರ್ತ ಎಂದು ಒಂದು ಮತ. ರಾ, ಪ್‌ಟಾ, ಅಮನ್—ಐಗುಪ್ತದ ಮೂವರು ಪರಮ ಶ್ರೇಷ್ಠ ದೇವರು.

ಪಂಟ್ : ಭಾರತದ ತುಳುನಾಡು.

ಪಾವೊಫಿ : ತಿಂಗಳ ಹೆಸರು.

ಪೆರೋ : ಐಗುಪ್ತದ ದೊರೆ, ಸಮ್ರಾಟ. ಪೆರು : ಮಹಾಮನೆ ; ಪೆರೋ : ಮಹಾಮನೆಯ ನಿವಾಸಿ ; ಹೀಬ್ರೂ ಭಾಷೆಯಲ್ಲಿ ಪೆರೋನನ್ನು

ಫೇರೋ ಎಂದು ಕರೆದರು. ಮುಂದೆ ಅದೇ ಬಳಕೆಗೆ ಬಂತು.

ಪೇಪಿ : ದೀರ್ಘಕಾಲ ಆಳಿದ ಈ ಪೆರೋ ಆ ಹೆಸರಿನ ಎರಡನೆಯ ಅರಸ.

ಫಿಲೇ : ನೀಲ ನದಿಯ ನಡುಗಡ್ಡೆ, ಪವಿತ್ರ ಸ್ಥಳ. ಇಲ್ಲಿಂದ ನದಿ ಐಗುಪ್ತದ ಬಯಲಿಗೆ ಧುಮುಕುತ್ತದೆ.

ಬಕಿಲ : ರಾಜಭಟರ ಒಬ್ಬ ಮುಖ್ಯಸ್ಥ.

ಬಟಾ : ನೀರಾನೆಪ್ರಾಂತದ ದೋಣಿಕಾರ.

ಬಾಸ್ಟ್ : ಪವಿತ್ರ ಬೆಕ್ಕು ದೇವತೆ.

ಬ್ಯಾಬಿಲನ್ : ವಿದೇಶೀ ನಗರ.

ಬೆಕ್ : ನೀರಾನೆಪ್ರಾಂತದ ಯೋಧಪಡೆಯ 'ಐವತ್ತರ ಶ್ರೇಷ್ಠ' ; ಜನನಾಯಕ ಮೆನಪ್‌ಟಾನ ಅಂಗರಕ್ಷಕ.

ಬೆಸ್ : ಪಿಶಾಚಿಗಳನ್ನು ಓಡಿಸುವ ದೇವತೆ; ಸಂಗೀತ ನೃತ್ಯಗಳ ದೇವತೆ ಕೂಡಾ.

ಮಹಾ ಹಸುರು ಸಮುದ್ರ : ಭೂಮಧ್ಯ ಸಮುದ್ರ.

ಮಿನೊ : ಭೂಮಧ್ಯ ಸಮುದ್ರದ ಒಂದು ದ್ವೀಪ.

ಮೆಂಕೋರಾ : ಇತಿಹಾಸಕಾಲದ ಪೆರೋ.

ಮೆಂಫಿಸ್ : ಐಗುಪ್ತದ ರಾಜಧಾನಿ.

ಮೆನ್ನ : ಬಂಡಾಯಗಾರ ಯುವಕ ದೇವಸೇವಕ.

ಮೆನೆಪ್‌ಟಾ : ನೀರಾನೆಪ್ರಾಂತದ ಜನನಾಯಕ.

ಮೆನೆಸ್ : ಐಗುಪ್ತದ ಉತ್ತರ ದಕ್ಷಿಣ ಭಾಗಗಳನ್ನು ಒಗ್ಗೂಡಿಸಿದ (ಇತಿಹಾಸ ಕಾಲಾವಧಿಯ) ಮೊದಲ ಪೆರೋ ; ನಾರ್ಮೆರ್ ಎಂಬ ಹೆಸರೂ ಇದೆ ; ಮೆಂಫಿಸ್ ನಗರವನ್ನು ಕಟ್ಟಿಸಿದವನು.

ಮೆರಿಕರಾ : ಆಗಿಹೋದ ಒಬ್ಬ ಪೆರೋ.

ರಾ : ಸೂರ್ಯ ; ರಾ, ಪ್‌ಟಾ, ಅಮನ್—ಐಗುಪ್ತದ ಮೂವರು ಪರಮ ಶ್ರೇಷ್ಠ ದೇವರು.

ರಾನೋಫರ್ : ರಾಮೆರಿಪ್‌ಟಾನ ಸಹಪಾಠಿ.

ರಾಮೆರಿಪ್‌ಟಾ : ಜನನಾಯಕ ಮೆನೆಪ್‌ಟಾನ ಮಗ.

ಲಿಷ್ಟ್ : ರಾಜಧಾನಿಯ ಹತ್ತಿರದಲ್ಲಿ ದಕ್ಷಿಣಕ್ಕಿರುವ ಸಣ್ಣ ಪಟ್ಟಣ.

ಲೆಬನನ್ : ಐಗುಪ್ತದ ಸಮೀಪ ದೇಶ.

ವೆಸಿ : ಅಮನ್ ದೇವರ ಸ್ಥಳ; ಗ್ರೀಕರು ಮುಂದೆ ಇದನ್ನು ಥೀಬ್ಸ್ ಎಂದು ಕರೆದರು; 'ನೆ' ಎಂಬ ಹೆಸರೂ ಅದಕ್ಕಿತ್ತು.

ಷಾಡೂಫ್ : ಯಾತ.

ಶೀಬಾ : ಅರಮನೆಯಲ್ಲಿ ಕಸಾಯಿ ಮನೆಯ ಕೆಲಸಗಾತಿ.

ಸರು : ರಾಜಧಾನಿಯಲ್ಲಿನ ಹಿರಿಯ ಸಲಹೆಗಾರರ ಮಂಡಲಿ.

ಸಿನ್ಯುಹೆ : ನೀರಾನೆಪ್ರಾಂತದ ಒಬ್ಬ ಭೂಮಾಲಿಕ.

ಸೆರ್ಕೆಟ್ : ಆನ್‌ನಗರಿಯ ಅಧಿಕಾರಿ.

ಸೆತ್ : ಅಣ್ಣ ಒಸ್ಸೈರಿಸನನ್ನು ಕೊಲೆ ಮಾಡಿದ ದುಷ್ಟ; ರಾ ಪುತ್ರ.

ಸೆತ್ನಾ : ನೀರಾನೆಪ್ರಾಂತದ ಬಡಗಿ.

ಸೆತೆಕ್‌ನಖ್ತ್ : ನೀರಾನೆಪ್ರಾಂತದ ಇನ್ನೊಬ್ಬ ಭೂಮಾಲಿಕ.

ಸೆನ್‌ಉಸರ್ಟ್ : ನೀರಾನೆಪ್ರಾಂತದ ಮತ್ತೊಬ್ಬ ಭೂಮಾಲಿಕ.

ಸೆನೆಬ್ : ಅಮಾತ್ಯ ಭವನದ ಹಿರಿಯ ಲಿಪಿಕಾರ.

ಸೆಬೆಕ್ಪ್ : ನೀರಾನೆಪ್ರಾಂತದ ಒಬ್ಬ ಪ್ರಮುಖ ಪ್ರಜೆ.

ಸೆಮು : ನೀರಾನೆಪ್ರಾಂತದ ಹಿರಿಯರ ಸಮಿತಿಯ ಒಬ್ಬ ಸದಸ್ಯ.

ಸ್ಸೈಪ್ರಸ್ : ಐಗುಪ್ತದ ನೆರೆಹೊರೆ ದೇಶ.

ಸ್ಟೈನ್ಸೈ : ಐಗುಪ್ತದ ಈಶಾನ್ಯ ಗಡಿ ದೇಶ ; ಸ್ಯೆನ್ಯಾ ಎಂದರೂ ಇದೇ.

ಸ್ಯೆನೆ : ಈಗಿನ ಅಸ್ವಾನಿನ ಪ್ರಾಚೀನ ಹೆಸರು.

ಸ್ನೊಫ್ರು : ನೀರಾನೆಪ್ರಾಂತದ ಪ್ರಮುಖ ಪ್ರಜೆ.

ಸೊಬೆಕ್ : ಮೊಸಳೆ ದೇವತೆ.

ಸೊಥಿಸ್ : ಸಿರಿಯಸ್ ನಕ್ಷತ್ರದ ಪ್ರಾಚೀನ ಹೆಸರು ; ಲುಬ್ಧಕ ನಕ್ಷತ್ರ.

ಮಂದಹಾಸ ಬೀರಿ, "ಆಗಬಹುದಲ್ಲ," ಎಂದ ಆತ.

ದೋಣಿ ದಂಡೆಯನ್ನು ಮುಟ್ಟಿತು.

ಪಯಣದುದ್ದಕ್ಕೂ, ದಕ್ಷಿಣಾಭಿಮುಖವಾದ ಪವನ ಹಾಯಿಯನ್ನು ತುಂಬಿ, ದೋಣಿಯ ಚಲನೆಗೆ ನೆರವಾಗಿತ್ತು. ಕ್ರಮಿಸಲು ಇನ್ನು ಉಳಿದದ್ದು ಕೂಗಳತೆಯ ದೂರ ಮಾತ್ರ.

" ಹಾಯಿ ಇಳಿಸಿ !"

—ಬಟಾ ಆಜ್ಞಾಪಿಸಿದ.

ಇಬ್ಬರು ನೌಕರರು ಆ ಆಜ್ಞೆಯನ್ನು ಪಾಲಿಸಲು ಉದ್ಯುಕ್ತರಾದರು. ಇನ್ನಿಬ್ಬರು ದಂಡೆಗೆ ಧುಮುಕಿ, ಗಾತ್ರದೊಂದು ಕಲ್ಲಿಗೆ ದೋಣಿಯನ್ನು ಕಟ್ಟಿದರು.

ಹುಡುಕುತ್ತಿದ್ದುದು ದೊರೆತಾಗ ಎಳೆಯ ಮಗು ಅಳು ನಿಲ್ಲಿಸಿ, ಬಾಯಿ ಚಪ್ಪರಿಸತೊಡಗಿತು....

....ಪ್ರವಾಸಿಗರು ದೋಣಿಯತ್ತ ಮರಳುತ್ತಿದ್ದಂತೆ, ಎಡಗಡೆ ಪೂರ್ವದ ಮರಳುಗಾಡಿನಾಚೆ ದಿಗಂತದಿಂದ ಕೆಂಪಿನ ಸೂರ್ಯಗೋಲ ಉದಿಸತೊಡಗಿತು. ಮೆನೆಪ್‌ಟಾ, ನೆಫಿಸ್, ಅವರ ಮಗ ಮತ್ತಿತರ ಎಲ್ಲರೂ ದಂಡೆಯ ಮೇಲೆ ಮಂಡಿಯೂರಿ ಸೂರ್ಯದೇವನಿಗೆ ವಂದಿಸಿದರು.

ದೋಣಿ ಮತ್ತೆ ನದಿಯ ದಾರಿಯನ್ನು ಹಿಡಿಯಿತು. ಪ್ರಯಾಣ ಸುಖಕರವಾಗಿ ಕೊನೆಗಾಣುತ್ತಿದೆ ಎಂದು ಎಲ್ಲರಿಗೂ ಸಂತಸ. ಅವರ ಭಾವನೆಗೆ ಧ್ವನಿ ನೀಡುತ್ತ ಹುಟ್ಟು ಹಾಕುತ್ತಿದ್ದವರು ಹಾಡಿದರು :

"ಓ ನದ ನೀಲ ಓ ಖ್ನೆಮು ದೇವ
ಓ ನೀಲ ಐಸಾ ಓ ಖ್ನೆಮು ಐಸಾ
ತಟಗಳಿಗೆ
ಹಸಿರು ಬಳಿವ
ಚಿತ್ರಕಾರ !
ಓ ನೀಲ ಐಸಾ ಓ ಖ್ನೆಮು ಐಸಾ
ಈ ಬಸಿರು

ಈ ಚಿಗುರು
ಸೃಷ್ಟಿಕರ್ತ !
ಓ ನೀಲ ಐಸಾ ಓ ಖ್ನೆಮು ಐಸಾ !
ಓ ನದ ನೀಲ ಓ ಖ್ನೆಮು ದೇವ...."
ಪಲ್ಲವಿಯನ್ನು ಎಲ್ಲ ಕಂಠಗಳೂ ನುಡಿದುವು :
" ಓ ನದ ನೀಲ ಓ ಖ್ನೆಮು ದೇವ...."

....ಅಬ್ಬುವಿನ ದೋಣಿ ಕಟ್ಟೆ ಬಲು ನೀಳವಾದದ್ದು. ಮೇಲಕ್ಕೂ ಕೆಳಕ್ಕೂ ದೃಷ್ಟಿ ಹರಿಯುವ ವರೆಗೆ ನದಿಯ ಅಂಚಿಗೆ ಕಲ್ಲುಗಳ ಕಟಕಟೆ ಇತ್ತು. ಸಹಸ್ರಾರು ತೆಪ್ಪಗಳೂ ದೋಣಿಗಳೂ ಕಟ್ಟೆಯುದ್ದಕ್ಕೂ ತಂಗಿದ್ದುವು. ಅಬ್ಬು ಗುಡ್ಡದ ಕೆಳಗೆ ವಿಸ್ತಾರ ಪ್ರದೇಶದಲ್ಲಿ ಹೊಸ ನಗರವನ್ನೇ ನಿರ್ಮಿಸಿದಂತಿತ್ತು, ಹಲವು ಹದಿನೆಂಟು ಪ್ರಾಂತಗಳ ಜನಸ್ತೋಮ.

ದಡ ತಲಪುವ ಮುನ್ನ ಇತರ ದೋಣಿಗಳಿಗೆ ಢಿಕ್ಕಿ ಹೊಡೆಯದೆ ಇರುವುದು ದೊಡ್ಡ ಸಾಧನೆ. ಬಟಾನ ಕಿರಿಚುವ ಕಂಠಕ್ಕೆ ಬಿಡುವೇ ಇಲ್ಲ. ಆರ್ಭಟ, ಪರಿಹಾಸ್ಯ, ಬೈಗಳು....

ಇತರ ಅಂಬಿಗರು ಬಟಾನ ಕಡೆ ನೋಡಿದರು ; ದೋಣಿ ಕಟ್ಟೆಯ ವೇದಿಕೆಯ ಮೇಲೆ ನಿಂತಿದ್ದವರತ್ತ ಬೊಟ್ಟು ಮಾಡಿದರು.

ಇದ್ದಕ್ಕಿದ್ದಂತೆ ಸ್ವರ ಬದಲಿಸಿ ಬಟಾ ಗೊಣಗಿದ :

" ಅಗೋ ರಾಜ ಭಟರು ! ನೀವೆಲ್ಲ ಇಳಿದ್ಮೇಲೆ ದೋಣೀನ ಕೆಳಕ್ಕೆ ಒಯ್ದು ಕಟ್ತೀನೆ. ರಾತ್ರೆ ಅಲ್ಲಿಂದ಼್ಲೇ ಹೊರಡೋಣ."

"ಪೆರೋ ಬರ್ತಾರೆ, ಅಲ್ಲವಾ ?"

—ಮೆನೆಪ್‌ಟಾ ಕೇಳಿದ.

ಒಬ್ಬ ರಾಜಭಟನ ಗರ್ಜನೆಯೇ ಆ ಪ್ರಶ್ನೆಗೆ ಉತ್ತರವಾಯಿತು :

"ಬಿಸಿಲೇರೋ ಹೊತ್ತಿಗೆ ಪೆರೋ ಸವಾರಿ ಬಿಜಯ ಮಾಡ್ತದೆ. ಕಟ್ಟೆ ಖಾಲಿ ಮಾಡಿ ! ದೋಣಿಗಳನ್ನ ಕೆಳಗಡೆಯೋ ಮೇಲ್ಗಡೆಯೋ ನಿಲ್ಲಿಸಿ !"

ನಿಮಿಷ ಬಿಟ್ಟು ಮತ್ತೊಬ್ಬ ರಾಜಭಟ ಅದೇ ಆದೇಶವನ್ನು ಗುಡುಗಿದ.

ಎದುರು ದಂಡೆಯಲ್ಲಿ ಪ್ರತಿಧ್ವನಿ ಕಂತುವುದಕ್ಕೆ ಮೊದಲೇ ಮೂರನೆಯ ರಾಜಭಟ ಆದೇಶದ ಪುನರುಚ್ಚಾರ ಆರಂಭಿಸಿದ.

ತನ್ನ ಪ್ರಯಾಣಿಕರು ದೋಣಿಯಿಂದ ಇಳಿಯುತ್ತಿದ್ದಂತೆಯೇ ಬಟಾ ಪರಿಹಾಸ್ಯದ ಧ್ವನಿಯಲ್ಲಿ ನುಡಿದ :

"ಬುತ್ತಿ ಗಿತ್ತಿ ದೋಣೀಲಿ ಬಿಟ್ಹೋಗ್ಬೇಡಿ....ನೀವು ಬರೋದರೊಳಗೆ ಎಲ್ಲಾ ಧ್ವಂಸ ಮಾಡೇವು !"

ಇದನ್ನು ಕೇಳಿ "ಓಹೋ ! ಓಹೋ !" ಎಂದರು ಕೆಲವರು.

ಕೈಗೂಸಿನ ತಾಯಿ ಅಹೂರಾ ಕೇಳಿದಳು :

"ನಮ್ಮದರಿಂದ ರೊಟ್ಟಿ ಗಿಟ್ಟಿ ಕೊಟ್ಟಿರ್ಲಾ ಬಟಾ ಅಣ್ಣ ?"

ಬಟಾ ಉತ್ತರಿಸಿದ :

"ಬೇಡ ತಂಗಿ. ನಮುಗೆಲ್ಲ ನನ್ನ ಯಜಮಾನಿತಿ ಕಟ್ಕೊಟ್ಟಿದ್ದಾಳೆ."

ಅಷ್ಟರಲ್ಲೆ ದಕ್ಷಿಣದಿಂದ ಯಾತ್ರಿಕರನ್ನು ಹೊತ್ತಿದ್ದ ದೊಡ್ಡ ದೋಣಿ ಬಂತು.

ಒಬ್ಬ ರಾಜಭಟ ಕಿರಿಚಿದ :

"ಕತ್ತೇ ಮಕ್ಳು ! ಯಾರಿಗೆ ಹೇಳ್ತಿರೋದು ? ಏಯ್ ನೀನು ! ತೆಗೆ ಯಯ್ಯ ದೋಣಿ !"

ಅದು ತನ್ನನ್ನು ಉದ್ದೇಶಿಸಿ ಆಡಿದ ಮಾತು ಎಂಬುದು ಬಟಾನಿಗೆ ಸ್ಪಷ್ಟ ವಾಯಿತು. ಹುಟ್ಟು ಹಾಕುವಂತೆ ನೌಕರರಿಗೆ ಸೂಚನೆ ನೀಡುತ್ತ, ತನ್ನ ಯಾತ್ರಿಕ ತಂಡದತ್ತ ಕೈಬೀಸಿ ಅವನು ನುಡಿದ :

"ಜಾತ್ರೇಲಿ ತಪ್ಪಿಸ್ಕೊಂಡೀರಿ, ಜಾಗ್ರತೆ ! ಮೆನೆಪ್ಟಾ ಅಣ್ಣನ ಮಾತ್ನಂತೆ ನಡ್ಕೊಳ್ಳಿ. ನಾನು ಕೆಳಗಡೆ ಇರ್ತೇನೆ........ಕತ್ತಲಾದ ತಕ್ಷಣ ಹೊರಟು ಬನ್ನಿ."

ದೋಣಿ ಕಟ್ಟೆಯ ಅಧಿಕಾರಿಯ ಆಜ್ಞೆ ಕೇಳಿಸಿತು:

"ಮೇಲಕ್ಕೂ ಕೆಳಕ್ಕೂ ಹೋಗಿ ! ಬರ್ತಿರೋ ದೋಣಿಗಳನ್ನ ಅಲ್ಲಲ್ಲೇ ತಡೀರಿ !"

ಕಟ್ಟೆಯ ಗೂಟಕ್ಕೆ ಕಟ್ಟಿದ್ದ ಎರಡು ಕಿರುದೋಣಿಗಳನ್ನು ಇಬ್ಬಿಬ್ಬರು

ಯೋಧರು ಏರಿದರು. ಅವುಗಳದು ನೀರು ಸೀಳಿ ಸಾಗುವ ಶೀಘ್ರ ಚಲನೆ. ದೋಣಿ ಕಟ್ಟೆಯುದ್ದಕ್ಕೂ ಬಂದು ಮೇಲಕ್ಕೆ ಸಾಗಿತು ; ಇನ್ನೊಂದು ಕೆಳಕ್ಕೆ ಬರುತ್ತಿದ್ದ ದೋಣಿಗಳನ್ನು ಕಟ್ಟೆಯಿಂದ ದೂರವಿರಿಸುವ ಹೊಣೆ ಅವರದು.

ದೋಣಿಕಟ್ಟೆಯಿಂದ ಗೋರಿಗಳ ಗುಡ್ಡದ ವರೆಗೂ ದಾರಿ ಅಗಲ ವಾಗಿತ್ತು. ಅದು ಬೆಳಗಾಗುವುದರೊಳಗೆ ರೂಪುಗೊಂಡಿದ್ದ ಜಾತ್ರೆಯ ಸಂತೆ. ಅಲ್ಲಲ್ಲಿ ಸೆಣಬಿನ ಅರಿವೆಯ ಗೂಡಾರಗಳು. ಅಲ್ಲಿ ರೊಟ್ಟಿ ಪಾನೀಯಗಳಿದ್ದುವು. ಉಪ್ಪು ಬೆರೆಸಿ ಕಾಪಾಡಿದ ಮೀನು, ಒಣಗಿಸಿದ ಮಾಂಸ, ಈರುಳ್ಳಿ, ನೀರುಸೌತೆಕಾಯಿ, ಖರ್ಜೂರ, ಅಂಜೂರ—ಇವೆಲ್ಲ ಇದ್ದುವು ಮಾರಾಟಕ್ಕೆ. ಮರದಲ್ಲಿ ಕೊರೆದ ದೇವ ದೇವತೆಗಳ ಮೂರ್ತಿಗಳನ್ನು ಮಾರುವ ಅಂಗಡಿಗಳು. ಬೆಳ್ಳಿಯ ಬಂಗಾರದ ಉಂಗುರಗಳು, ಓಲೆಗಳು, ಹಾರಗಳು, ತಾಳೆ ಮರದ ತೊಗಟೆಯ ಪಾದರಕ್ಷೆಗಳು ; ಪೀಠೋಪಕರಣಗಳು, ದಂತದ, ಸ್ವರ್ಣದ ಕೆತ್ತನೆಯ ಸಾಮಗ್ರಿಗಳು; ಕಂಚಿನ ಚೂರಿ, ಕಠಾರಿ; ಕೊರೆದ ಮರದ ಕೈಗೋಲು, ನಡೆಗೋಲು; ಸೆಣಬಿನ ನುಣುಪಾದ ಅಂಗವಸ್ತ್ರಗಳು; ಕವಡೆ ಚಿಪ್ಪುಗಳ ಮಣಿ ಸರಗಳು; ಚೆಂಡು, ಗೋಲಿ; ಸುಗಂಧ ದ್ರವ್ಯಗಳು....

ಬಿಸಿಲೇರುವುದಕ್ಕೆ ಮುನ್ನವೇ ಈ ಮಾರ್ಗ ತುಳಿದವರು ಸಹಸ್ರಾರು ಜನ. ಆ ಸಂದಣಿಯ ಒಂದಂಗವಾಗಿತ್ತು, ನೀರಾನೆ ಪ್ರಾಂತದ ನಾಲ್ವತ್ತು ಮಂದಿಯ ತಂಡ. ಅಂಗಡಿಕಾರರೆಲ್ಲ ಗಿರಾಕಿಗಳನ್ನು ಕರೆಯುವವರೇ; ತಮ್ಮಲ್ಲಿದ್ದ ಸರಕುಗಳ ಗುಣಗಾನ ಮಾಡುವವರೇ.

ಮೆನೆಪ್‌ಟಾ ಗುಡ್ಡದತ್ತ ನೋಡಿದ. ಅದರ ಮೇಲಣ ಭವ್ಯ ಮಂದಿರ ಒಸ್ಸೈರಿಸ್ ದೇವಾಲಯ ಎಂದು ಆತ ಕೇಳಿ ಬಲ್ಲ. ದಾರಿಯ ಕೊನೆಯ ಏರಿಗೆ ಮುನ್ನ ತಾಳೆ ಮರಗಳ ಒಂದು ಪುಟ್ಟ ತೋಪು ಕಾಣಿಸುತ್ತಿತ್ತು.

ಬಂದವರು ತಮ್ಮೊಡನೆ ತಮ್ಮ ಕೈಕಸಬಿನ ವಸ್ತುಗಳನ್ನು ತಂದಿದ್ದರು. ಅವನ್ನು ಕೊಟ್ಟು ತಮಗೆ ಬೇಕಾದ ಸಾಮಗ್ರಿಗಳನ್ನು ಅವರು ಪಡೆಯಬೇಕು. ಜತೆಗೆ, ಕೆಲವರಿಗೆ ಹಸಿವು ಕೆಲವರಿಗೆ ಬಾಯಾರಿಕೆ. ಸ್ವಲ್ಪ ಹೊತ್ತು ಗುಂಪು ಚೆದರಿದರೆ, ಆ ಕೆಲಸವೆಲ್ಲ ಬೇಗ ಬೇಗನೆ ಆಗಬಹುದು ಎನಿಸಿತು ಮೆನೆಪ್‌ಟಾಗೆ.

ಸಹಯಾತ್ರಿಕರನ್ನು ಉದ್ದೇಶಿಸಿ ಅವನೆಂದ :

" ರಾ ದೇವರ ರಥ ನೆತ್ತಿಯ ಮೇಲಕ್ಕೆ ಬರೋಹೊತ್ತಿಗೆ ಆ ತಾಳೆಮರ ಗಳ ನೆರಳಲ್ಲಿ ನಾವು ಸೇರಬೇಕು. ಅಷ್ಟರವರೆಗೆ ಗುಂಪು ಚೆದರಿದರೂ ಚೆದರ ಬಹುದು."

" ಹಾಗೇ ಆಗಲಿ," ಎಂದರು ಗುಂಪಿನ ಹಲವರು.

ದಾರಿ ಏರತೊಡಗಿದಾಗಲೂ ಮುಗಿಯದ ಸಂತೆ. ಕೆಲ ಅಂಗಡಿಗಳ ಮುಂದೆ ಲಿಪಿಕಾರರು ಕುಳಿತಿದ್ದರು. ಲೆಕ್ಕ ಬರೆಯುವವರು. ಒಂದೆರಡು ಕಡೆ ಲಿಪಿಕಾರರೇ ವರ್ತಕರು. ಪೆಪ್ಪೈರಸ್ ಹಾಳೆಯ ಮೇಲೆ ಬರೆದ ಜಾಣ್ನುಡಿಯ ನಾಣ್ನುಡಿಯ ಸುರುಳಿಗಳು ಅವರ ಸರಕು. ದೇವಸೇವಕನೊಬ್ಬ ಜನ್ಮದಿನದ ಆಧಾರದ ಮೇಲೆ ಭವಿಷ್ಯ ನುಡಿಯುತ್ತಿದ್ದ. ಮತ್ತೊಬ್ಬ ದೇವಸೇವಕ ಮಾಂತ್ರಿಕ ವೈದ್ಯ. ಮುಂದಿನವನು ಜಾದುಗಾರ ; " ಚಪ್ಪಾಳೆ ತಟ್ಟಿ !" ಎನ್ನುತ್ತಿದ್ದ ನೆರೆದಿದ್ದ ಹುಡುಗರಿಗೆ. ಮತ್ತೂ ಮುಂದಕ್ಕೆ, ಹೆಚ್ಚು ಜನರನ್ನು ಆಕರ್ಷಿಸಿದ್ದ ದೊಂಬರಾಟ.

ನೆಫಿಸ್ ಗಂಡನನ್ನು ಕೇಳಿದಳು :

" ಸುಮ್ಮನೆ ನೋಡ್ತಾ ಹೋಗೋಣ್ವೋ, ಅಥ್ವಾ....ರಾಮೆರಿಗೆ ಹಸಿವಾ ಗ್ತಿರಬೌದು."

ರಾಮೆರಿಪ್‌ಟಾಗೆ ವರ್ಣರಂಜಿತ ಮಾಯಾನಗರಿಯ ಗುಂಗು. ತಾಯಿಯ ಕೈ ಕೊಸರಿಕೊಂಡು ಮುಂದೆ ಹೋಗುವ ತವಕ. ಆದರೆ ಹೊಟ್ಟೆ ಚುರು ಚುರು ಎನ್ನುತ್ತಿತ್ತು.

ತಂದೆಯೆಂದ :

" ಅವನಿಗಿಷ್ಟು ರೊಟ್ಟಿ ಕೊಡು."

ನೆಫಿಸ್ ಬೀದಿಯ ಬದಿಯಲ್ಲಿ ತನ್ನ ತಲೆಯ ಮೇಲಿನ ಗಂಟನ್ನು ಕೆಳ ಗಿಳಿಸಿ ಬಿಚ್ಚಿದಳು. ಆ ಗಂಟಿನೊಳಗೇನಿದೆ ಎಂದು ತಿಳಿಯುವ ಕುತೂಹಲ ಹತ್ತಿರದ ಅಂಗಡಿಕಾರರಿಗೆ. ಸೆಣಬಿನಲ್ಲಿ ನೆಯ್ದ ಚಿತ್ತಾರ ಬಿಡಿಸಿದ ಚೀಲಗಳು, ಕುಸುರಿ ಕೆಲಸದ ನಡುವಸ್ತ್ರಗಳು, ಪ್ರತ್ಯೇಕವಾಗಿ ಕಟ್ಟಿದ್ದ ಇನ್ನೊಂದು ಗಂಟು, ಜತೆಗೆ ಬುತ್ತಿ....

ಮಗನಿಗೆ ತಾಯಿ ದಪ್ಪ ರೊಟ್ಟಿಯ ಎರಡು ತುಣುಕನ್ನೂ ಈರುಳ್ಳಿ ಯನ್ನೂ ಕೊಟ್ಟಳು.

ಸುರುಳಿಗಳೊಂದಿಗೆ ಪಕ್ಕದಲ್ಲಿ ಕುಳಿತಿದ್ದ ಲಿಪಿಕಾರನೊಬ್ಬ ಮೂವರ ಈ ಪುಟ್ಟ ಸಂಸಾರವನ್ನು ನೋಡುತ್ತಿದ್ದ. ಗಟ್ಟಿಯಾಗಿ ಆತನೆಂದ :

" ಚೂಟಿ ಹುಡುಗ. ವಿದ್ಯಾವಂತನಾಗ್ತಾನೆ. ಸಂಶಯವಿಲ್ಲ."

ತಾಯಿ ತಂದೆ ಇಬ್ಬರ ಕಿವಿಗೂ ಆ ಮಾತು ಬಿತ್ತು.

" ಕೇಳಿಸ್ತೇನೋ ರಾಮೆರಿ ?" ಎಂದಳು ತಾಯಿ.

ತಾನು ಗೆದ್ದೆ ಎನಿಸಿತು ಲಿಪಿಕಾರನಿಗೆ. ಆತ ಮುಂದುವರೆಸಿದ :

" ವಿದ್ಯೆ ಸುಮ್ಸುಮ್ನೆ ಬರೋದಿಲ್ಲವ್ವ. ಪಾಠಗಳ್ನ ಕೊಂಡ್ಕೋಬೇಕು, ಮಗನನ್ನು ಮಂದಿರಕ್ಕೆ ಕಳಿಸ್ಬೇಕು."

ನೆಫಿಸ್ ಗಂಡನತ್ತ ನೋಡಿದಳು :

" ಕೊಡಿಸ್ತೇನೆ ಅಂದಿದ್ದೆಯಲ್ಲ ?"

ಮೆನೆಪ್‌ಟಾಗೆ ಅದು ಹೆಮ್ಮೆಯ, ಸಂತೋಷದ ವ್ಯವಹಾರ. ಆತ ಲಿಪಿ ಕಾರನತ್ತ ಹೊರಳಿದ.

ಗತ್ತಿನಿಂದ ಅವನ ಕಡೆ ತಿರುಗಿ ಲಿಪಿಕಾರ ಕೇಳಿದ :

" ನೀನೇ ಆರಿಸ್ತೀಯೊ ?"

" ಹೌದು."

" ಓದೋಕೆ ಬರ್ತದೊ ?"

" ಇಲ್ಲ ಗುರುಗಳೆ, ನೀವೇ ಓದಿ ಹೇಳಿ."

" ಬಡ ಲಿಪಿಕಾರನನ್ನು ಗುರು ಅಂತ ಕರೆದೆಯಲ್ಲ ! ಪ್‌ಟಾ ದೇವ ನಿನಗೆ ಒಳ್ಳೇದು ಮಾಡ್ಲಿ. ಓದಿ ಹೇಳಿದ್ದಕ್ಕೆ ಒಂದು ರೊಟ್ಟಿ ಶುಲ್ಕ. ನೀನು ಆರಿಸಿದ ಪಾಠಕ್ಕೆ ಬೇರೆ."

" ಆಗಲಿ, ಆಗಲಿ," ಎಂದಳು ನೆಫಿಸ್. ದಾರಿಯ ಧೂಳು ಬೀಳದಂತೆ ಗಂಟನ್ನು ತುಸು ಮುಚ್ಚಿದಳು; ಎತ್ತಿ ಲಿಪಿಕಾರನ ಗೂಡೆಯ ಬಳಿ ಇರಿಸಿದಳು. ಹುಡುಗ ಈರುಳ್ಳಿ ಕಚ್ಚಿ ರೊಟ್ಟಿ ಮೆಲ್ಲುತ್ತ ತಂದೆಯ ಹತ್ತಿರ ನಿಂತ. ಅವನ ಮಗ್ಗುಲಿಗೆ ತಾಯಿ ಸರಿದಳು.

ಒಂದು ಸುರುಳಿಯನ್ನು ಹೊರತೆಗೆದು ಬಿಚ್ಚಿ ಲಿಪಿಕಾರ ಓದಿದ :

" ಹಗಲುಗನಸು ಕಾಣುವುದರಲ್ಲಿ ಕಾಲ ಕಳೆಯಬೇಡ; ಹಾಗೆ ಮಾಡಿದೆ ಯೆಂದರೆ ಸಂಕಷ್ಟಕ್ಕೆ ಈಡಾಗುವೆ."

ಹುಬ್ಬು ಹಾರಿಸಿ ಮೆನೆಪ್‌ಟಾನನ್ನೊಮ್ಮೆ ನೋಡಿ, ಆ ಹಾಳೆಯನ್ನು ಸುತ್ತಿ, ಇನ್ನೊಂದನ್ನು ಲಿಪಿಕಾರ ಬಿಚ್ಚಿ ಓದಿದ :

" ನಿನ್ನ ಬಾಯಿ ನಿನ್ನ ಕೈಯಲ್ಲಿರುವ ಪುಸ್ತಕವನ್ನು ಓದಲಿ; ನಿನಗಿಂತ ಹೆಚ್ಚು ಬಲ್ಲವರಿಂದ ನೀನು ಸಲಹೆ ಪಡೆ."

ಬಳಿಕ ಮತ್ತೊಂದು :

" ಎಳೆಯರಿಗೆ ಬೆನ್ನಿದೆ. ಅದಕ್ಕೆ ಬಾರಿಸಿದಾಗಲೇ ಅವರು ಪಾಠದತ್ತ ಗಮನ ಹರಿಸುತ್ತಾರೆ. ಯಾಕೆಂದರೆ, ಎಳೆಯರ ಕಿವಿ ಇರುವುದು ಅವರ ಬೆನ್ನಿನ ಮೇಲೆ."

ಓದಿ, " ಇದು ಚೆನ್ನಾಗಿದೆ ಅಲ್ಲವೇನಪ್ಪ ?" ಎಂದ ಲಿಪಿಕಾರ.

ಮೆನೆಪ್‌ಟಾ ಮೆಲ್ಲನೆ ತಲೆದೂಗುತ್ತ, ಆತ ಓದುತ್ತಿದ್ದ ಎಲ್ಲವನ್ನೂ ಆಸಕ್ತಿಯಿಂದ ಆಲಿಸುತ್ತಿದ್ದ. ರಾಮೆರಿಪ್‌ಟಾಗೆ ಕೌತುಕ. ರೊಟ್ಟಿಯನ್ನು ಮೆಲ್ಲುತ್ತ ಆತ ನಿಂತ. ನೆಫಿಸಳ ಮುಖದ ಮೇಲೆ ರೂಪುಗೊಂಡ ಅಚ್ಚರಿ ಮಾಯವಾಗಲೇ ಇಲ್ಲ.

ಈ ಗಿರಾಕಿ ಇತ್ಯರ್ಥಕ್ಕೆ ಬರುತ್ತಿಲ್ಲವಲ್ಲ ಎಂಬ ಕಾತರ ಲಿಪಿಕಾರನಿಗೆ. ಇರಲಿ ನೋಡೋಣ, ಎಂದು ಇನ್ನೊಂದು ಸುರುಳಿಯನ್ನು ಕೈಗೆತ್ತಿಕೊಂಡ :

" ಸಿಡಿ ನುಡಿಗಳನ್ನಾಡಿ ವೈರತ್ವ ಸಂಪಾದಿಸೀಯೆ, ಎಚ್ಚರವಿರಲಿ. ನುಣುಪು ಕಲ್ಲುಗಳ ನಡುವೆ ದಾಸಿ ಕನ್ಯೆಯರು ಕಂಡುಹಿಡಿಯುವ ಪಚ್ಚೆ ಕಲ್ಲಿ ಗಿಂತಲೂ ಹೆಚ್ಚು ದುರ್ಲಭ, ಸವಿ ನುಡಿ."

ಇನ್ನು ಸಾಕು ಎಂದು ಅರ್ಧಕ್ಷಣ ಸುಮ್ಮನಿದ್ದು, ಮತ್ತೆ ನೆಫಿಸಳ ಮುಖ ನೋಡಿ, ಹಲ್ಲು ಕಿರಿದು, ಇನ್ನೊಂದು ಲಿಪಿ ಸುರುಳಿಯನ್ನು ಲಿಪಿಕಾರ ಓದ ತೊಡಗಿದ :

"ನಿನ್ನ ತಾಯಿ ನಿನಗಾಗಿ ಏನೇನು ಮಾಡಿರುವಳೆಂಬುದನ್ನು ನೀನೆಂದೂ ಮರೆಯಬಾರದು....ನಿನ್ನನ್ನು ಆಕೆ ಹೆತ್ತಳು. ಸಾಧ್ಯವಾದ ರೀತಿಯಲ್ಲೆಲ್ಲ

ನಿನಗೆ ಆಹಾರವಿತ್ತಳು. ಅವಳನ್ನು ಮರೆತೆಯೆಂದರೆ ಆಕೆ ನಿನ್ನನ್ನು ದೂರ ಬಹುದು. ತನ್ನ ತೋಳುಗಳನ್ನು ದೇವರೆಡೆ ಎತ್ತಬಹುದು; ಆಗ ಆಕೆಯ ದೂರು ಅವನ ಕಿವಿಗೆ ಬೀಳುವುದು....ನಿಶ್ಚಿತ ಮಾಸಗಳ ಬಳಿಕ ಅವಳು ನಿನಗೆ ಜನ್ಮವಿತ್ತಳು. ಮೂರು ವರ್ಷಗಳ ಕಾಲ ಲಾಲಿಸಿದಳು, ಪಾಲಿಸಿದಳು...."

ಲಿಪಿಕಾರ ಹಾಳೆಯಿಂದ ತಲೆ ಮೇಲಕ್ಕೆ ಎತ್ತಿದೊಡನೆಯೆ ಮೆನೆಪ್‌ಟಾ ನುಡಿದ :

"ಇದಿರಲಿ ಗುರುಗಳೇ."

ಲಿಪಿಕಾರನೆಂದ :

"ನಿನ್ನ ಅಭಿರುಚಿಗೆ ಮೆಚ್ಚಿದೆ. ನೀನ್ಯಾಕೆ ಅಕ್ಷರಹೀನನಾಗಿ ಉಳಿದೆಯೋ ? ಅಕ್ಷರ ಕಲಿತವ ಆಳಬಲ್ಲ—ಗಾದೆ ಕೇಳಿದೀಯಾ ?"

"ನಾವು ದುಡಿಯೋ ಜನ."

"ನಾನು ದುಡಿಯೋದಿಲ್ವೆ ? ಹಿತೋಪದೇಶದ ಈ ಲಿಪಿ ಸುರುಳಿ ಬರೆಯೋದಕ್ಕೆ ಎಷ್ಟು ಕಷ್ಟ ಪಟ್ಟಿದ್ದೇನೆ ಗೊತ್ತೆ ? ನೀನು ರೈತನೊ ?"

"ಈಗ ರೈತ. ಚಿನ್ನದ ಗಣಿಯಲ್ಲಿ ದುಡಿದದ್ದೂ ಉಂಟು ; ಗೋರಿ ಕಟ್ಟೋ ಕೆಲಸಾನೂ ಮಾಡಿದ್ದೇನೆ."

"ಸಾಕಷ್ಟು ಸಂಪಾದಿಸಿದೀಯಾ ಅನ್ನು. ಮಗನಿಗೆ ಒಬ್ಬ ತಂದೆ ಕೊಡಬಹುದಾದ ಅತ್ಯಮೂಲ್ಯ ಉಡುಗೊರೆ ಈ ಲಿಪಿ ಸುರುಳಿ. ಮೌಲ್ಯ ಮೂರು ಉಟೆನ್. ವಿನಿಮಯಕ್ಕೆ ಏನು ತಂದಿದ್ದೀಯಾ ? ಗಣಿಯಲ್ಲಿ ಕೆಲಸ ಮಾಡಿದೋನು—ಬೆಳ್ಳಿ ಬಂಗಾರ ಉಂಟೊ ? ಇಬ್ಬರ ಮೈಮೇಲೂ ಚಿನ್ನ ಮಾತ್ರ ಇಲ್ಲ. ಕುಸುರಿ ಕೆಲಸದ ವಸ್ತ್ರ ಗಿಸ್ತ್ರ ಬೇಡ. ಗಂಟಿನೊಳಗೊಂದು ಗಂಟು ಇತ್ತಲ್ಲ ? ಹೊರ ತೆಗೆ."

"ನೆಫಿಸ್ ದೊಡ್ಡ ಗಂಟನ್ನು ತೆರೆದು ಒಳಗಿನ ಗಂಟನ್ನು ಎತ್ತಿದಳು. ಅದನ್ನು ಬಿಚ್ಚುತ್ತ ಅವಳೆಂದಳು :

"ಕಾಡು ಬಾತು ಕೋಳಿ. ಹದವಾದದ್ದು. ಆಳುವ ಮಹಾಪ್ರಭುವಿನ ಊಟಕ್ಕೆ ಯೋಗ್ಯ. ಅದನ್ನು ಹಿಡಿಯೋದಕ್ಕೆ ನನ್ನ ಈ ಗಂಡ ಒಂದು ದಿನವೆಲ್ಲ ಕಷ್ಟಪಟ್ಟಿದ್ದಾನೆ. ಉಪ್ಪು ಹಾಕಿ ಸಿದ್ಧಪಡಿಸೋದಕ್ಕೆ ನಾನು ಒಂದು ದಿನವೆಲ್ಲ ದುಡಿದಿದ್ದೇನೆ."

" ಈ ರಾಜಕುಮಾರ ಏನೂ ಮಾಡ್ಲಿಲ್ವೋ ?"

" ತಂದೆಯ ಜೊತೆ ಇವನೂ ಬೇಟೆಗೆ ಹೋಗಿದ್ದ."

" ಇಲ್ಲಿ ಕೇಳಮ್ಮ. ಬಾತುಕೋಳಿ ನೀಲ ನದಿಯ ಅಕ್ಷಯ ಭಂಡಾರಕ್ಕೆ ಸೇರಿದ್ದು. ಖ್ನೆಮು ದೇವರ ಸೊತ್ತು. ಬೆಲೆ ಇಲ್ಲದ್ದು. ಆದರೂ ಒಂದು ಉಟೆನ್ ಮೌಲ್ಯ ಹಿಡೀತೇನೆ."

" ಸುರುಳಿಯ ಮೌಲ್ಯ ಎರಡು ಉಟೆನ್‌ಗೆ ಇಳಿಸಿ, ಗುರುಗಳೆ. ಬಾತು ಕೋಳಿಯ ಮೌಲ್ಯ ಎರಡು ಉಟೆನ್‌ಗೆ ಏರಿಸಿ. ಅಲ್ಲಿಗೆ ಸರಿ ಹೋಗ್ತದೆ."

" ಆಗೋದಿಲ್ಲವಪ್ಪ. ಸುರುಳಿಗಳನ್ನು ಓದಿದ್ದರ ಶುಲ್ಕ ಒಂದು ರೊಟ್ಟಿ ಕೊಟ್ಟು ನೀವು ಹೊರಡಿ."

ಊರಲ್ಲಿ ಸಮವಯಸ್ಕರಿಗೆ ಹೆಮ್ಮೆಯಿಂದ ಸುರುಳಿಯನ್ನು ತೋರಿಸ ಬಹುದು ಎಂದುಕೊಂಡಿದ್ದ ರಾಮೆರಿಪ್‌ಟಾ. ಲಿಪಿಕಾರನ ಮಾತಿನ ಧಾಟಿ ಯಿಂದ ಅವನಿಗೆ ಕಸಿವಿಸಿಯಾಯಿತು. ಮುಖ ಕಪ್ಪಿಟ್ಟಿತು.

ಅದನ್ನು ಗಮನಿಸಿದ ನೆಫಿಸ್ ಗಂಡನತ್ತ ನೋಡಿ ನುಡಿದಳು :

" ಬಾತುಕೋಳಿ ಜೊತೆಗೆ ಒಂದು ಕೈಚೀಲಾನೂ ಕೊಟ್ಟುಬಿಡೋಣ."

ಮೆನೆಪ್‌ಟಾ "ಹೂಂ" ಎನ್ನುತ್ತಿದ್ದಂತೆ ಲಿಪಿಕಾರನೂ ಅಂದ :

" ಸರಿಯಪ್ಪ. ಚೂಟಿ ಹುಡುಗ ವಿದ್ಯಾವಂತನಾಗ್ತಾನೆ ಅಂತ ಹೇಳ್ದೆ. ಹ್ಯಾಗೆ ತಾನೆ ಲಿಪಿ ಸುರುಳಿ ಕೊಡ್ದೇ ಇರ್ಲಿ ? ತಗೊಳ್ಳಿ. ಒಂದೇ ದಿವಸ ದಲ್ಲಿ ಜೀರ್ಣವಾಗೋ ಬಾತುಕೋಳಿಗೆ ಬದಲಾಗಿ, ಸಹಸ್ರ ಕಾಲ ಬಾಳೋ ಸುರುಳಿ ಕೊಡ್ತಾ ಇದ್ದೇನೆ, ವಿದ್ಯಾಧಿದೇವತೆ ಥೊಥ್ ನನ್ನನ್ನು ಕ್ಷಮಿಸ್ಲಿ. ಎಲ್ಲಿನವರು ನೀವು ?"

" ನೀರಾನೆ ಪ್ರಾಂತ," ಎಂದ ಹುಡುಗ ರಾಮೆರಿಪ್‌ಟಾ.

" ಸರಿ ! ಮಾತು ಬರ್ತದೆ. ಇನ್ನು ಓದು ಕಲಿತರಾಯ್ತು. ಅಕ್ಷರ ಬರೋರು ಅಲ್ಲಿ ಇದಾರಾ ?"

ಮೆನೆಪ್‌ಟಾನೆಂದ :

" ಕಂದಾಯ ಲೆಕ್ಕ ಬರೆಯೋ ಒಬ್ರಿದಾರೆ."

"ಮಜಾ ಕೆಲ್ಸ. ಸ್ವಲ್ಪ ಹೆಚ್ಚು ಕಮ್ಮಿ ಬರೆದರಾಯ್ತು. ಒಳ್ಳೆ ಸಂಪಾದ್ನೆ."

" ಅವರು ಬಹಳ ನಿಯತ್ತಿನ ಮನುಷ್ಯ."

" ಹಾಗೋ ? ಪಾಠ ಹೇಳೋದಕ್ಕೆ ಲಾಯಕ್ಕು. ನಿಮ್ಮ ಹುಡುಗನಿಗೆ ಅವನ ಕೈಲೇ ಪಾಠ ಹೇಳ್ಸಿ."

ವಿನಿಮಯ ಮುಗಿಯಿತು. ಸುರುಳಿಯನ್ನೂ ಒಳಗೊಂಡ ಗಂಟನ್ನು ನೆಫಿಸ್ ತನ್ನ ತಲೆಗೆ ಏರಿಸಿದಳು.

ಆ ಮೂವರನ್ನೂ ಬೀಳ್ಕೊಡುತ್ತ ಲಿಪಿಕಾರ ಗಟ್ಟಿ ಸ್ವರದಲ್ಲಿ ನುಡಿದ:

" ನನ್ನ ಹೆಸರು ಲಿಪಿಕಾರ ಅನೋಸೆಸ್. ಮರೀಬೇಡಿ ! ನನಗೆ ಸಮಾನರು ಅಬ್ಟುವಿನಲ್ಲಿ ಬೇರೆ ಯಾರೂ ಇಲ್ಲ. ಎಲ್ಲರಿಗೂ ತಿಳಿಸಿಬಿಡಿ. ಕುಡುಕರ ಹಾಡು, ಪ್ರಣಯ ಗೀತೆ—ಎಲ್ಲಾ ಇವೆ. ಬೆಲೆಯೂ ಕಮ್ಮಿ........ಹೋಗಿ ಬನ್ನೀಪ್ಪಾ...."

ರಾಮೆರಿಪ್‌ಟಾ, ಅವನ ತಾಯಿ, ತಂದೆ—ಮೂವರಿಗೂ ನಗು ಬಂತು.

ಮಾರ್ಗ ಕ್ರಮಿಸುತ್ತ ಮೆನೆಪ್‌ಟಾ ಅಂದ :

" ಎಷ್ಟೊಳ್ಳೆ ವಿಚಾರ ಇದೆ ಆ ಸುರುಳೀಲಿ ! ಯಾವ ಕಾಲದಲ್ಲೋ ಯಾರೋ ಆಡಿದ ಮಾತು. ನಿನ್ನ ತಾಯಿ ನಿನಗಾಗಿ ಏನೇನು ಮಾಡಿದ್ದಾಳೆ ಅನ್ನೋದನ್ನು ಎಂದೂ ಮರೀಬಾರ್ದು.... ಅವಳನ್ನು ಮರೆತರೆ ಆಕೆ ನಿನ್ನನ್ನು ದೂರಬಹುದು. ದೇವರಿಗೆ ಅದು ಗೊತ್ತಾಗ್ಬಹುದು."

ಅಭಿಮಾನದಿಂದ ಬೀಗುತ್ತ ನೆಫಿಸ್ ದನಿಗೂಡಿಸಿದಳು :

" ಕೇಳಿಸ್ಕೊಂಡ್ಯಾ ರಾಮೆರಿ ?"

" ಹೂಂ, ಹೂಂ. ಆದರೆ ಅಪ್ಪ ಅವತ್ತು ಹೇಳಿದ ಹೋರಸ್ ಕಥೇಲಿ ತಂದೆ ತಾಯಿ ಇಬ್ರನ್ನೂ ಹೋರಸ್ ಮರೀಲಿಲ್ಲ."

ಸಣ್ಣಗೆ ನಕ್ಕು ಮೆನೆಪ್‌ಟಾ ಅಂದ :

" ಅದು ಒಳ್ಳೇ ಮಕ್ಕಳ ಲಕ್ಷಣ "

ಹುಡುಗನೆಂದ :

" ಅಪ್ಪ, ನಾನು ಒಳ್ಳೇ ಮಗನೆ ! ಗೋಲಿ ಕೊಡಿಸ್ಬಿಡು !"

* * * *

" ವೀರರ ವೀರ ಹೋರಸ್ ಉಘೇ !

ತಂದೆಯ ಕೊಂದವನ ಮಣ್ಣು ಮುಕ್ಕಿಸಿದ ಧೀರ ಉಘೇ !

ದುರುಳನ ತರಿದ ಮಹಾ ಶೂರ ಉಫೇ !"

....ಬಾಲ್ಯದ ನೆನಪು. ಆಗ ಮೆನೆಪ್‌ಟಾಗೆ ಹದಿನಾಲ್ಕರ ಹರೆಯ.

ನೀರಾನೆ ಪ್ರಾಂತದಿಂದ ನೀಲ ನದಿಯ ಮೂಲದತ್ತ ಎರಡು ದಿನ ದೋಣಿ ಪ್ರವಾಸ ಮಾಡಿದರೆ ಸಿಗುವ ಊರು ಎಡ್ಫು. ಅಣ್ಣ ಒಸ್ಸೈರಿಸ್‌ನನ್ನು ಸೆತ್ ಮೋಸದಿಂದ ಕೊಂದಾಗ, ಹೋರಸ್ ಹಸುಳೆ, ಧರ್ಮಿಷ್ಠನಾಗಿ ಆಳಿ ದುರ್ಮರಣಕ್ಕೊಳಗಾದ ಪೆರೋ ಒಸ್ಸೈರಿಸ್ ಸೂರ್ಯದೇವನ ಪುತ್ರ. ಅವನ ಪಟ್ಟದ ರಾಣಿ ಸಾಧ್ವೀಮಣಿ ಐಸಿಸ್. ಮಗನನ್ನು ಆಕೆ ಗೋಪ್ಯದಲ್ಲಿ ಬೆಳೆಸಿದಳು. ಆತ ಯುದ್ಧ ವಿದ್ಯೆ ಕಲಿತ, ರಣಧೀರನಾದ.

ತನ್ನ ತಂದೆಯನ್ನು ಕೊಂದವನಿಗೂ ಹೋರಸ್‌ಗೂ ನಡೆದುದು ಲೋಕವೇ ತಲ್ಲಣಿಸಿದ ಘನ ಘೋರ ಯುದ್ಧ. ಸೆತ್ ತಿವಿಯುವ ಸೂಕರವಾದ; ಹೋರಸ್ ಉರಿಯುಗುಳುವ ಹಾರುವ ತಟ್ಟೆಯಾದ. ಸೆತ್ ಸತ್ತ. ಆದರೆ ಆತನ ದುಷ್ಟ ಚೇತನ ಘೇಂಡಾಮೃಗವಾಗಿ, ನೀಲ ನದಿಯಲ್ಲಿ ಸಾಗಿ, ಎಡ್ಫುವಿನಲ್ಲಿ ಹೋರಸ್‌ಗಾಗಿ ಕಾದು ನಿಂತಿತು ಹೋರಸ್ ಹತ್ತು ಮೊಳ ಎತ್ತರದ ಯುವಕನಾಗಿ ಇಪ್ಪತ್ತೈದು ಮೊಳ ಉದ್ದನೆಯ ಈಟಿ ಹಿಡಿದು ಥಳಥಳಿಸುವ ನಾವೆಯಲ್ಲಿ ಎಡ್ಫುವಿಗೆ ಧಾವಿಸಿದ. ಘೇಂಡಾಮೃಗದ ತೆರೆದ ಬಾಯನ್ನು ಈಟಿ ಹೊಕ್ಕಿತು. ದುಷ್ಟನ ಸಂಹಾರವಾಯಿತು; ಶಿಷ್ಟ ಜನ ಜಯಘೋಷ ಮಾಡಿದರು.

"ವೀರರ ವೀರ ಹೋರಸ್ ಉಫೇ !
ತಂದೆಯ ಕೊಂದವನ ಮಣ್ಣು ಮುಕ್ಕಿಸಿದ ಧೀರ ಉಫೇ
ದುರುಳನ ತರಿದ ಮಹಾ ಶೂರ ಉಫೇ !"

ಎಡ್ಫುವಿನಲ್ಲಿ ಹೋರಸ್ ದೇವಾಲಯದ ನಿರ್ಮಾಣ ಕಾರ್ಯದಲ್ಲಿ, ತನ್ನೂರಿನ ಪಾಳೆಯಗಾರನ ಪರವಾಗಿ ಜೀತ ದುಡಿಮೆ ಸಲ್ಲಿಸಿದವನು, ಮೆನೆಪ್‌ಟಾ.

ಆಗ ನಾಲ್ವರು ಗಾಯಕರ ತಂಡ ಹೋರಸ್‌ನ ಕಥೆಯನ್ನು ಹಾಡಿತ್ತು. ಪ್ರತಿಯೊಬ್ಬರ ಕೈಯಲ್ಲೂ ಏಕನಾದ. ನಾಲ್ವರ ಕಂಠಗಳಿಂದಲೂ ಒಂದೇ ಗಾನ:

"ವೀರರ ವೀರ ಹೋರಸ್ ಉಫೇ !...."

ಆಗ ಭಾವಾವೇಶದಿಂದ ಉಳಿದೆಲ್ಲ ದುಡಿಮೆಗಾರರೊಂದಿಗೆ ಮೆನೆಪ್‌ಟಾ ತಾನೂ ನುಡಿದಿದ್ದ : "ಉಘೇ!"

*   *   *   *

ತಾಯಿತದವನೊಬ್ಬ—ಚಿಲ್ಲರೆ ದೇವಸೇವಕ—ಕೂಗಿ ಕರೆಯುತ್ತಿದ್ದ :

"ಬನ್ನೀ! ಬನ್ನೀ! ಬನ್ನೀ! ಸಂಕಷ್ಟಕ್ಕೆ ತುತ್ತಾದವರೇ, ನಾಳೆಗೆ ಅಳುಕುವವರೇ, ಅನಾರೋಗ್ಯ ಪೀಡಿತರೇ, ಬನ್ನಿ! ತಾಯತ ಕಟ್ಟಿಸಿಕೊಳ್ಳಿ. ನಡೆಗೋಲು, ಪಾದರಕ್ಷೆ, ಚೀಲ, ಚಾಪೆ, ಬಟ್ಟೆ, ರೊಟ್ಟಿ—ವಿನಿಮಯಕ್ಕೆ ಏನಿದ್ದರೂ ಸರಿ...."

ತಾಯಿತದವನ ಸುತ್ತಲೂ ನೆರೆದಿದ್ದ ಗುಂಪಿನಲ್ಲಿ ಮೆನೆಪ್‌ಟಾನ ಸಹ ಯಾತ್ರಿಕರೂ ಇದ್ದರು. ನೆಫಿಸ್ ಮೆನೆಪ್‌ಟಾರನ್ನು ನೋಡಿ 'ನಾವಿಲ್ಲಿದ್ದೇವೆ' ಎನ್ನುವಂತೆ ಅವರು ನಗೆ ಬೀರಿದರು. ರಾಮೆರಿಪ್‌ಟಾ ಹರ್ಷಿತನಾಗಿ ಅವರತ್ತ ಬೊಟ್ಟುಮಾಡಿದ.

ಏರಿಸಿದ ಧ್ವನಿಯಲ್ಲಿ ತಾಯತದವನು ಮುಂದುವರಿದ :

"ಪರಲೋಕ ಯಾತ್ರೆಯಲ್ಲಿ ನಿಮಗೆ ದಾರಿ ತಪ್ಪೋದು ಬೇಡ. ಈ ಲೋಕದಲ್ಲೂ ನಿಮಗೆ ಎಷ್ಟೊಂದು ಅಪಾಯಗಳು ಕಾದಿವೆ! ನಾಲಿಗೆ ಬಿದ್ದು ಹೋಗಬಹುದು, ತಲೆ ಕೆಡಬಹುದು. ಗುಂಡಿಗೆ ಕೈಕೊಡಬಹುದು! ಹಾಗಾಗದಂತೆ ತಾಯತ ಕಟ್ಟಿಸಿಕೊಳ್ಳಿ! ನಿಮ್ಮ ಹೆಸರೇ ನಿಮಗೆ ಮರೆತು ಹೋದೀತು! ಉಸಿರಾಟ ಕಷ್ಟವಾದೀತು! ಆಹಾರ-ಪಾನೀಯ ಸೇವನೆಗೆ ಅಡ್ಡಿ ಉಂಟಾದೀತು! ನಿಮ್ಮ ಅಮೇಧ್ಯವನ್ನು ನೀವೇ ತಿಂದೀರಿ! ಕುಡಿಯುವ ನೀರು ಉರಿಬೆಂಕಿಯಾದೀತು! ಸರ್ಪಗಳು—ದೈತ್ಯಗಳು ಬಂದಾವು! ತಾಯತ ಕಟ್ಟಿಕೊಂಡು ರಕ್ಷಣೆ ಪಡೀರಿ!"

ರಾಮೆರಿಪ್‌ಟಾ ಕುತೂಹಲಿಯಾಗಿ ಹೆತ್ತವರನ್ನು ದಿಟ್ಟಿಸಿದ. ನೆಫಿಸ್ ಗಂಡನ ಮುಖ ನೋಡಿದಳು

ಅವನೆಂದ :

"ದೇವತಾ ಮೂರ್ತಿಗಳ ಅಂಗಡಿ ಆಗೋ ಅಲ್ಲಿದೆ. ಮಕ್ಕಳ ರಕ್ಷಕಿಯಾದ ಐಸಿಸ್ ದೇವತೆಯ ಮೂರ್ತಿ ಬೇಕು ಅಂದಿದ್ದೆ...."

ಗಂಡ ತೋರಿಸಿದ ಕಡೆಗೆ ನೆಫಿಸ್ ದಿಟ್ಟಿಸಿದಳು. ಚಿಲ್ಲರೆ ದೇವಸೇವಕರ

ಬಗೆಗೆ ತನ್ನ ಗಂಡನಿಗೆ ಒಲವಿಲ್ಲವೆಂಬುದು ಅವಳಿಗೆ ತಿಳಿಯದ್ದಲ್ಲ.

"ನಡಿ. ಬೆಸ್ ಮೂರ್ತಿಯೂ ಒಂದು ಬೇಕು" ಎಂದಳು.

ತಾಯತದವನನ್ನು ಮುತ್ತಿದ್ದ ಗುಂಪನ್ನು ಸೇರದೆ, ಆ ಮೂವರೂ ಮುಂದೆ ಸರಿದರು.

* * * *

ಮೋಡದ ಒಂದು ಗರಿಯೂ ಇಲ್ಲದ ಶುಭ್ರ ನೀಲಿ ಆಕಾಶದಲ್ಲಿ ಉರಿಯುವ ಸೂರ್ಯ. ಜನ ಉಡುತ್ತಿದ್ದುದು ಟೊಂಕದ ಸುತ್ತಲೂ ನಡುವಸ್ತ್ರ. ಮಂಡಿಯಿಂದ ಒಂದು ಗೇಣು ಮೇಲೆ, ಹೆಂಗಸರಿಗೆ ಮಂಡಿಗಿಂತ ತುಸು ಕೆಳಗೆ. ಎದೆಯ ಮೇಲೆ ವಸ್ತ್ರದ ಚೂರು ಇದ್ದುದು ಕೆಲ ಸ್ತ್ರೀಯರಿಗೆ ಮಾತ್ರ. ಗಂಡಸರದೆಲ್ಲ ಬರಿಮೈ. ಎಲ್ಲರದೂ ಸೂರ್ಯತಾಪದಲ್ಲಿ ಹದಗೊಂಡ ಎಣ್ಣೆಗಪ್ಪು ಚರ್ಮ.

ಬಿಸಿಲಿನ ಝಳಕ್ಕಿಂತ ಅಂಗಡಿಯ ಆಸರೆ ಹಿತಕರವಾಗಿತ್ತು.

ಐಸಿಸ್ ದೇವತಾ ಮೂರ್ತಿಯನ್ನು ನೆಫಿಸ್ ಕೊಂಡಳು. ಪಿಶಾಚಿಗಳನ್ನು ಓಡಿಸುವ ದೇವತೆ ಬೆಸ್. ಸಿಂಹದ ತಲೆ. ಕುಳ್ಳ ಆಕಾರ. ಅದನ್ನೂ ಕೊಂಡಳು.

ಮುಂದಿನ ಅಂಗಡಿಯಲ್ಲಿ ಮರದ ಒಂದು ಚಿಕ್ಕ ಕರಂಡಕದ ಖರೀದಿ ಆಯಿತು. ಲೆಬನನ್‌ನಿಂದ ತರಿಸಿದ್ದ ಮರ. ವಿದೇಶೀ ವಸ್ತು. ಅದನ್ನು ಬಳಸಿ ಐಗುಪ್ತದ ಕುಶಲ ಕೆಲಸಗಾರನೊಬ್ಬ ಆ ಕರಂಡಕವನ್ನು ನಿರ್ಮಿಸಿದ್ದ.

ಮೆನೆಪ್‌ಟಾಗೆ ಕಂಚಿನ ಚೂರಿ, ರಾಮೆರಿಪ್‌ಟಾಗೆ ಅಮೃತ ಶಿಲೆಯ ತುಣುಕುಗಳನ್ನು ಕೆತ್ತಿ ಮಾಡಿದ್ದ ಗೋಲಿಗಳು, ನೆಫಿಸ್‌ಗೆ ಎಲುಬಿನ ಹಣಿಗೆ —ದೊರೆತುವು.

ವಿನಿಮಯಕ್ಕೆಂದು ತಂದ ಸಾಮಗ್ರಿಗಳೆಲ್ಲ ಕೈಬಿಟ್ಟದ್ದುವು. ಜಾತ್ರೆಯ ವ್ಯಾಪಾರ ತೃಪ್ತಿಕರವಾಗಿ ಮುಗಿಯಿತೆಂದು ಅವರಿಗೆ ಒಂದು ಬಗೆಯ ಸಂತಸ.

ಮೆನೆಪ್‌ಟಾ ಕಣ್ಣುಗಳಿಗೆ ಅಂಗೈ ಅಡ್ಡಮಾಡಿ ಆಕಾಶದತ್ತ ನೋಡಿದ. ರಾ ನೆತ್ತಿಯಮೇಲೆ ಬರಲು ಇನ್ನೂ ಹೊತ್ತಿತ್ತು.

ಒಬ್ಬಳು ತರುಣಿ. ಒಂದು ಕರಡಿ. ಕುಣಿತ ನಡೆದಿತ್ತು ಒಂದೆಡೆ. ರಾಮೆರಿಪ್‌ಟಾ ತಂದೆ ತಾಯಿ ಇಬ್ಬರನ್ನೂ ಆ ದಿಕ್ಕಿಗೆ ಎಳೆದೊಯ್ದ.

ಮಾಟವಾದ ಮೈಕಟ್ಟಿನ ಸುಂದರಿ. ಅಗಲವಾದ ಅಲಂಕೃತ ಸೊಂಟ ಪಟ್ಟಿ. ಎದುರಿಗೆ ಅದರಿಂದ ಇಳಿದಿದ್ದ ಪುಟ್ಟದೊಂದು ಲಂಗೋಟಿ. ಜಡೆ ಹೆಣೆದ ನೀಳ ತಲೆಗೂದಲು ಜಘನದವರೆಗೂ ಓಲಾಡುತ್ತಿತ್ತು. ಪೆಪೈರಸ್ ದಂಟಿನಿಂದ ಮಾಡಿದ ವಾದನವನ್ನು ಊದಿ ಒಬ್ಬ ಸ್ವರ ಹೊರಡಿಸುತ್ತಿದ್ದ. ಇನ್ನೊಬ್ಬ ಗೆಜ್ಜೆ ಕಟ್ಟಿದ ತಮಟೆಯನ್ನು ಅಲುಗಿಸುತ್ತಿದ್ದ. ಮೂರನೆಯವ ನೊಬ್ಬ ಎಡಕಿವಿಯನ್ನು ಎಡಗೈಯಿಂದ ಮುಚ್ಚಿ ಆಲಾಪನೆ ಮಾಡುತ್ತಿದ್ದ. ತಮಟೆಯ ಗೆಜ್ಜೆ ಸದ್ದಿಗೆ ಅನುಗುಣವಾಗಿ ಹಿಂದಕ್ಕೊ ಮುಂದಕ್ಕೊ ಎಡಕ್ಕೊ ಬಲಕ್ಕೊ ಹೆಜ್ಜೆಗಳನ್ನಿಡುತ್ತ, ತೋಳುಗಳನ್ನು ತರುಣಿ ಮೇಲಕ್ಕೆತ್ತಿ ಆಡಿಸು ತ್ತಿದ್ದಳು. ಒಮ್ಮೆ ಎದೆಯನ್ನು ಕುಣಿಸುತ್ತಿದ್ದಳು. ಒಮ್ಮೆ ಹಿಂಬದಿಯನ್ನು. ಕಣ್ಣುಗಳು ಮೋಹಕವಾಗಿ ಅತ್ತಿತ್ತ ಹೊರಳುತ್ತಿದ್ದುವು. ಕರಡಿ ಹಿಂಗಾಲು ಗಳ ಮೇಲೆ ನಿಲ್ಲುತ್ತಿತ್ತು. ಕೈ ಕೈ ಹಿಡಿದು ಅವರಿಬ್ಬರ ಮಂದಗತಿಯ ನೃತ್ಯ.

ಮೈದಡವಿದ ಅನುಭವ ಮೆನೆಪ್‌ಟಾಗೆ. ನಾಲಿಗೆ ತುಟಿಗಳನ್ನು ಸವ ರಿತು. ಆತ ನರ್ತಕಿಯನ್ನು ಎವೆಯಿಕ್ಕದೆ ದಿಟ್ಟಿಸಿದ.

ನೆಫಿಸ್ ಗಂಟಲು ಸರಿಪಡಿಸಿಕೊಂಡ ಸದ್ದು. ಮೆನೆಪ್‌ಟಾ ಅವಳತ್ತ ನೋಡಿದ—ಅಡುಗೆಮನೆಯಲ್ಲಿ ಕದಿಯುತ್ತಿದ್ದಾಗ ಸಿಕ್ಕಿಬಿದ್ದ ಹುಡುಗನಂತೆ. ನೆಫಿಸಳ ತೋಳುಗಳು ಮೇಲ್ಮೊಗವಾಗಿದ್ದುವು; ತಲೆಯ ಮೇಲಿನ ಗಂಟನ್ನು ಮುಟ್ಟಿದ್ದುವು ಬೆರಳುಗಳು. ಭುಜದಿಂದ ಇಳಿದ ಅಗಲ ಕಿರಿದಾದ ಎದೆವಸ್ತ್ರ ಸ್ತನಗಳ ನಡುವೆ ಬೆವರಿಗೆ ಅಂಟಿಕೊಂಡಿತ್ತು. ಅವಳ ಕಣ್ಣುಗಳು ಗಂಡನ ದೃಷ್ಟಿಯನ್ನು ಸಂಧಿಸಿ ನಗೆ ಸೂಚಿಸಿದುವು. ಅವಳ ವಕ್ಷಸ್ಥಲ ಸ್ಪಂದಿಸಿತು.

ಅವಳೆಂದಳು :

" ಜತೆಯವರನ್ನೆಲ್ಲ ತಾಳೆ ಮರಗಳ ನೆರಳಿಗೆ ಬರಹೇಳಿದ್ದಿ, ಅಲ್ಲ ?"

" ಹೌದು, ನಡಿ."

ಮಗನನ್ನು ತಾಯಿ ಕರೆದಳು :

" ಬಾರೊ, ರಾಮೆರಿ."

* * * *

ನಾಲ್ಕು ಹೆಜ್ಜೆ ಹೋಗುವುದರೊಳಗೆ ರಸ್ತೆಯ ಅಂಚಿನಿಂದ ಧ್ವನಿ

ಕೇಳಿಸಿತು :

"ನನ್ನನ್ನು ಪ್ರೀತಿಸಿ ! ನನ್ನನ್ನು ಪ್ರೀತಿಸಿ !"

ಅಂಗಲಾಚುತ್ತಿದ್ದವನು ಭಿಕ್ಷುಕ. ಎದ್ದು ನಡೆಯಲಾಗದ ಹೆಳವ ಕುಳಿತೇ ಇದ್ದ.

ನೆಫಿಸ್ ತಲೆಯಮೇಲಿದ್ದುದನ್ನು ಕೆಳಗಿಳಿಸಿ, ಬುತ್ತಿಯ ಗಂಟನ್ನು ಸಡಿಲಿಸಿ, ಒಂದು ತುಣುಕು ಮೀನನ್ನು ಭಿಕ್ಷುಕನ ಪಾತ್ರೆಗೆ ಹಾಕಿದಳು.

ಒಮ್ಮೆಲೆ ಮೂರು ನಾಲ್ಕು ಕಂಠಗಳಿಂದ ಕೇಳಿ ಬಂತು :

"ನನ್ನನ್ನು ಪ್ರೀತಿಸಿ !" "ನನ್ನನ್ನು ಪ್ರೀತಿಸಿ !"

ಚುರುಕು ನಡಿಗೆಯ ನಾಲ್ವರು ಭಿಕ್ಷುಕರು ನೆಫಿಸಳನ್ನು ಮುತ್ತಿದರು.

"ನಡೀರಿ ಆಚೆಗೆ" ಮೆನೆಪ್‌ಟಾ ತೋಳು ಬೀಸಿದೊಡನೆ, ಅವರು ಚೆದರಿದರು.

"ಮೈಗಳ್ಳರು !" ಎಂದು ಅವನು ಹೀಗಳೆದ : "ರಾತ್ರಿ ಕುಡಿದು ಮಲಗಿದೋರು ಈಗ ಎದ್ದು ಗುಡ್ಡದಿಂದ ಇಳಿದು ಬರ್ತಿದಾರೇಂತ ತೋರ್‍ತದೆ."

"ಅಮ್ಮಾ, ಗಂಟು ನಾನು ಹಿಡಕೊಳ್ಲಾ ?"

"ಬೇಡ ಮಗೂ."

ನಾಲ್ಕು ಮಾರುಗಳಾಚೆ, ತಲೆ ಬೋಳಿಸಿಕೊಂಡವನೊಬ್ಬ ನಾರು ಬೇರುಗಳನ್ನು ಒಂದು ಕಲ್ಲಿನ ಮೇಲಿರಿಸಿ ಇನ್ನೊಂದು ಕಲ್ಲಿನಿಂದ ಅದನ್ನು ಜಜ್ಜುತ್ತಿದ್ದ. ರೋಗಿಯಂತೆ ಕಾಣುತ್ತಿದ್ದ ಸೊರಗಿದ ಶರೀರದವನೊಬ್ಬ ಅವನೆದುರು ಕುಳಿತಿದ್ದ. ಅಲ್ಲೇ ನಿಂತಿದ್ದೊಬ್ಬ ಹುಡುಗ ಕೀರಲು ಗಂಟಲಲ್ಲಿ ಅರಚತೊಡಗಿದ :

"ನನ್ನ ಯಜಮಾನರು ಎಂಥ ಕಾಯಿಲೆ ಇದ್ರೂ ವಾಸಿ ಮಾಡ್ತಾರೆ. ಇವರು ಅಬ್ಟುವಿನ ಪ್ರಖ್ಯಾತ ಚಿಕಿತ್ಸಾಪಟು, ಅಸಮಾನ ಜಾದುಗಾರ ! ಉಸಿರಾಟದ ಕಾಯಿಲೆ, ಹೊಟ್ಟೆ ನೋವು, ತಲೆ ಸಿಡಿತ—ಎಲ್ಲ ಗುಣ ಮಾಡ್ತಾರೆ. ಕೂದಲು ಉದುರೋದನ್ನು ನಿಲ್ಲಿಸ್ತಾರೆ; ನರೆಗೂದಲು ಕರೇದು ಮಾಡ್ತಾರೆ. ಹೆಂಗಸರ ಕಾಯಿಲೆಗಳಿಗೆ...."

ವೈದ್ಯನ ಗದರುವ ಧ್ವನಿ ಕೇಳಿಸಿತು :

"ಕತ್ತೆ ! ಆಗಲೇ ಹೇಳ್ಲಿಲ್ವಾ ಬಿಡಿಸಿ ಬಿಡಿಸಿ ಅರಚೂಂತ ?"

ಹುಡುಗ ತುಸು ನಿಧಾನವಾಗಿ ಪುನಃ ಆರಂಭಿಸಿದ :

" ನನ್ನ ಯಜಮಾನರು ಎಂಥ ಕಾಯಿಲೆ ಇದ್ರೂ...."

ಕೆಳಗಡೆಯಿಂದ ತುತೂರಿಯ ಧ್ವನಿ. ' ವಾಸಿ ನೂಡ್ತಾರೆ ' ಎಂದು ಸಾರಲು ಹುಡುಗ ತೆರೆದಿದ್ದ ಬಾಯಿ ಹಾಗೆಯೇ ನಿಂತಿತು.

ಕೈಯಲ್ಲಿ ಚಾಟಿ ಹಿಡಿದ ದಪ್ಪ ತುಟಿಯ ಕಪ್ಪು ಮೈಯ ಕಟ್ಟಾಳು ಗಳ ತಂಡ ಮಂದಗತಿಯಲ್ಲಿ ಓಡುತ್ತ ಬಂತು. ಅವರು ಅಬ್ಬರಿಸುತ್ತಿದ್ದರು :

"ಪೆರೋ ಬರ್ತಿದ್ದಾರೆ ! ಬದಿಗೆ ಸರೀರಿ ! ಬದಿಗೆ ಸರೀರಿ!"

ಎಡಕ್ಕೂ ಬಲಕ್ಕೂ ಚಾಟಿಗಳು ಸುಂಯ್‌ಗುಟ್ಟಿದುವು. ಮೆನೆಪ್‌ಟಾ ಕತ್ತು ಹೊರಳಿಸಿ ಅತ್ತ ನೋಡಿದ. ಕರಡಿಯನ್ನು ಎಳೆದುಕೊಂಡು ದೂರ ಹೋಗುತ್ತಿದ್ದ ನರ್ತಕಿಯ ನಗ್ನ ಹಿಮ್ಮೈ ಕಾಣಿಸಿತು. ಚಾಟಿಯ ಏಟು ಬಿದ್ದವರು ತಮ್ಮ ರೋದನ ಕೇಳಿಸಬಾರದೆಂದು ಬಾಯಿಗೆ ಕೈ ಅಡ್ಡ ಹಿಡಿದಿದ್ದರು.

"....ಬದೀಗೆ ಸರೀರಿ !"

ಮೆನೆಪ್‌ಟಾನ ಹತ್ತಿರದಲ್ಲೇ ಚಾಟಿ ಸುಂಯ್ ಎಂದಿತು. ಆತ ಮಗನನ್ನು ತನ್ನೆಡೆಗೆ ಎಳೆದುಕೊಂಡ ; ಮಡದಿಯ ರಕ್ಷಣೆಗಾಗಿ ತೋಳು ಚಾಚಿದ. ನಡುವನ್ನು ಹಿಂದಕ್ಕೆ ಬಾಗಿಸದೆ ಇದ್ದಿದ್ದರೆ ಚಾಟಿಯ ಸ್ಪರ್ಶ ಅವನಿಗೂ ಆಗುತ್ತಿತ್ತು.

" ಪೆರೋ ಪೆರೋ," ಎಂದು ತೊದಲಿದಳು ನೆಫಿಸ್.

ರಾಮೆರಿಪ್‌ಟಾ ತಂದೆಯ ಮಗ್ಗುಲಿನಿಂದ ಇಣಿಕಿ ನೋಡಿದ.

ಕರಿಯ ಭಟರನ್ನು ಹಿಂಬಾಲಿಸಿ ಬಂದರು, ತುತೂರಿಯವರು. ಅವರ ಬೆನ್ನ ಹಿಂದಿದ್ದರು ಗದಾಧಾರಿಗಳಾದ ನೂರು ಜನ ಅಂಗರಕ್ಷಕರು. ಅವರ ಹಿಂದೆ, ಐಗುಪ್ತ ರಾಷ್ಟ್ರದ ಅರಸನ ಪೀಠ ಪಲ್ಲಕಿ. ಎಡ ಮಗ್ಗುಲಲ್ಲಿ ಅಂಗ ರಕ್ಷಕರ ಮುಖ್ಯಸ್ಥ. ಬಂಗಾರದ ತಗಡು ಹೊದೆಸಿದ್ದ ಅಮೂಲ್ಯ ಹರಳುಗಳನ್ನು ಕೂರಿಸಿದ್ದ ಸಿಂಹಾಸನದಂಥ ಪೀಠ. ಆ ಪೀಠವನ್ನು ಎತ್ತಿಹಿಡಿಯಲು ಎಡ ಬಲಗಳಲ್ಲಿ, ಪೀಠದಡಿಯಿಂದ ಹಿಂದಕ್ಕೂ ಮುಂದಕ್ಕೂ ನೀಳವಾಗಿ ಚಾಚಿದ್ದ ಮರದ ಹಿಡಿಗಳು. ಆ ಹಿಡಿಗಳಿಗೆ ವರ್ಣಲೇಪನ. ಮೇಲ್ಗಡೆ ಬಟ್ಟೆ ಛಾವಣಿ. ಪಲ್ಲಕಿಯನ್ನು ಹೊರಲು ಮುಂದುಗಡೆ ಮೂವರು ಮೂವರು,

ಹಿಂದೆ ಮೂವರು ಮೂವರು ಬೋಯಿಗಳು. ಎಡ ಬಲಗಳಲ್ಲಿ ಚಾಮರ ಸೇವೆಯವರು. ಆ ಪೀಠದ ಮೇಲೆ ವಿರಾಜಮಾನನಾಗಿದ್ದ, ಅಧಿಕಾರ ಬಲ ವೈಭವಗಳೆಲ್ಲ ಮೂರ್ತೀಭವಿಸಿದ್ದ ಪೆರೋ.

ಮೆನೆಪ್‌ಟಾ ಕೇಳಿ ಬಲ್ಲ: ಪೆರೋನ ಪಲ್ಲಕಿಯನ್ನು ಸಾಮಾನ್ಯವಾಗಿ ಹೊರುವವರು ಯಾರಾದರೂ ಹನ್ನೆರಡುಜನ ಪಾಳೆಯಗಾರರು. ಹಾಗೆ ಹೊರುವ ಅವಕಾಶ ದೊರೆತವರು ಪರೋನ ಸವಿ ಸಾನ್ನಿಧ್ಯ ಲಭಿಸಿದವರು, ಅದೃಷ್ಟವಂತರು ಎಂದು ಲೆಕ್ಕ. ಪೆರೋನ ಭವ್ಯ ರೂಪವನ್ನು ನೋಡಿದ ಮೆನೆಪ್‌ಟಾನ ದೃಷ್ಟಿ ಪಲ್ಲಕಿ ಹೊತ್ತವರತ್ತ ಹೊರಳಿತು. ತಲೆಯನ್ನು ಹಾದು, ಕತ್ತನ್ನು ಬಳಸಿ, ವಕ್ಷಸ್ಥಲದ ಮೇಲೆ ತೂಗಾಡುತ್ತಿದ್ದ ಸೆಣಬಿನ ಸೊಗಸಾದ ನುಣುಪು ವಸ್ತ್ರ. ನಡುವಸ್ತ್ರವೂ ಶ್ರೇಷ್ಠಮಟ್ಟದ್ದು. ಅವರು ತಾಳೆಮರದ ಮೃದು ತೊಗಟೆಯ ಪಾದರಕ್ಷೆಗಳನ್ನು ತೊಟ್ಟಿದ್ದರು. ಸ್ವತಃ ಪಲ್ಲಕಿಯಲ್ಲಿ ಕುಳಿತು ದಾಸಜನರಿಂದ ಹೊರಿಸಿಕೊಳ್ಳುವ ಜನ. ಈಗ ಪೆರೋನ ಭಾರವನ್ನು—ಅದೂ ಏರುದಾರಿಯಲ್ಲಿ—ತಾವು ಹೊರುತ್ತ, ಆ ಆಢ್ಯರು ತುಸು ದಣಿದಿದ್ದರು. ಮೈಯಿಂದ ಬೆವರಿಳಿಯುತ್ತಿತ್ತು. ಅವರೆಲ್ಲರ ರೂಪವು ಒಂದೇ ಎನಿಸಿತು ಮೆನೆಪ್‌ಟಾಗೆ. ಆದರೂ ಬಲಬದಿಯ ಹಿಂದಿನ ಸಾಲಿನಲ್ಲಿ ಪರಿಚಿತ ಮುಖವನ್ನು ಕಂಡಂತಾಯಿತು, ಎರಡನೆಯವನು—ಎಲಾ ! ಆತ ನೀರಾನೆ ಪ್ರಾಂತದ ಪ್ರಮುಖ ಭೂಮಾಲಿಕ ನುಟ್‌ಮೋಸ್. ಮಹಾ ದರ್ಪಿಷ್ಟ. ಅದೃಷ್ಟವಂತರ ಶ್ರೇಣಿಗೆ ಸೇರಿಬಿಟ್ಟಿದ್ದ !

ತಾನು ಕಂಡುಹಿಡಿದುದನ್ನು ಹೆಂಡತಿಗೆ ಹೇಳಬೇಕೆಂದು ಮೆನೆಪ್‌ಟಾ ಅವಳತ್ತ ತಿರುಗಿದ.

ಮಾರ್ಗದ ಇಕ್ಕೆಲಗಳ ಜನರೂ ಬಾಗಿ ವಂದಿಸುತ್ತಿದ್ದರು, ಪೆರೋಗೆ. ನೆಫಿಸ್ ಕೂಡಾ. ಮೆನೆಪ್‌ಟಾ ಕಕ್ಕಾವಿಕ್ಕಿಯಾದ. ತಕ್ಷಣವೇ ತಾನೂ ನಮಿಸಿದ.

ಜನಸಮುದಾಯವೆಲ್ಲ ತನ್ನ ಪಾದಗಳಿಗೆ ಮಣಿಯುವಂತೆ ಮಾಡುವ ಭವ್ಯರೂಪ ಪೆರೋನದು. ಆತ ಮೆಟ್ಟಿದ್ದುದು ಬಂಗಾರದ ಪಾದರಕ್ಷೆಗಳನ್ನು. ಭುಜಗಳ ಮೇಲೆ ಇಳಿಬಿಟ್ಟಿತ್ತು, ಕಸೂತಿ ಅಂಚಿನ ಶಿರವಸ್ತ್ರ. ಅದರ ಮೇಲ್ಗಡೆ, ಐಗುಪ್ತ ದೇಶದ ಉತ್ತರ ದಕ್ಷಿಣ ಭಾಗಗಳ ಒಡೆತನವನ್ನು

ಸಾರುವ ಎತ್ತರದ ಜೋಡಿ ಕಿರೀಟ. ಮೇಲಣ ಐಗುಪ್ತದ ಬಿಳಿಕಿರೀಟ ; ಅದರಲ್ಲಿ ರಾಜಲಾಂಛನ ಸರ್ಪ. ಆ ಕಿರೀಟವನ್ನು ಆವರಿಸಿ ಕೆಂಪು ಕಿರೀಟ—ಕೆಳಗಣ ಐಗುಪ್ತದ್ದು. ಅದರಲ್ಲಿ ಗಿಡುಗ ಚಿಹ್ನೆ. ಮೂಲದಲ್ಲಿ ಬಿಳುಪಾಗಿದ್ದರೂ ಬಿಸಿಲಿನ ಝಳಕ್ಕೆ ಗೋದಿಗೆಂಪಾಗಿ ಮಾರ್ಪಟ್ಟಿದ್ದ ಮೈಬಣ್ಣ—ಪ್ರಜೆಗಳ ಕರಿಬಣ್ಣಕ್ಕಿಂತ ಭಿನ್ನ.ನಡುವಯಸ್ಸು ದಾಟಿದ್ದ ನುಣುಪು ಮುಖ. ಕೆನ್ನೆ ತುಟಿಗಳಿಗೆ ಹಚ್ಚಿದ್ದ ಕೆಂಪು. ತುಸು ಬಾಗಿದ ನೀಳ ಮೂಗು. ಕಾಠಿಣ್ಯ ಬೆರೆತ ಗಾಂಭೀರ್ಯ. ನಿರ್ಭಯವಾದ ತಿವಿಯುವ ನೋಟ. ಕತ್ತಿನಿಂದ ತುಸು ಕೆಳಗಿನವರೆಗೂ ಹಾರಗಳ ಎದೆಗವಚ. ಬಲ ಎಡ ಕೈಗಳು ವಕ್ಷಸ್ಥಲಕ್ಕೆ ಅಡ್ಡವಾಗಿ ಹಿಡಿದಿದ್ದ ಲಾಂಛನಗಳು : ಕಾಳು ಒಡೆಯುವ ಸಾಧನ ಮತ್ತು ಕುರುಬನ ಕೊಂಡಿಕೋಲು. ಸೊಂಟಪಟ್ಟಿಯಿಂದ ಮೊಣಕಾಲಿನವರೆಗೂ ಕಸೂತಿ ಹಾಕಿದ ಅಂಗವಸ್ತ್ರ....

ಜನರದು ಮೌನ ವಂದನೆ. ಪೆರೋ ಗುಡಿಯ ಮೂರ್ತಿಯಂತೆ ನಿಶ್ಚಲ.

ಪಲ್ಲಕಿಯ ಹಿಂದೆ ಮತ್ತೆ ನೂರುಜನ ಕಾವಲು ಭಟರು—ಬಿಲ್ಲಾಳುಗಳು. ಬಲ ಮಗ್ಗುಲಲ್ಲಿ ಅವರ ಮುಖ್ಯಸ್ಥ. ಅವರ ಹಿಂದೆ ಹೇರು ಹೊತ್ತ ಗುಲಾಮರು. ಗುಲಾಮರ ಹಿಂದೆ, ಶಿಸ್ತಿಲ್ಲದೆ ಗುಂಪು ಕಟ್ಟಿಕೊಂಡು ವೇಗವಾಗಿ ನಡೆಯಲೆತ್ನಿಸುತ್ತಿದ್ದ ಜನರು.

ಅರಸನನ್ನು ನೋಡಿದ ಸಂಭ್ರಮದ ಕಲರವ ಅಡಗುವುದಕ್ಕೆ ಮುನ್ನವೇ ಪುನಃ ಕೇಳಿಸಿತು :

" ದಾರಿ ಬಿಡಿ ! ದಾರಿ ಬಿಡಿ !"

ಬರುತ್ತಿದ್ದುದು ಐಗುಪ್ತ ದೇಶದ ಮಹಾ ಅರ್ಚಕ ಹೇಪಾಟ್. ಸಾಂಪ್ರದಾಯಿಕವಾಗಿ (ಅರಸ ಪ್ರಧಾನ ದೇವಸೇವಕ ಎಂಬ ಬಿರುದು ಹೊತ್ತಿದ್ದರೂ ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿ ಮಹಾ ಅರ್ಚಕನದೇ ಕೊನೆಯ ಮಾತು.)

ಬೋಳು ತಲೆಯ ಯುವಕ ದೇವಸೇವಕರು ಹೇಪಾಟ್ ಕುಳಿತಿದ್ದ ಪಲ್ಲಕಿಯನ್ನು ಹೊತ್ತಿದ್ದರು. ಅವರ ಹಿಂದೆ ಸಾಮಾನು ಸರಂಜಾಮುಗಳ ಹೊರೆ ಭಾರದಿಂದ ಬಾಗಿದ್ದ ಗುಲಾಮರಿದ್ದರು.

ಜನಸ್ತೋಮವನ್ನು ಅನುಸರಿಸಿ ಹೇಪಾಟ್‌ಗೂ ಮೆನೆಪ್‌ಟಾ ನಮಿಸಿದ.

ತಕ್ಷಣವೆ ತಲೆ ಎತ್ತಿ ಕುತೂಹಲದಿಂದ ಮಹಾ ಅರ್ಚಕನನ್ನು ಈಕ್ಷಿಸಿದ. ನೂರುವರ್ಷಗಳಿಂದ ಹೆಚ್ಚುತ್ತ ಬಂದಿದ್ದ ದೇವಸೇವಕರ ಪ್ರಾಬಲ್ಯಕ್ಕೆ ಉತ್ತರಾಧಿಕಾರಿಯಾದವನು ಹೇಪಾಟ್ ಎಂದು ಮೆನೆಪ್‌ಟಾ ಕೇಳಿದ್ದ. ದೇಶದಲ್ಲಿನ ಎಲ್ಲ ದೇವಮಂದಿರಗಳ ಒಡೆತನವೂ ಅವನದು. ಮೆಂಫಿಸ್‌ನ ದೇಗುಲಕ್ಕೂ ಅಧೀನ ಮಂದಿರಗಳಿಗೂ ತೆರಿಗೆ ವಿನಾಯಿತಿಯ ಹೇರಳ ಆಸ್ತಿ ಇತ್ತು. ಸಹಸ್ರ ಸಹಸ್ರ ಗುಲಾಮ ಚಾಕರರಿದ್ದರು. ಅಪಾರ ಬೆಲೆ ಬಾಳುವ ಕನಕ ಭಂಡಾರವಿತ್ತು. ಆಳುವ ಪ್ರಭುವಿಗಿಂತಲೂ ಮಹಾ ಅರ್ಚಕನೇ ಹೆಚ್ಚು ಶ್ರೀಮಂತ ಎಂಬ ಪಿಸುಮಾತು ಮೆನೆಪ್‌ಟಾನ ಕಿವಿಗೂ ಬಿದ್ದಿತ್ತು. ಮೆಂಫಿಸ್‌ನಿಂದ ಬಂದಿದ್ದ ದೊಡ್ಡ ದೋಣಿಯೊಂದರ ಹಿರಿ ಅಂಬಿಗ, "ಮಹಾ ಅರ್ಚಕನ ಅನುಮತಿ ಪಡೆದೇ ಅರಮನೆಯಲ್ಲಿ ಕಾರ್ಯಗಳು ನಡೀತಿವೆ," ಎಂದು ಸುದ್ದಿ ಹಬ್ಬಿಸಿದ್ದ.

ತಲೆಗೂದಲು ಮಾತ್ರವಲ್ಲ, ಎಲ್ಲ ರೋಮವನ್ನೂ ಬೋಳಿಸಿದ ಮೈ. ಕೆನ್ನೆ ಮೂಳೆಗಳು ಎದ್ದು ಕಾಣಿಸುವ ಮುಖ. ಶೀತಲವಾದ ಕಠೋರ ದೃಷ್ಟಿ. ಪೆರೋನಷ್ಟು ಅಲ್ಲವಾದರೂ ಸಾಕಷ್ಟು ಎತ್ತರದ ನಿಲುವು. ಮೈಬಣ್ಣ ಸಾದಾ ಗಪ್ಪು. ಕೈಯಲ್ಲಿ ಬೆಳ್ಳಿಯ ಹಿಡಿಯ ಅಧಿಕಾರದಂಡ. ಮೆಟ್ಟಿದ್ದುದು ಮರದ ಹಾವುಗೆಗಳನ್ನು ಪೀಠದ ಮೇಲೆ ಕುಳಿತಿಲ್ಲ, ನಡೆಯುತ್ತಿದ್ದಾನೆ—ಎಂಬ ಭ್ರಮೆ ಹುಟ್ಟಿಸುವ ಭಂಗಿ. ವಯಸ್ಸಿನಲ್ಲಿ ಪೆರೋಗಿಂತ ಚಿಕ್ಕವನು. ಆದರೆ ಮುಖದ ಮೇಲೆ ಮುಪ್ಪಿನ ಕಳೆ.

ಎರಡು ಪಲ್ಲಕಿಗಳನ್ನೂ ಹಿಂಬಾಲಿಸಿ ಜನ ಗುಡ್ಡದತ್ತ ಸಾಗಿದರು.

ಯಾರೋ ಕೂಗಿ ಹೇಳುತ್ತಿದ್ದರು :

"ಈಗ್ಲೇ ಗುಡ್ಡಕ್ಕೆ ಹೋಗ್ಬೇಡಿ. ಮಂದಿರದಲ್ಲಿ ಪೆರೋ ವಿಶ್ರಾಂತಿ ತಗೊಳ್ತಾರೆ. ಬಿಸಿಲು ತಗ್ಗಿದ ಮೇಲೆ ಒಸ್ಸೈರಿಸ್ ಯಾತ್ರೆ."

ಮೆನೆಪ್‌ಟಾ ಮತ್ತು ನೆಫಿಸ್ ಮಗನೊಡನೆ ಮುಂದಕ್ಕೆ ಹೆಜ್ಜೆ ಇಟ್ಟರು. ಬರಿಗಾಲಿನ ನಡಿಗೆ. ಜನರ ಕಾಲ್ತುಳಿತದಿಂದ ಎದ್ದ ಧೂಳು ಬೆರೆತ ವಾತಾವರಣ....

ತಪ್ಪಲಲ್ಲಿ ತಾಳೆ ಮರಗಳ ಹಲವು ಗುಂಪುಗಳಿದ್ದುವು.

ಒಂದರತ್ತ ತೋರು ಬೆರಳು ಚಾಚಿ ರಾಮೆರಿಪ್‌ಟಾ ಅಂದ :

"ಓ ಅಲ್ಲಿದ್ದಾರೆ !"

* * * *

ಹೆಚ್ಚಿನವರು ಬಂದಿದ್ದರು. ಮೆನೆಪ್‌ಟಾ ತಲುಪಿದ ಬಳಿಕ ಮತ್ತೆ ಕೆಲವರು ಬಂದರು. ಒಸ್ಸೆರಿಸ್ ಯಾತ್ರೆಗೆ ಇನ್ನೂ ಹೊತ್ತಿದೆ ಎಂದು ಎಲ್ಲರಿಗೂ ಸಮಾಧಾನ. ಆ ವೇಳೆ ಊಟಕ್ಕೆ ವಿಶ್ರಾಂತಿಗೆ ಮೀಸಲು.

ಎಷ್ಟೋ ಕಾಲದ ಬಳಿಕ ಸಂಧಿಸಿದವರಂತೆ ಒಂದೇ ಸಮನೆ ಮಾತು.

"ನೀವೇನು ಕೊಂಡಿರಿ ?" ಎಂದು ಪರಸ್ಪರರನ್ನು ಎಲ್ಲರೂ ಕೇಳು ವವರೇ.

—"ಅಂಗಡಿಕಾರ ನನಗೆ ಮೋಸ ಮಾಡ್ದ. ಅವನಿಗೆ ಪಿಶಾಚಿ ಬಡಿಯ !"

—"ಹಾರ ಚೆನ್ನಾಗಿದೆ, ಅಲ್ವ ?"

—"ಭರ್ಜಿ ತಗೊಂಡ್ರಾ ? ಏನು ಕೊಟ್ರ ?"

—"ಹೊಟ್ಟೆ ಗಡ್ಡೇಗೆ ಔಷಧಿ ಕೊಡಿಸ್ತೇನೆ ಅಂದ ಗಂಡ. ಭಯ ವಾಯ್ತು. ಬೇಡ, ಅಂದ್ಬಿಟ್ಟೆ."

—"ಈ ಸುವಾಸನೆ ಎಣ್ಣೆ ನೋಡಿ. ಹ್ಯಾಗಿದೆ ?"

—"ನೆಫಿಸ್, ನೀನೇನು ತಗೊಂಡೆ ?"

—"ಮೆನೆಪ್‌ಟಾಣ್ಣ ವ್ಯಾಪಾರ ಮಾಡ್ಲಿಲ್ವೋಂತೇನೆ...."

ಇವನ ಸರದಿ. ಒಂದನ್ನು ಬಿಟ್ಟು ಉಳಿದಿದೆಲ್ಲದರ ಬಗೆಗೂ ಹೇಳಿದ್ದಾ ಯಿತು; ಗಂಟು ಬಿಚ್ಚಿ ತೋರಿಸಿದ್ದಾಯಿತು.

ಅವರ ಹಾಗೆಯೇ ಇವರು. ಆದರೂ ಅದು— ಆ ಸುರುಳಿ ?

"ಅದೇನು ?"

ನೆಫಿಸ್ ಉತ್ತರವಿತ್ತಳು :

"ಲಿಪಿ ಸುರುಳಿ. ಮಗ ಹೆತ್ತ ತಾಯೀನ ಮರೀಬಾರ್ದು ಅಂತ ಅದರಲ್ಲಿ ಬರೆದಿದೆ."

"ಓ ! ಎಲ್ಲಿ—ಸುರುಳಿ ಬಿಚ್ಚು, ನೋಡೋಣ."

ಅವರೆಲ್ಲರ ಆಸಕ್ತಿ ಕಂಡು ರಾಮೆರಿಪ್‌ಟಾಗೆ ಅಚ್ಚರಿ. ತಾಯಿಗೆ ಹೆಮ್ಮೆ; ತಂದೆ ಮುಗುಳ್ನಗುತ್ತ ನಿಂತ.

ಕುಳಿತಿದ್ದ ನೆಫಿಸ್ ಸುರುಳಿ ಬಿಚ್ಚಿ, ತೊಡೆಯಮೇಲೆ ಹರಡಿ, ತನಗೆ ಅರ್ಥವಾಗದ ಚಿತ್ತಾರದ ಅಕ್ಷರಗಳನ್ನೊಮ್ಮೆ ನೋಡಿ ನುಡಿದಳು :

" ಒಂದು ಬಾತುಕೋಳಿ, ಕುಸುರಿ ಕೆಲಸದ ಒಂದು ಚೀಲ, ಒಂದು ರೊಟ್ಟಿ—ಇಷ್ಟು ಕೊಟ್ಟ."

" ಓ ! ಭಾರೀ ಮೌಲ್ಯ !"

" ಊರಿನಲ್ಲಿ ಲಿಪಿಕಾರನಿಗೆ ತೋರಿಸಿ ಓದಿಸ್ಬೇಕು. ಆಮೇಲೆ ರಾಮೆರಿಯೂ ಕಲಿತ್ಕೊಳ್ತಾನೆ."

ಎರಡು ಕ್ಷಣ ಮೌನ. ಅದು ಅಸಾಧಾರಣ ಘಟನೆ. ಆ ದುಡಿಯುವ ಕುಟುಂಬಗಳು ಎಂದೂ ಯಾವ ತಲೆಮಾರಿನಲ್ಲೂ ಲಿಪಿಸುರುಳಿಯನ್ನು ಮುಟ್ಟಿರಲಿಲ್ಲ.

ಆ ಜನರಲ್ಲಿ ಹೆಚ್ಚು ವಯಸ್ಸಾದವನೊಬ್ಬ ಅಂದ :

" ಇದರಿಂದ ನಮಗೆಲ್ಲ ಸಂತೋಷ, ಮೆನೆಪ್‌ಟಾ."

ನಿದ್ದೆ ಹೋಗಿದ್ದ ಎಳೀ ಮಗುವನ್ನು ಎದೆಗವಚಿಕೊಂಡಿದ್ದ ಅಹೂರಾ ನುಡಿದಳು :

" ಮೆನೆಪ್‌ಟಾ ಅಣ್ಣ. ನನ್ನ ಭಾವ ಒಂದು ಚೀಲ ಖಿವವ ತಂದಿದ್ದಾನೆ. ಒಂದು ಚೀಲ ನೀರೂ ಇದೆ. ಎಲ್ಲರೂ ಬುತ್ತಿ ಹಂಚ್ಕೊಳ್ಳೋಣ."

" ಹೌದು. ಹಂಚ್ಕೊಳ್ಳೋಣ," ಎಂದು ನಾಲ್ಕಾರು ಜನ ಧ್ವನಿಗೂಡಿಸಿದರು.

ಮುಗುಳುನಗೆ ಬೀರಿ ಮೆನೆಪ್‌ಟಾ ಅಂದ :

" ಹಾಗೇ ಆಗಲಿ. ಎಲ್ಲರ ಬುತ್ತಿಗಳನ್ನೂ ಒಟ್ಟಿಗೆ ಸೇರಿಸೋಣ. ರಾತ್ರಿಗೆ ಒಂದು ತುತ್ತು. ನಾಳೆ ಮಧ್ಯಾಹ್ನಕ್ಕಿಷ್ಟು ತೆಗೆದಿಟ್ಟು, ಈಗ ಊಟ ಮಾಡೋಣ."

ಈ ಏರ್ಪಾಟು ಆಗುತ್ತಿದ್ದಂತೆ, ಕುರುಡ ಗಾಯಕನೊಬ್ಬನನ್ನು ಕೈ ಹಿಡಿದು ನಡೆಸುತ್ತ ಒಬ್ಬ ಹುಡುಗ ಅಲ್ಲಿಗೆ ಬಂದ.

ಅವನೆಂದ :

" ಓ ಭಕ್ತರೇ ! ನಮ್ಮ ತಾತ ಸೃಷ್ಟಿಯ ಕಥೆ ಹಾಡ್ತಾನೆ. ಒಸೈರಿಸ್

ದೇವತೆಯ ಉತ್ಸವದ ದಿವಸ ಅದನ್ನು ಕೇಳಿದವರಿಗೆ ಪುಣ್ಯ ಬರ್ತದೆ."

"ಆಗಲಿ, ಆಗಲಿ. ಶ್ರೀಮಂತರ ಭೋಜನಕ್ಕೂ ಹಾಡು; ಬಡವರ ಊಟಕ್ಕೂ ಹಾಡು, ಯಾಕಾಗಬಾರ್ದು? ಯಾಕಾಗಬಾರ್ದು?" ಎಂದ ನೊಬ್ಬ.

ಹತ್ತಿರದ ಜೂರು ನೆರಳಿಗೆ ಮುದುಕನನ್ನು ಕರೆದೊಯ್ಯುತ್ತ ಹುಡುಗ ಆವನಿಗೆ ಹೇಳಿದ:

"ಇವರೆಲ್ಲ ಒಳ್ಳೇಯವರು ತಾತ...."

ನೆಫಿಸ್ ಅಂದಳು:

"ನಮ್ಮ ಜತೆ ಊಟ ಮಾಡಿ ಹಾಡ್ಬಾರದಲ್ಲ?"

"ಛೆ! ಛೆ! ನೀವು ಉಣ್ಣುತ್ತಾ ನನ್ನ ಹಾಡು ಕೇಳ್ಬೇಕು.... ನಾನೂ ನನ್ನ ಮೊಮ್ಮಗನೂ ಆಮೇಲೆ ಉಣ್ತೇವೆ."

ಜರ್ಜರಿತ ದೇಹದಿಂದ ಹೊರಟ ಧ್ವನಿ. ಆದರೆ ಅದು ಇಂಪಾಗಿತ್ತು. ದೃಢವಾಗಿತ್ತು.

ಯಾತ್ರಿಕರು ಒಂದಷ್ಟು ಖಿವನ ಕುಡಿದರು.

ಒಬ್ಬನೆಂದ:

"ಊಟ ಆಮೇಲೆಯೇ ಮಾಡು. ಈಗ ಒಂದಿಷ್ಟು ಖಿವನ ತಗೋ, ಗಂಟಲಿಗೆ ಒಳ್ಳೇದು."

ಮುದುಕ ನಕ್ಕು "ಆಗಲಿ!" ಎಂದ, ಏಕನಾದವನ್ನು ಮಿಾಟುತ್ತ.

ಅವನ ಕಂಠಶ್ರೀಗೆ ಮತ್ತಷ್ಟು ಮೆರಗು ನೀಡಿತು, ಆ ಪಾನೀಯ.

ಸೃಷ್ಟಿಯ ಕಥೆ ಕೇಳುವ ಆಸೆಯಿಂದ ಯಾತ್ರಿಕರು ಸದ್ದಿಲ್ಲದೆ ಉಂಡರು.

ಗಾಯಕ ಆರಂಭಿಸಿದ:

"ಯೋ ಯೋ ಯೋ....
ಹೇಳುವೆ ಕೇಳಿ ಸೃಷ್ಟಿಯ ಕಥೆಯ
ಈ ಲೋಕದ ಆದಿ ಅನಾದಿಯ ಕಥೆಯ
ಯೋ ಯೋ ಯೋ...."

ತನ್ಮಯತೆ. ಲೋಕದ ಪ್ರಸವವನ್ನು ಕಣ್ಣಾರೆ ಆತ ಕಂಡಿದ್ದನೇನೋ ಎನಿಸುವಂಥ ಖಚಿತ ವಾಕ್ಕುಗಳು.

ಆರಂಭದಲ್ಲಿದ್ದುದು ಕತ್ತಲು. ಆ ಕತ್ತಲಲ್ಲಿ ಎಲ್ಲೆಲ್ಲೂ ನೀರು. ಅದರ ಮೇಲೆ ತೇಲಿತೊಂದು ಭಾರೀ ಗಾತ್ರದ ಮೊಟ್ಟೆ....(ಮೊಟ್ಟೆಯೊ ? ಕಮಲದ ಮೊಗ್ಗೊ ?) ಮೊಟ್ಟೆಯೊಡೆದು (ಮೊಗ್ಗು ಅರಳಿ) ಅದರೊಳಗಿಂದ ಉದಿಸಿ ಬಂದ, ಉಜ್ವಲ ಪ್ರಭೆಯ ರಾ—ಸೂರ್ಯ—.... ರಶ್ಮಿಗಳ ಸ್ಪರ್ಶದಿಂದ ಜಲರಾಶಿ ಹೊಂಬಣ್ಣ ತಳೆಯಿತು.

ರಾ ಆಕಾಶದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಚಲಿಸಿದ. ಎಲ್ಲವೂ ಸ್ತಬ್ಧ ಯಾವ ಸ್ವಾರಸ್ಯವೂ ಇರಲಿಲ್ಲ.

"ಶು"....ಎಂದ, ರಾ.

ಗಾಳಿ ಬೀಸಿತು. ನೀರಿನಲ್ಲಿ ಅಲೆಗಳೆದ್ದುವು. ಜಲಧಿ ಮೊರೆಯಿತು, ಭೋರ್ಗರೆಯಿತು.

"ಟೆಫ್‌ನುಟ್," ಎಂದು ನುಡಿದ.

ಮಳೆ ಸೋನೆಗಳು ಜಿನುಗಿದವು.

"ಗೆಬ್," ಎಂದು ಕರೆದ.

ಭೂಮಿ ನೀರಿನಿಂದ ಮೇಲಕ್ಕೆ ಎದ್ದಿತು.

"ನುಟ್," ಎಂದ.

ನುಟ್ ದೇವತೆ ಒಂದು ದಿಗಂತದ ಮೇಲೆ ಪಾದಗಳನ್ನು ಇರಿಸಿ, ಇನ್ನೊಂದು ದಿಗಂತದ ಮೇಲೆ ಅಂಗೈಗಳನ್ನು ಊರಿ, ಆಕಾಶದಲ್ಲಿ ಕಮಾನಾದಳು.

"ಹಾಪಿ," ಎಂದು ಉಚ್ಚರಿಸಿದ ರಾ.

ಭೂಮಿಯ ಮೇಲೆ ನೀಲ ನದಿ ಹರಿಯಿತು.

"ಗಂಡು ಹೆಣ್ಣು," ಎಂದ.

ನೆಲದ ಮೇಲೆ ಎಲ್ಲೆಲ್ಲೂ ಸ್ತ್ರೀಪುರುಷರು ಕಾಣಿಸಿಕೊಂಡರು.

ರಾ ಎಲ್ಲ ಕಡೆಗಳಿಗೂ ದೃಷ್ಟಿ ಬೀರಿದ. ಅವನ ಕಣ್ಣುಗಳಿಂದ ಪ್ರಾಣಿ ಪಕ್ಷಿಗಳೂ ಬಗೆಬಗೆಯ ಸಸ್ಯಗಳೂ ಉದುರಿದುವು.

ಇದಾದ ಮೇಲೆ ರಾ ಸ್ವತಃ ಮಾನವನ ರೂಪು ತಳೆದು, ಭೂಮಿಗಿಳಿದು, ಪೃಥ್ವೀವಲ್ಲಭನಾದ; ಹಿರಿಯ ಮನೆಯವನು—ಪೆರೋ—ಎನಿಸಿಕೊಂಡ.

ಲೋಕದ ಪ್ರಥಮ ಪೆರೋ ರಾ ಸಹಸ್ರಾರು ವರ್ಷ ಆಳಿದ. ಅದು ಸುಖ ಸಮೃದ್ಧಿಯ ರಾಜ್ಯಭಾರ.

ಅವನಿಗೆ ವಯಸ್ಸಾಗುತ್ತ ಬಂದಂತೆ ದುಷ್ಟ ಶಕ್ತಿಯ ಫೂತ್ಕಾರ

ಅಲ್ಲಲ್ಲಿ ಕೇಳಿಸಿತು. ಜನರಲ್ಲಿ ಕೆಲವರಿಗೆ ದುರ್ಬುದ್ಧಿ ಹುಟ್ಟಿತು. ಅವರು ರಾನನ್ನು ಜರೆದರು. ಆ ಜನರನ್ನು ರಾ ನಿಗ್ರಹಿಸಿದ.

ತೀರಾ ಮುದುಕನಾದಾಗ ಹಿರಿಯ ಮಗ ಒಸ್ಯೆರಿಸ್‌ಗೆ ಅಧಿಕಾರ ಬಿಟ್ಟು ಕೊಟ್ಟು ಆಕಾಶಕ್ಕೆ ಅಡ್ಡವಾಗಿ ಹಗಲಿನ ಪಯಣ ಕೈಗೊಳ್ಳುತ್ತ ರಾ ಕಾಲ ಕಳೆದ.

ಹೀಗೆ, ಪ್ರಥಮ ಫೆರೋ ಹಿರಿಯ ದೇವರಾದ.

ಅವನ ಮಗ ಒಸ್ಯೆರಿಸ್ ತನ್ನ ಆಳ್ವಿಕೆಯ ಬಳಿಕ ಕೆಳಲೋಕದ ಅಧಿಪತಿ ಯಾದ; ಸತ್ತವರಿಗೆ ಸ್ಥಾನನೀಡುವ ನ್ಯಾಯಮೂರ್ತಿಯಾದ.

—ಊಟ ಮುಗಿಯುತ್ತ ಬಂದಿತ್ತು. ವೃದ್ಧ ಸೃಷ್ಟಿಯ ಕಥೆಗೆ ಮಂಗಳ ಹಾಡಿದ:

"ರಾ ನಮೋ ಬೆಳಕೆ ನಮೋ
ಬುವಿಯ ಜನಕ ನಮೋ
ಯೋ ಯೋ ಯೋ
ಒಸರಿಸ ದೇವ ನಮೋ
ಪರಲೋಕದ ಒಡೆಯ ನಮೋ
ಯೋ ಯೋ ಯೋ
ಈ ಭಕ್ತರ ನೀ ಸಲಹು
ಹಾಡುವ ಈ ದಾಸನ ಸಲಹು
ಯೋ ಯೋ ಯೋ...."

ಕಟ್ಟೆ ಬಿರಿದಂತೆ ಮಾತು. ಪುನಃ ಖಿವವ ಪಾನ. ಗಾಯಕನಿಗೂ ಅವನ ಹುಡುಗನಿಗೂ ಹೊಟ್ಟೆತುಂಬ ಊಟ; ಒಬ್ಬನಲ್ಲಿ ಉಳಿದಿದ್ದ ಒಂದೇ ಒಂದು ನಡುವಸ್ತ್ರದ ಉಡುಗೊರೆ.

ಮೆನೆಪ್‌ಟಾನ ಮನಸ್ಸನ್ನು ಹಾಡಿನ ಸಾಲುಗಳು ಮತ್ತೆ ಮತ್ತೆ ಮೀಟಿ ದುವು. ಸೂರ್ಯದೇವ 'ಶು' ಎಂದಾಗ ಗಾಳಿ ಬೀಸಿತಂತೆ. ಎಂಥ ಸುಂದರ ಕಲ್ಪನೆ! ನಿಜವಾಗಿ ಭೂಮಿಯ ಸೃಷ್ಟಿ ಈ ರೀತಿ ಆಯಿತೋ ಇಲ್ಲವೋ, ಯಾರಿಗೆ ಗೊತ್ತು? ಆದರೂ, ಹಾಗೆ ಆಯಿತೆಂಬುದು ಪ್ರಾಚೀನ ನಂಬುಗೆ. ನಿಜವಿರಲೂ ಬಹುದು. ಮೆನೆಪ್‌ಟಾ ಇನ್ನೂ ಒಂದು ಬಗೆಯ ಕಥೆ ಕೇಳಿದ್ದ. 'ಈ ಲೋಕದಲ್ಲಿನ ಸರ್ವಸ್ವವನ್ನೂ ಸೃಷ್ಟಿಸಿದವನು ಕುಶಲ ಕರ್ಮಿಗಳ ದೇವರಾದ

ಪ್‌ಟಾ, ರಾಜಧಾನಿ ಮೆಂಫಿಸಿನ ಮಹಾದೇಗುಲ ಅವನದು. ಯಾವುದು ಸತ್ಯ—ಇದೊ ? ಅದೊ ? ರಾನ ವಾಸ ಆಕಾಶದಲ್ಲಿ, ಪ್‌ಟಾನಿಗಿಂತ ಅವನೇ ದೊಡ್ಡವನಿರಬಹುದು.

ನೆಫಿಸ್ ಕೇಳಿದಳು :

" ಏನು ಯೋಚಿಸ್ತಿದೀಯಾ ?"

" ದೇವರ ವಿಷಯ."

" ಗುಡ್ಡ ಹತ್ತಬೇಕು. ಹೊರಡೋಣವಾ ?"

ಆ ಮಾತು ಕಿವಿಗೆ ಬಿದ್ದ ಅಂಧ ಗಾಯಕನೆಂದ :

" ಹ್ಞ. ಹೊರಡ್ಬೌದು. ಸ್ವಲ್ಪ ಮುಂಚೆ ಹೋಗಿ ದೇವರ ಗೋರಿ ಹತ್ತಿರದ ದಿಬ್ಬದ ಮೇಲೆ ಜಾಗ ಹಿಡೀರಿ. ಅಲ್ಲಿಂದ ಚೆನ್ನಾಗಿ ಕಾಣಿಸ್ತದೆ."

" ಎಲ್ಲರೂ ಏಳಿ ಹಾಗಾದರೆ," ಎಂದ ಮೆನೆಪ್‌ಟಾ.

ಖಿವವ ತುಂಬಿದ ತೊಗಲಿನ ಚೀಲ ಮುಕ್ಕಾಲು ಪಾಲು ಬರಿದು. ನೀರಿನ ಚೀಲದಲ್ಲಿ ಇನ್ನೂ ಅರ್ಧದಷ್ಟಿತ್ತು. ಹೊರಲು ಇದ್ದದ್ದು ಒಂದೇ ಬುತ್ತಿ ಗಂಟು. ಉಳಿದುವೆಲ್ಲ ಅವರವರು ಕೊಂಡಿದ್ದ ವಸ್ತುಗಳ ಪುಟ್ಟ ಗಂಟುಗಳು.

ಯಾತ್ರಿಕರು ಎದ್ದು ನಡೆಯತೊಡಗಿದರು. ಅವರಲ್ಲೊಬ್ಬ ಗಾಯಕನನ್ನು ಅನುಕರಿಸುತ್ತ ರಾಗವೆಳೆದ :

" ಯೋ ಯೋ ಯೋ "

ಎರಡು ಸಾಲುಗಳನ್ನೂ ಹಾಡಿದ :

" ಒಸರಿಸ ದೇವ ನಮೋ
ಪರಲೋಕದ ಒಡೆಯ ನಮೋ"....

ಕಡಿದಾದ ದಾರಿಯಲ್ಲಿ ಸಾಗುತ್ತ ಆ ಯಾತ್ರಿಕರಲ್ಲಿ ಹಲವರು ತಾವೂ ಅಂದರು :

" ಯೋ ಯೋ ಯೋ."

* * * *

ದಿಬ್ಬದ ಮಗ್ಗುಲಲ್ಲಿ ಜನರ ಗುಂಪು ನೆರೆದಿತ್ತು. ನಾಮಫಲಕಗಳನ್ನು ಬರೆಸುತ್ತಿದ್ದವರು ಕೆಲವರು; ನೋಡುತ್ತ ನಿಂತಿದ್ದವರು ಹಲವರು. ಒಬ್ಬ

ಲಿಪಿಕಾರ ಗಿರಾಕಿಗಳ ಹೆಸರು ಬರೆದುಕೊಡುತ್ತಿದ್ದ. ಇಬ್ಬರು ಮೂವರು ಯುವಕ ಶಿಲ್ಪಿಗಳು ಎರಡು ಗೇಣುದ್ದ ಅಗಲದ ಒಂದು ಮೊಳ ಎತ್ತರದ ಶಿಲಾ ಫಲಕಗಳ ಮೇಲೆ ಆ ಅಕ್ಷರಗಳನ್ನು ಕೊರೆಯುತ್ತಿದ್ದರು.

ಆ ಫಲಕಗಳನ್ನು ಒಸೈರಿಸನ ಗೋರಿಯ ಬಳಿ ನೆಡುವುದರಿಂದ ಆಗುವ ಲಾಭವನ್ನು ಲಿಪಿಕಾರ ಪದೇ ಪದೇ ವಿವರಿಸುತ್ತಿದ್ದ.

ಗೋರಿ ಕಟ್ಟೋ ಹಕ್ಕು ಮೊದಲು ಪೆರೋಗೆ ಮಾತ್ರ ಇತ್ತು. ಅವರಿಗೆ ಸಾವಿಲ್ಲ. ಯಾಕೆ ಅಂದರೆ ಒಸೈರಿಸನ ಕೃಪೆಯಿಂದ ಪೆರೋಗೆ ಪುನರುತ್ಥಾನ ಸಾಧ್ಯ. ಮೂರು ಸಾವಿರ ವರ್ಷ ಅವರು ಬಾಳೋದು ಖಚಿತ. ....ಆಮೇಲೆ, ಅಮಾತ್ಯರಿಗೂ ಗೋರಿ ನಿರ್ಮಾಣಕ್ಕೆ ಅನುಮತಿ ಸಿಕ್ತು. ಮುಂದೆ ಭೂಮಾಲಿಕ ಪ್ರಭುಗಳೂ ಗೋರಿ ಕಟ್ಟಬಹುದೂಂತಾಯ್ತು. ನೀವು ಭೂಮಾಲಿಕರಲ್ಲವಲ್ಲ. ಏನು ಮಾಡ್ತೀರಿ? ಇಲ್ಲಿನ ಕಥೆ ಮುಗಿದ್ಮೇಲೆ ಸುಖ ಜೀವನ ಬೇಕೂಂತಾದ್ರೆ ಪರಲೋಕದಲ್ಲಿ ಒಸೈರಿಸನ ರಾಜ್ಯಕ್ಕೆ ಪ್ರವೇಶ ಸಿಗ್ಬೇಕು. ಆ ನ್ಯಾಯಮೂರ್ತಿ ನಿಮ್ಮ ಮೇಲೆ ದಯೆ ತೋರಿಸ್ಬೇಕು. ಆ ದೇವನ ಗೋರಿಯ ಹತ್ತಿರ ನಿಮ್ಮ ನಾಮಫಲಕವನ್ನಾದರೂ ನೆಟ್ಟರೆ, ಅದು ಆತನ ಕಣ್ಣಿಗೆ ಬೀಳ್ತದೆ. ನಿಮ್ಮ ಹೆಸರು ಅವನ ನೆನಪಿನಲ್ಲಿ ಉಳೀತದೆ. ಹ್ಞಾ....ಈಗ ಗೊತ್ತಾಯ್ತಾ? ಹೇಳಿ. ಇನ್ನು ಯಾರಿಗ್ಬೇಕು? ಏನು ಹೆಸರು?"

ದಿಬ್ಬವನ್ನಾಗಲೇ ಬಹಳ ಜನ ಏರಿದ್ದರು. ಅಲ್ಲಿ ಇಲ್ಲಿ ತುಸು ಸ್ಥಳ ವಿತ್ತು.

ಮೆನೆಪ್‌ಟಾನ ತಂಡವನ್ನು ಕಂಡು ಒಬ್ಬನೆಂದ :

"ಬೇಗ ಸ್ಥಳ ಹಿಡೀರಿ. ಉತ್ಸವದ ತುದಿಬುಡ ಎಲ್ಲ ನೋಡ್ಬೇಕು ಅಂದ್ರೆ ಒಬ್ಬೊಬ್ಬನೂ ಹಲವು ರೂಪ ಧರಿಸ್ಬೇಕು. ಸೆತ್ ತನ್ನ ಅಣ್ಣನನ್ನು ಹದಿನಾಲ್ಕು ಹೋಳು ಮಾಡಿ ಹದಿನಾಲ್ಕು ಕಡೆ ಬಚ್ಚಿಟ್ಟ. ಐಸಿಸ್ ಗಂಡನ ಮೃತ ಶರೀರದ ಹದಿಮೂರು ಹೋಳು ಕಂಡುಹಿಡಿದ್ಲು. ಪ್ರತಿಯೊಂದು ಕಡೆಯೂ ಸಿಕ್ಕ ಹೋಳಿನ ಆಧಾರದ ಮೇಲೆ ಉಳಿದ ದೇಹವನ್ನು ಕಲ್ಪಿಸಿ ಇಡೀ ಶರೀರ ನಿರ್ಮಿಸಿದ್ಲು. ಒಂದೇ ರೀತಿಯ ಹದಿಮೂರು ಶರೀರ, ಹದಿಮೂರು ಕಡೆ ಹುಗಿದ್ಲು. ಅಬ್ಬುವಿನಲ್ಲಿ ಸಿಕ್ಕಿದ್ದು ತಲೆ—ಕಿರೀಟ ಹೊತ್ತ ತಲೆ. ಅದೇ

ಮುಖ್ಯ ನೋಡಿ. ಇಲ್ಲೂ ಒಂದು ಶರೀರ ಸಿದ್ಧವಾಯ್ತು. ಅದಕ್ಕೇ ಅಬ್ಬುವಿಗೆ ಶ್ರೇಷ್ಠ ಸ್ಥಾನ. ಏನು ಹೇಳುತ್ತಾ ಇದ್ದೆ ಅಂದ್ರೆ, ಐಸಿಸ್‌ನ ಹಾಗೆ ಉತ್ಸವದ ಒಂದು ಚೂರು ನಾವೂ ನೋಡ್ಬೌದು. ಅದರ ಆಧಾರದ ಮೇಲೆ ಉಳಿದಿದ್ದನ್ನು ಕಲ್ಪಿಸಿಕೋಬೇಕು.

ಮೆನೆಪ್‌ಟಾ ಕೇಳಿದ :

" ಅಣ್ಣ, ಹಿಂದೆ ಈ ಉತ್ಸವ ನೋಡಿದ್ದೀ ಏನು ?"

" ಓಹೋ ! ಮೂರು ಬಾರಿ. ಒಂದೊಂದ್ಸಲ ಒಂದೊಂದು ಕಡೆ ನಿಂತಿದ್ದೆ. ಮೊದಲ್ನೇ ಸಲ ಗರ್ಭಗುಡಿಯ ಹತ್ತಿರವೇ ಇದ್ದೆ...."

ನೆರೆದವರ ಎಡೆಯಿಂದ ಒಂದು ಸ್ವರ ಕೇಳಿಸಿತು :

" ಏನೇನ್ಕಂಡೆ ಹೇಳು ಮತ್ತೆ."

" ಹತ್ತಿರದಿಂದ, ಈ ಎರಡೂ ಕಣ್ಣುಗಳಿಂದ, ಎಲ್ಲಾ! ನೋಡ್ದೆ...."

* * * *

....ಸೂರ್ಯೋದಯಕ್ಕೆ ಮುಂಚೆ, ಕತ್ತಲು ದಟ್ಟವಾಗಿದ್ದಾಗಲೇ ಮುಖ್ಯ ದೇವ ಸೇವಕನೂ ಹನ್ನೆರಡು ಜನ ಕಿರಿಯ ದೇವಸೇವಕರೂ ದೇಗುಲದ ಬಳಿಯ ಪವಿತ್ರ ಕೊಳದಲ್ಲಿ ಸ್ನಾನ ಮಾಡುತ್ತಾರೆ. ಒದ್ದೆ ಬಟ್ಟೆಯಲ್ಲೇ ದೇಗುಲಕ್ಕೆ ಬರುತ್ತಾರೆ. ಬಟ್ಟೆ ಮುಖ್ಯಸ್ಥನ ಮೈಮೇಲೆ ಮಾತ್ರ—ಒಂದಿಷ್ಟು. ಉಳಿದವರಿಗೆ ಬರೀ ಕೌಪೀನ. ಅವರ ಮೆರವಣಿಗೆ ಮಹಾದ್ವಾರವನ್ನು ಪ್ರವೇಶಿಸಿ, ಗರ್ಭಗುಡಿಯತ್ತ ಸಾಗುತ್ತದೆ. ಪ್ರಾಂಗಣದಲ್ಲಿ ಕಟಾಂಜನದ ಈಚೆಗೆ ಪ್ರೇಕ್ಷಕರ ನೂಕು ನುಗ್ಗಲು. ಜನರು ಅದನ್ನು ದಾಟಿ ಮುಂದಕ್ಕೆ ಹೋಗುವಂತಿಲ್ಲ.

ಗರ್ಭಗುಡಿಯ ಬಾಗಿಲಿನ ಮೇಲೆ ಆವೆಮಣ್ಣಿನ ಮುದ್ರೆ. ಮುಖ್ಯ ದೇವಸೇವಕ ಆ ಮುದ್ರೆಯನ್ನು ಒಡೆಯುತ್ತಾನೆ. ದಿಗಂತದಲ್ಲಿ ಸೂರ್ಯ ಕಾಣಿಸಿಕೊಂಡು ಮೊದಲ ರಶ್ಮಿಗಳನ್ನು ತೂರಿದಾಗ, ಗರ್ಭಗುಡಿಯ ಬಾಗಿಲು ತೆರೆಯುತ್ತಾನೆ. ಒಳಗಿರುವ ದೇವ ಮೂರ್ತಿಯ ಮೇಲೆ ಬೆಳಕು ಬೀಳುತ್ತದೆ. ಬಟ್ಟೆ ಸುತ್ತಿದ ಮೂರ್ತಿ. ನಾಲ್ಕೈದು ಮೊಳ ಎತ್ತರ. ಮುಖ್ಯ ದೇವ ಸೇವಕ ಅದರ ಮುಂದೆ ಸಾಷ್ಟಾಂಗ ಪ್ರಣಾಮ ಮಾಡುತ್ತಾನೆ. ಎದ್ದು, ಮಂತ್ರ

ಪಠಿಸುತ್ತಾನೆ. ಸುಗಂಧ ದ್ರವ್ಯಗಳ ಧೂಪ ಹಾಕುತ್ತಾನೆ. ಮೂರ್ತಿಯನ್ನು ಪೀಠದಿಂದ ಹೊರತೆಗೆದು, ("ಸುಲಭವಾಗಿ ಎತ್ತಿದ. ಹೆಚ್ಚು ಭಾರವಿಲ್ಲ. ಮರದ ಮೂರ್ತಿ ") ಅದಕ್ಕೆ ಸುತ್ತಿದ್ದ ಬಟ್ಟೆಯನ್ನು ಬಿಚ್ಚುತ್ತಾನೆ. ತೊಳೆದು, ಹೊಸ ಬಟ್ಟೆ ಸುತ್ತುತ್ತಾನೆ. ಪುನಃ ಪೀಠದ ಮೇಲಿಡುತ್ತಾನೆ. ಆಮೇಲೆ ದೇವರಿಗೆ ಆಹಾರ ಪಾನೀಯ ಸಮರ್ಪಿಸುತ್ತಾನೆ. ("ದೇವರು ನಮ್ಮ ಹಾಗೆಯೇ. ಅವರಿಗೂ ಆಹಾರ ಬೇಕು, ವಿನೋದ ಬೇಕು, ವಿಶ್ರಾಂತಿ ಬೇಕು. ದೇವರು ತಿನ್ತಾನಾ ಕುಡೀತಾನಾ ಅಂತ ಕೇಳ್ಬೇಡಿ. ಅದು ಬೇರೆ ವಿಷ್ಯ. ಉತ್ಸವದ ದಿವಸ ಅಂಥ ಮಾತು ಯಾಕೆ?") ಸಾಮಾನ್ಯ ದಿನಗಳಲ್ಲಾದರೆ ವಿಧಿಗಳು ಮುಗಿದ ಮೇಲೆ ಮುಖ್ಯ ದೇವಸೇವಕ ಗರ್ಭಗುಡಿಯ ಬಾಗಿಲು ಮುಚ್ಚಿ, ಅದಕ್ಕೆ ಪುನಃ ಆವೆಮಣ್ಣಿನ ಮುದ್ರೆ ಒತ್ತಿ, ತನ್ನ ಹೆಜ್ಜೆ ಗುರುತುಗಳನ್ನೆಲ್ಲ ಒರೆಸಿ ತಾನು ಅಲ್ಲಿಗೆ ಬಂದುದರ ಯಾವ ಕುರುಹೂ ಇಲ್ಲದಂತೆ ಮಾಡಿ, ಅಲ್ಲಿಂದ ಹೊರಡುತ್ತಾನೆ. ಕಿರಿಯ ದೇವಸೇವಕರು ಮಂತ್ರ ಪಠಣ ಮಾಡುತ್ತ ಅಲ್ಲಿಯೇ ಇರುತ್ತಾರೆ. ಇವತ್ತು ಹಾಗಲ್ಲ. ಯಾಕೆ ಅಂದರೆ—

ಜಾತ್ರೆ ಈ ದಿನ. ಪ್ರತಿ ವರ್ಷ ಕುಯಿಲಿನ ಬಳಿಕ ನಡೆಯುವ ಭಾರೀ ಉತ್ಸವ. ಯಾವ ಆರೈಕೆಯೂ ಇಲ್ಲದೆ ಬೆಳೆಯುತ್ತಿದ್ದ ಗೋಧಿಯನ್ನೂ ಯವೆಯನ್ನೂ ಕಂಡು ಹಿಡಿದವಳು, ರಾಣಿ ಐಸಿಸ್. ಅವನ್ನು ಆಕೆ ಅರಸ ಒಸ್ಸೈರಿಸ್‌ಗೆ ತೋರಿಸಿದಳು. ಆತ ಪ್ರಜೆಗಳಿಗೆ ಆ ಧಾನ್ಯಗಳ ಪರಿಚಯ ಮಾಡಿಕೊಟ್ಟ. ಅವರು ಆ ಸಸ್ಯಗಳನ್ನು ಕೃಷಿಮಾಡಿದರು. ಸತ್ಯಸಂಧ ದೊರೆ ತನ್ನ ದುಷ್ಟ ಸೋದರನಿಂದ ಹತನಾದ. ಮೋಸದ ಕೊಲೆ. ಶವವನ್ನು ಆತ ಮರೆ ಮಾಡಿದ. ಆಗ ಐಸಿಸ್ ತುಂಬಿದ ಗರ್ಭಿಣಿ. ಹುಟ್ಟಿದ ಮಗನನ್ನು ಬುಟೋ ದೇವತೆಯ ಆರೈಕೆಯಲ್ಲಿ ಬಿಟ್ಟು, ಪತಿಯ ಶವವನ್ನು ಅರಸುತ್ತ ಹೊರಟಳು. ನೀಲ ನದಿಯಂತೆ ಅಗಾಧ ಅವಳ ಅಳಲು....

(ದೇಶದ ಬೇರೆ ಬೇರೆ ಕಡೆ ಮೃತ ಶರೀರದ ಬೇರೆ ಬೇರೆ ಅಂಗಗಳು. ಅಬ್ಟುವಿನಲ್ಲಿ ತಲೆ....)

ಪತಿಯ ಮುಖ ಕಂಡು, ಕಿರೀಟ ಹೊತ್ತ ತಲೆ ನೋಡಿ ಎದೆಯೊಡೆಯುವಂತೆ ಕೂದಲು ಕಿತ್ತು ಕಿತ್ತು ಐಸಿಸ್ ಅತ್ತಳು.

ಸಹಸ್ರಾರು ವರ್ಷ ಕಳೆದರೂ ಜನ ಮನ್ನನ್ನು ಕದಡಿದ ಶೋಕ ಅದು. ಆತನದು ಎಲ್ಲ ಸಜ್ಜನರ ಮರಣ; ಆಕೆಯದು ಗಂಡಂದಿರನ್ನು ಕಳೆದುಕೊಂಡ ಸತೀಮಣಿಯರೆಲ್ಲರ ಆರ್ತನಾದ. ಮುಂದೆ ಅನ್ಯಾಯಕ್ಕಿದುರು ಆಕೆಯೂ ಮಗನೂ ನಡೆಸಿದ ಹೋರಾಟ ಲೋಕದೆಲ್ಲ ಸಂತ್ರಸ್ತರ ಹೋರಾಟ. ಒಸ್ಸೈರಿಸ್ ಮೃತ್ಯುವನ್ನು ಜಯಿಸಿದ. ಮತ್ತೆ ಐಗುಪ್ತವನ್ನು ಆಳದೆ ಇದ್ದರೂ ಮೃತರ ಲೋಕದ ಅಧಿಪತಿಯಾದ.

ವರ್ಷ ವರ್ಷ ಆ ನೆನಪು; ನೆನಪು ಹಸುರಾಗಿರಲೆಂದೇ ಒಸ್ಸೈರಿಸ್ ಕಥೆಯ ಪುನರಭಿನಯ.

* * * *

ಐಸಿಸ್ ಪಾತ್ರಧಾರಿಣಿ ಅಬ್ಬುವಿನ ದೇವಸೇವಕಿ. ರೂಪಸಿ. ಯುವತಿ. ಅವಳು ಮಡಿಯುಟ್ಟು ಬಂದಳು. (ಪವಿತ್ರ ಕೊಳದಲ್ಲಿ ಮುಳುಗು ಎದೆಯಿಂದ ಪಾದಗಳವರೆಗೂ ಮೈಗಂಟಿದ ಬಟ್ಟೆ.) ಬಿರು ನೋಟ ಬೀರುತ್ತಿದ್ದ ಆಕೆಯ ಕಣ್ಣುಗಳಲ್ಲಿ ಪತಿವಿಯೋಗದ ಸರ್ವಕಾಲಗಳ ಯಾತನೆ. ನಿದ್ದೆಯಲ್ಲಿ ಚಲಿಸುವವರಂತೆ ನಡಿಗೆ. ಅವಳ ಹಿಂದೆ ಐವರು ಐವರಾಗಿ ಧ್ವನಿ ತೆಗೆದು ರೋದಿಸುವ ಸ್ತ್ರೀಯರು. ಎಲ್ಲರೂ ನಿಧಾನ; ಬಹಳ ನಿಧಾನ. ("ಪೆರೋ ಮತ್ತು ಮಹಾ ಅರ್ಚಕ ರಾಜಧಾನಿಯಿಂದ ಬರಬೇಕಲ್ಲ.")

ಮುಖ್ಯ ದೇವಸೇವಕ ಗರ್ಭಗುಡಿಯ ಮಗ್ಗುಲು ಕೊಠಡಿಯ ಬಾಗಿಲು ತೆರೆದ. ದೇವಸೇವಕಿ ದೇವತಾಮೂರ್ತಿಗೆ ಸಾಷ್ಟಾಂಗ ಪ್ರಣಾಮ ಮಾಡಿದಳು. ದೇವಸೇವಕರು ಕೊಠಡಿಯ ಒಳಹೊಕ್ಕು, ಒಸ್ಸೈರಿಸನ ಆಭರಣಗಳೂ ಉಡುಪೂ ಇದ್ದ ಮರದ ಪೆಠಾರಿಗಳನ್ನು ಹೊರತಂದರು. ಒಸ್ಸೈರಿಸನ ಮೆದುಳು, ಶ್ವಾಸಕೋಶ, ಕರುಳು, ಇಷ್ಟನ್ನು ಇರಿಸಿದ್ದ ಜಾಡಿಗಳನ್ನು ಹೊರಗಿಟ್ಟರು. ಕೊನೆಯದಾಗಿ ಕೊಠಡಿಯಿಂದ ತಂದುದು ಮಂಚವನ್ನು. ಆ ಮಂಚದ ಮೇಲೆ ಮುಚ್ಚಳವಿಲ್ಲದ ಶವ ಪೆಟ್ಟಿಗೆ. ಪೆಟ್ಟಿಗೆಯಲ್ಲಿ ಒಸ್ಸೈರಿಸ್ ಮೂರ್ತಿ. ನಿಜ ಆಕಾರ.

ಮಂಚವೂ ಶವದ ಪೆಟ್ಟಿಗೆಯೂ ಕಣ್ಣಿಗೆ ಬಿದ್ದುದೇ ತಡ ಐಸಿಸ್ ಪಾತ್ರಧಾರಿಣಿ ಶೋಕಾರ್ತೆಯಾಗಿ ಕಿರುಚಿದಳು. ಪೆಟ್ಟಿಗೆಯ ಮೇಲೆ ಬೀಳಲು

ಧಾವಿಸಿದಳು. ಎದೆಗೆ ಹೊಡೆದುಕೊಂಡಳು. ಹಣೆಯನ್ನು ಮಂಚದ ಅಂಚಿಗೆ ಚಪ್ಪಿಸಿದಳು. ನೆಲದ ಮೇಲೆ ಬಿದ್ದು ಹೊರಳಾಡಿದಳು.

ದೇಗುಲದ ಮಹಾ ದ್ವಾರದ ಬಳಿ ಗಾಯಕರು ಶೋಕದ ಶ್ರುತಿ ಹಿಡಿದರು. ತಂತೀ ವಾದ್ಯಗಳನ್ನು ಮೀಟಿದರು.

ದೇವಸೇವಕಿಯ ಒಡನಿದ್ದ ಶೋಕಸ್ತ್ರೀಯರಲ್ಲದೆ ಕಟಾಂಜನದ ಆಚೆ ನೆರೆದಿದ್ದವರಿಂದಲೂ ಹಾಹಾಕಾರ ಹೊರಟಿತು.

ಪ್ರಲಾಪ ಕೇಳಿಸಿತು :

" ಓ ಒಸ್ಸೈರಿಸ್, ಓ ಒಸ್ಸೈರಿಸ್...."

ಮುಖ್ಯ ದೇವಸೇವಕನ ಹಿರಿತನದಲ್ಲಿ, ಒಸ್ಸೈರಿಸನ 'ಪಾರ್ಥಿವ ಶರೀರ' ದಿಂದ ಶವ ಪಟ್ಟಿಗಳನ್ನು ಬಿಚ್ಚಿದರು; ಸ್ನಾನ ಮಾಡಿಸಿದರು; ಸುಗಂಧ ದ್ರವ್ಯಗಳನ್ನು ಲೇಪಿಸಿದರು. ಹೊಸ ಬಟ್ಟೆಗಳನ್ನು ಸುತ್ತಿ ಮತ್ತೆ ಪೆಟ್ಟಿಗೆಯಲ್ಲಿಟ್ಟರು. ಅಪರಾಹ್ನ ನಡೆಯುವ ಅಂತಿಮ ಯಾತ್ರೆಗೆ ಮಂಚವನ್ನು ಅಣಿಗೊಳಿಸಿದರು.

ಮುಂದೆ ತುಸುಹೊತ್ತಿನಲ್ಲಿ, ಮೆಂಫಿಸಿನಿಂದ ಆಗಮಿಸಿದ ಪೆರೋ ಪರಿವಾರವೂ ಮಹಾ ಅರ್ಚಕನ ಬಳಗವೂ ದೇಗುಲ ತಲಪಿದುವು. ಮಂದಿರದ ಮಗ್ಗುಲಿನ ವಿಶ್ರಾಂತಿ ಕೊಠಡಿಗಳಲ್ಲಿ ಅವರು ಸ್ವಲ್ಪ ಹೊತ್ತು ತಂಗಿದರು.

....ಮುಲು ಮುಲು ಅಳುತ್ತ ಮಂಚದ ಕಾಲಿಗೊರಗಿ ಕುಳಿತ ಐಸಿಸ್, ರೋದನದ ಹಿಮ್ಮೇಳವನ್ನು ಮುಂದುವರಿಸಿದ ಶೋಕಸ್ತ್ರೀಯರು ; ದುಃಖಾಲಾಪದ ಶ್ರುತಿ ಹಿಡಿದ ಗಾಯಕರು; ಬಿಸಿಲಿನ ಪರಿವೆ ಇಲ್ಲದೆ ಕಟಕಟೆಗೆ ಆತು ನಿಂತ ಜನರು.

ಪವಿತ್ರ ಕೊಳದಲ್ಲಿ ಮಿಂದು, ಬರತೊಡಗಿದ ಮಹಾ ಅರ್ಚಕ ಹೇಪಾಟ್ ಮತ್ತು ಪೆರೋ ಪೇಪಿ....

ಮಂದಿರವನ್ನು ಅವರು ಸಮೀಪಿಸಿದಂತೆ ಪ್ರಲಾಪ ತೀವ್ರಗೊಂಡಿತು :

"ಓ ಒಸ್ಸೈರಿಸ್, ಓ ಒಸ್ಸೈರಿಸ್...."

ಗರ್ಭ ಗುಡಿಯ ದೇವತಾ ಮೂರ್ತಿಗೆ ಪ್ರಣಾಮ ಮಾಡಿ ಮಹಾ ಅರ್ಚಕ ಎದ್ದ. ಅದೇ ಆಗ ಮಹಾದ್ವಾರವನ್ನು ಹೊಕ್ಕ ಪೆರೋಗೆ ಉಚ್ಚ ಕಂಠದಲ್ಲಿ ಸ್ವಾಗತ ಬಯಸಿದ :

" ನಾವು ಹೆಮ್ಮೆ ಪಡುವಂಥ ದೇವರೂಪನೇ, ಪ್ರಶಂಸನೀಯ ಸಾರ್ವಭೌಮನೇ, ಎಲ್ಲ ಜನರ ಕುರುಬನೇ, ನಿನಗೆ ಸ್ವಾಗತ. ಓ ದೀರ್ಘಾಯು ದೊರೆಯೇ, ಸ್ವರ್ಣದೇವತೆ ಹಾಥೋರ್ ನಿನ್ನ ಮೂಗಿಗೆ ಬಲ ಕೊಡಲಿ !...."

ಪೆರೋ ಶಿರಸ್ಸನ್ನು ತುಸು ಆಡಿಸಿ, ಗರ್ಭಗುಡಿಯ ದೇವತಾಮೂರ್ತಿಗೆ ಸಾಷ್ಟಾಂಗ ನಮಿಸಿ, ಪ್ರಾರ್ಥಿಸಿದ :

" ದೇವಾ ! ನನಗೆ ಆರೋಗ್ಯ ಕೊಡು. ಆಯುಸ್ಸು ನೀಡು. ವೃದ್ಧಾಪ್ಯವಿರುವಂತೆ ಮಾಡು. ನನ್ನ ರಾಜ್ಯಭಾರ ದೀರ್ಘವಾಗಲಿ. ನನ್ನೆಲ್ಲ ಅವಯವಗಳಿಗೆ ಶಕ್ತಿ ದೊರೆಯಲಿ....ಮತ್ತು ನನಗೆ ಉಣ್ಣಲು ಕೊಡು, ಕುಡಿಯಲು ಕೊಡು...."

ಹೊರಗೆ ಪ್ರಲಾಪ ಮುಂದುವರಿಯಿತು.

" ಓ ಒಸ್ಸೈರಿಸ್, ಓ ಒಸ್ಸೈರಿಸ್...."

ಪೆರೋನೊಡನೆ ಮಹಾ ಅರ್ಚಕ ನುಡಿದ :

" ಕ್ರಿಯಾವಿಧಿಗಳು ಆರಂಭವಾಗಿವೆ. ಮಹಾಪ್ರಭು ಹೋಗಿ ವಿರಮಿಸಬಹುದು. ಬಿಸಿಲು ಬಾಡಿದೊಡನೆ ಯಾತ್ರೆ ಹೊರಡೋಣ."

ಪೆರೋ ಐಸಿಸ್ ಪಾತ್ರಧಾರಿಣಿಯ ಕಡೆಗೊಮ್ಮೆ ನೋಡಿದ; ಮಹಾ ಅರ್ಚಕನನ್ನು ದಿಟ್ಟಿಸಿದ. ಮಾತಿಲ್ಲದೆ ದೊಡ್ಡ ದ್ವಾರದತ್ತ ಅಲ್ಲಿ ಕಾಯುತ್ತಿದ್ದ ಅಂಗರಕ್ಷಕರತ್ತ ತೆರಳಿದ.

" ದಾರಿ ಬಿಡಿ ! ದೂರ ಸರೀರಿ !" ಅಬ್ಬರ ಕೇಳಿಸಿದಂತೆ, ಜನ ಅತ್ತಿತ್ತ ಚೆದರಿದರು, ನೆರಳಿಗೆ, ತಾವು ತಂದಿದ್ದ ಬುತ್ತಿ ಸೇವನೆಗೆ. ಇನ್ನು ಕಟಕಟೆಯ ಬಳಿ ನಿಲ್ಲುವ ಅಗತ್ಯವಿಲ್ಲ. ಮೆರವಣಿಗೆಯಲ್ಲಿ ಅವರು ಪಾಲ್ಗೊಳ್ಳಬೇಕು.

ಗರ್ಭಗುಡಿಯ ಬಾಗಿಲು ಹಾಕಿ ಮುದ್ರೆಯೊತ್ತುವಂತೆ ಮುಖ್ಯ ದೇವಸೇವಕನಿಗೆ ಸೂಚಿಸಿ, ಮಹಾ ಅರ್ಚಕ ತನ್ನ ವಿಶ್ರಾಂತಿ ಕೊಠಡಿಯತ್ತ ಸಾಗಿದ.

ಮೆರವಣಿಗೆ ಹೊರಡುವುದಕ್ಕೆ ಮುನ್ನ ಅವನು ಮತ್ತೊಮ್ಮೆ ಸ್ನಾನ ಮಾಡಬೇಕು.

ದಿಬ್ಬದ ಮೇಲಿನ ಅನುಭವಿ ಯಾತ್ರಿಕ ಮುಂದುವರಿದ :

"ಮಂದಿರದಿಂದ ಗೋರಿಗೆ ಕೂಗಳತೆ ದೂರ. ನಾಲ್ಕು ಮೊಳ ಅಗಲದ ಹಾಸುಗಲ್ಲು ಪಾರಿ. ಅದರ ಮೇಲೆ ಎಳೀಬೇಕು. ಆ ಕಡೆಯ ಈ ಕಡೆಯ ಜನಸಮ್ಮರ್ದವೊ....ನಾನು ಗಾಯಕನಾಗಿದ್ದರೆ ಬಣ್ಣಿಸ್ತಿದ್ದೆ. ನೋಡಿ ! ಬಂದು ನೀವೇ ನೋಡಿ !"

* * * *

ಹಲವು ಸಹಸ್ರ ಜನ ಸಾಗಿದ ಮೇಲೆ, ಹಾಸುಗಲ್ಲಿನ ಪಾರಿಯಲ್ಲಿ, ಬಗೆ ಬಗೆಯ ಭಕ್ಷ್ಯ ಭೋಜ್ಯ ತುಂಬಿದ್ದ ಜಾಡಿಗಳನ್ನು ಸೇವಕರು ಹೊತ್ತು ತಂದರು. ಇದು ಒಸ್ಸೆರಿಸನಿಗೆ. ಆ ಲೋಕದ ಬುತ್ತಿ (ಒಂದು ವರ್ಷಕ್ಕಾಗುವಷ್ಟು). ಅನಂತರ ಮರದ ಪೆಟಾರಿಗಳನ್ನು ಹೊತ್ತ ಸೇವಕರು. ಆ ಪೆಟಾರಿಗಳಲ್ಲಿ ಒಸ್ಸೆರಿಸನ ಆಭರಣಗಳು, ಉಡುಪುಗಳು. ಅವರ ಹಿಂದೆ, ಅಧಿಕಾರ ದಂಡ ಹಿಡಿದ ಮಹಾಅರ್ಚಕ. ಆತನ ಹಿಂದೆ, ಇಬ್ಬರು ಕಿರಿಯ ದೇವಸೇವಕರು ಎಳೆಯುತ್ತಿದ್ದ ಜಾರು ಬಂಡಿ. ಅದರಲ್ಲಿ ಒಸ್ಸೆರಿಸನ ಮಿದುಳು ಶ್ವಾಸಕೋಶ ಕರುಳು ಇರಿಸಿದ್ದ, ಮೇಲ್ಕಟ್ಟು ಕಟ್ಟಿದ, ಜಾಡಿಗಳು. ಆ ಜಾರು ಬಂಡಿಯ ಹಿಂದೆ ಇನ್ನೊಂದು ನೀಳವಾದ ಜಾರು ಬಂಡಿ. ಅದರಲ್ಲಿ, ಒಸ್ಸೆರಿಸನ ಶವಪೆಟ್ಟಿಗೆಯನ್ನು ಹೊತ್ತ ಮಂಚ. ಅದಕ್ಕೊಂದು ಮೇಲ್ಚಪ್ಪರ. ತಲೆಗೆ ಸಮೀಪದಲ್ಲಿ ಮಂಚದ ಮಗ್ಗುಲಲ್ಲಿ ಸಾಗಿದ್ದಳು ಐಸಿಸ್—ದುಃಖಿನಿ. ಆಕೆಗೆ ತಗಲಿಕೊಂಡು ಶೋಕ ಸ್ತ್ರೀಯರು. ಒಸ್ಸೆರಿಸನ ಪಾದದ ಬಳಿ, ಜಾರು ಬಂಡಿಯ ಪಕ್ಕದಲ್ಲಿ ಕಿರೀಟ ಧಾರಿ ಸರ್ವಾಲಂಕೃತ ಫೆರೋ. ಆತನಿಗೆ ಅಂಟಿಕೊಂಡು ಅಂಗರಕ್ಷಕರು. ಅವರ ಹಿಂದೆ ಭೂಮಾಲಿಕರು. ಕಿರಿಯ ದೇವಸೇವಕರು ಜಾರು ಬಂಡಿಯನ್ನು ಎಳೆಯುತ್ತಿದ್ದರು. ಅದನ್ನು ಹಿಂಬಾಲಿಸಿ ಬಂತು ಬರಿಯ ರಾಜ ಪಲ್ಲಕಿ. ಹೊತ್ತಿದ್ದವರು ದಾಸಜನ. ಬಳಿಕ ಅರಸನ ಯೋಧರು. ಅವರ ಹಿಂದೆ ಒತ್ತಿಕೊಂಡು ಬರುತ್ತಿದ್ದ ಗುಲ್ಲು ಗದ್ದಲದ ಜನಸಮುದಾಯ.

ಉದ್ದಕ್ಕೂ ಸಹಸ್ರಾರು ಕಂಠಗಳಿಂದ ಅಲೆಯಲೆಯಾಗಿ ಏಳುತ್ತಿತ್ತು ಪ್ರಲಾಪ.

"ಓ ಒಸ್ಸೆರಿಸ್, ಓ ಒಸ್ಸೆರಿಸ್...."

ಬಾಲ ಬಾಯಿ ಕಾಣಿಸದ ಹೆಬ್ಬಾವಿನಂತೆ ತೆವಳುತ್ತ ಸಾಗಿತು ಮೆರವಣಿಗೆ.

ದಿಬ್ಬದ ಬಳಿ ಬಂದಾಗ ಮೆನೆಪ್‌ಟಾನ ಸಂಗಡಿಗರೂ ಆಲಾಪನೆಯಲ್ಲಿ ಭಾಗಿಗಳಾದರು :

"ಓ ಒಸ್ಶೈರಿಸ್, ಓ ಒಸ್ಶೈರಿಸ್...."

ಜಾರು ಬಂಡಿ ಗೋರಿಯನ್ನು ತಲಪಿದಾಗ, ದಡ ಮುಟ್ಟಿದ ನಾವೆ ಯಾಯಿತು, ಮೆರವಣಿಗೆ. ಹೊಯ್ದಾಡಿತು.

ಗೋರಿಯ ಬಾಗಿಲಿಗೆ ಹಾಕಿದ ಆವೆ ಮಣ್ಣಿನ ಮುದ್ರೆಯನ್ನು ಮಹಾ ಅರ್ಚಕ ಹೊಡೆದ. ತೆರೆದ ಬಾಗಿಲು ಒಳಹೋಗಲು ದಾರಿ ಮಾಡಿಕೊಟ್ಟಿತು. ಮಹಾ ಅರ್ಚಕ ಮತ್ತು ಅವನನ್ನು ಹಿಂಬಾಲಿಸಿ ಪೆರೋ ಒಳಕ್ಕೆ ಹೆಜ್ಜೆ ಇಟ್ಟರು. ಜನರ ಒತ್ತಡವನ್ನು ತಡೆಯಲು ಗೋರಿಯ ಸುತ್ತಲೂ ರಾಜ ಭಟರು ವ್ಯೂಹ ರಚಿಸಿದರು.

ಜನರಿಗೆ ಅಂತ್ಯಕ್ರಿಯೆಗಳು ಕಾಣಿಸದಂತಹ ಪರಿಸ್ಥಿತಿ.

* * * *

ದಿಬ್ಬದ ಮೇಲಿನ ಅನುಭವಿ ಯಾತ್ರಿಕ ಆ ಬಗೆಗೂ ಅರಿತಿದ್ದ :

"ಅಲ್ಲಿ ಏನಾಗ್ತದೇಂತ ನನಗೆ ಗೊತ್ತಪ್ಪ. ಹೋದ ಸಲ ಒಬ್ಬ ದೇವ ಸೇವಕನನ್ನು ಕೇಳಿ ಎಲ್ಲಾ ತಿಳ್ಕೊಂಡೆ. ಗೋರಿಯ ಒಳಗೆ ಭಾರಿ ನೆಲ ಮಾಳಿಗೆ. ಮೂರು ಅಂಕಣ. ಕಲ್ಲಿನ ಕಟ್ಟಡ. ಒಂದು ಅಂಕಣವನ್ನು ಗಾರೆ ಹಾಕಿ ಪೂರ್ತಿ ಮುಚ್ಚಿಬಿಟ್ಟಿದ್ದಾರೆ. ಒಸ್ಶೈರಿಸನ ನಿಜವಾದ ರಕ್ಷಿತ ಶವ ಇರೋ ಪೆಟ್ಟಿಗೆ ಅದರಲ್ಲಿದೆ. ನಿಜವಾದ್ದು ಅಂದರೆ ತಲೆ ಮಾತ್ರ ಅನ್ನಿ. ಮೆದುಳು ಶ್ವಾಸಕೋಶ ಕರುಳೂ ಅಲ್ಲಿವೆಯಂತೆ. ಹಾಗಾದರೆ ಮೆರವಣಿಗೆ ಯಲ್ಲಿ ತಗೊಂಡು ಹೋದ್ದು ಯಾವ ಮೆದುಳು—ಶ್ವಾಸಕೋಶ? ಅಲ್ದೆ, ದೇಹ ಹೋಳು ಹೋಳಾಗಿತ್ತು ಅಂದ್ಮೇಲೆ ಶ್ವಾಸಕೋಶ—ಕರುಳು ಸಿಗ್ತೋ ಇಲ್ವೋ? ಏನೇ ಇರಲಿ—ಶವಪೆಟ್ಟಿಗೇಲಿ ಬಂಗಾರ ಗಿಂಗಾರ ಇರೋ ಹಾಗೆ ಕಾಣೆ. ಇದ್ದಿದ್ರೆ ಗೊತ್ತಿಲ್ಲ....ಸಿಂಹಾಸನದ ಪ್ರತಿರೂಪ ಇತ್ಯಾದಿ ಮಾಡಿ ಇನ್ನೊಂದು ಅಂಕಣದಲ್ಲಿ ಇಟ್ಟಿದ್ದಾರೆ. ಎಲ್ಲಾ ಮರದ್ದೇ ಅಂತೆ. ಹೊರದ್ವಾರದ ಹತ್ತಿರದ ಅಂಕಣ ಖಾಲಿ. ಅದರಲ್ಲೇ ಧೂಪಗೀಪ ಹಚ್ಚಿ, ಮೆರವಣಿಗೆಯಲ್ಲಿ ತಗೊಂಡು ಹೋದ ಮಂಚ—ಶವಪೆಟ್ಟಿಗೆ—ಪೆಟಾರಿಗಳನ್ನು ಇಟ್ಟು ಪ್ರಾರ್ಥಿಸ್ತಾರೆ. ಐಸಿಸ್ ಕಟ್ಟ ಕಡೇದಾಗಿ ಅಳ್ತಾಳೆ—ಗಂಡನನ್ನು ಮಣ್ಣು ಮಾಡೋದಕ್ಕೆ ಮುಂಚೆ ಹೆಂಡತಿ ಅಳೋದಿಲ್ವಾ?—ಹಾಗೆ. ಶವ ಪೆಟ್ಟಿಗೇನ ಅಂಕಣದೊಳಕ್ಕೆ ಇಳಿಸುವಾಗ ಮಹಾಅರ್ಚಕ "ಶಾಂತಿ! ಶಾಂತಿ! ಮಹಾದೇವನೆಡೆಗೆ!" ಅನ್ತಾರೆ. ಎಲ್ಲರೂ ಹೊರಗೆ ಬರ್ತಾರೆ. ಬಾಗಿಲೆಳೆದು

ಕೊಂಡು ಮುಖ್ಯ ದೇವಸೇವಕ ಆವೆಮಣ್ಣಿನ ಮುದ್ರೆ ಒತ್ತುತ್ತಾನೆ. ನಾಳೆಯೇ ಆ ಅಂಕಣದಲ್ಲಿರೋ ಸಾಮಾನುಗಳೆಲ್ಲ ಮಂದಿರಕ್ಕೆ ವಾಪಸು. ದೇವಸೇವಕನೂ ಸಾಮಾನ್ಯ ಸೇವಕರೂ ಒಟ್ಟಿಗೆ ದರದರ ಎಳಕೊಂಡು ಹೋಗ್ತಾರೆ. ಅದನ್ನೆಲ್ಲ ನೋಡೋದಕ್ಕೆ ಇರೋದು ಈ ಊರಿನ ಸೋಮಾರಿಗಳು ಮಾತ್ರ....ನಾಳೆ ಯಿಂದ ಹೊರಗಿನ ಬಾಗಿಲಿಗೆ ಮುದ್ರೆ ಒತ್ತೋದು, ಮುಂದಿನ ವರ್ಷ ಉತ್ಸವದ ಹಿಂದಿನ ದಿವಸ. ಅಷ್ಟರವರೆಗೆ ಹೊರ ಅಂಕಣದಲ್ಲಿ ಪೋಲಿ ಹುಡು ಗರು ಬಚಿಟ್ಕೊಳ್ಳೋ ಆಟ ಆಡ್ತಾರೆ. ಕಳ್ಳಕಾಕರು ರಾತ್ರಿ ಒಮ್ಮೊಮ್ಮೆ ಆಶ್ರಯ ಪಡೀತಾರೆ. ಇನ್ನೂ ಒಮ್ಮೊಮ್ಮೆ ಹೆತ್ತವರ ಮಾತು ಕೇಳದ ಹುಡುಗ ಹುಡುಗೀರು....ಗೊತ್ತಿಲ್ಲ ನಿಮಗೆ ?.... ಮುಚ್ಚುಂಜೆ ಆಗೇ ಬಿಡ್ತು....ನಾನು ಪಾಪಿ. ಏನೇನೋ ಹೇಳ್ತಿದ್ದೇನೆ. ಒಸೈರಿಸ್ ಕ್ಷಮಿಸ್ಲಿ, ರಾ ಕ್ಷಮಿಸ್ಲಿ ನೋಡಿ ! ಪೆರೋ—"

* * * *

ಪೆರೋ ಗೋರಿಯ ಪಾವಟಿಗೆಗಳನ್ನು ಹತ್ತಿ ಶಿರಭಾಗದಲ್ಲಿದ್ದ ಸಮ ತಟ್ಟು ಸ್ಥಳದ ಮೇಲೆ ನಿಂತ. ಅವನ ಹಿಂದೆಯೇ ಮಹಾ ಅರ್ಚಕನೂ ಏರಿ ಬಂದ.

ಪಶ್ಚಿಮದ ಮರಳುಗಾಡಿನಾಚೆಗೆ ಸೂರ್ಯ ಮುಳುಗತೊಡಗಿದ. ಕಿರಣ ಗಳು ನೇರ ಗೆರೆಗಳಾಗಿ, ಭೂಮಿಯ ಮೇಲೆ ಬಂಗಾರದ ಬಣ್ಣ ಚೆಲ್ಲಿದುವು.

ಪೆರೋ ಪೇಪಿ ನೆಟ್ಟಗೆ ನಿಂತು, ತೋಳುಗಳನ್ನು ಸೂರ್ಯನೆಡೆಗೆ ಚಾಚಿ "ರಾ ರಾ ರಾ ...." ಎಂದ.

ಮಹಾ ಅರ್ಚಕ ಹೇಪಾಟ್ ತಾನೂ ಹಾಗೆಯೇ ಮಾಡಿದ.

ಇದ್ದಕ್ಕಿದ್ದಂತೆ ಸೂರ್ಯ ಮುಳುಗಿದ. ಕತ್ತಲು ಮೆಲ್ಲ ಮೆಲ್ಲನೆ ಹೆಜ್ಜೆ ಇಡುತ್ತ ಬಂದು, ಕೆಲವೇ ಕ್ಷಣಗಳಲ್ಲಿ ಅಬ್ಟುವನ್ನು ಆವರಿಸಿ ದಟ್ಟ ವಾಯಿತು.

ನದೀ ತಟದಿಂದ ಗುಡ್ಡದವರೆಗಿನ ದಾರಿಯುದ್ದಕ್ಕೂ ನಿಗಿನಿಗಿ ಕೆಂಡ ವನ್ನು ರಾಚಿದಂತೆ ಪಂಜು ಬೆಳಕಿನ ಚುಕ್ಕೆಗಳು ಕಾಣಿಸಿಕೊಂಡವು. ಪೆಪೈರಸ್ ದಂಟನ್ನು ಜಜ್ಜಿ ಒಣಗಿಸಿ ನಾರಗಸೆ ಎಣ್ಣೆಯಲ್ಲಿ ಅದ್ದಿ ಉರಿಸುತ್ತಿದ್ದ ದೀವಟಿಗೆ. ಗೋರಿಯ ಬಳಿಯಲ್ಲಂತೂ ಸಹಸ್ರಾರು ಪಂಜುಗಳು ಉರಿಯತೊಡಗಿದುವು.

ದೇಗುಲದ ಬಳಿಯಲ್ಲೂ ಅಂಥದೇ ಬೆಳಗು.

"ದಾರಿ ಬಿಡಿ! ಎಲ್ಲರೂ ಪಕ್ಕಕ್ಕೆ ಸರೀರಿ! ಪೆರೋ ರಾಜಧಾನಿಗೆ ಪ್ರವಾಸ ಹೊರಡ್ತಾರೆ!"

(ಪಂಜುಗಳ ಬೆಳಕಿನಲ್ಲಿ ಜಾಜ್ವಲ್ಯಮಾನವಾಗಿ ಕಾಣಿಸುತ್ತಿದ್ದುವು–ರಾಜ ನಾವೆ ಮತ್ತು ನೀಲ ನದಿಯ ದೋಣಿಕಟ್ಟೆ.)

ಮೆರವಣಿಗೆಯಲ್ಲಿ ಪೆರೋ ನಿರ್ಗಮನ. ಪಂಜುಗಳನ್ನು ಹಿಡಿದ ಕರಿಯ ಭಟರು, ತುತೂರಿಯವರು, ಗದಾಧಾರಿಗಳಾದ ನೂರು ಜನ ಅಂಗರಕ್ಷಕರು (ಅವರ ಕೈಗಳಲ್ಲೂ ಅಲ್ಲಿ ಇಲ್ಲಿ ಪಂಜು) ಮಗ್ಗುಲಲ್ಲಿ ಆ ದಳದ ನಾಯಕ, ಬಳಿಕ ಅರಸನ ಪಲ್ಲಕಿ. ಪಲ್ಲಕಿಯಲ್ಲಿ ಪೆರೋ, ಹೊತ್ತಿದ್ದ ಕೃಪಾಪಾತ್ರ ಭೂಮಾಲಿಕರ ಆಢ್ಯರು, ಆ ಕಡೆ ಈ ಕಡೆ ಚಾಮರ ಸೇವೆಯವರು—ಪಂಜಿನವರು, ಮತ್ತೆ ನೂರು ಜನ ಕಾವಲು ಭಟರು—ಪಕ್ಕದಲ್ಲಿ ಅವರ ಮುಖ್ಯಸ್ಥ. ಬಳಿಕ ಕತ್ತಲಲ್ಲಿ, ಜೀವಂತ ದೇವರಾಜ ಪೆರೋನ ಮೆರವಣಿಗೆಯನ್ನು ಹಿಂಬಾಲಿಸುತ್ತಿದ್ದ ಪ್ರಜಾಸ್ತೋಮ.

ಮಹಾ ಅರ್ಚಕ ಹೇಪಾಟ್ ಪಂಜು ಬೆಳಕಿನಲ್ಲಿ ತನ್ನ ಪರಿವಾರದೊಡನೆ ದೇವ ಮಂದಿರಕ್ಕೆ ಹೊರಟ.

ಮೆನೆಪ್‌ಟಾನೂ ಸಹ ಯಾತ್ರಿಕರೂ ಬೆಳಕಿಲ್ಲದ ಸನ್ನಿವೇಶದಲ್ಲಿ ಗುಂಪು ಚೆದರಿ ಹೋಗದಂತೆ ಎಚ್ಚರ ವಹಿಸುತ್ತ ದಿಬ್ಬ ಇಳಿದರು.

ಮಂದಿರದಲ್ಲಿ ದೀಪಗಳು ಉರಿಯುತ್ತಿದ್ದುವು. ಐಸಿಸ್ ತನ್ನ ವಸತಿಗೆ ತೆರಳುವುದಕ್ಕೆ ಮುನ್ನ ಗರ್ಭಗುಡಿಯ ಮುಂದೆ ನಿಂತು ಬಾಗಿಲ ಹಿಂದಿದ್ದ ದೇವತಾಮೂರ್ತಿಗೆ ನಮಿಸಬೇಕು.

ಅವಳು ಸಾಷ್ಟಾಂಗ ಪ್ರಣಾಮ ಮಾಡಿ, ಏಳದೇ ಆ ಭಂಗಿಯಲ್ಲೇ ಇದ್ದಳು, ಕಾಯುತ್ತ. ಟಪ್ ಟಪ್ ಹಾವುಗೆಗಳ ಸದ್ದು, ಹತ್ತಿರ ಬಂದು ಅದು ಸ್ತಬ್ಧವಾಯಿತು.

ಹೇಪಾಟನ ಧ್ವನಿ:

"ಏಳು. ಅಭಿನಯ ಅದ್ಭುತವಾಗಿತ್ತು."

ಹಿಂದೆಯೂ ಕೇಳಿದ್ದ ಪ್ರಶಂಸೆ. ಹೆಚ್ಚಿನ ಮೆಚ್ಚುಗೆಗೆ ಪೀಠಿಕೆ.

ದೇವಸೇವಕಿ ಏಳುತ್ತಿದ್ದಂತೆ ಹೇಪಾಟನ ಗರ್ಜನೆ ಕೇಳಿ ಬಂತು:

" ಮೂರ್ಖ ! ನಾಯಿಯ ಹಾಗೆ ನನ್ನ ಹಿಂದೆಯೇ ಬರಬೇಡ ಅಂತ ಎಷ್ಟು ಸರ್ತಿ ಹೇಳ್ಬೇಕು ನಿನಗೆ ? ತೊಲಗಾಚೆ ! ನಿನ್ನ ಮುಸುಡು ತೋರಿಸ್ಬೇಡ ! ರಾಜಧಾನಿಗೆ ಹೋದ್ಮೇಲೆ ನಿನ್ನ ವಿಚಾರಣೆ ನಡೆಸ್ತೇನೆ !"

ದೇವಸೇವಕಿ ಎದ್ದು ನಿಂತು, ಹೆರಳನ್ನು ಹಿಂದಕ್ಕೆ ತಳ್ಳಿ, ಹೇಪಾಟನ ಕ್ರೋಧಕ್ಕೆ ತುತ್ತಾದವನನ್ನು ನೋಡಿದಳು. ಸ್ಫುರದ್ರೂಪಿ ಯುವಕ ದೇವ ಸೇವಕ. ಅವ್ಯಕ್ತ ಸಂಕಟ ಆವರಿಸಿದ್ದ ಮುಖ. ತಲೆಯೇನೋ ಬಾಗಿತ್ತು. ಆದರೆ ಹೆದರಿರಲಿಲ್ಲ. ಆತ ಹೊರಟ. ನಡಿಗೆ ದೃಢವಾಗಿತ್ತು.

ದೇವಸೇವಕ ಹೋದೊಡನೆಯೇ ಮಹಾಅರ್ಚಕನ ಮಾತು ದ್ರವಿಸಿತು :

" ದಿನವೆಲ್ಲ ಉಪವಾಸವಿದ್ದೆ—ಅಲ್ಲವಾ ? ಹೋಗು ಮಗು. ಊಟ ಮಾಡಿ ಸನ್ನಿಧಿಗೆ ಬಾ."

ಅಷ್ಟು ಹೇಳಿ ಹೇಪಾಟ್ ಟಪಟಪನೆ ನಡೆದು ಹೊರಹೋದ.

*   *   *   *

ಬಳಲಿಕೆಯ ಯಾವ ಕುರುಹನ್ನೂ ಉಳಿಸದ ಉಲ್ಲಾಸ. ಅಬ್ಟುವಿನಲ್ಲಿ ನೆರೆದಿದ್ದ ಐಗುಪ್ತದ ಎಲ್ಲ ಭಾಗಗಳ ಜನರಿಗೆ ಅದೊಂದು ಎಂದೂ ಮರೆಯ ಲಾಗದ ಮಹಾ ಅನುಭವ. ಧರ್ಮಾತ್ಮ ದೊರೆಯ ಅಂತಿಮ ಯಾತ್ರೆಯಲ್ಲಿ ಅವರು ಪಾಲ್ಗೊಂಡಿದ್ದರು, ಸಾಧ್ವೀಮಣಿ ಐಸಿಸಳನ್ನು ಕಂಡಿದ್ದರು ; ಸರ್ವ ಶಕ್ತನಾದ ಪೆರೋನನ್ನೂ ಇಡೀ ದೇಶದ ಸರ್ವೋಚ್ಚ ಧರ್ಮಾಧಿಕಾರಿಯನ್ನೂ ನೋಡಿದ್ದರು. ಮಹಾಜಾತ್ರೆಯಲ್ಲಿ ಭಾಗವಹಿಸಿ ಪುಣ್ಯಭಾಜನರಾಗಿದ್ದರು.

ಮುಂದಿನವರು ಹೇಳಬಹುದು :

" ನಮ್ಮ ತಾತ ಅಬ್ಟುವಿಗೆ ಹೋಗಿದ್ದ."

....ತಂದೆಯ ಹೆಗಲನ್ನೇರಿದ, ರಾಮೆರಿಪ್‌ಟಾ. ಅವನಿಗೆ ತೂಕಡಿಕೆ.

" ದೋಣಿಯಲ್ಲಿ ತುಸು ಉಂಡು ಆಮೇಲೆ ನಿದ್ದೆ ಮಾಡುವಿಯಂತೆ," ಎಂದಳು ತಾಯಿ.

ನೆಫಿಸ್ ಮೆನೆಪ್‌ಟಾರಿಗೆ ಕುಡಿದ ಖಿವನದಿಂದ ಮತ್ತೇರಿರಲಿಲ್ಲ. ಆದರೆ, ಜಾತ್ರೆಯ ಸಮೂಹ ಅನುಭವ ಅವರ ಪಾಲಿಗೂ ಮಾದಕವಾಗಿತ್ತು. ಆ

ಗುಂಗಿನಲ್ಲಿ ಅವರು ನಡೆದರು. ಬಹಳ ಮಟ್ಟಿಗೆ ಮಾತೇ ಇಲ್ಲದ ನಡಿಗೆ, ಅವರದು, ಅವರ ಗುಂಪಿನದು, ಉಳಿದೆಲ್ಲರದು.

ರಸ್ತೆಯ ಬದಿಗಳಲ್ಲಿ ಎಷ್ಟೋ ಅಂಗಡಿಗಳಿದ್ದ ಜಾಗ ಬರಿದಾಗಿತ್ತು. ಕತ್ತಲಾದುದಕ್ಕೆ ಮುಂಚೆಯೇ ಅವರು ಗೂಡಾರ ಕಿತ್ತಿರಬೇಕು. ಕೆಲವರಷ್ಟೆ ಪಂಜು ಉರಿಸಿ, ಕೊನೆಯ ವ್ಯಾಪಾರಕ್ಕೆ ಗಿರಾಕಿಗಳು ಬರಬಹುದೇನೋ ಎಂದು ಕಾದಿದ್ದರು.

ಅಲ್ಲಿ ಇಲ್ಲಿ ಒಡೆದ ಗಂಟಲಿನ, ಕುಗ್ಗಿ ಹೋದ ಧ್ವನಿಗಳು ಗ್ರಾಹಕರನ್ನು ಕರೆಯುತ್ತಿದ್ದುವು.

ತಾಯತ ಮಾರುತ್ತಿದ್ದ ದೇವಸೇವಕ ಕೂಗುತ್ತಿದ್ದ :

"ತಾಯತ ತಗೊಂಡ್ಹೋಗಿ ! ಕೊನೇ ಅವಕಾಶ !"

ಲಿಪಿ ಸುರುಳಿ ಕೊಂಡ ಸ್ಥಳ ಹತ್ತಿರ ಬಂತೆಂದು ಮೆನೆಪ್‌ಟಾ ಲಕ್ಷ್ಯ ಪೂರ್ವಕವಾಗಿ ನೋಡಿದ. ಅಲ್ಲಿ ಪಂಜು ಇರಲಿಲ್ಲ ; ಲಿಪಿಕಾರನೂ ಇರಲಿಲ್ಲ.

* * * *

ದೋಣಿಕಟ್ಟೆಯ ಬಳಿ ಗದ್ದಲವೋ ಗದ್ದಲ. ರಾಜಭಟರ ಅಬ್ಬರವಿರಲಿಲ್ಲ. ("ರಾಜನಾವೆ ಹೊರಟ್ಹೋದ್ಮೇಲೆ ಅವರಿಗೇನು ಕೆಲಸ ? ಎದ್ದೇ ಬಿಟ್ಟಿದ್ದಾರೆ ಪುಣ್ಯಾತ್ಮರು !") ಹಲವಾರು ದೋಣಿಗಳು ಕಟ್ಟೆಗೆ ಬಂದು ತಮ್ಮವರನ್ನು ಒಯ್ಯಲು ಯತ್ನಿಸುತ್ತಿದ್ದುವು. ದೋಣಿಕಟ್ಟೆಯ ಒಬ್ಬನೇ ಒಬ್ಬ ವೃದ್ಧ ನೌಕರ ಅಸ್ಪಷ್ಟ ಪದಗಳನ್ನು ಗೊಣಗುತ್ತ, ಮಂದವಾಗುತ್ತಿದ್ದ ಪಂಜುಗಳನ್ನು ಎಣ್ಣೆಯಿಂದ ತೋಯಿಸುತ್ತಿದ್ದ.

ಯಾರೋ ಅಂದರು :

"ನೀನೂ ಹೋಗಿ ಮಲಕ್ಕೋ ತಾತ...."

"ಮಲಕ್ಕೋತೇನೆ ! ಕತ್ತಲೇಲಿ ದೋಣಿಗಳು ಢಿಕ್ಕಿ ಹೊಡೆದು ಮುಳುಗಿದ್ರೆ ನನ್ನ ತಲೆ ತೆಗೀತಾರೆ ನಾಳೆ ! ಅಷ್ಟು ಅವಸರಾಂತಾದ್ರೆ ನೀನು ಮಲಕ್ಕೋ ! ಆದರೆ ಎಲ್ಲಿ ? ಯಾರ ಜತೆ ?...."

....ನೀರಾನೆ ಪ್ರಾಂತದ ನಾಲ್ವರು ಯಾತ್ರಿಕರು ಅಂಬಿಗ ಬಟಾ ಹೇಳಿದ್ದ ಕಡೆಗೆ ಕಟ್ಟೆ ಉದ್ದಕ್ಕೂ ನಡೆದು ಹೋದರು. ಸಹಸ್ರ ತೆಪ್ಪಗಳು, ಚಿಕ್ಕಪುಟ್ಟ ದೋಣಿಗಳು ಮಣ್ಣಿನ ಬುಡ್ಡಿಗಳ ರಕ್ಷಿತ ಎಣ್ಣೆ ದೀಪಗಳನ್ನು ತೇಲಿ

ಬಿಟ್ಟಂತಿತ್ತು. ತಣ್ಣನೆ ಗಾಳಿ ಬೀಸುತ್ತಿತ್ತು, ಹದವಾಗಿ. ಅಂಬಿಗರ ಎಚ್ಚರಿಸುವ ಶಪಿಸುವ ಬಿರುನುಡಿಗಳು ಅಲೆಗಳಾಗಿ ಹರಡುತ್ತಿದ್ದುವು

ಚುಕ್ಕಾಣಿಯ ಬಳಿ ಬಟಾ ಬುಡ್ಡಿ ದೀಪವಿರಿಸಿ, ತಾನು ಅವರೆದುರು ನೆಟ್ಟಗೆ ನಿಂತಿದ್ದ, ಪೆರೋ ಭಂಗಿಯಲ್ಲಿ.

ಸಮೀಪಿಸುತ್ತಿದ್ದಂತೆ ಮೆನೆಪ್‌ಟಾ ಅವನ ಗುರುತು ಹಿಡಿದ.

" ನಮ್ಮ ದೋಣಿ ಇಲ್ಲಿದೆ ! " ಎಂದು ಗುಂಪಿನವರಿಗೆ ಕೂಗಿ ನುಡಿದ.

ಬಟಾ ಕಣ್ಣಿಗೆ ಬಿದ್ದನೆಂದು ಎಲ್ಲರಿಗೂ ಸಂಭ್ರಮ.

ಮೆನೆಪ್‌ಟಾ ಹೇಳಿದ :

" ತುತ್ತು ಊಟ ಇಲ್ಲೇ ಮುಗಿಸಿ ದೋಣಿ ಹತ್ತೋದು ಮೇಲು."

" ಹೌದು, ಹೌದು," ಎಂದರು ಹಲವರು.

ಒಬ್ಬ ಕರೆದ :

" ಬಟಾ ನೀವೆಲ್ಲ ದಂಡೆಗೆ ಬಂದ್ಬಿಡಿ. ನಮ್ಮ ಜತೆ ಉಣ್ಬೇಕು. ಇವತ್ತು ನಾವೆಲ್ರೂ ಬುತ್ತಿ ಹಂಚ್ಕೊಂಡ್ಬಿಟ್ವಿ "

ಇನ್ನೊಬ್ಬನೆಂದ :

" ಚೀಲದಲ್ಲಿ ಸ್ವಲ್ಪ ಖಿವವ ಇನ್ನೂ ಇದೆ. ಬಟಾ ಅಣ್ಣ ನೀನು ರುಚಿ ನೋಡೇ ಇಲ್ವಲ್ಲ...."

ಬಟಾನೂ ಅವನ ಸಹಾಯಕರೂ ದಂಡೆಗೆ ಜಿಗಿದರು.

" ಮೆರವಣಿಗೆ ಧೂಳು ತಿಂದು ತಿಂದು ಗಂಟಲು ಮುಚ್ಕೊಂಡಿದೆ. ಮೊದಲು ಖಿವವ ಕೊಡಿ," ಎಂದ ಬಟಾ.

" ಮೆರವಣಿಗೇಲಿ ? ನೀನು ?" ಎಂದ ಒಬ್ಬ.

" ನನ್ನವರೆಲ್ಲ ಮಧ್ಯಾಹ್ನ ಸಂತೆ ಸುತ್ಕೊಂಡು ಬಂದ್ರು. ನಾನು ಮೆರವಣಿಗೆ ನೋಡಿ ಅದು ಗೋರಿ ತಲಪಿದ್ಮೇಲ್ಲೆ ಹೊರಟ್ಬಂದೆ...."

" ಭಪ್ಪರೆ ! ನಮ್ಮನ್ನು ನೋಡ್ದಾ ?"

" ನನಗೆ ನಾನೇ ಕಾಣಿಸ್ತಿರ್ಲಿಲ್ಲ ! ನಿಮ್ಮನ್ನು ಹ್ಯಾಗೆ ಹುಡುಕ್ಲಿ ?"

ಸಣ್ಣಗೆ ನಕ್ಕು ಮೆನೆಪ್‌ಟಾ ಅಂದ :

" ಏನೇ ಇರ್ಲಿ. ಅಂತಿಮ ಯಾತ್ರೆ ನೋಡಿದ್ಯಲ್ಲ. ನಮಗದೇ ಸಮಾಧಾನ...."

* * * *

ಸ್ವಲ್ಪ ಹೊತ್ತಾದ ಮೇಲೆ ದೋಣಿ ಹೊರಟಿತು. ಈಗ ಅನುಕೂಲ ಪವನವಿಲ್ಲ. ಆದರೆ ಮರುಪ್ರಯಾಣ ನದಿ ಹರಿಯುವ ದಿಕ್ಕಿನಲ್ಲಿ. ಸುಲಭ.

ಅಬ್ಬುವಿನ ಧಕ್ಕೆಯಿಂದ ತೇಲಿಬರುತ್ತಿದ್ದ ಸದ್ದು ಕ್ರಮೇಣ ಕಡಿಮೆ ಯಾಗಿ, ನಿಂತು ಹೋಯಿತು.

ಕುಳಿತ ಹಾಗೆಯೇ ತೂಕಡಿಸಿದರು ಹಲವರು.

ತಾಯಿಯ ತೊಡೆಯ ಮೇಲೆ ತಲೆ ಇರಿಸಿ ರಾಮೆರಿಪ್‌ಟಾ ಮುದುಡಿ ಕೊಂಡು ನಿದ್ದೆ ಹೋದ. ನೆಫಿಸ್ ಗಂಡನ ಭುಜದಮೇಲೆ ತಲೆ ಇಟ್ಟು ಕುಳಿತಲ್ಲೇ ನಿದ್ರಿಸಿದಳು.

ದೋಣಿಯ ಮೈಗೆ ಒರಗಿ ಕುಳಿತಿದ್ದ ಮೆನೆಪ್‌ಟಾಗೂ ನಿದ್ದೆ ಬಂತು....

ಆ ನಿದ್ದೆಯಲ್ಲೊಂದು ಕನಸು.

ಬಿಳಿಯ ಮೋಡಗಳ ಮೇಲೆ ತಾನು ಮಲಗಿದ್ದ.

ಜೋಗುಳ ನುಡಿಯ ಆಲಾಪನೆ ಸ್ತ್ರೀ ಕಂಠದಿಂದ ಕೇಳಿ ಬರುತ್ತಿತ್ತು :

" ಓ ಒಸ್ಸೆರಿಸ್....ಓ ಒಸ್ಸೆರಿಸ್...."

೨

ಆ ಊರು ನೀರಾನೆ ಪ್ರಾಂತದ ಕೇಂದ್ರ. ಅಲ್ಲಿನ ದೋಣಿ ಕಟ್ಟೆಯನ್ನು ಬಟಾ ತಲುಪಿದಾಗ ಮುಚ್ಚಂಜೆಯಾಗಿತ್ತು. ಅಬ್ಬುವಿನಿಂದ ಮರಳಿ ಬಂದ ಯಾತ್ರಿಕರು ಮೊದಲು ಕಂಡುದು ಕಂದಾಯ ಅಧಿಕಾರಿಯ ನಾವೆಯನ್ನು, ದೊಡ್ಡದು. ಸುಭದ್ರ. ಮೇಲಿನ ಅಂಚಿನುದ್ದಕ್ಕೂ ಮರವನ್ನು ಕೊರೆದು ರಚಿಸಿದ ಚಿತ್ತಾರಗಳು. ಅದು ಪೆರೋನ ಸಾಹಸ ಕಾರ್ಯಗಳನ್ನು ಬಣ್ಣಿಸುವ ಚಿತ್ರ ಮಾಲಿಕೆ. ಕಟ್ಟೆಗೆ ಕಟ್ಟಿದ್ದ ದೋಣಿಯಲ್ಲಿ, ಹುಟ್ಟು ಹಾಕುವ ಇಬ್ಬರು ಚೌಕ ಮಣೆ ಆಟ ಆಡುತ್ತ ಕುಳಿತಿದ್ದರು. ಅವರ ಸುತ್ತಲೂ ಕೆಲವರು ನಿಂತಿದ್ದರು, ಆಟ ನೋಡುತ್ತ, ಆಡುವವರನ್ನು ಹುರಿದುಂಬಿಸುತ್ತ. ಎಲ್ಲರೂ ಆ ನಾವೆಯ ಉದ್ಯೋಗಿಗಳು.

ಬಟಾ ತನ್ನವರೆಡೆಗೆ ತಿರುಗಿ " ಬಂದಿದಾರಪೋ " ಎಂದ.

ಅಧಿಕಾರಿಯ ದೋಣಿಯಲ್ಲಿ ಆಟವಾಡುತ್ತಿದ್ದವರನ್ನುದ್ದೇಶಿಸಿ, "ಯಾವಾಗ ಬಂದ್ರಿ ಅಣ್ಣ ?" ಎಂದು ಕೇಳಿದ.

"ಮಧ್ಯಾಹ್ನ," ಎಂದನೊಬ್ಬ ಆ ದೋಣಿಯಿಂದ.

"ದಾರೀಲಿ ಫೆರೋ ಮಹಾಪ್ರಭುಗಳ ನಾವೆ ಸಿಗ್ತಾ ?"

"ಓ! ನಾವು ಕಟ್ಟೆ ಸಮೀಪಿಸ್ತಿದ್ದ ಹಾಗೇ ಕೆಳಗಡೆಗೆ ಹೊರಟ್ಹೋಯ್ತು."

ಅವನ ಮಗ್ಗುಲಿಂದ ಒಂದು ಧ್ವನಿ ಕೇಳಿಸಿತು :

"ಯಾತ್ರೆ ಮುಗಿಸಿ ಬಂದಿರಾ ?"

"ಹ್ದೌ ಅಣ್ಣ."

"ಸರಿ. ಮನೆಗ್ಹೋಗಿ ಗೋಧಿ, ಯವೆ ಅಳೆದು ತಯಾರ್ಮಾಡಿ. ನಾಳೆ ವಸೂಲಿ !"

ಬಟಾನ ದೋಣಿಯಲ್ಲಿದ್ದವರು ಮೌನವಾಗಿ ದಂಡೆಗೆ ಇಳಿದರು. ಮೆನೆಪ್‌ಟಾನ ಮುಖ ಗಂಭೀರವಾಯಿತು.

ಯಾತ್ರೆ ಸುಖಾಂತವಾಯಿತೆಂದು ಖ್ನೆಮು ದೇವನನ್ನು ಬಟಾನೂ ಅವನ ಕೆಲಸಗಾರರೂ ಮನಸ್ಸಿನಲ್ಲೆ ವಂದಿಸಿದರು. ದೋಣಿಯನ್ನು ದಂಡೆಗೆ ಎಳೆಯಲು ಹೇಳಿ ಬಟಾ ತಾನೂ ಹೊರಟ. ಬರಿಗೈಯಲ್ಲಿ ಮನೆಗೆ ಬಂದರೂ ಸಂಭ್ರಮದ ಸ್ವಾಗತ ಅವನಿಗೆ ಅಲ್ಲಿ ದೊರೆಯುತ್ತಿತ್ತು—ಮಡದಿ, ಮಕ್ಕಳಿಂದ.

ದೋಣಿಕಟ್ಟೆಯಿಂದ ಕೂಗಳತೆಯ ದೂರದಲ್ಲಿ, ತುಸು ಎತ್ತರದಲ್ಲಿ, ನದಿಗೆ ಸಮಾನಾಂತರವಾಗಿ ಊರಿನ ಮುಖ್ಯ ಬೀದಿ. ಬೀದಿಯ ಎರಡೂ ಬದಿಗಳಲ್ಲಿ ಕುಶಲ ಕರ್ಮಿಗಳ, ಕೆಲ ರೈತರ ಮಣ್ಣಿನ—ಮರದ—ವಸತಿಗಳು. ಆ ಸಾಲುಗಳ ಹಿಂಬದಿಯಲ್ಲಿ ಬಡ ರೈತರ ಮಣ್ಣು ಮನೆಗಳು. ಇವು ವಿರಳವಾದಂತೆ ಅಲ್ಲೊಂದು ಇಲ್ಲೊಂದು ಗುಡಿಸಲು, ಪಶ್ಚಿಮದಲ್ಲಿ. ಮತ್ತೂ ಮುಂದಕ್ಕೆ ಎತ್ತರದಲ್ಲಿ ದೇವಮಂದಿರ. ಅದನ್ನು ದಾಟಿ ಹೋದರೆ ಗೋರಿ ಪ್ರದೇಶ. ಮುಖ್ಯ ಬೀದಿ ಮುಗಿಯಿತು ಎನ್ನುವ ಕಡೆ ವಿಶಾಲ ಬಯಲಿನಲ್ಲಿ ಶ್ರೀಮಂತರ ಮಹಡಿ ಮನೆಗಳು. ಅವುಗಳ ನಡುವೆ ರಾಜಗೃಹ. ಅದು ಫೆರೋನ ಪ್ರತಿನಿಧಿಯ—ಪ್ರಾಂತಪಾಲನ—ಅಧಿಕಾರ ಪೀಠ. ವಸತಿ ಕೂಡಾ.

ಅಬ್ಟು ಯಾತ್ರೆ ಮುಗಿಸಿ ಬಂದವರಲ್ಲಿ ಹೆಚ್ಚಿನವರು ಊರಿನವರೇ. ಉಳಿದವರದು ಒಂದು ಹೊತ್ತಿನ ದಾರಿ. ಬೇರೆ ಬೇರೆ ದಿಕ್ಕುಗಳಲ್ಲಿ. (ಊರಿನ ಜನಸಂಖ್ಯೆ ಹದಿನೈದು ಸಹಸ್ರ. ಪ್ರಾಂತದ ಇನ್ನಿತರ ಭಾಗಗಳ ಒಟ್ಟು ಜನ ಮತ್ತೆ ಹತ್ತುಹದಿನೈದು ಸಹಸ್ರ.)

ಪ್ರಾಂತದ ಗ್ರಾಮಾಂತರ ಪ್ರದೇಶದ ಯಾತ್ರಿಕರಿಗೂ ಆ ರಾತ್ರಿ ಆ ಊರಿನಲ್ಲಿಯೇ ವಸತಿ.

ಮೆನೆಪ್‌ಟಾ ನುಡಿದ :

"ಪವಿತ್ರ ಕ್ಷೇತ್ರದಲ್ಲಿ ಬೆಸೆದ ಬಾಂಧವ್ಯ; ಒಸೈರಿಸನ ಲೋಕದಲ್ಲೂ ಮುಂದುವರಿಯುವ ಸಂಬಂಧ. ನಮ್ಮ ಅತಿಥಿಗಳಾಗಿ ಒಂದು ದಿನ ಇದ್ದು ಹೋಗಿ. ನಾಳೀ ಸಾಯಂಕಾಲ ನಿಮ್ಮ ನಿಮ್ಮ ಊರು ತಲುಪಿದರಾಯ್ತು. ಆಗದೆ ?"

ಯಾತ್ರೆ ಮುಗಿಸಿ ಉಂಟಾದ ಸಂತಸವನ್ನು ಹತ್ತಿಕ್ಕಲು ಯತ್ನಿಸಿತ್ತು, ಕಂದಾಯ ವಸೂಲಿಯ ಪೆಡಂಭೂತ. ಆದರೆ ಮೆನೆಪ್‌ಟಾನ ಮಾತು ಆ ಭೂತದ ಆಕಾರವನ್ನು ಕುಗ್ಗಿಸಿತು.

"ನಮ್ಮಲ್ಲಿಗೆ ಬನ್ನಿ, ನಮ್ಮಲ್ಲಿಗೆ ಬನ್ನಿ," ಎಂದು ಊರವರು ಹೊರಗಿನವರನ್ನು ಕರೆದರು.

ಹಂಚಿಕೊಳ್ಳಲು ಸಾಕಷ್ಟು ಜನರಿರಲಿಲ್ಲ !

"ನಮ್ಮ ಮನೆಗೆ ಯಾರೂ ಇಲ್ಲವಲ್ಲ," ಎಂದಳು ನೆಫಿಸ್.

"ನಾಳೆ ನಿಮ್ಮಲ್ಲಿಗೆ ಬಂದು ಮುಂದೆ ಪ್ರಯಾಣ ಬೆಳೆಸ್ತೇವೆ," ಎಂದುವು ಬೇರೆ ಬೇರೆ ಸ್ವರಗಳು.

ಬುಡ್ಡಿ ದೀಪಗಳು ತೆರೆದ ಬಾಗಿಲುಗಳಿಂದ, ಜಾಲಂದ್ರ—ಕಿಟಕಿಗಳಿಂದ ಬೀದಿಗೆ ಬೆಳಕು ಹಾಯಿಸಿದುವು. ನಾಲ್ಕಾರು ಜನ ಮಾತ್ರ ಮುಖ್ಯ ಬೀದಿಯವರು. ಅವರಲ್ಲಿ ಮೆನೆಪ್‌ಟಾ ಒಬ್ಬ. ಆದರ ಎಡಮಗ್ಗುಲು ಸಾಲಿನವರೇ ಹೆಚ್ಚು ಜನ.

ರಾಜಧಾನಿಯಿಂದ ಬಂದ ಕಂದಾಯ ಅಧಿಕಾರಿಯ ವಸತಿ ರಾಜಗೃಹದಲ್ಲಿ. ಆ ತಂಡ ಊರಿನಲ್ಲಿತ್ತೆಂದು, ಒಂದು ಬಗೆಯ ಮೌನ. ಯಾರೋ ಬಂದರೆಂದು ಬೊಗಳುವ, ಗುರುತು ಹಿಡಿದು ಬಾಲ ಆಡಿಸುವ ನಾಯಿಗಳು.

ಆ ಜನರಿಗೆ ತಮ್ಮವರು ಯಾತ್ರೆಯಿಂದ ಮರಳಿದರೆಂಬ ಸಂತಸ ಸಹಜವಾದರೂ ಕಾಣದ ಕಡಿವಾಣ ಅದನ್ನು ಹಿಡಿದು ಜಗ್ಗುತ್ತಿತ್ತು.

ರಾಜಗೃಹದಲ್ಲಿ ಮೇಜವಾನಿ ನಡೆಯುತ್ತಿರಬೇಕು ಎಂದುಕೊಂಡ ಮೆನೆಪ್‌ಟಾ. ಕಂಪಾಯದ ಅಧಿಕಾರಿ ಊರಲ್ಲಿದ್ದಷ್ಟು ದಿನ ಸಂಭ್ರಮದ ಸತ್ಕಾರ. ಒಲ್ಲೈಸುವವರು ಊರಿನ ಅಧ್ಯರು, ಭೂಮಾಲಿಕರು, ತಂಡ ತೆರಳಿದ ಮೇಲೆ ಸತ್ಕಾರದ ವೆಚ್ಚವನ್ನು ತುಂಬಲೆಂದು ಜನರಿಂದ ವಿಶೇಷ ಕರ ವಸೂಲಿ.

ಮನೆ ಸೇರುತ್ತಿದ್ದಂತೆ ನೆಫಿಸ್‌ಳನ್ನು ಪಕ್ಕದ ಮನೆಯ ನೆಜಮುಟ್ ಕೇಳಿದಳು :

" ಹೋಗಿ ಬಂದ್ರಾ ?"

" ಹೂಂ, ಅಕ್ಕ."

ಅವಸರ ಅವಸರವಾಗಿ ಬಿಸಿಬಿಸಿ ರೊಟ್ಟಿ ತಟ್ಟಿದಳು ನೆಫಿಸ್. ರಾಮೆರಿಪ್‌ಟಾ ನಿದ್ದೆಗಣ್ಣಿನಲ್ಲೇ ಊಟ ಮಾಡಿದ; ಉಂಡವನೇ ಮೈ ಚಾಚಿದ.

ಹೊರಗೆ ನೆರೆಯ ಕುಶಲಕರ್ಮಿ ಸ್ನೊಫ್ರುವಿನೊಡನೆ ಮಾತನಾಡುತ್ತ ನಿಂತಿದ್ದ ಗಂಡನನ್ನು ನೆಫಿಸ್ ಕರೆದಳು. ಮೆನೆಪ್‌ಟಾ ಬಹಿರ್ದೆಶೆಗೆ ಹೋಗಿ ಬಂದು, ಕೈ ಕಾಲು ತೊಳೆದು ಒಲೆಯ ಬುಡದಲ್ಲಿ ಕುಳಿತ ಎದುರು ಗೇಣೆತ್ತರದ ಅಟ್ಟಣಿಗೆ. ಅದರ ಮೇಲೆ ಕಲ್ಲಿನ ಬಟ್ಟಲು. ಬಟ್ಟಲಲ್ಲಿ ರೊಟ್ಟಿ, ಉಪ್ಪು ಹಾಕಿದ ಮೀನು, ಈರುಳ್ಳಿ.

"ನೀನೂ ಕೈ ಹಾಕು," ಎಂದ ಮೆನೆಪ್ ಟಾ.

ನೆಫಿಸ್ "ಹೂಂ" ಅಂದಳು.

ಅರ್ಧ ಊಟದ ಮಧ್ಯೆ ಬೆರಳುಗಳು ಪರಸ್ಪರ ಮುಟ್ಟಿ ನೋಡಿದುವು. ಸ್ಪರ್ಶ ಸಂದೇಶ. ಮೊದಲು ಯಾರು ನೀಡಿದರೆಂದು ಹೇಳುವುದು ಕಷ್ಟ. ಬಹುಶಃ ಇಬ್ಬರೂ ಏಕಕಾಲದಲ್ಲೇ, ಬಯಕೆಯ ನೋಟಗಳು....

ಕೈ ತೊಳೆದ ಮೆನೆಪ್‌ಟಾ ಜಾಲಂಧ್ರವನ್ನೂ ಬಾಗಿಲನ್ನೂ ಮುಚ್ಚಿ ಬಂದ. ನೆಫಿಸ್ ಬಟ್ಟಲು ತೊಳೆದಿರಿಸಿ, ಹುಲ್ಲಿನ ಚಾಪೆ ಹಾಸಿದಳು. ಬುಡ್ಡಿ ದೀಪವನ್ನು ಮೆನೆಪ್‌ಟಾ ಆರಿಸಿದ.

ಗಂಡನನ್ನು ತಬ್ಬಿಕೊಂಡು ಮತ್ತೇರಿದ ಧ್ವನಿಯಲ್ಲಿ ನೆಫಿಸ್ ಅಂದಳು:

"ಕರಡಿ ಹುಡುಗಿ...."

ಮೆನೆಪ್‌ಟಾ ನಕ್ಕು ಅವಳ ಬಾಯಿ ಮುಚ್ಚಿಸಿದ.

ಯಾತ್ರೆಯ ದಣಿವು ಸುಳ್ಳು. ಇದು ನಿಜ....

....ನೆಫಿಸ್ ಪರಮ ಸುಖಿ. ಬರಿಮೈಯಲ್ಲೆ ಆಕೆ ನಿದ್ದೆ ಹೋದಳು.

ಜಾಲಂಧ್ರದ ಮತ್ತು ಬಾಗಿಲಿನ ಸಂದಿಗಳಿಂದ ಸಣ್ಣನೆ ಗಾಳಿ ನುಸುಳಿ ಬಂತು. ಇದು ಇರುಳು ಕಳೆದಂತೆ ಚಳಿಯುಂಟು ಮಾಡುವ ತಂಗಾಳಿ.

ಮೆನೆಪ್‌ಟಾ ಎದ್ದ. ಮನೆಯ ಹಿಂಬದಿಗೆ ಹೋಗಿ ಬಂದ. ಸೆಣಬು ಬಟ್ಟೆಯ ಹಚ್ಚಡ ಬಿಡಿಸಿ, ನೆಫಿಸ್‌ಗೆ ಹೊದಿಸಿ, ತಾನೂ ಅದರೊಳಗೆ ಸೇರಿಕೊಂಡ. ಕಾವು ಆರಿದ್ದರೂ ಜತೆಗಾತಿಯ ಮೈ ಸ್ಪರ್ಶ ಹಿತಕರವಾಗಿತ್ತು.... ರಾಮೆರಿಪ್‌ಟಾ ಹುಟ್ಟಿದ ಮೇಲೆ ಬಸಿರು ನಿಂತಿರಲಿಲ್ಲ. ಈಗ, ಐಸಿಸ್‌ದೇವತೆಯ ಕೃಪೆಗೆ ಪಾತ್ರರಾಗಿ ಅಬ್ಬುವಿನಿಂದ ಮರಳಿದ ಬಳಿಕ........? ಮೆನೆಪ್‌ಟಾ ಮಡದಿಯ ಕಿಬ್ಬೊಟ್ಟೆಯನ್ನು ಮುಟ್ಟಿದ. ಮೆಲ್ಲನೆ ಸವರಿದ. ನೆಫಿಸ್‌ಗೆ ಎಚ್ಚರವಾಗಲಿಲ್ಲ. ಇಂಥ ರಾತ್ರಿಗಳಲ್ಲಿ, ಅವಳು ಹಿತ್ತಿಲ ಕಡೆ ಹೋಗಿ ಬಂದು ಅದೂ ಇದೂ ಮಾತನಾಡುತ್ತ ಮಲಗುವುದು ಪದ್ಧತಿ. ಆದರೆ ಇಂದು ಅವಳಿಗೆ ಗಾಢ ನಿದ್ದೆ.

ಕಳೆದ ಎರಡು ದಿನಗಳಲ್ಲಿ ಒಮ್ಮಿಂದೊಮ್ಮೆಲೆ ತಾನು ಬೆಳೆದಿದ್ದೇನೆ—ಎಂಬ ಭಾವನೆ ಮೆನೆಪ್‌ಟಾಗೆ. ಯಾಕೆ ಹಾಗೆ—ಎಂದರೆ, ಉತ್ತರ ಕಷ್ಟ. ಏಳು ವರ್ಷ ಹಿಂದೆ ನೆಫಿಸ್‌ಳನ್ನು ಮದುವೆಯಾದಾಗಲೂ ಹೀಗೆಯೇ ಅನಿಸಿತ್ತು.

ಒಲವು, ಆಸೆ, ತೃಪ್ತಿ....ತಾನು ತನ್ನ ಸಂಸಾರದ ಸಂರಕ್ಷಕ....

ನೆರೆಮನೆಯ ಸ್ನೊಫ್ರು ನುಡಿದಿದ್ದ:

"ನ್ಯಾಯ ಸಮ್ಮತವಾಗಿ ನಡಕೊಳ್ಳಿ; ಸುಮ್ನೆ ಸುಲೀಬೇಡಿ—ಅಂತ ಕಂದಾಯ ಅಧಿಕಾರಿಗೆ ಹೇಳ್ಬೇಕು. ನಮ್ಮ ಸಂಕಟ ತೋಡ್ಕೋಬೇಕು. ಪ್ರಾಂತಪಾಲನ ಎದುರಲ್ಲೇ....ನಮ್ಮಲ್ಲಿ ಬಹಳ ಜನರ ಅಭಿಪ್ರಾಯ ಇದು. ನೀನು ಬರಬೇಕು ಮೆನೆಪ್‌ಟಾ. ನೀನೇ ಮುಂದೆ ಇರ್ಬೇಕು. ನೀನು ಯೋಚಿಸಿ ಮಾತಾಡ್ತೀಯಥಾ. ಸರಿಯಾಗಿ ವಾದಿಸ್ತೀಯಾ...."

ಊಟಕ್ಕೆ ಕುಳಿತಾಗ ನೆಫಿಸ್‌ಗೆ ಇದನ್ನು ತಿಳಿಸಬೇಕಿತ್ತು.

ಆದರೆ ಕರಡಿ ಹುಡುಗಿ........

ಮೆನೆಪ್‌ಟಾ ಸಣ್ಣನೆ ನಕ್ಕ. ಬೆಳಗ್ಗೆ, ಎಲ್ಲರ ಜತೆ ರಾಜಗೃಹಕ್ಕೆ. ಎದ್ದೊಡನೆಯೇ ನೆಫಿಸ್‌ಗೆ ಈ ವಿಷಯ....

* * * *

ಪ್ರಾಂತಪಾಲ ಗೇಬುವಿನ ಪತ್ನಿ ತನ್ನ ಮೂವರು ಹೆಣ್ಣು ಮಕ್ಕಳೊಡನೆ ತನ್ನೂರಾದ ಲಿಷ್ಟಿಗೆ ಹೋಗಿದ್ದಳು. ರಾಜಗೃಹದಲ್ಲಿ ಆತಿಥ್ಯಕ್ಕೆ ಸಂಬಂಧಿಸಿ ದಾಸದಾಸಿ ಜನರದೇ ದುಡಿಮೆ, ಅವರದೇ ಉಸ್ತುವಾರಿ.

ಊರವರು ಮನವಿ ಸಲ್ಲಿಸಲು ಬರುವರೆಂಬ ಸುದ್ದಿ ಗೂಢಚಾರರ ಮೂಲಕ ಪ್ರಾಂತಪಾಲ ಗೇಬುಗೆ ಬೆಳಿಗ್ಗೆಯೇ ತಿಳಿದಿತ್ತು. ಪ್ರಾಂತದಲ್ಲಿ ಪೆರೋನ ಆಡಳಿತ ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳುವುದು ಪ್ರಾಂತಪಾಲನ .ಜವಾಬುದಾರಿ. ಐಗುಪ್ತ ದೇಶದಲ್ಲಿ ಅಂಥವರು ನಾಲ್ವತ್ತು ಜನ, ಪ್ರಾಂತಕ್ಕೊಬ್ಬರಂತೆ. ಕಂದಾಯದ ಅಧಿಕಾರಿಗಳಾದರೋ ಇಡೀ ದೇಶದಲ್ಲಿ ಮೂವರು. ಆ ಕಾರಣದಿಂದ, ಪ್ರಾಂತಪಾಲನಿಗಿಂತ ಮೇಲಿನದು ಕಂದಾಯ ಅಧಿಕಾರಿಯ ಅಂತಸ್ತು. ಗೇಬು ಗೂಢಚಾರರಿಂದ ಕೇಳಿ ಅರಿತು ದನ್ನು ಕಂದಾಯದ ಅಧಿಕಾರಿ ಟೆಹುಟಿಗೆ ತಿಳಿಸಿದ, ಉಪ್ಪರಿಗೆಯಲ್ಲಿ ಉಪಾಹಾರ ಸ್ವೀಕರಿಸುತ್ತಿದ್ದಾಗ.

ಟೆಹುಟಿಗೆ ಸಿಟ್ಟು ಬಂತು. ರೊಟ್ಟಿಯ ಚೂರನ್ನೂ ಒಣ ಮಾಂಸದ ತುಣುಕನ್ನೂ ಒಟ್ಟಿಗೆ ಜಗಿಯುತ್ತಿದ್ದ ಆತ, ತುತ್ತು ನುಂಗಿದ ಮೇಲೆ ದ್ರಾಕ್ಷಾ ಸುರೆಯನ್ನಿಷ್ಟು ಕುಡಿದು, ನೆತ್ತಿಯಿಂದ ಗುಂಗುರು ಗುಂಗುರಾಗಿ ಇಳಿದಿದ್ದ ತಲೆಗೂದಲನ್ನು ರಝಾಡಿಸಿ, ಧ್ವನಿ ಏರಿಸಿ ನುಡಿದ :

" ಗೇಬು, ಯಾವ ಹೊತ್ತಿನಲ್ಲಿ ಏನು ಹೇಳ್ಬೇಕು ಅನ್ನೋದು ನಿಮಗೆ ತಿಳೀದು."

ಗೇಬುಗೆ ಅರ್ಥವಾಗಲಿಲ್ಲ. ಆದರೂ ಧ್ವನಿ ತಗ್ಗಿಸಿ, " ಕ್ಷಮಿಸಿ," ಅಂದ.

" ಕ್ಷಮಿಸಿ ನಿಮ್ಮ ತಲೆ ! ಉಪಾಹಾರ ಮುಗಿಯೋತನಕ ಕಾದಿದ್ರೆ ಏನಾಗ್ತಿತ್ತು ? ನಾನು ಹೇಳ್ತೀನೆ ಗೇಬು. ನಿಮ್ಮ ಆಡಳಿತದಲ್ಲಿ ಬಿಗಿ ಇಲ್ಲ. ರೈತರಿಗೆ, ಕುಶಲ ಕರ್ಮಿಗಳಿಗೆ ಸಲಿಗೆ ಕೊಟ್ಟಿದ್ದೀರಿ. ಇವರೆಲ್ಲ ಮನವಿ

ಸಲ್ಲಿಸೋದು ಅಂದರೇನು ? ಪೆರೋನ ಪ್ರತಿನಿಧಿಯ ಎದುರು ನಿಂತು ಮಾತನಾಡೋ ಎದೆಗಾರಿಕೆಯೆ ಈ ಜನಕ್ಕೆ. ಥುಥ್ !"

ಗೇಬು ಕೈತಟ್ಟಿದ. ಮುಖ ತೋರಿಸಿದ ಸೇವಕನಿಗೆ, "ಇನ್ನಷ್ಟು ರೊಟ್ಟಿ ತಾ ದೊಡ್ಡವರಿಗೆ," ಎಂದ.

ಟೆಹುಟಿ ಕಿರುಚಿದ :

"ರೊಟ್ಟಿ ನಿಮ್ಮ ತಲೆ. ಬೇಕು ಅಂದೆನೆ ನಾನು ?"

ಕಕ್ಕಾವಿಕ್ಕಿಯಾಗಿ ನಿಂತ ಸೇವಕನೆಡೆ ನೋಡಿ, "ಹೋಗಾಚೆ !" ಎಂದು ಗೇಬು ಗದರಿದ. ಅವಮಾನದಿಂದ ಮುಖ ಕೆಂಪಡರಿ, ಟೆಹುಟಿಯ ನೋಟವನ್ನು ಇದಿರಿಸಿ, ಗೇಬು ಅಂದ :

"ಹೀಗೆ ಹೇಳ್ತಿದ್ದೇನೇಂತ ತಪ್ಪು ತಿಳ್ಕೋಬೇಡಿ ಟೆಹುಟಿ. ಸ್ವತಃ ನಾನೂ ಒಂದು ಮನವಿ ಸಲ್ಲಿಸ್ಬೇಕು ಅಂದ್ಕೊಂಡಿದ್ದೇನೆ."

"ನೀವು ? ನನಗೆ ?"

"ಮಹಾಪ್ರಭುವಿಗೆ."

"ಸದ್ಯಃ ! ಏನು ಸಮಾಚಾರ ?"

"ಪರಿಸ್ಥಿತಿ ಬದಲಾಗಿದೆ...."

"ಕೆಟ್ಟಿದೆ !"

"ಹೌದು, ಕೆಟ್ಟಿದೆ. ಯಾಕೆ ? ಸ್ಥಿತಿಗತಿ ಏನು—ಅಂತ ಪ್ರಾಂತ ಪಾಲನನ್ನು ಯಾರೂ ಕೇಳೋದಿಲ್ಲ."

"ರಾಜಧಾನಿಯಲ್ಲೇ ಬಿಗಿ ಇಲ್ಲ ಎಂದೆ ?"

"ಪ್ರವಾಹ ಬಂದ್ಮೇಲೆ ವರ್ಷದ ಫಸಲು ಅಂದಾಜು ಮಾಡೋದಕ್ಕೆ ಒಮ್ಮೆ, ಕುಯ್ಲು ಆದ್ಮೇಲೆ ಕಂದಾಯ ವಸೂಲಿಗೆ ಒಮ್ಮೆ—ಹೀಗೆ ಎರಡು ಸಲ ರಾಜಧಾನಿಯಿಂದ ಯಾರಾದರೂ ಬರ್ತಾರೆ."

"ಯಾರಾದರೂ ? ಈ ಸಲ ಬಂದಿರೋದು ನಾನು—ಟೆಹುಟಿ—ಕಂದಾಯ ಅಧಿಕಾರಿ !"

"....ಬಹಳ ಅಂದರೆ ಮಹಾ ಅರ್ಚಕ ಹೇಪಾಟ್ ದೇವರ ಜತೆ ವರ್ಷಕ್ಕೊಮ್ಮೆ ಬರಬಹುದು."

"ಈಗ ಕಂದಾಯದ ಅರ್ಧಾಂಶ ಪೆರೋಗೆ ಅರ್ಧಾಂಶ ಹೇಪಾಟ್‌ಗೆ.

ಹೌದೋ ಗೇಬು ?"

"ಈ ಗೊಂದಲದಲ್ಲಿ ಕೆಲವು ಪ್ರಾಂತಪಾಲರು ಬಲಿಷ್ಠರಾಗಿದ್ದಾರೆ, ನನ್ನಂಥ ಕೆಲವರು ಅಸಹಾಯಕರಾಗಿದ್ದಾರೆ—ಅಂತಲೂ ಕೇಳಿದ್ದೇನೆ"

"ನೀಲ ನದಿಯ ಉದ್ದಕ್ಕೂ ಕಿಂವದಂತಿಗಳು ಸಂಚಾರ ಮಾಡ್ತಿರೋ ಹಾಗಿದೆ. ಅಮಾತ್ಯರಿಗೆ ಇದನ್ನು ತಿಳಿಸ್ಬೇಕು."

"ಅಮಾತ್ಯರು ಒಮ್ಮೆ ಬಂದಿದ್ದರೆ—"

"ಟೆಹುಟಿ ಉದ್ಧಟ ಅಂತ ದೂರು ಹೇಳಬಹುದು ಅಂತಲೊ ?"

"ಟೆಹುಟಿ, ಯಾರಿಗೆ ಗೊತ್ತು ? ನಾಳೆ ನೀವೇ ಅಮಾತ್ಯರಾಗ ಬಹುದಲ್ಲ ?"

ಟೆಹುಟಿ ನಕ್ಕ. ಸ್ವರ ತಗ್ಗಿಸಿ ಅಂದ :

"ಗೇಬು ನೀವು ದಡ್ಡರಲ್ಲ. ಒಪ್ತೇನೆ."

"ನೀವು ದೊಡ್ಡವರು. ವಿದ್ಯೆ ವಯಸ್ಸು ಎರದರಲ್ಲೂ ನಾನು ಚಿಕ್ಕವ."

"ಗೇಬು, ಮುಖಸ್ತುತಿ ಬೇಡ. ಇಲ್ಲಿ ನಿಮಗಿರೋ ತೊಂದರೆ ಏನು ?"

"ಹತ್ತು ಜನ ಕಾವಲುಭಟರ ಸಹಾಯದಿಂದ ಒಂದು ಪ್ರಾಂತ ಆಳೋದು ಹ್ಯಾಗೆ ? ಭೂಮಾಲಿಕರ ಬೆಂಬಲ ನೆಚ್ಕೊಂಡು ನಾನು ಬದುಕ್ಬೇಕು. ಈಗ ನೋಡಿ, ಈ ಪ್ರಾಂತದ ಅತಿ ದೊಡ್ಡ ಭೂಮಾಲಿಕ ನುಟ್‌ಮೋಸ್ ಊರಲ್ಲಿಲ್ಲ. ಅದೃಷ್ಟ ಪರೀಕ್ಷೆಗೆ ರಾಜಧಾನಿಗೆ ಹೋಗಿದ್ದಾನೆ ಪೆರೋ ಪಲ್ಲಕಿ ಹೊರೋ ಅವಕಾಶ ಸಿಗ್ತದೋ ಅಂತ ನೋಡೋದಕ್ಕೆ. ಪ್ರಾಯಶಃ ಅಬ್ಟುಗೆ ಹೋಗಿ ರಾಜಧಾನಿಗೆ ವಾಪಸಾಗ್ತಿರ್‍ಬೌದು. ನನಗೆ ಗೊತ್ತು. ಹೆಚ್ಚು ಕಮ್ಮಿ ಎಲ್ಲ ಭೂಮಾಲಿಕರಿಗೂ ಅಷ್ಟೆ. ರಾಜಧಾನಿ ಯಲ್ಲಿ ಮಜವಾಗಿರೋದು ಇಷ್ಟ."

"ಮೂರ್ಖರು. ಕುಡಿತದ ಮನೆ ಕುಣಿತದ ಮನೆ—ಇದು ತಾನೆ ರಾಜ ಧಾನಿಯ ಆಕರ್ಷಣೆ ?"

ಮಾತು ಮುಂದುವರಿಸಲು ಗೇಬು ಬಾಯಿ ತೆರೆದ. ಆದರೆ, ಟೆಹುಟಿ ಆಕಳಿಸಿದುದನ್ನು ಕಂಡು, ಸುಮ್ಮನಾದ.

ಚುರುಕು ಚಲನೆಯ ಟೆಹುಟಿ ಚಂಗನೆ ಎದ್ದು ನಿಂತ. ಸ್ಥೂಲಕಾಯ ಪ್ರಾಂತಪಾಲನೂ ಗಡಬಡಿಸಿ ಎದ್ದ.

ಮೆಲ್ಲ ಮೆಲ್ಲನೆ ಮೇಲೇರತೊಡಗಿದ್ದ ಸೂರ್ಯನನ್ನೊಮ್ಮೆ ನೋಡಿ ಟೆಹುಟಿ ಅಂದ :

"ಕೆಳಗೆ ಹೋಗೋಣ.... ಮನವಿ ಸಲ್ಲಿಸೋ ಮಹಾನುಭಾವರು ದಯ ಮಾಡಿಸಬಹುದು ! ನಡೀರಿ."

ಇಬ್ಬರೂ ಮಹಡಿಯಿಂದ ಇಳಿದು ಬಂದರು, ಪಡಸಾಲೆಗೆ. ಅದರೆದುರು ಅಂಗಳ. ಅಂಗಳದಾಚೆ ಎತ್ತರದ ಹಿತ್ತಿಲು ಗೋಡೆ. ಆ ಗೋಡೆಯಲ್ಲಿ ಮಹಾದ್ವಾರ. ದ್ವಾರದ ಆ ಕಡೆ ಈ ಕಡೆ ನಿಂತಿದ್ದರು, ಟೆಹುಟಿಯ ಜತೆ ಬಂದಿದ್ದ ಆರು ಕರಿಯ ಭಟರಲ್ಲಿ ಇಬ್ಬರು—ಗದಾಧಾರಿಗಳು. ಆ ದ್ವಾರಕ್ಕೆ ಎದುರಾಗಿ ಪಡಸಾಲೆಯ ಈ ಅಂಚಿನಲ್ಲಿತ್ತು ವೇದಿಕೆ. ಅದರ ಮೇಲೆ, ಮರದ ಎರಡು ಕುರ್ಚಿಗಳು. ಕೆಳಗೆ ಎಡಬಲಗಳಲ್ಲಿ ಆರೆಂಟು ಸಾಧಾರಣ ಕುರ್ಚಿಗಳು. ವೇದಿಕೆಯ ಮುಂದುಗಡೆ ನೆಲದ ಮೇಲೆ ಒಂದು ಪೆಟಾರಿ.

ಕಂದಾಯ ಅಧಿಕಾರಿಯೂ ಪ್ರಾಂತಪಾಲನೂ ಕಾಣಿಸಿಕೊಂಡೊಡನೆ, ಆಳುಗಳು ಸುಗಂಧ ದ್ರವ್ಯಗಳನ್ನು ಉರಿಸಿದರು.

ವೇದಿಕೆಯ ಮೇಲಿನ ಪೀಠಗಳಲ್ಲಿ ಟೆಹುಟಿ ಮತ್ತು ಗೇಬು ಕುಳಿತರು. ಟೆಹುಟಿಯ ತಂಡದ ಮೂವರು ಕರಿಯ ಭಟರು ವೇದಿಕೆಯ ಹಿಂದೆ ನಿಂತರು. ಆ ಭಟರ ಮುಖಂಡ ಒಂದು ಕಂಬದ ಬಳಿ, ಮಹಾಶಿಲ್ಪಿಯೊಬ್ಬ ಕಡೆದ ಶಿಲಾ ಪ್ರತಿಮೆಯಂತಾದ. ತೊಳೆದ ಕೆಂಡದ ಮೈಬಣ್ಣ, ಕುಳ್ಳ. ಹೃಷ್ಟಪುಷ್ಟ ಮಾಂಸ ಖಂಡಗಳು, ದಪ್ಪ ತುಟಿ, ನುಣ್ಣನೆ ಬೋಳಿಸಿದ ತಲೆ, ಪುಟ್ಟಮೂಗು, ಕ್ರೌರ್ಯ ಘನೀಭವಿಸಿದ ಜವ್ವನದ ಕಣ್ಣುಗಳು. ನಡು ಪಟ್ಟಿಯಲ್ಲಿ ಸುರುಳಿ ಸುತ್ತಿದ ಚಾವಟಿ. ಆತ ನುಬಿಯ ದೇಶದಿಂದ ಬಂದು ಐಗುಪ್ತ ಆಡಳಿತದ ಕೀಲಿಯಾಗಿದ್ದ ಬಕಿಲ.

"ಬಕಿಲ !"

—ಟೆಹುಟಿ ಕರೆದ.

ಶಿಲಾಪ್ರತಿಮೆಯ ದೃಷ್ಟಿ ಒಡೆಯನತ್ತ ಹೊರಳಿತು.

ಟೆಹುಟಿ ನುಡಿದ :

" ಮನವಿ ಸಲ್ಲಿಸೋದಕ್ಕೆ ರೈತರೂ ಕುಶಲಕರ್ಮಿಗಳೂ ಬರ್‍ತಾರಂತೆ. ನನ್ನ ಅನುಮತಿ ಇಲ್ದೆ ಏನೂ ಮಾಡ್ಬೇಡ "

ಆದೇಶ ಅರ್ಥವಾಯಿತು ಎನ್ನುವಂತೆ ಪ್ರತಿಮೆಯ ಶಿರ ತುಸು ಬಾಗಿತು.

ದೂತರು ಅತ್ತ ಇತ್ತ ಓಡಿದರು—ಅವರನ್ನು ಕರೆಯಲು, ಇವರನ್ನು ಕರೆಯಲು. ಪ್ರಾಂತದ ಕಂದಾಯ ತೆರಿಗೆಗಳ ಲೆಕ್ಕವಿಡುವ ಲಿಪಿಕಾರ ಇಪ್ಯುವರ್ ಏದುಸಿರು ಬಿಡುತ್ತ ಬಂದು, ಟೆಹುಟಿಗೂ ಗೇಬುಗೂ ನಮಿಸಿದ. ಮಧ್ಯ ವಯಸ್ಸು ದಾಟಿದ್ದ ಬಡಕಲು ಜೀವ. ಎದೆಗೂಡಿನ ಮೂಳೆಗಳು ಎಣಿಕೆಗೆ ಸಿಗುತ್ತಿದ್ದುವು. ಇಪ್ಯುವರ್ ಪೆಟಾರಿಯ ಬಳಿ ನೆಲದ ಮೇಲೆ ಚಕ್ಕಂಬಕ್ಕಳ ಹಾಕಿ ಕುಳಿತ.

" ಎಷ್ಟಿವೆ ?" ಎಂದ ಟೆಹುಟಿ, ಗಟ್ಟಿಯಾಗಿ.

ಅನಿರೀಕ್ಷಿತ ಪ್ರಶ್ನೆ. ಇಪ್ಯುವರ್‌ಗೆ ಅರ್ಥವಾಗಲಿಲ್ಲ. ಗೇಬುಗೂ ಅರ್ಥವಾಗಲಿಲ್ಲ.

ಇಪ್ಯುವರ್ ಪಿಳಿಪಿಳಿ ಕಣ್ಣು ಬಿಟ್ಟ. ಗೇಬು ಟೆಹುಟಿಯ ಕಡೆ ನೋಡಿದ.

" ಎಣಿಸಿಲ್ಲ ? ಎದೆಗೂಡಿನ ಮೂಳೆಗಳು !" ಎಂದು ಹೇಳಿ ಟೆಹುಟಿ ನಕ್ಕ. ಗೇಬುಗೂ ನಗು ಬಂತು.

ಇದು ತನ್ನನ್ನು ಕುರಿತ ಪರಿಹಾಸ್ಯ ಎಂಬುದು ಇಪ್ಯುವರ್‌ಗೆ ಮನವರಿಕೆಯಾದರೂ ಆತ ಮುಖ ಸಿಂಡರಿಸುವ ಎದೆಗಾರಿಕೆ ತೋರಲಿಲ್ಲ. ಮಾನ್ಯ ಅತಿಥಿ ನಕ್ಕುದರಿಂದ ತಾನು ಕೃತಾರ್ಥನಾದೆ ಎಂಬಂತೆ, ವಿನೀತನಾಗಿ ಟೆಹುಟಿಗೆ ಮತ್ತೆ ವಂದಿಸಿದ.

ಒಬ್ಬ ಸೇವಕ ಪೆಟಾರಿಯ ಬೀಗ ತೆಗೆದ. ಅದರೊಳಗೆ ಲಿಪಿ ಸುರುಳಿಗಳಿದ್ದ ಜಾಡಿಗಳಿದ್ದುವು. ಇನ್ನೊಬ್ಬ ಸೇವಕ ಹೊಸ ಪೆಪೈರಸ್ ಹಾಳೆಗಳನ್ನು, ಒತ್ತಿ ಬರೆಯಲು ಹಲಗೆಯನ್ನು, ಲೆಕ್ಕಣಿಕೆಯನ್ನು, ಮಸಿಪಾತ್ರೆಯನ್ನು ಇಪ್ಯುವರ್‌ನ ಬಳಿ ತಂದಿರಿಸಿದ.

ಭೂ ಮಾಲಿಕರು ಬೇಗ ಬೇಗನೆ ಬಂದು—ವೇದಿಕೆಗೆ ಬಾಗಿ ನಮಿಸಿ ಪೀಠಗಳ ಮೇಲೆ ಕುಳಿತರು. ಸೆತೆಕ್‌ನಖ್ತ್, ಸೆನ್ ಉಸರ್‍ಟ್, ಹೆಜಿರೆ ಮತ್ತು ಸಿನ್ಯುಹೆ.

ಗೇಬುವಿನ ಕಾವಲು ಭಟರೂ ಚಾಕರರೂ ಸಭೆಗೆ ಆಗಮಿಸಿದ

ಭೂಮಾಲಿಕರ ಆಳುಗಳೂ ಮೂಲೆಗಳಲ್ಲಿ ಗುಂಪು ಗುಂಪಾದರು. ಮತ್ತೆಯೂ ಕೆಲವರು ಮಹಾದ್ವಾರವನ್ನು ದಾಟಿ ಬಂದು ಅಂಗಣಕ್ಕಿಳಿದು ಪ್ರಾಕಾರಕ್ಕೆ ಒರಗಿ ನಿಂತರು.

ಅಲ್ಲಿ ಇಲ್ಲಿ ಗುಸು ಗುಸು ಮಾತು ಗರಿಗೆದರಿತೆಂದು, ವೇದಿಕೆಯ ಹಿಂಬದಿಯಲ್ಲಿದ್ದ ಕರಿಯ ಭಟನೊಬ್ಬ ಗುಡುಗಿದ.

"ಶಬ್ದ ! ಶಬ್ದ !"

ಇಪ್ಯುವರ್ ವರ್ಷ—ದಿನಗಳನ್ನು ನಮೂದಿಸಿ, ಸಭೆ ಆರಂಭವಾಯಿತು —ಎಂದು ಬರೆದುಕೊಂಡ. ನೆಲೆಸಿದ ನೀರವತೆಯಲ್ಲಿ ಲೆಕ್ಕಣಿಕೆಯ ಕರಕರ ಸಪ್ಪಳವಷ್ಟೇ ಕೇಳಿಸಿತು.

ಟೆಹುಟಿ ತುಟಿಗಳನ್ನು ಬಿಗಿದೊತ್ತಿ, ಕಣ್ಣು ಮುಚ್ಚಿ, ಕ್ಷಣಕಾಲ ಹಾಗೆಯೇ ಇದ್ದು ಕಣ್ಣು ತೆರೆದು ನೆರೆದವರನ್ನು ಉದ್ದೇಶಿಸಿ ನುಡಿದ :

"ನಮ್ಮನ್ನಾಳುವ ಪೆರೋ ದೊರೆಯ ಆಯುರಾರೋಗ್ಯ ವರ್ಧಿಸಲಿ ! ಒಳ್ಳೇದು....ನೀರಾನೆ ಪ್ರಾಂತದ ಮುಖ್ಯ ಪಟ್ಟಣದ ಪ್ರತಿಷ್ಠಿತರೆಲ್ಲ ನೆರೆದಿದ್ದೀರಿ ....ಸಂತೋಷ."

ಮಾತು ನಿಂತಿತು. ಮೌನ. ಕಂದಾಯ ಅಧಿಕಾರಿ ಮುಂದೇನು ಹೇಳುವನೋ ಎಂದು ಎಲ್ಲರಿಗೂ ಕುತೂಹಲ ಮಹಾದ್ವಾರದಲ್ಲಿ ನೂಕು ನುಗ್ಗಲು. ಒಳಗೆ ಬರಲು ಜನರು ಯತ್ನಿಸುತ್ತಿದ್ದರು. ದ್ವಾರಪಾಲಕರಾಗಿ ನಿಂತಿದ್ದ ಕರಿಯ ಭಟರು ಗದೆ ಎತ್ತಿ, "ನಿಲ್ಲಿ ! ನಿಲ್ಲಿ !" ಎಂದು ತಡೆಯುತ್ತಿದ್ದರು. ಗೇಬುವಿನ ಕಾವಲು ಭಟರೂ ನಾಲ್ಕಾರು ಜನ ಅಲ್ಲಿಗೆ ಧಾವಿಸಿದರು. ಸಭಿಕರ ದೃಷ್ಟಿ ಅತ್ತ ಸರಿಯಿತು. ಅಲ್ಲಿಂದ ವೇದಿಕೆಯ ಕಡೆಗೆ ಹೊರಳಿತು.

ಟೆಹುಟಿ ಎಂದ :

"ಬಿಡಿ. ಒಳಗೆ ಬರಲಿ."

ಆ ಮಾತನ್ನು ಗೇಬು ಪುನರುಚ್ಚರಿಸಿದ.

ಅಂಗಳ ನೂರಾರು ಜನರಿಂದ ತುಂಬಿತು.

ಟೆಹುಟಿ ಪರೀಕ್ಷ ನೋಟದಿಂದ ಅವರ ಮುಖಗಳನ್ನು ನೋಡಿದ. (ಯಾರು ಈ ಬಡಪಾಯಿಗಳ ಮುಖಂಡ ?) ಪಾದಗಳ ತುಳಿತದ ಸದ್ದು ಅಡಗಿ ಮತ್ತೆ ಮೌನ ನೆಲೆಸಿತು.

ಟಿಪುಟಿ ಮುಂದುವರಿದ. ತುಂಬಿದ ನದಿಯ ಭೋರ್ಗರೆತದಂತೆ ಧ್ವನಿ. ಮಾತಿನ ಅಲೆ ಸಭಾಂಗಣದಲ್ಲೆಲ್ಲ ಶೀಘ್ರಿಯಿಂದ ಸಂಚರಿಸಿತು.

"ಜಗತ್ತಿನಲ್ಲೇ ಶ್ರೇಷ್ಠತಮವೆನಿಸಿದ ಐಗುಪ್ತದ ಪ್ರಜೆಗಳು ನಾವು. ಸೃಷ್ಟಿಕರ್ತ ರಾನ ಮಕ್ಕಳು; ಮಹಾ ಕುರುಬ ಪೆರೋನ ಪ್ರೀತಿಪಾತ್ರ ಕುರಿಗಳು. ದೇವಸಂತಾನ. ಹುಟ್ಟಿಸಿದ ದೇವರೇ ಈ ಲೋಕದಲ್ಲಿ ನಿಂತು, ಪ್ರಭುವಾಗಿ ನಮ್ಮನ್ನು ಆಳಿದ—ಸಹಸ್ರಾರು ಸಂವತ್ಸರ. ಹಾಗೆಯೇ ದೇವಪುತ್ರ ಒಸೈರಿಸ್, ಆತನ ಕುಮಾರ ಹೋರಸ್ ಇವರೂ ಸಹಸ್ರಾರು ವರ್ಷ ಆಳಿದರು. ಕಾಲವಾದ ಮೇಲೆ ಅಮರರಾದರು; ದೇವತೆಗಳ ಶ್ರೇಣಿಯಲ್ಲಿ ಸ್ಥಾನ ಪಡೆದರು. ಅದೇ ರೀತಿ ವಿದ್ಯಾಧಿದೇವತೆ ಥೊಥ್. ಈತ ಮಹಾ ಪ್ರಭುವಾಗಿ ಮೂರು ಸಾವಿರ ವರ್ಷ ರಾಜ್ಯಭಾರ ಮಾಡಿದ; ಕಾನೂನು ಕಟ್ಟಳೆಗಳ ಇಪ್ಪತ್ತು ಸಾವಿರ ಗ್ರಂಥಗಳನ್ನು ರಚಿಸಿದ. ಮಿಕಗಳನ್ನು ಬೇಟೆಯಾಡ್ತಾ ಅಲೆಮಾರಿಗಳಾಗಿದ್ದ ನಮ್ಮ ಪೂರ್ವಜರು ನೀಲ ನದಿಯ ದಂಡೆಗಳಲ್ಲಿ ನೆಲೆ ನಿಂತರು, ಕೃಷೀವಲರಾದರು. ಲಿಪಿಯ ಸೃಷ್ಟಿಯಿಂದ ಹೊಸ ಮನ್ವಂತರ ಆರಂಭವಾಯಿತು. ಆ ಮನ್ವಂತರದ ಮೊದಲ ಮಹಾಪ್ರಭು ಮೆನೆಸ್. ಕೇವಲ ಒಂದು ಸಾವಿರ ವರ್ಷ ಹಿಂದೆಯಷ್ಟೇ ನಮ್ಮನ್ನು ಆಳಿದನು ಈತ. ಇವನ ಕಾಲದಿಂದ ಪ್ರಭುಗಳ ಆಯುಸ್ಸು ಪ್ರಜೆಗಳ ಆಯುಸ್ಸನ್ನು ಮೀರಲಿಲ್ಲ; ಆದರೆ, ಈ ಲೋಕದಲ್ಲಿ ಧರ್ಮನಿಷ್ಠರಾಗಿ ಜೀವಿಸಿ ಗೋರಿ ಕಂಡ ಮೇಲೆ ಮೂರು ಸಾವಿರ ವರ್ಷ ಬದುಕುವ ಅರ್ಹತೆಯನ್ನು ಅವರು ಪಡೆದರು.

"ಆ ವರೆಗೆ ಮೇಲಣ ಐಗುಪ್ತ ಮತ್ತು ಕೆಳಗಣ ಐಗುಪ್ತ ಅಂತ ಎರಡು ಹೋಳಾಗಿತ್ತು ದೇಶ. ಮೆನೆಸ್ ದೇಶವನ್ನು ಒಗ್ಗೂಡಿಸಿದ. ಜೋಡಿ ಕಿರೀಟ ಧರಿಸಿದ. ಥೊಥ್ ರೂಪಿಸಿದ್ದ ಕಟ್ಟಳೆಗಳನ್ನು ಆಚರಣೆಗೆ ತಂದ. ಮಂಚದ ಮೇಲೆ ಮಲಗೋದಕ್ಕೆ, ಕುರ್ಚಿ ಮೇಲೆ ಕೂತುಕೊಳ್ಳೋದಕ್ಕೆ ಹೇಳಿಕೊಟ್ಟ. ಕಟ್ಟೆಗಳನ್ನು ಕಟ್ಟಿ ನೀಲ ನದಿಯ ನೀರು ಹೊಲಗಳಿಗೆ ಬರೋ ಹಾಗೆ ಮಾಡಿದ. ಪೆರೋ ಜೋಸರನ ಕಾಲದಲ್ಲಿ ಎಂಬತ್ತಾರು ಅಳತ್ತರದ ಗೋರಿ ಸಿದ್ಧವಾಯಿತು. ಅದನ್ನು ಕಟ್ಟಿದವನು, ಮಹಾಶಿಲ್ಪಿ ಇಮ್ಹೋಟೆಪ್. ನಮ್ಮವರು ಮಣ್ಣಿನಿಂದ ಇಟ್ಟಿಗೆ ಮಾಡೋದಕ್ಕೆ ಕಲಿತರು. ಇಟ್ಟಿಗೆಯಿಂದ ಮಾತ್ರವಲ್ಲ,

ಕಲ್ಲಿನಿಂದಲೂ ಕಟ್ಟಡ ನಿರ್ಮಿಸೋದಕ್ಕೆ ಶುರು ಮಾಡಿದರು. ಪೆರೋ ಖೂಫು ರಕ್ಷಕ–ದೇವತೆಯ ಮಹಾಶಿಲ್ಪ ಮಾಡಿಸಿದ. ಕಾಫ್‌ರಾ, ಮೆಂಕೋರಾ ಕಲ್ಲಿನ ಮಹಾಪಿರಮಿಡ್ಡುಗಳನ್ನು ಕಟ್ಟಿಸಿದ್ರು. ಒಂದು ರಚನೆಗೆ ಇಪ್ಪತ್ತು ವರ್ಷ! ನೂರು ಸಹಸ್ರ ಜೀತದವರ ದುಡಿಮೆ! "ಖ್ನೆಮು ದೇವರ ಕೃಪೆಯಿಂದ, ನೀಲ ನದಿಯ ದಯೆಯಿಂದ ಹತ್ತು ಹಗಲು, ಹತ್ತು ರಾತ್ರಿಗಳ ಪ್ರವಾಸದ ದೂರ ಒಂದು ಲೆಕ್ಕವೇ ಅಲ್ಲ. ನಮ್ಮ ನೌಕೆಗಳು ಈಗ ಮಹಾ ಹಸುರು ಸಮುದ್ರವನ್ನು ಹೊಕ್ಕು ಹೊಕ್ಕು ಕೆಫ್ಟಿಯು ದ್ವೀಪದವರೆಗೆ ಹೋಗಿ ಬರ್ತವೆ. ಇತ್ತ ಖೆಟಾ ಜನರ ಜೊತೆ ನಮಗೆ ವಾಣಿಜ್ಯ ಸಂಬಂಧ ಇದೆ. ದೂರ ದೇಶವಾದ ಪಂಟ್‌ಗೂ ಐಗುಪ್ತದ ನೌಕೆಗಳು ಹೋಗಿ ನಮ್ಮ ಸಾಮಗ್ರಿಗಳಿಗೆ ವಿನಿಮಯವಾಗಿ ತಾಮ್ರ, ಕಂಚು, ಬಂಗಾರ, ಬೆಳ್ಳಿ, ಹಸ್ತಿದಂತ, ಅಪೂರ್ವ ಮರಗಳು, ಅಮೂಲ್ಯ ಹರಳುಗಳು, ಸಾಂಬಾರ ವಸ್ತುಗಳು, ಆಕರ್ಷಕ ಪ್ರಾಣಿ ಚರ್ಮ, ಉಷ್ಟ್ರ ಪಕ್ಷಿಯ ಪುಕ್ಕ—ಇವನ್ನೆಲ್ಲ ತರ್ತವೆ...."

ಹೊರಗೆ ಬಿಸಿಲೇರುತ್ತಿತ್ತು. ಸೂರ್ಯಕಿರಣಗಳು ಬಿದ್ದು ಅಂಗಣದ ಮೂಲೆಯ ತಾವರೆ ಕೊಳದ ನೀರು ಚಕಚಕಿಸುತ್ತಿತ್ತು. ತಾಪದ ಚುರುಕು ಮುಟ್ಟಿದರೂ ಕರಿವ್ಯೆಯ ಜನಸಂದಣಿ ಕರಗಲು ಸಿದ್ಧವಿರಲಿಲ್ಲ. ಮೆನೆಪ್‌ಟಾ, ಸ್ನೊಫ್ರು ಬಟಾ, ಅಬ್ಟು ಯಾತ್ರಿಕರಲ್ಲಿ ಹಲವರು, ಅವರ ಇಮ್ಮಡಿ ಸಂಖ್ಯೆಯಲ್ಲಿ ಇತರರು, ಎಳೆಯ ರಾಮೆರಿಪ್‌ಟಾ ಅವನ ಓರಗೆಯ ಕೆಲವರು.... ಎಲ್ಲರ ದೃಷ್ಟಿಯೂ ವೇದಿಕೆಯ ಕಡೆಗೆ. ಶ್ರೋತೃಗಳು ತನ್ನ ಮಾತಿಗೆ ಕಿವಿಗೊಡುತ್ತಿದ್ದಾರೆ ಎಂದು ಟೆಹುಟಿಗೆ ಸಮಾಧಾನ. ತನ್ನ ಧ್ವನಿಗೆ ತಾನೇ ಮನಸೋತು ಆತ ಮುಂದುವರಿಸಿದ :

"ಈ ಎಲ್ಲ ಸಾಧನೆಗೆ ಸಂಪತ್ತಿಗೆ ಐಶ್ವರ್ಯಕ್ಕೆ ಪೆರೋ ಹೊಣೆ. ಆತ ಭೂಪತಿ—ಐಗುಪ್ತದ ಎಲ್ಲ ನೆಲಕ್ಕೆ ಅವನು ಒಡೆಯ. ನೀಲ ನದಿಯ ಏರಿಳಿತಕ್ಕೆ, ಹೊಲದ ಫಸಲಿಗೆ, ಪ್ರಜೆಗಳ ಆರೋಗ್ಯಕ್ಕೆ ಅವನು ಹೊಣೆಗಾರ. ಪೆರೋ ವೈರಿಕುಠಾರ. ಅವನ ಸೈನ್ಯ ಆಕ್ರಮಣಕಾರರನ್ನು ಸದೆಬಡೀತದೆ. ಅವನು ಶಾಂತಿ ಪಾಲಕ. ಪೆರೋನ ಮಹಾ ಕೃಪೆಯಿಂದಲೇ ನಾವೆಲ್ಲ ಇವತ್ತು ಉಸಿರಾಡ್ತಿದ್ದೇವೆ........

"ಅರಮನೆ ವೆಚ್ಚಕ್ಕೆ ಆಡಳಿತ ವೆಚ್ಚಕ್ಕೆ ಅಪಾರ ಧನಕನಕ ಬೇಕು.

ಅದು ಬರೋದು ಪ್ರಜೆಗಳು ನೀಡೋ ಕಂದಾಯದಿಂದ, ತೆರಿಗೆಯಿಂದ. ಹಾಗೆಯೇ ನಮ್ಮ ದೇವ ದೇವತೆಯರು. ಮೆಂಫಿಸಿನ ಪ್‌ಟಾ ದೇವಾಲಯ, ಆನ್‌ನ ರಾ ದೇವಮಂದಿರ ವೆಸಿಯ ಅಮನ್ ಮಂದಿರ. ಅಬ್ಟು—ಎಡ್ಫುಗಳ ದೇಗುಲಗಳು, ಇವಲ್ಲದೆ ಇನ್ನೆಷ್ಟೋ ದೇವಾಲಯಗಳು....ಇವುಗಳ ವೆಚ್ಚಕ್ಕೆ ಹಣ ಎಲ್ಲಿಂದ ಬರ್‍ತದೆ? ಕಂದಾಯದಿಂದ, ತೆರಿಗೆಯಿಂದ....

"ರೊಟ್ಟಿ ತಟ್ಟಿ ತಿಂದಷ್ಟು ಬಿವವ ಕುಡಿದಷ್ಟು ಸುಲಭ ಅಲ್ಲ ರಾಜ್ಯ ಭಾರ—ಎಷ್ಟೊಂದು ಅಧಿಕಾರಿಗಳು! ಅಮಾತ್ಯ, ಮಹಾ ಸಲಹಾ ಮಂಡಳಿ—ಸರು, ಕಂದಾಯ ಅಧಿಕಾರಿಗಳು, ಸೇನಾನಿ, ಪ್ರಾಂತಪಾಲರು, ಕಣಜಾಧಿಕಾರಿ, ನಿರ್ಮಾಣ ಕಾರ್ಯಗಳ ಮುಖ್ಯಸ್ಥ, ವರ್ಷಕ್ಕೆ ಮೂರು ಬಾರಿ ದೇಶದ ಪರಿಸ್ಥಿತಿಯ ಬಗೆಗೆ ಹೇಳಿಕೆಗಳನ್ನು ಸಿದ್ಧಪಡಿಸುವ ವರದಿಗಾರರು, ನದಿಯ ಕಾವಲು ಭಟರು, ಕೆಲಸಗಾರರನ್ನೂ ಯೋಧರನ್ನೂ ಭರ್ತಿ ಮಾಡುವ ಅಧಿಕಾರಿಗಳು....ಇದು ಎಂಥ ಅದ್ಭುತ ವ್ಯವಸ್ಥೆ! ಈ ವ್ಯವಸ್ಥೆ ಸುಗಮವಾಗ ಬೇಕಾದರೆ ಎಷ್ಟು ಧನ ಧಾನ್ಯ ಬೇಡ! ಅರಮನೆಯ ಒಂದು ಔತಣಕ್ಕೆ ಸಾವಿರ ಬಾತುಕೋಳಿ ಸಾಲದು. ಗೊತ್ತಾ ನಿಮಗೆ?"

ಟೆಹುಟಿ ಪ್ರಚಂಡ ಎನಿಸಿತು ಗೇಬುಗೆ. ಅವನ ಮಾತಿನ ಪ್ರವಾಹದಲ್ಲಿ ತಾನು ತೇಲಿ ಹೋಗಿ ಎಲ್ಲೋ ಮೂಲೆಗುಂಪಾಗುತ್ತಿದ್ದೇನೆ ಎಂದು ಭಾಸ ವಾಯಿತು. ಟೆಹುಟಿ ಉಸಿರಿಗಾಗಿ ನಿಧಾನಿಸಿದುದನ್ನು ಕಂಡು, ಗೇಬು ಕೆಮ್ಮಿದ. ಟೆಹುಟಿ ತನ್ನೆಡೆ ನೋಡಿದಾಗ, ಏನೋ ಹೇಳಲು ಬಯಸಿದವನಂತೆ ತುಟಿಯಲುಗಿಸಿದ.

"ಏನದು?" ಎಂದ ಟೆಹುಟಿ, ಗಟ್ಟಿಯಾಗಿಯೇ....

ಗೇಬು ಮೆಲ್ಲನೆಂದ:

"ಕಂದಾಯ ಕ್ರಮವನ್ನು ವಿವರಿಸಿದರೆ ಚೆನ್ನಾಗಿರ್‍ತದೆ."

ಟೆಹುಟಿ ಗೊಣಗಿದ:

"ಮಾತಿನ ಮಧ್ಯೆ ತಲೆ ಹಾಕ್ತೀರಲ್ಲ! ನನಗೆ ಅಷ್ಟೂ ತಿಳೀದೆ....?"

ಗೇಬು ನಸು ನಕ್ಕು, "ಕ್ಷಮಿಸಿ" ಎಂದ.

ಟೆಹುಟಿ ಮತ್ತೆ ಸ್ವರವೇರಿಸಿ ನುಡಿಯತೊಡಗಿದ:

"ಪೆರೋನ ಕೃಪೆಯಿಂದ ಪ್ರತಿ ವರ್ಷವೂ ಆಯನ ಸಂಕ್ರಮಣ

ಬಿಂದುವಿನಲ್ಲಿ ರಾ ದಕ್ಷಿಣಕ್ಕೆ ಹೊರಳುವ ದಿನ, ಮುಂಜಾನೆಗೆ ತುಸು ಮುನ್ನ, ಸೊಥಿಸ್ ನಕ್ಷತ್ರ ಉದಿಸ್ತದೆ. ನೀಲ ನದಿಯಲ್ಲಿ ಪ್ರವಾಹ ಬರ್ತಿದೆ—ಅಂತ ಅದು ಸಾರ್ತದೆ. ಆ ದಿನದಿಂದ ಐಗುಪ್ತದಲ್ಲಿ ಹೊಸ ವರ್ಷ ಆರಂಭ. ನೀವೆಲ್ಲ ತಿಳಿದಿರೋ ಹಾಗೆ ಇದು ನದಿಯ ಎರಡೂ ದಂಡೆಗಳನ್ನು ನೂರು ದಿನ ನೀರಲ್ಲಿ ಅದ್ದೋ ಭಾರೀ ಪ್ರವಾಹ. ಹೊಲಗಳಲ್ಲಿ ಫಲವತ್ತಾದ ಮಣ್ಣನ್ನು ಬಿಟ್ಟು ಪ್ರವಾಹ ಇಳೀತದೆ. ಪ್ರವಾಹ ಎಷ್ಟು ಎತ್ತರ ಇತ್ತು ಅನ್ನೋದರ ಆಧಾರದ ಮೇಲೆ ಮುಂದಿನ ವರ್ಷದ ಫಸಲನ್ನೂ ರಾಜಬೊಕ್ಕಸಕ್ಕೆ ಮತ್ತು ದೇವ ಮಂದಿರಕ್ಕೆ ಸಲ್ಲಬೇಕಾದ ಕಂದಾಯವನ್ನು ಗೊತ್ತುಮಾಡ್ತೇವೆ. ಯಾವಾಗಲೂ ಪ್ರವಾಹದ ಸೌಲಭ್ಯ ಇರೋ ಭೂಮಿ, ಒಮ್ಮೊಮ್ಮೆ ಮಾತ್ರ ಪ್ರವಾಹದ ಸೌಲಭ್ಯ ದೊರೆಯೋ ಭೂಮಿ, ಪ್ರವಾಹದ ಸೌಲಭ್ಯ ಯಾವತ್ತೂ ಇರದ ಭೂಮಿ—ಅಂತ ಮೂರು ರೀತಿ ವಿಂಗಡಿಸ್ತೇವೆ. ಕಂದಾಯ ನಿಗದಿ ಮಾಡೋದು ಈ ಆಧಾರದ ಮೇಲೆ. ಧರ್ಮಾತ್ಮ ಒಸೈರಿಸ್ ಕೂಡ ಹೆಮ್ಮೆ ಪಡಬಹುದಾದ ವ್ಯವಸ್ಥೆ ಇದು. ಚಳಿಗಾಲದಲ್ಲಿ ಅಯನ ಬಿಂದು ತಲುಪಿದ ಮೇಲೆ ರಾ ಉತ್ತರಕ್ಕೆ ಹೊರಳ್ತಾನೆ. ಹಗಲು ದೀರ್ಘವಾಗುತ್ತದೆ. ಕುಯಿಲು ಆದ್ಮೇಲೆ ನಾವು ಬರ್ತೇವೆ."

ಅಷ್ಟು ಹೇಳಿ, "ಹ ಹ್ಹ ಹ್ಹ"— ಎಂದು ಟೆಹುಟಿ ನಕ್ಕ, ತಲೆಗೂದಲನ್ನು ಝಾಡಿಸಿ.

ಇಪ್ಯುವರ್ ಸಮಾಧಾನದ ನಿಟ್ಟುಸಿರು ಬಿಟ್ಟು, ಕೊನೆಯ ಪದಗಳನ್ನೂ ಬರೆದುಕೊಂಡು, ಸುಪ್ರಸನ್ನನಾಗಿ ತಲೆ ಎತ್ತಿದ. ಅವನ ಮುದ್ದಾದ ಚಿತ್ರಾಕ್ಷರಗಳಿಂದ ಪೆಪೈರಸ್‌ನ ಮೂರು ಹಾಳೆಗಳು ಆಗಲೇ ತುಂಬಿದ್ದುವು. ಎರಡು ವರ್ಷಗಳ ಹಿಂದೊಮ್ಮೆ ಟೆಹುಟಿ ಭೂಮಾಲಿಕರನ್ನು ಉದ್ದೇಶಿಸಿ ಮಾತನಾಡಿದ್ದ. ಅದು ಚುಟುಕಾಗಿತ್ತು. ಆದರೂ "ಕುಯಿಲು ಆದ್ಮೇಲೆ ನಾವು ಬರ್ತೇವೆ" ಎಂಬ ವಾಕ್ಯದಿಂದಲೇ ಅದು ಮುಕ್ತಾಯವಾಗಿತ್ತು. ಇಪ್ಯುವರ್ ಯೋಚಿಸಿದ : ಈ ಸನ್ನಿವೇಶ ಹೊಸದು; ಜನಸಾಮಾನ್ಯರು ರಾಜಗೃಹಕ್ಕೆ ಬಂದುದು ಇದೇ ಮೊದಲು; ಆ ಕಾರಣದಿಂದಲೆ ಟೆಹುಟಿ ದೀರ್ಘವಾಗಿ ಮಾತನಾಡಿರಬೇಕು.

ತನ್ನ ಮಾತು ಏನು ಪರಿಣಾಮ ಮಾಡಿತೆಂದು ತಿಳಿಯಲು ಟೆಹುಟಿ

ಭೂಮಾಲಿಕರತ್ತ ನೋಡಿದ. ಅವರು ಬೆಕ್ಕಸ ಬೆರಗಾಗಿ ಮೆಚ್ಚುಗೆಯ ನೋಟ ಬೀರುತ್ತ ಕುಳಿತಿದ್ದರು.

ಬಿಸಿಲಲ್ಲಿ ನಿಂತು ಬೇಸತ್ತಿದ್ದ ಜನಸಾಮಾನ್ಯರು, ಅಧಿಕಾರಿಯ ಮಾತು ಮುಗಿಯಿತು. ಮುಂದೇನು ? ಎಂದು ಮೆನೆಸ್‌ಟಾ ಸ್ನೊಫ್ರುರತ್ತ ನೋಡಿದರು. ಸ್ನೊಫ್ರು ಮೆನೆಸ್‌ಟಾನ ಕಿವಿಯಲ್ಲಿ ಏನನ್ನೋ ಉಸುರಿದ. ಮೆನೆಸ್‌ಟಾ ಸಮ್ಮತಿ ಸೂಚಕವಾಗಿ ತಲೆಯಾಡಿಸಿದ.

ಟೆಹುಟಿಯ ವರ್ತನೆ ತುಸು ವಿಚಿತ್ರವಾಗಿ ಕಂಡಿತ್ತು ಗೇಬುಗೆ. ರಾಜಧಾನಿಯಿಂದ ಪ್ರಾಂತಪಾಲನೆಂದು ನೇಮಕಗೊಂಡು ಆತ ನೀರಾನೆ ಪ್ರಾಂತಕ್ಕೆ ಬಂದು ಆಗಲೇ ಏಳು ವರ್ಷಗಳಾಗಿದ್ದುವು. ಮೊದಲನೆಯ ಮೂರು ವರ್ಷ ಕಂದಾಯ ವಸೂಲಿಗೆ ಬಂದವನು ಒಬ್ಬ ವೃದ್ಧ ಅಧಿಕಾರಿ. ಕಡಿಮೆ ಮಾತಿನವನು. ಅನಂತರ ಬರತೊಡಗಿದ ಟೆಹುಟಿ ಆ ವೃದ್ಧನಿಗಿಂತ ತೀರಾ ಭಿನ್ನ —ತೀರಾ.

ಗೇಬು ಅಂದುಕೊಂಡ : ಇವನು ಒಂದು ದಿನ ಅಮಾತ್ಯನಾಗೋದರಲ್ಲಿ ಸಂದೇಹವೂ ಇಲ್ಲ.

" ಗೇಬು "

ಬೆಚ್ಚಿಬಿದ್ದ ಗೇಬು ತನ್ನನ್ನು ಹೆಸರು ಹಿಡಿದು ಕರೆದ ಟೆಹುಟಿಯತ್ತ ನೋಡಿದ.

" ಹೇಳೋಣವಾಗಲಿ."

" ನಮ್ಮ ಭೂಮಾಲಿಕ ಮಿತ್ರರಿಂದ ಸಂದಾಯವಾಗಬೇಕಾದ ಕಂದಾಯ ಎಷ್ಟು ಅನ್ನೋದು ದಾಖಲೆಗಳಲ್ಲಿದೆ. ಲಿಪಿಕಾರ ಬರೆದಿಟ್ಟದ್ದಾನೆ. (ಸೆತೆಕ್‌ನಖ್ತ್ ಮತ್ತಿತರರ ಕಡೆ ತಿರುಗಿ) ನಿಮ್ಮ ಆಕ್ಷೇಪಣೆಗಳು ಏನಾದರೂ ಇವೆಯೋ ?"

ಸೆತೆಕ್‌ನಖ್ತ್ ಎದ್ದು ನಿಂತು ಹೇಳಿದ :

" ಪೆರೋನ ಆಯುರಾರೋಗ್ಯ ವರ್ಧಿಸಲಿ ! ನನ್ನ ಆಕ್ಷೇಪಣೆಯೇನೂ ಇಲ್ಲ ಮಹಾಶಯ. ಇನ್ನು ಸ್ವಲ್ಪ ಹೊತ್ತಿನಲ್ಲೇ ರಾಜಗೃಹದ ಕಣಜಕ್ಕೆ ಕಂದಾಯ ತಲುಪಿಸ್ತೇನೆ."

ಸೆತೆಕ್‌ನಖ್ತ್‌ಗೆ ಕುಳಿತುಕೊಳ್ಳುವಂತೆ ಸನ್ನೆ ಮಾಡಿ, ಟೆಹುಟಿ ಕೇಳಿದ :

" ಇತರ ಮಿತ್ರರ ಆಕ್ಷೇಪಣೆಗಳು ?"

" ಇಲ್ಲ, ಇಲ್ಲ," ಎಂದರು ಒಬ್ಬಿಬ್ಬರು. " ಯಾರದೂ ಇಲ್ಲ," ಎಂದರು ಯಾರೋ.

ಸಂತೋಷದಿಂದ ಬೀಗಿ ಟೆಹುಟಿ ಅಂದ :

" ವಿಸ್ಮಯದ ಸಂಗತಿ—ಇವತ್ತು ಇಲ್ಲಿಗೆ ಜನಸಾಮಾನ್ಯರನ್ನೂ ಗೇಬು ಕರೆಸಿದ್ದಾರೆ !"

ಗೇಬು ತಲೆಯಲ್ಲಾಡಿಸಿ, ತುಸು ಕಹಿಯಾಗಿ ನುಡಿದ :

" ನೀವು ತಪ್ಪು ತಿಳಕೊಂಡಿದ್ದೀರಿ. ನಾನು ಕರೆಸಿಲ್ಲ; ಅವರೇ ಬಂದಿದ್ದಾರೆ."

ಟೆಹುಟಿ ನಕ್ಕ.

" ರಾಜಧಾನಿಯಿಂದ ಬಂದಿರೋ ನನ್ನನ್ನು ನೋಡೋಕೆ ಇವರೆಲ್ಲ ತಾವಾಗಿಯೇ ಆಗಮಿಸಿದ್ದಾರೆ ಅಂತ ಇಟ್ಕೊಳ್ಳೋಣ. ವಸೂಲಿ ಯಶಸ್ವಿಯಾಗೋದು ನನಗೆ ಮುಖ್ಯ. ಸ್ವತಃ ಸೆತ್‌ನ ಜೊತೆ ಬೇಕಾದರೂ ನಾನು ಮಾತಾಡ್ತೇನೆ. ಗೇಬು, ಅವರಿಗೆ ಏನು ಬೇಕಂತೆ ?"

ಸಮಾಲೋಚನೆಗೆಂದು ಗುಂಪಿನ ನಡುವಿನ ಎರಡು ತಲೆಗಳು ಪರಸ್ಪರ ಸಮೀಪಿಸಿದ್ದನ್ನು ಟೆಹುಟಿಯ ಸೂಕ್ಷ್ಮದೃಷ್ಟಿ ಗಮನಿಸಿತ್ತು.

ಗೇಬುಗೆ ಅದು ಕಾಣಿಸಲಿಲ್ಲ. ಆದರೆ, ಬಂದಿದ್ದವರಲ್ಲಿ ಕೆಲವರ ಪರಿಚಯ ಅವನಿಗಿತ್ತು. ತೂಕದ ಮಾತಿನ ರೈತ ಸೆಬೆಕ್ಖು, ಮರದ ಗೊಂಬೆಗಳನ್ನು ಕೊರೆಯುವ ಕುಶಲಕರ್ಮಿ ಸ್ನೊಫ್ರು, ಅಂಬಿಗ ಬಟಾ....

ಗಂಭೀರವಾಗಿ ಗೇಬು ಕೇಳಿದ :

" ಹೇಳೋದು ಏನಾದರೂ ಇದೆಯಾ ಸೆಬೆಕ್ಖು ?"

ತಕ್ಷಣ ಉತ್ತರ ಬರಲಿಲ್ಲವೆಂದು ಗೇಬುಗೆ ಆಶ್ಚರ್ಯ. ಅವನು ನೋಡುತ್ತಿದ್ದಂತೆಯೇ ಸೆಬೆಕ್ಖು ಸ್ನೊಫ್ರುವಿನ ಬಳಿ ಸಾರಿದ. ಕೆಲವು ತಲೆಗಳು ಒಂದನ್ನೊಂದು ಸಮೀಪಿಸಿದುವು.

ಸ್ನೊಫ್ರುವಿನ ಧ್ವನಿ ಕೇಳಿಸಿತು :

" ನಮ್ಮೆಲ್ಲರ ಪರವಾಗಿ ಮೆನೆಪ್‌ಟಾ ಮಾತಾಡ್ತಾನೆ."

ಮೆನೆಪ್‌ಟಾ. ಅದು ಹೊಸ ಹೆಸರು, ಗೇಬುಗೆ. ಅವನೆಂದ :

" ಯಾರು ಮೆನೆಪ್‌ಟಾ ? ಮುಂದೆ ಬರಲಿ."

ಮುಂದೆ ಬಂದವನು ಸಂಭಾವಿತನಂತೆ ಕಂಡ. ಮುಂದೆ ಅಂದರೆ ನಾಲ್ಕು ಹೆಜ್ಜೆ, ಅಷ್ಟೆ. ನಿಂತುದು ಅಂಗಳದಲ್ಲೇ.

ತಾನು ಮಾತನಾಡುತ್ತಿದ್ದಾಗ ಜನರೆಡೆಗೆ ಆಗಾಗ್ಗೆ ನೋಡುತ್ತಿದ್ದ ಟೆಹುಟಿ ಈ ವ್ಯಕ್ತಿಯೇ ಆ ಜನರ ಮುಖಂಡನಿರಲೂ ಬಹುದು ಎಂದು ಊಹಿಸಿದ್ದ. ಊಹೆ ನಿಜವಾಗಿತ್ತು. ಅವನು ನುಡಿದ :

" ಅಲ್ಲೇ ಯಾಕೆ ನಿಂತೆ ? ಒಳಗೆ ಬಾ."

ಸ್ನೊಫ್ರು, ಬಟಾ, ಸೆಬೆಕ್ಖು ಎಲ್ಲರೂ "ಒಳಗೆ ಹೋಗು ಮೆನೆಪ್‌ಟಾ," ಎಂದರು.

ಮೆನೆಪ್‌ಟಾ ನಸುನಕ್ಕು ಸಭಾಮಂದಿರವನ್ನು ಪ್ರವೇಶಿಸಿ, ವೇದಿಕೆಗೆ ನಮಿಸಿ, ಹೊರಗಿನ ಸಂಗಡಿಗರೂ ಒಳಗಿನ ಅಧಿಕಾರಿಗಳೂ ತನಗೆ ಕಾಣಿಸುವ ಕಡೆ ನಿಂತ.

* * * *

ಮೆನೆಪ್‌ಟಾ ಬೆಳಗ್ಗೆ ಎದ್ದವನೇ ನೆಫಿಸ್‌ಗೆ ಹೇಳಿದ್ದ :

" ಕಂದಾಯ ಅಧಿಕಾರಿಗೆ ಮನವಿ ಸಲ್ಲಿಸೋದಕ್ಕೆ ಇವತ್ತು ರಾಜಗೃಹಕ್ಕೆ ಹೋಗ್ಬೇಕು. ನಾನೇ ಮುಂದೆ ಇರ್ಬೇಕಂತೆ. 'ನೀನು ಯೋಚಿಸಿ ಮಾತಾಡ್ತೀಯಾ, ಚೆನ್ನಾಗಿ ವಾದಿಸ್ತೀಯಾ' ಅಂದ ಸ್ನೊಫ್ರು."

ನೆಫಿಸ್ ಸುಮ್ಮನಿದ್ದಳು.

ತಂದೆ ಹೇಳಿದುದನ್ನು ಕೇಳಿಸಿಕೊಂಡ ರಾಮೆರಿಪ್‌ಟಾ, " ನಾನೂ ಬರ್ತೀನೆ ಅಪ್ಪ," ಎಂದ.

" ನಾನೇನು ತಪ್ಪು ಮಾಡಿದ್ದೇನೆ ?"

—ಗೊಗ್ಗರ ಗಂಟಲಲ್ಲಿ ನೆಫಿಸ್ ಕೇಳಿದಳು.

ಮೆನೆಪ್‌ಟಾ ರಮಿಸುವ ಧ್ವನಿಯಲ್ಲಿ ಅಂದ :

" ಹೆಂಗಸರು ಯಾರೂ ರಾಜಗೃಹಕ್ಕೆ ಬರೋದು ಬೇಡ ಅನಿಸ್ತದೆ. ಕಂದಾಯ ವಸೂಲಿ ನಡೀತಿರುವಾಗ ಮನೆಗೆ ಬೀಗ ಹಾಕ್ಬಾರ್ದು."

ನೆಫಿಸ್ ಮುಖ ಪಕ್ಕಕ್ಕೆ ಸರಿಸಿ ಬಿಕ್ಕಿದಳು. ರಾಮೆರಿಪ್‌ಟಾ ಅವಳ ಮಗ್ಗುಲಿಗೆ ಧಾವಿಸಿದ.

" ಏನಾಯ್ತಮ್ಮ ?"

" ನೆಫಿಸ್...."

—ಮೆನೆಪ್‌ಟಾ ಕರೆದ.

ಜಿನುಗಿದ ಕಂಬನಿಯನ್ನು ನಡುಬೆರಳಿಂದ ಒರೆಸಿ ನೆಫಿಸ್ ಅಂದಳು :

" ಚಿಕ್ಕಪ್ಪನ ನೆನಪಾಯ್ತು."

ಮಡದಿ ಹುಡುಗಿಯಾಗಿದ್ದಾಗ ನಡೆದದ್ದು. ಅವನ ಪ್ರಜ್ಞೆಯಲ್ಲಿ ಬೆರೆತಿತ್ತು ಕೇಳಿ ತಿಳಿದಿದ್ದ ಆ ದಾರುಣ ಕಥೆ.

ಸ್ವಲ್ಪ ಸಮಯದ ಹಿಂದೆ ರಾಮೆರಿಪ್‌ಟಾನೂ ತಾಯಿಯ ಬಾಯಿಯಿಂದ ಅದನ್ನು ಕೇಳಿದ್ದ.

* * * *

ಆಗ ನೆಫಿಸ್ ಏಳುವರ್ಷದ ಹುಡುಗಿ. ಕರುಳು ಬೇನೆಗೆ ತುತ್ತಾಗಿ ತಾಯಿ ತೀರಿಕೊಂಡಳು. ಚಿಕ್ಕಮ್ಮ ಬಂದು, " ನಾಲ್ಕು ದಿನ ನಮ್ಮಲ್ಲಿರಲಿ " ಎಂದು ಹೇಳಿ, ನೆಫಿಸ್‌ಳನ್ನು ಕರೆದುಕೊಂಡು ಹೋದಳು.

ಆ ಚಿಕ್ಕಮ್ಮನಿಗೆ ಒಂದೊಂದು ವರ್ಷ ಅಂತರದ ನಾಲ್ವರು ಮಕ್ಕಳು. ಎರಡು ಗಂಡು, ಎರಡು ಹೆಣ್ಣು. ಅವರೆಲ್ಲ ನೆಫಿಸ್‌ಗಿಂತ ಚಿಕ್ಕವರು. ಅವರೊಡನೆ ಆಟ ಆಡುತ್ತ ತನ್ನ ತಾಯಿಯ ಸಾವಿನ ಶೋಕವನ್ನು ನೆಫಿಸ್ ಮರೆತಳು.

ಒಂದು ವಾರ ಆಗಿತ್ತಷ್ಟೆ. ಕಂದಾಯ ವಸೂಲಿಯ ಆರು ಜನ ಕರಿಯ ಭಟರು ಅಲ್ಲಿಗೆ ಬಂದರು. ಮುಖ್ಯ ಪಟ್ಟಣದಲ್ಲಿ ತಮ್ಮ ಕೆಲಸ ಮುಗಿಸಿ ಹಳ್ಳಿಗಳ ಕಡೆ ಅವರು ವಸೂಲಿಗೆ ಹೊರಟಿದ್ದರು. ಅಧಿಕಾರಿ ಇರಲಿಲ್ಲ. ಭಟರು ಮಾತ್ರ.

ತನ್ನ ಗುಡಿಸಲಿಗೆ ಅವರು ಬಂದಾಗ ನೆಫಿಸಳ ಚಿಕ್ಕಪ್ಪ ದೈನ್ಯದಿಂದ ಪ್ರಾರ್ಥಿಸಿದ :

" ಫೆರೋನ ಆಯುರಾರೋಗ್ಯ ಹೆಚ್ಚಲಿ ! ಈ ವರ್ಷ ನನ್ನಲ್ಲೇನೂ ಇಲ್ಲ...."

ಒಬ್ಬ ಭಟ ಅಣಕಿಸಿದ.

" ನನ್ನಲ್ಲೇನೂ ಇಲ್ಲ ! ಕಳ್ಳ ನನ್ಮಕ್ಳು. ಈ ಪಲ್ಲವಿ ನಿಮಗೆ ರೂಢಿಯಾಗಿದೆ."

ಇನ್ನೊಬ್ಬ ಭಟ ನೀರಾನೆ ತೊಗಲಿನ ಚಾವಟಿಯಿಂದ ಚಿಕ್ಕಪ್ಪನಿಗೆ ಚುರುಕು ಮುಟ್ಟಿಸಿದ. ಚಿಮ್ಮಿದ ರಕ್ತದ ವೃತ್ತ ಬೆನ್ನನ್ನೂ ಎದೆಯನ್ನೂ ಬಳಸಿತು. ಒಬ್ಬನ ಕೈಯಲ್ಲಿ ಹಗ್ಗವಿತ್ತು. ಉಳಿದವರ ಕೈಗಳಲ್ಲಿ ಸೋಗೆ ಕಿತ್ತ ತಾಳೆಯ ಕೊರಡುಗಳು.

" ಆಣೆ ಮಾಡಿ ಹೇಳ್ತೀನೆ....ಇನ್ನೊಂದು ವಾರಕ್ಕೆ ಸಾಲುವಷ್ಟು ಕಾಳೂ ನನ್ನಲ್ಲಿಲ್ಲ."

"ಕುಯ್ಲು ಮುಗಿದು ಒಂದು ತಿಂಗಳೂ ಆಗಿಲ್ಲ. ಎಲ್ಲಿ ಬಚ್ಚಿಟ್ಟೆ ?"

" ಹೊಲದಲ್ಲೇ ಫಸಲಿಗೆ ಹುಳ ಹಿಡೀತು. ಅರ್ಧ ಕೆಟ್ಟುಹೋಯ್ತು. ಕಾಡು ಹಂದಿಗಳ ಪಾಲಾಯ್ತು ಒಂದಷ್ಟು. ಉಳಿದದ್ದರಲ್ಲಿ ಇಲಿಗಳೂ ಮಿಡತೆ ಗಳೂ ಸ್ವಲ್ಪ ಮುಕ್ಕಿದ್ವು."

" ಹಕ್ಕಿಗಳು ಬರ್ಲಿಲ್ವ ?"

" ಬಂದ್ವು ನಮ್ಮಪ್ಪ....ಚೂರು ಪಾರು ಮನೆಗೆ ಬರೋದಕ್ಮುಂಚೆ ಕಳ್ಳರೂ ಕೈಹಾಕಿದ್ರು."

ಚಾವಟಿ ಮತ್ತೆ ಸುಂಯ್‌ಗುಟ್ಟಿತು. ಗುಡಿಸಲಿನ ಮುಂದಿತ್ತು ನೀರು ಹರಿಯುತ್ತಿದ್ದ ಕಿರಿಯ ನಾಲೆ. ನೆಫಿಸಳ ಚಿಕ್ಕಪ್ಪನನ್ನು ದರದರನೆ ಎಳೆದು ಜೋರಲು ಕೆಡವಿದರು. ಮುಖವನ್ನು ನಾಲೆಯಲ್ಲಿ ಅದ್ದಿದರು.

ಇಬ್ಬರು ಗುಡಿಸಲಿನ ಒಳಗಿದ್ದುದನ್ನೆಲ್ಲ ಜಾಲಾಡಿದರು. ಹೆದರಿ ಮೂಲೆ ಸೇರಿ ಅಳುತ್ತ ನಿಂತಿದ್ದ ನೆಫಿಸಳನ್ನೂ ಚಿಕ್ಕ ಮಕ್ಕಳನ್ನೂ ಗದರಿಸಿದರು. ಅಂಗೈಯಿಂದ ಏಟುಕೊಟ್ಟರು, ಮುಷ್ಟಿಗಳಿಂದ ಗುದ್ದಿದರು.

" ಎಲ್ಲಿ ನಿಮ್ಮಮ್ಮ ?"

" ಸತ್ಹೋದ್ಲು," ಎಂದಳು ನೆಫಿಸ್.

ಅಷ್ಟರಲ್ಲಿ ಓಡಿ ಬಂದಳು, ಭೂಮಾಲಿಕರ ಮನೆಗೆ ದುಡಿಯಲು ಹೋಗಿದ್ದ ಚಿಕ್ಕಮ್ಮ. ಆಕೆ ಧ್ವನಿ ತೆಗೆದು ಅತ್ತಳು.

'ಸತ್ಹೋದ್ಲು' ಎಂದಿದ್ದಳಲ್ಲ ಹುಡುಗಿ ? ಆ ಭಟನಿಗೆ ಅವಳ ಮೇಲೆ ರೋಷ.

" ನಿಮ್ಮಮ್ಮ ಸತ್ಹೋದ್ಲು ಅಂತ ಸುಳ್ಳು ಹೇಳಿದಿಯಾ ?"

ಆತ ಹುಡುಗಿಯ ತುರುಬಿಗೆ ಕೈ ಹಾಕಿ ಎಳೆದ.

" ಅದು ತಬ್ಬಲಿ ಮಗು. ನನ್ನ ಅಕ್ಕಂದು. ಬಿಟ್ಬಿಡಿ," ಎನ್ನುತ್ತ ಚಿಕ್ಕಮ್ಮ ತನ್ನ ಗಂಡನ ಬಳಿಗೆ ಧಾವಿಸಿದಳು.

ಭಟರು ಅವಳ ರಟ್ಟೆ ಹಿಡಿದು ತಿರುವಿದರು.

" ಎಲ್ಲಿಟ್ಟಿದೀಯಾ ಧಾನ್ಯ ?"

" ಇಲ್ಲಪೋ....ಈ ವರ್ಷ ಇಲ್ಲಪೋ...."

ಅವಳನ್ನೂ ಕೆಡವಿದರು. ಗಂಡನನ್ನೂ ಹೆಂಡತಿಯನ್ನೂ ಒಟ್ಟಿಗೆ ಹಗ್ಗ ದಿಂದ ಬಿಗಿದರು. ಕೊರಡಿನಿಂದ ಹೊಡೆದರು, ತುಳಿದರು.

ನಡು ಆಕಾಶದಲ್ಲಿತ್ತು ರಾನ ರಥ. ಚಿಕ್ಕಮ್ಮನ ಹಾಗೂ ಮಕ್ಕಳ ಆಕ್ರಂದನ ಆಕಾಶಕ್ಕೆ ಏರುತ್ತಿತ್ತು.

ಇದ್ದಕ್ಕಿದ್ದಂತೆ ಒಬ್ಬ ಭಟನೆಂದ :

" ಇವನು ಸತ್ತ."

ತೊಡೆಯನ್ನು ತುಳಿದು ನೂಕಿ ಅಂದ :

" ಜೀವ ಇಲ್ಲ."

" ನಡೀರಿ," ಎಂದ ಇನ್ನೊಬ್ಬ.

ಎಲ್ಲಿಯೂ ಕಣ್ಣಿಗೆ ಕಾಣಿಸದಿದ್ದ ರೈತರನ್ನು ಹುಡುಕಿಕೊಂಡು ಅವರು ಹೊರಟರು. ಚಿಕ್ಕಪ್ಪನಿಗೆ ಏನಾಯಿತೆಂದು ಅರಿತವಳು ನೆಫಿಸ್ ಮಾತ್ರ. ಆದರೆ ಚಿಕ್ಕಮ್ಮ ? ಆಕೆ ಅಳುತ್ತಿಲ್ಲವಲ್ಲ ? ಚಿಕ್ಕಮ್ಮನೂ ?

"ಅಮ್ಮಾ ! ಅಮ್ಮಾ !" ಎಂದು ಕಿರುಚಿದಳು ನೆಫಿಸ್.

ಚಿಕ್ಕ ಮಕ್ಕಳೂ ಕೂಗಿದುವು :

" ಅಮ್ಮಾ ! ಅಮ್ಮಾ !"

ಕೆಲ ನಿಮಿಷಗಳ ಬಳಿಕ ಚಿಕ್ಕಮ್ಮ ಕಣ್ಣು ತೆರೆದಳು. ಪ್ರಯಾಸಪಟ್ಟು ಎದ್ದು ಕುಳಿತಳು. ಹತ್ತಿರ ಬಂದ ಮಕ್ಕಳನ್ನು ತಬ್ಬಿಕೊಂಡು, ಗಂಡನ ಶವ ವನ್ನೇ ದಿಟ್ಟಿಸುತ್ತ ಗೊಂಬೆಯಂತಾದಳು.

* * * *

ಚಿಕ್ಕಪ್ಪನ ನೆನಪನ್ನು ಮನಸ್ಸಿನ ಮೂಲೆಗೆ ತಳ್ಳಿ, ರಾಮೆರಿಪ್‌ಟಾನ ಮುಂಗುರುಳು ನೇವರಿಸುತ್ತ ನೆಫಿಸ್ ಅಂದಳು :

" ರೊಟ್ಟಿ ತಟ್ತೀನೆ. ತಿಂದು ಇಬ್ಬರೂ ಹೋಗ್ಬನ್ನಿ."

* * * *

ಎಲ್ಲರ ದೃಷ್ಟಿಗಳೂ ತನ್ನ ತಂದೆಯ ಮೇಲೆ ನೆಟ್ಟಿದ್ದುವೆಂದು ರಾಮೆರಿಪ್‌ಟಾನ ಎಳೆಯ ಹೃದಯ ಹಿಗ್ಗಿತು. ಅವನೂ ಅವನ ಓರಗೆಯವರೂ ನುಸುಳಿಕೊಂಡು ಗುಂಪಿನ ಮುಂದೆ ಸಾಲಾಗಿ ನಿಂತರು.

ಮೆನೆಪ್‌ಟಾ ಮಾತು ಆರಂಭಿಸುವುದನ್ನೇ ಎಲ್ಲರೂ ಇದಿರು ನೋಡಿದರು. ಅಂಗಳದಲ್ಲಿದ್ದವರಿಗೆ ಕಸಿವಿಸಿ, ತವಕ. ಸಭಾಮಂದಿರದಲ್ಲಿ ಇದ್ದವರಿಗೆ ಅದಮ್ಯ ಕುತೂಹಲ.

ಒಗೆದ ಶುಭ್ರವಾದ ನಡುಬಟ್ಟೆ. ಅದರ ಮೇಲೆ ಸೊಂಟಪಟ್ಟಿ. ನೀಲಿ ವರ್ಣದ ಕವಡೆಗಳ ಸರ ಕೊರಳಲ್ಲಿ. ಬೆರಳಲ್ಲಿ ಬೆಳ್ಳಿಯ ಉಂಗುರ. ಮೀಸೆ ಗಡ್ಡ ಕಂಡೂ ಕಾಣಿಸದಂತೆ ನಯವಾಗಿದ್ದ ಮುಖ.

ಮೆನೆಪ್‌ಟಾ ಶಾಂತನಾಗಿದ್ದರೂ ಮಾತು ಹೇಗೆ ಆರಂಭಿಸಬೇಕೆಂಬು ದನ್ನು ಅನೇಕ ಸಲ ಯೋಚಿಸಿದ್ದರೂ ಎದೆಗುಂಡಿಗೆ ಎರಡು ಕ್ಷಣ ಡವಡವನೆ ಹೊಡೆದುಕೊಂಡಿತು. ಆಳವಾಗಿ ಉಸಿರೆಳೆದು ನಿಧಾನವಾಗಿ ಅದನ್ನು ಬಿಟ್ಟ. ಅವನು ಮುಗುಳ್ನಕ್ಕ.

"ಪೆರೋ ಪ್ರಭುವಿನ ಆಯುರಾರೋಗ್ಯ ಹೆಚ್ಚಲಿ! ಬಡ ರೈತರು, ನೆಯ್ಗೆಯವರು, ಕಲ್ಲು–ಗಾರೆ ಕೆಲಸದವರು, ಮರಗೆಲಸದವರು, ಇನ್ನಿತರ ಬೇರೆ ಬೇರೆ ಕಸಬುದಾರರು ಇವರೆಲ್ಲರ ಪರವಾಗಿ ದೇಶದ ಕಂದಾಯ ಅಧಿಕಾರಿಯ ಸನ್ನಿಧಿಯಲ್ಲಿ ಮನವಿ ಸಲ್ಲಿಸೋದಕ್ಕೆ ನಿಂತಿದ್ದೇನೆ...."

ಮೆನೆಪ್‌ಟಾ ತಲೆಯನ್ನೊಮ್ಮೆ ತುಸು ಬಾಗಿಸಿದ. ಮತ್ತೆ ನೇರ ನಿಂತು ನೆರೆದವರನ್ನು ನೋಡಿದ. ಧ್ವನಿ ಏರಿಸದೆ ಮಾತನಾಡುವ ವೈಖರಿ–ದಿಟ್ಟತನ ಕಂಡು, ಟೆಹುಟಿಗೆ ಆಶ್ಚರ್ಯ. ಬರೆದುಕೊಳ್ಳಬೇಕೆ ? ಎಂದು ಕೇಳುವವನಂತೆ ಇಪ್ಯುವರ್ ವೇದಿಕೆಯತ್ತ ನೋಡುತ್ತಿದ್ದ. ಅಮಾತ್ಯರಿಗೂ ಪೆರೋಗೂ ತೋರಿಸಲು ಒಳ್ಳೆಯ ದಾಖಲೆಯಾದೀತು ಎನಿಸಿತು ಟೆಹುಟಿಗೆ. ಆತ ಲಿಪಿ ಕಾರನಿಗೆ, ಬರೆದುಕೋ ಎಂದು ಸನ್ನೆಮಾಡಿದ.

ಇಪ್ಯುವರ್‌ನನ್ನೊಮ್ಮೆ ದಿಟ್ಟಿಸಿ ಮೆನೆಪ್‌ಟಾ ಮುಂದುವರಿದ :

"ಧರ್ಮಾತ್ಮನಾದ ಒಸ್ಸೆರಿಸ್ ದೇವತೆಯ ಅಂತಿಮಯಾತ್ರೆಯ ದರ್ಶನ ದಿಂದ ಧನ್ಯರಾಗಿ ನಾವು ನಾಲ್ವತ್ತು ಜನ ಅಬ್ಯುವಿನಿಂದ ನಿನ್ನೆ ರಾತ್ರೆ ವಾಪಸಾದ್ವಿ. 'ದೇವತೆಗಳು ಸಂತೃಪ್ತರಾಗಿದ್ದಾರೆ ; ನಗೆಯಲ್ಲಿ ಅಚ್ಚರಿಯಲ್ಲಿ

ಬದುಕು ಸಾಗಿದೆ'—ಅಂದ್ಕೊಳ್ತಾ ಬಂದ್ವಿ. ಮಾನ್ಯ ಅಧಿಕಾರಿಯವರು ನಮ್ಮೂರು ಮುಟ್ಟಿದ್ದು ನಮಗೆ ಗೊತ್ತೇ ಇರ್ಲಿಲ್ಲ. ಕಂದಾಯ ವಸೂಲಿ ಅಂದರೆ ಬಡಜನತೆಗೆ ಭಯ. 'ನಮ್ಮ ಸಂಕಟ ತೋಡ್ಕೋಬೇಕು' ಅಂದ ಸ್ಕೊಪ್ರು. ತಂದೆ ಪೆರೋ ಕಳಿಸಿರೋ ಅಧಿಕಾರಿ, ನೀವಲ್ಲದೆ ಮಕ್ಕಳ ಸಂಕಟ ವನ್ನು ತಂದೆಗೆ ಇನ್ನು ಯಾರು ತಾನೆ ತಿಳಿಸ್ತಾರೆ ?...."

ಟೆಹುಟೆಯ ಹುಬ್ಬುಗಳು ಒಂದನ್ನೊಂದು ಸಮಿಾಪಿಸಿದುವು. ಸಿಟ್ಟನಿಂದ ಆತನೆಂದ :

"ಚುಟುಕು ! ಚುಟುಕು ! ಬಾಯಿಯಿಂದ ಹೊರಬಿದ್ದ ಮಾತು ಪಂಜರ ಬಿಟ್ಟ ಕುರುಡು ಹಕ್ಕಿಯ ಹಾಗೆ; ಯಾವುದಕ್ಕಾದರೂ ಬಡಿದು ರೆಕ್ಕೆ ಮುರಿದೀತು. ಎಚ್ಚರ !"

"ಕುರುಡು ಹಕ್ಕಿಗೆ ನೋಡೋ ಆಸೆ, ಹಾರೋ ಆಸೆ, ಮಹಾಶಯ. ತಲೆ ತಲಾಂತರಗಳ ಗೋಳಿನ ಕಥೆ. ತೀರಾ ಚುಟುಕಾಗೋದು ಹ್ಯಾಗೆ ಸಾಧ್ಯ ? ಆದರೂ ಪ್ರಯತ್ನಿಸುತ್ತೇನೆ. ನಿಮ್ಮ ಭೋಜನಕ್ಕೆ ವಿರಾಮಕ್ಕೆ ಅಡ್ಡಿಯಾಗಬಾರ್ದು...."

"ಭೋಜನ ? ವಿರಾಮ ? ಅಡ್ಡಿಯಾಗೋದು ರಾಜಕಾರ್ಯಕ್ಕೆ —ಕಂದಾಯ ವಸೂಲಿಗೆ !"

"ಆ ಪಾಪಕಾರ್ಯ ನಾವು ಮಾಡೇವೆ ? ದೇವರು ಕ್ಷಮಿಸಿಯಾನೆ ನಮ್ಮನ್ನು ?"

ಗೇಬು ಕಾತರನಾಗಿ ಟೆಹುಟೆಯತ್ತ ನೋಡಿದ. ಕೋಪದಿಂದ ಅವನ ಮುಖ ಕೆಂಪಡರಿದುದನ್ನು ಕಂಡ.

"ನಿಲ್ಲಿಸ್ಬೇಡ. ಹೇಳಿ ಮುಗಿಸು !"

"ದಾಖಲೆಯಾಗಿರೋ ಹಾಗೆ ಕಳೆದ ವರ್ಷ 'ಒಳ್ಳೆಯ ನೀಲ'. ಆದರೇ ನಾಯ್ತು ? ಹಗ್ಗ ಎಳೆಯುವವರು ಎಳೆದರು. ಮೋಜಣಿದಾರರು ನೆಲ ಅಳೆದರು. ನಾಲೆಗಳ ದುರಸ್ತಿ ಮಾತ್ರ ಆಗಲಿಲ್ಲ. ಕೆರೆಗಳ ಹೂಳು ತೆಗೆದು ನೀರು ಸಂಗ್ರಹಿಸೋ ಕೆಲಸ ನಡೀಲಿಲ್ಲ. ಇದು ಬಡ ಪ್ರಜೆಗಳಿಂದ ಆಗು ವಂಥದೆ ? ಆಳುವವರಲ್ಲವೆ ಮಾಡಬೇಕಾದ್ದು ? ನಾವು ಷಾಡೂಫ್ ನಡೆಸೇವು. ನದಿಯಿಂದ ನೀರೆತ್ತಿ ಬಾವಿಗೆ ಸುರಿದೇವು. ಆದರೆ ಈ ನೀರು

ಎಷ್ಟು ಹೊಲಗಳಿಗೆ ಸಾಕು ? ಇಷ್ಟಕ್ಕೇ ಮುಗೀಲಿಲ್ಲ. ನಮ್ಮ ಕಷ್ಟ. ಮುದಿ ಹೋರಿಗೆ ಬದಲು ಹೊಸ ಹೋರಿ ತರ್ಬೇಕು. ನೇಗಿಲಿಗೆ ಬೇರೆ ಮೊನೆ ಹಾಕ್ಬೇಕು. ಇದಕ್ಕೆ ಖರ್ಚಾಗೋದಿಲ್ಲವಾ ? ಧಾನ್ಯ ಬೇಡವಾ ? ಇನ್ನು ಇಲಿ, ಹೆಗ್ಗಣ, ಕಾಡುಹಂದಿ, ಹುಳಹುಪ್ಪಟೆ, ಮಿಡತೆ, ಹಕ್ಕಿಗಳ ಕಾಟದ ವಿಷಯ ಎಷ್ಟು ಹೇಳಿದರೂ ಸ್ವಲ್ಪವೇ. ಕಳ್ಳರೂ ಬರ್ತಾರೆ. ರಾಜಕಣಜಕ್ಕೆ ಹಿಂದೆ ಹತ್ತರಲ್ಲಿ ಒಂದಂಶ ಸಲ್ಲಿಸ್ತಿದ್ವಿ. ಈಗ ಕಂದಾಯ ಇಮ್ಮಡಿಯಾಗಿದೆ. ಹತ್ತರಲ್ಲಿ ಒಂದಂಶ ದೇವಮಂದಿರಕ್ಕೂ ಸಲ್ಲಬೇಕಾಗಿದೆ. ಕೈಯಲ್ಲಿದ್ದ ಜೂರು ಪಾರು ಕಾಳು ಮುಗಿದಾಗ ನಾವು ಏನನ್ನು ತಿನ್ಬೇಕು ? ಆಗ ಪೆಪೈರಸ್ ದಂಟಿನ ಬುಡಭಾಗವೇ ನಮ್ಮ ಆಹಾರ. ಇಲ್ಲವೆ ನೀರು ಗಿಡಗಳ ಬೇರುಗಳು, ಕಡ್ಡಿಗಳು, ಹಸಿಯೋ ಬೇಯಿಸಿಯೋ ಸುಟ್ಟೋ ತಿನ್ಬೇಕು."

ನಡುವೆ ಬಾಯಿ ಹಾಕಿ ಟೆಹುಟಿ ಕಿರಿಚಿದ :

"ಪ್ರವಾಹ ಕಾಲದಲ್ಲಿ—ಬಿತ್ತನೆಗ್ಮುಂಚೆ—ನಿಮಗೆಲ್ಲಾ ಕೆಲಸ ಕೊಡೋದಿಲ್ಲವಾ ? ಕಲ್ಲು ಒಡೆಯೋದು ಕಲ್ಲು ಸಾಗಿಸೋದು ಕಟ್ಟೋದು ಕುಟ್ಟೋದು....ಸಹಸ್ರ ಸಹಸ್ರ ಜನರಿಗೆ ದುಡಿಮೆ. ಇದೇನು ಸಾಮಾನ್ಯವೇ ?"

"ನಿಜ. ಎಷ್ಟೋ ಸಲ ಇದು ಜೀತ. ಭೂಮಾಲಿಕರ ಮೂಲಕ ನೀವು ಕಡ್ಡಾಯವಾಗಿ ಪಡೆಯೋದು. ಹದಿನೆಂಟು, ಇಪ್ಪತ್ತು ಜನರ ಗುಂಪುಗಳಾಗಿ—"

"ಅಸಂಖ್ಯ ಗುಂಪುಗಳು."

"ಅಂಥ ಅಸಂಖ್ಯ ಗುಂಪುಗಳಾಗಿ ನಾವೂ ದುಡಿದಿದ್ದೇವೆ. ಕೋಲು ಹಿಡಿದ ಕಾಪೀರು ಕೈಯಲ್ಲಿ ಬಯ್ಗಳು ತಿಂದಿದ್ದೇವೆ. ದಿನಗೆಲಸಕ್ಕೆ ಪ್ರತಿಫಲವಾಗಿ ನೀವು ಕೊಡಬೇಕಾದ್ದು ರೊಟ್ಟಿ, ಯವೆಸುರೆ, ಅವರೆಕಾಳು, ಈರುಳ್ಳಿ, ಒಣಮಾಂಸ, ಹುದುಗುಪುಡಿ, ಉಪ್ಪು. ಆದರೆ ವಾಸ್ತವವಾಗಿ ನಮಗೆ ಸಿಗೋದು ಏನಿರ್ತದೋ ಅದು. ಹೊಟ್ಟೆಗೇನಾದರೂ ಹಾಕ್ತೀರಿ—ಶಕ್ತಿ ಬೇಕಲ್ಲ ಕಲ್ಲಿನ ಕೆಲಸಕ್ಕೆ ? ಕಾಲ ಕಾಲಕ್ಕೆ ಹರಳೆಣ್ಣೆಯನ್ನೂ ಕೊಡ್ತೀರಿ—ನಮ್ಮ ಆರೋಗ್ಯ ಸರಿಯಾಗಿರಲಿ ಅಂತ."

ಕರ್ಕಶ ಕಂಠದಲ್ಲಿ ಟೆಹುಟಿ ಅಂದ :

"ನೆನಪಿಟ್ಕೋ ! ಮನುಷ್ಯನಿಗೆ ಅವನ ನಾಲಗೆಯೇ ವೈರಿ ! ಆ

ನಾಲಗೆಯಿಂದಲೇ ಅವನು ನಾಶವಾಗ್ತಾನೆ. ಗೋದಿಯ ಕಣಜಕ್ಕಿಂತಲೂ ದೊಡ್ಡದು ಮನುಷ್ಯನ ಹೊಟ್ಟೆ. ಅದರ ತುಂಬಾ ನಾನಾ ಬಗೆಯ ಉತ್ತರ ಗಳಿರ್ತವೆ ! ಉಫ್ ! ಉಫ್ !"

" ಸಿಟ್ಟಾಗಬೇಡಿ ಮಹಾಶಯ."

" ಸಾಕು ಮಾಡು !"

ಪ್ರತಿಮೆಯಂತಿದ್ದ ಬಕಿಲನ ದೃಷ್ಟಿ ಟೆಹುಟಿಯ ಕಡೆಗೇ ನೆಟ್ಟಿತ್ತು. ಕುಳಿತವರು ಅಲ್ಲೇ ಕಲ್ಲಾಗಿದ್ದರು. ಉಳಿದವರು ನಿಂತಲ್ಲೇ ಮೂರ್ತಿ ಗಳಾಗಿದ್ದರು.

" ಮುಗೀತಾ ಬಂತು. ಇನ್ನೊಂದೇ ಮಾತು. ರೈತ ತನ್ನ ಫಸಲಿನ ಪಶುಪಾಲಕ ತನ್ನ ಮಂದೆಯ, ಕಸಬುದಾರ ತನ್ನ ಕುಶಲ ಕೆಲಸದ, ಬೆಸ್ತ ತಾನು ಹಿಡಿದ ಮೀನಿನ, ಬೇಡ ತಾನು ಹೊಡೆದ ಮಿಕಗಳ ಹತ್ತರಲ್ಲೆರಡು ಭಾಗ ತೆರಿಗೆಯಾಗಿ ತೆರಲೇ ಬೇಕು. ಮನುಷ್ಯರ ಮತ್ತು ಪ್ರಾಣಿಗಳ ಗಣತಿ ನಡೀತಾನೇ ಇರ್ತದೆ. ಗಣತಿಯ ಕಾಲದಲ್ಲಿ ಪ್ರಾಣಿಗಳನ್ನು ರೈತರು ದೂರ ಓಡಿಸಿ ನಮ್ಮಿಂದ ಮರೆಮಾಡ್ತಾರೆ—ಅಂತ ಗಣತಿಯವರು ದೂರ್ತಾರೆ. ನಮ್ಮ ಪ್ರಾಂತದ ಅತ್ಯಂತ ದೊಡ್ಡ ಭೂಮಾಲಿಕ ನುಟ್‌ಮೋಸರ ಹಿತ್ತಲಲ್ಲಿ ಹದಿನೈದು ನೂರು ರಾಸು ಇವೆ. ಆದರೆ ದಾಖಲೇಲಿ ಇರೋದೆಷ್ಟು ?"

" ಎಷ್ಟು ?"

" ಪೆಟಾರಿಯಿಂದ ಸುರುಳಿ ತೆಗೆದು ನೋಡಿ."

" ಲಂಚ ತಗೊಂಡು ಸುಳ್ಳು ಲೆಕ್ಕ ಬರೀತಾರೆ ಅಂತ ಆಪಾದಿ ಸ್ತೀಯಾ ?"

" ನನಗೆ ಗೊತ್ತಿಲ್ಲ. ವಿಚಾರಣೆ ನಡೆಸಬೌದು. ಒಂದು ನಾವೆಯ ಮುಖ್ಯಸ್ಥ ರಾಜಬೊಕ್ಕಸಕ್ಕೂ ದೇವಮಂದಿರಕ್ಕೂ ಮುಟ್ಟಸೋದಕ್ಕೆ ಒಯ್ಯು ತ್ತಿದ್ದ ಧಾನ್ಯದ ನೂರರಲ್ಲಿ ಎಂಬತ್ತುಪಾಲು ರಾಜಧಾನಿಗೆ ತಲುಪಲೇ ಇಲ್ಲ ಅಂತ ಕೇಳಿದ್ದೇನೆ."

" ಓ ! ಬಹಳ ವಿಷಯ ನಿನಗೆ ಗೊತ್ತು. ಅಲ್ಲ ?"

" ನಮ್ಮ ಭೂಮಾಲಿಕರೆಲ್ಲ ನಿಗದಿಯಾಗಿರೋ ಕಂದಾಯ ಕೊಡೋ ದಕ್ಕೆ ಒಪ್ಪಿದ್ದಾರೆ. ನಿಗದಿ ಮಾಡಿರೋದು ಜಾಸ್ತಿ ಅಲ್ವೊ ಏನೋ ?

ಕೊಡಲಿ. ಹೇಗೂ ಅವರ ಕಣಜಗಳು ಭರ್ತಿಯಾಗಿವೆ."

" ಅಂದರೇನು ? ನಿಗದಿಯಾಗಿರುವಷ್ಟು ನೀವು ಕೊಡೋದಿಲ್ವೋ ?"

" ಇದ್ದವರು ಕೊಡ್ತಾರೆ."

ಟಿಹುಟಿ ಕೂಗಾಡಿದ :

" ಇಲ್ಲದಿದ್ದವರು ಇಲ್ಲ !....ಪೆರೋ ರಾನ ಕಾಲದಲ್ಲಿ ಕೆಲವು ಜನ ಅವನ ವಿರುದ್ಧ ದಂಗೆ ಎದ್ರು. ಹಗಲಿನ ಕಣ್ಣನ್ನು ಆರಾಧಿಸೋ ಬದಲು ಇರುಳಿನ ದೈತ್ಯನನ್ನು ಪೂಜಿಸಿದ್ರು....ಈಗ—"

ತುಸು ಧ್ವನಿ ಏರಿಸಿ ಮೆನೆಪ್‌ಟಾ ನುಡಿದ :

" ಇದು ಕಂದಾಯ ರಿಯಾಯಿತಿಗೆ ಪ್ರಾರ್ಥನೆ; ದಂಗೆ ಅಲ್ಲ. ನಾವು ಧರ್ಮಾತ್ಮ ಒಸೈರಿಸನ್ನು ಆರಾಧಿಸ್ತೇವೆ—ದುಷ್ಟ ಸೆತ್‌ನನ್ನಲ್ಲ ! "

ಮಾತು ಮುಗಿಯುವುದಕ್ಕೆ ಮುನ್ನವೇ ಟಿಹುಟಿ ಒಂದು ಅಂಗೈಯನ್ನು ಇನ್ನೊಂದರಿಂದ ಬಲವಾಗಿ ತಟ್ಟಿ, ಗಟ್ಟಿಯಾಗಿ, " ಬಕಿಲ !" ಎಂದ.

ಬಕಿಲ ಪ್ರತಿಮೆಯ ತುಟಿಗಳಲ್ಲಿ ನಗೆ ಮೂಡಿತು. ಅದು ಚಲಿಸ ತೊಡಗಿತು. ಮೆನೆಪ್‌ಟಾ ನಿಂತಲ್ಲಿಗೆ ಅಲ್ಲಿಂದ ನಾಲ್ಕು ಹೆಜ್ಜೆ. ಮಿಕದತ್ತ ಸಾಗುವ ಕ್ರೂರ ಮೃಗದಂತೆ ಬಕಿಲ ದೀರ್ಘ ಗರ್ಜನೆಯ ಧ್ವನಿ ಹೊರಡಿಸಿದ. ಚಾವಟಿಯನ್ನು ಹಿರಿಯುತ್ತ ಮೆನೆಪ್‌ಟಾನ ಮೇಲೆ ಏರಿ ಹೋದ.

ಅಂಗಳದಲ್ಲಿದ್ದ ನೂರಾರು ಕಂಠಗಳಿಂದ ಏಕಕಾಲದಲ್ಲಿ ಆರ್ತನಾದ ಹೊರಟಿತು.

ಬಕಿಲನ ಬಲಗೈಯ ಮಾಂಸಖಂಡಗಳು ಕುಣಿದುವು. ನೀರಾನೆಯ ತೊಗಲಿನ ಚಾವಟಿ ಸುಂಯ್‌ಗುಟ್ಟಿತು. ಮತ್ತೆ ಮತ್ತೆ ಮೆನೆಪ್‌ಟಾನ ಶರೀರದ ಸುತ್ತ ಅದು ಹಾರವಾಯಿತು.

ಟಿಹುಟಿ ಕ್ಷೀಣಿಸತೊಡಗಿದ ಧ್ವನಿಯಲ್ಲಿ ಅಂದ :

" ಬಾರಿಸು, ಬಾರಿಸು ! ಅವನ ವಟ ವಟ ನಿಲ್ಸು !"

ಅಂಗಳದಿಂದ ಜನ ಒಳಕ್ಕೆ ನುಗ್ಗತೊಡಗಿದರು. ಬಕಿಲ ತನ್ನ ಅನುಚರ ರಿಗೆ ಅನುಜ್ಞೆಗಳನ್ನಿತ್ತ :

" ಹಿಂದಕ್ಕೆ ತಳ್ಳಿ ! ಹೊರಕ್ಕೆ ಓಡಿಸಿ !"

ಟಿಹುಟಿ ಪೀಠಕ್ಕೆ ಒರಗುತ್ತ ಹೇಳಿದ :

“ ಅವನು ಮನುಷ್ಯನಲ್ಲ, ಸೆತ್. ಕಂಬಕ್ಕೆ ಕಟ್ಟ.”

ಉದ್ದನೆಯ ಸೆಣಬಿನ ಹಗ್ಗ ಮೆನೆಪ್‌ಟಾನನ್ನು ಹತ್ತಿರದ ಕಂಬಕ್ಕೆ ಬಿಗಿಯಿತು.

ಗದೆಗಳ ಹೊಡೆತ ಸಹಿಸಿಯೂ ತಾಳೆ ಕೊರಡುಗಳನ್ನು ಇದಿರಿಸಿಯೂ ಜನ ಮುಂದಕ್ಕೆ ಸರಿಯಲೆತ್ನಿಸಿದರು. ಆದರೆ ಭಟರ ಸಂಘಟಿತ ಪ್ರಯತ್ನ ದೆದುರು ಬರಿಗೈಗಳ ಅವರ ಬಲ ಸೋತಿತು.

ಮೆನೆಪ್‌ಟಾಗೆ ಬವಳಿ ಬಂದಂತಾಯಿತು.

ಒಂದು ಧ್ವನಿ. ರಾಮೆರಿಪ್‌ಟಾ.

“ ಅಪ್ಪಾ, ಅಪ್ಪಾ.”

ಮೆನೆಪ್‌ಟಾ ಶಾಂತ ಸ್ವರದಲ್ಲಿ ಅಂದ :

“ ರಾಮೆರಿ, ಮನೆಗೆ ಹೋಗು ; ಅಮ್ಮನ ಹತ್ರ ಇರು.”

೩

ರಾಜಗೃಹದಲ್ಲಿ ನಡೆದುದರ ಬಗೆಗೆ ನೆಫಿಸಳಿಗೆ ಮೊದಲ ಸುದ್ದಿ ದೊರೆ ತುದು ಮಗ ರಾಮೆರಿಪ್‌ಟಾನಿಂದಲೇ. ತಂದೆ ‘ಮನೆಗೆ ಹೋಗು; ಅಮ್ಮನ ಹತ್ರ ಇರು’ ಎಂದೊಡನೆಯೇ ತನ್ನ ಓರಗೆಯವರೊಡನೆ ಹುಡುಗ ಓಡಿ ಬಂದಿದ್ದ.

ಅಸಾಧಾರಣವಾದುದೇನೋ ರಾಜಗೃಹದಲ್ಲಿ ನಡೆಯುತ್ತಿದೆ ಎಂಬ ಸುದ್ದಿ ಹಬ್ಬಿದಂತೆ, ಊರಿನ ಜನ ಒಂಟಿ ಒಂಟಿಯಾಗಿ ಗುಂಪು ಗುಂಪಾಗಿ ಅತ್ತ ಹೊರಟಿದ್ದರು.

ಓಡಿ ಬರುತ್ತಿದ್ದ ಮಕ್ಕಳನ್ನು ಅವರು ಕೇಳಿದರು :

“ ಏನಾಗ್ತಿದೆ ? ಏನಾಗ್ತಿದೆ ಅಲ್ಲಿ ?”

ರಾಮೆರಿಪ್‌ಟಾನದು ಒತ್ತರಿಸಿದ ಗಂಟಲು, ಮುಖದ ತುಂಬಾ ಹೆಪ್ಪು ಗಟ್ಟಿದ್ದ ದುಗುಡ. ಜನ ತಡೆದರೆಂದು ಆತ ನಿಲ್ಲಲಿಲ್ಲ. ಮಾತನಾಡಲೂ ಇಲ್ಲ.

ಹುಡುಗರಲ್ಲೊಬ್ಬ ಕೀರಲು ಗಂಟಲಲ್ಲಿ ಕಿರಿಚುತ್ತ ತನ್ನ ಗೆಳೆಯನನ್ನು ಹಿಂಬಾಲಿಸಿದ:

" ಹೊಡೆದ್ರು ! ರಾಮೆರಿಪ್‌ಟಾನ ತಂದೆಗೆ ಹೊಡೆದ್ರು ! ಗಲಾಟೆ ! ಭಾರೀ ಗಲಾಟೆ !"

ರಾಮೆರಿಪ್‌ಟಾ ಬಾಗಿಲು ತಳ್ಳಿ ಮನೆಯೊಳಕ್ಕೆ ಕಾಲಿರಿಸಿದಾಗ ತಾಯಿ ನೆಫಿಸ್ ಮೂರು ಕಾಲುಗಳ ಪೀಠದ ಮೇಲೆ ಇರಿಸಿದ್ದ ಐಸಿಸ್ ದೇವತಾ ಮೂರ್ತಿಯ ಮುಂದೆ ಮೌನವಾಗಿ ಕುಳಿತಿದ್ದಳು.

ರಾಮೆರಿಯ ಗೆಳೆಯರೂ ಮನೆಯೊಳಗೆ ಹೊಕ್ಕು ಅವನ ಬೆನ್ನ ಹಿಂದೆ ಅರ್ಧ ವೃತ್ತಾಕಾರವಾಗಿ ನಿಂತರು.

ನೆಫಿಸ್ ತಲೆಯೆತ್ತಿ ಮಕ್ಕಳ ಕಾತರ ತುಂಬಿದ ಮುಖಗಳನ್ನು ನೋಡಿದಳು. ಆವಳ ತುಟಿಗಳು ಕಂಪಿಸಿದುವು. ಏನಾಯಿತು—ಎಂದು ಕೇಳಬೇಕೆನಿಸಿತು. ಆದರೆ ಧ್ವನಿ ಹೊರಡಲಿಲ್ಲ.

ರಾಮೆರಿಪ್‌ಟಾನೇ ನುಡಿದ :

" ಮನೆಗೆ ಹೋಗು, ಅಮ್ಮನ ಹತ್ರ ಇರು—ಅಂದ ಅಪ್ಪ."

" ಹುಂ."

" ಅಪ್ಪ ಸಭಾಂಗಣದಲ್ಲಿ ನಿಂತು, ನಮ್ಮ ಜನರಿಗೆ ಹ್ಯಾಗೆ ಹ್ಯಾಗೆ ಅನ್ಯಾಯ ಆಗ್ತಿದೇಂತ ಹೇಳಿಯೇ ಬಿಟ್ಟ. ಬಹಳ ಹೊತ್ತು ಮಾತಾಡ್ದ. ಅಧಿಕಾರಿಗೆ ತುಂಬಾ ಸಿಟ್ಟು ಬಂತು. ನಮ್ಮಪ್ಪ ಹೆದರಲೇ ಇಲ್ಲ. ನಮ್ಮವರೆಲ್ಲಾ ಬಂದಿದ್ರು. ಸ್ನೊಫ್ರು ಮಾವ, ಸೆಬೆಕ್ಖು ಮಾವ ಎಲ್ಲಾ ಇದ್ರು...."

" ಆಮೇಲೆ...."

" ಆಮೇಲೆ ಕಟ್ಹಾಕಿದ್ರು."

ದ್ರವಿಸತೊಡಗಿದ ದುಗುಡವನ್ನು ಬಿಗಿ ಹಿಡಿಯಲೆತ್ನಿಸುತ್ತ ರಾಮೆರಿಪ್‌ಟಾ ಅವುಡುಗಚ್ಚಿದ.

" ಹೊಡೆದ್ರಾ ?"

ಬಿಕ್ಕುತ್ತ ಗಟ್ಟಿಯಾಗಿ ರಾಮೆರಿ ಅಂದ :

" ಹ್ಞ. ಆದರೆ ಅಪ್ಪ ಅಳಲಿಲ್ಲ, ಒಂದು ಸರ್ತಿನೂ ಅಳಲಿಲ್ಲ."

ಹಾಗೆ ಹೇಳುತ್ತ, ಸದ್ದಿಲ್ಲದೆ ಕಂಬನಿ ಹರಿಸುತ್ತ, ತಾಯಿಯ ಬಳಿ

ರಾಮೆರಿಪ್‌ಟಾ ಕುಸಿಕುಳಿತು, ಆಕೆಯ ಮಡಿಲಲ್ಲಿ ಮುಖವಿರಿಸಿದ.

"ರಾಮೆರಿ, ರಾಮೆರಿ," ಎಂದು ಮಗನ ಮೈದಡವುತ್ತ ನೆಫಿಸ್ ಸಂತೈಸಿದಳು, ತಾನೂ ಕಣ್ಣೀರು ಸುರಿಸುತ್ತ.

ನಿಂತಿದ್ದ ಹುಡುಗರಿಗೂ ಅಳು ಬಂತು.

"ನೀವೆಲ್ಲ ಮನೆಗೆ ಹೋಗಿ, ಮಕ್ಕಳೇ."

—ನೆಫಿಸ್ ಅಂದಳು.

ಹುಡುಗರಲ್ಲೊಬ್ಬ ನುಡಿದ :

"ರಾಮೆರಿ ಇಲ್ಲೇ ಇರ್‍ಲಿ, ಅತ್ತೆ. ನಾವು ರಾಜಗೃಹಕ್ಕೆ ಹೋಗ್ತೇವೆ."

ಗೆಳೆಯರು ಹೊರಹೋದೊಡನೆಯೇ ರಾಮೆರಿಪ್‌ಟಾ ಧ್ವನಿ ತೆಗೆದು ಅತ್ತ. ನೆಫಿಸಳೂ ಅಂದಳು :

"ಐಸಿಸ್, ಐಸಿಸ್ ದೇವತೆ, ರಾಮೆರಿಯ ತಂದೆಯನ್ನು ಕಾಯಬೇಡವಾ ನೀನು ? ಮನೆಗೆ ಬಂದ ಮೊದಲನೇ ದಿನವೇ ಹೀಗೆ ಮಾಡೋದಾ? ತಪ್ಪು ಮಾಡದವರಿಗೆ ಶಿಕ್ಷೆ ಯಾವ ನ್ಯಾಯ....?"

ಒಸ್ಪೈರಿಸ್ ದೇವನನ್ನೂ ಅವಳು ಸ್ಮರಿಸಿದಳು:

"ಓ ಒಸ್ಪೈರಿಸ್, ಓ ಒಸ್ಪೈರಿಸ್. ನೀನು ಧರ್ಮಾತ್ಮ. ಸೆತ್‌ನ ಪಕ್ಷಕ್ಕ ಹ್ಯಾಗೆ ಜಯವಾದೀತು ? ನೋಡು. ಈ ಭೂಮಿಯಲ್ಲಿ ಆಗ್ತಿರೋದನ್ನು ಕಣ್ಣು ಬಿಟ್ಟು ನೋಡು....ನಿನ್ನ ರಾಣಿ ಐಸಿಸಳ ಭಾಗ್ಯವನ್ನು ನನಗೆ ಕರುಣಿಸು. ರಾಮೆರಿಯ ತಂದೆಯ ಕೂದಲು ಕೊಂಕದಿರಲಿ...."

ಕೆಲ ನಿಮಿಷಗಳಲ್ಲೆ ಹೊರಗೆ ಜನರ ನಡಿಗೆಯ ಮಾತಿನ ಸದ್ದು ಕೇಳಿಸಿತು. ಸ್ನೊಫ್ರು ಸೆಬೆಕ್ಕು ಒಳಬಂದರು. ಸ್ನೊಫ್ರುವಿನ ಪತ್ನಿ ನೆಜಮುಟಳೂ ಓಡಿಬಂದಳು.

ರಾಮೆರಿಪ್‌ಟಾ ಎದ್ದು ಕುಳಿತ. ನೆಫಿಸ್ ಮುಖವೆತ್ತಿ ನೋಡಿದಳು.

ಸ್ನೊಫ್ರುವೆಂದ :

"ನೀನೇನೂ ಚಿಂತಿಸ್ಬೇಡ. ಮೆನೆಪ್‌ಟಾನ ರಕ್ಷಣೆ ನಮ್ಮ ಜವಾಬ್ದಾರಿ. ಅವನು ನಮ್ಮ ನಾಯಕ. ಇವತ್ತು ನಮ್ಮೂರಲ್ಲಿ ಆದದ್ದು ಹಿಂದೆಂದೂ ಎಲ್ಲೂ ಆಗಿರದ ಘಟನೆ...."

ಸೆಬೆಕ್ಕು ಅಂದ :

"ಊರೆಲ್ಲಾ ಸುದ್ದಿಯಾಗಿದೆ. ಇಡೀ ಊರಿಗೆ ಊರೇ ರಾಜಗೃಹಕ್ಕೆ

ಹೋಗಿ ಮೆನೆಪ್‌ಟಾನನ್ನು ಬಿಡಿಸ್ಕೋತದೆ....ನಾವು ಹೆದರಬಾರ್ದು. ಒಗ್ಗಟ್ಟಾಗಿರ್ಬೇಕು. ಬಾ ಸ್ನೊಫ್ರು ಹೋಗೋಣ. ರಾ ಪಶ್ಚಿಮದ ಅಂಚು ಮುಟ್ಟೋಕ್ಮುಂಚೆ ಮೆನೆಪ್‌ಟಾನನ್ನು ಕರಕೊಂಡು ನಾವೆಲ್ಲ ವಾಪಸಾಗ್ಬೇಕು...."

"ನಾವೂ ಬರ್ತೇವೆ," ಎಂದಳು ನೆಫಿಸ್.

ವಿನಂತಿಸುವ ಧ್ವನಿಯಲ್ಲಿ ಸ್ನೊಫ್ರು ಅಂದ :

"ಅಲ್ಲಿರೋದು ಮೃಗಶಕ್ತಿ. ನಾವು ನೋಡ್ಕೋತೇವೆ. ನೀನು ಇಲ್ಲೇ ಇರು, ತಂಗಿ. ನೆಜಮುಟ್ ಜತೆಗಿರ್ತಾಳೆ."

ಹಸುಳೆಯನ್ನೆತ್ತಿಕೊಂಡು ಒಬ್ಬಳು ಒಳಬಂದಳು. ಅಬ್ಟು ಜಾತ್ರೆಗೆ ಬಂದಿದ್ದಾಕೆ. ಅಹೂರಾ.

ನೆಫಿಸ್ ತಲೆಯಾಡಿಸಿದಳು, ಬಾ ಎನ್ನುವಂತೆ.

ಅವಳೆಂದಳು :

"ಮೆನೆಪ್‌ಟಾ ಅಣ್ಣ ವಾಪಸು ಬರೋವರೆಗೆ ನಾನೂ ನಿನ್ನಜೊತೆ ಇರ್ತೇನೆ, ಅಕ್ಕ. ಅಣ್ಣ ಬಂದ್ಮೇಲೆಯೇ ನಾವು ನಮ್ಮ ನಮ್ಮ ಊರಿಗೆ ಹೋಗ್ತೇವೆ."

ಸ್ನೊಫ್ರುಗೆ ಆಕೆ ಅಪರಿಚಿತೆ. ಆದರೂ, ಯಾತ್ರಿಕರ ತಂಡದವಳಿರಬೇಕು ಎಂದು ಊಹಿಸಿಕೊಂಡು "ಆಗಲಿ, ಆಗಲಿ," ಎಂದ.

ಸ್ನೊಫ್ರು ಮತ್ತು ಸೆಬೆಕ್ಖು ಹೊರಸಾಗಿ, "ನಡೀರಿ, ಹೋಗೋಣ," ಎಂದು ಜನರಿಗೆ ಹೇಳುತ್ತಿದ್ದಂತೆ, ರಾಮೆರಿಪ್‌ಟಾ ಎದ್ದು ನಿಂತ. ದೊಡ್ಡವರ ಜತೆ ತಾನೂ ಹೋಗಬೇಕು ಎನಿಸಿತು ಅವನಿಗೆ.

ನೆಫಿಸಳಿಗೂ ಮಗ ತಂದೆಯ ಬಳಿ ಇದ್ದರಾದೀತು ಎಂದು ಭಾವನೆ.

ಆದರೆ ರಾಮೆರಿಪ್‌ಟಾ ಮನಸ್ಸಿನ ಆಸೆಯನ್ನು ಹತ್ತಿಕ್ಕಿ ಅಂದ :

"ನಾನು ಇಲ್ಲೇ ಇರ್ತೇನೆ, ಅಮ್ಮ. ಅಪ್ಪ ಹೇಳಿದ್ದಾನೆ."

* * * *

ಮೆನೆಪ್‌ಟಾನ ಜತೆಗಿದ್ದವರನ್ನೆಲ್ಲ ಹೊರಕ್ಕಟ್ಟಿದ ಮೇಲೆ, ಗೇಬುವಿನ ನಿರ್ದೇಶದಂತೆ ಮಹಾದ್ವಾರವನ್ನು ಮುಚ್ಚಿದರು.

" ಪ್ರಾಕಾರದ ಮೇಲೆ ಕಾವಲು ನಿಲ್ಲಿ," ಎಂದ ಆತ ತನ್ನ ಭಟರಿಗೆ.

ಟೆಹುಟಿಯ ಭಟರೂ ಅಟ್ಟಣಿಕೆಗಳನ್ನೇರಿ, ಪ್ರಾಕಾರದಾಚೆಗೆ ಊರಿನತ್ತ ನೋಡಿದರು.

ಬಕಿಲ ಪಾದರಸವಾಗಿ, ಕಾವಲಿನ ಮೇಲ್ವಿಚಾರಣೆ ವಹಿಸಿಕೊಂಡ, ಟೆಹುಟಿಯ ಅನುಜ್ಞೆ ಇಲ್ಲದೆಯೇ.

ಕಂದಾಯದ ಅಧಿಕಾರಿಗೆ ಆಯಾಸವಾಗಿತ್ತು. ಆದರೆ ಅದನ್ನು ತೋರ್ಪಡಿಸದೆ ಅವನು ಎದ್ದು ನಿಂತ. ಗೇಬು, ಭೂಮಾಲಿಕರು, ಇಪ್ಯುವರ್ ಎಲ್ಲರೂ ಎದ್ದರು.

ಮೆನೆಪ್‌ಟಾನತ್ತ ನೋಡದೆಯೇ ಟೆಹುಟಿ, ಗೇಬುವನ್ನು ಕರೆದು ಕೊಂಡು ಮಹಡಿಯ ಮೆಟ್ಟಲುಗಳನ್ನೇರಿದ.

ತನ್ನವರೆಲ್ಲ ಸಣ್ಣ ಪ್ರಮಾಣದ ಗದಾಪ್ರಹಾರಕ್ಕೆ ತುತ್ತಾಗಿ ಹೊರ ಬೀಳುತ್ತಿದ್ದುದನ್ನು ದಿಟ್ಟಿಸುತ್ತಿದ್ದ ಮೆನೆಪ್‌ಟಾ ಮಹಾದ್ವಾರಕ್ಕೆ ಕೀಲಿ ಬಿದ್ದೊಡನೆ ನೀಳವಾಗಿ ಉಸಿರು ಬಿಟ್ಟ. ಕಣ್ಣೆವೆಗಳನ್ನು ಮುಚ್ಚಿದ....ಯಾವ ಯೋಚನೆಯೂ ಸಾಧ್ಯವಾಗದಂತೆ ಮೆದುಳು ಧಿಮಿಗುಡುತ್ತಿತ್ತು. ಬೆಳಗಿನಿಂದ ನಡೆದುದೆಲ್ಲವನ್ನೂ ನೆನಪಿಗೆ ತಂದುಕೊಳ್ಳಲು ಯತ್ನಿಸಿದ. ಎಷ್ಟೋ ಮುಖ ಗಳು, ಮುಖಭಾವಗಳು ಕಣ್ಣೆದುರು ತೇಲಿದುವು. ಆಡಿದ, ಕೇಳಿದ ಮಾತು ಗಳಲ್ಲಿ ಅದೊಂದು ತುಣುಕು ಇದೊಂದು ತುಣುಕು ಮತ್ತೆ ಶಬ್ದಿಸಿ ದಂತಾಯಿತು.

ಕಟ್ಟಿದ್ದರಲ್ಲ ಕಂಬಕ್ಕೆ ? ಕೈಗಳನ್ನು, ಮೈಯನ್ನು ? ಬವಳಿ ಬಂದರೂ ಬೀಳಲಾರ.

ನೆಲ ಕುಸಿಯುತ್ತಿದೆಯಲ್ಲ ? ಕೆಳಗೆ ಬಿದ್ದರೆ ? ಕೆಳಗೆ—ಕೆಳಗೆ.... ಇದು ಯಾವ ಲೋಕ ?

(ಇಪ್ಯುವರನ ಧ್ವನಿ :
" ಪ್ರಜ್ಞೆ ತಪ್ಪಿತು !"
ಇನ್ನೊಂದು ಸ್ವರ :
" ಸತ್ತೇ ಹೋದನೊ ?"

" ಅಧಿಕಾರಿಯವರಿಗೆ ಗೊತ್ತಿಲ್ದಹಾಗೆ ಇವನು ಸತ್ತರೆ, ನಮ್ಮ ಮೇಲೆ ಕೋಪಿಸ್ಕೊಳ್ತಾರೆ."

" ಇಪ್ಯುವರ್, ಮುಖಕ್ಕೆ ನೀರು ರಾಚು."

" ಜೋಕೆ ! ಅದೆಲ್ಲಾ ಮಾಡ್ಬೇಡಿ !"

—ಎಚ್ಚರಿಕೆಯ ಮಾತು ಆಡಿದ್ದು ಯಾರು ? ಯಾರು ? ಚಲಿಸುವ ಪ್ರತಿಮೆ ? ಅರಚುವ ಪ್ರತಿಮೆ ?)

" ಆ.... ಆ...."

ಮೆನೆಪ್ಟಾ ನರಳಿದ. (ಇಪ್ಯುವರನ ಮುಖದಲ್ಲಿ ಹರ್ಷ. ರಾನ ಕೃಪೆ, ಪ್ಟಾನ ಕೃಪೆ, ಇವನು ಸತ್ತಿಲ್ಲ, ಸತ್ತಿಲ್ಲ....) ಮೈಯೆಲ್ಲ ಉರಿ. ಗಂಟಲು ಒಣಗಿದೆ. ದಾಹ. ದಾಹ....ರಾಮೆರಿ, ನೆಫಿಸ್....ಸ್ನೊಫ್ರು ಎಲ್ಲಿ ? ಸ್ನೊಫ್ರು ?

" ಆ.... ಆ...."

ಮಹಡಿಯ ಮೇಲು ಮೆಟ್ಟಲ ಬಳಿಯಿಂದ ಟೆಹುಟಿಯ ಧ್ವನಿ ಕೇಳಿಸಿತು :

" ಬಕಿಲ ! ಕೈದಿಯನ್ನು ನೋಡ್ಕೊ."

" ಅಪ್ಪಣೆ."

ಭೂಮಾಲಿಕ ಸಿನ್ಯುಹೆಯ ಮನೆಯಲ್ಲಿ ಅವನ ಹೆಂಡತಿ ಅನಾರೋಗ್ಯ ಪೀಡಿತಳಾಗಿ ಮಲಗಿದ್ದಳು. ಐದು ಹೆತ್ತು, ಮಧ್ಯ ವಯಸ್ಸನ್ನು ಸಮೀಪಿಸುತ್ತಿದ್ದವಳು. ಎಡಗೈ ಸ್ವಾಧೀನ ತಪ್ಪಿತ್ತು. ದೇವ ಮಂದಿರದ ಅರ್ಚಕನ ಔಷಧೋಪಚಾರ. ಒಂದು ತಿಂಗಳು ನಡೆದ ಚಿಕಿತ್ಸೆಯಿಂದ ಏನೂ ಗುಣ ಕಂಡಿರಲಿಲ್ಲ. " ಈ ದಿನ ಬರ್ತೇನೆ. ವಿಶೇಷ ತಾಯತ ಕಟ್ತೇನೆ. ಪ್ರಾಚೀನ ಗ್ರಂಥದ ಹಾಳೆಗಳನ್ನು ಎಣ್ಣೆಯಲ್ಲಿ ಕರಿದು ಮಾಡಿದ ಔಷಧಿ ಕುಡಿಸ್ತೇನೆ," ಎಂದು ನುಡಿದಿದ್ದ, ಅರ್ಚಕ ವೈದ್ಯ. ಅವನ ದಾರಿ ನೋಡಿ ನಿರಾಶನಾಗಿ, ಅಧಿಕಾರಿಯ ಭೇಟಿಗೆ ತಡವಾಗುತ್ತದೆಂದು ಸಿನ್ಯುಹೆ ಹೊರಟು ಬಿಟ್ಟಿದ್ದ. ಆಮೇಲೆ ಅರ್ಚಕ ಬಂದು ತಲಪಿರಬಹುದು. ಮಂತ್ರಿಸಿ ತಾಯಿತ ಕಟ್ಟುವ ಕೆಲಸ ಮುಗಿದಿರಬಹುದು. ಸಿನ್ಯುಹೆಗೆ ಮನೆಗೆ ಹೋಗುವ ತವಕ. ಅರ್ಚಕ ವೈದ್ಯ ಕಾಯುತ್ತಿರುತ್ತಾನೆ. ಅವನಿಗೆ ಸಂಭಾವನೆ ಸಲ್ಲಿಸಬೇಕು. ಊಟಕ್ಕೆ

ಹೊತ್ತಾಯಿತು. ಕಂದಾಯದ ಧಾನ್ಯವನ್ನು ಅಳೆದು, ಸೇವಕರ ಮೇಲೆ ಹೊರಿಸಿ, ರಾಜಗೃಹಕ್ಕೆ ತಂದೊಪ್ಪಿಸುವ ಕೆಲಸವೂ ಇದೆ. ಆದರೆ ಇಲ್ಲಿಂದ ಪಾರಾಗುವುದು ಹೇಗೆ ?

ಅವನು ಪಿಸುದನಿಯಲ್ಲಿ ಹೇಳಿದ :

"ಇಪ್ಯುವರ್, ಮನೆಗೆ ಸ್ವಲ್ಪ ಹೋಗಿ ಬರಬೇಕಲ್ಲ."

"ನೀವೆ ?"

"ಹುಂ."

ಪ್ರಾಕಾರದ ದಿಕ್ಕಿಗೆ ಮುಖ ಮಾಡಿ ನಿಂತಿದ್ದ ಬಕಿಲನತ್ತ ಇಪ್ಯುವರ್ ಬೊಟ್ಟು ಮಾಡಿದ.

"ನೀನು ಕೇಳು," ಎಂದ ಸಿನ್ಯುಹೆ.

"ಒಲ್ಲೆ ನಮ್ಮಪ್ಪ," ಎಂದು ನುಡಿದು ಇಪ್ಯುವರ್ ಮುಂಡಿಯೂರಿ ಕುಳಿತು, ಬರೆದು ಹರಡಿದ್ದ ಲಿಪಿಸುರುಳಿಗಳನ್ನು ದಿಟ್ಟಿಸಿದ. ಮಸಿ ಆರಿತ್ತು. (ಟೆಹುಟಿ, ಮೆನೆಪ್‌ಟಾ ಇಬ್ಬರ ವಾಗ್ವೈಖರಿಯೂ ಅಸಾಧಾರಣವಾಗಿತ್ತು. ಟೆಹುಟಿಯದೇನೋ ಸರಿ. ಆದರೆ ಈ ಮೆನೆಪ್‌ಟಾ ? ಅವನಿಗೆ ಇಷ್ಟೊಂದು ವಿಚಾರಶಕ್ತಿ ಇದೆ ಎಂದು ಯಾರು ಭಾವಿಸಿದ್ದರು ? ಮಾತಿನ ಅಲೆಗಳು, ಇಂಪಾದ ಸಂಗೀತದ ಹಾಗೆ.) ಪೆಟಾರಿಯಿಂದ ಸೆಣಬಿನ ದಾರದ ಉಂಡೆಯನ್ನು ಹೊರತೆಗೆದು, ಹಾಳೆಗಳನ್ನು ಒಂದೊಂದಾಗಿ ಆತ ಸುರುಳಿ ಸುತ್ತಿ, ಪುಟಸಂಖ್ಯೆ ನಮೂದಿಸಿದ. ಪೆಟಾರಿಯಲ್ಲಿದ್ದ ದಾಖಲೆಗಳನ್ನು ಬದಿಗೆ ಸರಿಸಿ, ಹೊಸ ಸುರುಳಿಗಳನ್ನು ಒಂದು ಮೂಲೆಯಲ್ಲಿರಿಸಿದ. ಪೆಟಾರಿಯ ಬಾಗಿಲನ್ನು ಮುಚ್ಚಿದ. ಇಪ್ಯುವರ್‌ಗೆ ಅನಿಸಿತು : ಟೆಹುಟಿಯು ಸುರುಳಿ ಈ ಸುರುಳಿಗಳನ್ನು ರಾಜಧಾನಿಗೆ ಒಯ್ದು, ಅಮಾತ್ಯರಿಗೂ ಪೆರೋಗೂ ತೋರಿಸುವುದು ಖಂಡಿತ. ಬರೆವಣಿಗೆ ನೋಡಿ ಅವರು ಮೆಚ್ಚುಗೆ ಸೂಚಿಸು ವುದೂ ಸಾಧ್ಯ....ಪಾಪ, ಮೆನೆಪ್‌ಟಾ. ಆ ದೈತ್ಯ ಸ್ವಲ್ಪ ಆ ಕಡೆಗೆ ಹೋದರೆ ಒಂದಿಷ್ಟು ನೀರನ್ನಾದರೂ ಇವನಿಗೆ ಕುಡಿಸಬಹುದು, ತಾನೂ ಕುಡಿಯ ಬಹುದು....

ಸೆತೆಕ್‌ನಖ್ತ್ ಗಲ್ಲ ತುರಿಸಿದ. ಸೆನ್‌ಉಸರ್ಟ್ ಕೆಲವೇ ಕೂದಲು ಉಳಿದಿದ್ದ ತನ್ನ ತಲೆಯ ಮೇಲೆ ಅಂಗೈ ಆಡಿಸಿದ. ಹಜಿರೆ ನೆಲದಲ್ಲಿ ನೆಟ್ಟ

ತನ್ನ ದೃಷ್ಟಿಯನ್ನು ಕದಲಿಸಲಿಲ್ಲ. ಸಿನ್ಯುಹೆ ಅವರೆಲ್ಲರ ಮುಖ ನೋಡಿದ. ಉಳಿದವರು ಬಕಿಲನ ಚಲನ ವಲನಗಳನ್ನು ದಿಟ್ಟಿಸಿದರು.

* * * *

ಮಹಡಿಯ ಮೇಲಿದ್ದ ಟೆಹುಟಿ ಜಲಬಾಧೆ ತೀರಿಸಿಕೊಂಡು ಬಂದ. (ಗೇಬುವೂ ಅವನನ್ನು ಅನುಕರಿಸಿದ.)

ಆತ ಮಹಡಿಯ ಬಾಗಿಲಿಂದ ಹೊರಬಿದ್ದು, ಮುಖಮಂಟಪದಲ್ಲಿ ನಿಂತ. ಹೊರಗೆ ಬಿಸಿಲಿನ ಪ್ರಖರತೆ ಕಡಿಮೆಯಾಗಿರಲಿಲ್ಲ. ಕುಯಿಲು ಮುಗಿದ ಹೊಲ ಗಳು ಭಣಗುಡುತ್ತಿದ್ದುವು. ಊರು ಕುದಿಯುತ್ತಿತ್ತು. (ಎಲ್ಲಿರಬಹುದು, ಚೆದರಿದ ಜನ ?) ರಾಜಗೃಹದವರೆಗಿನ ಬೀದಿಯಲ್ಲಿ ಜನ ಹೋಗುತ್ತಿದ್ದರು, ಬರುತ್ತಿದ್ದರು. (ಅವರನ್ನೆಲ್ಲ ಬಾಗಿಲ ಕಿಂಡಿಯಿಂದ ನೋಡುತ್ತಲಿದ್ದ ಬಕಿಲನ ಬೆನ್ನು ಟೆಹುಟಿಗೆ ಕಾಣಿಸುತ್ತಿತ್ತು.) ಕೆಲ ತಾಳೆ ಮರಗಳ ಕೆಳಗೆ ಬಡಜನರು ಗುಂಪು ಕೂಡಿದ್ದರು. ತಾನು ಚೆನ್ನಾಗಿ ಮಾತನಾಡಿದೆ, ಪರಿಣಾಮಕಾರಿ ಯಾಗಿ. ಆ ಮುಖಂಡ ಬಾಯಿ ಬಿಡದೇ ಇದ್ದಿದ್ದರೆ, ಎಲ್ಲ ಸುಸೂತ್ರವಾಗಿ ನಡೆದು ಹೋಗುತ್ತಿತ್ತು. ಕಂದಾಯ ವಸೂಲಿ ಕೂಡಾ. ಈಗಾದರೂ ಏನಾಯಿತು ? ಹೆದರಿರಬೇಕು ಆ ಜನ. ಹೆದರಿಲ್ಲವಾದರೆ ಇನ್ನಷ್ಟು ಚುರುಕು ಮುಟ್ಟಿಸಿದರಾಯಿತು.

ಬೇಸರವೆನಿಸಿ ಟೆಹುಟಿ ನಿಟ್ಟುಸಿರು ಬಿಟ್ಟ. ಅವನಿಗೆ ಸ್ಪಷ್ಟವಾಗಿತ್ತು. ಗೇಬುವಿನ ಆಡಳಿತ ಶಿಥಿಲವಾದುದೇ ಇಲ್ಲಿನ ವಿಕ್ಷಿಪ್ತ ಪರಿಸ್ಥಿತಿಗೆ ಕಾರಣ........ ಗೇಬುವನ್ನು ದೂರುವುದೇನೋ ಸರಿ. ಆದರೆ, ವಾಸ್ತವವಾಗಿ, ಇದು ರಾಜ ಧಾನಿಯಲ್ಲಿ ಕಂಡು ಬರುತ್ತಿರುವ ಶೈಥಿಲ್ಯದ ಪಡಿನೆಳಲೇ ಅಲ್ಲವೆ ?

ದೃಷ್ಟಿ ಎಡಕ್ಕೆ ಹೊರಳಿತು, ದೂರಕ್ಕೆ. ಅಲ್ಲಿ ಕಾಣಿಸಿತು. ನದಿಯ ನೀಲ ಜಲ. ದಂಡೆಯಾಚೆಗೆ, ಹೊಲಗಳ ಆ ಕಡೆ, ದೃಷ್ಟಿ ಚಾಚುವ ವರೆಗೂ ಮರಳ ರಾಶಿ.

ಈತನನ್ನು—ಮೆನೆಪ್‌ಟಾ ಅಲ್ಲವೆ ಹೆಸರು ?— ಬಂಧನದಲ್ಲಿಟ್ಟು ಕಂದಾಯ ವಸೂಲಿ ನಡೆಸಬೇಕು. ಇವತ್ತಿನ ಮಟ್ಟಿಗೆ ವಸೂಲಿಯನ್ನು ಮುಂದಕ್ಕೆ ಹಾಕಿದರೆ ? ಹಾಕುವುದೇ ಲೇಸು. ಇಡೀ ರಾತ್ರೆ ಕೈದಿಯನ್ನು

ಬಿಡದಿದ್ದರೆ ಜನ ತಣ್ಣಗಾಗುತ್ತಾರೆ ನಾಳೆ ಬೆಳಗಿನಿಂದ ವಸೂಲಿ ಆರಂಭಿಸ ಬಹುದು. ಎರಡು ದಿನಗಳಲ್ಲೇ ಮುಖ್ಯ ಪಟ್ಟಣದಲ್ಲಿ ವಸೂಲಿ ಮುಗಿಸಿ ತಾನು ಹೊರಡಬಹುದು. ಗ್ರಾಮಾಂತರ ಪ್ರದೇಶದಲ್ಲಿ ಆ ಕಾರ್ಯ ಆಮೇಲೆ.

ಬೆನ್ನ ಹಿಂದೆ ಗೇಬುವಿನ ಧ್ವನಿ :

" ಭೋಜನ ಸಿದ್ಧವಾಗಿದೆ!"

ಭುಜ ಕುಪ್ಪಳಿಸಿ, ತಿರುಗಿ ನೋಡದೆಯೇ, ಟೆಹುಟಿ ಅಂದ :

" ಉಪಾಹಾರ ಸಾಕು."

" ನಿಮ್ಮಿಷ್ಟ. ಭೂಮಾಲಿಕರನ್ನೂ ಮೇಲಕ್ಕೆ ಕರೀಲೇನು ?"

" ಹುಂ."

ಚಾಕರರಿಗೆ ನಿರ್ದೇಶನಗಳನ್ನು ನೀಡಲು ಗೇಬು ನಿರ್ಗಮಿಸಿದ.

ಮಹಡಿಯ ಹಜಾರದಿಂದ ಸೇವಕರ ಓಡಾಟದ ಸದ್ದು ಕೇಳಿಸಿತು.

" ಮೆತ್ತಗೆ ಮೆತ್ತಗೆ," ಎಂದಿತು ಮೇಲ್ವಿಚಾರಣೆಯ ಧ್ವನಿ.

ಟೆಹುಟಿ ಯೋಚಿಸಿದ : ಇದಿರಾಡುವುದು ಜನರಿಗೆ ರೂಢಿಯಾದರೆ ಇನ್ನು ಮುಂದೆ ಕಂದಾಯ ವಸೂಲಿ ಕಷ್ಟವಾಗುತ್ತದೆ. ನಾಲ್ಕಾರು ಭಟರಿಂದ ಆ ಕೆಲಸ ಸಾಗದು. ಪ್ರತಿ ಪ್ರಾಂತದಲ್ಲೂ ಪ್ರತ್ಯೇಕ ಪಡೆಯೇ ಬೇಕು. ಈ ಪ್ರಾಂತಪಾಲನ ಕಾವಲುಭಟರು ನಿಶ್ಶಸ್ತ್ರರಾಗಿ ಇರುತ್ತಾರಲ್ಲ. ಆಶ್ಚರ್ಯ !

" ಒಳಗೆ ಬರಬೇಕು."

—ಪುನಃ ಗೇಬುವಿನ ಧ್ವನಿ.

ಬೀದಿಯ ಕಡೆಗೆ ಮತ್ತೊಮ್ಮೆ ನೋಡಿ ಟೆಹುಟಿ ಒಳ ಬಂದ. ಎರಡು ದೊಡ್ಡ ಪೀಠಗಳು. ಆ ಕಡೆಗೂ ಈ ಕಡೆಗೂ ಅರ್ಧ ವೃತ್ತಾಕಾರದ ಇತರ ಪೀಠಗಳು. ದೊಡ್ಡ ಆಸನಗಳ ಎದುರು, ತಗ್ಗು ಪೀಠಗಳ ಮೇಲೆ, ಪಾನ ಪಾತ್ರೆಗಳು.

ಕುಳಿತುಕೊಳ್ಳುವಂತೆ ಭೂಮಾಲಿಕರಿಗೆ ಟೆಹುಟಿ ಸನ್ನೆಮಾಡಿದ—ತಾನು ಆಸೀನನಾಗುತ್ತ.

ನಡುವಸ್ತ್ರವನ್ನಷ್ಟೇ ಉಟ್ಟಿದ್ದ ದಾಸಿಯರು ಪುಟ್ಟ ಬಟ್ಟಲುಗಳನ್ನು ತಂದರು. ಎಲ್ಲರಿಗೂ ದ್ರಾಕ್ಷಿಸುರೆ. ಬೇಯಿಸಿದ ಹಂದಿ ಮಾಂಸದ ತುಣುಕು ಗಳು. ಮೆದು ರೊಟ್ಟಿ. ಆದಾದಮೇಲೆ ಪಿಷ್ಟಗಡ್ಡೆಗಳಿಂದ ಮಾಡಿದ ಸಿಹಿ

ತಿಂಡಿ. ಬರಿದಾದಂತೆ, ದಾಸಿಯರ ಒಂದು ತಂಡ ತಟ್ಟೆಗಳನ್ನು ಅವರಿಂದ ಪಡೆದುಕೊಂಡಿತು. ಇನ್ನೊಂದು ತಂಡ, ಮತ್ತೆ ತುಂಬಿದ ತಟ್ಟೆಗಳನ್ನು ತಂದಿತು. ಬರಿದು ಬಟ್ಟಲುಗಳಿಗೆ ಮತ್ತೆ ಪೇಯ.

ದಾಸಿಯರ ಅಂಗಾಂಗಗಳ ಮೇಲೆ ನಿರ್ಲಿಪ್ತ ನೋಟ ಬೀರುತ್ತ ಟೆಹುಟಿ ಮೌನವಾಗಿದ್ದ.

(ರಾತ್ರೆ ಊಟದ ವೇಳೆ ಮುಖ ತೋರಿಸಿ ಮಾಯವಾಗಿದ್ದಳು ಒಬ್ಬಳು ದಾಸಿ, ಸುಂದರಿ. ಇವತ್ತು ಅವಳು ಹೊರಗೆ ಬಂದೇ ಇಲ್ಲ.)

ಗೇಬುವಿಗೆ ಮಾತನಾಡುವ ಧೈರ್ಯವಾಗಲಿಲ್ಲ. ಉಳಿದವರೂ ಏನನ್ನೂ ಹೇಳಲಿಲ್ಲ.

ಉಪಾಹಾರ ಮುಗಿದು ಎರಡನೆಯ ಬಾರಿ ಸುರೆ ಹೀರುತ್ತ ಟೆಹುಟಿ ಕೇಳಿದ :

" ಎಲ್ಲಿ ನಿಮ್ಮ ದೇವಸೇವಕ ? ಕಾಣಿಸಲೇ ಇಲ್ಲ."

ಸಿನ್ಯುಹೆ ಉದ್ವೇಗದ ಧ್ವನಿಯಲ್ಲಿ ಗಟ್ಟಿಯಾಗಿ ಅಂದ :

" ನನ್ನ ಮನೇಲಿದ್ದಾರೆ. ನನ್ನ ಹೆಂಡತಿಗೆ ಸಕತ್ ಕಾಯಿಲೆ."

" ಹೆಂಡತಿಗೆ ಸಕತ್ ಕಾಯಿಲೆಯಾದರೂ ಭೇಟಿಗೆ ಬಂದಿರಲ್ಲ ! ನಿಮ್ಮ ನಿಷ್ಠೆಗೆ ಮೆಚ್ಚಿದೆ."

ಸಿನ್ಯುಹೆ ಹಲ್ಲು ಗಿಂಜಿದ. ಪ್ರಶಂಸೆ ಹಿತಕರವಾಗಿತ್ತು. ಆದರೆ ಒಳಗೇನೋ ಕುಟುಕಿತು ಮನೆಯಲ್ಲಿ ಹೆಂಡತಿಯ ಅವಸ್ಥೆ ಏನಾಗಿದೆಯೊ ?

ಟೆಹುಟಿ ತಿವಿಯುವ ನೋಟದಿಂದ ಗೇಬುವನ್ನು ನೋಡಿ ಗುಡುಗಿದ :

" ರಾಜಗೃಹದ ಶಸ್ತ್ರಾಗಾರದಲ್ಲಿ ಬಿಲ್ಲು ಬಾಣ ಇಲ್ಲ ?"

" ಇವೆಯಲ್ಲ ?" ಎಂದ ಗೇಬು.

" ಹಾಗಾದರೆ ನಿಮ್ಮ ಕಾವಲು ಭಟರನ್ನು ಯಾಕೆ ಸಜ್ಜುಗೊಳಿಸಿಲ್ಲ ?"

" ಕ್ಷಮಿಸಿ. ನಮ್ಮಲ್ಲಿ ಬಿಲ್ಲಾಳುಗಳ ತುಕಡಿ ಇಲ್ಲ. ನಿಮಗೆ ಗೊತ್ತಿದೆ. ದಂಡು ಇರೋದು ರಾಜಧಾನಿಯಲ್ಲಿ. ನಾವು ಬಿಲ್ಲು ಬಾಣ ಬಳಸೋದು ಬೇಟೆಯ ಸಂದರ್ಭಗಳಲ್ಲಿ ಮಾತ್ರ."

ಗೇಬುವಿನ ಧ್ವನಿಯೂ ಸಾಕಷ್ಟು ಗಟ್ಟಿಯಾಗಿತ್ತು. ಆ ದಿನ ನಡೆದುದಕ್ಕೆಲ್ಲ ತಾನೇ ಹೊಣೆಗಾರ ಎಂದು ಒಪ್ಪಲು ಅವನು ಸಿದ್ಧನಿರಲಿಲ್ಲ.

" ಹಾಗೋ ? ಎರಡು ಕಾಲಿನ ಪ್ರಾಣಿಗಳು ನಮ್ಮ ಕಡೆ ನುಗ್ಗಿದಾಗ ಆ ಶಸ್ತ್ರಗಳನ್ನು ಬಳಸಬಹುದಲ್ಲ ? "

" ಈ ಊರಿನ ಜನ ನಮ್ಮ ಮೇಲೆ ಏರಿಬರಬಹುದು ಅಂತೀರಾ ?"

" ಇವರು ನಿಮ್ಮ ಜನ. ನೀವು ಹೇಳ್ಬೇಕು."

ಗೇಬು ಉಗುಳು ನುಂಗಿದ.

" ಜನ ಕೆರಳಿದ್ದಾರೆ," ಎಂದ.

" ನಾನು ಕೆರಳಿಸಿದೆನೆ ? ಜನರಿಗೆ ಸಮಾಧಾನವಾಗಲಿ ಅಂತ ಆ ಮುಖಂಡನನ್ನು ಬಿಟ್ಟು ಬಿಡ್ಲೇನು ?"

" ಕಾವಲು ಭಟರಿಗೆ ಬಿಲ್ಲು ಬಾಣ ಕೊಡ್ತೇನೆ. ಬಹಳ ಇಲ್ಲ. ಇರೋದನ್ನೆಲ್ಲಾ ತಗೊಳ್ಳಿ."

" ನಿಮ್ಮವರಿಗಲ್ಲ. ನಮ್ಮ ಭಟರಿಗೆ ಕೊಡಿ. ಬಕಿಲನ ವಶ ಒಪ್ಪಿಸಿ. (ಮೆಟ್ಟಿಲುಗಳತ್ತ ನೋಡಿ) ಬಕಿಲ !"

ಬಕಿಲ ದಡದಡನೆ ಏರಿ ಬಂದ. ಟೆಹುಟಿ ಆಜ್ಞಾಪಿಸಿದ :

"ಶಸ್ತ್ರಾಗಾರದಲ್ಲಿ ಇರೋದನ್ನೆಲ್ಲ ವಶಕ್ಕೆ ತಗೋ."

" ಅಪ್ಪಣೆ."

ಬಕಿಲ ಇಳಿದು ಹೋಗುತ್ತಿದ್ದಂತೆ ಟೆಹುಟಿ ಅಂದ :

" ಇಲ್ಲಿ ನಮ್ಮ ಪ್ರಾಣ ರಕ್ಷಣೆಗೂ ವ್ಯವಸ್ಥೆ ಇಲ್ಲ."

ಗೇಬುಗೆ ಸಿಟ್ಟು ಬಂತು. ಅದನ್ನು ನುಂಗಿಕೊಳ್ಳಲೆತ್ನಿಸುತ್ತ ಅವನು ನುಡಿದ :

" ಟೆಹುಟಿ, ನಿಮ್ಮ ಪ್ರಾಣಕ್ಕೆ ನಾನು ಹೊಣೆ."

" ಹೊಣೆಗಾರರೇ, ಹೊರಗೆ ಈಗ ಏನಾಗ್ತಿದೆ ? ಹೇಳಿ."

" ಗೂಢಚಾರರನ್ನು ಕಳಿಸ್ತೇನೆ."

" ಇನ್ನು ಕಳಿಸಬೇಕು—ಅಲ್ಲ ?"

ಗೇಬು ಕೈ ತಟ್ಟಿದ. ಕಾಣಿಸಿಕೊಂಡ ಸೇವಕನಿಗೆ,

" ಎಲ್ಲಿ ಬೇಹಿನವರು ? " ಎಂದು ಕೇಳಿದ.

ಅವನು ಉತ್ತರಿಸಿದ :

" ಎಲ್ಲರೂ ಕೆಳಗೆ ಊಟ ಮಾಡ್ತಿದ್ದಾರೆ."

ತಿರಸ್ಕಾರದ ಧ್ವನಿಯಲ್ಲಿ ಟಿಹುಟಿ ಅಂದ :

" ಭೋಜನ !"

ಆ ಮಾತು ಕೇಳಿಸದವನಂತೆ ಗೇಬು ಸೇವಕನಿಗೆ ನಿರ್ದೇಶವಿತ್ತ :

" ತಕ್ಷಣ ಬೇಹಿನವರು ಊರೊಳಗೆ ಹೋಗಿ ಬರ್ಲಿ."

ಟಿಹುಟಿ ಮಾತು ಸೇರಿಸಿದ :

" ಹೋಗಿ ಬೇಗನೆ ವಾಪಸಾಗ್ಲಿ. ಅಲ್ಲಲ್ಲಿ ಹೊಗೆಯಾಡೋ ಕೊಳ್ಳಿಗಳಿರ್ತವೆ. ನೀರು ಸುರಿದು ಆರಿಸೋದು ಅಗತ್ಯ. ಗೇಬು, ನಾಳೆ ಬೆಳಗಿನಿಂದ ಕಂದಾಯ ವಸೂಲಿ ಆರಂಭ ಅಂತ ಡಂಗುರ ಸಾರಿಸಿ."

ಗೇಬು ಎದ್ದು ಸೇವಕನನ್ನು ಕರೆದುಕೊಂಡು ಕೆಳಗಿಳಿದು ಹೋದ.

ಪ್ರಾಂತಪಾಲ ಹೋದನೆಂದು, ಭೂಮಾಲಿಕರೂ ಪೀಠಗಳನ್ನು ಬಿಟ್ಟರು. ಅಂಗೈ ಆಡಿಸಿ, " ನೀವೆಲ್ಲ ಕೆಳಗೆ ಇರಿ," ಎಂದ ಟಿಹುಟಿ.

ತಾನು ಎದ್ದು ಮುಖಮಂಟಪಕ್ಕೆ ಹೋದ. ಬಕಿಲ ಅಂಗಳದಲ್ಲಿ ಚಟುವಟಿಕೆಯಿಂದ ಚಲಿಸುತ್ತಿದ್ದ. ತನ್ನ ಭಟರ ಭುಜಗಳ ಮೇಲೆ ಬಿಲ್ಲುಗಳನ್ನು ಕಂಡು ಟಿಹುಟಿಗೆ ಸಮಾಧಾನವಾಯಿತು.

ರಾಜಗೃಹದ ಬೀದಿಯಲ್ಲಿ ಜನರ ಸಂಚಾರ ಕಾಣಿಸಲಿಲ್ಲ. ತಾಳೆ ಮರಗಳ ನೆರಳಲ್ಲಿ ಜನರ ಸಣ್ಣ ಸಣ್ಣ ಗುಂಪುಗಳಷ್ಟೇ ಕಂಡು ಬಂದುವು. ನಗಾರಿಯವನು ಮಹಾದ್ವಾರದ ಹೊರಗೆ " ಕೇಳಿರಿ ಕೇಳಿರಿ " ಆರಂಭಿಸಿದ್ದ.

ಸಮಾಧಾನ, ಆತಂಕ; ಆತ್ಮವಿಶ್ವಾಸ, ಅಳುಕು.

ಮೆದುಳು ಧಿಮಿಗುಡುತ್ತಿತ್ತು. ಮಿಡಿಯುತ್ತಿದ್ದ ಕೆನ್ನೆಯ ಧಮನಿಯನ್ನು ತೋರುಬೆರಳಿನಿಂದ ಒತ್ತಿ. 'ತುಸು ವಿಶ್ರಮಿಸೋದು ವಾಸಿ' ಎಂದುಕೊಂಡು, ಒಳ ಬಂದು, ಅತಿಥಿ ಕೊಠಡಿಗೆ ಟಿಹುಟಿ ನಡೆದ.

* * * *

ಕೆಳಗೆ ಬಂದು ಮೆನೆಪ್‌ಟಾನ ಬಳಿ ಸಾರಿ, ಅರೆತೆರೆದಿದ್ದ ಅವನ ಕಣ್ಣುಗಳನ್ನು ಗೇಬು ದಿಟ್ಟಿಸಿ ನುಡಿದ :

" ಯಾವನಯ್ಯ ನೀನು ? ಏನು ಮಾತಾಡ್ದೆ ! ಏನು ಮಾತಾಡ್ದೆ ! ಅಬ್ಬುಗೆ ಹೋದವನು ಬುದ್ಧೀನ ಕಾಣಿಕೆ ಕೊಟ್ಟು ಬಂದಿಯಾ ?"

ಮೆನೆಪ್‌ಟಾನ ಎವೆಗಳು ತುಸು ತೆರೆದುವು. ಆದರೆ ತುಟಿಗಳು ಪರಸ್ಪರ ಅಂಟಿಕೊಂಡೇ ಇದ್ದವು.

ಗೇಬು ತಲೆಯಲುಗಿಸಿ ಇಪ್ಯುವರ್‌ನತ್ತ ಹೊರಳಿದ :

"ಹೋಗು ಉಂಡು ಬಾ. (ಭಟರತ್ತ ಬೊಟ್ಟುಮಾಡಿ) ಅವರಿಗೂ ಹೇಳು. ಗೇಬು ನೌಕರರನ್ನು ಉಪವಾಸ ಕೆಡವಿದ ಅನ್ನೋ ದೂರು ಬೇಡ."

"ನೀವು ವಿಶ್ರಾಂತಿ ತಗೊಳ್ಳಿ."

"ಹುಂ. ಬೇಹಿನವರು ಬಂದ ಕೂಡಲೆ ಎಬ್ಬಿಸು."

ಒಳಗಿನ ಕೊಠಡಿಗಳತ್ತ ಹೊರಟ ಗೇಬುವನ್ನು ಸಿನ್ಯುಹೆ ಸಮೀಪಿಸಿದ.

"ನನ್ನ ಹೆಂಡತಿ...."

"ಗೊತ್ತು. (ಕ್ಷಣ ಯೋಚಿಸಿ) ಮನೆಗೆ ಹೋಗಿ ಸ್ವಲ್ಪ ಹೊತ್ತು ಬಿಟ್ಕೊಂಡು ಅರ್ಚಕರು ಬರ್‍ಲಿ. ಇನ್ನೊಂದು ಸರ್ತಿ ಟಿಹುಟಿ ಕೈಯಲ್ಲಿ ಬೈಸ್ಕೊಳ್ಳೋದು ಯಾಕೆ ?"

ಸಿನ್ಯುಹೆ ವಂದಿಸಿ, ಹೊರಟ.

ಇತರ ಭೂಮಾಲಿಕರು ಅಂಗಣದಲ್ಲಿ ತಾವರೆ ಕೊಳದತ್ತ, ಪೊದೆ ಗಿಡಗಳ ನೆರಳಿನತ್ತ ನಡೆದರು. ರಾ ಪಶ್ಚಿಮದ ಕಡೆಗೆ ತಿರುಗಿದಂತೆ ಪ್ರಾಕಾರದ ನೆರಳು ಅಂಗಳವನ್ನು ಆವರಿಸತೊಡಗಿತ್ತು. ಅದು ಹಿತಕರವಾಗಿತ್ತು.

ಉಣ್ಣುವುದು ತನ್ನಿಂದಾಗದು ಎಂದು ತೋರಿತು ಇಪ್ಯುವರ್‌ಗೆ. ಮನಸ್ಸು ಖಿನ್ನವಾಗಿತ್ತು. ಯಾವುದಾದರೂ ಮೂಲೆಯಲ್ಲಿ ಕುಳಿತು ಮನ ದಣಿಯೆ ಅಳಬೇಕೆನಿಸಿತು. ಆದರೆ, ರಾಜಗೃಹದ ಉದ್ಯೋಗಿಯಾದ ತನಗೆ ಅದಕ್ಕೆಲ್ಲಿ ಬಿಡುವು, ಸ್ವಾತಂತ್ರ್ಯ ? ತಾನು ಅಳುವಂತಿಲ್ಲ — ಅಂದ್ಕೊಂಡ.

(ಮೆನೆಪ್‌ಟಾ ಇಪ್ಯುವರ್‌ಗೆ ಬಹಳ ಪರಿಚಿತನಲ್ಲ. ತೀರಾ ಅಪರಿಚಿತನೂ ಅಲ್ಲ. ತಿಂಗಳ ಹಿಂದೆ ತನ್ನ ಮನೆಗೆ ಆತ ಬಂದು ಕೇಳಿದ್ದ :

"ಮಗನಿಗೆ ಓದು ಬರಹ ಹೇಳಿ ಕೊಡೋದು ಸಾಧ್ಯವಾ ?"

ದೇವಮಂದಿರದಲ್ಲಿ ತರಗತಿ ಇರಲಿಲ್ಲ. ಅರ್ಚಕನ ಸಮ್ಮತಿ ಪಡೆದು

ಇಪ್ಯುವರ್ ಪ್ರಾಂತಪಾಲನ ಮಕ್ಕಳಿಗೆ ರಾಜ ಗೃಹದಲ್ಲೇ ಅಕ್ಷರಾಭ್ಯಾಸ ಮಾಡಿಸುತ್ತಿದ್ದ.

ತನ್ನ ಮಕ್ಕಳಿಗೂ ವಿದ್ಯಾಭ್ಯಾಸ ಕೊಡಿಸಬೇಕೆಂದು ಹಿರಿಯ ಭೂಮಾಲಿಕ ನುಟ್‌ಮೋಸ್ ಬಯಸಿದ್ದ. ಪಾಠ ಹೇಳಿಕೊಡಲು ಅವನ ಮನೆಗೆ ಇಪ್ಯುವರ್ ಹೋದುದು ಸಂಜೆಯ ಹೊತ್ತು. ಎರಡು ದಿನ ಹುಡುಗರು ಕೈಗೆ ಸಿಕ್ಕಿದರು. ಆಮೇಲೆ, ಹೋದುದಷ್ಟೇ ಬಂತು. ನುಟ್‌ಮೋಸ್‌ನ ಹೆಂಡತಿ, "ಮಕ್ಕಳು ಲಿಪಿ ಬೇಡ ಅಂತವೆ," ಎಂದಳು. ಅಲ್ಲಿಗೆ ಅದು ಮುಗಿದಿತ್ತು.

ಮೆನೆಪ್‌ಟಾ ಕೇಳಿದಾಗ, 'ವಿಚಿತ್ರ ಮನುಷ್ಯ. ಇದೇನು ಹುಚ್ಚು ಇವನಿಗೆ?' ಎನಿಸಿತ್ತು. ನುಟ್‌ಮೋಸ್‌ನ ಮನೆಯಲ್ಲಿ ಆದುದನ್ನು ತಿಳಿಸಿ, "ಓದು ಬರಹ ಕಲಿಯೋದು ಸುಲಭ ಅಲ್ಲ," ಎಂದ.

"ಹುಡುಗ ಬಹಳ ಆಸೆ ಪಡ್ತಾನೆ."

"ಸರಿಯಪ್ಪ. ಹೇಳ್ಕೊಡ್ತೀನೆ. ಸಾಯಂಕಾಲ ನಾನು ಮನೆಗೆ ಬಂದ್ಮೇಲೆ. ಯಾವಾಗಿನಿಂದ ಕಳಿಸ್ತೀಯಾ ?"

"ಅಬ್ಟು ಯಾತ್ರೆಗೆ ಹೋಗಿ ಬರ್ತೇವೆ."

"ಒಳ್ಳೇದು, ಒಳ್ಳೇದು. ಆಮೇಲೆಯೇ ಶುರು ಮಾಡೋಣ.")

ಮೆನೆಪ್‌ಟಾನನ್ನು ಕುರಿತ ನೆನಪಿನಿಂದ ಇಪ್ಯುವರ್‌ಗೆ ಒಂದು ಬಗೆಯ ಸಮಾಧಾನ. ಅಸಾಧಾರಣ ಮನುಷ್ಯ ಈ ಮನೆಪ್‌ಟಾ. ಗೊತ್ತೇ ಇರಲಿಲ್ಲ. ಹೊಡೆದಾಗಲೂ ಬಿಗಿದು ಕಟ್ಟಿದಾಗಲೂ ಮಿಸುಕಲಿಲ್ಲವಲ್ಲ ? ಅದ್ಭುತ ! ಅದ್ಭುತ !

ಇಷ್ಟು ಬಲ್ಲವನು ಮಗನಿಗೆ ಓದು ಬರಹ ಕಲಿಸಲು ಯೋಚಿಸಿದ್ದು ಸಹಜವೇ.

ಒಳ್ಳೆಯವನು, ಪಾಪ. ಬಿಡುಗಡೆ ಯಾವಾಗಲೊ ? ಒಂದಿಷ್ಟು ಆಹಾರ ಕೊಡಬಹುದಾಗಿತ್ತು. ಕೈಗಳನ್ನು ಕಟ್ಟಿರುವಾಗ ತಿನ್ನುವುದು ಹೇಗೆ ? ಪಾನೀಯ ಕುಡಿಯಬಹುದು. ಸುಲಭ. ಆದರೆ ಕುಡಿಸುವವರು ಯಾರು ? ಸೇವಕರು ಆ ಕೆಲಸ ಮಾಡಲಾರರು. ತಾನು ?........

ಸಭಾಂಗಣದ ಮೂಲೆಯಲ್ಲಿ ನೆಲದ ಮೇಲೆ ಗೋಡೆಗೊರಗಿ ಕುಳಿತಿದ್ದ ಒಬ್ಬ ಸೇವಕನನ್ನು ಇಪ್ಯುವರ್ ಕರೆದ.

"ಅಪ್ಪ ಇಲ್ಲಿ ಬಾ"

ಆತ ಹತ್ತಿರ ಬಂದಾಗ ಕೇಳಿದ:

"ಊಟ ಆಯ್ತಾ ?"

ಪ್ರಾಕಾರದ ಬಳಿ ಇದ್ದ ಬಕಿಲ ಮತ್ತಿತರರ ಕಡೆ ನೋಡಿ, "ಇಲ್ಲ. ಅವರ ದಾದ ಮೇಲೆ ನಮ್ಮದು," ಎಂದ, ಸೇವಕ.

"ನನಗೆ ಊಟ ಬೇಡ, ಕುಡಿಯೋದಕ್ಕೆ ಏನಾದರೂ ತಗೊಂಡು ಬರ್‍ತೀಯಾ ?"

"ದ್ರಾಕ್ಷಿಸುರೆ ತರಲಾ ?"

"ಅದೆಲ್ಲ ದೊಡ್ಡೋರಿಗೆ...."

"ಖಿವವ ? "

"ಹೂಂ ಹೊಟ್ಟೇಲಿ ಏನೂ ಇಲ್ಲ.ಒಂದು ಬಟ್ಟಲು ಸಾಲ್ದು."

"ಎರಡು ತರ್‍ತೀನಿ."

ಪಾನೀಯ ಬಂತು. ಕಾವಲು ಭಟರಲ್ಲಿ ಅರ್ಧದಷ್ಟು ಜನ ಊಟಕ್ಕೆ ಹೋದರು. ಉಳಿದವರು ಬೀದಿಯ ಮೇಲೂ ಊರಿನ ಮೇಲೂ ಗಮನ ಇಡುವುದರಲ್ಲಿ ನಿರತರಾಗಿದ್ದರು. ಮೆನೆಪ್‌ಟಾನನ್ನು ಕಟ್ಟಿದ್ದ ಕಂಬ ಅವರಿಂದ ಸಾಕಷ್ಟು ಮರೆಯಾಗಿತ್ತು. ತೂಕಡಿಸ ತೊಡಗಿದ್ದ ಆ ಸೇವಕನಿಗೆ ಇಪ್ಯುವರ್ ಅಂದ:

"ನೆಂಜೋಕೆ ಏನಾದರೂ ತಗೊಂಡು ಬಾರೊ."

ಸೇವಕ ಹೋದೊಡನೆಯೇ ಇಪ್ಯುವರ್ ಖಿವವ ತುಂಬಿದ್ದ ಒಂದು ಬಟ್ಟಲನ್ನೆತ್ತಿ ಕೊಂಡು ಮೆನೆಪ್‌ಟಾನನ್ನು ಕಟ್ಟಿದ್ದ ಕಂಬದೆಡೆಗೆ ಸಾಗಿದ, ಅಲ್ಲಿ ಅತ್ತಿತ್ತ ಒಮ್ಮೆ ದೃಷ್ಟಿ ಬೀರಿ, ಬಟ್ಟಲನ್ನು ಮೆನೆಪ್‌ಟಾನ ತುಟಿಗಳಿಗೆ ಹಿಡಿದು, " ಕುಡಿ, ಕುಡಿ.... ಬೇಗ ಕುಡಿ" ಎಂದ, ಪಿಸುದನಿಯಲ್ಲಿ.

ಮೆನೆಪ್‌ಟಾನ ತುಟಿಗಳ ಮೇಲೆ ಮುಗುಳುನಗೆ ಮಿಂಚಿತು.ಆತ ಒಂದು ಗುಟುಕು ಹೀರಿದ ಕಣ್ಣುಗಳನ್ನು ಮುಚ್ಚಿಕೊಂಡ.

"ಇನ್ನಷ್ಟು ಕುಡಿ."

ಕಣ್ಣು ತೆರೆದು, ಮತ್ತೊಂದು ಗುಟುಕು ಮೆನೆಪ್‌ಟಾ ಹೀರಿದ. ಇನ್ನು ಬೇಡ ಎನ್ನುವಂತೆ ಗೋಣು ಆಡಿಸಿದ.

ಒತ್ತಾಯಿಸುತ್ತ ಅಲ್ಲಿ ನಿಲ್ಲುವುದು ಅಪಾಯಕ್ಕೆ ಆಹ್ವಾನ ಎಂದು ಬಲ್ಲ, ಇಪ್ಯುವರ್. ಆತ ಸರಸರನೆ ಪೆಟಾರಿಯ ಬಳಿಗೆ ಹಿಂದಿರುಗಿದ. ಯಾರ ಕಣ್ಣಿಗೂ ಬೀಳಲಿಲ್ಲ ಎಂದು ಸಮಾಧಾನ ಪಡುತ್ತ, ಪೆಟಾರಿಗೆ ಒರಗಿ ಕುಳಿತು, ಮೆನೆಪ್‌ಟಾಗೆ ನೀಡಿದ್ದ ಬಟ್ಟಲಿನಿಂದಲೇ ಖಿವವ ಸೇವನೆ ಆರಂಭಿಸಿದ.

ಪಾನೀಯ ರುಚಿಕರವಾಗಿತ್ತು.

* * * *

ಮೆನೆಪ್‌ಟಾನ ಬಿಡುಗಡೆ ಕ್ಷಣಮಾತ್ರದಲ್ಲಿ ಆಗುವ ಕೆಲಸವಲ್ಲ—ಎಂಬುದು ಸ್ನೊಫ್ರುಗೆ ಮನವರಿಕೆಯಾಗಿತ್ತು. ಕೆಲವೇ ಜನ ಮತ್ತೆ ರಾಜ ಗೃಹಕ್ಕೆ ಧಾವಿಸುವುದರಿಂದ ಆಗುವ ಪ್ರಯೋಜನವೇನು ?

ದಾರಿಯಲ್ಲಿ ಸೆಬೆಕ್ಖುಗೆ ಆತ ಹೇಳಿದ :

" ಹೀಗೂ ಆಗಬಹುದು ಅಂತ ಕನಸಿನಲ್ಲೂ ಎಣಿಸಿರ್‍ಲಿಲ್ಲ."

ಸೆಬೆಕ್ಖುಗೆ ಮಾತು ಕಟ್ಟಿತ್ತು. ಪ್ರಯಾಸದಿಂದ ಅವನೆಂದ :

" ನಾವು ಒಗ್ಗಟ್ಟಾಗಿರ್‍ಬೇಕು, ಧೈರ್ಯದಿಂದಿರ್‍ಬೇಕು."

" ರಾಜದ್ರೋಹಿ ಅಂತ ಮೆನೆಪ್‌ಟಾನನ್ನು ಒಯ್ದು ರಾಜಧಾನಿಯಲ್ಲಿ ಸೆರೆಯಲ್ಲಿ ಇಟ್ಟರೆ ?"

" ಅದಕ್ಕೆ ಅವಕಾಶ ಕೊಡಬಾರ್‍ದು. ಅವನನ್ನು ನಾವು ಬಿಡಿಸ್ಕೋಬೇಕು."

" ಊರಿನ ಜನವೆಲ್ಲ ರಾಜಗೃಹದ ಮುಂದೆ ನಿಂತು, ಮೆನೆಪ್‌ಟಾನನ್ನು ಬಿಟ್ಬಿಡಿ—ಅಂತ ಕೂಗಿದರೆ ಅದು ಸಾಧ್ಯವಾದೀತು."

ಒಂದೆರಡು ತಾಳೆ ಮರಗಳು ಹತ್ತಿರವೇ ಇದ್ದುವು. ಬುಡದಲ್ಲಿ ನೆರಳಿತ್ತು. ಅಲ್ಲಿ ಸ್ನೊಫ್ರು ಮತ್ತು ಸೆಬೆಕ್ಖು ನಿಂತರು. ಉಳಿದವರೂ ಅಲ್ಲಿ ಗುಂಪುಗೂಡಿದರು....

ಮನವಿ ಸಲ್ಲಿಸಿದ ಮೆನೆಪ್‌ಟಾನಿಗೆ ಹೊಡೆದದ್ದು, ಅವನನ್ನು ಕಂಬಕ್ಕೆ ಬಿಗಿದದ್ದು ಅನ್ಯಾಯ. ಅಂಗಳದಲ್ಲಿ ನೆರೆದಿದ್ದ ಯಾರಿಗೂ ಆ ಬಗೆಗೆ ಭಿನ್ನಾಭಿಪ್ರಾಯವಿರಲಿಲ್ಲ.

ಸುದ್ದಿ ಹಬ್ಬಿದಾಗ ಊರಿನ ಇತರರೂ " ಛೆ! ಛೆ!" ಎಂದರು.

ಯಾರೋ ಹತ್ತಾರು ಮಂದಿ ಮಾತ್ರ "ಮಾತು ಅತಿಯಾಯ್ತೂಂತ ತೋರ್ತದೆ," ಎಂದು ರಾಗ ಎಳೆದರು.

ನಗಾರಿಯವನು ಬೀದಿ ಕೇರಿಗಳಿಗೆ ಭೇಟಿ ನೀಡಿದ. ಕಂದಾಯ ವಸೂಲಿಯ ಡಂಗುರದ ಜತೆಗೆ ಮೆನೆಪ್‌ಟಾನ ಬಂಧನದ ಸುದ್ದಿಯೂ ಮೌನ ಪ್ರಸಾರ ಪಡೆಯಿತು.

ಜನ ಬೀದಿಗಿಳಿದರು. ರಾಜಗೃಹದ ಬಳಿ ಸಾರಿ ಕೈದಿಯನ್ನು ನೋಡುವ ಕುತೂಹಲ ಎಷ್ಟೋ ಜನರಿಗೆ. ಹತ್ತಿರ ಹೋಗಿ ಬಂದ ಒಬ್ಬಿಬ್ಬ ರೆಂದರು :

"ಮಹಾದ್ವಾರ ಮುಚ್ಚಿದೆ. ಪ್ರಾಕಾರದ ಮೇಲೆ ಬಿಲ್ಲಾಳುಗಳಿದ್ದಾರೆ. ಯಾರಿಗೂ ಪ್ರವೇಶವಿಲ್ಲ."

ಭೂಮಾಲಿಕ ಸಿನ್ಯುಹೆ ಮನೆಗೆ ಬಂದನೆಂಬ ಸುದ್ದಿ ಹಬ್ಬಿತು. ಕೆಲವರು ಅಲ್ಲಿಗೆ ಓಡಿದರು. ಔಷಧಿ ಸೇವನೆಯ ಫಲವಾಗಿ ಗಾಢನಿದ್ದೆಯಲ್ಲಿದ್ದ ಪತ್ನಿ ಯನ್ನು ನೋಡಿ ಬಂದು, ರಾಜಗೃಹದಲ್ಲಿ ನಡೆದದ್ದನ್ನು ಅರ್ಚಕನಿಗೆ ಸಿನ್ಯುಹೆ ವಿವರಿಸತೊಡಗಿದ್ದ. ಓಡಿ ಬಂದವರನ್ನು ಕಂಡು ಅವನೆಂದ :

"ಆ ಮೆನೆಪ್‌ಟಾಗೆ ಯಾರ ಮುಂದೆ ಏನು ಮಾತಾಡಬೇಕು ಅನ್ನೋ ಪರಿಜ್ಞಾನವಿಲ್ಲ. ನೀವು ಎಲ್ಲರೂ ಹೋಗಿ, 'ತಪ್ಪಾಯ್ತು ಕ್ಷಮಿಸಿ' ಅಂತ ಹೇಳಿ. ಟಿಹುಟಿ ಅವನನ್ನು ಬಿಟ್ಟರೂ ಬಿಡಬಹುದು. (ಅರ್ಚಕನತ್ತ ತಿರುಗಿ) ನಿಮ್ಮನ್ನು ಟಿಹುಟಿ ಕೇಳಿದರಪ್ಪ. ಸ್ವಲ್ಪ ಹೊತ್ತು ಬಿಟ್ಕೊಂಡು ಬರೋದಕ್ಕೆ ಹೇಳು ಅಂದರು ಪ್ರಾಂತಪಾಲರು."

ಸಿನ್ಯುಹೆಯ ಸಲಹೆ ತನಗೆ ತಲಪಿದಾಗ ಸ್ನೊಫ್ರು ಸಿಟ್ಟಾಗಿ ನುಡಿದ :

"ಆಹಾ ! ತಪ್ಪಾಯ್ತು, ಕ್ಷಮಿಸಿ ! ತಪ್ಪು ಮಾಡ್ದೋರು ಯಾರು ? ಕ್ಷಮಿಸಬೇಕಾದೋರು ಯಾರು ?"

ಸೆಬೆಕ್ಖು ಅಂದ :

"ಮೆನೆಪ್‌ಟಾನನ್ನು ಬಿಟ್ಟರೆ ಮಾತ್ರ ಕಂದಾಯ ಸಂದಾಯ !"

ಹೌದು, ಹೌದು, ಹೌದು ಎಂದು ತಲೆಯಾಡಿಸಿದರು ಜನ.

* * * *

ಜನರ ನಿರ್ಧಾರದ ವರದಿಯನ್ನು ಗೂಢಚಾರರು ರಾಜಗೃಹಕ್ಕೆ ಒಯ್ದರು. ಎವೆ ಮುಚ್ಚದೆ ಛಾವಣಿಯತ್ತ ನೋಡುತ್ತ ಹಾಗೆಯೇ ಮಲಗಿದ್ದ ಗೇಬು ಇಪ್ಯುವರ್ ಬಾಗಿಲು ತಟ್ಟುವುದಕ್ಕೆ ಮುಂಚೆ ತಾನೇ ಎದ್ದ.

“ ಸರಿ. ವಾಪಸು ಹೋಗಿ ಅವರ ಮಧ್ಯದಲ್ಲೇ ಇರಿ ” ಎಂದ, ಗೂಢ ಚಾರರಿಗೆ.

ಗೇಬು ಮಹಡಿಯ ಮೆಟ್ಟಲೇರುತ್ತಿದ್ದಂತೆ, ಟೆಹುಟಿಯ ಧ್ವನಿ ಕೇಳಿಸಿತು :

“ ಗೂಢಚಾರರು ಬಂದಿಲ್ಲವಾ ಇನ್ನೂ ?”

ಆತನಿದ್ದ ಕೊಠಡಿಯನ್ನು ಹೊಕ್ಕು ಗೇಬು ಅಂದ.

“ ಪರಿಸ್ಥಿತಿ ಗಂಭೀರವಾಗಿದೆ ಟೆಹುಟಿ.”

“ ಸುದ್ದಿ ಏನೂಂತ ತಿಳಿಸಿ, ಗಂಭೀರ ಹೌದೋ ಅಲ್ಲವೋ ನಾನು ತೀರ್ಮಾನಿಸ್ತೇನೆ.”

“ ಊರಿನ ಜನ ಸಿಟ್ಟಾಗಿದ್ದಾರೆ. ಮೆನೆಪ್‌ಟಾನನ್ನು ಬಿಟ್ಟರೆ ಮಾತ್ರ ಕಂದಾಯ ಸಂದಾಯ ಅಂತೆ....ಅದನ್ನು ನಿಮಗೆ ತಿಳಿಸೋದಕ್ಕೆ ಅವರು ಇಲ್ಲಿಗೆ ಬರ್‍ತಾರಂತೆ.”

“ ಕೊಬ್ಬಿದ ಹಂದಿಗಳು ! ಹುಟ್ಟಡಗಿಸಬೇಕು. ಬರಲಿ ! ಬರಲಿ !”

* * * *

ಅರ್ಚಕ ಅಪೆಟ್ ರಾಜಗೃಹ ತಲಪಿದಾಗ ಟೆಹುಟಿ ಮೊಗಸಾಲೆಯಲ್ಲಿ ಪ್ರಾಂತಪಾಲನ ಜತೆ ಕುಳಿತಿದ್ದ.

ಗೇಬು “ ಬನ್ನಿ, ಅಪೆಟ್ ” ಎಂದ.

ಆದರೆ ಕುಳಿತುಕೊಳ್ಳುವಂತೆ ಟೆಹುಟಿ ಸನ್ನೆಮಾಡಲಿಲ್ಲ,

ಮುಖ ಕಪ್ಪಿಟ್ಟರೂ ಅಪೆಟ್ ಪ್ರಯತ್ನಪೂರ್ವಕವಾಗಿ ನಸುನಕ್ಕು, ನಿಂತುಕೊಂಡ.

“ಅರ್ಚಕರಿಗೆ ನಾವು ನಮಿಸಬೇಕು ಅಲ್ಲವಾ ?”

—ಟೆಹುಟಿ ವ್ಯಂಗ್ಯೋಕ್ತಿಯಾಡಿದ.

ಅಪೆಟ್‌ನೆಂದ :

" ವಯಸ್ಸಿನಲ್ಲಿಲ್ಲವಾದರೂ ಅಂತಸ್ತಿನಲ್ಲಿ ನಾನು ಕಿರಿಯ ದೇವಸೇವಕ. ರಾಜಧಾನಿಯಿಂದ ಬಂದಿರೋ ಅಧಿಕಾರಿ ಮಹಾಶಯರಿಗೆ ನಾನೇ ವಂದಿಸ್ತೇನೆ."

" ಈ ಪ್ರಾಂತದ ಜನತೆಯ ಧಾರ್ಮಿಕ ರೀತಿ ರಿವಾಜಗಳ ಜವಾಬದಾರಿ ನಿಮ್ಮದು. ಏನು ಹೇಳ್ತೀರಿ ?"

" ಒಬ್ಬ ಈ ದಿನ ರೀತಿ ರಿವಾಜುಗಳನ್ನು ಮೀರಿ ನಡೆದ ಅಂತ ಕೇಳ್ದೆ. ಕೇಳಿ ಬೇಸರವಾಯ್ತು."

" ಇಲ್ಲಿನ ಜನ ಪಾಪ ಭೀರುಗಳಾಗಿ ವಿನಯ ಸಂಪನ್ನರಾಗಿ, ಸ್ವಾಮಿ ಭಕ್ತರಾಗಿ ವರ್ತಿಸಿದರೆ ನಿಮ್ಮ ದೇವಮಂದಿರದ ಕೀರ್ತಿ ಹೆಚ್ತದೆ."

" ಹಾಗೇ ಆಗಲಿ ಅನ್ನೋದೆ ನನ್ನ ನಿತ್ಯಪ್ರಾರ್ಥನೆ."

" ನೀವು—ಅಪೆಟ್ ಅಲ್ಲವಾ ನಿಮ್ಮ ಹೆಸರು ?"

" ಹೌದು ಮಹಾಶಯ."

" ಅಪೆಟ್ ನೀವು ಕೇಳಿರಬಹುದು : ಮಹಾಪ್ರಭು ಪೆರೋಗು ಮಹಾ ಅರ್ಚಕರಿಗೂ ಸಣ್ಣ ಪುಟ್ಟ...."

" ಹೌದು, ಕೇಳಿದ್ದೇನೆ."

" ಅದು ರಾಜಧಾನಿಗೆ ಸಂಬಂಧಿಸಿದ್ದು. ಅದರಿಂದ ನೀವು ಪ್ರಭಾವಿತ ರಾಗಬಾರದು.

"........"

" ಅನ್ನಿ, ಅರ್ಥವಾಗ್ಲಿಲ್ಲ ಅಂತ. ದೇಶದ ಸಮಸ್ಯೆಗಳೇನಿದ್ದರೂ ರಾಜ ಧಾನಿಯಲ್ಲೇ ಪರಿಹಾರವಾಗ್ತವೆ. ಪ್ರಾಂತಗಳಲ್ಲಿಯೋ ಅರ್ಚಕರು ತಲೆ ಕೆಡಿಸ್ಕೋಬೇಕಾಗಿಲ್ಲ. ಸಾಮಾಜಿಕ ಆಗು ಹೋಗುಗಳಲ್ಲಿ ದೇವಮಂದಿರದ್ದು ಅತ್ಯಂತ ಮಹತ್ವದ ಪಾತ್ರ. ದೇವರು ಇಷ್ಟಪಡದೆ ಬೀಜ ಮೊಳೆಯೋದಿಲ್ಲ, ಸುಖ ಬೆಳೆಯೋದಿಲ್ಲ."

ಟೆಹುಟಿಯ ಮಾತು ಮುಗಿಯೋದಕ್ಕೆ ಮುನ್ನವೇ ಏದುಸಿರು ಬಿಡುತ್ತ ಗೂಢಚಾರನೊಬ್ಬ ಮೆಟ್ಟಲುಗಳನ್ನೇರಿ ಬಂದು ತಡೆ ತಡೆದು ನುಡಿದ :

" ಪೆರೋನ ಆಯುರಾರೋಗ್ಯ ಹೆಚ್ಚಲಿ.... ಕ್ಷಮಿಸ್ಬೇಕು.... ಊರಿನ

ಜನರೆಲ್ಲ ಮುಖ್ಯ ಬೀದಿಯಲ್ಲಿ ನೆರೆದು ರಾಜಗೃಹದ ಕಡೆಗೆ ಹೊರಟಿದ್ದಾರೆ...."

ಟೆಹುಟಿಯೆಂದ :

" ಕೈಗಳಲ್ಲಿ ತಾಳೆಕೊರಡು, ಬಡಿಗೆ ? ಹೆಂಗಸರು ಮಕ್ಕಳು ?"

" ಬರಿಗೈ. ಗಂಡಸರು ಮಾತ್ರ."

" ಗೇಬು ! ನಮ್ಮನ್ನು ಈ ಹುಚ್ಚು ಜನ ಸೆರೆಹಿಡೀತಾರಾ ? ಹಹ್ಹಹ್ಹ !"

" ಬಡಪಾಯಿಗಳು,"ಎಂದ ಗೇಬು.

ಅಪೆಟ್ ಮೆಲುದನಿಯಲ್ಲಿ ಹೇಳಿದ :

"ನನ್ನ ಅಲ್ಪಮತಿಗೆ ಹೀಗೆ ತೋರ್‍ತದೆ. ಜನ ಹುಲ್ಲಿನ ಬಣವೆ ಇದ್ದ ಹಾಗೆ. ಮೆತ್ತಗಿದ್ದರೆ ಎತ್ತು ದನ ಕರುಗಳಿಗೆ ಆಹಾರ. ಒಣಗಿದರೆ ಮತಿಗೆಟ್ಟ ಒಬ್ಬನ ಒಂದು ಕೊಳ್ಳಿ ಸಾಕು. ಬೆಂಕಿ—ಬೂದಿ."

ಟೆಹುಟಿ ಹುಬ್ಬುಕುಣಿಸಿದ.

" ಅಲ್ಪಮತಿಯಲ್ಲ ಅಪೆಟ್. ನೀವು ಬಲು ಜಾಣ."

" ಇದು ನನ್ನ ಯೋಗ್ಯತೆಗೆ ಮೀರಿದ ಪ್ರಶಂಸೆ, ಮಹಾಶಯ."

" ಠಕ್ಕು ವಿನಯ ಬೇಡ. ಈಗ ಇಲ್ಲಿಗೆ ಸಾಗಿಬರ್‍ತಿರೋ ಬಣವೇನ ಮೆತ್ತಗೆ ಮಾಡಿ ನೋಡೋಣ."

ಅಪೆಟ್ ಏನನ್ನೂ ಹೇಳಲಿಲ್ಲ. ಟೆಹುಟಿಯೇ ಅಂದ :

"ಹೆದರಿದಿರಾ ? ಅದು ಅರ್ಥವಾಗ್ಲಿಲ್ಲ ಅಂತ....ಇಲ್ಲಿ ಕೇಳಿ ಅಪೆಟ್. ಇದು ನಿಮ್ಮ ನಿಷ್ಠೆಯ ಪರೀಕ್ಷೆ. ದೇವರ ಹೆಸರಿನಲ್ಲಿ, ನನ್ನ ಪರವಾಗಿ, ಈ ಪ್ರಾಂತಪಾಲರ ಪರವಾಗಿ, ಆ ಜನರಿಗೆ ಬುದ್ಧಿಮಾತು ಹೇಳಿ. ಅದು ಫೆರೋ ಮಹಾಪ್ರಭುವಿಗೆ ಇಷ್ಟವಾಗೋ ಕೆಲಸ. ದೇವರು] ಮೆಚ್ಚೋ ನಿಲುವು."

" ಆಗಲಿ....."

ಮೊದಲು ಅಸ್ಪಷ್ಟ ಸ್ವರಗಳು. ಹತ್ತಿರ ಹತ್ತಿರ ಬರುತ್ತ ಅವು ಬಲ ವಾದುವು.

ಗೇಬು ಮುಖಮಂಟಪಕ್ಕೆ ಹೋಗಿ, ಮೇಲೇಳುತ್ತಿದ್ದ ಧೂಳನ್ನು

ನೋಡಿದ. ಸಮೀಪಿಸುತ್ತಿದ್ದ ಜನಜಂಗುಳಿಯನ್ನು ದಿಟ್ಟಿಸಿದ.

" ಸಹಸ್ರಾರು ಜನ ?"

ಹೌದು ಎಂದು ತಲೆಯಾಡಿಸಿದ ಗೇಬು.

" ಬಕಿಲನನ್ನು ಕರೀರಿ !"

ಮೇಲೆ ಬಂದು ಕೈಕಟ್ಟಿ ತಲೆ ಬಗ್ಗಿಸಿ ನಿಂತ ಬಕಿಲನಿಗೆ ಟೆಹುಟಿ ಆದೇಶವಿತ್ತ :

" ಈ ಅರ್ಚಕರನ್ನು ಮಹಾದ್ವಾರದ ಮುಂದೆ ಜನರೆದುರು ನಿಲ್ಲಿಸು. ಇವರು ಆ ಜನರಿಗೆ ಬುದ್ಧಿವಾದ ಹೇಳ್ತಾರೆ."

" ಅಪ್ಪಣೆ."

ಕಿರುನಗೆಯನ್ನು ಆತ ಹತ್ತಿಕ್ಕಿದಂತೆ ಕಂಡಿತು.

" ಬುದ್ಧಿಮಾತು ನಾಟದೇ ಇದ್ದಾಗ ಅಗತ್ಯವಿರೋದನ್ನು ನೀನು ಮಾಡು."

ಮತ್ತೊಮ್ಮೆ ಬಕಿಲನೆಂದ :

" ಅಪ್ಪಣೆ."

ಪ್ರಾಕಾರದ ಹೊರಗಿನಿಂದ ಜನಸ್ತೋಮದ ಕರೆ ಕೇಳಿಸಿತು :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

ಬಕಿಲ ಅರ್ಚಕನೆಡೆಗೆ ನೋಡಿದ. ಅಪೆಟ್ ಮೌನವಾಗಿ ಆವನನ್ನು ಹಿಂಬಾಲಿಸಿದ.

* * * *

ರಾಜಗೃಹದತ್ತ ಸಾಗಿ ಬಂದ ಜನರನ್ನು ಸಂದೇಹಗಳು ಬಾಧಿಸಿದ್ದುವು.

ಒಬ್ಬ ಪ್ರಶ್ನಿಸಿದ್ದ :

" ಅವರು ನಮ್ಮ ಮೇಲೆ ಬಾಣ ಪ್ರಯೋಗಿಸಿದರೆ ?"

ಇನ್ನೊಬ್ಬ ಆ ಪ್ರಶ್ನೆಯನ್ನು ತುಂಡರಿಸಿದ್ದ :

" ನಾವೇನೂ ಕಾಡುಪ್ರಾಣಿಗಳಲ್ಲವಲ್ಲ."

ಮೂರನೆಯವನು :

" ಗದೆಯಿಂದ ಅವರು ಚಚ್ಚಬಹುದು ಅಲ್ಲವಾ ?"

ನಾಲ್ಕನೆಯವನು :

“ಬಹಳ ಅಂದರೆ ಅವರು ಇಪ್ಪತ್ತು ಮೂವತ್ತು ಜನ. ನಾವೆಷ್ಟಿದ್ದೇವೆ ಗೊತ್ತಾ ? ಎಣಿಸಿದ್ದೀಯಾ ? ”

ಮಗದೊಬ್ಬ :

“ ಚಾಟಿ ಏಟು ಮಾತ್ರ ಸಹಿಸೋಕಾಗೋದಿಲ್ಲಪ್ಪ.”

ಬೇರೊಬ್ಬ :

“ಒಬ್ಬ ದೈತ್ಯ ಆ ಭಟರ ಮುಖ್ಯಸ್ಥ. ಅವನು ಬಾರಿಸಿದಾಗ ಮೆನೆಪ್‌ಟಾನ ಮೈಯಿಂದ ರಕ್ತ ಚಿಮ್ಮಿತಂತೆ. ಆದರೆ ಮೆನೆಪ್‌ಟಾ ತುಟಿ ಪಿಟಿಕ್ ಮಾಡ್ಲಿಲ್ವಂತೆ.”

ಸ್ನೊಫ್ರು, ಸೆಬೆಕ್ಕು ಜನಸ್ತೋಮದ ಮೊದಲ ಸಾಲಿನಲ್ಲಿದ್ದರು.

ತನ್ನ ಎಡಬಲಗಳತ್ತ ನೋಡುತ್ತ ಸ್ನೊಫ್ರು ಹೇಳಿದ :

“ ಎಲ್ಲರೂ ಶಾಂತವಾಗಿರ್ಬೇಕು; ಯಾರೂ ಸೈರಣೆ ಕಳಕೋಬಾರ್ದು.”

ಅವನನ್ನೂ ಒಂದು ಶಂಕೆ ಕಾಡುತ್ತಿತ್ತು : “ ಮಹಾದ್ವಾರವನ್ನು ಅವರು ತೆರೀದೇ ಇದ್ದರೆ ?

ಜನ ಇನ್ನಷ್ಟು ಹತ್ತಿರಕ್ಕೆ ಬಂದಂತೆ ಮಹಾದ್ವಾರದ ಕಿರುಕಿಂಡಿ ತೆರೆದು ಕೊಂಡಿತು. ಬಕಿಲ ಹೊರಬಂದ. ಜನ ಸಮುದಾಯದಿಂದ ಯಾರೋ “ ದೈತ್ಯ, ದೈತ್ಯ ” ಎಂದರು. ಬಕಿಲನ ಹಿಂದೆ ಪೂರ್ತಿಮೈ ಮುಚ್ಚಿದ್ದ ಒಬ್ಬ ನಿದ್ದ. ಅವನ ಹಿಂದೆ ಗದಾಧಾರಿಗಳಾದ ಇಬ್ಬರು ಭಟರು.

ಬಹಳ ಕಂಠಗಳಿಂದ ಕೇಳಿಸಿತು :

“ ನಮ್ಮ ದೇವಸೇವಕ ! ದೇವಮಂದಿರದ ಅರ್ಚಕ !”

ಎತ್ತಿದ ಗದೆಗಳು ನಾಲ್ಕು ಹೆಜ್ಜೆ ಮುಂದೆ ಬಂದು ‘ಅಲ್ಲೇ ನಿಲ್ಲಿ’ ಎಂದು ಜನರಿಗೆ ಸೂಚಿಸಿದುವು.

ಒಳಗೆ ರಾಜಗೃಹದಲ್ಲಿ ಮಹಡಿಯ ಮುಖಮಂಟಪದಲ್ಲಿ, ಮೇಲಕ್ಕೆ ಸುರುಳಿ ಸುತ್ತಿದ್ದ ಬಣ್ಣದ ಚಿತ್ತಾರಗಳಿದ್ದ ಹುಲ್ಲಿನ ಚಾಪೆಗಳನ್ನು ಇಳಿಬಿಟ್ಟರು. ಅವುಗಳ ಮರೆಯಲ್ಲಿ ನಿಂತರು, ಟಿಹುಟಿ ಮತ್ತು ಗೇಬು.

ಆಪೆಟ್ ಆಶೀರ್ವದಿಸುವ ಭಂಗಿಯಲ್ಲಿ ಬಲತೋಳನ್ನೆತ್ತಿದ.

ಸದ್ದಡಗಿತು. ಜನಸ್ತೋಮ ನಡುಬಾಗಿಸಿ ನಮಿಸಿತು.

ರಾಗವಾಗಿ ಅಪೆಟ್ ಅಂದ :

" ಭಕ್ತರೇ ನಿಮ್ಮ ಮೇಲೆ ಪ್ಟಾ ದೇವರ ಅನುಗ್ರಹವಿರಲಿ. ಎಷ್ಟೊಂದು ಜನ ಒಟ್ಟಾಗಿ ಬಂದಿದೀರಿ ! ಇದು ಸ್ವತಃ ದೇವರೇ ನೋಡಲು ಯೋಗ್ಯವಾದ ದೃಶ್ಯ."

ಇಪ್ಯುವರ್, ಭೂಮಾಲಿಕರು, ಸೇವಕರು—ಎಲ್ಲರೂ ಸಭಾಂಗಣದ ಅಂಚಿನಲ್ಲಿ ನಿಂತಿದ್ದರು. ಎತ್ತರದ ಗೋಡೆ, ಹೊರಗಿನ ಜನಜಂಗುಳಿ ಅವರಿಗೆ ಕಾಣಿಸುತ್ತಿರಲಿಲ್ಲ. ಆದರೆ ಮಾತು ಕೇಳಿಸುತ್ತಿತ್ತು.

ಮಾತುಗಳನ್ನು ಮೆನೆಪ್ಟಾನೂ ಆಲಿಸಿದ. ಹೊರಗೆ ನೆರೆದುದು ದೊಡ್ಡ ಜನಸಂದಣಿ ಎಂಬುದನ್ನು ಕಲರವ ಸೂಚಿಸಿತು. ಹೀರಿದ ಖಿವವ ಎರಡೇ ಗುಟುಕಾದರೂ ಅವನಲ್ಲಿ ಹೊಸ ಚೈತನ್ಯ ಮೂಡಿತ್ತು. " ಓ ಮೆನೆಪ್ಟಾ ಓ ಮೆನೆಪ್ಟಾ " ಅವನ ಪಾಲಿನ ಮಧುರ ಸಂಗೀತ. ತನಗೇನೂ ಆಗಿಯೇ ಇಲ್ಲ, ಮೈ ಕೈ ನೋವು ಇಲ್ಲ—ಎನಿಸಿತು.

ಮಹಡಿಯ ಮೇಲಿದ್ದವರಿಗೆ ಜನಸಮುದಾಯ ಕಾಣಿಸುತ್ತಿತ್ತು. ಆದರೆ ಬಾಗಿಲಿನ ಮರೆಯಲ್ಲಿದ್ದ ಅರ್ಚಕ, ಬಕಿಲ ಮತ್ತಿತರರು ಕಣ್ಣಿಗೆ ಬೀಳಲಿಲ್ಲ. ಮಾತೂ ಸರಿಯಾಗಿ ಕೇಳಿಸುತ್ತಿರಲಿಲ್ಲ. ಎಲ್ಲೋ ಅಲ್ಲೊಂದು ಪದ, ಇಲ್ಲೊಂದು ಪದ, ಅಷ್ಟೆ.

ಅಪೆಟ್ ಗಂಟಲು ಸರಿಪಡಿಸುತ್ತ ಮಾತು ಮುಂದುವರಿಸಿದ :

" ಮಾತು ತುಟಿ ಮೀರೋದು ವಿರಸ ಏರ್ಪಡೋದು ಸಾಮಾನ್ಯ ಸಂಗತಿ. ಯಾವುದೂ ವಿಕೋಪಕ್ಕೆ ಹೋಗದಹಾಗೆ ನೋಡ್ಕೋಬೇಕಾದ್ದು ಮುಖ್ಯ. ಏನೋ ಆಯ್ತು. ಅದನ್ನೇ ದೊಡ್ಡದು ಮಾಡಿ ನಮ್ಮ ಕರ್ತವ್ಯ ಮರೆಯೋಣವೇ ? ಮನುಷ್ಯ ಬಹಳ ಕೆಲಸ ಮಾಡಬಲ್ಲ ಸಮರ್ಥ. ಆದರೂ ತಾನು ರಾನ ಸಂತಾನ ಪ್ಟಾನ ಸಂತಾನ ಅನ್ನೋದನ್ನ ಅವನು ನೆನಪಿಡ ಬೇಕು. ನಾವು ಏನು ಮಾಡಿದರೂ ದೇವರು ನೋಡ್ತಿರ್ತಾನೆ ಅಲ್ಲವಾ ? ಬರ್ತಾ ಜಯಘೋಷ ಮಾಡಿದ್ರಿ—ಓ ಮೆನೆಪ್ಟಾ ಓ ಮೆನೆಪ್ಟಾ ಅಂತ. ನಿಮ್ಮ ಪ್ರಕಾರ ಅವನು ನ್ಯಾಯವಾದ್ದನ್ನೇ ಮಾಡ್ದ. ತೀರ್ಪು ಕೊಡೋದಕ್ಕೆ

ನಮಗೆ ಯಾವಾಗಲೂ ಆತುರ. ನಿಜವಾಗಿ ಎಲ್ಲವನ್ನೂ ಪರಾಂಬರಿಸಿ ಕೊನೇ ಮಾತು ಹೇಳೋನು ಬೇರೆಯೇ ಇದ್ದಾನೆ.... ಯೋಚ್ನೆ ಮಾಡಿ ನೋಡಿ. ದೇವರನ್ನ ಉಪವಾಸ ಕೆಡವಿ ನಾವು ಉಣ್ಣೋದಕ್ಕಾಗ್ತದಾ ? ಪೆರೋಗೆ ಕಂದಾಯ ತೆರದೆ ನಾವು ಬದುಕೋಕಾಗ್ತದಾ ?...."

ಅಪೆಟ್‌ನ ಮಾತು ಕೇಳಿದಂತೆ ಸ್ನೊಫ್ರುವಿನ ಹಣೆ ನೆರಿಗೆ ಕಟ್ಟಿತು. ಇದು ತುದಿ ಬುಡವಿಲ್ಲದ ಮಾತು ಎಂದು ಸಿಟ್ಟು ಬಂತು. "ಇವರ ಮಾತು ಕೇಳುತ್ತ ಹೋದರೆ ನಿದ್ದೆಯೇ ಬಂದೀತು," ಎಂದು ಆತ ಸೆಬೆಕ್ಖುನೊಡನೆ ಗೊಣಗಿದ. ಒಮ್ಮೆಲೇ ಗಟ್ಟಿಯಾಗಿ ಆತನೆಂದ :

"ಸಾಷ್ಟಾಂಗ ಪ್ರಣಾಮ ಮಾಡಿದವರಿಗೆ ಒದೆಯೋದು ಯಾವ ನ್ಯಾಯ ?"

ಬೇರೆಯೂ ಕೆಲವರೆಂದರು :

"ಯಾವ ನ್ಯಾಯ ?"

ಉತ್ತೇಜಿತನಾಗಿ ಸ್ನೊಫ್ರು ಮಾತನಾಡಿದ :

"ಮೆನೆಪ್‌ಟಾನನ್ನು ಬಿಡಿಸ್ಕೊಡಿ. ಆಮೇಲೆ ಕಂದಾಯ ಸಂದಾಯ ಮಾಡ್ತೇವೆ !"

ಧ್ವನಿಗಳು ಕೇಳಿಸಿದುವು :

"ಹೌದು ! ಹೌದು !"

ತಾನು ಸೋಲುತ್ತಿದ್ದೇನೆ ಎನಿಸಿತು ಅಪೆಟ್‌ಗೆ. ಆದರೂ ಎದೆಗುಂದದೆ ಅವನು ಮುಂದುವರಿಸಿದ ;

"ಭಕ್ತಜನರೇ, ಮಾಟ್‌ನಾಣೆಯಾಗಿ ನನ್ನ ಹೃದಯದಲ್ಲಿರುವುದನ್ನೇ ನಿಮ್ಮೆದುರು ಇಡ್ತಿದ್ದೇನೆ. ನಾವು ಮಾಟ್ ಅನ್ನೋದು ಯಾವ ಅರ್ಥದಲ್ಲಿ ? ಸುವ್ಯವಸ್ಥೆ, ಸತ್ಯ, ನ್ಯಾಯ, ಧರ್ಮ—ಇದೆಲ್ಲವೂ ಮಾಟ್. ಐಗುಪ್ತ ದೇಶ, ಐಗುಪ್ತ ಸಮಾಜ ನಿಂತಿರುವುದೇ ಆ ಅಡಿಪಾಯದ ಮೇಲೆ. ರೈತನ ಮಾಟ್ ಯಾವುದು ? ಪರಿಶ್ರಮದ ದುಡಿಮೆ. ಪ್ರಾಮಾಣಿಕ ದುಡಿಮೆ. ಅಧಿಕಾರಿಗಳ ಮಾಟ್ ಅಂದರೆ ನ್ಯಾಯವಾದ ವರ್ತನೆ. ಹೌದಾ ?"

ಸ್ನೊಫ್ರು, ಬಾಯಿ ಹಾಕಿ ನುಡಿದ :

“ಹೌದು, ನಾವು ಶ್ರಮಪಟ್ಟು ಪ್ರಾಮಾಣಿಕವಾಗಿ ದುಡೀತಿದ್ದೇವೆ. ಅಧಿಕಾರಿಗಳು ನ್ಯಾಯವಾಗಿ ವರ್ತಿಸ್ತಿದ್ದಾರಾ ಹೇಳಿ!”

ಕೆಲವು ಗಂಟಲುಗಳಿಂದ ಆ ಪದವೇ ಕೇಳಿಸಿತು :

“ಹೇಳಿ! ಹೇಳಿ!”

“ಏನೋ ತಪ್ಪು ಗ್ರಹಿಕೆಯಿಂದ ಮನಸ್ತಾಪವುಂಟಾಗಿದೆ. ಇದು ಮಾತ್‌ಗೆ ಅನುಗುಣವಾಗಿ ಇತ್ಯರ್ಥವಾಗ್ಬೇಕು. ಅಧಿಕಾರಿ ಮಹಾಶಯರು ನ್ಯಾಯ ರೀತಿಯಿಂದ ವರ್ತಿಸ್ತಾರೆ ಅನ್ನೋದರಲ್ಲಿ ನನಗೆ ಸಂದೇಹ ಇಲ್ಲ.”

ಗಟ್ಟಿ ಗಂಟಲು ಕೇಳಿಸಿತು :

“ನ್ಯಾಯವಾಗಿ ವರ್ತಿಸ್ಲಿ. ಮೆನೆಪ್‌ಟಾನನ್ನು ಬಿಡ್ಲಿ. ಈಗಲೇ! ಈಗಲೇ!”

ಮಾರ್ದನಿ ಕೇಳಿಸಿತು :

“ಈಗಲೇ! ಈಗಲೇ!”

ಅಪೆಟ್‌ನ ಗಂಟಲೊಣಗಿತ್ತು. ಆತ ಆಶೀರ್ವದಿಸುವುದಕ್ಕೋಸ್ಕರ ಬಲ ತೋಳನ್ನೆತ್ತಿದ. ಅದನ್ನು ಕಾಣುತ್ತಲೇ, ಜನ ಯಾಂತ್ರಿಕವಾಗಿ ಬಾಗಿ ನಮಿಸಿದರು. ತಕ್ಷಣವೇ ತಲೆ ಎತ್ತಿ ಅಂದರು :

“ಓ ಮೆನೆಪ್‌ಟಾ! ಓ ಮೆನೆಪ್‌ಟಾ!”

ಅಪೆಟ್ ಬಕಿಲನ ಮುಖ ನೋಡಿದ. ಬಕಿಲ ಅರ್ಚಕನನ್ನು ಪ್ರವೇಶ ದ್ವಾರದ ಕಿಂಡಿಯ ಮೂಲಕ ಒಳಕ್ಕೆ ತಳ್ಳಿದ.

ರಾಮೆರಿಪ್‌ಟಾ ಹುಟ್ಟಿದಾಗ ಮಗು ಅತ್ತ ಸದ್ದು ಕೇಳಿ, ಹೊರಗೆ ಗೋಡೆಗೊರಗಿ ನಿಂತು, ಆನಂದದ ಉದ್ವೇಗವನ್ನು ಮೆನೆಪ್‌ಟಾ ತಡೆಯಲೆತ್ನಿಸಿದ್ದ, ಕಣ್ಣುಗಳನ್ನು ಮುಚ್ಚಿಕೊಂಡು. ಈಗಲೂ ಅದೇ ಅನುಭವ; ಅದೇ ಪ್ರಯತ್ನ.

ಇಪ್ಯುವರ್‌ನಿಗೆ ಪ್ರಕಟಗೊಳಿಸಲಾರದ ದರ್ಪ. ಆತ ಅಪೆಟ್‌ನತ್ತ ನಡೆದ. ಗೌರವ ಸೂಚಕವಾಗಿ ತುಸು ದೂರದಲ್ಲಿ ನಿಂತು ಮುಗುಳುನಕ್ಕ. ಅಪೆಟ್‌ನ ಕಣ್ಣುಗಳು ಹನಿಯಾಡಿದಂತೆ ಕಂಡಿತು. ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿ ತೆರೆದು, ಉಗುಳು ನುಂಗಿ, ಆತ ಇಪ್ಯುವರ್‌ನತ್ತ ನೋಡಿ ಕೇಳಿದ :

" ಮಾತಾಡಿದ್ದು ಸರಿಯಾಗಿತ್ತೇನಪ್ಪ ?"

ಮನಸ್ಸಿನಲ್ಲಿದ್ದುದನ್ನೇ ಇಪ್ಯುವರ್ ಹೇಳಿದ :

" ಸಮರ್ಪಕವಾಗಿತ್ತು ಅರ್ಚಕರೇ."

ಮೆನೆಪ್‌ಟಾನನ್ನು ಅರ್ಚಕ ಜರೆಯಲಿಲ್ಲವೆಂದು, ಅಧಿಕಾರಿಯನ್ನು ಸಂತೋಷಪಡಿಸುವುದಕ್ಕೋಸ್ಕರ ರೈತರನ್ನು ಹೀನಾಯವಾಗಿ ಕಾಣಲಿಲ್ಲ ವೆಂದು, ಇಪ್ಯುವರ್‌ಗೆ ಸಮಾಧಾನ. 'ಅಧಿಕಾರಿ ಮಹಾಶಯರು ನ್ಯಾಯ ದಿಂದ ವರ್ತಿಸ್ತಾರೆ ಅನ್ನೋದರಲ್ಲಿ ನನಗೆ ಸಂದೇಹ ಇಲ್ಲ'—ಎಂದನಲ್ಲವೆ ಅರ್ಚಕ ? ಹಾಗೆಯೇ ಆದರೆ ಎಷ್ಟು ಚೆನ್ನು !

ಭೂಮಾಲಿಕರೂ ಒಳಬಂದ ಅಪೆಟ್‌ನನ್ನು ನೋಡಿದರು. ಟೆಹುಟಿ ಅರ್ಚಕನ ಮೂಲಕ ಬುದ್ಧಿ ಮಾತು ಹೇಳಿಸಿದ್ದು ಒಳ್ಳೆಯದಾಯಿತು ಎಂಬ ಅಭಿಪ್ರಾಯ ಅವರದು. ಆದರೆ, ಮಾತು ಮುಗಿದೊಡನೆಯೇ ಜನ ಚೆದರಲಿಲ್ಲ ವೆಂದು ಅವರು ನಿರಾಶರಾದರು. ಅವರ ಕಿವಿಗಳೆಲ್ಲ ಮಹಡಿಯತ್ತ ನೆಟ್ಟವು : ಮುಂದೇನು ? ಅಧಿಕಾರಿ ಏನು ಮಾಡಬಹುದು ?

ಹೊರಗೆ ಘೋಷ ಮುಂದುವರಿದಿತ್ತು :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

ಬಕಿಲನಿಗೆ ಹೊಸ ನಿರ್ದೇಶನದ ಅಗತ್ಯವಿರಲಿಲ್ಲ. ಮಹಾದ್ವಾರದ ಇಕ್ಕೆಲಗಳಲ್ಲಿದ್ದ ಭಟರು, ಅವನ ಸೂಚನೆಯಂತೆ, ಗದೆ ಬೀಸಿದರು—"ತೊಲಗಿ! ತೊಲಗಿ !" ಎನ್ನುತ್ತ. ಸ್ನೊಫ್ರು, ಸೆಬೆಕ್ಕು ಮತ್ತಿತರರು ಸ್ವಲ್ಪ ಹಿಂದಕ್ಕೆ ಸರಿದರು. ಏಟು ತಗಲಿದ ಕೆಲವರು ಚೀರಾಡಿದರು.

ಜನ ಚೆದರದೆ ಇದ್ದುದನ್ನು ಗಮನಿಸಿದ ಬಕಿಲ ಆ ಕಾವಲು ಭಟರಿಗೆ ವಾಪಸಾಗಲು ಸೂಚಿಸಿದ. (ಸಹಸ್ರಾರು ಉದ್ರಿಕ್ತ ಜನರ ಮಧ್ಯಕ್ಕೆ ಇಬ್ಬರೇ ಹೋಗುವುದು ಯೋಗ್ಯವಾಗಿರಲಿಲ್ಲ.) ಪ್ರಾಕಾರದ ಮೇಲೆ ಬಿಲ್ಲು ಹಿಡಿದು ನಿಂತಿದ್ದ ಮೂವರಿಗೆ ಬಾಣ ಪ್ರಯೋಗಿಸುವಂತೆ ಸನ್ನೆಮಾಡಿದ.

ಗೋಡೆಯ ಮೇಲೆ ಭಟರು ಹೆದೆ ಏರಿಸುತ್ತಿದ್ದುದನ್ನು ಕಂಡವರು " ಹೋ ! ಹೋ !" ಎಂದರು. ಬಾಣಗಳು ಸುಂಯ್‌ಗುಟ್ಟಿದುವು. ಯಾವುದೇ ನಿರ್ದಿಷ್ಟ ಮೃಗದ ಬೇಟೆಯಲ್ಲ. ಗೊತ್ತು ಗುರಿಯಿಲ್ಲದ ಎಸೆತ.

ಒಂದು ಬಾಣ ಒಬ್ಬನ ಭುಜವನ್ನು ಇರಿಯಿತು; ಇನ್ನೊಂದು ಇನ್ನೊಬ್ಬನ ಹೊಟ್ಟೆಯನ್ನು ಹೊಕ್ಕಿತು; ಮೂರನೆಯದು ಮತ್ತೊಬ್ಬನ ತೊಡೆಯನ್ನು ತಿವಿಯಿತು. ಜನಜಂಗುಳಿಯಲ್ಲಿ ಹಾಹಾಕಾರ. ಸ್ನೊಫ್ರು ಗಾಯಗೊಂಡ ವರತ್ತ ಧಾವಿಸಿದಂತೆ, ಮತ್ತೆ ಮೂರು ಬಾಣಗಳು ಆಹುತಿ ಬಯಸಿದುವು. ಒಂದು ಸ್ನೊಫ್ರುವಿನ ಕಿವಿಯ ಬಳಿಯಿಂದಲೇ ಹಾದು ಹೋಗಿ ನೆಲ ಮುಟ್ಟಿತು. ಇನ್ನೊಂದು ಪುಟ್ಟ ಗಾಯಗಳಿಂದ ತೃಪ್ತಿಪಡಬೇಕಾಯಿತು. ಮೂರನೆಯದು ಮಾತ್ರ ಒಬ್ಬನನ್ನು ಕೆಳಕ್ಕೆ ಕೆಡವಿತು.

ಸ್ನೊಫ್ರುವಿನ ನಿರ್ದೇಶನದಂತೆ, ಗಾಯಗೊಂಡವರನ್ನು ಹೊತ್ತು. ಹಲವರು ವಸತಿ ಪ್ರದೇಶದತ್ತ ಧಾವಿಸಿದರು.

ಸೂರ್ಯ ಮುಳುಗತೊಡಗಿದ. ಜನಸಮುದಾಯ ಸ್ವಲ್ಪ ಮೆಲ್ಲ ಮೆಲ್ಲನೆ ಕರಗಿತು.

ಬಕಿಲ ದಡದಡನೆ ಮಹಡಿಯ ಮೆಟ್ಟಲುಗಳನ್ನೇರಿ, ಒಡೆಯನ ಮುಂದೆ ನಿಂತ, ಹೆಮ್ಮೆಯಿಂದ ಬೀಗುತ್ತ.

—ಮೆನೆಪ್‌ಟಾ ಕಣ್ಣು ಮುಚ್ಚಿಕೊಂಡು, ಗಾಳಿ ಊರಿನ ದಿಕ್ಕಿನಿಂದ ಹೊತ್ತು ತಂದ ಸದ್ದುಗಳನ್ನು ಆಲಿಸಿದ.

* * * *

ಇದು ಯುದ್ಧ—ಎನಿಸಿತು ಟಿಹುಟಿಗೆ. ಕೂಗಾಡಬೇಕು, ಅಟ್ಟಹಾಸ ಮಾಡಬೇಕು—ಎಂದು ತೋರಿತು. ಆದರೆ ಅದೊಂದನ್ನೂ ಮಾಡದೆ, ಎಲ್ಲ ಭಾವನೆಗಳನ್ನೂ ಹತ್ತಿಕ್ಕಿ, ಆತ ಮೌನವಾಗಿ ಕುಳಿತ. ಬಕಿಲನಿಗೆ ಇದು ವಿಚಿತ್ರ ವರ್ತನೆಯಾಗಿ ಕಂಡಿತು. ಗೇಬು ಮುಖಮಂಟಪದ ಮೂಲೆಯಲ್ಲಿ ನಿಂತವನು ನಿಂತೇ ಇದ್ದ.

ಈ ಸುದ್ದಿ ತಿಳಿದಾಗ ರಾಜಧಾನಿಯಲ್ಲಿ ಯಾರು ಏನನ್ನಬಹುದು ಎಂಬು ದನ್ನು ಟಿಹುಟಿ ಊಹಿಸಲೆತ್ನಿಸಿದ. ಅಮಾತ್ಯರು ಮೆಚ್ಚುಗೆ ಸೂಚಿಸುವರೊ ಇಲ್ಲವೊ. ಆಸ್ಥಾನದಲ್ಲಿ, ಆಗದವರು ಕುಹಕ ನುಡಿ ಆಡಬಹುದು. ಈ ಘಟನೆಯಿಂದ ತನಗೆ ಅನುಕೂಲವಾಗಬೇಕಾದರೆ, ಕಂದಾಯ ವಸೂಲಿಯಲ್ಲಿ

ಸಂಪೂರ್ಣ ಯಶಸ್ಸು ಸಿಗಬೇಕು. ಅದು ಬಲ ಪ್ರದರ್ಶನದಿಂದ ಮಾತ್ರ ಸಾಧ್ಯ.

ಬಾಣ ಪ್ರಯೋಗದಿಂದ ಕೆಲವರು ಗಾಯಗೊಂಡಿದ್ದಾರೆ. ಒಬ್ಬಿಬ್ಬರು ಸಾಯಬಹುದು. ಅಷ್ಟು ಮಾಡಿದ್ದರಿಂದ, ಆ ಜನ ಬಾಲ ಮಡಚಿಕೊಂಡು ಹಿಮ್ಮೆಟ್ಟಿದರು. ಅರ್ಚಕನ ಮಾತಿಗೂ ಅವರು ಕಿವಿಗೊಟ್ಟಿರಲಿಲ್ಲ. ಆ ಪಾಪಿ ಮಾತನಾಡಿದ್ದೂ ಅರೆಮನಸ್ಸಿನಿಂದ. (ಎಲ್ಲ ದೇವಮಂದಿರಗಳ ಅರ್ಚಕರೂ ಹೀಗೆ ಉದಾಸೀನರಾದರೆ, ದೇಶದ ಆಡಳಿತ ವ್ಯವಸ್ಥೆಯಲ್ಲಿ ಬಿಗಿ ಏನೇನೂ ಉಳಿಯುವುದಿಲ್ಲ. ಹಾಯಿಪಟ ಹಾರಿದ ನಾವೆ ಹೇಗೆ ತಾನೇ ಸರಿಯಾಗಿ ಚಲಿಸೀತು ?)

ಸದ್ದಡಗಿ ಬಹಳ ಹೊತ್ತಾದರೂ 'ಓ ಮೆನೆಪ್‌ಟಾ ಓ ಮೆನೆಪ್‌ಟಾ' ಘೋಷ ಟೆಹುಟಿಯ ಒಳಕಿವಿಯಲ್ಲಿ ಮೊರೆಯುತ್ತಿತ್ತು. ಈ ಒಬ್ಬ ವ್ಯಕ್ತಿಯಿಂದಾಗಿ ಎಷ್ಟೊಂದು ಅವಾಂತರ! ಬಕಿಲ ಇದ್ದುದರಿಂದ ಸರಿಹೋಯಿತು. ಇವನು ಅಧಿಪತಿಯಾಗುವ ಅರ್ಹತೆ ಉಳ್ಳವನು. ಇಂಥವರು ಹತ್ತಿಪ್ಪತ್ತು ಜನ ದೊರೆತರೆ ಸಾಕು, ಇಡೀ ದೇಶವನ್ನೇ ದಕ್ಷತೆಯಿಂದ ಆಳಬಹುದು.

ಮೆನೆಪ್‌ಟಾನನ್ನು ಈ ರಾತ್ರಿಯೇ ಮುಗಿಸಬಹುದು. ಆದರೆ ನಾಳೆ ಕಂದಾಯ ವಸೂಲಿಗೆ ಇದರಿಂದ ತೊಂದರೆಯಾದರೊ?

"ಬಕಿಲ !"

"ಅಪ್ಪಣೆಯಾಗಲಿ."

"ಆ ಜನ ಮತ್ತೆ ಬಂದಾರು ಅಂತಿಯಾ ?"

"ಬರಲೂ ಬಹುದು. ನಾವು ಸಿದ್ಧರಾಗಿದ್ದೇವೆ."

"ಒಳ್ಳೇದು."

ಟೆಹುಟಿ ಪ್ರಾಂತಪಾಲನತ್ತ ನೋಡಿದ.

"ಯಾಕೆ ತಡ ? ದೀಪ ಹಚ್ಚಿಸಿ ! ರಾಜಧಾನಿಯಿಂದ ಅಧಿಕಾರಿ ಬಂದಾಗ ದೀಪೋತ್ಸವ ಬೇಡವೆ ?"

ಟೆಹುಟಿಯ ಅಪೇಕ್ಷೆಯನ್ನು ಅರ್ಥ ಮಾಡಿಕೊಂಡ ಬಕಿಲ ಕೆಳಕ್ಕೆ ಓಡಿದ, ರಾಜಗೃಹದ ಚಾರಕರಿಗೆ ನಿರ್ದೇಶಗಳನ್ನು ನೀಡಲು.

* * * *

ಸೆಬೆಕ್ಕುವಿನ ಮನೆ ಇತರ ಸಣ್ಣ ಮನೆಗಳಿಗಿಂತ ಹೆಚ್ಚು ವಿಶಾಲ ವಾಗಿತ್ತು. ಬಾಣ ತಗಲಿ ಗಾಯಗೊಂಡ ಐವರನ್ನು ಅಲ್ಲಿಗೆ ತಂದರು. ರಾಜ ಗೃಹದಲ್ಲಿದ್ದ ಅರ್ಚಕ ವೈದ್ಯನ ನೆರವು ಆಗ ಸಿಗುವಂತಿರಲಿಲ್ಲ. ಅನುಭವಿ ಹಿರಿಯರಿಬ್ಬರು ಔಷಧಿಯ ಎಲೆಗಳನ್ನು ತಂದು ಗಾಯಗಳಿಗೆ ಕಟ್ಟಿದರು; ರಕ್ತ ಸ್ರಾವವನ್ನು ತಡೆದರು.

ಯಾವಾಗಲೂ ಕತ್ತಲಾದೊಡನೆ ಮೌನದ ಮುಸುಕು ಧರಿಸುವ ಊರು ಈ ದಿನ ತೀವ್ರ ಚಟುವಟಿಕೆಯ ಶಿಬಿರವಾಯಿತು. ರಕ್ತ ಹರಿದುದನ್ನು ಕಂಡು ಕಲ್ಲಾಯಿತು, ಜನರ ಮನಸ್ಸು.

ಯುವಕರು ಕೂಗಾಡಿದರು :

" ನಮಗೆ ಬಿಟ್ಬಿಡಿ ! ಮೆನೆಪ್‌ಟಾ ಅಣ್ಣನನ್ನು ನಾವು ಬಿಡಿಸ್ಕೊಂಡು ಬರ್ತೀವೆ !"

ಇನ್ನೂ ಕೆಲವರೆಂದರು :

" ಅಣ್ಣನನ್ನು ಕಟ್ಟಿದ ಕಂಬಕ್ಕೇ ಆ ಕಂದಾಯ ಅಧಿಕಾರಿಯನ್ನು ಬಿಗೀತೀವೆ !"

ಬಹಳ ಹೊತ್ತು ಹಣೆನೆರಿಗೆ ಕಟ್ಟಿದ್ದ ಸ್ನೊಫ್ರು ಅಂದ :

" ಈಗ ನಮ್ಮ ಗುರಿ ಏನು ? ಮೆನೆಪ್‌ಟಾನ ಬಿಡುಗಡೆ. ಅಷ್ಟು ಮಾಡೋಣ. ನಮ್ಮ ವಿವಾದ ಕಂದಾಯಕ್ಕೆ ಸಂಬಂಧಿಸಿದ್ದು. ವಸೂಲಿ ಶುರು ಮಾಡಿದಾಗ ಅದನ್ನು ನೋಡ್ಕೊಳ್ಳೋಣ."

ಸೆಬೆಕ್ಕುವಿನ ಅಳಿಯ ಖ್ನೆಮು ಹೊಟೆಪ್—ಪ್ರಾಂತದ ಹೆಸರಾಂತ ಬಿಲ್ಗಾರ—ಸಿಟ್ಟಾಗಿ ನುಡಿದ :

" ಒಪ್ದೆ, ಸ್ನೊಫ್ರು ಮಾವ. ಆದರೆ ನಿಶ್ಶಸ್ತ್ರರನ್ನು ಇವತ್ತು ಬೇಟೆ ಯಾಡಿದರಲ್ಲ ? ಅದಕ್ಕೆ ಶಿಕ್ಷೆ ? ದೇವರು ಮೆಚ್ಚೋ ಕೆಲಸಾನ ಅದು ?"

" ನನ್ನ ರಕ್ತವೂ ಕುದೀತಾ ಇದೆ ಖ್ನೆಮು. ಆದರೆ ಮೊದಲು ಆಗ ಬೇಕಾದ್ದು ಯಾವ್ದೂಂತ ನೋಡೋದು ಬೇಡ್ವ ? ಮೆನೆಪ್‌ಟಾನ್ನ ಕಟ್ಟಿ ಹಾಕಿ ಬೆಳಗಿನಿಂದ ಉಪವಾಸ ಕೆಡವಿದ್ದಾರೆ."

ಅಳಿಯನೊಡನೆ ವಾದಿಸಲು ಸೆಬೆಕ್ಕು ಬಾಯಿ ತೆರೆದ. ಅದನ್ನು

ಗಮನಿಸಿದ. ಖ್ನೆಮ್‌ಹೊಟೆಪ್, ಮಾತನಾಡಲೂ ಮಾವನಿಗೆ ಅವಕಾಶ ವೀಯದೆಯೇ, ಅವಸರವಾಗಿ ಅಂದ :

"ಸರಿ. ನಡೀರಿ. ಹೋಗೋಣ; ಪಂಜುಗಳನ್ನ ಉರಿಸಿ! ಗೋಡೆ ಹತ್ತೋಕೆ ನಾಲ್ಕೈದು ಏಣಿ ತಗೊಳ್ಳಿ! ಬಾಗಿಲು ಮುರಿಯೋಕೆ ಒಂದು ತಾಳೆದಿಮ್ಮಿ! ಹೊರಡಿ! ಹೊರಡಿ!"

ಅಮಾವಾಸ್ಯೆಯ ಅನಂತರದ ಬಾಲ ಚಂದ್ರ. ನಸು ಬೆಳಕು. ಸಂಜೆ ನೆರೆದವರು ಉದ್ರಿಕ್ತರು. ರಾತ್ರೆ ಹೊರಟವರು ಕ್ರುದ್ಧರು.

ನೂರಾರು ಕೈಗಳಲ್ಲಿ ಪಂಜುಗಳು; ನೂರಾರು ಕೈಗಳಲ್ಲಿ ತಾಳೆಕೊರಡುಗಳು, ಬಡಿಗೆಗಳು, ಗದೆಗಳು. ಹತ್ತು ಹದಿನೈದು ಜನ ಹೊತ್ತ ತಾಳೆದಿಮ್ಮಿ, ಏಣಿಗಳು.

ಖ್ನೆಮ್‌ಹೊಟೆಪ್ ಬಿಲ್ಲನ್ನು ಭುಜಕ್ಕೇರಿಸಿ ಬಂದಿದ್ದ. ಬತ್ತಳಿಕೆಯ ತುಂಬಾ ಬಾಣಗಳಿದ್ದುವು. ಗುಂಪಿನ ನಡುವೆ ಚಲಿಸುತ್ತ, ಜನರನ್ನು ಅವನು ಹುರಿದುಂಬಿಸಿದ :

"ನಮ್ಮದು ದೇವರ ಪಕ್ಷ! ಜಯ ನಮಗೆ! ನಾವು ಸನ್ನದ್ಧರು! ನಮಗೆ ಸೋಲಿಲ್ಲ."

ಸ್ನೊಫ್ರು ಹತ್ತಿರಕ್ಕೆ ಸರಿದು ಖ್ನೆಮ್‌ಹೊಟೆಪ್‌ನ ಕಿವಿಯಲ್ಲಿ ಉಸುರಿದ :

"ನಾವು ದುಡುಕಬಾರದು; ಮೆನೆಪ್‌ಟಾ ಒಳಗಿದ್ದಾನೆ. ಅವನಿಗೆ ಅವರೇನಾದರೂ ಮಾಡ್ಬಹುದು."

"ಸ್ನೊಫ್ರುಮಾವ, ಬಾಗಿಲು ಮುರಿಯೋದು ನಿಮ್ಮ ಜವಾಬ್ದಾರಿ. ಕಾವಲು ಭಟರೆಲ್ಲ ಲಗ್ಗೆ ಹತ್ತೋರನ್ನು ತಳ್ತಾ ಇರ್ತಾರೆ. ಮೆನೆಪ್‌ಟಾ ಅಣ್ಣನ ಹತ್ತಿರಕ್ಕೆ ಯಾರಾದರೂ ಸುಳಿದರೆ ನಾನು ನೋಡ್ಕೋತೀನೆ."

ಸ್ನೊಫ್ರುವಿನ ಆತಂಕ ಬಗೆಹರಿಯಿತು.

* * * *

ರಾಜಗೃಹದಲ್ಲಿ ನೂರಾರು ಕಂಚಿನ ದೀಪಗಳು ಥಾಳಾಗಿ ಉರಿಯು

ತ್ತಿದ್ದುವು. ಬರುತ್ತಿದ್ದ ಜನ ಪ್ರಾಕಾರದ ಮೇಲಿನ ಕಾವಲು ಭಟರ ಕಿರಿಯ ಆಕೃತಿಗಳನ್ನು ದೂರದಿಂದಲೇ ಕಂಡರು.

ಮೆನೆಪ್‌ಟಾನ ಮೇಲೆ ಸಭಾಮಂದಿರದ ದೊಡ್ಡ ದೀಪಗಳು ಬೆಳಕು ಬೀರುತ್ತಿದ್ದುವು.

ಎಲ್ಲರಿಗೂ ಕೇಳಿಸುವಂತೆ ಇಪ್ಯುವರ್ ಗಟ್ಟಿಯಾಗಿ ಅಂದ :

" ಪಂಜುಗಳು ಕಾಣಿಸ್ತಿವೆ; ಬರ್‍ತಿದ್ದಾರೆ."

ಘೋಷಗಳಿಲ್ಲದೆಯೇ ಸಮಿಾಪಿಸುತ್ತಿದ್ದ ಜನಸಮುದಾಯ. ಸಭಾ ಮಂದಿರದಲ್ಲೂ ಮೇಲ್ಗಡೆಯೂ ನೀರವತೆ ಹೆಪ್ಪುಗಟ್ಟತೊಡಗಿತು. ಬಕಿಲನ ಕರ್ಕಶ ಗಂಟಲೊಂದೇ ಆ ಗಡ್ಡಿಗೆ ಬೀಳುತ್ತಿದ್ದ ಕೊಡಲಿ ಏಟು.

ಜನರು ರಾಜಗೃಹವನ್ನು ಸಮಿಾಪಿಸಿದಂತೆ ಅವರ ಪದಹತಿಯ ಸಪ್ಪಳದ ಹೊರತು ಬೇರೇನೂ ಕೇಳಿಸುತ್ತಿರಲಿಲ್ಲ. ಅದು ಒಂದೇ ಎದೆಗುಂಡಿಗೆಯ ಬಡಿತದಂತಿತ್ತು.

ಕೆಳಗೆ ಭೂಮಾಲಿಕರು, ಅಪೆಟ್, ಇಪ್ಯುವರ್ ತುದಿಗಾಲಿನ ಮೇಲೆ ನಿಂತರು. ಮೇಲ್ಗಡೆ ಟಿಹುಟಿ ಮತ್ತು ಗೇಬು. ಇಳಿಬಿಟ್ಟಿದ್ದ ಬಣ್ಣದ ಚಾಪೆಗಳನ್ನು ತುಸು ಸರಿಸಿ, ಕೆಳಕ್ಕೆ ಇಣಿಕಿ ನೋಡಿದರು ಮಹಾದ್ವಾರದ ಬಳಿ ಗೋಡೆಯ ಮೇಲೆ ಎಲ್ಲರ ದೃಷ್ಟಿಗಳ ಕೇಂದ್ರ ಬಿಂದುವಾಗಿ ಬಕಿಲ ನಿಂತಿದ್ದ.

ರಾಜಗೃಹದ ಮಹಾದ್ವಾರ ತಲಪಿದವೆಂದು ಸಾರಿತು, ಸ್ನೊಫ್ರುವಿನ ಕಂಠ :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

ಅದಕ್ಕೆ ದೊರೆಯಿತು, ಜನರೆಲ್ಲರ ಒಕ್ಕೊರಲಿನ ಮಾರ್ದನಿ :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

ದಿವ್ಮಿ ಬಾಗಿಲ ಬಳಿ ಬಂತು. ಏಣಿಗಳು ಗೋಡೆಗೆ ಒರಗಿದುವು. ಖ್ನೆಮ್‌ಹೊಟೆಪ್ ಹತ್ತಿರವೇ ಮರೆಯಲ್ಲಿದ್ದ ತಾಳೆಯ ಮರವನ್ನೇರಿದ.

ಕಾವಲು ಭಟರ ವಶ ಇದ್ದುದು, ಕೆಲವೇ ಬಾಣಗಳು. ಅವುಗಳ ಪ್ರಯೋಗ ಕೊನೆಯ ಹಂತದಲ್ಲಿ, ಎಂದು ಬಕಿಲ ಸೂಚಿಸಿದ್ದ. ಏಣಿಯಲ್ಲಿ

ಏರಿ ಬಂದವರನ್ನು ಕೆಳಕ್ಕೆ ತಳ್ಳಿದರು. ಗದೆಯನ್ನು ಹೊತ್ತು ತಂದವರೊಡನೆ ಏಟುಗಳ ವಿನಿಮಯವಾಯಿತು.

ಕೂಗು, ಆಕ್ರೋಶ, ಫೂತ್ಕಾರ, ಚೀತ್ಕಾರ....

ಅಂಗಳದಲ್ಲಿ ಉದ್ಯಾನ ಮೂಲೆಯಲ್ಲಿದ್ದ ಕಲ್ಲುಗಳನ್ನು ರಾಜಗೃಹದ ಸೇವಕರು ತಂದು ಕೊಟ್ಟರು, ಆಕ್ರಮಣಕಾರರ ಮೇಲೆ ಎಸೆಯಲು, ಉರುಳಿ ಬಿಡಲು.

ಆ ಜನರ ಮೇಲೆ ಸುರಿಯಲು ಮರಳುವ ನೀರು ?

" ಮರಳುವ ನೀರು ! ಮರಳುವ ನೀರು !"

—ಎಂದು ಸೇವಕನೊಬ್ಬ ಕೂಗಿದ.

ಇಬ್ಬರು ಮೂವರು ಒಲೆಗಳಿಗೆ ಉರಿಹಾಕಲು ಧಾವಿಸಿದರು.

ತಾಳೆಯ ದಿಮ್ಮಿ ಮಹಾದ್ವಾರದ ಬಲಪರೀಕ್ಷೆ ಮಾಡಿತು. ಮೊದಲು ಮೆಲ್ಲನೆ, ಎರಡನೆ ಸಲ ಬಲವಾಗಿ, ಮೂರನೆಯ ಸಲ ಇನ್ನಷ್ಟು ಬಲವಾಗಿ.

ಬಕಿಲ ಮೈ ಪರಚಿಕೊಂಡ; ಅಂಗೈಯಿಂದ ಮುಂತಲೆಯನ್ನು ಚಚ್ಚಿದ. ಬಾಗಿಲ ಮೇಲೆ ಧಾಳಿ ನಡೆಸಿದವರನ್ನು ಮೊದಲು ಇದಿರಿಸುವುದು ಅನಿವಾರ್ಯ ವಾಯಿತು. ಬಕಿಲ ಕೂಗಿ ನುಡಿದ :

" ಬಾಣ ! ಬಾಣ !"

ನಿರ್ದೇಶ ಮುಗಿಯುವುದಕ್ಕೆ ಮುನ್ನ ಆತನೇ ಕಿರಿಚಿದ :

" ಅಯ್ಯೋ ! ಆ ಮರ ! ಅಲ್ಲಿ !"

ನೇರವಾಗಿ ಅವನ ಬಲಗಣ್ಣನ್ನೆ ಇರಿದಿತ್ತು, ಒಂದು ಬಾಣ.

ಬಕಿಲ " ಓ " ಎನ್ನುತ್ತ ಅಂಗಳಕ್ಕೆ ಧುಮುಕಿದ.

" ಆ ಮರ ! ಅಲ್ಲಿ !" ಎಂದ ಮತ್ತೆ ಮತ್ತೆ.

ಮೂವರು ಕಾವಲು ಭಟರು ಬಾಣ ಹೂಡಿದರು. ಆದರೆ, ಮಹಾ ದ್ವಾರವನ್ನು ಮುರಿಯಲೆತ್ನಿಸುತ್ತಿದ್ದವರ ಮೇಲೆ ಪ್ರಯೋಗಿಸದೆ, ಕಾಣದ ಮರವನ್ನು ಕತ್ತಲಲ್ಲಿ, ನಿಂತಲ್ಲಿಂದಲೆ, ಅರಸಿದರು.

ಬಕಿಲನ ಅವಸ್ಥೆಯನ್ನು ಕಂಡ ಟೆಹುಟಿಗೆ ಬವಳಿ ಬಂದಂತಾಯಿತು.

ಗೇಬು ಅವನ ಭುಜ ಮುಟ್ಟಿ ಅಂದ :

" ಕ್ಷಮಿಸಿ ಟೆಹುಟಿ, ಪರಿಸ್ಥಿತಿ ಹತೋಟಿ ಮೀರಿದೆ."

ಟೆಹುಟಿ ತೊದಲಿದ :

" ಈಗ ? ಈಗ ?"

" ಮುಖ್ಯವಾದದ್ದು ಪ್ರಾಣ ರಕ್ಷಣೆ."

" ಹೇಗೆ ? ಹೇಗೆ ಗೇಬು ?"

" ದಿಡ್ಡಿ ಬಾಗಿಲ ದಾರಿಯಾಗಿ."

ಟೆಹುಟಿ ಹೂಂಕರಿಸಿದ, ಗರ್ಜಿಸಿದ :

" ಬಕಿಲ !"

ಬಕಿಲ ಆಗಲೇ ಮೆಟ್ಟಿಲುಗಳನ್ನು ಸಮೀಪಿಸಿದ್ದ. ನೆಟ್ಟಿದ್ದ ಬಾಣವನ್ನು ಕಿತ್ತು ಬಲಗೈಯಲ್ಲಿ ಹಿಡಿದಿದ್ದ. ಕಣ್ಣಿನಿಂದ ರಕ್ತ ಧಾರಾಕಾರವಾಗಿ ಹರಿಯು ತ್ತಿತ್ತು. ಹತ್ತಿಕ್ಕಿದ ರೋಷ ಕೀರಲು ದನಿಯಲ್ಲಿ ಗಂಟಲಿನಿಂದ ಹೊರಬೀಳಲು ಯತ್ನಿಸುತ್ತಿತ್ತು.

ಹೊರಗೆ ಜನಸ್ತೋಮ " ಹೋ !" ಎಂದಿತು. ಪ್ರಾಕಾರದ ಮೇಲಿದ್ದ ಕಾವಲು ಭಟರು ಅಂಗಳಕ್ಕೆ ಧುಮುಕಿದ್ದರು. ಏಣಿಗಳನ್ನು ಏರಿದವರು ಅವರನ್ನು ಹಿಂಬಾಲಿಸಿದರು. ಅದಕ್ಕೆ ಸರಿಯಾಗಿ ಹೆಬ್ಬಾಗಿಲು ಮುರಿಯಿತು. ಕಟ್ಟೆ ಯೊಡೆದ ಜನಪ್ರವಾಹ ಒಳಗೆ ನುಗ್ಗಿತು.

ಸ್ನೊಫ್ರು, ಸೆಬೆಕ್ಖು, ಬಟಾ ಮತ್ತು ಹಲವರು ಮೆನೆಪ್‌ಟಾನನ್ನು ಕಟ್ಟಿದ್ದ ಕಂಬದೆಡೆಗೆ ಧಾವಿಸಿದರು. ಅಲ್ಲಿ ಮೆನೆಪ್‌ಟಾನ ಬಳಿ ಇಪ್ಯುವರ್ ನಿಂತಿದ್ದ, ಆನಂದಾಶ್ರು ಸುರಿಸುತ್ತ.

ಹಗ್ಗಗಳನ್ನು ಕತ್ತರಿಸಿ ಬಿಚ್ಚಿದರು. ಕುಸಿದು ಬೀಳದಂತೆ, ಎಡಬಲ ಗಳಲ್ಲಿ ಒಬ್ಬೊಬ್ಬರು ಮೆನೆಪ್‌ಟಾನ ತೋಳುಗಳಿಗೆ ಆಸರೆ ನೀಡಿದರು.

ಧನುರ್ಧಾರಿ ಖ್ನೆಮ್‌ಹೊಟೆಪ್ ಕಾಣಿಸಿಕೊಂಡು ಜಯಕಾರ ಮಾಡಿದ.

" ಓ ಮೆನೆಪ್‌ಟಾ !

ಎಲ್ಲರೂ ಅಂದರು :

" ಓ ಮೆನೆಪ್‌ಟಾ !"

ಅವರ ಜತೆ ತಾನೂ ಜಯಕಾರ ಮಾಡಿದೆನಲ್ಲ ಎಂದು ಇಪ್ಯುವರ್ ಗಾಬರಿಯಾಗಿ, ಬಾಯಿಯನ್ನು ಅಂಗೈಯಿಂದ ಮುಚ್ಚಿಕೊಂಡ. ಮರುಕ್ಷಣವೇ ಕೈತೆಗೆದು, ಗಟ್ಟಿಯಾಗಿ ನಕ್ಕ.

ಮೆನೆಪ್‌ಟಾ ತೊಟ್ಟಿಲ ಕೂಸಾದ, ಅಂಬೆಗಾಲಿಡುವ ಮಗುವಾದ, ಹದಿ ವಯಸ್ಸಿನ ಹುಡುಗನಾದ ಸಹಸ್ರಾರು ಜನರ ಆ ವಾತ್ಸಲ್ಯ, ಒಲವು....

" ಆ ಬಕಿಲ ಎಲ್ಲಿದ್ದಾನೆ ಹುಡುಕಿ !"

—ಖ್ನೆಮ್ ಹೊಟೆಪ್‌ನ ಧ್ವನಿ.

" ಆ ಅಧಿಕಾರಿ, ಗೇಬು ಎಲ್ಲಿದ್ದಾರೆ ನೋಡಿ !"

—ಇನ್ನೊಬ್ಬನ ಕಂಠ

ಅವರಿರಲಿಲ್ಲ. ಕಂದಾಯ ವಸೂಲಿಗೆ ಬಂದ ಕಾವಲು ಭಟರೂ ಇರಲಿಲ್ಲ. ರಾಜಗೃಹದ ಕೆಲ ಭಟರೂ ಅಲ್ಲಿರಲಿಲ್ಲ. ಕುದಿಯುವ ನೀರಿಗಾಗಿ ಒಲೆಗೆ ಉರಿ ಹಾಕಲು ಯತ್ನಿಸುತ್ತಿದ್ದ ಸೇವಕರಲ್ಲೊಬ್ಬ ದಿಡ್ಡಿಬಾಗಿಲ ಕಡೆಗೆ ಬೊಟ್ಟು ಮಾಡಿ, " ಹೊರಟು ಹೋದ್ರು" ಅಂದ.

" ಓಡಿ ಹೋದ್ರು," ಎಂದು ಇನ್ನೊಬ್ಬ ತಿದ್ದಿದ.

ನದಿಯ ದಂಡೆಗೆ ಕಳ್ಳದಾರಿ, ಅಲ್ಲಿಂದ ರಾಜನಾವೆಯನ್ನೇರಿ ಮೆಂಫಿಸಿಗೆ ಪಲಾಯನ....

ಜನ ರಾಜಗೃಹದ ಪಲ್ಲಕಿಯನ್ನು ತಂದರು. ಮೆನೆಪ್‌ಟಾನನ್ನು ಅದರಲ್ಲಿ ಕುಳ್ಳಿರಿಸಿದರು. ಹೊರುವ ಸೌಭಾಗ್ಯಕ್ಕಾಗಿ ಕಿತ್ತಾಡಿದರು.

ಮುರಿದ ಮಹಾದ್ವಾರವನ್ನು ದಾಟಿದ್ದಾಯಿತು. ಖ್ನೆಮ್‌ಹೊಟೆಪನ ನೇತೃತ್ವದಲ್ಲಿ ಪಂಜಿನ ಮೆರವಣಿಗೆ ಹೊರಟಿತು.

ರಾಜಗೃಹದಲ್ಲಿ ಸಭಾಮಂದಿರದ ಮೂಲೆಯಲ್ಲಿ ಭೂಮಾಲಿಕರು ನಿಂತೇ ಇದ್ದರು, ದಂಗಾಗಿ.

ಇಪ್ಯುವರ್‌ನನ್ನು ಅಪೆಟ್‌ನನ್ನೂ ಜನ ಕರೆದರು :

" ಬನ್ನಿ ! ಬನ್ನಿ !"

ಬಟಾ ಪಲ್ಲಕಿಯ ಮುಂದೆ ಕುಣಿಯುತ್ತ ನಡೆದ.

ನಿದ್ದೆ ? ಎಚ್ಚರ ? ಕನಸು ? ಕನಸು ? ಮೆನೆಪ್‌ಟಾ ಅರೆತೆರೆದ

ಕಣ್ಣುಗಳಿಂದ ಪಂಜು ಬೆಳಕಿನಲ್ಲಿ ಕುಣಿಯುತ್ತಿದ್ದ ಬಟಾನನ್ನು ನೋಡಿದ.... ಕರಡಿ ಕುಣಿತ ?....ನೆಫಿಸ್....ರಾಮೆರಿಪ್‌ಟಾ....

೪

ಮಾರನೆಯ ಬೆಳಿಗ್ಗೆ ಅರಾಜಕವಾಗಿದ್ದರೂ ಶಾಂತವಾಗಿತ್ತು, ನೀರಾನೆ ಪ್ರಾಂತ. ಮುಖ್ಯ ಪಟ್ಟಣದ ಜನ ತಡವಾಗಿ ಕಣ್ಣು ಹೊಸಕಿಕೊಂಡು ಎದ್ದರು. ಕಂದಾಯ ವಸೂಲಿಗೆ ಬಂದಿದ್ದವರು ಬದುಕಿ ಉಳಿದರೆ ಸಾಕೆಂದು ಓಡಿ ಹೋದ ಸುದ್ದಿ ಗ್ರಾಮಾಂತರ ಪ್ರದೇಶಗಳಿಗೆ ಹಬ್ಬಲು ಹಾತೊರೆಯುತ್ತಿತ್ತು. ಅದರ ವಾಹಕರಾಗಲು ಅಬ್ಟು ಯಾತ್ರಿಕರ ತಂಡದಲ್ಲಿದ್ದ ಹಳ್ಳಿಗರು ಸಿದ್ಧವಾಗಿದ್ದರು.

ಹೊರಡುವುದಕ್ಕೆ ಮುನ್ನ, ಚಾಟಿಗೆರೆಗಳು ಊದಿಕೊಂಡಿದ್ದರೂ ಸುಪ್ರಸನ್ನನಾಗಿದ್ದ ಮೆನೆಪ್‌ಟಾಗೆ ಅವರು ನಮಿಸಿದರು; ನೆಫಿಸ್‌ಗೆ ವಿದಾಯ ನುಡಿದರು; "ಹೋಗಿ ಬರ್‍ತೀವೆ" ಎಂದು ರಾಮೆರಿಪ್‌ಟಾಗೂ ಹೇಳಿದರು.

ಗಾಯಗೊಂಡಿದ್ದವರಿಗೆ ಅರ್ಚಕ ವೈದ್ಯ ಅಪೆಟ್‌ನಿಂದ ಚಿಕಿತ್ಸೆ. ಎಲ್ಲವೂ ರಕ್ತ ಸೋರುತ್ತಿದ್ದ ಹೊರಗಿನ ಗಾಯಗಳು. ಮಂತ್ರಪಠಣದ ಅಗತ್ಯವಿರಲಿಲ್ಲ. ಆದರೆ, ಅವರಲ್ಲಿ ಬಾಣ ಆಳಕ್ಕೆ ನೆಟ್ಟದ್ದ ಒಬ್ಬನ ಸ್ಥಿತಿ ಮಾತ್ರ ಗಂಭೀರವಾಗಿತ್ತು.

ಸ್ನೊಫ್ರು ಮೆನೆಪ್‌ಟಾನೊಡನೆ ನುಡಿದ :

"ನೇಕಾರ ಅಪ್ಪು ಬದುಕ್ತಾನೋ ಇಲ್ಲವೋ...."

".... ...."

"ಪಟ್ಟಿ ಕಟ್ಟಿದೆ ಆದರೂ...."

"ಅಪೆಟ್ ಏನು ಹೇಳ್ತಾರೆ ?"

"ದೇವರ ಮೇಲೆ ಭಾರ ಹಾಕೋಣ ಅಂದ್ರು,"

ನಿಟ್ಟುಸಿರು ಬಿಟ್ಟು ಮೆನೆಪ್‌ಟಾ ನುಡಿದ :

"ಮಕ್ಕಳಿಲ್ಲ ಸಣ್ಣವು. ಅವನ ಹೆಂಡತಿಗೆ ಧೈರ್ಯ ಹೇಳ್ಬೇಕು. ಅನ್ಪುಗೆ ಪೂರ್ತಿ ಗುಣವಾಗೋ ವರೆಗೂ ಅವರ ರಕ್ಷಣೆಯ ಜವಾಬ್ದಾರಿ ನಮ್ಮದು."

"ಹುಂ. ಗಹನವಾದ ವಿಷಯ, ಇನ್ನೊಂದಿದೆ."

ತಾನದನ್ನು ಬಲ್ಲೆ ಎನ್ನುವಂತೆ ಮೆನೆಪ್‌ಟಾ ಮುಗುಳುನಕ್ಕ.

"ರಾಜಗೃಹದ್ದೆ ?" ಎಂದು ಕೇಳಿದ.

"ಹೌದು. ಪ್ರಾಂತಪಾಲರಿಲ್ಲ ಕಾವಲು ಭಟರಿಲ್ಲ ಎಂದರೆ ಕಳ್ಳಕಾಕರು ಮೆರೀಬಹುದು."

"ಜನಾಭಿಪ್ರಾಯ ಏನು ?"

"ಅವರು ದಂಗಾಗಿದ್ದಾರೆ. ಫೆರೋನ ದಂಡು ಬರಬಹುದೂಂತ ಕೆಲವರ ಅಭಿಪ್ರಾಯ. ಆದರೆ, ಕಳೆದ ವರ್ಷ ರಾಜಧಾನಿಯಿಂದ ವಾಪಸಾದ ವೃದ್ಧ ಸೈನಿಕ ಹೆಮ್‌ಟೆ ರಾಜಧಾನಿಯಲ್ಲಿ ಈಗ ಸೈನ್ಯವೇ ಇಲ್ಲ ಅಂತಾನೆ. ಇದ್ದ ಸೈನ್ಯವನ್ನು ಸೈನ್ಯ ಗಡಿಗೆ ಕಳಿಸಿದ್ದಾರಂತೆ. ಈಗ ಅಲ್ಲಿಯೇ ಅದರ ಠಾಣ್ಯ."

"ಅರ್ಚಕರ ಅಭಿಮತ ?"

"ಯಾರು ಆಳಿದರೂ ದೇವರ ಹಿರಿತನ ಇದ್ದದ್ದೇ— ಅಂತೆ. ಇಪ್ಯುವರ್—"

"ಏನಂತೆ ?"

"ಹಳೆಯ ದಾಖಲೆಗಳನ್ನೆಲ್ಲಾ ನೋಡಿದ. ಇಂಥ ಘಟನೆ ಹಿಂದೆ ಆದ ಪ್ರಸ್ತಾಪ ಎಲ್ಲಿಯೂ ಇಲ್ಲ; ಫೆರೋ ತೀರ್ಪು ನೀಡೋವರೆಗೂ ನಾವು ನಿಶ್ಚಿಂತೆಯಾಗಿರಬಹುದು—ಅನ್ತಾನೆ."

ಬಾಗಿಲು ತೆರೆಯಿತು. ಆಪ್ತಾಲೋಚನೆಗೆ ಭಂಗ ಬಂತು. ಖ್ನೆಮ್ ಹೊಟೆಪ್ ಒಳಗೆ ಬಂದ.

"ಬಾ ಖ್ನೆಮು," ಎಂದು ಕರೆದ ಮೆನೆಪ್‌ಟಾ, ಆತ್ಮೀಯತೆಯಿಂದ.

ಸ್ನೊಫ್ರುವಿನತ್ತ ಹೊರಳಿ "ನಮ್ಮ ದಳಪತಿಯ ಅಭಿಪ್ರಾಯ ಕೇಳೋಣ," ಎಂದ.

ಇಬ್ಬರ ಮುಖಗಳನ್ನೂ ಪರೀಕ್ಷಕ ನೋಟದಿಂದ ದಿಟ್ಟಿಸಿ, ಖ್ನೆಮ್ ಹೊಟೆಪ್ ಕೇಳಿದ :

" ಯಾವ ವಿಷಯ ?"

" ರಾಜಗೃಹಕ್ಕೆ ಸಂಬಂಧಿಸಿದ್ದು," ಎಂದ ಸ್ನೊಫ್ರು.

" ಅದಾ ? ನಾನು ವಯಸ್ನಲ್ಲಿ ಚಿಕ್ಕೋನು. ಉದ್ಧಟ ಅಂತ ನೀವು ಬಯ್ಬಹುದು. ಆದರೂ ಮನಸ್ನಲ್ಲಿ ಇರೋದನ್ನ ಹೇಳಿಯೇ ಬಿಡ್ತೀನೆ. ಇನ್ನು ನೀರಾನೆ ಪ್ರಾಂತಕ್ಕೆ ಹೊರಗಿನ ಪ್ರಾಂತಪಾಲರೂ ಬೇಡ, ಅಧಿಕಾರಿಗಳೂ ಬೇಡ. ಮೆನೆಪ್‌ಟಾ ಅಣ್ಣ ನಮ್ಮ ನಾಯಕ, ಅವರೇ ಪ್ರಾಂತಪಾಲ, ಅವರೇ ಅಧಿಕಾರಿ. ನಮ್ಮನ್ನು ನಾವೇ ಆಳೋಣ."

ಮೆನೆಪ್‌ಟಾ ಭಾವೋದ್ವೇಗವನ್ನು ಹತ್ತಿಕ್ಕಿದ. ಸ್ನೊಫ್ರು ಸರಾಗವಾಗಿ ಉಸಿರಾಡಲೆತ್ನಿಸುತ್ತ ಅಂದ :

" ನೀನು ಬಡಬಡ ಅಂತ ಹೇಳ್ಬಿಟ್ಟೆ. ಅದೇ ತೀರ್ಮಾನಕ್ಕೆ ಯೋಚಿಸಿ ಯೋಚಿಸಿ ನಾವೂ ಬರ್‍ತಾ ಇದ್ವಿ."

ಖ್ನೆಮ್‌ಹೊಟೆಪನ ಮುಖದ ಮೇಲೆ ಹರ್ಷ ಅರಳಿತು. ಆತ ಮೆನೆಪ್‌ಟಾನ ಬಳಿಗೆ ಚಂಗನೆ ಹಾರಿ ಮಂಡಿಯೂರಿ ಅವನ ಬಲಗೈಯನ್ನು ಚುಂಬಿಸಿದ. ಸ್ನೊಫ್ರುವಿಗೂ ಅದೇ ರೀತಿ ಗೌರವ ತೋರಿದ.

" ನೆಫಿಸ್ ಅಕ್ಕ ! ನೆಫಿಸ್ ಅಕ್ಕ ! ಏನು ಕೊಡ್ತೀರಿ ? ಕೇಳಿಸ್ತಾ ? ಕೇಳಿಸ್ತಾ ?" ಎಂದು ಕೂಗಿ ನುಡಿದ.

ಮಾತುಕತೆಯನ್ನು ಅರ್ಥ ಮಾಡಿಕೊಳ್ಳಲೆತ್ನಿಸುತ್ತ ರಾಮೆರಿಪ್‌ಟಾ ಜೊತೆ ನೆಫಿಸ್ ಹಿತ್ತಲ ಬಾಗಿಲ ಬಳಿ ನಿಂತಿದ್ದಳು.

" ಏನಾಗ್ತಿದೆ ಇಲ್ಲಿ ?" ಎಂದು ಕೇಳುತ್ತ ಸೆಬೆಕ್ಕು ಒಳಬಂದ.

" ನಿನ್ನನ್ನು ಬರ ಹೇಳ್ಬೇಕು ಅನ್ನುವಷ್ಟರಲ್ಲಿ ನೀನೇ ಬಂದ್ಬಿಟ್ಟೆ," ಎಂದು ಸ್ನೊಫ್ರು ಸಂತಸ ಸೂಚಿಸಿದ.

ಮೆನೆಪ್‌ಟಾ ವಿವರಿಸಿ ಹೇಳಿದುದನ್ನು ಕೇಳಿ, ಸೆಬೆಕ್ಕು ಒಂದು ಕ್ಷಣ ಸುಮ್ಮನಿದ್ದ. ಬಳಿಕ ಅಂದ :

" ಪೆರೋ ಒಪ್ತಾರಾ ?"

ಉತ್ತರ ಬಂದುದು ಖ್ನೆಮ್‌ಹೊಟೆಪ್‌ನಿಂದ :

" ನಾವು ಮಾಡ್ತಿರೋದು ಎಲ್ಲರ ಒಳ್ಳೇದಕ್ಕೇ. ಒಪ್ದೆ. ಏನ್ಮಾಡ್ತಾರೆ ? ಅಷ್ಟಕ್ಕೂ ನಮ್ಮ ತಂದೆ ಅಲ್ವಾ ಅವರು ? ಒಮ್ಮೆಯಾದರೂ ನಮ್ಮ ಪ್ರಾಂತಕ್ಕೆ ಬಂದಿದ್ರಾ ? ಬರಲಿ, ಮಾತಾಡೋಣ."

ಆತ ಮಾತು ಮುಗಿಸುವಷ್ಟರಲ್ಲಿ, " ಅನ್ಪು ಹ್ಯಾಗೆ ಹ್ಯಾಗೋ ಮಾಡ್ತಿದಾನೆ" ಎಂಬ ಕಳವಳದ ಸುದ್ದಿಯೊಡನೆ ಇಬ್ಬರು ಬಂದರು. ಎಲ್ಲರೂ ಹೊರಡಲು ಎದ್ದರು.

* * * *

ಮಧ್ಯಾಹ್ನದ ವೇಳೆಗೆ ಅನ್ಪು ತೀರಿಕೊಂಡ. ಶ್ರಮ ಪಟ್ಟು ದುಡಿಯುತ್ತಿದ್ದ, ನ್ಯಾಯ ನಿಷ್ಠುರನಾಗಿದ್ದ ಯುವಕ ಅವನು.

" ನನಗೇ ತಗಲಬಹುದಾಗಿತ್ತು ಬಾಣ. ಬದಲು ಅವನಿಗೆ ನೆಟ್ಟಿತು," ಎಂದ ಸ್ನೊಫ್ರು ದುಃಖಿಸುತ್ತ.

ಹಿಂದಿನ ದಿನದ ಘಟನೆಗಳೆಲ್ಲ ಕಣ್ಣಿಗೆ ಕಟ್ಟಿದಂತಾಗಿ ಮೆನೆಪ್‌ಟಾ ಬಿಕ್ಕಿ ಬಿಕ್ಕಿ ಅತ್ತ. ಅವನಿಗನಿಸಿತು : ಜೆಲೆ ತೆರದೆ ಯಾವ ವಿಜಯವೂ ಇಲ್ಲ; ತ್ಯಾಗವಿಲ್ಲದೆ ಯಾವ ಸಾಧನೆಯೂ ಇಲ್ಲ.

ಸ್ನೊಫ್ರುವಿನ ಪತ್ನಿ ನೆಜಮುಟ್—ಮಕ್ಕಳಿಲ್ಲದ ಜೀವ—ಅನ್ಪುವಿನ ವಿಧವೆಯನ್ನು ಸಂತೈಸಿದಳು.

" ಅಳಬೇಡ. ನಿಮ್ಮನ್ನೆಲ್ಲ ನಾವು ನೋಡ್ಕೋತೇವೆ."

ಶವವನ್ನು ಸೆಬೆಕ್ಖುವಿನ ಮನೆಯಿಂದ ಅನ್ಪುವಿನ ಪುಟ್ಟ ಗುಡಿಸಲಿಗೆ ಒಯ್ದರು. ಅಲ್ಲಿ ಮಗ್ಗದಲ್ಲಿತ್ತು ಅರ್ಧ ನೇಯ್ದು ಬಿಟ್ಟಿದ್ದ ಸೆಣಬಿನ ಬಟ್ಟೆ. ಹಿಂದಿನ ದಿನ ನೇಯ್ಯುತ್ತ ಕುಳಿತಿದ್ದ ಅನ್ಪು ಗದ್ದಲ ಕೇಳಿಸಿದೊಡನೆ, ಕೆಲಸವನ್ನು ಅಲ್ಲಿಗೇ ನಿಲ್ಲಿಸಿ ಹೊರಟಿದ್ದ. ಶವ ಬಂದೊಡನೆ ಜನ ನೆರೆದಿದ್ದರು. ಸಂದಣಿ ವಿಪರೀತವಾಗಿ ಹೊರಕ್ಕೆ ಹರಿಯಿತು. ಬೀದಿಯ ಉದ್ದಗಲಕ್ಕೂ ಅದು ದಟ್ಟೈಸಿತು.

" ಸಾವಧಾನ ! ತಳ್ಳಬೇಡಿ ! ಶಿಸ್ತು ಪಾಲಿಸಿ !" ಎಂದು ಖ್ನೆಮ್‌ಹೊಟೆಪ್ ಜನಜಂಗುಳಿಯ ಎಡೆಗೆ ಕೂಗಿ ಹೇಳಿದ.

ಪತಿಯ ಶವ ಗುಡಿಸಲು ತಲಪಿದೊಡನೆ, ನಿದ್ದೆಯಲ್ಲಿ ಚಲಿಸುವ ಹಾಗೆ ಅದರ ಹಿಂದೆ ನಡೆದು ಬಂದ ಅನ್ಪುವಿನ ವಿಧವೆ ಛಾವಣಿ ಬಿರಿಯುವಂತೆ ರೋದಿಸ ತೊಡಗಿದಳು.

ಗದರಿಸುವ ಧ್ವನಿಯಲ್ಲಿ ಸೆಬೆಕ್ಖು ನುಡಿದ :

"ಸೈರಿಸಿಕೋ ಸೈರಿಸಿಕೋ. ಮೊಸಳೆ ಬಾಯಿಗೆ ಬಿದ್ದೋ ಕಾಡು ಹಂದಿ ಗುಮ್ಮಿಯೋ ನಿನ್ನ ಗಂಡ ಸತ್ತಿದ್ದರೆ ಇಷ್ಟೊಂದು ಜನ ಸೇರ್‍ತಿದ್ರಾ ? ಈಗ ನೋಡು ಇದೂ ದೊರೆಮಗನ ಮರಣ. ನೀನು ಕಣ್ಣೀರು ಸುರಿಸ್ಬಾರ್‍ದು. ಹೆಮ್ಮೆ ಪಡ್ಬೇಕು."

ದೊರೆಮಗನ ಮರಣಕ್ಕೆ ಸಮಾನ ನಿಜ. ಆದರೆ ಈ ಬಡವನ ಶವದ ರಕ್ಷಣೆಗಾಗಿ ಲೇಪನ ಕ್ರಮಗಳಿರಲಿಲ್ಲ. ಮೊದಲೇ ನಿರ್ಮಿಸಿದ ಗೋರಿ ಇರಲಿಲ್ಲ.

ಅಪೆಟ್‌ನಿಗೆ ಕರೆ ಹೋಯಿತು.

ಆತ ಬಂದ. ಜನ ಸಮ್ಮರ್ದದೆದುರು ತನ್ನ ಹಿರಿಮೆ ಕುಗ್ಗಿಹೋಗದಂತೆ ಗಾಂಭೀರ್ಯದ ಮುಖವಾಡವನ್ನು ಬಿಗಿಗೊಳಿಸಿ ಆವನೆಂದ :

"ಒಳ್ಳೆಯವನು. ದೇವರು ಕರೆಸಿಕೊಂಡ."

ಮೆನೆಪ್‌ಟಾ ಅಪೆಟ್‌ನನ್ನು ಪ್ರಶ್ನಿಸಿದ :

"ಬೆಳಕಿಗೆ ಆಗಮನ; ಪುಸ್ತಕದ ವಿಷಯ ಕೇಳಿದ್ದೇನೆ. ನಿಮ್ಮಲ್ಲಿ ಅದು ಇದೆಯೆ ?"

"ಒಂದು ಪ್ರತಿ ಇದೆ."

"ಉಳಿದ ಸಿದ್ಧತೆ ಆಗೋ ತನಕ ಅದರ ಪಠಣ ಮಾಡಬಹುದಲ್ಲ ?"

"ಅದು ರಾಜಯೋಗ್ಯವಾದ ಕ್ರಮ. ಇಷ್ಟರವರೆಗೆ ರೂಢಿಯಲ್ಲಿದ್ದುದು ಮಂತ್ರೋಚ್ಚಾರ ಮಾತ್ರ. ನೀವೆಲ್ಲ ಅಪೇಕ್ಷೆ ಪಡೋದಾದ್ರೆ...."

"ಹ್ಞ—ಹ್ಞ— ಪುಸ್ತಕ ತರೋದಕ್ಕೆ ದೇವಮಂದಿರಕ್ಕೆ ಯಾರನ್ನಾದರೂ ಕಳಿಸೋಣವಾ ?"

ಅಪೆಟ್ ಅತ್ತಿತ್ತ ನೋಡಿದ. ಗುಂಪನ್ನು ಭೇದಿಸಿಕೊಂಡು, ತಲೆ ಗೂದಲು ಬೋಳಿಸಿದ್ದ ಹುಡುಗನೊಬ್ಬ ಮುಂದೆ ಬಂದ. ಆತ ಅಪೆಟ್‌ನ

ಮಗ—ಮರಿದೇವ ಸೇವಕ.

ತಂದೆ ನಿರ್ದೇಶವಿತ್ತ. "'ಬೆಳಕಿಗೆ ಆಗಮನ' ಪುಸ್ತಕ ಬೇಕು. ಗರ್ಭ ಗುಡಿ ಪಕ್ಕದಲ್ಲಿ ಸಣ್ಣ ಪೆಟಾ ಇದೆಯಲ್ಲ ಅದನ್ನು ತಗೊಂಡ್ಬಾ"

'ಗೊತ್ತು' 'ಆಗಲಿ' ಎನ್ನುವಂತೆ ಹುಡುಗ ತಲೆ ಆಡಿಸಿ, ಮೊಣಕೈ ಗಳಿಂದ ತಿವಿದು ದಾರಿ ಬಿಡಿಸಿಕೊಳ್ಳುತ್ತ ಓಡಿದ.

ಊರಿನ ಹಿರಿಯ ಬಡಗಿ ಸೆತ್ನಾ ಅಲ್ಲಿಯೇ ಇದ್ದ.

"ಅನ್ನು ನಮ್ಮ ಬಂಧು. ಅವನ ಶವಪೆಟ್ಟಿಗೆ ಮಾಡಿದ್ದಕ್ಕೆ ನನಗೆ ಏನೂ ಕೊಡಬೇಕಾಗಿಲ್ಲ," ಎಂದು ಭಾವೋದ್ವೇಗದಿಂದ ನುಡಿಯುತ್ತ, ಶವದ ಅಳತೆ ತೆಗೆದುಕೊಂಡು ಸೆತ್ನಾ ಅಲ್ಲಿಂದ ಮಾಯವಾದ.

ಸುಗಂಧ ದ್ರವ್ಯಗಳನ್ನು ತರಿಸಿ, ಶವದ ಬಳಿ ಹಚ್ಚಿಟ್ಟರು.

ದರಿದ್ರರಿಗೆಲ್ಲಿಯ ಶವಪೆಟ್ಟಿಗೆ ? ಸಾವು ಬಂದಾಗ, ಬಟ್ಟೆಯ ತುಣುಕಿನ ಜೊತೆ ಅವರು ಮಣ್ಣಾಗಬೇಕು. ಆದರೆ ಅನ್ನುವಿಗೀಗ ಶವಪೆಟ್ಟಿಗೆ ! ಜನ ಸಮುದಾಯದಲ್ಲೆಲ್ಲ ಪಿಸುದನಿಯಲ್ಲಿ ಆ ಪದ ಸುಳಿದಾಡಿತು. "ಶವಪೆಟ್ಟಿಗೆ !" "ಶವಪೆಟ್ಟಿಗೆ !"

ತಡವಿಲ್ಲದೆ ಶೋಕಸ್ತ್ರೀಯರೂ ಬಂದು ನೆರೆದರು; "ಓ ಅನ್ನು ಓ ಅನ್ನು" ಎಂದು ಅವರು ಅಳತೊಡಗಿದರು.

ದೇವ ಮಂದಿರದಿಂದ ಪೆಟಾರಿ ಬಂದೊಡನೆ, ಅರ್ಚಕ ಉಟ್ಟಿದ್ದ ಬಟ್ಟೆ ಯನ್ನು ಒದ್ದೆ ಮಾಡಿ ಪುನಃ ಅದನ್ನೇ ಉಟ್ಟು ಬಂದ ಜನರನ್ನು ಹಿಂದಕ್ಕೆ ಸರಿಸಿ ಜಾಗ ಮಾಡಿಕೊಂಡು, ಪೆಟಾರಿಯ ಮುಂದೆ ಆಸೀನನಾದ. ಪೆಟಾರಿ ಯಿಂದ ಹೊರಬಂದುದು, ಹಾಳೆಗಳನ್ನು ಜೋಡಿಸಿ ಹೊಲಿಗೆ ಹಾಕಿದ್ದ ನೀಳಾ ಕಾರದ ಪುಸ್ತಕ.

ಗಾಯಗೊಂಡವರಿಗೆ ಚಿಕಿತ್ಸೆ ನೀಡುತ್ತಿದ್ದ ಅಪೆಟ್‌ಗೆ ಹಿಂದಿನ ರಾತ್ರೆ ಸಾಕಷ್ಟು ನಿದ್ರೆ ಇರಲಿಲ್ಲ. ಬಳಲಿಕೆ ಮುಖದ ಮೇಲೆ ಎದ್ದು ಕಾಣುತ್ತಿತ್ತು. ಆದರೂ ಗುಡಿಸಲಿನ, ಮಬ್ಬು ಬೆಳಕಿಗೆ ತನ್ನ ದೃಷ್ಟಿಯನ್ನು ಹೊಂದಿಸಿ ಕೊಂಡು, 'ಬೆಳಕಿಗೆ ಆಗಮನ' ಪುಸ್ತಕದ ಹಾಳೆ ತೆರೆದು ರಾಗವಾಗಿ ಆತ ಓದತೊಡಗಿದ:

“ ಒಸೈರಿಸ್ ದೇವರ ರಾಜ್ಯವಾದ ಪರಲೋಕದ ಹೆಬ್ಬಾಗಿಲ ಬಳಿ ಮೃತನು ಈಗ ನಿಂತು ಹೀಗೆ ಪ್ರಾರ್ಥಿಸುತ್ತಾನೆ: ಉಘೇ ! ಮಹಾದೇವನೆ ! ಸತ್ಯದ ಪ್ರಭುವೆ, ನ್ಯಾಯದ ಪ್ರಭುವೆ, ಉಘೇ ! ನನ್ನೊಡೆಯ ನಿನ್ನೆದುರು ಬಂದು ನಿಂತಿದ್ದೇನೆ ನಾನು. ನಿನ್ನ ಸೌಂದರ್ಯಾತಿಶಯವನ್ನು ಕಾಣಲೆಂದು ನನ್ನನ್ನು ಇಲ್ಲಿಗೆ ಕರೆತಂದಿದ್ದಾರೆ. ನಾನು ದಿಟವಾಡುತ್ತಿದ್ದೇನೆ. ಮನುಜರಲ್ಲಿ ನಾನು ಭೇದ ಭಾವ ಎಣಿಸಿಲ್ಲ. ಬಡವರ ಸುಲಿಗೆ ಮಾಡಿಲ್ಲ ನಾನು. ಸ್ವತಂತ್ರ ವಾದ ಯಾವನನ್ನೂ ಅವನ ಇಚ್ಛೆಗಿಂತ ಹೆಚ್ಚಾಗಿ ನಾನು ದುಡಿಸಿಲ್ಲ. ಕರ್ತವ್ಯ ಲೋಪ ಎಸಗಿಲ್ಲ ನಾನು; ದೇವರಿಗೆ ಅಪ್ರಿಯವಾದುದೇನನ್ನೂ ಮಾಡಿಲ್ಲ. ಯಾವ ಯಜಮಾನನೂ ತನ್ನ ದಾಸನೊಡನೆ ಕೆಟ್ಟದಾಗಿ ನಡೆದುಕೊಳ್ಳಲು ನಾನು ಕಾರಣನಾಗಿಲ್ಲ. ನಾನು ಯಾವುದೇ ಮನುಷ್ಯನನ್ನು ಉಪವಾಸ ಕೆಡವಿಲ್ಲ. ಯಾರೂ ಅಳುವಂತೆ ಮಾಡಿಲ್ಲ. ಯಾರನ್ನೂ ನಾನು ಕೊಲೆ ಗೈದಿಲ್ಲ. ನಾನೆಂದೂ ರಾಜದ್ರೋಹ ಎಸಗಿಲ್ಲ. ದೇವಮಂದಿರಕ್ಕೆ ಯಾವ ಸರಬರಾಜನ್ನೂ ನಾನು ಕಡಿಮೆ ಮಾಡಿಲ್ಲ. ದೇವರ ನೈವೇದ್ಯವನ್ನೆಂದೂ ಕೆಡಿಸಿಲ್ಲ. ದೇವಮಂದಿರದ ಪವಿತ್ರ ಸ್ಥಳದಲ್ಲಿ ವಿಷಯಾಸಕ್ತನಾಗಿ ವರ್ತಿಸಿಲ್ಲ. ದೇವರನ್ನು ಧಿಕ್ಕರಿಸಿ ನಡೆದಿಲ್ಲ. ತಕ್ಕಡಿಯಲ್ಲಿ ಮೋಸ ಮಾಡಿಲ್ಲ. ಪಕ್ಕದ ಹೊಲಕ್ಕೆ ನೀರು ತಡೆಹಿಡಿದಿಲ್ಲ. ಎದೆಹಾಲಿನ ಮಕ್ಕಳ ಬಾಯಿಯಿಂದ ಹಾಲನ್ನು ಕಸಿದಿಲ್ಲ. ದೇವರ ಹಕ್ಕಿಗಳನ್ನು ಬಲೆಯಲ್ಲಿ ಸೆರೆಹಿಡಿದಿಲ್ಲ....ನಾನು ಪರಿಶುದ್ಧ....ನಾನು ಪರಿಶುದ್ಧ....ನಾನು ಪರಿಶುದ್ಧ....”

ಸುತ್ತಲೂ ಇದ್ದವರನ್ನು ನೋಡಿ ಅಪೆಟ್, “ಹೇಳಿ. ನಾನು ಪರಿಶುದ್ಧ ಅಂತ ಮೂರು ಸಲ ಹೇಳಿ,” ಎಂದ.

ಮೆನೆಪ್‌ಟಾನ ಆದಿಯಾಗಿ, ಅಪೆಟ್‌ನ ಮಾತು ಕೇಳಿಸಿದವರೆಲ್ಲ ಅಂದರು :

“ ನಾನು ಪರಿಶುದ್ಧ....ನಾನು ಪರಿಶುದ್ಧ....ನಾನು ಪರಿಶುದ್ಧ....”

ಹೊರಗೆ ನಿಂತಿದ್ದವರ ಕಿವಿಗೂ ಅದು ಬಿತ್ತು. ಅವರೂ ಅದನ್ನು ಪುನ ರುಚ್ಚರಿಸಿದರು....

ತಾನು ಸೃಷ್ಟಿಸಿದ ವಾತಾವರಣ ಕಂಡು ಅಪೆಟ್ ಉಲ್ಲಾಸಗೊಂಡ.

ಹಾಳೆ ಮಗುಚಿ, ಕಣ್ಣಾಲಿಗಳನ್ನು ಉರ್ಧ್ವಮುಖವಾಗಿ ಹೊರಳಿಸಿ, ಧ್ವನಿ ಏರಿಸಿ ಅವನು ಮುಂದುವರಿದ :

" ಅನ್ಪು ಹೆಬ್ಬಾಗಿಲನ್ನು ಹೊಕ್ಕು ನೆಲಮಾಳಿಗೆ ತಲುಪಿದಾಗ, ದೈತ್ಯ ಗಾತ್ರದ ಭೀಕರ ರೂಪದ ಹನ್ನೆರಡು ಪ್ರಾಣಿಗಳು ಅವನಿಗೆ ಎದುರಾಗುತ್ತವೆ. ಅವುಗಳತ್ತ ದೃಷ್ಟಿ ಹರಿಸಿ ಅನ್ಪು ಹೇಳಬೇಕು :

"ಉಘೇ ! ದೇವರ್ಮಕ್ಕಳೇ ! ನಿಮ್ಮನ್ನು ನಾನು ಬಲ್ಲೆ. ನಿಮ್ಮ ಹೆಸರುಗಳೂ ನನಗೆ ಗೊತ್ತಿವೆ. ಹೊಡೆತಗಳಿಂದ ನನ್ನನ್ನು ನೀವು ಕೆಡವಬೇಡಿ. ನೀವು ಅನುಸರಿಸುವ ಹಿರಿಯ ದೇವರಿಗೆ ನನ್ನೊಳಗಿರುವ ಕೆಡುಕನ್ನು ವರದಿ ಮಾಡಬೇಡಿ :

"ಆಗ ಒಂದು ವಾಣಿ ಕೇಳಿಬರುತ್ತದೆ : 'ಯಾರಪ್ಪ ನೀನು ? ನಿನ್ನ ಹೆಸರೇನು ?"

" ಅನ್ಪು ಉತ್ತರವೀಯಬೇಕು : ಹುಲ್ಲಿನ ಕೆಳಗೆ ಬೆಳೆಯುವಾತ ನಾನು, ಜೀವವೃಕ್ಷದ ನಿವಾಸಿ—ಅಂತ ನನ್ನ ಹೆಸರು."

" ವಾಣಿ : 'ಅದನ್ನು ದಾಟಿ ಹೋಗು.'

" ಅನ್ಪು : 'ಜೀವವೃಕ್ಷದ ಉತ್ತರದಲ್ಲಿರುವ ಸ್ಥಳ ತಲಪಿದೆ.'

" ವಾಣಿ : 'ಅಲ್ಲಿ ಏನು ನೋಡಿದೆ ?'

" ಅನ್ಪು : 'ಒಂದು ತೊಡೆ ಒಂದು ಕಾಲು'

" ವಾಣಿ : 'ಅವು ನಿನಗೆ ಏನು ಹೇಳಿದುವು ?'

" ಅನ್ಪು : ಅಲ್ಲಿ ಫೆಹ್‌ಖುವಿನ ರಾಜ್ಯದಲ್ಲಿ ಸ್ವಾಗತ ಕಾದಿದೆ ಎಂದವು.'

" ವಾಣಿ : 'ಅವು ನಿನಗೆ ಏನು ಕೊಟ್ಟವು ?'

" ಅನ್ಪು: 'ಅಗ್ನಿಯ ಒಂದು ಜ್ವಾಲೆ ಮತ್ತು ಸ್ಫಟಿಕದ ಒಂದು ಕಂಬ.

" ವಾಣಿ : 'ನೀನು ಅವನ್ನೇನು ಮಾಡಿದೆ ?'

" ಅನ್ಪು : 'ಸಂಜೆಯ ಬುತ್ತಿ ಅಂತ ಮಾಯಿಟ್ ತಟಾಕದ ದಡದಲ್ಲಿ ಹೂಳಿದೆ'

" ವಾಣಿ : 'ಹೂಳಿದ ಮೇಲೆ ಬೆಂಕಿಯ ಜ್ವಾಲೆಗೂ ಸ್ಫಟಿಕದ

ಕಂಬಕ್ಕೂ ಏನು ಮಾಡಿದೆ ?'

"ಅನ್ಪು : 'ನಾವು ಅವನ್ನು ಕೂಗಿ ಕರೆದೆ, ಹೊರಕ್ಕೆಳೆದೆ. ಕಂಬವನ್ನು ಒಡೆದು ಒಂದು ಕೊಳ ಮಾಡಿದೆ.'

"ವಾಣಿ : 'ನೀನು ನಮ್ಮನ್ನು ಬಲ್ಲೆಯಾದ್ದರಿಂದ, ಧರ್ಮಭವನದ ದ್ವಾರದ ಮೂಲಕ ನೀನಿನ್ನು ಒಳಕ್ಕೆ ಬರಬಹುದು....'

"ಹೀಗೆ ನಿಗೂಢ ಪ್ರಶ್ನೆಗಳಿಗೆ ನಿಗೂಢ ಉತ್ತರ ನೀಡಿ ನೇಕಾರ ಅನ್ಪು ಒಸೈರಿಸ್ ದೇವತೆಯ ಆಸ್ಥಾನ ತಲಪುತ್ತಾನೆ....

"ನ್ಯಾಯಮೂರ್ತಿಯ ಆಸ್ಥಾನ ತಲುಪಿದರೂ ಸಾನಿಧ್ಯ ಲಭಿಸಿಲ್ಲ—ಅನ್ಪುವಿಗೆ....ಅದು ಸಾಧ್ಯವಾಗಬೇಕಾದರೆ ಇನ್ನೊಂದು ಪರೀಕ್ಷೆಯಲ್ಲಿ ಅನ್ಪು ಉತ್ತೀರ್ಣನಾಗಬೇಕು ಆ ಪರೀಕ್ಷೆ ನಡೆಸುವವನು ಅನೂಬಿಸ್. ಅವನ ತಕ್ಕಡಿಯ ಬಲತಟ್ಟೆಯಲ್ಲಿ ಒಂದು ಗರಿ. ಅನ್ಪುವಿನ ಗುಂಡಿಗೆಯನ್ನು ಎಡ ತಟ್ಟೆಯಲ್ಲಿಡುತ್ತಾರೆ. ತಕ್ಕಡಿ ನೀಡುವ ನಿರ್ಣಯವನ್ನು ಥೊಥ್ ಬರೆದಿಡುತ್ತಾನೆ. ಗುಂಡಿಗೆ ಗರಿಗೆ ಸಮತೂಕವಾಯಿತೋ ಅನ್ಪು ಮುಂದೆ ಸಹಸ್ರಾರು ವರ್ಷ ಬಾಳುತ್ತಾನೆ. ಗುಂಡಿಗೆ ಭಾರವಾಯಿತೋ ಅಲ್ಲಿಯೇ ಮೊಸಳೆಗಳಿಗೆ ಆಹಾರವಾಗುತ್ತಾನೆ...."

ಏರುತ್ತಿದ್ದವರನ್ನು ಹಿಂದಕ್ಕೆ ಜಗ್ಗಿದ ಅನುಭವವಾಯಿತು. ಅಪೆಟ್‌ನ ಶ್ರೋತೃಗಳಿಗೆ ಉಸಿರು ಕಟ್ಟಿಸುವ ವಾತಾವರಣದಲ್ಲಿ ಮೆನೆಪ್‌ಟಾ ಮುಗುಳು ನಕ್ಕ. ಅದನ್ನು ಗಮನಿಸಿದ ಅಪೆಟ್, ತುಸು ಕಸಿವಿಸಿಗೊಂಡು, ನೇರ ಧ್ವನಿಯಲ್ಲಿ ನುಡಿದ :

"ಭಕ್ತ ಜನ ಏನೂ ಚಿಂತಿಸಬೇಕಾಗಿಲ್ಲ, ಅನ್ಪು ಮೊಸಳೆಗಳಿಗೆ ಆಹಾರವಾಗೋದಿಲ್ಲ. ಈ ಪವಿತ್ರ ಗ್ರಂಥ ವಾಚನದ ಫಲವಾಗಿ ಪರಲೋಕದ ಪರೀಕ್ಷೆಯಲ್ಲಿ ಅವನು ಉತ್ತೀರ್ಣನಾಗುತ್ತಾನೆ."

ಶವದ ಬಳಿ ಕುಳಿತಿದ್ದ ಮೃತನ ವಿಧವೆ ಇದ್ದಕ್ಕಿದ್ದಂತೆ ಚೀರಿದಳು :

"ನನ್ನ ಗಂಡ ಸತ್ತಿಲ್ಲ, ಸತ್ತಿಲ್ಲ...."

ಹಾಗೆ ಹೇಳುತ್ತ ಕೈಗಳನ್ನು ಚಾಚಿ ಅವಳು ಶವದ ಮೇಲೆ ಬಿದ್ದಳು.

"ಅವಳನ್ನು ಹಿಡಕೊಳ್ಳಿ !" ಎಂದು ಅಪೆಟ್ ಕೂಗಿ ನುಡಿದ.

ಅಲ್ಲೇ ನಿಂತಿದ್ದ ಕೆಲವರು ಆಕೆಯನ್ನು ತಡೆದರು.

ಅಪೆಟ್ 'ಬೆಳಕಿಗೆ ಆಗಮನ' ಪುಸ್ತಕವನ್ನು ಪೆಟಾರಿಯಲ್ಲಿಟ್ಟು, ಅದರ ಬಾಗಿಲು ಮುಚ್ಚಿ, ಎದ್ದು ನಿಂತು ನಿರ್ದೇಶವಿತ್ತ :

"ಎಲ್ಲರೂ ಮೂರು ಸಲ ಹೇಳಿ, ನಾನು ಪರಿಶುದ್ಧ !"

ಜನ ಅಂದರು :

" ನಾನು ಪರಿಶುದ್ಧ ! ನಾನು ಪರಿಶುದ್ಧ ! ನಾನು ಪರಿಶುದ್ಧ !"

ಹೊರಗಿನ ಜನರೂ ಪದದ ಎಳೆಯನ್ನೆತ್ತಿಕೊಂಡು ಪುನರುಚ್ಚರಿಸಿದರು.

" ಎಲ್ಲಿ ಶವಪೆಟ್ಟಿಗೆ ?"

—ಅಪೆಟ್ ಕೇಳಿದ.

ಸೆತ್ನಾ ಆಗಲೇ ನುಸುಳಿಕೊಂಡು ಒಳಗೆ ಬಂದಿದ್ದ. ಯಾರಾದರೂ ಸಿರಿವಂತರ ಮನೆಗೆ ಬೇಕಾಗಬಹುದೆಂದು, ಮೊದಲೇ ಸಿದ್ಧಗೊಳಿಸಿದ್ದ ಹಲಗೆಗಳಿದ್ದುವು. ಸಂದಿ ಕೀಲಿಗಳನ್ನಿರಿಸಿ ಹಲಗೆಗಳನ್ನು ಜೋಡಿಸಿ, ಸ್ವಲ್ಪ ಸಮಯದಲ್ಲೇ ಪೆಟ್ಟಿಗೆಯನ್ನು ಸೆತ್ನಾ ತಯಾರಿಸಿದ್ದ. ಈಗ ಆವನು ಸನ್ನೆ ಮಾಡಿದೊಡನೆಯೇ ಆತನ ಸಹಾಯಕ ಶವಪೆಟ್ಟಿಗೆಯನ್ನು ಗುಡಿಸಿಲಿನ ಒಳಕ್ಕೆ ತಂದ. ಅಪೆಟ್‌ನ ಪವಿತ್ರ ಗ್ರಂಥ ವಾಚನದಷ್ಟೇ ಮಹತ್ವದ್ದು ಈ ಪೆಟ್ಟಿಗೆ ಕೂಡಾ ಎನ್ನುವ ಹಾಗೆ, ಸೆತ್ನಾ ಸಂತೃಪ್ತಭಾವದಿಂದ ನಿಂತ.

ಕೊನೆಯ ಪಯಣಕ್ಕೆ ಅನ್ಸುವನ್ನು ಅಣಿಗೊಳಿಸುತ್ತಿದ್ದಂತೆ ಶೋಕ ಸ್ತ್ರೀಯರ ಆರ್ತನಾದ ಮತ್ತೆ ಮೊಳೆಯಿತು.

ಕಲ್ಲಿನ ಒಂದು ಪಾತ್ರೆಯಲ್ಲಿ ಒಂದಿಷ್ಟು ರೊಟ್ಟಿ ಚೂರುಗಳನ್ನಿರಿಸಿದರು— ಶವದ ಜತೆ ಮಣ್ಣು ಮಾಡಲೆಂದು.

ಖ್ನೆಮ್ ಹೊಟೆಪ್ ನಾಲ್ವರನ್ನು ಕರೆದುಕೊಂಡು ನೆಲ ತೋಡುವು ದಕ್ಕೋಸ್ಕರ ಗೋರಿಪ್ರದೇಶಕ್ಕೆ ನಡೆದ.

* * * *

ಮೆನೆಪ್‌ಟಾ, ಸ್ನೊಫ್ರು, ಸೆಬೆಕ್ಖು ಪರಸ್ಪರ ಮಾತನಾಡಿ ಖ್ನೆಮ್ ಹೊಟೆಪ್‌ಗೆ ತಿಳಿಸಿದರು. ಗೋರಿ ಪ್ರದೇಶದಿಂದ ಜನ ಚೆದುರುವುದಕ್ಕೆ ಮುನ್ನ ಆತ ಗಟ್ಟಿಯಾಗಿ ಹೇಳಿದ :

"ಇಲ್ಲಿ ಕೇಳಿ! ಎಲ್ಲರೂ ಸಾಯಂಕಾಲ ತಮ್ಮ ತಮ್ಮ ಕೆಲಸ ಆದಮೇಲೆ ತಪ್ಪದೆ ರಾಜಗೃಹಕ್ಕೆ ಬರಬೇಕು."

ತಮ್ಮ ಮಗ್ಗುಲಲ್ಲಿದ್ದವರನ್ನು "ಯಾಕೆ?" ಎಂದು ಕೇಳಿದವರಿದ್ದರು.

ದೊರೆತದ್ದು ವಿಧವಿಧದ ಉತ್ತರ :

"ಈಗ ರಾಜಗೃಹ ನಮ್ಮದೇ, ಅದಕ್ಕೆ."

—"ಪ್ರಾಂತಪಾಲನ ಆಸ್ತೀನೆಲ್ಲ ಹಂಚ್ತಾರೆ."

—"ಇವತ್ನಿಂದ ನಮ್ಮದೇ ಆಡಳಿತ! ರಾಜರೂ ನಾವೇ ಪ್ರಜೆಗಳೂ ನಾವೇ !"

....ಮೆನೆಪ್‌ಟಾನ ಮನೆಯಲ್ಲಿ ನೆಫಿಸ್ ಅನ್ನುವಿನ ಮಕ್ಕಳಿಗೆ ಉಣಬಡಿಸಿದಳು. ಆ ಕಿರಿಯರ ಜತೆ ರಾಮೆರಿಪ್‌ಟಾನೂ ಕುಳಿತ.

ಅನ್ನುವಿನ ವಿಧವೆಯನ್ನು ಅವಳ ಗುಡಿಸಲಿನಲ್ಲಿ ಬಿಟ್ಟು ಸ್ನೊಫ್ರು, ಸೆಬೆಕ್ಖು ಮತ್ತು ಮೆನೆಪ್‌ಟಾ ಮೂವರೂ ಮೆನೆಪ್‌ಟಾನ ಮನೆಗೆ ಬಂದರು.

ಸ್ನೊಫ್ರುವಿನ ಪತ್ನಿ ನೆಜಮುಟ್ ತಾನು ಅವಸರದಲ್ಲಿ ಮಾಡಿದ್ದ ಅಡುಗೆಯನ್ನು ಮೆನೆಪ್‌ಟಾನ ಮನೆಗೆ ಹೊತ್ತು ತಂದಳು.

ಅವರು ಉಂಡ ಬಳಿಕ ನೆಫಿಸ್ ಚಾಪೆ ಬಿಡಿಸಿದಳು. ಸೆಣಬಿನ ಹಚ್ಚಡವನ್ನು ಮಡಚಿ ಅದರ ಮೇಲೆ ಹಾಸಿದಳು.

"ವಿಶ್ರಾಂತಿ ತಗೊಳ್ಳಿ," ಎಂದಳು.

ಮಿತ್ರರು ತಮ್ಮ ಮನೆಗೆ ಹೊರಟರೆ ಗಂಡ ಒಂದಿಷ್ಟು ವಿರಮಿಸುವುದು ಸಾಧ್ಯವಾಗುತ್ತದೆ ಎಂಬ ಆಸೆ ಅವಳಿಗೆ.

ಆದರೆ ಸ್ನೊಫ್ರು, "ಇನ್ನೆಲ್ಲಿಯ ವಿಶ್ರಾಂತಿ ನಮಗೆ?" ಎಂದ.

ಅವರು ಹಚ್ಚಡದ ಮೇಲೆ ಕುಳಿತವರೇ ಗಹನ ಮಾತುಕತೆಯಲ್ಲಿ ಮಗ್ನರಾದರು.

ತಮ್ಮನ್ನು ತಾವು ಆಳಬೇಕು. ಹೇಗೆ? ಪ್ರಾಂತಪಾಲರ ನೇಮಕಕ್ಕೆ ಮುನ್ನ ಐಗುಪ್ತ ದೇಶದ ಪ್ರಾಂತಗಳು ಹಿರಿಯರ ಸಮಿತಿಗಳ ಮೇಲ್ವಿಚಾರಣೆಗೆ ಒಳಪಟ್ಟಿದ್ದುವು. ನೀರಾನೆ ಪ್ರಾಂತದಲ್ಲೂ ನಾಲ್ವರ ಸಮಿತಿ ಇತ್ತು. ಅವರಲ್ಲೊಬ್ಬ ತೀರಿಕೊಂಡಿದ್ದ. ಉಳಿದ ಮೂವರು—ಸೆಮು, ಥಾನಿಸ್

ಮತ್ತು ಹೆಪೊನ್—ಮುಖ್ಯ ಪಟ್ಟಣದಲ್ಲೇ ಇದ್ದರು. "ತೆರವಾಗಿರುವ ಸ್ಥಾನಕ್ಕೆ ನಿವೃತ್ತ ಸೈನಿಕ ಹೆಮ್‌ಟಿಯನ್ನು ನೇಮಿಸೋಣ." "ಒಳ್ಳೇ ವಿಚಾರ." ಸಮಿತಿಯಿಂದ ದಿನನಿತ್ಯದ ಆಡಳಿತ ಸಾಧ್ಯವಿಲ್ಲ. ಹಿರಿಯರ ಸಮಿತಿ ತಿಂಗಳಿಗೊಮ್ಮೆ ಸೇರಲಿ. ಎಲ್ಲ ವಿಷಯಗಳನ್ನು ಪರಿಶೀಲಿಸಿಸಲಿ. ಪ್ರತಿ ದಿನದ ವ್ಯವಹಾರಗಳನ್ನು ನೋಡಿಕೊಳ್ಳಲು ಒಬ್ಬ ಬೇಕು. "ಮೆನೆಪ್‌ಟಾ, ನೀನು ಪ್ರಾಂತಪಾಲನಾಗು." "ಹೊಸ ವ್ಯವಸ್ಥೆಯಲ್ಲಿ ಪ್ರಾಂತಪಾಲನ ಸ್ಥಾನವೇ ಬೇಡ, ಸ್ನೊಫ್ರು." "ಸರಿ. ನಾಯಕ ಅನ್ನೋಣ." "ನಾನು—ನಾನು—.... ಯೋಚ್ನೆ ಮಾಡಿ." "ಸಾಕು ಯೋಚ್ನೆ ಮಾಡಿದ್ದು." "ಅಷ್ಟು ಖಡಾಖಂಡಿತವಾಗಿ ನೀವು ಹೇಳೊದಾದ್ರೆ...." "ಹೌದು. ಖಡಾ ಖಂಡಿತವಾಗಿ." "ನಾವು ಮೂವರೂ ಒಟ್ಟಿಗೆ—" "ಆಗೋದಿಲ್ಲ. ಒಬ್ಬನೇ ನಾಯಕ." "ನೀವು ಸಲಹೆಗಾರರಾಗಿ." "ಆಗಲಿ ನಾವು ಸಲಹೆಗಾರರು."

ತಾವು ಅಧಿಕಾರಕ್ಕೆ ಬರುವುದಕ್ಕೋಸ್ಕರ ಅವರನ್ನು ಓಡಿಸಿದ್ದಲ್ಲ. ಜನರಿಗೆ ಹಿತವಾಗಬೇಕು. ತೆರಿಗೆ—ಕಂದಾಯ ಅರ್ಧಕ್ಕೆ ಇಳಿಯಬೇಕು. "ನೀನು ರಾಜಗೃಹದಲ್ಲಿ ವಾಸಿಸ್ಬೇಕು, ಮೆನೆಪ್‌ಟಾ." "ಅದು ಮಾತ್ರ ಸಾಧ್ಯವಿಲ್ಲ. ದಿನವೂ ಅಲ್ಲಿಗೆ ಹೋಗಿ ಬರ್ತೀನೆ. ಆದರೆ ವಾಸ ಇಲ್ಲೇ." ನದೀ ದಂಡೆಯ ಕಾವಲು ಭಟರು, ಒಳನಾಡಿನ ಕಾವಲಿನವರು—ಇವರೆಲ್ಲರಿಗೂ ಮೇಲಣ ಅಧಿಕಾರಿ ಖ್ನೆಮ್‌ಹೊಟೆಪ್ ದಳಪತಿ. "ಮಾಡಿ. ಬೇಡ ಅನ್ನೋದಿಲ್ಲ. ಆದರೆ ನನ್ನ ಅಳಿಯನಿಗೆ ಮೂಗಿನ ತುದಿಯಲ್ಲೇ ಕೋಪ. ಮರೀಬೇಡಿ!" "ಜವಾಬುದಾರಿ ಇದ್ದರೆ ಯಾರೂ ಸುಮ್ಮಸುಮ್ಮನೆ ಸಿಟ್ಟಾಗೋದಿಲ್ಲ. "ದೇವ ಮಂದಿರಕ್ಕೆ...." "ಮಂದಿರದ ವೆಚ್ಚ ನಮ್ಮದು. ಅಪೆಟ್ ಚಿಂತಿಸಬೇಕಾಗಿಲ್ಲ. ಕಂದಾಯದ ಸಂಗ್ರಹ ಮಾತ್ರ ರಾಜಗೃಹದ ಕಣಜಗಳಲ್ಲಿ." "ಭೂಮಾಲಿಕರು ನಮ್ಮ ಜೊತೆ ಇರ್ತಾರೋ ಅಥವಾ ಓಡಿ ಹೋಗ್ತಾರೊ." "ನೋಡ್ಬೇಕು." "ಇಪ್ಯುವರ್ ರಾಜಗೃಹದಲ್ಲಿ ವಾಸ ಮಾಡ್ಲಿ. ಪ್ರಾಂತದ ಹಿರಿಯ ಲಿಪಿಕಾರನಾಗ್ಲಿ. ಬೊಕ್ಕಸದ ಲೆಕ್ಕವನ್ನು ಅವನೇ ಇಡ್ಲಿ...."

ತಮ್ಮ ಊಟ ಮುಗಿಸಿದ ನೆಫಿಸ್, ನೆಜಮುಟ್ ಕುಳಿತು ಕೇಳುತ್ತಿದ್ದರು.

ಹಿರಿಯರ ಮಾತಿಗೆ ಕಿವಿಗೊಡುತ್ತ, ಅದನ್ನು ಅರ್ಥಮಾಡಿಕೊಳ್ಳಲೆತ್ನಿಸುತ್ತ ತಾಯಿಯ ಬಳಿ ರಾಮೆರಿಪ್‌ಟಾ ನಿಂತಿದ್ದ. ಅವನನ್ನು ಮೆನೆಪ್‌ಟಾ ಕರೆದ.

“ ರಾಮೆರಿ, ಹೋಗಿ ಖ್ನೆಮ್‌ಹೊಟೆಪ್ ಮಾವನನ್ನು ಕರೆದುಕೊಂಡು ಬಾ.”

ಹುಡುಗ ಬಾಣದಂತೆ ಓಡಿದ.

ರಾಜಗೃಹದ ದಾಸದಾಸಿಯರ ಪ್ರಶ್ನೆ....“ ಅವರಿಗೆಲ್ಲ ಸ್ವಾತಂತ್ರ್ಯ ಕೊಡ್ಬೇಕು. ಅವರು ಮುಕ್ತರು. ಎಲ್ಲಿಗೆ ಬೇಕಾದರೂ ಹೋಗಲಿ,” ಎಂದ ಮೆನೆಪ್‌ಟಾ. ಸೆಬೆಕ್ಖು “ಭೂಮಾಲಿಕರ ದಾಸರ ಬಿಡುಗಡೆಯೂ ಸಾಧ್ಯವಾಗ್ಬೇಕು,” ಎಂದ. “ಅದೆಷ್ಟು ಹೊತ್ತು ? ಉದಿಸಿದ ರಾ ಮೇಲೆ ಬರದೆ ಇರ್‍ತಾನಾ ?” ಎಂದು ಸ್ನೊಫ್ರು ನುಡಿದ.

ಬರಹೇಳಿದಾರೆ ಎಂದನಷ್ಟೇ ಹೊರತು, ಇನ್ನೇನನ್ನೂ ರಾಮೆರಿಪ್‌ಟಾ ಖ್ನೆಮ್‌ಹೊಟೆಪ್‌ಗೆ ತಿಳಿಸಲಿಲ್ಲ. ಖ್ನೆಮ್ ಬಿರುಸಾಗಿ ನಡೆದು ಬಂದು, ಹೊಸ್ತಿಲು ದಾಟಿದೊಡನೆಯೇ ನಿಂತು, ತುಸು ಗೋಣು ಆಡಿಸಿ “ ವಂದನೆ ” ಎಂದ. ಎಡಭುಜದಲ್ಲಿ ಬಿಲ್ಲು ಬಲಭುಜದಾಚೆ ಬೆನ್ನಲ್ಲಿ ಬತ್ತಳಿಕೆ ಇದ್ದುವು.

ಮೆನೆಪ್‌ಟಾನೆಂದ :

“ ಖ್ನೆಮು, ನೀನಿನ್ನು ಪ್ರಾಂತದ ಕಾವಲು ಭಟರ ದಳಪತಿ. ಇನ್ನು ನಿನ್ನ ಲಾಂಛನ ಕಟಿಯಲ್ಲಿ ಕಠಾರಿ; ಕೈಯಲ್ಲಿ ನೀಳ ಕೋಲು.”

ಭಾವೋದ್ವೇಗ ಖ್ನೆಮ್‌ಹೊಟೆಪ್‌ನನ್ನು ಬಾಧಿಸಿತು. ವಂದಿಸುವ ನೆಪದಲ್ಲಿ ಆತ ತಲೆಯನ್ನು ಸ್ವಲ್ಪ ಹೆಚ್ಚಾಗಿ ಬಾಗಿಸಿ, ಅಲ್ಲಿದ್ದ ಎಲ್ಲರ ನೋಟ ದಿಂದ ಮುಖವನ್ನು ಮರೆಮಾಡಿದ.

ಖ್ನೆಮ್ ಇತರ ತೀರ್ಮಾನಗಳ ವಿವರವನ್ನೂ ತಿಳಿದು ಸೆಮು, ಥಾನಿಸ್, ಹೆಮೊನ್‌ರನ್ನೂ ಹೆಮ್‌ಟೆಯನ್ನೂ ಕರೆತರಲು ಹೋದ....

ಬಂದವರಲ್ಲಿ ಹೆಮ್‌ಟೆ ಉತ್ಸುಕನಾಗಿದ್ದ. ಉಳಿದ ಮೂವರು ಯೋಚಿ ಸುತ್ತಿದ್ದಂತೆ ಕಂಡಿತು. ಸ್ನೊಫ್ರು ಬಹಳ ಒತ್ತಾಯಿಸಿದ ಮೇಲೆ ಸೆಮು ಮೆಲ್ಲನೆ ಅಂದ :

“ ಹೀಗೆಲ್ಲ ಮಾಡೋದು ಸರಿಯೊ ತಪ್ಪೊ ಗೊತ್ತಾಗ್ತಾ ಇಲ್ಲ.”

ಒಲಿಸಿಕೊಳ್ಳುವ ಧ್ವನಿಯಲ್ಲಿ ಮೆನೆಪ್‌ಟಾ ನುಡಿದ :

" ಇದು ದೈವವಿರೋಧಿ ಕೆಲಸವಂತೂ ಅಲ್ಲ. ಹಾಗೆ ನೋಡಿದರೆ ಪೆರೋಗೆ ಇದಿರಾಗಿಯೂ ನಾವೇನೂ ಮಾಡ್ತಾ ಇಲ್ಲ. ತನ್ನ ಮಕ್ಕಳು ನ್ಯಾಯನಿಷ್ಠರಾಗಿದ್ದರೆ ತಂದೆ ಪೆರೋ ಸಂತೋಷ ಪಡಲೇಬೇಕು ಅಲ್ಲವಾ ?"

ಮತ್ತೂ ಸ್ವಲ್ಪ ಹೊತ್ತು ಯೋಚಿಸಿ ಸೆನು ಉತ್ತರಿಸಿದ :

" ಈ ಪ್ರಾಂತದ ನಾವೆಲ್ಲ ಒಂದೇ ಬುಡಕಟ್ಟಿನವರು. ನಮ್ಮದು ಒಂದೇ ಪ್ರತೀಕ ನೀರಾನೆ. ಏಕರೀತಿಯ ನಡಾವಳಿ. ಈಗ, ಅಪೂರ್ವ ವಾದದ್ದನ್ನು ನಮ್ಮ ಜನ ಮಾಡಿದ್ದಾರೆ. ಆಗಲಿ ಎಲ್ಲರೂ ಒಟ್ಟಿಗೇ ಈಸೋಣ ಮುಳುಗಿದರೆ ಒಟ್ಟಿಗೇ ಮುಳುಗೋಣ."

ಇಂಥ ಮಾತು ತನಗೆ ಇಷ್ಟವಿಲ್ಲವೆಂದು ಹೇಳಲು ಹೊರಟ ಖ್ನೆಮ್ ಹೊಟೆಪ್ ಪದಗಳನ್ನು ಗಂಟಲಿನ ಆಳಕ್ಕೆ ತಳ್ಳಿದ. ಅಸಹನೆಯಿಂದ ಆವನ ಭುಜ ಚಿಮ್ಮಿತು.

ಸ್ನೊಫ್ರುವೆಂದ :

" ಹಾಗೇ ಆಗಲಿ ಸೆನು. ಹೆಜ್ಜೆ ಮುಂದಿಟ್ಟದ್ದೇನೆ. ಇನ್ನು ಹಿಂದಕ್ಕೆ ಸರಿಯೋ ಮಾತೇ ಇಲ್ಲ."

" ಸಭೆಯ ಏರ್ಪಾಟಿಗಾಗಿ ನಾನು ರಾಜಗೃಹಕ್ಕೆ ಹೋಗ್ತೇನೆ," ಎಂದು ಹೇಳಿ ಖ್ನೆಮ್ ಹೊಟೆಪ್, ಪ್ರತಿಕ್ರಿಯೆಗಾಗಿ ಕಾಯದೆ, ವಂದಿಸಿ ಹೊರಬಿದ್ದ.

....ರಾಮೆರಿಪ್‌ಟಾ ತಾಯಿಯನ್ನು ಕಾಡಿದ :

" ಅಮ್ಮ, ನಾನು ಹೋಗ್ಲೇಬೇಕು. ನೀನೂ ಬಾ."

ನೆಜಮುಟ್ ಅಂದಳು :

" ಏನಮ್ಮ ನೆಫಿಸ್—ನಾವೇ ಹೋಗ್ದೆ ಇದ್ದರೆ ಹ್ಯಾಗೆ ?"

ನೆಫಿಸ್ ಗಂಡಸರಿಗೆ ಕೇಳಿಸುವಂತೆ ಅಂದಳು :

" ರಾಜಗೃಹಕ್ಕೆ ನಾವೂ ಬರೋಣವೋ ?"

ಮೌನವಾಗಿದ್ದ ಮಿತ್ರರನ್ನು ಕಂಡು, ಮೆನೆಪ್‌ಟಾ ಅಂದ :

" ಬೇಡ ಅನ್ನೋದಕ್ಕೆ ನಾವು ಯಾರು ? ನೀರಾನೆ ಪ್ರಾಂತದಲ್ಲಿ ಎಲ್ಲರೂ ಸ್ವತಂತ್ರರು."

" ಪರಿಹಾಸ್ಯ ಸಾಕು."

" ಎಷ್ಟೋ ಜನ ಬರ್ತಾರೆ. ನೀವೂ ಬನ್ನಿ."

ನೆಜಮುಟ್ ಅಂದಳು :

" ಎಲ್ಲರ ಹಾಗೆ ? ಅಷ್ಟೇನೆ ? ನಮ್ಮ ಗಂಡಂದಿರ ಪಕ್ಕದಲ್ಲಿ ನಾವು ಕೂತ್ಕೋಬಾರ್ದೊ ?"

ನೆಫಿಸಳ ಮನಸ್ಸಿನಲ್ಲೂ ಅದೇ ಬಯಕೆ ಇತ್ತು.

ಸ್ನೊಫ್ರು ಸಿಟ್ಟಾಗಿ ಅಂದ :

" ಅದೇನು ಪೆರೋನ ಆಸ್ಥಾನ ಅಂದ್ಕೊಂಡ್ರಾ ?"

ನೆಜಮುಟ್ ಕೆಂಗಣ್ಣಿನಿಂದ ಗಂಡನನ್ನು ನೋಡಿದಳು :

" ಅದಕ್ಯಾಕೆ ಇಷ್ಟೊಂದು ಕೋಪ ? ನಿಮಗೆ ಬೇಡವಾದರೆ ನಾವು ಬೇರೇನೇ ಬರ್ತೀವೆ."

" ನಮ್ಮ ಒಟ್ಟಿಗೆ ಬರೋದು ಬೇಡ." ಎಂದ ಸ್ನೊಫ್ರು.

" ನೀವು ಮೊದಲೇ ಹೋಗಿ."

—ಮೆನೆಪ್‌ಟಾನೆಂದ.

*   *   *   *

ಗಾಯಗಳಿಗೆ ಚಿಕಿತ್ಸೆ ಪಡೆಯುತ್ತಿದ್ದವರು ಸೆಬೆಕ್ಖುವಿನ ವಸತಿಯಿಂದ ತಮ್ಮ ತಮ್ಮ ಮನೆಗಳಿಗೆ ಹೋದರು. (ಸಣ್ಣ ಪುಟ್ಟ ಗಾಯಗಳ ಇಬ್ಬರು ಸಭೆಗೆ ಹೋಗುವ ಯೋಚನೆಯನ್ನೂ ಮಾಡಿದರು.)

ನೆಫಿಸ್ ಮತ್ತು ನೆಜಮುಟ್ ತಕ್ಕಮಟ್ಟಿಗೆ ಅಲಂಕೃತರಾಗಿ ರಾಮೆರಿಪ್‌ಟಾನನ್ನು ಕರೆದುಕೊಂಡು ಸೆಬೆಕ್ಖುವಿನ ಮನೆಗೆ ಬಂದಾಗ, ಸೆಬೆಕ್ಖುವಿನ ಪತ್ನಿ ತಬಬುವಾ ನಡುಮನೆಯನ್ನು ತೊಳೆಯುವ ಬಳಿಯುವ ಕೆಲಸದಲ್ಲಿ ನಿರತಳಾಗಿದ್ದಳು.

" ನೀವು ಹೋಗಿ. ನಾನು ಬರೋದಿಲ್ಲ." ಎಂದಳು.

ನೆಫಿಸ್ ನೆಜಮುಟ್‌ರ ಅಲಂಕೃತ ಹೆರಳು ಕೊರಳುಗಳತ್ತ ನೋಡಿ, ತಬಬುವಾ ಮಾತು ಸೇರಿಸಿದಳು :

" ಗಂಡಸರಿಗೆ ತಿಳಿಸ್ಬಿಡಿ. ನಮಗೆ ಮುಖ್ಯವಾಗಿ ಬೇಕಾದ್ದು ನೀರು. ನದೀ ನೀರು ಕಾಲುವೆಗಳಲ್ಲಿ ಸದಾ ಹರಿದು ಬರಬೇಕು. ಹರಿಯೋ ನೀರು ಇದ್ದರೇನೇ ಮನೆ ಹಿತ್ತಿಲು ಚೊಕ್ಕಟವಾಗಿಡೋದು ಸಾಧ್ಯ."

" ನಿಜ, ನಿಜ. ಖಂಡಿತ ಹೇಳೋಣ, ತಬು," ಎಂದಳು ನೆಜಮುಟ್.

ತಬಬುವಾ ನಿಧಾನವಾಗಿ ನುಡಿದಳು :

" ಆ ಖ್ನೆಮುಗೆ ಮನೆಯ ಯೋಚನೆಯೇ ಇಲ್ಲ. ಹುಡುಗಿ ಒಬ್ಬಳೇ ಇದ್ದಾಳೆ. ಸಾರಿಸಿ ಆದ್ಮೇಲೆ ಅಲ್ಲಿಗೆ ಹೋಗ್ತೇನೆ. ಅವಳನ್ನೂ ಕರೆದುಕೊಂಡು ರಾಜಗೃಹಕ್ಕೆ ಬಂದರೂ ಬಂದೆ."

ರಾಜಗೃಹದತ್ತ ಹೊರಟ ನೆಫಿಸ್, ನೆಜಮುಟರಿಗೆ ಅಚ್ಚರಿ ಕಾದಿತ್ತು. ಬೀದಿಯನ್ನು ಗುಡಿಸಿದ್ದರು. ನೀರು ಚಿಮುಕಿಸಿದ್ದರು. ರಾಜಗೃಹದ ಹೊರಗಿನ ಬಯಲು ಸ್ವಚ್ಛವಾಗಿತ್ತು. ನೀರು ಹನಿಸಿ ಚಾಪೆಗಳನ್ನು ಹಾಸಿದ್ದರು. (" ನಮ್ಮ ಮನೆಗಳನ್ನು ಬಿಟ್ಟು ಬೇರೆ ಎಲ್ಲಾ ಕಡೆಗಳಿಂದ ಚಾಪೆ ತಂದಿದಾರೇಂತ ತೋರ್ತದೆ.") ರಾಜಗೃಹದ ಸಭಾಂಗಣದ ವೇದಿಕೆಯೂ ಪೀಠಗಳೂ ಹೊರಗೆ ಬಂದಿದ್ದುವು. ನಗೆಯಲೆಗಳಿದ್ದುವೇ ಹೊರತು ಗದ್ದಲವಿರಲಿಲ್ಲ. ವೇದಿಕೆಯ ವರೆಗೂ ದಾರಿಬಿಟ್ಟಿದ್ದರು. ವೇದಿಕೆಯ ಎಡಬಲಗಳಲ್ಲಿ ಶಿಸ್ತಿನಿಂದ ಕುಳಿತಿದ್ದ ಜನರ ಬಲಮಗ್ಗುಲಲ್ಲಿ ಒಂದಷ್ಟು ಜಾಗ ಸ್ತ್ರೀಯರಿಗೆ ಮೀಸಲಾಗಿತ್ತು.

ಮಹಾದ್ವಾರದ ಸ್ಥಳದಲ್ಲಿದ್ದುದು ಬರಿಯ ಚೌಕಟ್ಟು ಮಾತ್ರ. ಬಾಗಿಲ ಹಲಗೆಗಳನ್ನು ಕುಟ್ಟಿ ಮುರಿದಿದ್ದ ತಾಳೆಮರದ ದಿಮ್ಮಿಯನ್ನು ವೇದಿಕೆಯ ಹಿಂದೆ ನೆಟ್ಟು, ಅದನ್ನು ಮೆಖ್‌ಮೆಖ್, ಸೀಮು, ಜೇಯಿಟ್ ಹೂಗಳಿಂದ ಅಲಂಕರಿಸಿದ್ದರು.

ನೆಫಿಸ್ ನೆಜಮುಟ್‌ರನ್ನು ಇದಿರ್ಗೊಂಡವನು ಇಪ್ಯುವರ್. ಅರಳಿ ಸ್ಥಿರ ಆಕಾರ ಪಡೆದಿದ್ದ ಒಂದು ನಗೆ, ಆತನ ಮುಖದ ಮೇಲೆ ಇತ್ತು.

ಆತ ನೆಫಿಸಳ ಬಳಿ ಸಾರಿ ಹೇಳಿದ :

" ಪೀಠಗಳಿವೆ. ಬನ್ನಿ, ಕೂತ್ಕೊಳ್ಳಿ."

ನೆಜಮುಟ್ ಪೀಠಗಳ ಕಡೆಗೊಮ್ಮೆ ನೋಡಿ ಅಂದಳು :

" ನಮಗ್ಯಾಕಪ್ಪ ಪೀಠಗೀಠ ? ಅವೆಲ್ಲ ಪೆರೋನ ರಾಣೀವಾಸದವರಿಗೆ. ಚಾಪೆ ಸಾಕು. ಬೇರೆ ಹೆಂಗಸರ ಹಾಗೆ ನಾವೂನೂ."

ಅಲ್ಲಿ ನೆರೆದಿದ್ದ ಎಲ್ಲರ ದೃಷ್ಟಿಗಳೂ ನೆಫಿಸಳತ್ತ ನೆಜಮುಟಳತ್ತ ಹರಿದುವು. ಸ್ತ್ರೀಯರು ಅತ್ತಿತ್ತ ಒತ್ತಿಕೊಂಡು ಎದುರು ಸಾಲಿನಲ್ಲೇ ಅವರಿಗೆ ಸ್ಥಳ ಮಾಡಿಕೊಟ್ಟರು.

"ರಾಮೆರಿ" "ರಾಮೆರಿ" ಎಂದು ಹಲವು ಹುಡುಗರ ಕಂಠಗಳಿಂದ ಕರೆ ಬಂತು. ರಾಮೆರಿಪ್‌ಟಾ ಅತ್ತ ಓಡಿದ.

ಸೂರ್ಯ ಇಳಿಮುಖನಾಗುತ್ತಲೇ ಕಿರಣಗಳ ಪ್ರಖರತೆ ಕಡಿಮೆಯಾಯಿತು. ಜನರಿಂದ ಬಯಲು ತುಂಬಿತು. ಆ ಮುದುಕರ ಜೊತೆ ಇನ್ನೂ ಮಾತನಾಡುತ್ತ ಕುಳಿತಿರುವರೇನೋ ಎಂದು ಖ್ನೆಮ್‌ಹೊಟೆಪ್ ತನ್ನೊಳಗೇ ರೇಗಿದ. ಬೇಟೆಯ ಯುವಕ ಮಿತ್ರರು ಕೆಲವರು ಅವನ ಸುತ್ತಮುತ್ತ ಸುಳಿದರು. ಜನ ಕಾಯುತ್ತಿದ್ದಾರೆ ಎಂದು ಸುದ್ದಿ ಮುಟ್ಟಿಸಲು ಇವರಲ್ಲಿ ಒಬ್ಬನನ್ನು ಕಳುಹಲೇ—ಎಂದುಕೊಂಡ. ಕರೆಯಲು ಕೈ ಎತ್ತುವಷ್ಟರಲ್ಲಿ, ಮೆನೆಪ್‌ಟಾ ಬಳಗ ದೂರದಲ್ಲಿ ಕಾಣಿಸಿತು.

" ಬರ್ತಿದ್ದಾರೆ !" ಎಂದು ಖ್ನೆಮ್ ಹೊಟೆಪ್ ಉದ್ಗರಿಸಿದ.

ಉದ್ಗಾರ ಕೇಳಿಸದಿದ್ದರೂ, ಖ್ನೆಮ್ ಹೊಟೆಪ್‌ನ ನೋಟ ನೆಟ್ಟ ಕಡೆಗೆ ನೂರಾರು ಜನ ದೃಷ್ಟಿ ಹರಿಸಿದರು. ನೋಡಿದವರು ಎದ್ದರು; ನೋಡದೆ ಇದ್ದವರೂ ಎದ್ದರು.

" ನಾವೂ ಏಳೋಣ, ನೆಜಮುಟ್," ಎಂದಳು ನೆಫಿಸ್.

" ಸರಿಯಮ್ಮ," ಎಂದಳಾಕೆ.

ತಾವು ಕಂಡ ಪವಾಡಕ್ಕೆ ಕಾರಣರಾದವರನ್ನು ಸರಿಯಾಗಿ ನೋಡಲು ಇಡಿಯ ಜನಸ್ತೋಮ ಎದ್ದು, ತುದಿಗಾಲ ಮೇಲೆ ನಿಂತು, ಕತ್ತನ್ನು ನೀಳಗೊಳಿಸಿತು.

ಮೆನೆಪ್‌ಟಾ ತಲೆಗೂದಲನ್ನು ಎಡಬಲ ಬದಿಗಳಿಗೆ ಇಳಿಬಿಟ್ಟಿದ್ದ. ನಡುಬಟ್ಟೆ ಶುಭ್ರವಾಗಿತ್ತು. ಪಾದರಕ್ಷೆ ತೊಟ್ಟಿರಲಿಲ್ಲ. ಮೈ ಮೇಲಿನ ಗಾಯ ಗೆರೆಗಳು ಎದ್ದುಕಾಣಿಸುತ್ತಿದ್ದುವು. ಆತ್ಮ ವಿಶ್ವಾಸ ಸೂಸುತ್ತ, ಮುಗುಳು

ನಗುತ್ತ ಆತ ಬಂದ. ಅವನ ಹಿಂದಿದ್ದರು ಸೆನು, ಥಾನಿಸ್, ಹೆಪೊನ್ ಮತ್ತು ಹೆಪ್ಟ್ ಟಿ. "ಹಿರಿಯರು," ಎಂದರು ಯಾರೋ. ಅವರೆಲ್ಲರ ಮಟ್ಟಿಗೆ ಹೆಪ್ಟ್ ಟಿಯೊಬ್ಬ ಪ್ರಶ್ನೆಯಾದ. ಹಿರಿಯರ ಹಿಂದೆ ಸ್ನೊಫ್ರು ಮತ್ತು ಸೆಬೆಕ್ಬು. "ವಯಸ್ಸಾಗದಿದ್ದರೇನಾಯ್ತು ? ಇವರಿಗೂ ಹಿರಿಯರದೇ ಸ್ಥಾನ," ಎಂದರು ಬೇರೆ ಯಾರೋ.

ಬಯಲಿನ ಸುವ್ಯವಸ್ಥೆ ಕಂಡು ಮೆನೆಪ್ಟಾ ಬೆರಗಾದ. ಸೆಬೆಕ್ಖು ಹೆಮ್ಮೆಯಿಂದ ಬೀಗಿದ.

ವೇದಿಕೆಯ ಕಡೆಗೆ ಸೀಳುದಾರಿ ಆರಂಭವಾಗುವಲ್ಲಿ ಖ್ನೆಮ್‌ಹೊಟೆಪ್ ನಿಂತಿದ್ದ. ಆತ ಬಾಗಿ ವಂದನೆ ಸಲ್ಲಿಸಿ ಪಕ್ಕಕ್ಕೆ ಸರಿದ. ಅದೇ ಸೂಚನೆ ಎಂಬಂತೆ, ಎಲ್ಲರೂ ಚಪ್ಪಾಳೆ ತಟ್ಟಿ ನಾಮೋಚ್ಚಾರ ಮಾಡಿದರು :

"ಓ ಮೆನೆಪ್ಟಾ ! ಓ ಮೆನೆಪ್ಟಾ !"

ನಾಯಕ ವೇದಿಕೆ ತಲುಪುವ ವರೆಗೂ ಕರತಾಡನ.

ವೇದಿಕೆಯ ಮೇಲೆ ಖ್ನೆಮ್‌ಹೊಟೆಪ್ ಮೂರೇ ಪೀಠಗಳನ್ನು ಇರಿಸಿದ್ದ. ಅದನ್ನು ನೋಡಿಯೂ ನೋಡದವನಂತೆ ಮೆನೆಪ್ಟಾ, "ನೀವು ಮೇಲೆ ಹೋಗಿ" ಎಂದ, ಹಿರಿಯರನ್ನು ಕುರಿತು. ಅವರು ಒಪ್ಪಲಿಲ್ಲ. ಆ ಕಡೆಯ ಈ ಕಡೆಯ ಎರಡೆರಡು ಕೆಳಗಿನ ಪೀಠಗಳತ್ತ ಸರಿದರು. ಖ್ನೆಮ್‌ಹೊಟೆಪ್ ಮೆನೆಪ್ಟಾನನ್ನು ವೇದಿಕೆಯ ಮೇಲಿನ ನಡುವಣ ಪೀಠಕ್ಕೆ ಕರೆದೊಯ್ದ. ಸ್ನೊಫ್ರು, ಸೆಬೆಕ್ಖುರನ್ನು "ಬನ್ನಿ, ಬನ್ನಿ" ಎಂದು ಮೆನೆಪ್ಟಾ ಕರೆದ.

ಅವರೆಲ್ಲ ಆಸೀನರಾದ ಮೇಲೆ ಮತ್ತೆ ಚಪ್ಪಾಳೆಯ ಹರ್ಷಧ್ವನಿ ಕೇಳಿಸಿತು.

ಖ್ನೆಮ್ ಹೊಟೆಪ್‌ನ ಸಂಜ್ಞೆಯಂತೆ ಕರತಾಡನ ನಿಂತು, ಜನರೆಲ್ಲ ಕುಳಿತರು. ಈಗ ಎಲ್ಲರದೂ ನಿರೀಕ್ಷಣೆಯ ನೋಟ. ಎಲ್ಲರ ಕಣ್ಣುಗಳೂ ಪ್ರಮುಖರ ಮೇಲೆ.

ವೇದಿಕೆಯ ಬಳಿ ಕೆಳಗೆ ನಿಂತಿದ್ದ ಇಪ್ಯುವರ್‌ನನ್ನು ಹತ್ತಿರಕ್ಕೆ ಕರೆದು, "ಶಸ್ತ್ರಾಗಾರದಿಂದಲೋ ಲಾಂಛನಗಳ ಕೊಠಡಿಯಿಂದಲೋ ಕೋಲು ತರಬೇಕಲ್ಲಾ," ಎಂದ ಮೆನೆಪ್ಟಾ.

" ಪ್ರಾಂತಪಾಲರ ದಂಡವೇ ?"

" ಛೆ! ಛೆ! ಪೆಪೈರಸ್ ಕೋಲು."

" ಕಾಪೀರು ಹಿಡಿಯುವಂಥಾದ್ದು ?"

" ಹ್ಞ....ಕಾಪೀರು ದಳಪತಿ ಅಂಥವರ ಕೈಯಲ್ಲಿ ಇರುತ್ತಲ್ಲ ?"

" ತಿಳೀತು."

" ಹಾಗೇ ಒಂದು ಕಠಾರಿ."

" ತರ್ತೀನೆ."

ಇದನ್ನು ಮೆನೆಪ್‌ಟಾ ಧರಿಸುವುದು ಹೇಗೆ ಸರಿ—ಎಂದುಕೊಳ್ಳುತ್ತ ಇಪ್ಪುವರ್ ಮಹಾದ್ವಾರವನ್ನು ದಾಟಿ ಒಳಹೋದ. ಅಲ್ಲಿದ್ದ ಸೇವಕರಿಗೆ ತನ್ನ ಹಿಂದೆ ಬರುವಂತೆ ಸನ್ನೆ ಮಾಡಿದ.

ಮೆನೆಪ್‌ಟಾ ಹೆಂಗಸರ ಗುಂಪಿನತ್ತ ನೋಡಿದ. ಮೊದಲ ಸಾಲಿನಲ್ಲಿದ್ದ ನೆಫಿಸ್ ಕಣ್ಣಿಗೆ ಬಿದ್ದಳು. ಆ ಜನಸಮುದಾಯದ ಎದುರಲ್ಲಿ ಗಂಡ ತನ್ನನ್ನು ಕಂಡನೆಂದು (ಮುಗುಳುನಕ್ಕನೆಂದು) ನೆಫಿಸ್ ನಾಚಿದಳು

ಸೆಬೆಕ್ಖುವಿನ ಪತ್ನಿ ತಬಬುವಾ ಮತ್ತು ಅವರ ಮಗಳು ಸಭಾಪ್ರದೇಶಕ್ಕೆ ಬರುತ್ತಿದ್ದುದು ಮೆನೆಪ್‌ಟಾಗೆ ಕಾಣಿಸಿತು. ಆತ ಖ್ನೆಮ್‌ಹೊಟೆಪ್‌ನ ಕಡೆ ತಿರುಗಿ " ನಿನ್ನ ಹೆಂಡತಿ, ಅತ್ತೆ ಬರ್‍ತಿದ್ದಾರೆ. ಕರಕೊಂಡು ಬಾ," ಎಂದ. ಖ್ನೆಮ್ ಮಾತ್ರ, ಆ ಮಾತು ತನಗೆ ಕೇಳಿಸಲೇ ಇಲ್ಲ ಎನ್ನುವಂತೆ ಸುಮ್ಮನೆ ನಿಂತ. ತಬಬುವಾ ತನ್ನ ಮಗಳೊಡನೆ ದೂರದಲ್ಲೇ ಜಾಗ ಮಾಡಿಕೊಂಡಳು. ನೆಜಮುಟಳ ದೃಷ್ಟಿಗೆ ಅವರು ಬೀಳದಿರಲಿಲ್ಲ. ನೀರಿನ ವಿಷಯ ತಬಬುವಾ ಹೇಳಿದ್ದುದು ನೆನಪಾಗಿ, ನೆಜಮುಟ್ ಎದ್ದು ವೇದಿಕೆಯನ್ನು ಸಮೀಪಿಸಿದಳು. ಮೆನೆಪ್‌ಟಾನ ಬಲ ಮಗ್ಗುಲಲ್ಲಿ ಕುಳಿತಿದ್ದ ಸ್ನೊಫ್ರು, " ಏನದು ?" ಎಂದು ಗದರಿದ. ಗುಟ್ಟಾಗಿ ಕಿವಿಯಲ್ಲಿ ಹೇಳಿದರಾಯಿತು ಎಂದುಕೊಂಡಿದ್ದಳು ನೆಜಮುಟ್. ಆದರೆ ಗಂಡನ ಸಿಡುಕು, ಕಂಡು ಕೆರಳಿ ಗಟ್ಟಿಯಾಗಿ ಅಂದಳು:

" ತಬಬುವಾ ಹೇಳಿದ್ದಾಳೆ. ನಮಗೆ ಮುಖ್ಯವಾಗಿ ಬೇಕಾದ್ದು ನೀರು. ನದೀ ನೀರು ಕಾಲುವೆಗಳಲ್ಲಿ ಸದಾ ಹರಿದು ಬರಬೇಕು. ಹರಿಯೋ ನೀರು ಇದ್ದರೇನೇ ಮನೆ–ಹಿತ್ತಿಲು ಚೊಕ್ಕಟವಾಗಿಡೋದು ಸಾಧ್ಯ. ಹಾಂ. ನಿಮಗೆ ತಿಳಿಸಿದ್ದೇನೆ."

ಅಷ್ಟು ಹೇಳಿ ನೆಜಮುಟ್, ಕತ್ತು ಕೊಂಕಿಸಿ ಸ್ವಸ್ಥಾನಕ್ಕೆ ಹೋದಳು.

ಮೆನೆಪ್‌ಟಾ ನಸುನಕ್ಕ. ಆಕೆಯ ಮಾತು ಕೇಳಿಸಿದ್ದು ಕೆಲವರಿಗೆ ಮಾತ್ರ. ಆದರೂ ಕೆಲವೇ ಕ್ಷಣಗಳಲ್ಲಿ, ಇಲ್ಲದ ನೀರು ಸಭಾಂಗಣವನ್ನೆಲ್ಲ ಆವರಿಸಿತು. ಗುಸು ಗುಸು ಸದ್ದು ತನ್ನ ಪ್ರಾಬಲ್ಯವನ್ನು ಮೆರೆಯಿತು.

ಒಮ್ಮೆಲೆ ಮೆನೆಪ್ ಟಾ ಗಟ್ಟಿಯಾಗಿ, "ಮಹಾಜನರೇ !" ಎಂದ.

"ನಮಗೆ ಕೇಳಿಸೋದಿಲ್ಲ" — ಎಂದರು, ಸಭೆಯ ಅಂಚಿನಲ್ಲಿದ್ದ ಕೆಲವರು.

ಧ್ವನಿಯನ್ನು ಇನ್ನೂ ಎತ್ತರಿಸಿ ಮೆನೆಪ್‌ಟಾ ಅಂದ ಕುಳಿತಲ್ಲಿಂದಲೇ :

"ನೀರಾನೆ ಪ್ರಾಂತದ ಮುಖ್ಯ ಪಟ್ಟಣದ ಮಹಾಜನರೇ! ನಿಮಗೆ ನಮ್ಮ ಪ್ರಣಾಮ. ನಮ್ಮ ಅಂದರೆ ಸ್ನೊಫ್ರು, ಸೆಬೆಕ್ಖು ಮತ್ತು ನನ್ನ ಪ್ರಣಾಮ ಅಂತ (ಸಭೆಯಲ್ಲಿ ನಗೆ). ಸಭೆಯಲ್ಲಿ ಮಾತಾಡೋದಕ್ಕೆ ನನಗೆ ಒಂದು ಥರಾ. ನಿನ್ನೆ ಮನವಿ ಸಲ್ಲಿಸೋದಕ್ಕೆ ನಿಂತೆ. ನೀವೇ ನೋಡಿದಿರಲ್ಲ ಏನಾಯ್ತು ಅಂತ. ಅದಕ್ಕೋಸ್ಕರ ಕೂತ್ಕೊಂಡೇ ಮಾತಾಡ್ತಿದ್ದೇನೆ. (ಮತ್ತಷ್ಟು ನಗೆ) ಅಗೋ ಅರ್ಚಕರು ಬರ್‍ತಿದ್ದಾರೆ. (ಜನರ ದೃಷ್ಟಿ ಬಯಲನ್ನು ಸೇರುವ ದಾರಿಯತ್ತ) ಈಗ ಆಗಿರೋ ಪವಾಡಕ್ಕೆಜನರ ತ್ಯಾಗ ಕಾರಣ. ನಮ್ಮ ಅನ್ಪುವೀರ ಪ್ರಾಣವನ್ನೇ ತೆತ್ತ. ಅರ್ಚಕರ ಪ್ರಕಾರ, ನಾವು ಅನ್ಪುವಿಗೆ ಕೊಟ್ಟದ್ದು ರಾಜಯೋಗ್ಯವಾದ ವಿದಾಯ. ಅರ್ಚಕರು 'ಬೆಳಕಿಗೆ ಆಗಮನ' ಓದಿದ್ರು. ಅಸ್ಥಿ ವಹಿಸಿ ಗಾಯಗೊಂಡವರ ಚಿಕಿತ್ಸೆ ಮಾಡಿದ್ರು. ಎದ್ದುನಿಂತು ಅವರಿಗೆ ಗೌರವ ಸಲ್ಲಿಸೋಣ."

ಇಡೀ ಸಭೆ ಎದ್ದು ನಿಂತಿತು. ಅಪೆಟ್ ಹಸನ್ಮುಖಿಯಾಗಿ, ಗೋಣು ಆಡಿಸುತ್ತ ವೇದಿಕೆಯತ್ತ ಸಾಗಿ, ಥಾನಿಸ್‌ನ ಮಗ್ಗುಲಲ್ಲಿದ್ದ ಪೀಠದ ಮೇಲೆ ಆಸೀನನಾದ. ಜನರೂ ಕುಳಿತರು.

(ಬಯಲಿನ ಸಭೆಯನ್ನು ದೂರದಿಂದಲೇ ಕಂಡು ಅಪೆಟ್‌ಗೆ ವಿಸ್ಮಯವಾಗಿತ್ತು. ಈ ಜನ ತನಗೆ ಗೌರವ ತೋರುವರೋ ಇಲ್ಲವೋ ಎಂಬ ಶಂಕೆ ಮೂಡಿತ್ತು. ದೇವಸೇವಕನಾದ ತನ್ನನ್ನು ಅಗೌರವದಿಂದ ಕಾಣಲಾರರು ಎಂದುಕೊಳ್ಳುತ್ತ ಬಂದ. ಹಾಗೇನಾದರೂ ಆದರೆ ಇದ್ದೇಇದೆ : ಸಭೆಯನ್ನು

ತಲಪಿದೊಡನೆ ಆಶೀರ್ವಾದದ ಭಂಗಿಯಲ್ಲಿ ಕೈ ಎತ್ತುವುದು. ಆಗ ಬಾಗಿ ನಮಿಸದೆ ಇರುತ್ತಾರೆಯೆ ? ಆಪೆಟ್ ಬಹಳ ಯೋಚಿಸಿದ್ದ. ಇನ್ನೂರು ವರ್ಷಗಳ ಹಿಂದೆ ಪೆರೋ ಖೂಫು ಪಿರಮಿಡ್ಡುಗಳನ್ನು ಕಟ್ಟಿಸಲು ಹಣಸಾಲದೆ ಬಂತೆಂದು. ದೇಶದ ಎಲ್ಲ ದೇವಮಂದಿರಗಳ ಸಂಪತ್ತನ್ನೂ ಸ್ವಾಧೀನಪಡಿಸಿಕೊಂಡು ಮಂದಿರಗಳಿಗೆ ಬೀಗಮುದ್ರೆ ಒತ್ತಿದ. ಏನಾಯಿತು ? ದೇವರು ಬದುಕಲಿಲ್ಲವೆ ? ದೇವಸೇವಕರು ಉಳಿಯಲಿಲ್ಲವೆ ? ಸತ್ತಮೇಲೆ ಖೂಫು ಮೊಸಳೆಗೆ ಆಹಾರವಾಗಿರ್ಬೇಕು. ಅವನ ಅಂತ್ಯಕ್ರಿಯೆಗೆ ಅರ್ಚಕರು ಸಿಕ್ಕಿದರೊ ಇಲ್ಲವೊ ? ಅವನ ಆಳ್ವಿಕೆ ಮುಗಿದ ಮೇಲೆ ದೇವರು ಮತ್ತೆ ವೈಭವದಿಂದ ರಾರಾಜಿಸಿದ.

ಜನ ಎದ್ದು ನಿಲ್ಲುತ್ತಿದ್ದಾರೆ. ಅವಮಾನದ ಮಾತೇ ಇಲ್ಲ. ಈ ಬಯಲು ನಾಟಕ ಇನ್ನೆಷ್ಟು ದಿನವೋ ನೋಡೋಣ.)

ಮೆನೆಪ್‌ಟಾ ಮುಂದುವರಿದ :

"ಅರ್ಚಕರು ಬಂದ್ರು, ಸಂತೋಷದ ಸಂಗತಿ. ಆದರೆ, ಇನ್ನೂ ಕೆಲವು ಪೀಠಗಳು ಖಾಲಿಯೇ ಇವೆ........ ಸೆತೆಕ್‌ನಖ್ತ್, ಸೆನ್‌ಉಸರ್ಟ್, ಹೆಜಿರೆ, ಸಿನ್ಯುಹೆ ಮೊದಲಾದವರು ನಿನ್ನೆ ಸಭೇಲಿದ್ರು........ (ಸಭೆಯಲ್ಲಿ ಧ್ವನಿಗಳು: "ಅವರು ಇವತ್ತು ಬರೋದಿಲ್ಲ," "ಹೆದರ್ಕೊಂಡಿದ್ದಾರೆ"....) ಯಾಕೆ ಹೆದರಿಕೆ? ನಾವೇನು ಕಾಡು ಹಂದಿಗಳೆ? ಮೊಸಳೆಗಳೆ ? ನಾವೂ ಅಷ್ಟೇ. ಹೆದರಿದರೆ ಹೇಡಿಗಳಾಗ್ತೇವೆ. ನಮ್ಮ ಮಕ್ಕಳು ಚಿಕ್ಕಂದಿನಿಂದಲೇ ಧೀರರಾಗುವಂತೆ ಮಾಡ್ಬೇಕು. ("ರಾಮೆರಿ ಎಲ್ಲಿ ಆ ಹುಡುಗರ ಗುಂಪಿನಲ್ಲಿದ್ದಾನೇಂತ ತೋರ್‍ತದೆ. ಎಲ್ಲ ಪಿಳಿ ಪಿಳಿ ಕಣ್ಣುಗಳು. ಓ ಅಲ್ಲಿದ್ದಾನೆ ! ಇನ್ನೇನು ಹೇಳಲಿ ಜನರಿಗೆ ? ಇಪ್ಯುವರ್ ಬಂದ." ವೇದಿಕೆಯ ಬಳಿಗೆ ಕಠಾರಿ ಮತ್ತು ಕೋಲು ತಂದುದಾಯಿತು.) ಇವತ್ತಿನಿಂದ ಪ್ರಾಂತದಲ್ಲಿ ಆಡಳಿತ ಹ್ಯಾಗಿರಬೇಕೂಂತ ಮುಖ್ಯಸ್ಥರು ಚರ್ಚಿಸಿ ತೀರ್ಮಾನ ಕೈಗೊಂಡಿದ್ದೇವೆ. ಇನ್ನು ಪ್ರಾಂತಪಾಲರಿಲ್ಲ. ("ನೀವೇ ಆಗಿ" "ನೀವೇ ಪ್ರಾಂತಪಾಲ") ಊಹೂಂ, ಇದು ಬೇರೆ ವ್ಯವಸ್ಥೆ. (ಖ್ನೆಮ್‌ಹೊಟೆಪ್ ಕೂಗಿ ಹೇಳಿದ : "ಮೆನೆಪ್‌ಟಾ ನಮ್ಮ ನಾಯಕರು—ನಾಯಕರು!" ಜನ "ಆಗಬಹುದು. ಆಗಬಹುದು.") ಸ್ನೊಫ್ರು

ಸೆಬೆಕ್ಸು ಸಲಹೆಗಾರರು. ("ಒಪ್ಪಿಗೆ") ಇದು ತೀರಾ ಹೊಸ ವ್ಯವಸ್ಥೆ. ಇದರ ಜತೆ ಬಹಳ ಹಳೆಯ ವ್ಯವಸ್ಥೆಯೂ ಇದೆ. ಅದು ಹಿರಿಯರ ಸಮಿತಿ—ಇಲ್ಲಿ, ಮುಖ್ಯ ಪಟ್ಟಣದಲ್ಲಿ. ಗ್ರಾಮಗಳಲ್ಲಿ ಅಲ್ಲಲ್ಲಿನ ಸಮಸ್ಯೆಗಳನ್ನು ಅಲ್ಲಲ್ಲೇ ಬಗೆಹರಿಸೋದಕ್ಕೆ ಗ್ರಾಮ ಸಮಿತಿಗಳಿರ್‍ತವೆ. ಹಿರಿಯರ ಸಮಿತಿಯ ತೆರವಾದ ಒಂದು ಸ್ಥಾನಕ್ಕೆ ಹೆಮ್‌ಟಿಯವರನ್ನು ನೇಮಿಸಿದ್ದೇವೆ. ಇನ್ನು ಇಪ್ಯುವರ್ ರಾಜಗೃಹದಲ್ಲಿರ್‍ತಾರೆ. (ಇಪ್ಯುವರ್‌ಗೆ ದಿಗ್ಭ್ರಮೆ. ಸಭೆಯಿಂದ : "ನೀವು ?" "ನೀವು ?") ನಾನು ಮನೆಯಲ್ಲಿದ್ದುಕೊಂಡೇ ಆಡಳಿತದ ಕೆಲಸ ನೋಡ್ತೇನೆ. ಇಪ್ಯುವರ್ ಇವತ್ತಿನಿಂದ ಕಣಜಗಳು ಬೊಕ್ಕಸದ ಲೆಕ್ಕಿಗ, ಅಧಿಕಾರಿ. ಪ್ರಾಂತ್ಯದ ಮುಖ್ಯ ಲಿಪಿಕಾರನೂ ಅವರೇ. (ಇಪ್ಯುವರ್ ಕಣ್ಣುಗಳನ್ನು ಉಜ್ಜಿಕೊಂಡ. ಸಂಜೆ ಹೊತ್ತು. ಬೆಳಕಿತ್ತು. ಕನಸಲ್ಲ, ಕನಸಲ್ಲ.... ಸರಿ ? ಖಿವವದಂತೆ ಸರಿ ?) ನದೀದಂಡೆಗಳಿಗೆ, ದೋಣಿ ಕಟ್ಟೆಗೆ, ರಾಜಗೃಹಕ್ಕೆ ನಿಶ್ಶಸ್ತ್ರ ಜನರಿಗೆ ರಕ್ಷಣೆ ಬೇಕು. ಸುಭದ್ರ ಕಾವಲು ಪಡೆ ಅಗತ್ಯ ಅನ್ತಾರೆ ಹಿರಿಯ ಯೋಧ ಹೆಮ್‌ಟ. ಇನ್ನು ಮುಂದೆ ಖ್ನೆಮ್‌ಹೊಟೆಪ್ ನಮ್ಮ ದಳಪತಿ (ಸಭೆಯಲ್ಲಿ ಹಲವರಿಂದ : "ಓ ಖ್ನೆಮ್! ಓ ಖ್ನೆಮ್ !") ಖ್ನೆಮ್, ಹೀಗೆ ಬರಬೇಕು. (ಮೆನೆಪ್‌ಟಾ ಬಾಗಿ ಕಠಾರಿಯನ್ನೆತ್ತಿ, ಹತ್ತಿರ ಬಂದ ಖ್ನೆಮ್‌ಹೊಟೆಪ್ ಟೊಂಕದ ಪಟ್ಟಿಗೆ ಅದನ್ನು ಸಿಕ್ಕಿಸಿದ. "ಇದು ಸರಿ" ಎನಿಸಿತು ಇಪ್ಯುವರ್‌ಗೆ. ಆ ಎತ್ತಿಕೊಟ್ಟ ಕೋಲನ್ನು ಮೆನೆಪ್‌ಟಾ ನಿಯೋಜಿತ ದಳಪತಿಯ ಕೈಗಿತ್ತ.) ಕಳ್ಳಕಾಕರು ಹುಷಾರಾಗಿರೋದು ವಾಸಿ ! (ಸಭೆಯಲ್ಲಿ ನಗೆ) ನೀಲನದಿ ನಮ್ಮ ಜೀವನಾಡಿ, ಸಾರಿಗೆಯೇ ಉಸಿರು, ನುರಿತ ಅಂಬಿಗ ಬಟಾರನ್ನು ನಮ್ಮ ಸಾರಿಗೆ ಅಧಿಕಾರಿಯಾಗಿ ನೇಮಿಸಿದ್ದೇವೆ. (ಹರ್ಷೋದ್ಗಾರ. ಪ್ರಾಕಾರಕ್ಕೆ ಒರಗಿ ನಿಂತಿದ್ದ ಬಟಾನಿಗೆ ಆಶ್ಚರ‍್ಯ, ಆನಂದ.) ಇನ್ನು ಕಂದಾಯದ ವಿಷಯ. (ಜನ, "ಅದನ್ನು ಹೇಳಿ".... "ಅದನ್ನು ಹೇಳಿ.") ಅರ್ಧಕ್ಕೆ ಇಳಿಸಬೇಕೂಂತ ತೀರ್ಮಾನಿಸಿದ್ದೇವೆ. ಎಲ್ಲ ಸಂದಾಯವೂ ರಾಜಗೃಹದ ಕಣಜಕ್ಕೆ. ದೇವಮಂದಿರದ ಖರ್ಚಿಗೆ ಇಲ್ಲಿಂದಲೇ ಕೊಡ್ತೇವೆ. ಮುಖ ಕಪ್ಪಿಟ್ಟರೂ ಗಂಭೀರವಾಗಿ ಕುಳಿತ ಅಪೆಟ್. "ಪ್ರವಾಹ ಕಮ್ಮಿ ಬಂದಾಗ ಕಂದಾಯ ವಸೂಲಿ ಮಾಡಬಾರ್ದು"—ಒಂದು ಧ್ವನಿ.

ಮಾಡೋದಿಲ್ಲ. ಪ್ರತಿವರ್ಷ ಪ್ರವಾಹ ಬಂದ್ಮೇಲೆ ಹಿರಿಯರು ಪ್ರಾಂತದಲ್ಲಿ ಸಂಚರಿಸಿ, ಫಸಲು ಅಂದಾಜು ಮಾಡಿ ಕಂದಾಯ ನಿರ್ಧರಿಸ್ತಾರೆ. ಕುಯಿಲು ಆದಾಗ ನಿರೀಕ್ಷೆಗಿಂತ ಕಮ್ಮಿ ಫಸಲು ಬಂದರೆ, ಕಂದಾಯವನ್ನೂ ಕಮ್ಮಿ ಮಾಡ್ತಾರೆ. (ಜಯಕಾರ : "ಓ ಮೆನೆಪ್‌ಟಾ ! ಓ ನಾಯಕ ಮೆನೆಪ್‌ಟಾ!" ಕಲರವ ನಿಂತಾಗ ಒಂದು ಗಂಡಸು ಸ್ವರ : "ಮನೆಗೆ—ಹಿತ್ತಿಲಿಗೆ ನೀರು....") ಖಂಡಿತ ! ಹೂಳು ತೆಗೆದು ಕಾಲುವೆ ಆಳ ಮಾಡ್ತೇವೆ. ಷಾಡೂಫ್‌ಗಳನ್ನು ದುರಸ್ತಿ ಮಾಡ್ತೇವೆ. ನಾಳೆಯಿಂದಲೇ ಕೆಲಸ ಆರಂಭ. (ತಬಬುವಾ ಚಪ್ಪಾಳೆ ತಟ್ಟಿದಳು. ಸಭೆ ಓಗೊಟ್ಟಿತು.) ಇನ್ನೂ ಏನಾದರೂ ಉಂಟೆ ? (ಇಪ್ಯುವರ್ ಮೆಲ್ಲನೆ: "ರಾಜಗೃಹದ ಸೇವಕರು ಒಂದು ಮನವಿ ಸಲ್ಲಿಸ್ತಾರಂತೆ.") ಮನವಿ ! ಓ ! ಆಗಲಿ. ಕರೀರಿ "

ಹದಿನೆಂಟು ಇಪ್ಪತ್ತರಷ್ಟು ಸೇವಕರೂ ಸೇವಿಕೆಯರೂ ಬಂದು ವೇದಿಕೆಯ ಎದುರು ಬಾಗಿ ನಮಿಸಿದರು. ಸ್ನೊಫ್ರು—ಸೆಬೆಕ್ಕುರೊಡನೆ ಮೆನೆಪ್‌ಟಾ ಪಿಸು ಮಾತನಾಡಿದ.

ಮೌನವಾಗಿ ನಿಂತ ಆ ಜನರನ್ನು ಉದ್ದೇಶಿಸಿ ಮೆನೆಪ್‌ಟಾ ನುಡಿದ: "ಮಾತನಾಡಿ."

ಅವರು ಮತ್ತೂ ಸುಮ್ಮನಿದ್ದರು. ಇಪ್ಯುವರ್‌ನೆಂದ :

"ಪ್ರಾಂತಪಾಲರ ಸೇವೆ ಮಾಡಿದ ಹಾಗೆ ಇವರು ನಿಮ್ಮ ಸೇವೆಯೂ ಮಾಡ್ತಾರಂತೆ."

ಗಂಭೀರವಾಗಿ ಮೆನೆಪ್‌ಟಾ ಅಂದ :

"ಹೊಸ ವ್ಯವಸ್ಥೆಯಲ್ಲಿ ದಾಸರಿಲ್ಲ, ದಾಸಿಯರಿಲ್ಲ. ಎಲ್ಲರೂ ಮುಕ್ತರು ವಿಮುಕ್ತ ದುಡಿಮೆಗಾರರು. ರಾಜಗೃಹದ ಉದ್ಯೋಗಿಗಳಿಗೆ ಮುಂದೆಯೂ ಕೆಲಸವಿದೆ. ಆದರೆ ಭೋಜನ ಮಂದಿರದ ದಾಸಿಯರ ಅಗತ್ಯವಿಲ್ಲ. ಅವರು ಸ್ವತಂತ್ರರು. ಹೋಗಬಹುದು."

ದಾಸಿಯರು ಆರು ಜನ—ಬಿಕ್ಕಿ ಬಿಕ್ಕಿ ಅಳತೊಡಗಿದರು.

ಖ್ನೆಮ್ ಹೊಟೆಪ್, "ಸುಮ್ನಿರಿ !" ಎಂದು ಗದರಿದ.

"ಇಪ್ಯುವರ್, ಅಳಬೇಡಿ. ನೆಪೆರುರಾ ನೀನು ಮಾತನಾಡು," ಎಂದ.

ಮುಕ್ತ್ಯಂಜಲಿಯಾಗುತ್ತ ಬಂತು. ಸ್ತಬ್ಧತೆಯಲ್ಲಿ ದಾಸಿಯರ ಅಳು ಮಾತ್ರ ಕೇಳಿಸುತ್ತಿತ್ತು. ಅವರು ಕೈ ಬೆರಳುಗಳಲ್ಲಿ ಕಣ್ಣೀರೊರೆಸಿಕೊಂಡರು. ನೆಫರುರಾ ಅವರಲ್ಲಿ ಅತ್ಯಂತ ಸುಂದರಿ. ಆಕೆ ಅಂದಳು :

"ಅಣ್ಣ, ಈ ದಾಸಿಯರಿಗೆ ನಾನು ಮುಖ್ಯಸ್ಥೆ. ವಿಷಯ ಇಷ್ಟೆ ಅಣ್ಣ. ಹಿರಿಯರಿಗೆಲ್ಲ ಗೊತ್ತಿರೋ ಹಾಗೆ ಐಗುಪ್ತದ ಸ್ತ್ರೀಯರಿಗೆ ಇರೋ ಉದ್ಯೋಗ ಗಳು ನಾಲ್ಕು, ದೇವಸೇವಿಕೆಯಾಗೋದು, ಸೂಲಗಿತ್ತಿಯಾಗೋದು, ಶೋಕ ಸ್ತ್ರೀಯಾಗೋದು, ನರ್ತಕಿಯಾಗೋದು. ಹಂದಿಯ ಮುಸುಡಿಗೆ ಬಂಗಾರದ ಉಂಗುರ ಹಾಕಿ ಏನು ಫಲ ? ವಿವೇಚನೆ ಇಲ್ಲದ ಸ್ಫುರದ್ರೂಪಿಣಿಯ ಅವಸ್ಥೆಯೂ ಅಷ್ಟೆ. ನೀವೇ ಹೇಳಿ. ನಮಗೆ ಯಾರು ಕೆಲಸ ಕೊಡ್ತಾರೆ ? ರಾಜಗೃಹದಲ್ಲೇ ಇರೋದಕ್ಕೆ ಅಣ್ಣನವರು ಅವಕಾಶ ಕೊಟ್ಟರೆ........"

ಮಾತು ಸುಸಂಬದ್ಧವಾಗಿರಲಿಲ್ಲ. ಆದರೆ ಕಂಠ ಇಂಪಾಗಿತ್ತು. ಪದ ಗಳು ಮೋಹಕವಾಗಿ ಕುಣಿದುವು. ನೀರವತೆಯನ್ನು ಮುರಿದು ಮೆಚ್ಚುಗೆಯ ಉದ್ಗಾರಗಳು ಕೇಳಿಸಿದುವು. ನೆಫರುರಾ ಒಳ್ಳೆಯ ಹೆಸರು ಎಂದುಕೊಂಡ ಮೆನೆಪ್‌ಟಾ.

ಆತನೆಂದ :

"ನೆಫರುರಾ. ಇನ್ನು ರಾಜಗೃಹದಲ್ಲಿ ಔತಣ—ನರ್ತನ—ಹಾಡು ಗಾರಿಕೆ ಇಲ್ಲ. ದಾಸಿಯರಿಗೆ ಇಲ್ಲಿ ಕೆಲಸವಿಲ್ಲ. ನೀವೀಗ ಯಾರ ಸೊತ್ತೂ ಅಲ್ಲ. ಸ್ವತಂತ್ರರು. ಮದುವೆಯಾಗಬಹುದು. ದುಡಿದು ಸಂಪಾದಿಸ ಬಹುದು. ಇಲ್ಲಿರುವ ಸ್ತ್ರೀಯರ ಹಾಗೆ ತಲೆಯೆತ್ತಿ ನಡೆಯಬಹುದು. ಏನಾ ದರೂ ಏರ್ಪಾಟು ಆಗೋವರೆಗೆ ನಿಮಗೆ ರಾಜಗೃಹದ ಕಣಜದಿಂದ ಧಾನ್ಯ ಮತ್ತಿತರ ಸಾಮಗ್ರಿ ಸಿಗ್ತವೆ.... ಅಳೋದರ ಬದಲು, ನೀವು ಸಂತೋಷ ಪಡಬೇಕು........"

"ಹೌದು, ಹೌದು," ಎಂದಿತು ಸಭೆ.

ಕವಡೆಯ ಕಂಠಾಭರಣಗಳಿಂದ ಆವೃತ್ತವಾಗಿದ್ದ ನೆಫರುರಾಳ ವಕ್ಷಸ್ಥಲ ಉದ್ವೇಗದಿಂದ ಮೇಲಕ್ಕೂ ಕೆಳಕ್ಕೂ ಚಲಿಸಿತು. ಅವಳು ವೇದಿಕೆಗೂ ಸಭೆಗೂ ತಲೆಬಾಗಿ ವಂದಿಸಿದಳು. ಇತರ ವಿಮುಕ್ತ ದಾಸಿಯರೂ ಹಾಗೆಯೇ

ಮಾಡಿದರು.

ಸಭೆಯನ್ನು ಉದ್ದೇಶಿಸಿ ಮೆನೆಪ್‌ಟಾ ಅಂದ :

“ಸದ್ಯಕ್ಕೆ ಇಷ್ಟೇ. ನೀವೆಲ್ಲಾ ಮನೆಗೆ ಇನ್ನು ಹೋಗಬಹುದು.”

ವೇದಿಕೆ ಬರಿದಾಯಿತು. ಜನ ಕದಲಲಿಲ್ಲ. ಸ್ನೊಫ್ರು ಸೆಪೆಕ್ಸು ಮತ್ತು ಹಿರಿಯರನ್ನು ಕರೆದುಕೊಂಡು ಮೆನೆಪ್‌ಟಾ ರಾಜಗೃಹದೊಳಕ್ಕೆ ನಡೆದ. ಬಯಲಿನಲ್ಲಿದ್ದ ಜನರೂ ನುಗ್ಗಲೆತ್ನಿಸಿದರು. “ಶಿಸ್ತು! ಶಿಸ್ತು!” ಎಂದು ಖ್ನೆಮ್‌ಹೊಟೆಪ್ ಕೂಗಾಡಿದ. ಮೆನೆಪ್‌ಟಾನೆಂದ : “ಇದು ಅವರದೇ ಭವನ ಸಣ್ಣ ಸಣ್ಣ ತಂಡಗಳಾಗಿ ಒಳಗೆ ಬಂದು ನೋಡಿ ಹೋಗಲಿ.” ಖ್ನೆಮ್ ದ್ವಾರದಲ್ಲಿ ನಿಂತು. “ಐವತ್ತು ಐವತ್ತರ ಹಾಗೆ ಜನ ಒಳಗೆ ಬನ್ನಿ,” ಎಂದ.

ರಾಜಗೃಹದ ದೀಪಗಳನ್ನು ಹಚ್ಚಿದರು. ಒಂದನ್ನು ಮಹಾದ್ವಾರದ ಹೊರಗೂ ಇನ್ನೊಂದನ್ನು ಅಲಂಕೃತ ನೆಡುಗಂಬದ ಬಳಿಯಲ್ಲೂ ಇಟ್ಟರು. ಜನರ ಜತೆ ನೆಫಿಸ್ ನೆಜಮುಟರೂ ತನ್ನ ಮಗಳೊಡನೆ ತಬಬುಸಾನೂ ಒಳ ಬಂದರು. ಮೆನೆಪ್‌ಟಾ ತನ್ನನ್ನು ಬಿಗಿದಿದ್ದ ಕಂಬವನ್ನೊಮ್ಮೆ ನೋಡಿ, ನಸುನಕ್ಕು, ತನಗೆ ಅಪರಿಚಿತವಾಗಿದ್ದ ಮಹಡಿಯನ್ನು ನೋಡಲು ಹೋದ. ಅಲ್ಲಿ ಪ್ರಾಂತಪಾಲ ಗೇಬುವಿನ ಪತ್ನಿಯೂ ಪುತ್ರಿಯರೂ ವಾಸಿಸುತ್ತಿದ್ದ ಕೊಠಡಿಗಳಿದ್ದುವು. ಒಂದರಲ್ಲಿ ಆಲಂಕರಣದ ಮತ್ತಿತರ ಸಾಮಗ್ರಿಗಳಿದ್ದ ಪೆಟ್ಟಿಗೆಗಳಿದ್ದುವು.

“ಪೆಟಾರಿಗಳಲ್ಲಿ ಆಭರಣಗಳೂ ಇರಬಹುದು,” ಎಂದ ಇಪ್ಯುವರ್.

ಮೆನೆಪ್‌ಟಾ ನಿರ್ದೇಶವಿತ್ತ :

“ಈಗಲೇ ಅವರವರ ಸಾಮಾನುಗಳನ್ನೆಲ್ಲ ಒಂದೆರಡು ಪೆಟಾರಿಗಳಲ್ಲಿಟ್ಟು ಭದ್ರಪಡಿಸಿ ; ಈ ಕೊಠಡಿಯ ಬಾಗಿಲೆಳೆದುಕೊಂಡು ಮುದ್ರೆ ಒತ್ತಿ. ಒಂದು ಸಾಮಾನೂ ಅತ್ತಿತ್ತ ಸರಿಯಬಾರದು.”

“ಆಗಲಿ,” ಎಂದು ಇಪ್ಯುವರ್ ಆ ಕೊಠಡಿಯ ಬಾಗಿಲೆಳೆದುಕೊಂಡು, ಬೀಗಮುದ್ರೆಗಾಗಿ ಆವೆಮಣ್ಣು ತರಲು ಹೋದ.

ರಾಮೆರಿಸ್‌ಟಾ ತನ್ನ ತಂದೆ ಕಂದಾಯದ ಅಧಿಕಾರಿಯನ್ನು ಉದ್ದೇಶಿಸಿ ಮಾತನಾಡಿದ ಸ್ಥಳವನ್ನೂ ತನ್ನ ತಂದೆಯನ್ನು ಬಿಗಿದು ಕಟ್ಟಿದ್ದ ಕಂಬವನ್ನೂ

ತಾಯಿಗೂ ಆಕೆಯ ಜತೆ ಇದ್ದವರಿಗೂ ತೋರಿಸಿದ.

ಮಹಡಿಯ ಮುಖಮಂಟಪದ ಚಾಪೆ ಪರದೆಗಳನ್ನು ಸುರುಳಿ ಸುತ್ತಿ ಮೇಲಕ್ಕೆ ಕಟ್ಟಿದ್ದರು.

ಮೆನೆಪ್‌ಟಾನ ಹಿಂದೆಯೇ ಇದ್ದ ಜನರ ತಂಡದ ಒಬ್ಬನೆಂದ :

"ನಾವು ಅಲ್ಲಿ ಹೋರಾಡ್ತಾ ಇದ್ದಾಗ, ಟಿಸುಟಿ ಮತ್ತು ಗೇಬು ಇಲ್ಲಿ ಬಚ್ಚಿಟ್ಕೊಂಡು ನೋಡ್ತಾ ಇದ್ರು."

ಈಗ ಬಯಲಲ್ಲಿದ್ದುದು ಹಬ್ಬದ ವಾತಾವರಣ. ಜನ ಗುಂಪು ಗುಂಪಾಗಿ ನಿಂತು, ತಮ್ಮ ತಮ್ಮೊಳಗೆ ನಗುತ್ತ ಮಾತನಾಡುತ್ತ, ತಾವು ವಶಪಡಿಸಿ ಕೊಂಡಿದ್ದ ರಾಜಗೃಹವನ್ನು ಹೊಕ್ಕು ನೋಡಲು ತಮ್ಮ ಸರದಿಗಾಗಿ ಕಾಯು ತ್ತಿದ್ದರು ಕೆಳಗೆ ಊರಿನ ಹಲವು ಮನೆಗಳಲ್ಲಿ ದೀಪಗಳು ಒಂದೊಂದಾಗಿ ಮೂಡುತ್ತಿದ್ದುವು.

ಪ್ರಜೆಗಳ ವಿಹಾರಕ್ಕೆಂದು ರಾಜಧಾನಿಯಲ್ಲಿ ಒಂದು ಉದ್ಯಾನ ನಿರ್ಮಿ ಸಿರುವರೆಂದು ಬಟಾ ಹೇಳಿದ್ದನ್ನು ಮೆನೆಪ್‌ಟಾ ಕೇಳಿದ್ದ. ಇಲ್ಲಿಯೂ ಅಂಥ ದೊಂದು ? ರಾಜಗೃಹಕ್ಕೆ ಬರುವ ಬೀದಿಯ ಇಕ್ಕೆಲಗಳಲ್ಲಿ ಸಾಲು ಮರಗಳು. ಎದುರುಗಡೆ ಜನ ನೆರೆಯುವಲ್ಲಿ, ಹೂಗಿಡಗಳು ಸುತ್ತುವರಿದ ಹಸುರು ನೆಲ. ರಾಜಗೃಹದ ಎಡಬಲಗಳಲ್ಲೂ ಹಿಂದೆಯೂ ಉದ್ಯಾನ........

ಮಹಡಿಯ ಮೆಟ್ಟಲುಗಳನ್ನೇರುತ್ತ ನೆಜಮುಟ್ ಮೆಲ್ಲನೆ ಗೊಣಗಿದಳು:

"ಇಪ್ಯುವರ್ ರಾಜಗೃಹದಲ್ಲಿ ಇರ್ತಾನಂತೆ. ಬೇರೆ ಯಾರೂ ಇಲ್ವೇನೊ ? ನೀವೇ ಯಾಕೆ ವಾಸ ಮಾಡಬಾರ್ದು ? ಅಥವಾ ನಾವು ? ನೀನು ಇಷ್ಟು ಮೆತ್ತಗಿರೋದು ಸರಿಯಲ್ಲ ನೆಫಿಸ್."

ಈ ಮಾತು ಯಾರಿಗಾದರೂ ಕೇಳಿಸಿತೇನೋ ಎಂದು ನೆಫಿಸ್ ಗಾಬರಿ ಯಿಂದ ಅತ್ತಿತ್ತ ನೋಡಿದಳು. "ಸುಮ್ನಿರು ನೆಜಮುಟ್," ಎಂದಳು.

ನೆಜಮುಟ್‌ಗೆ ಪ್ರಾಂತಪಾಲನ ಮಡದಿಯ ಕೊಠಡಿ ನೋಡುವ ತವಕ. ಆದರೆ ಇಪ್ಯುವರ್ ಆಗಲೆ ಮುದ್ರೆಯೊತ್ತಿದ್ದ.

"ಇದ್ಯಾಕೆ ಹೀಗೆ ಮಾಡಿದಿರಿ ?" ಎಂದಳು ಆಕೆ.

"ನಾಯಕರ ಆಜ್ಞೆ," ಎಂದ ಲಿಪಿಕಾರ.

ನೆಜಮುಟ್ ಮೂತಿ ತಿರುವಿ ಮೌನ ತಳೆದಳು.

ಮೆನೆಪ್‌ಟಾ ಮತ್ತಿತರರು ಹೊರಬರುವುದನ್ನೇ ಕಾಯುತ್ತ ಅಪೆಟ್ ನಿಂತಿದ್ದ ; ಒಬ್ಬನೇ. ಮಂದಿರ ಬಿಡುವುದಕ್ಕೆ ಮುನ್ನ ಸಿನ್ಯುಹೆಯ ಆಳು ಬಂದಿದ್ದ, ತನ್ನನ್ನು ಕರೆಯಲು. "ಸ್ವಲ್ಪ ವಾಸಿ ಅಂತೆ ; ಆದರೂ ಬರಬೇಕಂತೆ," ಎಂದು ತಿಳಿಸಿದ್ದ. ಅಲ್ಲಿಗೆ ಹೋಗಬೇಕು. ರಾತ್ರಿಯ ಊಟ ಅಲ್ಲಿಯೇ ಮುಗಿಸಬಹುದು. ಇಲ್ಲಿ ಸಭೆಯಲ್ಲಿ ಮಾತನಾಡುವಂತೆ ತನ್ನನ್ನು ಕೇಳುವ ರೇನೋ ಎಂದಿದ್ದ. ಆದಕ್ಕೆ ಆಸ್ಪದವೇ ಇಲ್ಲದ ಹಾಗೆ ಸಭೆ ಮುಗಿದಿತ್ತು.

ಮೆನೆಪ್‌ಟಾ ಮತ್ತಿತರರು ಹೊರಬರುತ್ತಿದ್ದಂತೆ, ಒಳಹೋಗಲು ಇನ್ನೊಂದು ತಂಡ ಸಿದ್ಧವಾಯಿತು.

"ಅರ್ಚಕರು ಇನ್ನೂ ಇಲ್ಲೇ ಇದೀರಾ ?" ಎಂದು ಮೆನೆಪ್‌ಟಾನೇ ಕೇಳಿದ.

"ಹೇಳಿ ಹೋಗೋಣ ಅಂತ ನಿಂತೆ." ಎಂದ ಅಪೆಟ್.

"ಏನು ತೊಂದರೆ ಇದ್ದರೂ ರಾಜಗೃಹಕ್ಕೆ ತಿಳಿಸಿದರಾಯ್ತು. ಯಾವ ಸಂಕೋಚವೂ ಬೇಡ."

"ಹಿಂದೆ ಯಾವತ್ತೂ ಇದ್ದಿರದ ಪರಿಸ್ಥಿತಿ. ಕಾಲಕ್ರಮದಲ್ಲಿ ಎಲ್ಲ ಸರಿ ಹೋದೀತು."

"ಸಂಶಯವಿಲ್ಲ."

"ಮಂದಿರಕ್ಕೆ ಯಾವಾಗ ಬರ್ತೀರಿ ?"

"ನಾಳೆ ಆದೀತೇ ?"

"ಬನ್ನಿ, ನಾಯಕನಿಗೆ ಯಶಕೋರಿ ವಿಶೇಷ ಪೂಜೆ ಸಲ್ಲಿಸ್ತೇನೆ. ಸಕುಟುಂಬವಾಗಿ ಬನ್ನಿ."

"ಹಾಗೇ ಆಗಲಿ, ಸ್ನೊಫ್ರು, ಸೆಬೆಕ್ಖು, ಹಿರಿಯರು—ನಾವೆಲ್ಲ ಬರ್ತೇವೆ."

ನಿನ್ನೆ ತನಕ 'ಹೋಗು' 'ಬಾ' ಇಂದಿನಿಂದ ಗೌರವದ ಸಂಬೋಧನೆ; ಸದ್ಯಃ ತನ್ನನ್ನು ಏಕವಚನದಿಂದ ಆವನು ಕರೆಯುತ್ತಿಲ್ಲವಲ್ಲ ; ಅಷ್ಟಕ್ಕಾದರೂ ಸಮಾಧಾನಪಟ್ಟುಕೊಳ್ಳಬೇಕು—ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ ಅಪೆಟ್ ಸಿನ್ಯುಹೆಯ ಮನೆಯತ್ತ ಹೊರಟ.

ಇಪ್ಪುವರ್ ಬಂದು, "ಇವತ್ತು ಮಾತಾಡಿದ್ದನ್ನು ಬರಕೊಂಡಿಲ್ಲ." ಎಂದ.

"ತೀರ್ಮಾನಗಳೆಲ್ಲ ದಾಖಲೆಯಾಗ್ಬೇಕು. ಬರೆದು ನಾಳೆ ನನಗೆ ಓದಿ ಹೇಳಿ," ಎಂದ ಮೆನೆಪ್ ಟಾ.

"ರಾತ್ರಿಯೇ ಬರೆದಿಡ್ತೇನೆ...."

ರಾಜಗೃಹದಲ್ಲಿ ವಾಸಿಸುವುದು ಇಪ್ಪುವರ್‌ಗೆ ಅಪ್ರಿಯವೇನೂ ಆಗಿರಲಿಲ್ಲ. ಆದರೆ ಅವನ ಪಾಲಿಗೆ ಆ ಮಾತು ಹಠಾತ್ತನೆ ಬಂದಿತ್ತು. ಕೆಲವು ದಿನಗಳಲ್ಲಿ ಈ ಕನಸು ಒಡೆದರೆ ? ಆತ ಕೇಳಿದ :

"ನಾನು.... ನನ್ನ ಮನೆಯಲ್ಲೇ ಇದ್ದರಾಗದೆ ?"

"ರಾಜಗೃಹ ಅನಾಥವಾಗ್ಬಾರ್ದು, ಇಪ್ಪುವರ್. ನಾಳೆ ದೇವಮಂದಿರಕ್ಕೆ ಬನ್ನಿ. ಪೂಜೆ ಆದ್ಮೇಲೆ ಇಲ್ಲಿಗೆ ಸಾಮಾನು ಸಾಗಿಸಿ."

"ರಾಮೆರಿಪ್‌ಟಾಗೆ ಓದು ಬರಹ...."

"ಎರಡು ದಿನ ಹೋಗಲಿ. ಹೇಳ್ತೇನೆ."

ಮೆನೆಪ್‌ಟಾ, ಇತರ ಪ್ರಮುಖರು ಮತ್ತು ಹಿಂಬಾಲಿಸಿದ ಹಲವರು ತಮ್ಮ ತಮ್ಮ ಮನೆಗಳಿಗೆ ಹೊರಟರು.

ನೆಜಮುಟ್ ತಗ್ಗಿದ ಧ್ವನಿಯಲ್ಲಿ ನೆಫಿಸಳೊಡನೆ ಅಂದಳು :

"ನಾಯಕರು ! ಛೆ ! ಒಂದು ಪೀಠ ಪಲ್ಲಕಿಯಾದರೂ ಬೇಡವೆ ? ನೋಡು, ನಡೀತಿರೋದು—ಪಾದರಕ್ಷೆನೂ ಇಲ್ದೆ !"

ಸ್ನೊಫ್ರುಗೆ ಪತ್ನಿಯ ಸ್ವರ ಕೇಳಿಸಿತು. ಹೊರಳಿ ನೋಡಿ, "ಏನದು ?" ಎಂದು ಕೇಳಿದ.

ನೆಜಮುಟ್ ಉತ್ತರವೀಯಲಿಲ್ಲ.

* * * *

ವಿಶೇಷ ಪೂಜೆಯ ಸುದ್ದಿ ಹಬ್ಬಿತ್ತು. ಬೆಳಗ್ಗೆ ಬಿಡುವಾಗಿದ್ದ ನೂರಾರು ಜನ ಮೆನೆಪ್‌ಟಾನ ತಂಡವನ್ನು ಹಿಂಬಾಲಿಸಿ ದೇವಮಂದಿರಕ್ಕೆ ಬಂದರು.

ಅರ್ಚಕನ ಮಂತ್ರೋಚ್ಚಾರ ; ಉಳಿದವರ ಮೌನ ಪ್ರಾರ್ಥನೆ.

ಕೊನೆಯಲ್ಲಿ, ಎಲ್ಲರಿಗೂ ಕೇಳಿಸುವಂತೆ ಉಚ್ಚ ಕಂಠದಲ್ಲಿ ದೇವರನ್ನು

ಅಪೆಟ್ ಕೇಳಿಕೊಂಡ :

" ನೀರಾನೆ ಪ್ರಾಂತಕ್ಕೆ ಶುಭವನ್ನು ಕರುಣಿಸು. ಎಲ್ಲ ಪೀಡೆಗಳಿಂದಲೂ ಅದನ್ನು ಪಾರು ಮಾಡು. ನೀಲನದಿಯಲ್ಲಿ ಮಹಾಪೂರ ಎಂದಿನಂತೆ ಬರಲಿ ಕೆರೆ ಬಾವಿಗಳಲ್ಲಿ ನೀರು ನಿಲ್ಲಲಿ. ಗೋಧಿ, ಯವೆ, ಸಾವೆ ಹೇರಳವಾಗಿ ಬೆಳೆಯಲಿ. ನಾಡಿನ ಈ ಮುಖಂಡರು ವಿನಮ್ರ ಭಕ್ತರು. ಪರಂಪರಾಗತ ರೀತಿ ರಿವಾಜುಗಳು ಕಟ್ಟುಕಟ್ಟಳೆಗಳು ಒಂದಿಷ್ಟೂ ತಪ್ಪದೆ ಮುಂದು ವರೀತವೆ."

ಇಷ್ಟು ನುಡಿದು ಮೆನೆಪ್‌ಟಾನತ್ತ ಹೊರಳಿ ಅಪೆಟ್‌ನೆಂದ :

" ದೇವರಿಗೆ ಇಷ್ಟವಾಗುವಂಥದು ಏನಾದರೂ ಹೇಳಿ."

" ಏನು ಹೇಳಲಿ ?"

" ಮಂದಿರದ ಶಾಲೆ, ಉಗ್ರಾಣ, ಅರ್ಚಕನ ವಸತಿ ಕಟ್ಟಿಸಿಕೊಡ್ತೇವೆ— ಅನ್ನಬಹುದು."

ಮೆನೆಪ್‌ಟಾ ಹತ್ತಿರದಲ್ಲೇ ಇದ್ದ ಸ್ನೊಫ್ರು—ಸೆಬೆಕ್ಖುರತ್ತ. ಹಿರಿಯರತ್ತ ದೃಷ್ಟಿ ಹಾಯಿಸಿದ. ಅವರೆಲ್ಲ ಭಕ್ತಿಯಿಂದ ತಲೆಬಗ್ಗಿಸಿ ನಿಂತಿದ್ದರು.

" ಆಗಲಿ, ಕಟ್ಟಿಸಿಕೊಡ್ತೇವೆ," ಎಂದ ಮೆನೆಪ್‌ಟಾ.

ನಾಯಕನ ತಂಡದ ಸ್ತ್ರೀ ಪುರುಷರಿಗೆಲ್ಲ ಅಪೆಟ್ ಒಂದೊಂದು ಹಿಡಿ ಹೂ ನೀಡಿದ; ಕಟಾಂಜನದ ಆಚೆಗೆ ನಿಂತಿದ್ದ ಜನರಿಗೂ ಹಂಚಲು ಹೂ ಕಳುಹಿದ.

ಬಂದವರ ಜತೆ ಅರ್ಚಕ ನೂರು ಮಾರು ನಡೆದು, ಅವರನ್ನು ಗೌರವ ದಿಂದ ಬೀಳ್ಕೊಟ್ಟ.

ನೆಫೆರುರಾ ಕನ್ಯೆಯಾಗಿದ್ದಾಗಲೇ ಅವಳನ್ನು ಪಡೆಯಲು ಅಪೆಟ್ ಯತ್ನಿಸಿದ್ದ.

" ಸ್ತ್ರೀಗೆ ದೇವಸೇವೆಯೇ ಭೂಷಣ," ಎಂದು ನೆಫೆರುರಾಳ ತಾಯಿ ಯೊಡನೆ ವಾದಿಸಿದ್ದ.

ಆದರೆ ಆ ತಾಯಿಗೆ ನೆಫೆರುರಾ ಫೆರೋನ ರಾಣೀವಾಸ ಸೇರಬೇಕೆಂಬ ಆಸೆ. ತಾನೇ ರಾಜಧಾನಿಗೆ ಮಗಳನ್ನು ಕರೆದೊಯ್ಯಬೇಕು ಎನ್ನುವ ಯೋಚನೆಯೂ

ಅವಳಿಗಿತ್ತು. ಆದರೆ ಪ್ರಾಂತಪಾಲ ಗೇಬು ಒಪ್ಪಲಿಲ್ಲ. "ಒಂದೇ ಸಲ ನಕ್ಷತ್ರ ಪುಂಜಕ್ಕೆ ಕೈ ಚಾಚಬೇಡ. ಐವತ್ತು ದೆಬೆನ್ ಬಂಗಾರ ಕೊಡ್ತೇವೆ. ಹುಡುಗೀನ ನಮಗೆ ಒಪ್ಪಿಸಿ ಹೋಗು," ಎಂದ.

ನೆಫೆರುರಾ ರಾಜಗೃಹದ ದಾಸಿಯಾದದ್ದು ಹಾಗೆ.

ಅಪೆಟ್‌ಗೆ ಸಿಟ್ಟು. ಹಿಂದಿನ ದಿನ ಮೆನೆಪ್‌ಟಾ ದಾಸಿಯರನ್ನೆಲ್ಲ ವಿಮುಕ್ತಗೊಳಿಸಿದನಲ್ಲ. ಅದರ ಅಗತ್ಯವೇನಿತ್ತು ? ಅವರನ್ನು ಮಂದಿರಕ್ಕೆ ಕೊಡಬಹುದಾಗಿತ್ತು. ಈ ಹೊಸ ವಾತಾವರಣದಲ್ಲಿ ಬಿಟ್ಟಿ ದುಡಿಮೆಗೆ ಜನ ಸಿಗುವುದುಂಟೆ ಇನ್ನು ? ವಸತಿಗಾಗಿ ಶಾಲೆಗಾಗಿ ಕಟ್ಟಡಗಳಾದರೂ ಆಗುತ್ತ ವಲ್ಲ ಸಧ್ಯಃ. ಈ ಸಲದ ಕಂದಾಯ ವಸೂಲಿಯಲ್ಲಿ ಮಂದಿರದ ಕಣಜಕ್ಕೆ ಎಷ್ಟು ಒಪ್ಪಿಸುತ್ತಾರೋ ನೋಡಬೇಕು. ಇಪ್ಯುವರ್ ಸುರೆ ಕುಡಿದ ಕಪಿಯ ಹಾಗೆ ಕುಣೀತಿದ್ದಾನೆ....

ತಾನು ಮದುವೆಯಾಗದೇ ಇದ್ದಿದ್ದರೆ ಹಿರಿಯ ಅರ್ಚಕನಾಗಬಹುದಿತ್ತು. ಲೌಕಿಕದ ಉರುಳಿಗೆ ತಲೆಯೊಡ್ಡಿ ಬರಿಯ ದೇವಸೇವಕನೇ ಆದೆ. ಮಗ ನಾದರೂ ಮೇಲಣ ಶ್ರೇಣಿಗೆ ಏರುವಂತೆ ಮಾಡಬೇಕು. ಅವನ ತಾಯಿ ಅದೆಷ್ಟು ಬೇಗ ಮುದುಕಿಯಾಗಿದ್ದಾಳೆ ! ಅವಳು ಮುದ್ದು ಮಾಡಿ ಮಗನನ್ನು ಕೆಡಿಸದಂತೆ ನೋಡಿಕೊಳ್ಳಬೇಕು. ಇವನ ಶಿಕ್ಷಣದತ್ತ ತಾನು ಗಮನಹರಿಸ ಬೇಕು. ಶಾಲಾ ಕಟ್ಟಡದಲ್ಲಿ ಇವನಿಂದಲೇ ಅಧ್ಯಾಪನ.

—ಯೋಚಿಸುತ್ತ ಮಂದಿರದತ್ತ ಹೊರಟಿದ್ದ ತಂದೆಯ ಹಿಂದೆಯೇ ಇದ್ದ ಹುಡುಗ.

ಅಪೆಟ್ ಕೇಳಿದ :

" ಬರ್‍ತಿದ್ದೀಯೇನೊ ?"

" ಹೂಂ."

" ಕೀಳು ಹುಡುಗರ ಜೊತೆ ಗೋಲಿ ಆಡ್ತಾ ಕಾಲ ಕಳೀಬೇಡ." ಲಿಪಿ ಸುರುಳಿ ಹಿಡಕೊಂಡು ಪಾಠಕ್ಕೆ ಕೂತ್ಕೊ."

" ಹೂಂ."

" ಪೆರೋ ಮೆರಿಕರಾ ತನ್ನ ಮಗನಿಗೆ ಮಾಡಿದ ಹಿತೋಪದೇಶ ಯಾವುದು ?"

ಹುಡುಗ ಪೇಚಿನಲ್ಲಿ ಬಿದ್ದ. ಅಪೆಟ್ ಗುಡುಗಿದ :

" ಮರೆತ್ಬಿಟ್ಟಿಯಾ ಕತ್ತೆ ? 'ಶ್ರೀಮಂತನ ಮಗ, ಬಡವನ ಮಗ, ಅಂತ ವ್ಯತ್ಯಾಸ ಮಾಡಬೇಡ; ಕೈಗಳ ದುಡಿಮೆ ನೋಡಿ ನೇಮಿಸಿಕೊ'.... ಹೇಳು !"

" ಶ್ರೀಮಂತನ ಮಗ, ಬಡವನ ಮಗ ಅಂತ ವ್ಯತ್ಯಾಸ ಮಾಡಬೇಡ. ಯಾರ ಜೊತೆ ಬೇಕಾದರೂ ಗೋಲಿ ಆಡ್ಬಾದು ಅಲ್ವಾ ?"

" ಕತ್ತೆ ! ಪೆರೋ ಮೆರಿಕರಾನ ಮಗ ಗೋಲಿ ಆಡ್ಲಿಲ್ಲ, ರಾಜ್ಯ ಆಳ್ದ. ತಿಳೀತಾ ?"

" ಹೂಂ."

ತಂದೆ—ಮಗ ಮಂದಿರದ ಆವರಣಕ್ಕೆ ಬಂದೊಡನೆ ಅರ್ಚಕನ ಪತ್ನಿ ಛೇಡಿಸಿದಳು :

" ನೈವೇದ್ಯವೆಲ್ಲ ಆರ್ಹೋಯ್ತು. ದೇವರು ಕೊಟ್ಟರೂ ಬಿಸಿಬಿಸಿ ತಿನ್ನೋ ಯೋಗ್ಯತೆ ಬೇಕಲ್ಲ. ನಡೀರಿ ಒಳಕ್ಕೆ...."

೫

ನೀರಾನೆ ಪ್ರಾಂತದ ಹೊಸ ಜೀವನ ಕ್ರಮ ಎಲ್ಲ ಬಗೆಯ ಜನರನ್ನೂ ಆವರಿಸಿತು.

ಕಂದಾಯ ವಸೂಲಿಯ ಕೆಲಸಕ್ಕಾಗಿಯೇ ಹಲವರು ನೇಮಕಗೊಂಡರು. ಅವರ ತಂಡಗಳಿಗೆ ಮುಖ್ಯಸ್ಥರನ್ನು—ಕಾಪೇರುಗಳನ್ನು—ಖ್ನೆಮ್‌ಹೊಟೆಪ್ ಗೊತ್ತು ಮಾಡಿದ. ಸ್ವಲ್ಪ ಹೊತ್ತು ತಾನೂ ಅವರ ಜೊತೆಗಿದ್ದು ವಸೂಲಿಯ ಕಾರ್ಯ ಹೇಗೆ ನಡೆಯಬೇಕು ಎಂಬುದನ್ನು ತೋರಿಸಿಕೊಟ್ಟ. ಪ್ರತಿದಿನ

ಅಪರಾಹ್ನ ಕತ್ತೆಗಳ ಮೇಲೆ ಚೀಲಗಳಲ್ಲಿ ಧಾನ್ಯ ರಾಜಗೃಹಕ್ಕೆ ಬರತೊಡಗಿತು. ಕಂದಾಯ ಸಲ್ಲಿಸಿದವರ ಹೆಸರನ್ನೂ ಧಾನ್ಯದ ಅಳತೆಯನ್ನೂ ಇಪ್ಯುವರ್ ಬರೆದಿಟ್ಟ.

ಒಂದೆಡೆ ಕಂದಾಯ ವಸೂಲಿ, ಇನ್ನೊಂದೆಡೆ ಊರಿಗೆ ನೀರು ಪೂರೈಕೆಯಾಗುವ ನದೀ ದಡದ ಬಾವಿಯಿಂದಲೂ ಕಾಲುವೆಗಳಿಂದಲೂ ಹೂಳೆತ್ತುವ ದುಡಿಮೆ. ಅಲ್ಲಿ ಇನ್ನೂರು ಮುನ್ನೂರು ಜನ ದುಡಿದರು. ಬೆಳಗ್ಗೆ ರಾಜಗೃಹಕ್ಕೆ ತೆರಳಿ ಇಪ್ಯುವರ್‌ಗೆ ಹೆಸರು ಕೊಟ್ಟು ಕೆಲಸಕ್ಕೆ ಹೋಗುತ್ತಿದ್ದರು. ಈ ಜನ. ಹದಿನೆಂಟು ಇಪ್ಪತ್ತು ಜನರ ತಂಡ. ಸಂಜೆ ರಾಜಗೃಹದಲ್ಲಿ ಅವರಿಗೆ ಧಾನ್ಯ, ಎಣ್ಣೆ ವಿತರಣೆ. ಹತ್ತು ದಿನಗಳಿಗೊಮ್ಮೆ ಒಂದು ದಿನ ರಜಾ ಮುಖ್ಯ ಬೀದಿಯ ಪಕ್ಕದಲ್ಲಿ, ಅಡ್ಡ ರಸ್ತೆಗಳ ಮಗ್ಗುಲಲ್ಲಿ, ಮನೆಮನೆಗಳ ಬಳಿ ನೀರು ಹರಿಯತೊಡಗಿದಾಗ ಜನರ ಸಂಭ್ರಮವೋ ಸಂಭ್ರಮ.

ಗ್ರಾಮಾಂತರ ಪ್ರದೇಶಗಳಲ್ಲೂ ಕಂದಾಯ ವಸೂಲಿ ನಡೆಯಿತು. ಅಲ್ಲಿ ಕೆಟ್ಟು ಹೋಗಿದ್ದ ರಸ್ತೆಗಳನ್ನು ಸರಿಪಡಿಸುವ ಹೊಸವನ್ನು ನಿರ್ಮಿಸುವ ಕಾರ್ಯವೂ ನೆರವೇರಿತು. ಮೆನೆಪ್‌ಟಾನೊಂದಿಗೆ ಅಬ್ಟು ಯಾತ್ರಿಕರಾಗಿದ್ದವರಿಗೆಲ್ಲ ಎಲ್ಲಿಲ್ಲದ ಆಸಕ್ತಿ.

ಎಲ್ಲೆಡೆಗಳಲ್ಲೂ ಹತ್ತರಲ್ಲೊಂದು ಭಾಗ ಕಂದಾಯ ದೊರೆಯಲಿಲ್ಲ. ಕಾಳಿಲ್ಲದೆ ಕಷ್ಟಕ್ಕೊಳಗಾದವರಿಗೆ ವಿನಾಯಿತಿ ಇತ್ತು.

"ನಮಗೆ ನಾವೇ ರಾಜರಾದರೂ ಕಂದಾಯ ತಪ್ಪಲಿಲ್ಲ," ಎಂದು ಕುಚೇಷ್ಟೆಯ ಮಾತು ಆಡಿದವರೂ ಇದ್ದರು.

ಆದರೆ ಮೆನೆಪ್‌ಟಾನ ತನಕ ಒಂದು ದೂರೂ ಬರಲಿಲ್ಲ.

ನಾಯಕ ದಿನಂಪ್ರತಿ ಪೂರ್ವಾಹ್ನ ರಾಜಗೃಹಕ್ಕೆ ಹೋಗಿ ಮಧ್ಯಾಹ್ನದ ವರೆಗೆ ಅಲ್ಲಿರುತ್ತಿದ್ದ. ದಿನಬಿಟ್ಟು ದಿನ ಸ್ನೊಫ್ರು ಅಥವಾ ಸೆಬೆಕ್ಖು ಬರುತ್ತಿದ್ದರು. ತಿಂಗಳಿಗೊಮ್ಮೆ ಹಿರಿಯರ ಸಮಿತಿ ಸೇರುತ್ತಿತ್ತು.

ಹಿರಿಯರು ಪ್ರಾಂತಗಳಲ್ಲಿ ಸಂಚರಿಸಿ ಗ್ರಾಮ ಸಮಿತಿಗಳನ್ನು ರಚಿಸಿ ಬಂದರು.

ತನ್ನ ಪಾಲಿನ ಕಂದಾಯವನ್ನು ಮೆನೆಪ್‌ಟಾನೂ ಸಂದಾಯ ಮಾಡಿದ.

ಮಹಾಪೂರವನ್ನು ಇದಿರು ನೋಡುತ್ತ ಹೊಲಗಳು ಒಣಗಿದುವು. ಆದರೆ ಒಳಕಾಲುವೆಗಳಲ್ಲಿ ನೀರು ಹರಿಯುತ್ತಿದ್ದುದರಿಂದ ಹಸುರಿಗೆ ಅಭಾವ ವಿರಲಿಲ್ಲ. ಮಹಾದ್ವಾರದ ಹೊರಗೆ ಮಗ್ಗುಲಲ್ಲಿ ನೆಟ್ಟಿದ್ದ ತಾಳೆಯ ದಿಮ್ಮಿ ಯನ್ನು ದಿನವೂ ಯಾರಾದರೂ ಬಂದು ಹೂಗಳಿಂದ ಸಿಂಗರಿಸುತ್ತಿದ್ದರು. ಇದರಲ್ಲಿ ಆಸಕ್ತಿ ತೋರಿದ ಮೂವತ್ತು ಜನರ ಹೆಸರುಗಳ ಪಟ್ಟಿಯನ್ನು ಇಪ್ಯುವರ್ ಸಿದ್ಧಪಡಿಸಿದ. ಅವರೆಲ್ಲ ಸರದಿಯಂತೆ ಅಲಂಕರಿಸುವ ಯೋಜನೆ ಯನ್ನು ಖ್ನೆಮ್‌ಹೊಟೆಪ್ ರೂಪಿಸಿದ.

ರಾಜ್ಯಪಾಲ ಮರಳಬಹುದು, ದಂಡಿನೊಂದಿಗೆ ಕಂದಾಯ ಅಧಿಕಾರಿ ಹಿಂದಿರುಗಬಹುದು ಎಂಬ ಆತಂಕ ಹಲವರನ್ನು ಮೊದ ಮೊದಲು ಬಾಧಿಸಿತು. ಆದರೆ ದಿನಕಳೆದಂತೆ ಆ ಭೀತಿ ದೂರವಾಯಿತು.

ಕಂದಾಯ ಅರ್ಧದಷ್ಟು ಕಡಿಮೆಯಾದುದರಿಂದ ಎಷ್ಟೋ ಸಂಸಾರಗಳಲ್ಲಿ ಒಂದಷ್ಟು ಹೆಚ್ಚುವರಿ ಧಾನ್ಯವಿತ್ತು. ಅದನ್ನು ಬಳಸಿ ಅಗತ್ಯವಿದ್ದ ಬೇರೆ ಸಾಮಗ್ರಿಗಳನ್ನು ಅವರು ಕೊಂಡರು.

ಊರಿನ ಮೋಚಿ ಆ ಮೂರು–ನಾಲ್ಕು ತಿಂಗಳಲ್ಲಿ ನೂರಾರು ಜೊತೆ ಜೊಂಡಿನ ಪಾದರಕ್ಷೆಗಳನ್ನು ಮಾಡಿದ. ಬಡಗಿ ಸೆತ್ನಾಗೂ ಬಿಡುವಿಲ್ಲದ ಕೆಲಸ. ನೂರಕ್ಕೂ ಹೆಚ್ಚು ಮೂರು ಕಾಲುಗಳ ಪೀಠಗಳನ್ನು ಅವನೂ ಅವನ ಶಿಷ್ಯರೂ ತಯಾರಿಸಿದರು. ಸಂದೂಕ—ಪೆಟಾರಿಗಳಿಗೂ ಬೇಡಿಕೆ ಇತ್ತು.

ನೇಕಾರರು ಬಟ್ಟೆಗಳನ್ನು ನೇಯ್ದು ಮಾರಿದರು (ಅನ್ಪುವಿನ ವಿಧವೆಯೂ ಹಿರಿಯ ಮಗನೂ ತಮ್ಮ ಮಗ್ಗವನ್ನು ನಡೆಸಿದರು. ನೇಯ್ದ ಬಟ್ಟೆಗೆ ಪ್ರತಿಯಾಗಿ ಸಾಕಷ್ಟು ಧಾನ್ಯ ಬಂದುದರಿಂದ, ಅವರು ಬೇಗನೆ ಸ್ವಾವ ಲಂಬಿಗಳಾದರು.)

ಸ್ನೊಫ್ರುವಿನ ಬಳಿಗೆ ಶಿಷ್ಯವೃತ್ತಿಗೆ ಎಳೆಯರು ಹೆಚ್ಚು ಹೆಚ್ಚಾಗಿ ಬಂದರು. ಮರದ ಮೂರ್ತಿಗಳೂ ಆಟಿಕೆಗಳೂ ಅಧಿಕ ಸಂಖ್ಯೆಯಲ್ಲಿ ಸಿದ್ಧವಾದುವು.

ಪೆಪ್ಪೈರಸಿನಿಂದ ಪುಟ್ಟ ದೋಣಿಗಳನ್ನು ನಿರ್ಮಿಸುವವರ ಒಂದು ತಂಡ ಊರಲ್ಲಿತ್ತು. ನದಿಯಲ್ಲಿ ಬೇಟೆಗೋ ವಿಹಾರಕ್ಕೋ ಬಳಸುವ ದೋಣಿ

ಅದು. ಕೊಳ್ಳುವವರಿಲ್ಲದೆ ಆ ವೃತ್ತಿಯೇ ಮೂಲೆಗುಂಪಾಗಿ, ಆ ಜನ ಕಲ್ಲಿನ ಕೆಲಸಕ್ಕೆ ಸೇರಿಕೊಂಡಿದ್ದರು, ಈಗ ಹಲವರು ಅಂಥ ದೋಣಿ ಕಟ್ಟಲು ಅಪೇಕ್ಷೆ ಪಟ್ಟುದರಿಂದ, ಪೆಪೈರಸ್ ದೋಣಿ ನಿರ್ಮಾಣದ ಪರಂಪರಾಗತ ವೃತ್ತಿ ಮತ್ತೆ ಚೇತರಿಸಿಕೊಂಡಿತು.

ಅಂಥ ದೋಣಿಗಳಲ್ಲಿ ಜನ ನೀರು ಗಿಡಗಳ ನಡುವೆ ಸಾಗಿ, ಕೈಕೋಲೆಸೆದು ಕಾಡುಕೋಳಿಗಳನ್ನು ಬೇಟೆಯಾಡಿದರು. ಬಾತುಕೋಳಿಗಳನ್ನೂ ಕೊಕ್ಕರೆಗಳನ್ನೂ ಸೆರೆಹಿಡಿದು ತಂದರು. ಒಳ್ಳೆಯ ಆಹಾರವಾಗುವಂತೆ ಕಾಳು ನುಚ್ಚು ನೀಡಿ ಬೆಳೆಸಿದರು.

ಅನೇಕ ಬಡವರ ಮನೆಗಳು ಹಳೆಯದಾಗಿ ಕುಸಿಯುವ ಸ್ಥಿತಿಯಲ್ಲಿದ್ದುವು ಅಂಥ ಛಾವಣಿಗಳಿಗೆ ಆಧಾರ ಕೊಡಲೆಂದು, ರಾಜಗೃಹದ ವೆಚ್ಚದಲ್ಲಿ ತಾಳೆಯ ತೊಲೆಗಳನ್ನು ಕೊಡಿಸಲಾಯಿತು.

ರಾಜಗೃಹದ ಸುತ್ತಲೂ ಇದ್ದ ಪ್ರಾಕಾರವನ್ನು ಕೆಡವಿದರು.

" ಜನರಿಗೆ ಕಾಣಿಸದಂತೆ ಯಾವ ರಹಸ್ಯ ಕಾರ್ಯವೂ ಇಲ್ಲಿ ನಡೆಯೋದಿಲ್ಲ. ಅಂದ ಮೇಲೆ ಗೋಡೆ ಯಾಕೆ ?" ಎಂದ ಮೆನೆಪ್‌ಟಾ.

ಮಹಾದ್ವಾರದ ಚೌಕಟ್ಟನು ಕಿತ್ತು, ಹಿಂಬದಿಯಲ್ಲಿದ್ದ ಉಗ್ರಾಣದಲ್ಲಿಟ್ಟರು.

ತಾಯಿ, ಅವಿವಾಹಿತೆಯಾಗಿ ಉಳಿದಿದ್ದ ತಂಗಿ, ಹೆಂಡತಿ, ಒಬ್ಬಳು ಮಗಳು—ಇಷ್ಟು ಜನರುಳ್ಳ ಪುಟ್ಟ ಸಂಸಾರ ಇಪ್ಯುವರ್‌ನದು. ಹಿಂಭಾಗದಲ್ಲಿದ್ದ ಕೆಳಗಿನ ಎರಡು ಕೊಠಡಿಗಳಲ್ಲಿ ಅವನು ಬೀಡು ಬಿಟ್ಟ.

ನೆಫೆರುರಾ ಒಂದು ದಿನ ಬಂದು ಪ್ರಾಂತಪಾಲ ಗೇಬುವಿನ ಮತ್ತು ಅವನ ಸಂಸಾರದ ಪೆಟ್ಟಿಗೆ ಸೊತ್ತುಗಳು ಯಾವುವೆಂಬುದನ್ನು ತೋರಿಸಿಕೊಟ್ಟಳು. ಅವನ್ನು ಎರಡು ಖಾರಿಗಳಲ್ಲಿಟ್ಟು ಮುದ್ರೆಯೊತ್ತಿ ಉಗ್ರಾಣಕ್ಕೆ ಸಾಗಿಸಿದರು. ಅವರ ವಾಸದ ಕೊಠಡಿಗಳಲ್ಲಿ ಹೊಸ ಆಡಳಿತ ದಾಖಲೆ ಪತ್ರಗಳನ್ನು ಜೋಡಿಸಿ ಇಟ್ಟರು.

ದಾಸಿಯರಲ್ಲಿ ಮೂವರಿಗೆ ಮದುವೆಯಾಯಿತು. ಇಬ್ಬರು ಅಲ್ಲಿ ಇಲ್ಲಿ ದುಡಿಮೆಗೆ ಹೋದರು.

ನೆಫೆರುರಾಳನ್ನು ಕಂಡಾಗ ಏನೋ ಸಂಕಟವೆನಿಸಿ ಇಪ್ಯುವರ್, "ನೀನೇನು ಮಾಡ್ತೀಯಾ ?" ಎಂದು ಕೇಳಿದ.

ಅವಳೆಂದಳು :

" ನಿನಗೇನು ಲಿಪಿಕಾರನಯ್ಯ ? ನೀನೀಗ ದೊಡ್ಡಮನುಷ್ಯ. ಸಂಸಾರ ಸಮೇತ ರಾಜಗೃಹ ಸೇರ್ದೆ."

ಇಪ್ಯುವರ್‌ನೊಡನೆ ಅವಳಿಗೆ ಮಾತಿನ ಸಲಿಗೆ.

" ನೀನೂ ಇಲ್ಲೇ ಇರಬಹುದಾಗಿತ್ತು."

" ನಮ್ರುರು ಮಾತು ಬಿಟ್ಬಿಡು. ನಿನ್ನ ತಾಯಿ, ಹೆಂಡತಿ, ತಂಗಿ, ಮಗಳು ಸುಮ್ನಿರ್ರಾರಾ ?"

" ವಾಸಕ್ಕೆ ಮನೆ ನೋಡಿದೀಯಾ ?"

" ಮುದಿತಾಯಿ ಹುಡುಕಿಕೊಂಡು ಬಂದಿದ್ದಾಳೆ. ಕುಡಿದು ಕುಡಿದು ಐವತ್ತು ದೆಬೆನ್ ಬಂಗಾರವೂ ಮುಗೀತು. ಒಟ್ಟಿಗೆ ಮನೆ ಮಾಡಿದ್ದೇನೆ. ಕುಣಿತದ ಮನೆ. ಯಾವತ್ತಾದರೂ ಬೇಜಾರಾದಾಗ ಬಾ."

ಅವಳ ಕಣ್ಣುಗಳಲ್ಲಿ ಹನಿ ಆಡಿದ್ದನ್ನು ಕಂಡು ಇಪ್ಯುವರ್ ಖಿನ್ನನಾದ.

ನಿಧಾನವಾಗಿ ಅವನೆಂದ :

" ನಾನು ದೊಡ್ಮನುಷ್ಯ ಅಂದ್ಯಲ್ಲ, ನೆಫೆರುರಾ ? ಅದು ಸರಿಯಲ್ಲ. ನಿಜವಾದ ದೊಡ್ಡಮನುಷ್ಯ ಮೆನೆಪ್‌ಟಾ. ಸಾಕ್ಷಾತ್ ದೇವರು...."

" ಆ ದೇವರು ಈ ನೈವೇದ್ಯ ಬೇಡ ಅಂದ."

ಅಷ್ಟು ಹೇಳಿ, ನಿಟ್ಟುಸಿರು ಬಿಟ್ಟು, ನೆಫೆರುರಾ ಅಲ್ಲಿಂದ ಹೊರಟಳು.

ನೂರಾರು ರೈತರ ನೇಗಿಲು ಮೊನೆಗಳು ಮೊಂಡಾಗಿದ್ದುವು. ಹಳೆಯ ದಾಗಿದ್ದುವು ಅಥವಾ ಮುರಿದಿದ್ದುವು. ಅವುಗಳ ದುರಸ್ತಿಯ ವೆಚ್ಚವನ್ನು ರಾಜಗೃಹ ವಹಿಸಿತು.

ಸೆಬೆಕ್ಖು ರಾಜಗೃಹದ ಸುತ್ತಲೂ ಪುಷ್ಪೋದ್ಯಾನ ನಿರ್ಮಿಸಲು ದುಡಿದ. ಅಂಗಣದಲ್ಲಿದ್ದ ತಾವರೆಕೊಳ ಈಗ ವಿಸ್ತೃತ ಉದ್ಯಾನದ ಒಂದಂಗವಾಯಿತು. ಪ್ರತಿಯೊಂದು ಗಿಡದ, ಬಳ್ಳಿಯ ದೈನಂದಿನ ಬೆಳವಣಿಗೆಯನ್ನು ಸೆಬೆಕ್ಖು ಗಮನಿಸುತ್ತಿದ್ದ.

" ಇಲ್ಲಿ ಹೂ ಅರಳಿದ ಕೂಡಲೇ ಮುಖಮಂಟಪದಲ್ಲಿ ಜೇನುಹುಳಗಳು ಗೂಡು ಕಟ್ತವೆ ನೋಡ್ಕೊ," ಎಂದ ಸ್ನೊಫ್ರು ತನ್ನ ಮಿತ್ರನಿಗೆ.

ನಕ್ಕು ಸೆಬೆಕ್ಖು ನುಡಿದ :

" ಈ ಜೇನು ಯಾರೂ ಮುಟ್ಬಬಾರ್ದು. ಇದು ರಾಜಗೃಹದ ಆಸ್ತಿ—ಅಂತ ನಾಯಕರು ಅಪ್ಪಣೆ ಕೊಡಿಸ್ತಾರೆ !"

ನೆಫಿಸ್ ಮನೆಯಲ್ಲಿ ಎರಡು ಮೂರುಬಾರಿ ರಾಮೆರಿಪ್‌ಟಾನ ಶಿಕ್ಷಣದ ಪ್ರಸ್ತಾಪ ಮಾಡಿದ್ದಳು, ಗಂಡನೊಂದಿಗೆ.

ಪ್ರತಿಸಲವೂ, "ಆಗಲಿ ನೆನಪಿದೆ" ಎಂದಿದ್ದ, ಮೆನೆಪ್‌ಟಾ.

ಎರಡು ಸಂಗತಿಗಳು ನಾಯಕನನ್ನು ಕಾಡುತ್ತಿದ್ದುವು : ತನ್ನ ಮಗನೊಬ್ಬನಿಗೇ ಓದುಬರಹ ಕಲಿಸುವುದು ಸರಿಯೆ ? ಅಲ್ಲದೆ, ಇಪ್ಯುವರ್‌ಗೆ ಈಗಿರುವ ಕೆಲಸದ ಹೊರೆಯೇ ಹೆಚ್ಚಲ್ಲವೆ ?

ಹುಡುಗನ ವಿದ್ಯಾಭ್ಯಾಸದ ಬಗೆಗೆ ಮೆನೆಪ್‌ಟಾ ತಾನಾಗಿ ಹೇಳಬಹುದೆಂದು ಇಪ್ಯುವರ್ ಬಹಳ ದಿನ ಕಾದ. ಏನೂ ಹೇಳದೇ ಇದ್ದಾಗ ಸ್ವತಃ ಮತ್ತೊಮ್ಮೆ ಆ ಮಾತು ಎತ್ತಿದ.

" ನಿಮಗೆ ಶ್ರಮವಾಗೋದಿಲ್ವಾ ಇಪ್ಯುವರ್ ?"

" ನನಗೆ ಶ್ರಮವೆ ? ಇಲ್ಲ, ನಾಯಕರೇ...."

" ಹೆಚ್ಚು ಹುಡುಗರು ಬಂದರೆ ?"

" ಅಯ್ಯೋ ! ಯಾರು ಬರ್ತಾರೆ ?"

" ಹಾಗಲ್ಲ. ವಿಚಾರಿಸಿ ನೋಡೋಣ."

" ರಾಮೆರಿಪ್‌ಟಾ ಜತೆ ಎಷ್ಟು ಜನ ಬೇಕಾದರೂ ಬರಲಿ. ಪಾಠ ಹೇಳ್ತೀನೆ."

" ಸ್ಥಳ—ರಾಜಗೃಹದ ಮಹಡಿ ಆಗಬಹುದಲ್ಲ ?"

" ಪ್ರಶಸ್ತವಾಗಿದೆ."

" ಸೊಥಿಸ್ ನಕ್ಷತ್ರ ಉದಯಿಸುವುದು ಯಾವತ್ತು ?"

" ಇನ್ನು ಇಪ್ಪತ್ತೆಂಟು ದಿನ ಇದೆ,"

" ನೂತನ ವರ್ಷಾರಂಭದಿಂದಲೇ ಪಾಠ ಆರಂಭಿಸೋಣ."

ಡಂಗುರದವನು ಊರಲ್ಲಿ ಸಾರಿದ :

" ತಮ್ಮ ಮಕ್ಕಳು ಓದುಬರಹ ಕಲೀಬೇಕೂಂತ ಇಷ್ಟಪಡೋ ತಾಯಿ ತಂದೆ ಲಿಪಿಕಾರ ಇಪ್ಯುವರ್ ಹತ್ತಿರ ಹೆಸರು ಕೊಡ್ಬೇಕು."

ನೆಫಿಸ್ ಗಂಡನನ್ನು ಕೇಳಿದಳು :

" ರಾಮೆರಿಗೆ ಬೇರೆಯೇ ಪಾಠ ಹೇಳಿಸೋದಕ್ಕಾಗೋಲ್ವಾ ?"

ಮೆನೆಪ್‌ಟಾ ತಿಳಿಯಹೇಳಿದ :

" ಭೇದ ಭಾವ ಸಲ್ಲ ನೆಫಿಸ್. ಬೇರೆಯವರೂ ಒಟ್ಟಿಗಿದ್ದರೆ ರಾಮೆರಿ ಅವರಿಗಿಂತ ಚೆನ್ನಾಗಿ ಕಲೀಬೌದು."

ಡಂಗುರ ಕೇಳಿದೊಡನೆಯೇ ಧಾವಿಸಿ ಬಂದವನು ಅಪೆಟ್.

" ಶಾಲೆ ಮಂದಿರದಲ್ಲೇ ಇರಬೇಕಾದ್ದು ನ್ಯಾಯ. ಶಾಲೆಗೆ ಕಟ್ಟಡ...."

ಮೆನೆಪ್‌ಟಾ ತಲೆ ಆಡಿಸಿದ.

" ಶಾಲೆ ಉಗ್ರಾಣ ವಸತಿ—ನೆನಪಿದೆ. ಮಹಾಪೂರ ಬರೋದಕ್ಕೆ ಮುಂಚೆ ಕೆರೆ ಬಾವಿ ಕೊಳ ಕಾಲುವೆಗಳ ಹೂಳು ತೆಗೀಬೇಕಲ್ಲ ? ಅದಕ್ಕೆ ಆದ್ಯತೆ. ಪ್ರವಾಹದ ಅವಧೀಲಿ ಕಟ್ಟಡದ ಕೆಲಸ. ಶಾಲೆ ಸಿದ್ಧವಾದ ಮೇಲೆ ಅಲ್ಲಿಯೇ ಪಾಠಗಳು ನಡೀತವೆ."

" ಇಪ್ಯುವರ್‌ಗೆ ವೃಥಾ ತೊಂದರೆ. ನಾನೇ ಪಾಠ ಹೇಳ್ತೀನೆ."

" ಶಾಲಾ ಕಟ್ಟಡ ಸಿದ್ಧವಾಗೋ ವರೆಗೂ ಇಪ್ಯುವರ್ ಹೇಳ್ಲಿ."

" ಮುಂದೆ ಪಾಠ ಹೇಳೋ ಕೆಲಸ ನನ್ನ ಮಗ ಮಾಡ್ತಾನೆ."

" ಸಂತೋಷ."

* * * *

ನೀರಾನೆ ಪ್ರಾಂತ ತನ್ನದೇ ಆಡಳಿತ ರೂಪಿಸಿಕೊಂಡು ಮೂರು ತಿಂಗಳಾದರೂ ಭೂಮಾಲಿಕರ ಸಮಸ್ಯೆ ಬಗೆಹರಿದಿರಲಿಲ್ಲ.

ಮೊದಲನೆಯ ತಿಂಗಳಲ್ಲೇ ನುಟ್‌ಮೋಸ್ ರಾಜಧಾನಿಯಿಂದ ಒಬ್ಬ ದೂತನನ್ನು ಗುಟ್ಟಾಗಿ ತನ್ನ ಮನೆಗೆ ಕಳಿಸಿದ್ದನೆಂದೂ ತನ್ನ ಪ್ರೀತಿಪಾತ್ರ

ದಾಸಿಯನ್ನು ಕರೆಸಿಕೊಂಡನೆಂದೂ ಸುದ್ದಿ ಹುಟ್ಟಿತು. ಈ ಸುದ್ದಿಗೆ ಮೂಲ ಅಲ್ಲಿನ ಒಬ್ಬ ಸೇವಕ. ದೋಣಿ ಅಪರಾತ್ರಿಯಲ್ಲಿ ಬಂದಿತಂತೆ. ಊರಿಗೆ ದೂರದಲ್ಲೇ ದಂಡೆ ಮುಟ್ಟಿ, ಬೆಳಗಾಗುವುದರೊಳಗೆ ಹೊರಟು ಹೋಯಿತಂತೆ....

ಹೇಗೋ ಊರಿನ ಹೊರವಲಯದಲ್ಲೇ ಇದ್ದ ವಸತಿ ಪ್ರದೇಶ. ಸೆತೆಕ್ ನಖ್ಟ್, ಸೆನ್‌ಉಸರ್ಟ್, ಹೆಜಿರೆ, ಸಿನ್ಯುಹೆ ತಮ್ಮಷ್ಟಕ್ಕೆ ತಾವಾಗಿ ಇರತೊಡ ಗಿದರು. ರಾಜಧಾನಿಯಿಂದ ದಂಡು ಬರುತ್ತದೆಂದು ಕಾದದ್ದೇ ಬಂತು. ನುಟ್‌ಮೋಸನ ದೂತನ ಚಟುವಟಿಕೆಯ ವಿಷಯ ತಿಳಿದು ಅವರು ಸಿಟ್ಟಾದರು. ತಮಗೋಸ್ಕರ ಯಾವ ಸಂದೇಶವನ್ನೂ ಅವನು ಕಳುಹಿಸಿರಲಿಲ್ಲ.

"ಇಷ್ಟು ದಿನಸ ಅವಳನ್ನು ಬಿಟ್ಟು ಹ್ಯಾಗಿದ್ದನೋ ರಾಜಧಾನಿಯಲ್ಲಿ. ಹಾಸಿಗೆ ಸುಖಕ್ಕೆ ಬೇರೆ ಅಂಥದೇ ಬೊಂಬೆ ಸಿಗಲಿಲ್ಲವೇನೋ?" ಎಂದು ಕೂಗಾಡಿದರು.

ಅವರ ಸೇವಕರಲ್ಲಿ ನಂಬುಗೆಯವರು ದಿನವೂ ಊರಿನೊಳಕ್ಕೆ ಹೋಗಿ ಸುದ್ದಿ ತರುತ್ತಿದ್ದರು.

"ಭೂಮಾಲಿಕರಲ್ಲಿಗೆ ಕಂದಾಯ ವಸೂಲಿಗೆ ಹೋಗ್ಬೇಡಿ. ಅವರಾ ಗಿಯೇ ತಂದು ಕೊಡ್ತಾರೋ ನೋಡೋಣ," ಎಂದಿದ್ದ ಮೆನೆಪ್‌ಟಾ.

ಬರೇ ಹತ್ತರಲ್ಲಿ ಒಂದು ಭಾಗ. ಆದರೆ ಇಪ್ಪುವರನ ಬಳಿ ಇದ್ದ ಸುಳ್ಳು ದಾಖಲೆಯ ಪ್ರಕಾರ ಅಲ್ಲಿ ಇರುವ ದಾಸ್ತಾನಿನ ಆಧಾರದ ಮೇಲೆ ಆಗಬೇಕಾದ ಸಂದಾಯ.

ವಸೂಲಿಗೆ ಬರದೇ ಇದ್ದುದನ್ನು ಕಂಡು ಅವರಿಗೆ ಹೆದರಿಕೆ. 'ನಮ್ಮ ತಂಟೆಗೆ ಬರಲಾರರು,' ಎಂದುಕೊಂಡರು ಭೂಮಾಲಿಕರು.

ಅರ್ಚಕನಿಗೆ ಹೇಳಿ ಕಳುಹಿಸಿದ್ದಾಯಿತು.

"ದೇವಮಂದಿರಕ್ಕೆ ಬನ್ನಿ." ಎಂದ ಆತ.

ಸಿನ್ಯುಹೆಯ ಪತ್ನಿಯ ಆರೋಗ್ಯ ತುಸು ಸುಧಾರಿಸಿತು—ಎಡಗೈಯ ಚಲನೆಯೊಂದನ್ನು ಬಿಟ್ಟು. ಅವಳನ್ನು ನೋಡುವುದಕ್ಕೂ ಅರ್ಚಕ ಬರಲಿಲ್ಲ.

"ಸಾಧ್ಯವಿದ್ದದ್ದನ್ನೆಲ್ಲ ಮಾಡಿಯಾಯ್ತಲ್ಲ," ಎಂದ ಆತ.

ಸೆತೆಕ್‌ನಖ್ತ್ ಮಂದಿರಕ್ಕೆ ಹೋಗಿ ರೇಗಾಡಿದ.

"ಅಪೆಟ್! ನಿಜ ಹೇಳಿ. ನೀವು ನಮ್ಮ ಪಕ್ಷವೊ? ಅವರ ಪಕ್ಷವೊ?"

"ನಾನು ದೇವರ ಪಕ್ಷ."

"ಬುದ್ಧಿವಂತರು!"

ನೀರಾನೆ ಪ್ರಾಂತದ ಎದುರು ದಂಡೆಯಲ್ಲಿದ್ದುದು ಟಗರು ಪ್ರಾಂತ; ಉತ್ತರ ದಿಕ್ಕಿನಲ್ಲಿ ಮೊಸಳೆ ಪ್ರಾಂತ; ಜಿಂಕೆ ಪ್ರಾಂತ ದಕ್ಷಿಣದಲ್ಲಿ. ಮೊಸಳೆ, ಜಿಂಕೆ ಪ್ರಾಂತಗಳ ಗಡಿಯನ್ನು ಕಾಲ್ನಡಿಗೆಯಿಂದಲೇ ದಾಟುವುದು ಸಾಧ್ಯವಿತ್ತು. ದೋಣಿಗಳಲ್ಲಿ ನದಿ ದಾಟಿ ಟಗರು ಪ್ರಾಂತವನ್ನು ಮುಟ್ಟುತ್ತಿದ್ದರು. ಸೆತೆಖ್‌ನಖ್ತ್ ಮತ್ತು ಸೆನ್‌ಉಸರ್ಟ್ ಆ ಪ್ರಾಂತಗಳ ಭೂಮಾಲಿಕರಲ್ಲಿಗೆ ಸೇವಕರನ್ನು ರಹಸ್ಯವಾಗಿ ಕಳುಹಿದರು. ಏನು ನಡೆಯಿತೆಂಬುದನ್ನು ತಿಳಿಯಲು ಅಲ್ಲಿ ಕುತೂಹಲವಿತ್ತೇ ಹೊರತು, ನೆರವಿನ ಯಾವ ಆಶ್ವಾಸನೆಯೂ ಅಲ್ಲಿಂದ ಬರಲಿಲ್ಲ.

(ಟಗರು—ನೀರಾನೆ ಪ್ರಾಂತಗಳ ಕೆಲವರಲ್ಲಿ ಪರಸ್ಪರರನ್ನು ಕಾಣಲು ಬರುವ ಹೋಗುವ ಪದ್ಧತಿ ಇತ್ತು. ಬುಡಕಟ್ಟುಗಳು ಬೇರೆ ಬೇರೆಯಾದರೂ, ಕಟ್ಟಳೆ ಮೀರಿದ ಒಂದೆರಡು ವಿವಾಹಗಳೂ ಜರುಗಿದ್ದುವು. ಇಲ್ಲಿನ ಘಟನೆಗಳಿಂದ ಎದುರು ದಂಡೆಯ ರೈತರೂ ಇತರ ಶ್ರಮಜೀವಿಗಳೂ ಚಕಿತರಾದರು. ಇಲ್ಲಿ ಭೂಕಂದಾಯ ಅರ್ಧಕ್ಕೆ ಇಳಿಯಿತೆಂಬ ಸುದ್ದಿಯಿಂದ ಅಲ್ಲಿನವರಿಗೆ ಅಚ್ಚರಿ. ನದಿ ದಾಟಿ ಬಂದು ಇಲ್ಲಿನ ನಿರ್ಮಾಣ ಕಾರ್ಯಗಳನ್ನು ಕಂಡು ಹೋಗುವ ತವಕ ಅವರಿಗೆ. ಎದುರು ದಂಡೆಯಲ್ಲಿ ಅಲ್ಲಿ ಊರಿರಲಿಲ್ಲ, ದೋಣಿಕಟ್ಟೆ ಇರಲಿಲ್ಲ. ಅವು ಇದ್ದುದು ಉತ್ತರದಲ್ಲಿ. ಒಪ್ಪೊತ್ತಿನ ದೋಣಿ ದೂರದಲ್ಲಿ. ಆದರೂ ಜನ ಬರುತ್ತಿದ್ದರು. ಅಂಥವರ ಸಂಖ್ಯೆ ಹೆಚ್ಚಿದಾಗ, "ನೀರಾನೆ ಪ್ರಾಂತಕ್ಕೆ ಯಾರೂ ಹೋಗಬಾರದು" ಎಂದು ಅಲ್ಲಿನ ಪ್ರಾಂತಪಾಲ ಆಜ್ಞೆ ವಿಧಿಸಿದ್ದ. ಈ ಸುದ್ದಿ ಈಸಿ ಬಂದಾಗ ಇಲ್ಲಿನವರಿಗೆ ಹೆಮ್ಮೆ.)

ಮೆನೆಪ್‌ಟಾನೊಂದಿಗೆ ಸ್ನೊಫ್ರು ಮತ್ತು ಸೆಬೆಕ್ಕು ಮಾತ್ರ ಇದ್ದ

ಒಂದು ದಿನ, ಖ್ನೆಮ್‌ಹೊಟೆಪ್ ಅಸಹನೆಯ ಸ್ವರದಲ್ಲಿ ಕೇಳಿದ :

"ಎಷ್ಟು ದಿನ ಅಂತ ಹೀಗೆಯೇ ಬಿಡೋದು ಈ ಭೂಮಾಲಿಕರನ್ನು ?"

ಮೆನೆಪ್‌ಟಾನೆಂದ :

"ಮಹಾಪೂರ ಬಂದು ಇಳಿಯೋ ವೇಳೆಗೆ ಸಮಸ್ಯೆ ತಾನೇ ಬಗೆಹರೀತದೆ. ಅವರ ನೂರಾರು ಹೊಲಗಳಲ್ಲಿ ಉಳುಮೆ ಬಿತ್ತನೆ ಮಾಡೋದಕ್ಕೆ ಕೆಲಸಗಾರರು ಎಲ್ಲಿ ಸಿಗ್ತಾರೆ ? ಆಗ ಅವರು ಮಾತುಕತೆಗೆ ಬರಲೇಬೇಕು."

"ಇನ್ನೂ ನಾಲ್ಕೈದು ತಿಂಗಳು ಕಾಯ್ಬೇಕೆ ? ಅವರು ನಮ್ಮ ಪಾದ ಗಳಿಗೆ ನೆಟ್ಟಿರೋ ಮುಳ್ಳು. ಕೀವಾಗಿ, ತೊಂದರೆಯಾದೀತು."

"ಅವರಿಂದ ಅಪಾಯ ಇಲ್ಲ ಅಂತ ನಾನು ಹೇಳ್ತಾ ಇಲ್ಲ. ಹೊಗೆ ಕಾಣಿಸಿದ ತಕ್ಷಣ ನೀರೋ ಮರಳೋ ಉಗ್ರೋಣ. ನಮ್ಮ ಗೂಢಚಾರರು ಎಚ್ಚರವಾಗಿರ್ಬೇಕು. ಅವರ ಉಸ್ತುವಾರಿ ನೋಡ್ಕೊ."

ಮೆನೆಪ್‌ಟಾನೇನೋ ಹೀಗೆ ಹೇಳಿದ. ಆದರೆ ಖ್ನೆಮ್‌ಹೊಟೆಪ್‌ನ ಅಸಮಾಧಾನ ಅವನಿಗೂ ಅಂಟಿಕೊಂಡಿತು. ಆ ತಿಂಗಳು ಹಿರಿಯರ ಸಮಿತಿಯ ಸಭೆಯಲ್ಲಿ ಭೂಮಾಲಿಕರ ಪ್ರಶ್ನೆ ಚರ್ಚೆಗೆ ಬಂತು.

"ಹೋರಾಟ ಅವರಿಂದ ಸಾಧ್ಯವಿಲ್ಲ. ನಮ್ಮ ಇಪ್ಪತ್ತು ಯುವಕರು ಸಾಕು. ಅವರ ಆಸ್ತಿಪಾಸ್ತಿ ಎಲ್ಲಾ ವಶಪಡಿಸ್ಕೋಬೌದು," ಎಂದ ಹೆಮ್‌ಟಿ.

ಸೆನುನೆಂದ :

"ಮಾತುಕತೆಗೆ ಕರೆಯೋಣ. ಸೊಥಿಸ್ ಉದಯಕ್ಕೆ ಹತ್ತು ದಿನ ಇದೆ ಎನ್ನುವಾಗ ಆಮಂತ್ರಣ ಕಳಿಸೋಣ. ನೂತನ ವರ್ಷಾರಂಭದ ದಿವಸವೇ ಇತ್ಯರ್ಥವಾಗ್ಲಿ."

ಉಳಿದವರು ಒಪ್ಪಿದರು. ಇಪ್ಯುವರ್ ಹೋಗಿ ಕರೆಯಬೇಕು, ಖ್ನೆಮ್‌ಹೊಟೆಪ್ ಜತೆಗಿರಬೇಕು—ಎಂದು ತೀರ್ಮಾನವಾಯಿತು.

* * * *

ಹೊಸ ವರ್ಷದ ಆರಂಭ ಹತ್ತಿರ ಬಂದಿತೆಂದು ಊರಿನ ಜನರಿಗೆಲ್ಲ ಸಡಗರ. ಸರ್ವೇ ದಡದವರ ಉತ್ಸಾಹ ಒಳನಾಡಿಗೂ ಹಬ್ಬಿತು.

"ಸಾಧ್ಯವಿದ್ದದ್ದನ್ನೆಲ್ಲ ಮಾಡಿಯಾಯ್ತಲ್ಲ," ಎಂದ ಆತ.

ಸೆತೆಕ್‌ನಖ್ತ್ ಮಂದಿರಕ್ಕೆ ಹೋಗಿ ರೇಗಾಡಿದ.

"ಅಪೆಟ್ ! ನಿಜ ಹೇಳಿ. ನೀವು ನಮ್ಮ ಪಕ್ಷವೊ ? ಅವರ ಪಕ್ಷವೊ ?"

"ನಾನು ದೇವರ ಪಕ್ಷ."

"ಬುದ್ಧಿವಂತರು !"

ನೀರಾನೆ ಪ್ರಾಂತದ ಎದುರು ದಂಡೆಯಲ್ಲಿದ್ದುದು ಟಗರು ಪ್ರಾಂತ ; ಉತ್ತರ ದಿಕ್ಕಿನಲ್ಲಿ ಮೊಸಳೆ ಪ್ರಾಂತ; ಜಿಂಕೆ ಪ್ರಾಂತ ದಕ್ಷಿಣದಲ್ಲಿ. ಮೊಸಳೆ, ಜಿಂಕೆ ಪ್ರಾಂತಗಳ ಗಡಿಯನ್ನು ಕಾಲ್ನಡಿಗೆಯಿಂದಲೇ ದಾಟುವುದು ಸಾಧ್ಯವಿತ್ತು. ದೋಣಿಗಳಲ್ಲಿ ನದಿ ದಾಟಿ ಟಗರು ಪ್ರಾಂತವನ್ನು ಮುಟ್ಟುತ್ತಿದ್ದರು. ಸೆತೆಖ್‌ನಖ್ತ್ ಮತ್ತು ಸೆನ್‌ಉಸರ್ಟ್ ಆ ಪ್ರಾಂತಗಳ ಭೂಮಾಲಿಕರಲ್ಲಿಗೆ ಸೇವಕರನ್ನು ರಹಸ್ಯವಾಗಿ ಕಳುಹಿದರು. ಏನು ನಡೆಯಿತೆಂಬುದನ್ನು ತಿಳಿಯಲು ಅಲ್ಲಿ ಕುತೂಹಲವಿತ್ತೇ ಹೊರತು, ನೆರವಿನ ಯಾವ ಆಶ್ವಾಸನೆಯೂ ಅಲ್ಲಿಂದ ಬರಲಿಲ್ಲ.

(ಟಗರು—ನೀರಾನೆ ಪ್ರಾಂತಗಳ ಕೆಲವರಲ್ಲಿ ಪರಸ್ಪರರನ್ನು ಕಾಣಲು ಬರುವ ಹೋಗುವ ಪದ್ಧತಿ ಇತ್ತು. ಬುಡಕಟ್ಟುಗಳು ಬೇರೆ ಬೇರೆಯಾದರೂ, ಕಟ್ಟಳೆ ಮೀರಿದ ಒಂದೆರಡು ವಿವಾಹಗಳೂ ಜರುಗಿದ್ದುವು. ಇಲ್ಲಿನ ಘಟನೆಗಳಿಂದ ಎದುರು ದಂಡೆಯ ರೈತರೂ ಇತರ ಶ್ರಮಜೀವಿಗಳೂ ಚಕಿತರಾದರು. ಇಲ್ಲಿ ಭೂಕಂದಾಯ ಅರ್ಧಕ್ಕೆ ಇಳಿಯಿತೆಂಬ ಸುದ್ದಿಯಿಂದ ಅಲ್ಲಿನವರಿಗೆ ಅಚ್ಚರಿ. ನದಿ ದಾಟಿ ಬಂದು ಇಲ್ಲಿನ ನಿರ್ಮಾಣ ಕಾರ್ಯಗಳನ್ನು ಕಂಡು ಹೋಗುವ ತವಕ ಅವರಿಗೆ. ಎದುರು ದಂಡೆಯಲ್ಲಿ ಅಲ್ಲಿ ಊರಿರಲಿಲ್ಲ, ದೋಣಿಕಟ್ಟೆ ಇರಲಿಲ್ಲ. ಅವು ಇದ್ದುದು ಉತ್ತರದಲ್ಲಿ. ಒಪ್ಪೊತ್ತಿನ ದೋಣಿ ದೂರದಲ್ಲಿ. ಆದರೂ ಜನ ಬರುತ್ತಿದ್ದರು. ಅಂಥವರ ಸಂಖ್ಯೆ ಹೆಚ್ಚಿದಾಗ, "ನೀರಾನೆ ಪ್ರಾಂತಕ್ಕೆ ಯಾರೂ ಹೋಗಬಾರದು" ಎಂದು ಅಲ್ಲಿನ ಪ್ರಾಂತಪಾಲ ಆಜ್ಞೆ ವಿಧಿಸಿದ್ದ. ಈ ಸುದ್ದಿ ಈಸಿ ಬಂದಾಗ ಇಲ್ಲಿನವರಿಗೆ ಹೆಮ್ಮೆ.)

ಮೆನೆಪ್‌ಟಾನೊಂದಿಗೆ ಸ್ನೊಫ್ರು ಮತ್ತು ಸೆಬೆಕ್ಖು ಮಾತ್ರ ಇದ್ದ

ಒಂದು ದಿನ, ಖ್ನೆಮ್‌ಹೊಟೆಪ್ ಅಸಹನೆಯ ಸ್ವರದಲ್ಲಿ ಕೇಳಿದ :

"ಎಷ್ಟು ದಿನ ಅಂತ ಹೀಗೆಯೇ ಬಿಡೋದು ಈ ಭೂಮಾಲಿಕರನ್ನು ?"

ಮೆನೆಪ್‌ಟಾನೆಂದ :

"ಮಹಾಪೂರ ಬಂದು ಇಳಿಯೋ ವೇಳೆಗೆ ಸಮಸ್ಯೆ ತಾನೇ ಬಗೆಹರೀತದೆ. ಅವರ ನೂರಾರು ಹೊಲಗಳಲ್ಲಿ ಉಳುಮೆ ಬಿತ್ತನೆ ಮಾಡೋದಕ್ಕೆ ಕೆಲಸಗಾರರು ಎಲ್ಲಿ ಸಿಗ್ತಾರೆ ? ಆಗ ಅವರು ಮಾತುಕತೆಗೆ ಬರಲೇಬೇಕು."

"ಇನ್ನೂ ನಾಲ್ಕೈದು ತಿಂಗಳು ಕಾಯ್ಬೇಕೆ ? ಅವರು ನಮ್ಮ ಪಾದ ಗಳಿಗೆ ನೆಟ್ಟಿರೋ ಮುಳ್ಳು. ಕೀವಾಗಿ, ತೊಂದರೆಯಾದೀತು."

"ಅವರಿಂದ ಅಪಾಯ ಇಲ್ಲ ಅಂತ ನಾನು ಹೇಳ್ತಾ ಇಲ್ಲ. ಹೊಗೆ ಕಾಣಿಸಿದ ತಕ್ಷಣ ನೀರೋ ಮರಳೋ ಉಗ್ಗೋಣ. ನಮ್ಮ ಗೂಢಚಾರರು ಎಚ್ಚರವಾಗಿರ್ಬೇಕು. ಅವರ ಉಸ್ತುವಾರಿ ನೋಡ್ಕೊ."

ಮೆನೆಪ್‌ಟಾನೇನೋ ಹೀಗೆ ಹೇಳಿದ. ಆದರೆ ಖ್ನೆಮ್‌ಹೊಟೆಪ್‌ನ ಅಸಮಾಧಾನ ಅವನಿಗೂ ಅಂಟಿಕೊಂಡಿತು. ಆ ತಿಂಗಳು ಹಿರಿಯರ ಸಮಿತಿಯ ಸಭೆಯಲ್ಲಿ ಭೂಮಾಲಿಕರ ಪ್ರಶ್ನೆ ಚರ್ಚೆಗೆ ಬಂತು.

"ಹೋರಾಟ ಅವರಿಂದ ಸಾಧ್ಯವಿಲ್ಲ. ನಮ್ಮ ಇಪ್ಪತ್ತು ಯುವಕರು ಸಾಕು. ಅವರ ಆಸ್ತಿಪಾಸ್ತಿ ಎಲ್ಲಾ ವಶಪಡಿಸ್ಕೋಬೌದು," ಎಂದ ಹೆಮ್‌ಟ.

ಸೆಮನೆಂದ :

"ಮಾತುಕತೆಗೆ ಕರೆಯೋಣ. ಸೊಥಿಸ್ ಉದಯಕ್ಕೆ ಹತ್ತು ದಿನ ಇದೆ ಎನ್ನುವಾಗ ಆಮಂತ್ರಣ ಕಳಿಸೋಣ. ನೂತನ ವರ್ಷಾರಂಭದ ದಿವಸವೇ ಇತ್ಯರ್ಥವಾಗ್ಲಿ."

ಉಳಿದವರು ಒಪ್ಪಿದರು. ಇಪ್ಯುವರ್ ಹೋಗಿ ಕರೆಯಬೇಕು, ಖ್ನೆಮ್ ಹೊಟೆಪ್ ಜತೆಗಿರಬೇಕು—ಎಂದು ತೀರ್ಮಾನವಾಯಿತು.

* * * *

ಹೊಸ ವರ್ಷದ ಆರಂಭ ಹತ್ತಿರ ಬಂದಿತೆಂದು ಊರಿನ ಜನರಿಗೆಲ್ಲ ಸಡಗರ. ಸವೀ ದಡದವರ ಉತ್ಸಾಹ ಒಳನಾಡಿಗೂ ಹಬ್ಬಿತು.

ಅಂಥ ವಾತಾವರಣದಲ್ಲಿ ಇಪ್ಯುವರ್ ಮತ್ತು ಖ್ನೆಮ್‌ಹೊಟೆಪ್ ಭೂಮಾಲಿಕರನ್ನು ಕಾಣಲು ಹೋದರು.

" ನೂತನ ವರ್ಷದ ದಿನ ರಾಜಗೃಹಕ್ಕೆ ಮಾತುಕತೆಗೆ ಬರಬೇಕೊಂತ ನಿಮ್ಮನ್ನೆಲ್ಲ ಕರೆದಿದ್ದಾರೆ. ಈ ವರ್ಷದ ಕಂದಾಯ ಮುಂದಿನ ವರ್ಷದ ಉತ್ತನೆ ಬಿತ್ತನೆ ಇವೆಲ್ಲ ಆವತ್ತು ತೀರ್ಮಾನವಾಗ್ಬೇಕು. ಬನ್ನಿ. ತಪ್ಪ ಬಾರ್ದು."

ಇಪ್ಯುವರ್ ಆಹ್ವಾನ ನೀಡಿದ.

ಅವರು ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಲಿಲ್ಲ. ಮೌನ ವಾಗಿದ್ದರು ಸಿನ್ಯುಹೆ ಮಾತ್ರ ಕೃತಕ ನಗೆ ಬೀರಿದ.

ಭೂಮಾಲಿಕರನ್ನು ರಾಜಗೃಹಕ್ಕೆ ಬರಹೇಳಿದ ಸುದ್ದಿ ಒಂದೇ ದಿನದಲ್ಲಿ ಮನೆ ಮಾತಾಯಿತು. ಆದರ ಬೆನ್ನಲ್ಲೇ ಇನ್ನೂ ಒಂದು ವದಂತಿ ಅಲೆಯಿತು: 'ನೂತನ ವರ್ಷಾರಂಭದ ಉತ್ಸವದಲ್ಲಿ ಭೂಮಾಲಿಕರು ಭಾಗವಹಿಸ್ತಾರಂತೆ.' ಖ್ನೆಮ್‌ಹೊಟೆಪ್ ವದಂತಿಯ ಮೂಲವನ್ನು ಕೆದಕಿದ. ಭೂಮಾಲಿಕರ ವಸತಿ ಪ್ರದೇಶದಿಂದಲೇ ಅದು ಬಂದಿತ್ತು.

ಮೂರನೆಯ ದಿನ ಬಟಾ ಓಡಿಬಂದ.

"ಖ್ನೆಮ್, ಸೆತೆಕ್‌ನಖ್ತ್‌ನ ದೊಡ್ಡ ದೋಣಿ ಇದೆ ನೋಡು—ನಮ್ಮ ಕಟ್ಟೆಯ ಕೆಳಗಡೆ ದಂಡೆಯ ಮೇಲೆ ? ತಾಳೆಗರಿ ಮುಚ್ಚಿತ್ತಲ್ಲ ? ಅದಕ್ಕೆ ಬಣ್ಣ ಗಿಣ್ಣ ಬಳಿತಿದ್ದಾರೆ," ಎಂದ.

" ಉತ್ಸವಕ್ಕೆ ತಯಾರಿ—ಅನ್ನಾರೆ; ಅಲ್ವಾ ?"

" ಹೌದು."

ಹಬ್ಬದ ಮುನ್ನಾದಿನ ಹಿರಿಯರ ಸಮಿತಿ ಅವಸರವಾಗಿ ಸಭೆ ಸೇರಿತು. ಸೆತೆಕ್‌ನಖ್ತ್, ಸೆನ್‌ಉಸರ್ಟ್ ಮತ್ತು ಹೆಜಿರೆ ಸೊಥಿಸ್ ನಕ್ಷತ್ರದ ಉದಯದ ರಾತ್ರಿ ಸಕುಟುಂಬರಾಗಿ ರಾಜಧಾನಿಗೆ ಪಲಾಯನ ಮಾಡುವರೆಂಬ ಖಚಿತ ವಾರ್ತೆ ತಿಳಿದುಬಂದಿತ್ತು.

ಖ್ನೆಮ್‌ಹೊಟೆಪ್ ವರದಿ ಮಾಡಿದ :

" ಎಲ್ಲರೂ ಉತ್ಸವದ ಆಚರಣೆಯಲ್ಲಿರುವಾಗ ಓಡಿಹೋಗೋದು

ಸುಲಭವಾಗ್ತದೇಂತ ಈ ಏರ್ಪಾಟು."

ಹೆಮ್‌ಟೆ ಅಭಿಪ್ರಾಯವಿತ್ತು :

"ಬಟಾನ ಒಂದು ದೋಣಿ ಸಾಕು. ನಡುನದೀಲೇ ಅವರನ್ನೆಲ್ಲ ಹಿಡೀಬೌದು."

"ಹಿಡಿದು ಮಾಡೋದೇನು ?" ಎಂದು ಕೇಳಿದ ಮೆನೆಪ್‌ಟಾ.

"ಹ್ಞ. ಅದು ಬೇರೆಯೇ ಪ್ರಶ್ನೆ. ಚರ್ಚಿಸ್ಬೇಕು."

ಥಾನಿಸ್ ಕೇಳಿದ :

"ಹಿಡೀಲೇಬೇಕೇನು ?"

ಸೆಮನೆಂದ :

"ಹಿಡಿದರೆ ಇಲ್ಲಿಯೇ ಸೆರೆಯಲ್ಲಿಡಬೇಕು. ಕಾವಲು ಏರ್ಪಡಿಸ್ಬೇಕು. ಹೋಗೋದಕ್ಕೆ ಬಿಟ್ಟರೆ ? ಈಗ ಸುಟ್‌ಮೋಸ್ ಹೋಗಿಲ್ವಾ ? ಗೇಬು ಟೆಹುಟಿ ಓಡಿಲ್ವಾ ?"

ಹೆಮೋನ್ ನುಡಿದ :

"ಇವರ ಹೊಲಗಳು, ರಾಸುಗಳು ?"

"ಅವು ಜನರ ಸೊತ್ತು," ಎಂದ ಮೆನೆಪ್‌ಟಾ.

ಥಾನಿಸ್‌ಗೊಂದು ಸಂದೇಹವಿತ್ತು :

"ಇವರೆಲ್ಲ ಮರಳಿ ಬಂದಾಗ ಏನಾಗ್ತದೆ ?"

ಮೆನೆಪ್‌ಟಾ ದೃಢವಾಗಿ ಅಂದ :

"ಮರಳಿ ಬಂದರೆ—ಅಲ್ಲವಾ ? ಅಂಥ ಪರಿಸ್ಥಿತೀಲಿ ಯಾವುದು ನ್ಯಾಯೋಚಿತ ಅನಿಸ್ತದೋ ಅದನ್ನು ಮಾಡೋಣ."

ಹೆಮ್‌ಟೆ ಹೇಳಿದ :

"ಆಕ್ರಮಣಕಾರರು ಬಂದ ಮೇಲೆ ಶಸ್ತ್ರಾಭ್ಯಾಸ ಸಲ್ಲದು. ನಮ್ಮ ದಂಡು ನಾವು ಸಿದ್ಧಗೊಳಿಸ್ಬೇಕು. ನಾನು ತರಬೇತಿ ಕೊಡ್ತೇನೆ."

ಓಡಿಹೋಗುವವರನ್ನು ತಡೆಯುವುದು ಬೇಡವೆಂದೂ ನೀರಾನೆ ಪ್ರಾಂತದ ರಕ್ಷಣೆಗಾಗಿ ದಂಡು ಕಟ್ಟಬೇಕೆಂದೂ ಹಿರಿಯರ ಸಮಿತಿ ನಿರ್ದೇಶ ನೀಡಿತು.

ಕಾಲು ಕೆದರಿ ಭೂಮಾಲಿಕರನ್ನು ಜಗಳಕ್ಕೆ ಕರೆಯುವುದರಲ್ಲಿ ಅರ್ಥವಿಲ್ಲ. ಎಂಬುದನ್ನು ಖ್ನೆಮ್‌ಹೊಟೆಪ್ ಒಪ್ಪಿಕೊಳ್ಳಬೇಕಾಯಿತು.

* * * *

ವರ್ಷಾರಂಭದ ರಾತ್ರಿ ಐಗುಪ್ತದ ಎಲ್ಲರಿಗೆ ಎಚ್ಚರ. ಆಕಾಶದಲ್ಲಿ ಅತ್ಯುಜ್ವಲ ಪ್ರಭೆಯಿಂದ ಬೆಳಗುವ ಸೊಥಿಸ್ ನಕ್ಷತ್ರದ ವಿಷಯದಲ್ಲಿ ಆ ಜನರದು ಭಕ್ತಿ ಭಾವ. ಆ ನಕ್ಷತ್ರವನ್ನು ಗುರುತಿಸಲು ಚಿಕ್ಕಂದಿನಿಂದಲೇ ಮಕ್ಕಳಿಗೆ ಹೇಳಿಕೊಡುತ್ತಿದ್ದರು. ಸೊಥಿಸ್‌ನ ಚಲನೆಯನ್ನು ಆಧರಿಸಿ ಅಲ್ಲಿ ಋತುಗಳ ಗಣನೆ.

ಇಂದು ರಾತ್ರಿಯಲ್ಲಿ ಹಬ್ಬಕ್ಕೆ ಸಿದ್ಧತೆ. ಮುಂಜಾನೆಗೆ ಮುನ್ನ ಪೂರ್ವ ದಿಗಂತದಲ್ಲಿ ಸೊಥಿಸ್ ಕಾಣಿಸಿಕೊಂಡೊಡನೆ ಜನರಿಗೆ ನೀಲನದಿಯಲ್ಲಿ ಸ್ನಾನ. ಸ್ನಾನದ ಬಳಿಕ ಹೊಸ ಬಟ್ಟೆಯುಟ್ಟು ಹಬ್ಬದಡುಗೆಯ ಊಟ. ಯಾವುದೇ ಒಳ್ಳೆಯ ಕೆಲಸ ಪ್ರಾರಂಭಿಸಲು ಅದು ಯೋಗ್ಯ ದಿನ. ಸಂಜೆ ದೇವಮಂದಿರಕ್ಕೆ ಸ್ತ್ರೀಪುರುಷರ ಪರಿಷೆ. ಮಂದಿರದಲ್ಲಿ ಅಂದು ದೀಪಾಲಂಕಾರ.

"ಈ ರಾತ್ರಿ ನನಗೂ ಜಾಗರ. ಸೊಥಿಸ್ ಉದಯಿಸಿದ ಮೇಲೆಯೇ ನಾನು ಮಲಗೋದು," ಎಂದು ಸಾರಿದ ರಾಮೆರಿಪ್‌ಟಾ.

"ಚಿಕ್ಕವರು ಹೆಚ್ಚು ನಿದ್ದೆ ಕೆಡಬಾರದು. ನಾಳೆ ಪಾಠಶಾಲೆ ಆರಂಭ," ಎಂದ ಮೆನೆಪ್‌ಟಾ.

"ನಕ್ಷತ್ರದ ಉದಯಕ್ಕೆ ಮುಂಚೆಯೇ ನಿನ್ನನ್ನು ಎಬ್ಬಿಸ್ತೇವೆ," ಎಂದು ಮಗನನ್ನು ಸಮಾಧಾನಪಡಿಸಲು ನೆಫಿಸ್ ಯತ್ನಿಸಿದಳು.

"ಆ ಮೇಲೆ ಮರೆತುಬಿಡ್ತೀಯಾ," ಎಂದು ತನ್ನ ಶಂಕೆಯನ್ನು ರಾಮೆರಿಪ್‌ಟಾ ವ್ಯಕ್ತಪಡಿಸಿದ.

ಗಂಡ ಹೆಂಡತಿ ಪರಸ್ಪರರನ್ನು ನೋಡಿದರು.

"ನಿದ್ದೆ ಬರೋವರೆಗೂ ಕೂತಿರು. ನಿದ್ದೆ ಬಂದ್ಮೇಲೆ ಮಲಕೋ. ನಾನು ಎಬ್ಬಿಸ್ತೇನೆ," ಎಂದ ಮೆನೆಪ್‌ಟಾ."

ಹೊರಗೆ ಸಂಗೀತ ವಾದ್ಯಗಳಿಂದ ರಾಗದ ಅಲೆಗಳು. ಹಾಡುಗಾರಿಕೆ. ಎಲ್ಲಿಯೋ ಕುಣಿತಕ್ಕೆ ತಾಳ ಬಡೆಯುತ್ತಿದ್ದರು ಲಯಬದ್ಧವಾಗಿ. ಕೇಕೆ

ಹಾಕುತ್ತಿದ್ದರು ಇನ್ನೊಂದೆಡೆ. ಚಂದ್ರನಿಲ್ಲದ ರಾತ್ರಿ. ಅಲ್ಲಿ ಇಲ್ಲಿ ಸುಟ್ಟ ರಂಜಕದಿಂದ ಬೆಳಕು ಚಿಮ್ಮುತ್ತಿತ್ತು. ನಡುವಿರುಳಿನ ಸುಮಾರಿಗೆ ರಾಮೆರಿಪ್‌ಟಾ ತೂಕಡಿಸಿದ. ನೆಫಿಸ್ ಹಾಸಿಕೊಟ್ಟು ಅವನನ್ನು ಮಲಗಿಸಿದಳು. ಕುಳಿರು ಗಾಳಿ ಬೀಸತೊಡಗಿ ಚಳಿ ಎನಿಸಿತು. ಪೆಪೈರಸ್ ಕಾಂಡದ ಚೂರುಗಳನ್ನು ಮೆನೆಪ್‌ಟಾ ಒಲೆಗೆ ಹಾಕಿ ಕೆಂಡಗಳ ಬಿಸಿ ಪಸರುವಂತೆ ಮಾಡಿದ.

ಹೊರಗೆ ನಾಲ್ಕಾರು ಜನ ನಡೆದು ಬರುತ್ತಿರುವ ಸದ್ದು ಕೇಳಿಸಿತು. ಖ್ನೆಮ್‌ಹೊಟೆಪನ ಕಾವಲು ತಂಡದವರಿರಬೇಕು ಎಂದು ಊಹಿಸಿದ. ಸದ್ದು ಹತ್ತಿರ ಬಂದು ನಿಂತಿತು.

ಜಾಲಂದ್ರದ ಬಳಿ ಹೋಗಿ ಮೆನೆಪ್‌ಟಾ, "ಯಾರದು ?" ಎಂದ.

ಉತ್ತರಿಸಿದವನು ಖ್ನೆಮ್.

" ನಾವು. ವಿಶೇಷವೇನೂ ಇಲ್ಲ. ಬಟಾ ದೋಣಿಕಟ್ಟೇಲಿದ್ದಾನೆ."

" ಸುಮ್ಮನೆ ಲಕ್ಷ್ಯ ಇಟ್ಟರಿ ಸಾಕು. ಹೋಗುವವರು ಹೋಗಲಿ."

" ಹೂಂ. ಅಷ್ಟೇ ಮಾಡ್ತೇವೆ. ಸ್ನಾನಕ್ಕೆ—"

" ಬರ್ತೇವೆ, ಬರ್ತೇವೆ....ಇನ್ನೂ ಸುಮಾರು ಹೊತ್ತು ಇದೆಯಲ್ಲ ?"

" ನಾವು ಮುಂದೆ ಹೋಗ್ತೇವೆ."

" ಹೂಂ. ಹೂಂ."

ಕಾವಲಿನವರ ಪಾದಗಳು ಮತ್ತೆ ಸದ್ದು ಮಾಡಿ ದೂರ ಸಾಗಿ, ಮೌನ ನೆಲೆಸಿದ ಬಳಿಕ ನೆಫಿಸ್ ದೀಪ ಆರಿಸಿದಳು. ಮೆನೆಪ್‌ಟಾ ಚಾಪೆ ಹಚ್ಚಡಗಳಿದ್ದ ಇನ್ನೊಂದು ಮೂಲೆಯಲ್ಲಿದ್ದ. ಮೆಲ್ಲನೆ ಬಳಿಸಾರಿದ ನೆಫಿಸ್‌ಳನ್ನು ತೋಳು ಚಾಚಿ ಅವನು ಬರಮಾಡಿಕೊಂಡ. ತುಟಿಗಳು ತುಟಿಗಳನ್ನು ಸಂಧಿಸಿದುವು, ಒತ್ತಿದುವು. ಆಕೆಯ ಅಂಗಾಂಗಗಳ ಏರುತಗ್ಗುಗಳಲ್ಲಿ ಅವನ ಬೆರಳುಗಳು ಓಡಾಡಿದುವು. ಆತನ ಎದೆಯನ್ನು ತನ್ನ ನಾಲಗೆಯಿಂದ ಒದ್ದೆ ಮಾಡುತ್ತ ನೆಫಿಸ್ ಸಣ್ಣನೆ ನರಳಿದಳು.

ಮೆನಪ್‌ಟಾ ಕೇಳಿದ :

" ಏನು ನೆಫಿ ?"

ಖಿನ್ನ ಸ್ವರ ನುಡಿಯಿತು :

"ಬಸಿರು ನಿಲ್ಲಲೇ ಇಲ್ಲ."

ಅವನು ಮಗುವಾಗಿ ಅವಳ ಸ್ತನಗಳನ್ನು ಚೀಪಿದ.

ಪುಲಕಗೊಳ್ಳುತ್ತ ಅವಳು ರಾಗವೆಳೆದಳು :

"ಊ ಊ ಪ್‌ಟಾ ಪ್‌ಟಾ...."

"ನಾಳೆ ಹೊಸ ವರ್ಷ ನೆಫಿ."

ತಡೆ ತಡೆದು ಅವಳೆಂದಳು :

"ಇವತ್ತು ಐಸಿಸ್‌ಗೆ ವಿಶೇಷ ಪ್ರಾರ್ಥನೆ ಸಲ್ಲಿಸಿದ್ದೇನೆ."

"ಬಾ ಐಸಿಸ್."

ಸೃಷ್ಟಿಕಾರ್ಯದಲ್ಲಿ ತನ್ಮಯರಾಗುವ ಸುಖ. ಕರಗದಂತೆ ಆ ಸ್ಥಿತಿಯನ್ನು ಸೆರೆ ಹಿಡಿದು ಇಡುವ ಯತ್ನ.

("ಹೀಗೆಯೇ ಇರೋಣ." "ಹೂಂ. ಹೀಗೆಯೇ ಇರೋಣ.")

ಸುದೀರ್ಘವೆಂದು ಭ್ರಮೆ ಹುಟ್ಟಿಸುತ್ತ ಮುಂಜಾವದೆಡೆಗೆ ಧಾವಿಸಿದ ಇರುಳು.

ನಿದ್ದೆ ಇಲ್ಲ. ("ಎಚ್ಚರವಾಗದೇ ಇದ್ರೆ ?") ಅದು ಇದು ಮಾತು.

"ನನ್ನ ಚಿಕ್ಕಮ್ಮನ ಹಳ್ಳಿಗೆ ಒಮ್ಮೆ ಹೋಗ್ಬೇಕು. ಖ್ನೆಮ್‌ಹೊಟೆಪ್‌ನೇ ಭಾಗ್ಯಶಾಲಿ. ಕಂದಾಯ ವಸೂಲಿಗೆ ಹೋದವನು ಮಾತಾಡಿಸ್ಕೊಂಡು ಬಂದ."

"ಅವರನ್ನೇ ಇಲ್ಲಿಗೆ ಕರೆಸೋಣ."

"ಕರೆಸ್ಬಹುದು. ಆದರೆ ಇಲ್ಲೇನಿದೆ ? ರಾಣಿಯ ಹಾಗಿದ್ದಾಳೆ ನೆಫಿಸ್ ಅಂತ ಅವರು ತಿಳಕೊಂಡಿದ್ದಾರೆ. ಇಲ್ಲಿಗೆ ಬಂದು, ಅಯ್ಯೋ ಇಷ್ಟೇನೇ ಅನ್ಬಾರ್ದು."

"ನನಗೆ ನೀನು ಯಾವಾಗಲೂ ರಾಣಿಯೇ ಅಲ್ವಾ ?"

"ಮಾತಿನಲ್ಲೇ ಆಯ್ತು ನನ್ನ ರಾಣೀತನ."

"ಹೊಲ ಇದೆ. ದುಡೀತೇವೆ, ಬೆಳೆಸ್ತೇವೆ. ಸಾಲ್ದೆ ?"

"ಅದಲ್ಲ....ನೆಜಮುಟ್ ಯಾವಾಗಲೂ ಪರಿಹಾಸ್ಯ ಮಾಡ್ತಾಳೆ."

"ಅವಳಿಗೆ ಹೊತ್ತು ಹೋಗೋದಿಲ್ಲ."

ಮಾತನಾಡುವ ಓಡಾಡುವ ಜನರು ಹೊರಗೆ. ನದಿಯ ಕಡೆಗೆ ಹೊರಟವರು.

“ ನೆಫಿಸ್ ಏಳು. ರಾಮೆರಿನ ಎಬ್ಬಿಸು. ಹೊತ್ತಾಯ್ತು.”

ಕ್ಷೀಣವಾಗಿ ಆರಲು ಚಡಪಡಿಸುತ್ತಿದ್ದ ಕೆಂಡಗಳಿಂದಲೇ ಮೆನೆಪ್ಟಾ ದೀಪ ಹಚ್ಚಿದ.

“ ಸೊಥಿಸ್ ಕಾಣಿಸ್ಕೊಳ್ತಾ ? ಎಲ್ಲಿ ?” ಎನ್ನುತ್ತ ಗಡಬಡಿಸಿ ಎದ್ದ, ರಾಮೆರಿಪ್ಟಾ.

ಸ್ನಾನದ ಬಳಿಕ ಉಡಲು ಹೊಸ ಉಡುಪನ್ನು ನೆಫಿಸ್ ಎತ್ತಿಕೊಂಡಳು. ಅಪ್ಪುವಿನ ವಿಧವೆ ನೆಫಿಸಳಿಗೆಂದೇ ನೆಯ್ದು ಪ್ರೀತಿಯಿಂದ ಕೊಟ್ಟಿದ್ದ ಮೇಲುದವೂ ಆ ಕಟ್ಟಿನಲ್ಲಿ ಇತ್ತು.

ಹೊರಗೆ ತಮ್ಮ ಮನೆಯ ಮುಂದುಗಡೆ ಸ್ನೊಫ್ರು, ನೆಜಮುಟ್ ಹೊರಡಲು ಅನುವಾಗಿ ನಿಂತಿದ್ದರು. ಎಲ್ಲರೂ ಒಟ್ಟಿಗೆ ನದಿಯ ಕಡೆಗೆ ನಡೆದರು.

ಬೀದಿಯ ಕೊನೆಯಲ್ಲಿ ಒಬ್ಬ ಕಾವಲು ಭಟನನ್ನು ಕಂಡು ಸ್ನೊಫ್ರುವಿಗೆ ಸಂತೋಷವಾಯಿತು.

“ಎಲ್ಲರೂ ನದೀಸ್ನಾನಕ್ಕೆ ಹೋದಾಗ ಕಳ್ಳರು ಬರಬಹುದು ಅಂತ ಖ್ನೆಮುಗೆ ಹೇಳಿದ್ದೆ. ಆ ವಿಷಯ ನೀವು ಚಿಂತಿಸ್ಬೇಡಿ ಎಂದಿದ್ದ.”

“ ನಾವಂತೂ ಬಾಗಿಲಿಗೆ ಬೀಗಮುದ್ರೆ ಒತ್ತಿಲ್ಲ,” ಎಂದಳು ನೆಫಿಸ್.

ನೆಜಮುಟ್ ಅಂದಳು :

“ ನಾವೂ ಇಲ್ಲ.”

ನದೀ ತಟದಲ್ಲಿ ಖ್ನೆಮ್ ಮತ್ತು ಬಟಾ ಇವರಿಗಾಗಿ ಕಾಯುತ್ತಿದ್ದರು.

ಇಳಿದನಿಯಲ್ಲಿ ಖ್ನೆಮ್‌ಹೊಟೆಪ್ ವರದಿಮಾಡಿದ :

“ ನಾವು ಗಸ್ತಿ ಮುಗಿಸಿ ಬಂದ ಸ್ವಲ್ಪ ಹೊತ್ನಲ್ಲೇ ಓಡಿಹೋದ್ರು. ಜತೇಲಿ, ಹೆಂಡತಿ ಮಕ್ಕಳು ಒಬ್ಬಿಬ್ಬರು ದಾಸದಾಸಿಯರು. ಸಿನ್ಯುಹೆ ಮಾತ್ರ ಇಲ್ಲೇ ಇದ್ದಾನೆ. ನುಟ್‌ಮೋಸನ ಕುಟುಂಬವೂ ಇದೆ. ಆಭರಣ ಬೆಲೆ ಬಾಳೋ ಸಾಮಾನು ತಗೊಂಡು ಹೋಗಿದ್ದಾರೆ. ಬಿತ್ತನೆ ಹೊತ್ತಿಗೆ

ಬಂದ್ಬಿಟ್ಟಿದ್ದೇವೆ ಅಂತ ಸೇವಕರಿಗೆ ಹೇಳಿದ್ದಾರೆ."

ಮೆನೆಪ್‌ಟಾ "ಸರಿ. ನಿರೀಕ್ಷಿಸಿದ್ದ ಹಾಗೆಯೇ ಆಯ್ತು" ಎನ್ನುವಷ್ಟ ರಲ್ಲಿ ಸಹಸ್ರಾರು ಕಂಠಗಳಿಂದ "ಸೊಥಿಸ್" ಪದ ಹೊರಟಿತು. ಪೂರ್ವದ ಬಾನಂಚಿನತ್ತ ದೃಷ್ಟಿ. ಅಲ್ಲಿ ಮುಖ ತೋರಿಸಿತ್ತು ಉಜ್ವಲ ನೀಲಿಯ ಸೊಥಿಸ್ ನಕ್ಷತ್ರ. ಜನ ನದಿದಂಡೆಯ ಮೇಲೆ ಮೈಚಾಚಿ ಆ ದೇವತೆಗೆ ನಮಿಸಿದರು. ಇದು ಉಸಿರು ಬಿಗಿ ಹಿಡಿಯುವ ಭಕ್ತಿಯಲ್ಲ, ಉಕ್ಕಿ ಹರಿಯುವ ಸಂತಸ.

ಅರ್ಚಕ ಅಪೆಟ್ ಆಗಲೇ ಆಗಮಿಸಿದ್ದ. ದೋಣಿಕಟ್ಟೆಯ ತುಸು ದಕ್ಷಿಣಕ್ಕೆ ಕಡಿಮೆ ಆಳದ ಸ್ನಾನಘಟ್ಟದಲ್ಲಿ ಅವನ ಮಂತ್ರಪಠಣ, ಸ್ನಾನ.

ಗಂಡಸರು ಹೆಂಗಸರು ಮಕ್ಕಳು ಮಿಂದರು, ಹೊಸ ಉಡುಪು ಧರಿಸಿದರು, ಮನೆಗಳಲ್ಲಿ ತಮ್ಮನ್ನು ಇದಿರುನೋಡುತ್ತಿದ್ದ ಹಬ್ಬದಡುಗೆಯ ಕಡೆಗೆ ಸಾಗಿದರು.

* * * *

....ಡಂಗುರ ಸಾರಿದ್ದರೂ, ಹೆತ್ತವರು ಯಾರೂ ತಾವಾಗಿ ತಮ್ಮ ಮಕ್ಕಳ ಹೆಸರು ಹಚ್ಚಿಸಲು ಮುಂದೆ ಬಂದಿರಲಿಲ್ಲ. ಸೆನು ಒಂದು ದಿನವೆಲ್ಲ ಅಲೆದು, ಐವರು ಹುಡುಗರನ್ನು ಕಲೆಹಾಕಿದ. ಅವರಲ್ಲೊಬ್ಬ ಅನ್ಪುವಿನ ಎರಡನೆಯ ಮಗ. ರಾಮೆರಿಪ್‌ಟಾನನ್ನೂ ಆ ಐವರನ್ನೂ ಇಪ್ಯುವರ್ ದೇವರ ದರ್ಶನಕ್ಕಾಗಿ ಮಂದಿರಕ್ಕೆ ಕರೆದೊಯ್ದ.

"ಒಂದು ಉಪಕಾರ ಮಾಡಪ್ಪ, ಇಪ್ಯುವರ್. ಶಾಲಾ ಕಟ್ಟಡದ ಕಾರ್ಯ ಶುರುಮಾಡೋದಕ್ಕೆ ಇವತ್ತು ಶುಭ ದಿವಸ. ಅಡಿಪಾಯಕ್ಕಾಗಿ ಹತ್ತಾಳು ಒಂದಿಷ್ಟು ಅಗೀಲಿ," ಎಂದ ಅಪೆಟ್.

ರಾಜಗೃಹದಲ್ಲಿ ರಾಮೆರಿಪ್‌ಟಾ ಮತ್ತು ಐವರು ಮೊದಲ ಪಾಠ ಹೇಳಿಸಿಕೊಂಡರು. ಅಬ್ಟು ಜಾತ್ರೆಯಿಂದ ಮೆನೆಪ್‌ಟಾ ತಂದಿದ್ದ ಲಿಪಿಸುರುಳಿಯ ವಾಚನವೇ ಆ ಪಾಠ. ಗುರು ಓದಿದ್ದನ್ನು ("ನಿನ್ನ ತಾಯಿ ನಿನಗಾಗಿ ಏನೇನು ಮಾಡಿರುವಳೆಂಬುದನ್ನು ನೀನೆಂದೂ ಮರೆಯಬಾರದು.") ಶಿಷ್ಯರು ಪುನರುಚ್ಚರಿಸಿದರು.

ಪಾಠ ಮುಗಿಸಿ ರಾಜಗೃಹದಿಂದ ಮರಳಿದ ಈ ಹುಡುಗರ ತಂಡವನ್ನು ಊರಿನ ಜನ ಕೌತುಕದ ನೋಟದಿಂದ ಕಂಡರು.

ಒಳಗಿನ ಸಂಕಟವನ್ನು ಮರೆಮಾಚಲು ಶಾಲಾ ಕಟ್ಟಡದ ಮಾತನ್ನು ಅಪೆಟ್ ಆಡಿದ್ದ. ಇಪ್ಯುವರ್‌ಗೂ ಅದು ಅರ್ಥವಾಗದ್ದಲ್ಲ. ಎಂದಿನಂತೆ ಮೆನೆಪಾಟಾ ರಾಜಗೃಹಕ್ಕೆ ಬಂದಾಗ ಅಪೆಟ್ ಹೇಳಿದ್ದನ್ನು ಇಪ್ಯುವರ್ ಅವನಿಗೆ ತಿಳಿಸಿದ.

"ಶಾಲೆಗೆ ಕಟ್ಟಡ ಮಂದಿರದ ಪಕ್ಕದಲ್ಲಿ ಅರ್ಚಕರು ಗೆರೆ ಹಾಕಿ ಕೊಡ್ತಾರೆ. ಅಡಿಪಾಯದ ಕೆಲಸ ಶುರುವಾಗ್ಲಿ." ಎಂದು ಮೆನೆಪ್‌ಟಾ ಖ್ನೆಮ್ ಹೊಟೆಪ್‌ಗೆ ತಿಳಿಸಿದ.

ಹತ್ತಾಳು ಸಿದ್ಧರಾದರು; ಒಬ್ಬ ಕಾಪೀರು ನಿಯೋಜಿತನಾದ.

ವಿದ್ಯೆಗೆ ಸಂಬಂಧಿಸಿದ ಕಟ್ಟಡ ಎಂಬುದನ್ನು ತಿಳಿದ ಆಳುಗಳೆಂದರು:

"ಇವತ್ತಿನ ಕೆಲಸಕ್ಕೆ ವೇತನ ಬೇಡ. ನಾಳೆಯಿಂದ ಲೆಕ್ಕ ಇಟ್ಟರೆ ಸಾಕು."

* * * *

ನೀಲನದಿಯ ಮೂಲ ನೀರಾನೆ ಪ್ರಾಂತದಿಂದ ಹತ್ತಾರು ದಿನಗಳ ದೋಣಿ ಪ್ರವಾಸದ ದೂರ. ಅಲ್ಲಿ ಮಳೆಗಾಲ ಸನ್ನಿಹಿತವಾಗಿದೆ ಎಂದು ಸಾರಿತ್ತು, ಸೊಥಿಸ್ ನಕ್ಷತ್ರ. ಗಿರಿ ಕಂದರ ಕಾನನಗಳ ವಿಸ್ತಾರ ಪ್ರದೇಶದಲ್ಲಿ ನೀರು ಸಂಗ್ರಹವಾಗಿ ನದಿಯನ್ನು ಸೇರಬೇಕು. ಏಳು ಮಹಾ ತಿರುವುಗಳಲ್ಲಿ ಹರಿದು, ಐಗುಪ್ತದ ಮರಳುಗಾಡಿಗೆ—ಬಯಲಿಗೆ—ಬರಬೇಕು. ಪ್ರವಾಹ ಉಕ್ಕೇರಿದಾಗ ಕೊಚ್ಚಿತಂದ ಫಲವತ್ತಾದ ಕರಿಯ ಮಣ್ಣೆಲ್ಲ ಇಕ್ಕೆಲಗಳಲ್ಲೂ ವಿಸ್ತಾರ ಹೊಲಗಳ ಪಾಲು. ನಾಲ್ಕು ತಿಂಗಳು ಹಾಗೆಯೇ ನಿಂತ ಮಹಾ ಪೂರ ಇಳಿದ ಮೇಲೆ ಬೇಸಾಯ.

ಭೂಮಾಲಿಕರ ಪಲಾಯನದಿಂದ ಹಬ್ಬದ ಸಂಭ್ರಮಕ್ಕೆ ಕಳೆಕಟ್ಟಿತು.

"ಬಿತ್ತನೆ ವೇಳೆಗೆ ಇವರು ವಾಪಸು ಬರೋದೆಲ್ಲ ಸುಳ್ಳು," ಎಂದರು ಜನ.

ಹಬ್ಬದಂದು ಅಪರಾಹ್ನ ಹಿರಿಯರ ಸಮಿತಿಯ ಸಭೆಯ ಮುಂದೆ ಖ್ನೆಮ್

ಹೊಟೆಪ್ ತನ್ನ ವಾದವನ್ನು ಮಂಡಿಸಿದ :

“ ಅವತ್ತು ನಾಯಕರು ಹೇಳಿದ್ರು—ಭೂಮಾಲಿಕರ ಹೊಲ ರಾಸು ಜನರ ಸ್ವೊತ್ತು ಅಂತ. ನುಟ್‌ಮೋಸ್, ಸೆತೆಕ್‌ನಖ್ತ್, ಸೆನ್‌ಉಸರ್ಟ್, ಹೆಜಿರೆ ಜನದ್ರೋಹಿಗಳು. ಇವರ ವಿಷಯದಲ್ಲಿ ಯಾವುದೇ ಕನಿಕರ ತೋರಿಸ ಬಾರ್ದು. ನುಟ್‌ಮೋಸ್ ಒಬ್ಬನದೇ ಐದುನೂರು ಹೊಲಗಳಿವೆ. ಹದಿನೈದು ನೂರು ರಾಸುಗಳಿವೆ. ಉಳಿದ ಮೂವರದು ಒಟ್ಟಿಗೆ ಸೇರಿಸಿದರೆ ಸುಮಾರು ಅಷ್ಟೇ ಆಗ್ತವೆ. ಹಂಚಬೇಕು ! ಹಂಚಬೇಕು ! ಇಷ್ಟು ಕಾಲ ಜನರ ಸುಲಿಗೆ ಮಾಡಿದರಲ್ಲ—ಸಾಕು ಇನ್ನು. ಮಹಾಪೂರ ಬಂದು ಇಳಿಯೋತನಕ ಕಾಯಬಾರ್ದು. ಈಗಲೇ ಹಂಚಿದರೆ ಹೊಲ ದೊರೆತವರು ಆತುರದಿಂದ ಬಿತ್ತನೆ ದಿನವನ್ನು ಇದಿರು ನೋಡ್ತಾರೆ.”

ಮೆನೆಪ್‌ಟಾನೆಂದ :

“ ಎಲ್ಲ ಭೂಮಾಲಿಕರ ಜೀತದ ಆಳುಗಳನ್ನು ಬಂಧಮುಕ್ತರು ಅಂತ ಸಾರೋದು ಮೊದಲ್ನೇ ಕೆಲಸ; ಹೊಲ–ರಾಸುಗಳ ವಿತರಣೆ ಎರಡನೆ ಕೆಲಸ. ಆ ಜನರಿಗೆ ಹಂಚಿ ಆದಮೇಲೆ ಉಳಿಯೋದನ್ನು ಬೇರೆಯವರಿಗೆ—ಅರ್ಹ ರಾದವರಿಗೆ—ಕೊಡಬಹುದು.”

ಖ್ನೆಮ್ ಮಾತು ಸೇರಿಸಿದ :

“ ನಮ್ಮ ಕಾವಲು ಭಟರಲ್ಲಿ ಎಷ್ಟೋ ಜನ ಹೊಲವಿಲ್ಲದವರು. ಅದನ್ನು ಗಮನದಲ್ಲಿ ಇಟ್ಕೋಬೇಕು.”

ಸಮಿತಿಯ ತೀರ್ಮಾನದಂತೆ, ಭೂಮಾಲಿಕರ ಜೀತದಾಳುಗಳು ಸ್ವತಂತ್ರರಾದರು. ಹೊಲದೊಡೆಯರ ಆಸ್ತಿ ಪಾಸ್ತಿ ಜನರ ಸ್ವೊತ್ತಾಯಿತು.

“ ಸಿನ್ಯುಹೆಯ ಆಳುಗಳು ?” ಎಂದು ಕೇಳಿದ ಇಪ್ಯುವರ್.

ಮೆನೆಪ್‌ಟಾನೆಂದ :

“ ಅವರೂ ವಿಮುಕ್ತರೇ. ಕೆಲಸಕ್ಕೆ ಜನ ಬೇಕಾದರೆ ಸಿನ್ಯುಹೆ ವೇತನ ಕೊಟ್ಟು ನೇಮಿಸ್ಕೊಳ್ಳಿ.”

“ ಅವನ ಆಸ್ತಿ ?”

“ ಸಿನ್ಯುಹೆಯ ಕುಟುಂಬದ ಜೀವನ ನಿರ್ವಹಣಕ್ಕೆ ಬೇಕಾದಷ್ಟು

ಬಿಟ್ಟು ಮಿಕ್ಕಿದ್ದನ್ನು ಹಂಚೋಣ. ನುಟ್‌ಮೋಸನ ಕುಟುಂಬದ ವಿಷಯ ದಲ್ಲೂ ಅಷ್ಟೆ."

ಇಪ್ಯುವರ್ ತಲೆತುರಿಸಿ, "ನಾನೊಂದು ಹೇಳಬೌದಾ ?" ಎಂದ.

ಸೆಮು ಎಂದ :

"ಹೇಳಿ. ಅದಕ್ಕೇನು ?"

"ಭೂಮಾಲಿಕರ ಮನೆಗಳಲ್ಲಿ ಹಿರಿಯರು ವಾಸ ಮಾಡಿದರೆ ಚೆನ್ನಾಗಿರ್ತದೆ."

ಮೆನೆಪ್‌ಟಾ ನಸುನಕ್ಕು ಅಂದ :

"ನೀವ್ಬೊಬ್ಬರೇ ದೊಡ್ಡ ಮನೆಯ ನಿವಾಸಿ ಅಂತ ಇನ್ನೂ ಸಂಕೋಚ ಪಡ್ತಾ ಇದ್ದೀರಾ ?"

ನಗೆಯ ಅಲೆಗಳು ಅಂಗಳ ದಾಟಿ ಉದ್ಯಾನದತ್ತ ಚಲಿಸಿದುವು. ಇಪ್ಯುವರ್ ತಾನೂ ಹಲ್ಲುಗಳನ್ನು ತೋರಿಸಿ, ತಲೆ ತುರಿಸಿಕೊಂಡ.

ಮುಂದಿನ ಎರಡು ಮೂರು ದಿನ ಅವನಿಗೆ ಸರಿಯಾಗಿ ಆಹಾರ ಸೇವಿಸು ವುದಕ್ಕೂ ಬಿಡುವಿಲ್ಲದ ದುಡಿಮೆ. ಭೂಮಾಲಿಕರ ಹಳೆಯ ದಾಖಲೆ ಪತ್ರ ಗಳನ್ನು ತೆಗೆದು ವಸ್ತುಸ್ಥಿತಿಗೆ ತಾಳೆ ನೋಡುವ ಕೆಲಸ. ದಾಸದಾಸಿಯರ ಗಣತಿಯೂ ಆಯಿತು. (ತಾವು ನಿಜವಾಗಿಯೂ ವಿಮುಕ್ತರೇ ಎಂಬುದನ್ನು ಪರೀಕ್ಷಿಸಲು ಭೂಮಾಲಿಕರ ಸೇವಕ ಗಣ ಊರಲ್ಲಿ ಅಲೆದಾಡಿ ಬಂತು.) 'ಹಗ್ಗ ಎಳೆಯುವ' ಕೆಲಸ ನಡೆಯಿತು. ಹಂಚುವುದಕ್ಕೋಸ್ಕರ ಒಂದೇ ಆಕಾರದ ಹೊಲಗಳನ್ನು ಗುರುತಿಸಿದ್ದಾಯಿತು. ಆತನಕ ಉಳುತ್ತಿದ್ದವರು ಈಗ ಒಡೆಯರಾದರು. ಹಂಚಿ ಉಳಿದುದು ಊರಿನ ಇತರ ಭೂವಿಹೀನರಿಗೆ ದೊರೆಯಿತು.

ರಾಸುಗಳ ವಿತರಣೆಯೂ ಆಗುತ್ತಿದೆ ಎಂದು ಅರಿತಾಗ ನೆಫಿಸ್ ಗಂಡ ನೊಡನೆ ಅಂದಳು :

"ಉಳೋದಕ್ಕೆ ಒಂದುಜತೆ ಹೋರಿ ನಾವು ತೆಗೆದುಕೊಳ್ಳೋದು ತಪ್ಪಾ ದೀತು—ಅಲ್ವಾ ?"

"ತಪ್ಪಲ್ಲದೆ ! ನಾನು ಹಂಚೋದು—ನಾನೇ ಪಡೆಯೋದು ! ಆ

ವಿಷಯ ಮರೆತ್ಬಿಡು. ನಮಗೆ ಹೋರಿಗಳು ಬೇಕು ನಿಜ. ಮುಂದಿನ ವರ್ಷ ಕೊಂಡ್ಕೊಳ್ಳೋಣ."

ನುಟ್‌ಮೋಸ್‌ನ ಕುಟುಂಬ ಸಿನ್ಯುಹೆಯ ಮನೆಯಲ್ಲಿ ನೆಲೆಸಿತು.

ಇಪ್ಯುವರ್ ಹೇಳಿದ :

"ನಿಮ್ಮ ಮನೆಯಲ್ಲೇ ನೀವಿರಬಹುದಲ್ಲ. ನಮ್ಮ ಆಕ್ಷೇಪವಿಲ್ಲ. ನಿಮ್ಮ ಜೀವನೋಪಾಯಕ್ಕೆ ಸಾಲುವಷ್ಟು ಹೊಲಗಳನ್ನು ನಿಮಗೆ ಬಿಟ್ಟಿದ್ದೇವೆ."

ನುಟ್‌ಮೋಸನ ಪತ್ನಿ ಹೊಲಗಳ ವಿಷಯ ಏನನ್ನೂ ಹೇಳಲಿಲ್ಲ. ಆದರೆ ವಾಸ ಮಾತ್ರ ಸಿನ್ಯುಹೆಯ ಮನೆಯಲ್ಲೇ ಎಂದಳು.

ಹೀಗಾಗಿ ನಾಲ್ಕು ದೊಡ್ಡ ಮನೆಗಳೂ ಬಡವರ ವಾಸಕ್ಕೆ ದೊರೆತುವು.

ಹೊಸ ಯಜಮಾನರಿಗೆ ಹೊಲಗಳನ್ನು ಹಸ್ತಾಂತರಗೊಳಿಸಿದ ದಿನ ರಾಜಗೃಹದ ವಿಹಾರೋದ್ಯಾನದಲ್ಲಿ ಜನ ನೆರೆದರು. ಸುರೆ ಹರಿಯಿತು. ಹಾಡು–ಕುಣಿತಗಳಲ್ಲಿ ಕಾಲ ಕಳೆಯಿತು.

ನದೀ ತಟಕ್ಕೆ ಹೋಗಿ ಬಂದವನೊಬ್ಬ : "ನಾಲ್ಕು ಬೆರಳು ನೀರು ಏರಿದೆ," ಎಂದ.

ಪರಿಸರದ ಹೊಲಗಳೆಲ್ಲ ಜಲಾವೃತವಾಗಲು ನೀರಿನ ಮಟ್ಟ ನಾಲ್ಕಾಳು ಏರಬೇಕು.

ಅದನ್ನು ಇದಿರು ನೋಡುತ್ತ ಜನ ಇತರ ದುಡಿಮೆಗಳಲ್ಲಿ ಮಗ್ನ ರಾದರು.

* * * *

ಧಾರಾಕಾರವಾದ ಮಳೆ ಎಂದರೇನೆಂಬುದನ್ನು ಅರಿತಿದ್ದವರು ನದಿಯ ಮೂಲದತ್ತ ಸಂಚಾರಮಾಡಿದ್ದ ಅಂಬಿಗರು ಮಾತ್ರ.

ಅರ್ಚಕ ಒಮ್ಮೆ ಹೇಳಿದ್ದ :

"ರಾ ದೇವರು ತನ್ನ ಐಗುಪ್ತ ಸಂತಾನಕ್ಕಾಗಿ ನೆಲದ ಮೇಲೆಯೇ ಒಂದು ನೀಲ ನದಿಯನ್ನು ಕೊಟ್ಟ; ಬೇರೆ ಜನರಿಗಾಗಿ ಆಕಾಶದಲ್ಲೊಂದು

ನೀಲನದಿಯನ್ನು ನಿರ್ಮಿಸಿದ."

ಅಷ್ಟು ಅದೃಷ್ಟವಂತರಲ್ಲದ ಬೇರೆಯವರು ಆಕಾಶದ ಮೋರೆಹೊಗಬೇಕು. ಭಾಗ್ಯಶಾಲಿಗಳಾದ ಐಗುಪ್ತದ ಜನರಿಗಾದರೋ ನೀಲನದಿಯ ಸತತ ರಕ್ಷೆ.

ತುಂತುರು ವರ್ಷವೂ ಒಮ್ಮೊಮ್ಮೆ ಲಭಿಸುತ್ತಿತ್ತು ಅವರಿಗೆ. ಆಗ ಜನರು ಮನೆಗಳಿಂದ ಹೊರಬಂದು ಆ ಹನಿಗಳಿಗೆ ಮೈಯೊಡ್ಡುತ್ತಿದ್ದರು; ನಾಲಗೆ ಚಾಚಿ ಆಕಾಶದ ನೀರಿನ ರುಚಿ ನೋಡುತ್ತಿದ್ದರು.

ನೀರಾನೆ ಪ್ರಾಂತದ ಮುಖ್ಯ ಪಟ್ಟಣದಲ್ಲಿ ಹನಿಮಳೆ ಬಿದ್ದ ಸಂಜೆ ಅಹೂರಾ ಮಗುವನ್ನೆತ್ತಿಕೊಂಡು ತನ್ನ ಗಂಡನೊಡನೆ ಹಳ್ಳಿಯಿಂದ ಬಂದಳು.

ಹೊರಗಿನಿಂದ ಬಂದವರಿಗೆ ರಾಜಗೃಹದಲ್ಲಿ ವಸತಿ. ಇಪ್ಯುವರ್‌ನ ಆತಿಥ್ಯ.

ಆದರೆ ಅಹೂರಾಳ ವಿಷಯದಲ್ಲಿ ಅದು ಆಗದ ಮಾತು.

"ನಮ್ಮಲ್ಲೇ ಇರಬೇಕು," ಎಂದಳು ನೆಫಿಸ್.

ಮೆನೆಪ್‌ಟಾನನ್ನು ಉದ್ದೇಶಿಸಿ ಅಹೂರಾ ಅಂದಳು :

"ದೂರು ತಂದಿದ್ದೇನೆ ಅಣ್ಣ."

"ಹಾ‍ದೆ ? ಅದೇನು ?"

"ಒಂದು ಸಿಂಹ ತುಂಬ ಕಾಟ ಕೊಡ್ತಿದೆ. ಆಗಲೇ ನಾಲ್ಕು ಹಸು, ಹೊರಿ ಹೋದುವು."

"ಮೊದಲ್ನೇದು ಹೋದಾಗಲೇ ತಿಳಿಸ್ಬೇಕಾಗಿತ್ತು."

"ನಿಜ. ಆದರೆ ತಕ್ಷಣ ಹೊರಡೋಕಾಗ್ಲಿಲ್ಲ. ಹಬ್ಬದ ಸಮಯ."

"ಖ್ನೆಮ್‌ಗೆ ಹೇಳ್ತೇನೆ."

"ದಳಪತಿಯವರಿಗೆ ಬಹಳ ಜಂಬ. ಕಂದಾಯ ವಸೂಲಿಗೆ ಬಂದಿದ್ದಾಗ, ಊಟಕ್ಕಿದ್ದು ಹೋಗಿ ಅಂತ ಹೇಳ್ದೆ. ಕೇಳ್ಲೇ ಇಲ್ಲ. ಕೆಲಸ ಮುಗಿಸಿ ನೆರೆ ಗ್ರಾಮಕ್ಕೆ ಹೊರಟೇ ಹೋದ್ರು."

"ಊಟಕ್ಕೆ ನಿಂತರೆ ತಡವಾಗ್ತದೆ ಅಂದ್ನೇನೊ ?"

"ಹೌದು."

"ಅವನು ಹಾಗೇ ಸ್ವಲ್ಪ," ಎಂದ ಮೆನೆಪ್‌ಟಾ ನಸುನಗುತ್ತ.

ಅಹೂರಾಳ ತೋಳಸೆರೆಯಿಂದ ಕೆಳಕ್ಕೆ ನುಸುಳಿ ಅವಳ ಮಗು—ಬರಿ ಮೈಯ ಹೆಣ್ಣು—ಅಂಬೆಗಾಲಿಡುತ್ತ ಮೆನೆಪ್‌ಟಾನ ಬಳಿಗೆ ಬಂತು.

ಮೆನೆಪ್‌ಟಾ ಮಗುವನ್ನೆತ್ತಿಕೊಂಡು ಕಚಗುಳಿ ಇಟ್ಟು, ಉಮ್ಮ ಕೊಟ್ಟು, ಕೆಳಕ್ಕೆ ಬಿಟ್ಟ. ತಾನು ಮಾಡಿದ ಸಾಹಸದ ವರದಿ ನೀಡಲು ತಾಯಿಯತ್ತ ಮಗು ಮತ್ತೆ ಅಂಬೆಗಾಲಿಟ್ಟಿತು.

ಅಲ್ಲಿಂದ ಹತ್ತಿರದಲ್ಲೇ ಇದ್ದ ನೆಫಿಸಳೆಡೆಗೆ ಅದು ಹರಿದಾಡಿತು.

"ಚೂಟಿ! ಚೂಟಿ!" ಎಂದಳು ನೆಫಿಸ್.

ಬಂದವರು ನಾಲ್ಕು ದಿನ ಇದ್ದು ಹೋಗಬೇಕು ಎಂಬ ಆಸೆ ಮೆನೆಪ್‌ಟಾನ ಮಡದಿಗೆ. ಆದರೆ ಅಹೂರಾಗೆ ಸಿಂಹದ್ದೇ ಯೋಚನೆ. ಬೇಟೆಗಾರರನ್ನು ಕರೆದು ತರುತ್ತೇನೆ ಎಂದು ಹೇಳಿ ಬಂದಿದ್ದಳು. ಮರಳುವುದು ತಡವಾಗಿ ಮತ್ತೊಂದು ರಾಸು ನಾಪತ್ತೆಯಾದರೆ?

"ಇಲ್ಲವಮ್ಮ, ದಳಪತಿಯವರನ್ನು ಕರೆದುಕೊಂಡು ನಾಳೆ ನಸುಕಿನಲ್ಲೇ ಹೊರಡ್ಬೇಕು," ಎಂದಳು ಅಹೂರಾ ದೃಢವಾಗಿ.

ವಿಷಯ ತಿಳಿದೊಡನೆಯೇ, "ನಾವು ಬರ್ತೇವೆ, ನಾವು ಬರ್ತೇವೆ," ಎಂದರು ನೂರಾರು ಜನ. ಅವರ ಪಾಲಿಗೆ ಎಂದಾದರೊಮ್ಮೆ ಲಭಿಸುವ ಸಿರಿವಂತಿಕೆ ಮೃಗಯಾ ವಿನೋದ. ಖ್ನೆಮ್ ಹೊಟೆಪ್ ಪ್ರಯಾಸಪಟ್ಟು ಸಂಗಡಿಗರ ಸಂಖ್ಯೆಯನ್ನು ಇಪ್ಪತ್ತಕ್ಕೆ ಮಿತಿಗೊಳಿಸಿದ.

ಅಹೂರಾ ಎಚ್ಚರಿಸಿದಳು:

"ಯಾರೂ ಬುತ್ತಿಗಿತ್ತಿ ತಂದು ನಮಗೆ ಅವಮಾನ ಮಾಡ್ಬಾರ್ದು."

ಹೊರಡುವ ವೇಳೆಗೆ ನೆಫಿಸ್‌ಳೊಡನೆ ಅವಳೆಂದಳು:

"ಮೊದಲಿದ್ದ ಹಾಗೇ ಇದ್ದೀಯಾ........"

ತನ್ನ ಬಸಿರಿನ ಕುರಿತು ಆಡುತ್ತಿರುವಳೇನೋ ಎಂದು ನೆಫಿಸ್‌ಗೆ ಕೆಂಪಿರುವೆ ಕಡಿದಂತಾಯಿತು.

"....ಅದೇ ಮನೆ, ಅದೇ ಸಾಮಾನು," ಎಂದು ಅಹೂರಾ ಮಾತನ್ನು ಮುಕ್ತಾಯಗೊಳಿಸಿದಾಗಲಷ್ಟೇ ನೆಫಿಸ್‌ಗೆ ಸಮಾಧಾನ. ಅವಳು ಸಣ್ಣನೆ

ನಕ್ಕಳು.

ಅಹೂರಾ ತನ್ನ ಮಗಳನ್ನೆತ್ತಿಕೊಂಡು, ಹೊರಬೀಳುತ್ತ, ಬಾಗಿಲ ಬಳಿ ಅಂದಳು :

" ಒಮ್ಮೆ ಮೆನೆಪ್‌ಟಾ ಅಣ್ಣ ಮತ್ತು ನೀವು ಇಬ್ಬರೂ ಬನ್ನಿ. ನಾಯಕ ರಾದ್ಮೇಲೆ ಮುಖ್ಯಪಟ್ಟಣದಲ್ಲೇ ಇರೋದು ಸರಿಯಾ ? ಪ್ರಾಂತವೆಲ್ಲ ಸಂಚರಿಸ್ಬೇಕು."

" ಆಗಲಿ ಅಹೂರಾ. ಅವನಿಗೆ ಹೇಳ್ತೇನೆ."

.......ಆ ಹಳ್ಳಿ ತಲಪಿದೊಡನೆಯೇ ಖ್ನೆಮ್‌ಹೊಟೆಪ್ ಅಹೂರಾಳ ಗಂಡನ ಜತೆ ಗ್ರಾಮದ ಹೊರವಲಯವನ್ನು ನೋಡಲು ಹೊರಟ. ಆತನನ್ನು ಹಿಂಬಾಲಿಸಲು ಹಳ್ಳಿಗರೆಲ್ಲ ಸಿದ್ಧರಾದರು.

"ಊಟವಾದ್ಮೇಲೆ ಬೇಟೆ. ಈಗ ಯಾರೂ ನನ್ಮೊಟ್ಟಿಗೆ ಬರಬೇಡಿ." ಎಂದ ಖ್ನೆಮ್‌ಹೊಟೆಪ್.

ಹಳ್ಳಿಯಿಂದ ಮರಳುಗಾಡಿನೆಡೆಗೆ ಎರಡು ಮೂರು ಕಡೆ ರಕ್ತದ ಕಲೆಗಳು ಕಾಣಿಸಿದುವು. ದೂರದಲ್ಲಿ ಮರಳ ದಿಬ್ಬಗಳಿದ್ದುವು. ದಿಬ್ಬಗಳಾಚೆಯಿಂದ ಕೆಲವು ಖರ್ಜೂರ ಮರಗಳ ತುದಿಗಳಷ್ಟೇ ಕಂಡು ಬಂದುವು.

"ಅಲ್ಲಿ ನೀರಿರಬೇಕು ಅಲ್ವಾ ?"

—ಖ್ನೆಮ್ ಕೇಳಿದ.

" ಇದೆ."

" ತೋಪಿಗೆ ಹೋಗಿ ಪೂಜೆ ಗೀಜೆ ?"

"ಎರಡು ವರ್ಷಗಳ ಹಿಂದೆ ಪೂಜೆಗೆ ಹೋದವನು ವಾಪಸು ಬರ್ಲಿಲ್ಲ. ಆಮೇಲೆ ಯಾರೂ ಹೋಗಿಯೇ ಇಲ್ಲ."

ಮರಳುಗಾಡಿನ ಅಂಚಿನುದ್ದಕ್ಕೂ ಸಿಂಹ ಪ್ರವಾಸ ಹೊರಟಿಲ್ಲವೆಂದಾದರೆ, ಅಲ್ಲಿಯೇ ಕೊಳದ ಬಳಿ ಮರಗಳ ಕೆಳಗೆ ಅದಿರೋದು ಸಾಧ್ಯ. ಸಿಂಹಗಳ ಸಂಸಾರವೇ ಇರಬಹುದು. ಅಥವಾ, ಒಂಟಿ ಸಿಂಹ ಅಲೆಯುತ್ತ ಬಂದಿರಲೂ ಬಹುದು........

ಬೇಟೆ ನಡೆಯಬೇಕಾದ ರೀತಿಯನ್ನು ಖ್ನೆಮ್‌ಹೊಟೆಪ್ ಮನಸ್ಸಿನಲ್ಲೇ

ರೂಪಿಸಿಕೊಂಡ.

ಮುಖ್ಯಪಟ್ಟಣದಿಂದ ಭಟರು ಬಂದರೆಂದು ಹಳ್ಳಿಗರಿಗೆ ಈಗ ಭಯವಿಲ್ಲ. ಆ ಭಟರ ನಾಯಕ ಖ್ನೆಮ್ ಅವರಿಗೆ ಅಪರಿಚಿತನಲ್ಲ.

"ಮೂರು—ನಾಲ್ಕು ತಿಂಗಳ ಹಿಂದೆ ಕಂದಾಯ ವಸೂಲಿಗೆ ಬಂದಿದ್ದಿರಿ ಅಲ್ಲವಾ ಅಣ್ಣ?" ಎಂದರು ಕೆಲವರು ಖ್ನೆಮ್‌ನೊಡನೆ. ಅವನು ಮಹಾ ಶೂರ. ನಿಷ್ಣಾತ ಬಿಲ್ಗಾರ ಎಂಬುದನ್ನೂ ಅವರು ಬಲ್ಲರು.

"ಬೇಟೆ ಹಗಲೊ ? ರಾತ್ರಿಯೊ ?"

—ತಿಳಿಯುವ ತವಕ ಹಲವರಿಗೆ.

ಫಲಿತಾಂಶದ ಬಗೆಗೆ ಯಾರಿಗೂ ಸಂದೇಹವಿರಲಿಲ್ಲ.

ಇಬ್ಬರು ಹೆಂಗಸರು ಬಂದು ರೊಟ್ಟಿ ತಟ್ಟಲು ಅಹೂರಾಗೆ ನೆರವಾದರು. ಸಾಕಷ್ಟು ಹಿಟ್ಟಿತ್ತು.

ಗ್ರಾಮ ಸಮಿತಿಯವರೆಂದರು :

"ಅಹೂರಾ, ನಿನ್ನೊಟ್ಟಿಗೆ ಜಗಳವಾಡಿ ನಾವು ಬದುಕೋದುಂಟೆ ? ಮಧ್ಯಾಹ್ನದ ಆತಿಥ್ಯ ನಿನ್ನದು ; ಬೇಟೆ ಆದ ಮೇಲೆ ಔತಣ ಗ್ರಾಮದ್ದು."

ಖ್ನೆಮ್‌ಹೊಟೆಪ್ ಅಹೂರಾಗೆ ಹೇಳಿದ :

"ಮಧ್ಯಾಹ್ನ ಹೊಟ್ಟೆ ಭಾರವಾಗಬಾರ್ದು ಅಕ್ಕಾ. ಒಬ್ಬೊಬ್ಬರಿಗೆ ಒಂದೊಂದು ರೊಟ್ಟಿ. ಅಷ್ಟೇ. ಅದೂ ಇದೂ ತಿನ್ನಿಸಿದೆ ಅಂದ್ರೆ ನಿದ್ದೆ ಬಂದ್ಬಿಟ್ಟೇತು. ಇನ್ನೂ ಬಿಸಿಲು ಜೋರಾಗಿರುವಾಗ್ಲೇ ನಾವು ಖರ್ಜೂರ ತೋಪು ತಲಪ್ಬೇಕು."

"ಗೊತ್ತಪ್ಪ, ಗೊತ್ತು," ಎಂದಳು ಅಹೂರಾ, ತಯಾರಾಗಿದ್ದ ರೊಟ್ಟಿಗಳನ್ನು ಎಣಿಸುತ್ತ........

ತುತ್ತು ಊಟವಾದೊಡನೆಯೇ ಹಳ್ಳಿಗರನ್ನು ಕರೆದುಕೊಂಡು ಬೇಟೆಗಾರರು ಹೊರಟರು. ತೋಪಿನ ದೇವತೆಗೆ ಅರ್ಪಿಸಲೆಂದು ಖರ್ಜೂರ, ಸೌತೆ, ಈರುಳ್ಳಿಗಳನ್ನು ಖ್ನೆಮ್‌ಹೊಟೆಪ್ ಕಟ್ಟಿಸಿಕೊಂಡ. ಗಾಳಿ ಪಶ್ಚಿಮದಿಂದ ಬೀಸುತ್ತಿತ್ತು. ದಿಬ್ಬ ತಲಪುವವರೆಗೂ ಮನುಷ್ಯರ ಸುಳಿವು ಸಿಂಹಕ್ಕೆ ಹತ್ತಲಾರದು. ಖ್ನೆಮ್ ಮತ್ತು ಹತ್ತು ಜನ ದಿಬ್ಬವನ್ನೇರಿದಂತೆ, ಉಳಿದವರು

ಕೆಳಗಡೆಯಿಂದ ಅರ್ಧವೃತ್ತಾಕಾರವಾಗಿ ತೋಪನ್ನು ಬಳಸಬೇಕು. ಸಿಂಹ ನಿದ್ದೆ ಹೋಗಿರಬಹುದು. ಹಳ್ಳಿಗರು ಸದ್ದು ಗದ್ದಲ ಮಾಡಿ ಎಬ್ಬಿಸಬೇಕು, (ಹತ್ತಾರು ತಮಟೆ ತಗಡು, ಬಾರಿಸುವ ಕೋಲು, ಒಂದು ಭೇರಿ, ತಾಳೆಯ ಸೀಳು ತೊಲೆ ಮತ್ತು ಸೆಣಬಿನ ರಜ್ಜು ಅವರ ಬಳಿ ಇದ್ದುವು.)

"ನಾನು ಸನ್ನೆ ಮಾಡೋವರೆಗೂ ಸದ್ದು ಕೂಡದು. ಮೌನವಾಗಿ ಬನ್ನಿ," ಎಂದ ಖ್ನೆಮ್‌ಹೊಟೆಪ್.

ಪಾದಗಳು ಮರಳಲ್ಲಿ ಹೂತುಹೋಗುತ್ತಿದ್ದುವು. ಎತ್ತಿ ಎತ್ತಿ ಅಡಿ ಇಡಬೇಕು. ಸಾಲದುದಕ್ಕೆ, ಚುರುಕು ಮುಟ್ಟಿಸುವ ಕಾದ ಉಸುಬು ಅದು. ದೃಷ್ಟಿ ಹರಿದಂತೆ, ಕುಣಿಯುವ ಕರಿಯ ಮಚ್ಚೆಗಳು ಎದುರಾಗುತ್ತಿದ್ದುವು.

ದಿಬ್ಬವನ್ನೇರುವುದಕ್ಕಂತೂ ಖ್ನೆಮ್ ಮತ್ತು ಹತ್ತು ಜನ ಪ್ರಯಾಸ ಪಟ್ಟರು. ಉಳಿದವರು ಕಳ್ಳ ಹೆಜ್ಜೆಗಳನ್ನಿಡುತ್ತ ಕೆಳಗಿನಿಂದ ತೋಪಿನ ಬಳಿ ಸರಿದರು.

ಸಿಂಹ ಕೊಳದ ಬಳಿ ಖರ್ಜೂರ ಮರದ ನೆರಳಿನಲ್ಲಿ ಮಲಗಿತ್ತು. ಒಂದೇ.

ಹತ್ತಿರದಲ್ಲೇ ಮೂರು ರಾಸುಗಳ ಅವಶೇಷಗಳಿದ್ದುವು. (ಇನ್ನೊಂದು ಹೋರಿಯನ್ನೋ ಹಸುವನ್ನೋ ಬೇರೆ ಸಿಂಹ ಒಯ್ದಿರಬೇಕು.) ನೀಳ ಕೇಸರ. ಈತ ಕುಟುಂಬದ ಯಜಮಾನನೇನೋ. ಔತಣ ಮುಗಿಸಿ ಇತರ ಸಿಂಹಗಳು ಹೊರಟುಹೋಗಿರಬಹುದು ನರವಾಸನೆ ಮೂಗಿಗೆ ತಟ್ಟಿದಾಗ, ಕತ್ತನ್ನು ತುಸು ಚಲಿಸಿ, ಸಿಂಹ ಮತ್ತೆ ಮಲಗಿತು. ಇಳಿಯದ ಮಂಪರು. ಜನ ನಿಂತಲ್ಲಿಂದಲೇ ಕೊಳಕ್ಕೂ ಖರ್ಜೂರದ ಮರಗಳಿಗೂ ವಂದಿಸಿದರು.

ಖ್ನೆಮ್ಹೊಟೆಪ್ ಸಂಜ್ಞೆ ಮಾಡಿದೊಡನೆ ಭೇರಿ ಮೊಳಗಿತು, ತಮಟೆ ತಗಡುಗಳು ಭೋರ್ಗರೆದುವು, ನೂರು ಕಂಠಗಳಿಂದ ಕಿರಾತಕೂಗು ಕೇಳಿಸಿತು. ಸಿಂಹ ಎದ್ದು ಬಾಲವನ್ನು ಮೇಲ್ಮೊಗವಾಗಿ ಎತ್ತಿತು. ಗದ್ದಲದ ಮೂಲವಾದ ಅರ್ಧವೃತ್ತದ ಕಡೆಗೆ ತಿರಸ್ಕಾರದಿಂದ ನೋಡಿತು. ಜನರ ಹೇಷಾರವ ಹೆಚ್ಚಿದಂತೆ, ಸಿಟ್ಟುಗೊಂಡು ಗರ್ಜಿಸಿತು.

ಪಶ್ಚಿಮಕ್ಕೆ ಇಳಿಯತೊಡಗಿದ್ದ ಸೂರ್ಯನನ್ನೊಮ್ಮೆ ಕಣ್ಣು ಕಿರಿದುಗೊಳಿಸಿ ನೋಡಿ, ಮತ್ತೊಮ್ಮೆ ಗರ್ಜಿಸಿ, ಅರ್ಧವೃತ್ತಾಕಾರವಾಗಿ ನಿಂತಿದ್ದ

ಜನರೆಡೆಗೆ ಸಿಂಹ ನೆಗೆಯತೊಡಗಿತು.

ಖ್ನೆಮ್ ಹೆದೆಯೇರಿಸಿದ್ದ ಬಾಣ ದಿಬ್ಬದ ಮೇಲಿನಿಂದ ಹೊರಟು, ಸುಂಯ್‌ಗುಟ್ಟುತ್ತ ಸಾಗಿ, ಸಿಂಹದ ಕಿವಿಯನ್ನು ಹೊಕ್ಕು ಮೆದುಳನ್ನು ತಾಕಿತು. ಪ್ರಾಣಾಂತಿಕ ವೇದನೆಯಿಂದ ಗರ್ಜಿಸುತ್ತ ಸಿಂಹ ಮೇಲಕ್ಕೆ ಹಾರಿ, ಧೊಪ್ಪನೆ ಕೆಳಕ್ಕೆ ಬಿತ್ತು.

ದಿಬ್ಬದ ಮೇಲಿದ್ದವರು ಕೊಳದ ಕಡೆಗೆ ಇಳಿದರು. ಎದುರುಗಡೆಯಲ್ಲಿ ಹುಯಿಲೆಬ್ಬಿಸುತ್ತಿದ್ದವರೂ ಸಿಂಹದ ಹತ್ತಿರಕ್ಕೆ ಬರತೊಡಗಿದರು.

ಖ್ನೆಮ್ ಕೂಗಿ ನುಡಿದ ; ಇತರ ಕೆಲವರೂ ಅಂದರು :

"ಅಪಾಯ ! ತೀರಾ ಹತ್ತಿರ ಹೋಗ್ಬೇಡಿ !"

ಮೂಗು ಕಿವಿಗಳಿಂದ ರಕ್ತ ಸೋರುತ್ತಿತ್ತು. ಉಸಿರಿಗಾಗಿ ಚಡಪಡಿಸು ತ್ತಿತ್ತು ಸಿಂಹ.

"ಈ ಲೋಕದ್ದಾಯಿತು ; ಪರಲೋಕಕ್ಕೆ ಹೋದರೆ ಒಸೈರಿಸ್ ಇವ ನನ್ನು ಮೊಸಳೆ ಬಾಯಿಗೆ ಕೊಡ್ತಾನೆ," ಎಂದನೊಬ್ಬ. ಸಂಗಡಿಗರು ನಕ್ಕರು.

ಖ್ನೆಮ್ ಬಲಪ್ರಯೋಗಿಸಿ, ನೆಟ್ಟಿದ್ದ ಬಾಣವನ್ನು ಎಳೆದು ತೆಗೆದ. ಜನ "ಹೋ ಹೋ !" ಎಂದು ಸಂತಸ ವ್ಯಕ್ತಪಡಿಸುತ್ತಿದ್ದಂತೆ, ಖ್ನೆಮ್ ಸಿಂಹದ ಬೆನ್ನಿಗೆ ಒದೆದ. ಸಿಂಹ ಒಂದು ತಲೆಯನ್ನು ಪಕ್ಕಕ್ಕೆ ಚೆಲ್ಲಿತು. ಅದರ ನಿರ್ಜೀವ ಕಣ್ಣುಗಳು ಕೋರೈಸುವ ಬೆಳಕಿಗೆ ಅಂಜದೆ ಸೂರ್ಯನನ್ನು ನೋಡಿದುವು.

ಜನ ಸಂತೋಷದಿಂದ ಕುಣಿದಾಡಿದರು. ಗ್ರಾಮ ಸಮಿತಿಯವರೂ ಆ ಗುಂಪಿನಲ್ಲಿದ್ದರು. ಅವರು ಮತ್ತು ಖ್ನೆಮ್‌ಹೊಟೆಪ್ ಖರ್ಜೂರ, ಸೌತೆ, ಈರುಳ್ಳಿಗಳನ್ನು ಕೊಳದಲ್ಲಿ ಇಳಿಬಿಟ್ಟರು. ಎಲ್ಲರೂ ತೋಪಿನ ದೇವತೆಗೆ ನಮಿ ಸಿದರು.

ಸೀಳು ತೊಲೆಯನ್ನು ಸಿಂಹದ ಕೈಕಾಲುಗಳ ನಡುವೆ ತೂರಿದರು. ತಲೆ, ಮುಂಡ ಅತ್ತಿತ್ತ ಜೋಲದಂತೆ, ತೊಲೆಗೆ ಅವನ್ನು ರಜ್ಜುವಿನಿಂದ ಕಟ್ಟಿದರು. ಹಳ್ಳಿಗೆ ನಡೆದರು. ಅಲ್ಲಿಯೇ ಉಳಿದಿದ್ದ ಗ್ರಾಮಸ್ಥರು—ಕಿರಿಯರು, ವೃದ್ಧರು, ಸ್ತ್ರೀಯರು—ಸಿಂಹವನ್ನೂ ಬೇಟೆಗಾರರನ್ನೂ ಸಂಭ್ರಮದಿಂದ ಇದಿರ್ಗೊಂಡರು. ಅಹೂರಾಳಿಗೆ ಆನಂದೋದ್ವೇಗ. ತನ್ನ ಮಗುವನ್ನು ತಬ್ಬಿಕೊಂಡು ಬಾರಿ

ಬಾರಿಗೂ ಚುಂಬಿಸಿದಳು. ಗ್ರಾಮಸಮಿತಿಯ ಇಬ್ಬರು ಸದಸ್ಯರ ಮನೆಗಳು ಅಕ್ಕಪಕ್ಕದಲ್ಲಿದ್ದುವು. ಎದುರಿನ ಬಯಲನ್ನು ಸ್ವಚ್ಛಗೊಳಿಸಿದ್ದರು. ಸಿಂಹ ವನ್ನು ಅಲ್ಲಿಯೆ ಇಳಿಸಲಾಯಿತು.

ಆ ರಾತ್ರಿಯ ಔತಣ ಬೇಟೆಗಾರರಿಗಷ್ಟೇ ಅಲ್ಲ—ಇಡೀ ಹಳ್ಳಿಯ ಜನರಿಗೆ. ಅದು ಪ್ರತಿಯೊಬ್ಬರೂ ಹಿಡಿ ಹಿಟ್ಟು ಕೊಟ್ಟು ಏರ್ಪಡಿಸಿದ ಸಮುದಾಯ ಭೋಜನ.

ಅಹೂರಾಳ ಗಂಡ ಮೆಲುದನಿಯಲ್ಲಿ ತನ್ನ ಮಗ್ಗುಲಲ್ಲಿ ಇದ್ದವನೊಡನೆ ಅಂದ :

"ಅಬ್ಟು ಯಾತ್ರೆಗೆ ಹೋಗಿದ್ದಾಗ ಮೆನೆಸ್‌ಟಾ ಅಣ್ಣ, ನಾವು, ಎಲ್ಲರೂ ಬುತ್ತಿ ಹಂಚಿಕೊಂಡು ತಿಂದ್ವಿ."

ಮೂರನೆಯ ದಿನ ಮಧ್ಯಾಹ್ನದ ಹೊತ್ತಿಗೆ ಖ್ನೆಮ್‌ಹೊಟೆಪನೂ ಸಂಗಡಿ ಗರೂ ಸಿಂಹದೊಡನೆ ಮುಖ್ಯಪಟ್ಟಣ ತಲುಪಿದರು. ಸಿಂಹದ ಭಾರ ಹೊರಲು ನೆರವಾಗುವುದಕ್ಕೋಸ್ಕರ ಹಳ್ಳಿಗರೂ ಹಲವರು ಅಲ್ಲಿ ತನಕ ಬಂದು ಮರಳಿದರು.

ಚೆನ್ನಾಗಿ ಬೆಳೆದಿದ್ದ ಭಾರೀ ಸಿಂಹ.

"ಒಳಗಿನದೆಲ್ಲ ಕಿತ್ತು ಹೊಟ್ಟು ತುಂಬಿಸಿ ಹೊಲಿದಿಡೋಣ. ರಾಜಗೃಹ ದಲ್ಲಿರ್ಲಿ," ಎಂದ ಮೆನೆಸ್‌ಟಾ.

ಪ್ರಸಾದನ ನಿಷ್ಣಾತರಾದ ಇಬ್ಬರು ಆ ಕಾರ್ಯ ಕೈಗೊಂಡರು. ಒಂದಿಷ್ಟೂ ಹರಿಯದಂತೆ ತೊಗಲು ಸುಲಿದರು. ಅದು ಒಣಗಿತು. ದುರ್ವಾಸನೆ ಹೋಗಲಾಡಿಸಲು, ಅದರ ಒಳಮೈಗೆ ಔಷಧೀಯ ತೈಲಗಳನ್ನೂ, ಸುಗಂಧ ದ್ರವ್ಯಗಳನ್ನೂ ಲೇಪಿಸಿದರು. ಬಡಗಿ ಸೆತ್ನಾ ಹೊಟ್ಟು ತುಂಬಿ ಹೊಲಿದು ನಿರ್ಮಿಸಿದ ಸಿಂಹವನ್ನಿಡಲು, ಮರದ ಪೀಠವನ್ನು ಮಾಡಿಕೊಟ್ಟ.

"ಸಿಂಹಕ್ಕೆ ಬಕಿಲ ಅಂತ ಹೆಸರಿಡೋಣ," ಎಂದರು ಯಾರೋ. ಎಲ್ಲರೂ ಇಷ್ಟಪಟ್ಟ ಸೂಚನೆ.

"ಬಕಿಲ—ಖ್ನೆಮ್‌ಹೊಟೆಪ್ ಹೊಡೆದದ್ದು."

—ಇಪ್ಯುವರ್ ಬರೆದುಕೊಟ್ಟ ಈ ಲಿಪಿಸಾಲನ್ನು ಪೀಠದ ಬುಡಕ್ಕೆ

ಅಂಟಿಸಿದರು.

ರಾಮೆರಿಪ್‌ಟಾ ಮತ್ತು ಮಿತ್ರರಿಗೆ ಇನ್ನೊಂದು ಯೋಜನೆ ಹೊಳೆಯಿತು. ಅವರು ಸೆಣಬಿನ ಬಟ್ಟೆಯ ಚೂರಿಗೆ ಕಪ್ಪು ಮಸಿ ಬಳಿದು ಸಿಂಹದ ಬಲಗಣ್ಣಿನ ಮೇಲೆ ಅದನ್ನು ಅಂಟಿಸಿಬಿಟ್ಟರು.

ಖ್ನೆಮ್ ಬಿಟ್ಟ ಬಾಣ ಬಕಿಲನ ಬಲಗಣ್ಣನ್ನು ಹೊಕ್ಕಿದ್ದನ್ನು ಕಂಡಿದ್ದವರು, ಸಿಂಹದ ಕಣ್ಣಿಗೆ ಅಂಟಿಸಿದ್ದ ಕರಿಯ ಬಟ್ಟೆಯನ್ನು ನೋಡಿ ನಕ್ಕರು.

*    *    *    *

ಹಿಂದೆ ಗೇಬುವಿನ ಕಾಲದಲ್ಲಿ ಮರದ ಒಂದು ಗಡಿಯಾರವಿತ್ತು, ರಾಜಗೃಹದಲ್ಲಿ. ಧಾನ್ಯದ ಚೀಲ ಮೇಲೆ ಬಿದ್ದು ಅದು ಮುರಿದಿತ್ತು.

ದುರಸ್ತಿ ಮಾಡಿಸಿರಲಿಲ್ಲ. "ರಾಜಧಾನಿಯಿಂದ ಇನ್ನೊಂದು ತರಿಸ್ಬೇಕು," ಎಂದಿದ್ದ ಪ್ರಾಂತಪಾಲ. ಅದು ಬಂದಿರಲಿಲ್ಲ.

ಮುರಿದದ್ದು ಏನಾಯಿತು ? ಇಪ್ಯುವರ್ ಹುಡುಕಿಸಿದ. ಉಗ್ರಾಣದಲ್ಲಿ ಅದು ಮೂಲೆಗುಂಪಾಗಿತ್ತು. ಸೆತ್ನಾನಿಗೆ ಕರೆ ಹೋಯಿತು.

ಒಂದು ಮರದ ಹಲಗೆ. ಅದರಲ್ಲಿ ಸಮಾನ ಅಂತರದಲ್ಲಿ ಆರು ಗುರುತುಗಳು. ಹಲಗೆಗೊಂದು ಅಡ್ಡಪಟ್ಟಿ. ಸೂರ್ಯ ಚಲಿಸಿದಂತೆ ಅಡ್ಡಪಟ್ಟಿಯ ನೆರಳೂ ಚಲಿಸುತ್ತಿತ್ತು. ಮಧ್ಯಾಹ್ನವಾದ ಮೇಲೆ ನೆರಳಿನ ಹಿಮ್ಮುಖ ಚಲನೆ. ಗುರುತುಗಳ ನೆರವಿನಿಂದ ಹಗಲನ್ನು ಹನ್ನೆರಡು ಭಾಗಗಳಾಗಿ ಅಳೆಯುವ ಸಾಧ್ಯತೆ.

ಇಪ್ಯುವರ್‌ನ ಕಣ್ಗಾಪಿನಲ್ಲಿ ಸೆತ್ನಾ ಹೊಸ ಗಡಿಯಾರವನ್ನೇ ನಿರ್ಮಿಸಿದ. ಲೆಬನ್‌ನಿಂದ ತರಿಸಿದ ಗಟ್ಟಿ ಹಲಗೆ. ಮೆರುಗೆಣ್ಣೆಯ ಲೇಪನದಿಂದ ಅದು ಹೊಳೆಯುತ್ತಿತ್ತು.

ಇದಕ್ಕೋಸ್ಕರ ಸೆತ್ನಾಗೆ ಸಲ್ಲಬೇಕಾದದ್ದು ಒಟ್ಟು ಮೂವತ್ತು ಉಟೆನ್, ಸಾಮಗ್ರಿಗಾಗಿ ಇಪ್ಪತ್ತು, ದುಡಿಮೆಗಾಗಿ ಹತ್ತು. ಇದನ್ನು ಇಪ್ಯುವರ್ ಬರೆದಿಟ್ಟುಕೊಂಡ.

ಸೆತ್ನಾನ ಕೆಲಸವನ್ನು ನೋಡಿ ಮೆನೆಪ್‌ಟಾ ಮೆಚ್ಚುಗೆ ಸೂಚಿಸು

ತ್ತಿದ್ದಾಗ, ಘ್ನೆಮ್‌ಹೊಟೆಪ್ ಮತ್ತು ಬಟಾ ಅವಸರದ ಹೆಜ್ಜೆ ಇಡುತ್ತ ಅಲ್ಲಿಗೆ ಬಂದರು.

ಬೆಳಗಾದ ಮೇಲೆ ಮೂರು ತಾಸು ಕಳೆಯಿತೆಂದು ಗಡಿಯಾರ ತೋರಿಸು ತ್ತಿತ್ತು. ಅರಳಿದ ಕಣ್ಣುಗಳಿಂದ ಗಡಿಯಾರವನ್ನು ನೋಡಿ, ಬಟಾ ಮತ್ತು ಘ್ನೆಮ್ ಬದಿಗೆ ಸರಿದರು. ಏನೋ ಮಹತ್ವದ ವಿಷಯವಿದೆ ಎಂದು ಅರಿತ ಮೆನೆಪ್‌ಟಾ ಅವರ ಬಳಿ ಸಾರಿದ.

ಬಟಾ ಅಂದ :

"ಕಟ್ಟೆಗೆ ಒಂದು ವ್ಯಾಪಾರೀ ದೋಣಿ ಬಂದಿದೆ. ದೊಡ್ಡದು. ಮೂವತ್ತು ಮಾರುದ್ದ—ನಾಲ್ವತ್ತು ಹುಟ್ಟುಗಳಿವೆ. ಬೆಳಿಗ್ಗೆ ಬಂತು. ಮೇಲಿನಿಂದ ನುಬಿಯದ ದಿಕ್ಕಿನಿಂದ. ದೋಣಿ ಆ ಕಡೆಯದಲ್ಲ, ವ್ಯಾಪಾರ ಕ್ಕಾಗಿ ಆ ದಿಕ್ಕಿಗೆ ಹೋಗಿತ್ತಂತೆ. ನದೀಪುಲ್ಲಿ ಒಂದೆರಡು ಸಲ ಇದನ್ನ ನೋಡಿದ ನೆನಪಿದೆ."

"ಇಲ್ಲಿಂದ ಈ ದೋಣಿ ಮೆಂಫಿಸಿಗೆ ಹೋಗ್ತದಂತೆ," ಎಂದ ಘ್ನೆಮ್ ಹೊಟೆಪ್.

"ದೋಣಿಯ ಯಜಮಾನ ಸಿಕ್ಕಿದ್ನೆ ?"

ಘ್ನೆಮ್ ಉತ್ತರಿಸಿದ :

"ಇಲ್ಲ. ಆದರೆ ಅವನ ದೂತ ಬಂದಿದ್ದಾನೆ. ಉದ್ಯಾನದಲ್ಲಿದ್ದಾನೆ. 'ನಾಯಕರನ್ನು ನೋಡ್ಬೇಕು, ಅನುಕೂಲ ತಿಳಿಸಿದರೆ ಬರ್ತೀನೆ'—ಅಂತ ಆತ ಹೇಳಿಕಳಿಸಿದ್ದಾನೆ."

ನಸುನಗೆ ಬೀರಿ ಮೆನೆಪ್‌ಟಾ ನುಡಿದ :

"ಅವನು ವರ್ತಕ. ಬರಲಿ, ಆಗದೆ ?"

ಘ್ನೆಮ್ ಮತ್ತು ಬಟಾ 'ಸಮ್ಮತ' ಎನ್ನುವಂತೆ ತಲೆ ಆಡಿಸಲು, ಮೆನೆಪ್‌ಟಾ ಗಡಿಯಾರದತ್ತ ನೋಡಿ, "ಈಗಲೇ ಬರಲಿ," ಎಂದ.

ಈ ಉತ್ತರವನ್ನೊಯ್ಯುವಂತೆ ದೂತನಿಗೆ ತಿಳಿಸಲು ಬಟಾ ಹೊರಟು ಹೋದ.

ಮೆನೆಪ್‌ಟಾ ವೇದಿಕೆಯ ಮೇಲಿನ ಪೀಠದಲ್ಲಿ ಕುಳಿತ. ಇಪ್ಯುವರ್

ಶಾಲಾ ಕಟ್ಟಡದ ನಿರ್ಮಾಣ ವೆಚ್ಚದ ಲೆಕ್ಕ ವಿವರಗಳ ಲಿಪಿ ಸುರುಳಿಯನ್ನು ಹೊರತೆಗೆದ. ಮೆನೆಪ್‌ಟಾ ಆ ವಿವರಗಳನ್ನು ಆಲಿಸಿದ.

“ಇದೇ ರೀತಿ ಮುಂದುವರಿದರೆ ಬಿತ್ತನೆಗೆ ಮುಂಚೆಯೇ ಛಾವಣಿ ಕೆಲಸ ಮುಗೀಬಹುದು.” ಎಂದು ಆತ ಪ್ರತಿಕ್ರಿಯೆ ವ್ಯಕ್ತಪಡಿಸಿದ.

ನದಿಯ ಮಹಾಪೂರವನ್ನು ಅಳೆಯಲೆಂದು ನೇಮಕಗೊಂಡಿದ್ದ ಉದ್ಯೋಗಿ ದಿನದ ವರದಿಯೊಡನೆ ಬಂದ :

“ನಿನ್ನೆಗಿಂತ ಇವತ್ತು ಒಂದು ಗೇಣು ನೀರು ಏರಿದೆ.”

“ಕಟ್ಟೆಯಲ್ಲಿ ಇನ್ನೇನು ನೋಡ್ದೆ ?” ಎಂದು ಕೇಳಿದ ಮೆನೆಪ್‌ಟಾ ಹಾಸ್ಯದ ಧ್ವನಿಯಲ್ಲಿ.

ಅಂಗಣದಲ್ಲಿ ಕೊಳದ ದಂಡೆಯಮೇಲೆ ಕುಳಿತಿದ್ದ ಖ್ನೆಮ್‌ಹೊಟೆಪ್ ಮತ್ತು ಬಟಾರೆಡೆಗೆ ದೃಷ್ಟಿಬೀರಿ, ನಕ್ಕು, (‘ನಾನು ಆ ಸುದ್ದಿ ತಿಳಿಸೋದು ಅಧಿಕ ಪ್ರಸಂಗ’) ಆ ಉದ್ಯೋಗಿ ಹಿಂದಕ್ಕೆ ಸರಿದ.

ಸ್ವಲ್ಪ ಹೊತ್ತಿನಲ್ಲೇ ವ್ಯಾಪಾರೀ ದೋಣಿಯ ಒಡೆಯ ನಡೆದು ಬಂದ. ನಡು ಎತ್ತರ. ತುಂಬಿದ ಶರೀರ. ಗೌರಾಂಗ. ಗುಂಗುರು ತಲೆಗೂದಲು, ಮೋಟು ಗಡ್ಡ, ಎರಡೂ ಕೆಂಚು. ಮೊಣಕಾಲಿನ ಕೆಳಗೆ ಒಂದು ಗೇಣಿನ ತನಕ ಇಳಿದಿತ್ತು ಆತ ಉಟ್ಟದ್ದ ಅಡ್ಡಪಂಚೆ. ತೊಗಲಿನ, ಅಗಲದ ಸೊಂಟ ಪಟ್ಟಿ. ಅದಕ್ಕೆ ತುರುಕಿದ್ದ ನೀಳ ಅಂಗ ವಸ್ತ್ರ ಎದೆಯನ್ನು ಹಾದು, ಭುಜ ವನ್ನು ದಾಟ ಬೆನ್ನಿನಮೇಲೆ ತೂಗಾಡುತ್ತಿತ್ತು. ಮೆದುಜೊಂಡಿನ ಪಾದರಕ್ಷೆ ಯನ್ನು ಆತ ಮೆಟ್ಟಿದ್ದ. ತೀಡಿದ ಹುಬ್ಬುಗಳ ಕಡೆಗೆ ಚುರುಕು ನೋಟದ ಕಣ್ಣುಗಳು. ಮಿಸೆಯನ್ನು ಹೊತ್ತ ತುಟಿ ಮೇಲಕ್ಕೆ ಸರಿದಾಗ, ಮಾಟ ವಾದ ದಂತಪಂಗ್ತಿ ಕಾಣಿಸುತ್ತಿತ್ತು. ಅವುಗಳಲ್ಲೆರಡು ಬಂಗಾರದ ಹಲ್ಲುಗಳು.

ಅವನ ಹಿಂದಿನಿಂದ ಬಂದರು ಆರು ಆಳುಗಳು, ಜೊಂಡಿನಿಂದ ಹೆಣೆದ ತಟ್ಟಿ ಬುಟ್ಟಿಗಳನ್ನು ಹೊತ್ತುಕೊಂಡು, ನಡುಬಟ್ಟೆ ಮಾತ್ರ ಇದ್ದ ಬಿಳಿಮೈಯ ಕಟ್ಟಾಳುಗಳು. ಕುಸುರಿನ ಕೆಲಸದ ಸೆಣಬಿನ ನುಣುಪು ವಸ್ತ್ರ ಪ್ರತಿಯೊಂದು ಹೇರನ್ನೂ ಆವರಿಸಿತ್ತು.

ರಾಜಗೃಹದ ಸಭಾಭವನದೊಳಕ್ಕೆ ಆಗಂತುಕ ಕಾಲಿರಿಸಿದೊಡನೆಯೇ

ಮೆನೆಪ್‌ಟಾ “ ಬನ್ನಿ,” ಎಂದ.

ದೋಣಿಯ ಒಡೆಯ ಹಲ್ಲುಗಳನ್ನು ತೋರ್ಪಡಿಸುತ್ತ, ಆತ್ಮವಿಶ್ವಾಸ ದಿಂದ ವೇದಿಕೆಯ ಬಳಿಗೆ ನಡೆದು, ಮೆನೆಪ್‌ಟಾನಿಗೆ ಬಾಗಿ ವಂದಿಸಿದ. ವಂದನೆ ಸ್ವೀಕರಿಸಿದ ಮೆನೆಪ್‌ಟಾ ವೇದಿಕೆಯ ಬಲಮಗ್ಗುಲಲ್ಲಿದ್ದ ಪೀಠಗಳನ್ನು ತೋರಿಸಿದ.

ಆಸೀನನಾದ ಅತಿಥಿ ದೂರದಲ್ಲಿಯೆ ನಿಂತಿದ್ದ ಆಳುಗಳಿಗೆ ಸನ್ನೆ ಮಾಡಿದ. ಅವರು ವೇದಿಕೆಯ ಬಳಿ ಸಾರಿದರು. ಖ್ನೆಮ್ ಹೊಟೆಪ್ ಮತ್ತು ಬಟಾ ತಾವೂ ಅತ್ತ ಬಂದು ಅತಿಥಿಯ ಎದುರು ಸಾಲಿನಲ್ಲಿದ್ದ ಪೀಠಗಳ ಹಿಂದೆ ನಿಂತರು. ಇಪ್ಯುವರನೂ ಬಲಮಗ್ಗುಲಿಗೆ ಬಂದ.

ಅತಿಥಿಯೆಂದ :

“ ಮಹಾ ಹಸುರು ಸಮುದ್ರದಿಂದ ನುಬಿಯದವರೆಗೆ! ನನ್ನನ್ನು ಕೆಫ್ಟು ಅಂತ ಕರೀತಾರೆ. ಪೆರೋ ಅವರು ಅಬ್ಬುಗೆ ಹೋದಾಗ ನಾನು ಇದೇ ದಾರಿ ಯಾಗಿ ನುಬಿಯದ ಕಡೆಗೆ ಹೋದೆ. ಅಲ್ಲಿದ್ದಾಗ ನೀರಾನೆ ಪ್ರಾಂತದಿಂದ ಅದ್ಭುತ ಸುದ್ದಿ ಬಂತು. ನಾಲ್ಕು ದೇಶ ಸುತ್ತಿದ್ದೇನೆ. ಕಂಡಿರದ ಕೇಳಿರದ ಘಟನೆ. ವಾಪಸಾಗುವಾಗ ಈ ಪ್ರಾಂತವನ್ನು ಸಂದರ್ಶಿಸಿ ಹೋಗ್ಬೇಕು; ಜನನಾಯಕನನ್ನು ಕಂಡು ಮುಂದೆ ಪ್ರಯಾಣ ಬೆಳೆಸ್ಬೇಕು—ಅಂದ್ಕೊಂಡೆ. ದೇವರು ನನ್ನ ಬಯಕೇನ ಈಡೇರಿಸಿದ್ದಾನೆ. ವರ್ತಕನ ಅಲ್ಪ ಕಾಣಿಕೆ ಸ್ವೀಕರಿಸ್ಬೇಕು.”

ಆಳುಗಳು ತಾವು ಹೊತ್ತಿದ್ದುದನ್ನು ವೇದಿಕೆಯ ಮುಂದುಗಡೆ ಸಾಲಾಗಿ ಇರಿಸಿ, ದೂರ ಸರಿದರು. ಕೆಫ್ಟು ಸಂಜ್ಞೆ ಮಾಡಿದೊಡನೆ ವೇದಿಕೆಗೆ ನಮಿಸಿ ಹೊರಕ್ಕೆ ಉದ್ಯಾನದತ್ತ ಇಳಿದರು.

ಕೆಫ್ಟು ತಾನೆದ್ದು, ಕಾಣಿಕೆಗಳಿಗೆ ಮುಚ್ಚಿದ್ದ ವಸ್ತ್ರದ ಚೌಕಗಳನ್ನು ಎತ್ತಿದ. ಮೆನೆಪ್‌ಟಾ ಅಲ್ಲಿದ್ದುದನ್ನು ಗಂಭೀರವಾಗಿ ದಿಟ್ಟಿಸಿದ. ಇತರರು ಕುತೂಹಲದಿಂದ ನೋಡಿದರು. ಅಲಂಕರಿಸಿದ ಹಿಡಿಯ ಕಂಚಿನ ಕಠಾರಿ;

ತೊಗಲಿನ ಬತ್ತಳಿಕೆ; ಜಿಂಕೆಯ ಚರ್ಮ; ಸೊಗಸಾದ ಪೆಪ್ಟೈರಸ್ ಹಾಳೆಗಳು; ಲಿಪಿ ಸುರುಳಿ ಇಡುವ ಅಲಂಕೃತ ಜಾಡಿ; ಪುಟ್ಟ ಪೆಟ್ಟಿಗೆ—ಅದರ ಮುಚ್ಚಳದ ಮೇಲೆ ಹಸ್ತಿದಂತದಿಂದ ಮಾಡಿದ ಒಸ್ಸೆರಿಸನ ಕೆತ್ತನೆ ಚಿತ್ರ....

ಮತ್ತೆ ಕುಳಿತು, ಒಲಿಸುವ ಧ್ವನಿಯಲ್ಲಿ, ಕೆಫ್ಟು ಅಂದ :

"ನೆಬೆತ್‌ಪೆರ್ ರಾಜಗೃಹದಲ್ಲಿ ವಾಸ ಮಾಡೋದಿಲ್ಲ, ಇಲ್ಲಿ ಕುಡಿತ ಕುಣಿತ ಇಲ್ಲ—ಅನ್ನೋದು ನುಬಿಯಕ್ಕೆ ಹೋಗ್ತಿದ್ದಾಗಲೇ ನನಗೆ ಗೊತ್ತಾಯ್ತು. (ಸ್ವರ ತಗ್ಗಿಸಿ) ಸೈನೆ ಹತ್ತಿರ ನನ್ನ ನಾವೆ ನಿಲ್ಲಿಸ್ತೇನೆ. ಸಣ್ಣ ದೋಣಿ ಗೊತ್ತು ಮಾಡಿ ತಿರುವಿನಿಂದ ಮೇಲಕ್ಕೆ ಸಾಮಾನು ಕಳಿಸ್ತೇನೆ. ಒಮ್ಮೊಮ್ಮೆ ನನ್ನ ಸಹಾಯಕರೇ ನುಬಿಯದ ವ್ಯಾಪಾರ ಮುಗಿಸಿ ಬರ್ತಾರೆ. (ಮೊದಲಿನ ಸ್ವರದಲೇ) ನಾಯಕರು ತಮ್ಮ ಮನೇಲೇ ವಾಸಿಸ್ತಾರೆ ಅಂತಲೂ ತಿಳೀತು. ಬಾಹುಬಲದಿಂದ ಗದ್ದುಗೆಗೆ ಬಂದೋರು ದರ್ಪದಿಂದ ಆಳ್ತಾರೆ, ಕಿರಿಚ್ತಾರೆ, ಕೂಗಾಡ್ತಾರೆ. ನೀವು ಜನರ ಒಲವನ್ನು ಗೆದ್ದು ನಾಯಕರಾದೋರು. ಇಂಥದು ಈವರೆಗೆ ಎಲ್ಲಿಯೂ ಆಗಿಲ್ಲ; ಮುಂದೆ ಆಗ್ತದೋ ಇಲ್ವೋ ಹೇಳಲಾರೆ. ಅಂಥವರ ಸನ್ನಿಧಿಗೆ ಯಾವ ಕಾಣಿಕೆ ಒಯ್ಯಬಹುದು ? ಅಮೂಲ್ಯ ಹರಳಿನ ಆಭರಣಗಳೆ ? ಅಲಂಕರಣ ಸಾಮಗ್ರಿಗಳೆ ? ಸುಗಂಧ ದ್ರವ್ಯಗಳೆ ? ಎಷ್ಟು ಸುತ್ತು ಸುತ್ತಿದರೂ ಮೈ ಕಾಣಿಸುವ ಮಿನೋ ದ್ವೀಪದ ವಸ್ತ್ರವೆ ? ವಿದೇಶೀ ಪೀಯೂಷವೆ ? ಅಂತಃಪುರಕ್ಕೆ ಸೇರಿಸಲು ಯೋಗ್ಯರಾದ ಅಂಗನೆ ಯರೆ ? ಯೋಚಿಸಿ ಯೋಚಿಸಿ ತಲೆ ಬಿಸಿಯಾಯ್ತು. ಆಡಂಬರವಿಲ್ಲದ ಬದುಕು. ಮುಚ್ಚುಮರೆ ಇಲ್ಲದ ನಡವಳಿಕೆ. ಕಡಲ ಮಧ್ಯದ ಒಂಟಿ ಜೀವಕ್ಕೆ ಹಠಾತ್ತನೆ ದೇವದರ್ಶನವಾದರೆ ಹೇಗಾಗ್ಬೇಡ ? ಈಗ ನನ್ನದು ಅದೇ ಪರಿಸ್ಥಿತಿ."

ಕೆಫ್ಟು ಮಾತು ನಿಲ್ಲಿಸಿದ. ಹೊಗಳಿದ್ದು ಇಷ್ಟು ಸಾಕು ಅನಿಸಿತು. ಆತ ರಾಜನೀತಿ ನಿಪುಣ. ಆ ಬಗೆಗೆ ಅವನಿಗೆ ಹೆಮ್ಮೆಯೇ. ವಾಸ್ತವವಾಗಿ ಇಲ್ಲಿ ಎದ್ದು ನಿಂತು ಮಾತನಾಡುವುದು ಕೂಡಾ ಅನಗತ್ಯ. ನಿಸ್ಸಂದೇಹವಾಗಿ, ಅವನ ಪಾಲಿಗೆ ಅದೊಂದು ವಿಶಿಷ್ಟ ಪರಿಸ್ಥಿತಿ. ತಾನು ಇಟ್ಟ ಹೆಜ್ಜೆ ಸರಿಯೊ,

ತಪ್ಪೊ ? ಸರಿಯಿರಲೇಬೇಕು.

ಮುಂದುವರಿಸುತ್ತ ಅವನೆಂದ :

" ನನ್ನ ಜನ ಕೆಫ್ಟಿಯು ದ್ವೀಪವಾಸಿಗಳು. ಐಗುಪ್ತ್ರದ ಜನರ ಹಾಗೆ ಮುಂದುವರಿದವರಲ್ಲ. ವೈದ್ಯಿಕೆ, ಜಾದುಗಾರಿಕೆ, ಓದು ಬರಹ ಯಾವುದೂ ತಿಳೀದು. ಆದರೆ ಮಹಾ ಹಸುರು ಸಮುದ್ರ ಅವರ ಮಟ್ಟಿಗೆ ಒಂದು ಕೊಳ ಇದ್ದಹಾಗೆ. ಬಾಲ್ಯದಲ್ಲಿ ನಾನು ನೀರಿಗಿಳಿದೆ; ಇನ್ನೂ ನೀರಲ್ಲೇ ಇದ್ದೇನೆ. ಮೀನಿಗೆ ನೀರು ಕುಡಿಯೋದು ಎಷ್ಟು ಸುಲಭವೋ ನನಗೆ ಅಷ್ಟು ಸಲೀಸು ಮುಖಸ್ತುತಿ ಮಾಡೋದು. ಏನೋ ಸ್ವಾರ್ಥಕ್ಕಾಗಿ ಹೊಗಳ್ತಿದಾನೆ ಅಂತ ನೀವು ಭಾವಿಸಬೌದು. ಸ್ವಾರ್ಥ ಇಲ್ಲದ ಜೀವ ಎಲ್ಲಿಯಾದರೂ ಇದ್ದರೆ ನನಗೆ ಹೇಳಿ. ನಾನು ನೋಡ್ಬೇಕು. ನೀರಾನೆ ಪ್ರಾಂತದ ಜನರ ಹಿತಸಾಧನೆ—ನಿಮ್ಮ ಸ್ವಾರ್ಥ. ಐಗುಪ್ತ್ರದ ಶ್ರೇಯೋಭಿವೃದ್ಧಿ ಪೆರೋನ ಸ್ವಾರ್ಥ. ಸ್ವಂತ ವ್ಯಾಪಾರದ ಉತ್ಕರ್ಷ—ನನ್ನ ಸ್ವಾರ್ಥ. ನಿಜ ಹೇಳ್ತೀನೆ. ಅಲ್ಪ ಕಾಣಿಕೆ ಅಂತ ಸಾಂಪ್ರದಾಯಿಕವಾಗಿ ಹೇಳೋದು ಧೂರ್ತತನ. ಆದರೆ ಇಲ್ಲಿಗೆ ನಾನು ನಾನು ತಂದಿರೋದು ಮಾತ್ರ ನಿಜವಾಗಿಯೂ ಅಲ್ಪಕಾಣಿಕೆಯೇ. ಇದು ಸಾಂಕೇತಿಕ. ಗೌರವ ಸೂಚಕ. ಅನ್ಯಥಾ ಭಾವಿಸಬಾರದು. ಸ್ವೀಕರಿಸ ಬೇಕು."

ನಸುನಕ್ಕು ಮೆನೆಪ್‌ಟಾನೆಂದ :

" ಆಗಲಿ. ಇದು ವರ್ತಕ ಮಿತ್ರರಾದ ನಿಮ್ಮಿಂದ ನೀರಾನೆ ಪ್ರಾಂತಕ್ಕೆ ಸಂದಿರುವ ಕಾಣಿಕೆ. (ಲಿಪಿಕಾರನತ್ತ ನೋಡಿ) ಇಪ್ಯುವರ್, ಕೆಫ್ಟು ಅವರ ಕಾಣಿಕೆಗಳ ವಿವರ ಬರೆದಿಟ್ಟು ಬೊಕ್ಕಸಕ್ಕೆ ಅದನ್ನು ಜಮೆ ಮಾಡಿ. (ಮತ್ತೆ ಕೆಫ್ಟುವಿನತ್ತ ಹೊರಳಿ) ಶಿಷ್ಟಾಚಾರಕ್ಕೆ ಇಷ್ಟು ಸಾಕು. ಇನ್ನು ವಾಣಿಜ್ಯದ ವಿಷಯ ಮಾತನಾಡೋಣ."

ಕಾಣಿಕೆಗಳನ್ನು ಇಪ್ಯುವರ್ ಮತ್ತು ಬಟಾ ಮಹಡಿಗೆ ಒಯ್ಯುತ್ತಿದ್ದಂತೆ ಕೆಫ್ಟು ಹಸನ್ಮುಖಿಯಾದ.

" ದುಡಿಮೆಯಿಂದ ವಸ್ತುಗಳು ಸೃಷ್ಟಿಯಾಗ್ತವೆ; ಅವುಗಳ ವಿಕ್ರಯ

ದಿಂದ ಸಂಪತ್ತು ಸಂಗ್ರಹವಾಗ್ತದೆ. ಮೊದಲ್ನೇದರಲ್ಲಿ ನೀವು ಸಮರ್ಥರು. ಎರಡ್ನೇ ವಿಷಯದಲ್ಲಿ ನನ್ನ ಸೇವೆ ಸಲ್ಲಿಸೋದಕ್ಕೆ ನಾನು ಸಿದ್ಧ."

ಮೆನೆಪ್‌ಟಾನೆಂದ :

"ಬಹಳ ಮಟ್ಟಿಗೆ ನಾವು ಸ್ವಾವಲಂಬಿಗಳು. ಕೆಲವೊಂದು ಸಾಮಗ್ರಿಗಳು ಮಾತ್ರ ನಮ್ಮಲ್ಲಿಲ್ಲ. ನಾರಗಸೆ ಎಣ್ಣೆ, ಹುದುಗು ಪುಡಿ ಇಂಥವು. ನಿಮಗೆ ಗೊತ್ತೇ ಇದೆ. ಮರಗಳಂತೂ ನಮಗೆ ಮಾತ್ರವಲ್ಲ, ಇಡೀ ಐಗುಪ್ತಕ್ಕೆ ಹೊರಗಿನಿಂದ—ಲೆಬನ್‌ನಿಂದ—ಬರಬೇಕು."

" ಅಂಥ ಸಾಮಗ್ರಿಗಳನ್ನು ಪೂರೈಸೋ ಜವಾಬ್ದಾರಿ ನನ್ನದು. ವರ್ಷಕ್ಕೆ ಎರಡು ಸಾರೆ ಬರ್ತೀನೆ. ಕುಯಿಲು ಆದ್ಮೇಲೆ, ನುಬಿಯದ ಕಡೆಗೆ ಹೋಗ್ತಾ, ಒಮ್ಮೆ. ಆಗ ನಿಮಗೆ ಬೇಕಾದ ಸಾಮಗ್ರಿಗಳನ್ನು ಇಳಿಸಿ ಹೋಗ್ತೀನೆ. ಮಹಾಪೂರದ ವೇಳೇಲಿ, ನುಬಿಯದಿಂದ ವಾಪಸಾಗ್ತಾ, ಮತ್ತೊಮ್ಮೆ. ಆಗ ನಿಮ್ಮ ಸಿದ್ಧ ಸಾಮಗ್ರಿಗಳನ್ನು ಕೊಂಡ್ಕೊಳ್ತೀನೆ."

ಮೆನೆಪ್‌ಟಾ ಇಪ್ಯುವರ್‌ನನ್ನು ಕರೆದು ನುಡಿದ :

" ವಾಣಿಜ್ಯಕ್ಕೆ ಸಂಬಂಧಿಸಿದ ಈ ಕೆಲವು ವಿಷಯಗಳನ್ನು ಬರಕೊಳ್ಳಿ. (ಅತಿಥಿಯತ್ತ ತಿರುಗಿ) ಕೆಫ್ಟು, ನಮ್ಮ ಪ್ರಾಂತದಿಂದ ನೀವು ಕೊಳ್ಳಬಹುದಾದ ವಸ್ತುಗಳು ಯಾವುವು ?"

" ನೀವು ಏನುಕೊಟ್ಟರೂ ಕೊಳ್ತೀನೆ. ಅಧಿಕ ಧಾನ್ಯ ನಿಮ್ಮಲ್ಲಿ ಎಷ್ಟಿದ್ದರೂ ನನಗಿರಲಿ. ಭೂಮಿಯ ಹಲವಾರು ಕಡೆ ನನಗೆ ಗಿರಾಕಿಗಳಿದ್ದಾರೆ....ಒಳಗೆ ಬರ್ತಾ ಗಡಿಯಾರ ನೋಡಿದೆ. ಉತ್ಕೃಷ್ಟ! ಬಡಗಿ ಕೆಲಸ ಅಂದರೆ ಹಾಗಿರ್ಬೇಕು. ಎಪ್ಪತ್ತೈದು ಉಟೆನ್ ಮೌಲ್ಯ ಕಟ್ಟಬಹುದು. ಇಂಥದು ವರ್ಷಕ್ಕೆ ಇಪ್ಪತ್ತು ನನಗಿರಲಿ. ಇನ್ನೊಂದು ಹೊಸ ನಮೂನೆ ಗಡಿಯಾರ ಮೆಂಫಿಸ್‌ನಲ್ಲಿ ಸಿದ್ಧವಾಗಿದೆ. ಹಾಲುಗಲ್ಲಿನದ್ದು. ಮೇಲೂ ಕೆಳಗೂ ಅಗಲ ಬಾಯಿ. ಮಧ್ಯದಲ್ಲಿ ಸಣ್ಣ ರಂಧ್ರ. ನುಣುಪಾದ ಮರಳು ತುಂಬಿದ್ರೆ ಒಂದು ತಾಸಿಗೊಮ್ಮೆ ಬರಿದಾಗ್ತದೆ. ಮುಂದಿನ ಸಲ ಒಂದು ತಂದ್ಕೊಡ್ತೀನೆ. ನಿಮ್ಮ ಕುಶಲಕರ್ಮಿಗಳು ಅಂಥದನ್ನು ಸುಲಭವಾಗಿ ಮಾಡಬೌದು. ವರ್ಷಕ್ಕೆ ಹತ್ತು ನಾನು ಕೊಂಡ್ಕೊಳ್ತೀನೆ. ಮರದ ಗಡಿಯಾರದಷ್ಟೇ

ಮೌಲ್ಯ. ನಿಮ್ಮಲ್ಲಿ ಒಳ್ಳೇ ಬೇಟೆಗಾರರಿದ್ದಾರೆ ಅಂತ ಕೇಳಿದ್ದೇನೆ. ಕೇಳೋದೇನು ಬಂತು? ಸಿಂಹವೇ ಸಾಕ್ಷಿಯಾಗಿ ನಿಂತಿದೆಯಲ್ಲ? ಹರಿಣದ್ದು, ಚಿರತೇದು, ಸಿಂಹದ್ದು ಚರ್ಮ ಒಂದು ಚದರ ಮೊಳ ತುಂಡಿಗೆ ಎರಡು ಉಟೆನ್. ಹೊಲಿದು ಯೋಧರ ಉಡುಗೆ ರೂಪದಲ್ಲಿ ಕೊಡೋದಾದರೆ ಒಂದಕ್ಕೆ ಐದು ಉಟೆನ್. ಕೆತ್ತನೆ ಕೆಲಸದ ಕೈಗೋಲು ಊರುಗೋಲು ಒಂದು ಉಟೆನ್. ನೇಗಿಲು ಎರಡು ಉಟೆನ್. ಒಂದು ಜಾಡಿ ಜೇನು ಒಂದು ಉಟೆನ್. ಒಳ್ಳೇ ರಾಸುಗಳಿದ್ದರೆ ತಿಳಿಸಿ. ಬೇಕು. ಸಾಗಿಸೋದಕ್ಕೆ ರಾಸುದೋಣಿ ಕಳಿಸ್ತೇನೆ. ಒಂದು ಹೋರಿಗೆ ನೂರ ಹತ್ತೊಂಭತ್ತು ಉಟೆನ್. ಇಷ್ಟು ಬೆಲೆ ಕೊಡ್ತಾನಲ್ಲ—ಇವನಿಗೆ ಇದರ ಎಷ್ಟು ಪಟ್ಟು ಲಾಭವಿದೆಯೊ ಏನೊ ಅಂತ ನೀವು ಆಶ್ಚರ್ಯಪಡಬಾರದು. ನಿಮ್ಮ ದೇಶದಲ್ಲಿ ಹೇಳೋ ಹಾಗೆ ಮಾಟ್‌ನ ಆಣೆಯಾಗಿ ನುಡೀತೇನೆ: ವ್ಯಾಪಾರದಲ್ಲಿ ನಷ್ಟವೂ ಉಂಟು, ಲಾಭವೂ ಉಂಟು. ನಷ್ಟವಾಯ್ತು ಅಂತ ಕುಗ್ಗೋದಿಲ್ಲ; ಲಾಭವಾಯ್ತು ಅಂತ ಹಿಗ್ಗೋದಿಲ್ಲ. ಮಾಟ್ ನನ್ನನ್ನು ನಡೆಸ್ಕೊಂಡು ಹೋಗ್ತದೆ."

ಈ ಬಗೆಯ ವಾಣಿಜ್ಯದ ಉಪಯುಕ್ತತೆಯನ್ನು ಮೆನೆಪ್‌ಟಾ ಆಗಲೇ ಮನಗಂಡಿದ್ದ. ವಿವರ ತಿಳಿದಾಗ ಹರ್ಷಿತನಾದ.

ಶಸ್ತ್ರಾಸ್ತ್ರಗಳ ಸಮಸ್ಯೆಯೂ ಅವನನ್ನು ಕಾಡಿತ್ತು. ಖ್ನೆಮ್‌ನ ಕಡೆಗೊಮ್ಮೆ ನೋಡಿ ಆತ ಕೇಳಿದ:

"ಕೆಫ್ಟು, ನಮಗೆ ಶಸ್ತ್ರಾಸ್ತ್ರ ಸರಬರಾಜು ಮಾಡ್ತೀರಾ ?"

"ಎಷ್ಟು ಶಾಂತಿಪ್ರಿಯನಾದರೂ ಹೋರಾಟ ಮನುಷ್ಯನಿಗೆ ತಪ್ಪಿದ್ದಲ್ಲ. ಈಟಿ ಕಠಾರಿ ಬಿಲ್ಲು ಬಾಣ ತರಬಲ್ಲೆ."

"ಹಾಗೆಯೇ ಹತ್ತು ಹತ್ತು ಸುತ್ತಿಗೆ ಗರಗಸ ಭೈರಿಗೆಗಳೂ ಬೇಕು."

"ಇವು ಎರಡೆರಡು ಈಗಲೇ ಸಿದ್ಧ. ವಿನಿಮಯವಾಗಿ—"

"ಬಟ್ಟೆಗಿಟ್ಟೆ ?"

"ಓಹೋ !"

"ನಮ್ಮ ಮುಖಂಡರು ಸ್ನೊಫ್ರು ಅಂತ ಇದ್ದಾರೆ."

ಕೆಫ್ಟು ನಸುನಕ್ಕು ಅಂದ:

"ಸ್ನೊಫ್ರು–ಸೆಬೆಕ್ಬ. ಹೆಸರು ಕೇಳಿದ್ದೇನೆ."

ಈತ ಪ್ರಚಂಡ ಎಂದುಕೊಳ್ಳುತ್ತ, ಮೆನೆಪ್‌ಟಾನೆಂದ :

"ಸ್ನೊಫ್ರು ಮತ್ತು ಅವರ ಶಿಷ್ಯರು ಮಾಡಿರೋ ನೂರಾರು ಮೂರ್ತಿಗಳಿವೆ."

"ನೋಡ್ತೇನೆ. ರಾಜಧಾನಿಯಲ್ಲಿ ಮಾರಬೌದು."

ಸ್ನೊಫ್ರು ಮತ್ತು ಸೆಬೆಕ್ಬರನ್ನು ಕೂಡಾ ಕೆಫ್ಟ ಭೇಟಿಯಾಗುವುದು ವಿಹಿತ ಎನಿಸಿತು ಮೆನೆಪ್‌ಟಾಗೆ. ಇವತ್ತು ಸೆಬೆಕ್ಬ ಬರುವ ದಿನ, ಆದರೆ ತಡವಾಗಬಹುದು, ಹೇಳಿ ಕಳುಹಿಸಿದರೆ ಇಬ್ಬರೂ ಬೇಗನೆ ಬಂದಾರು—ಎಂದುಕೊಂಡು, ಖ್ನೆಮ್‌ನತ್ತ ನೋಡಿ. "ಸ್ನೊಫ್ರುವನ್ನೂ ಮಾವನನ್ನೂ ಕರಕೊಂಡ್ಬರ್ತೀಯಾ ?" ಎಂದ.

"ಅವರನ್ನು ನೋಡೋದಕ್ಕೆ ನಾನು ಉತ್ಸುಕನಾಗಿದ್ದೇನೆ," ಎಂದು ಕೆಫ್ಟ ನುಡಿದ. ಬಟಾನತ್ತ ನೋಡಿ ಮುಗುಳುನಗೆ ಬೀರಿ, "ಇವರ ಪರಿಚಯವಾಗಲಿಲ್ಲ," ಎಂದ.

"ಇವರು ಬಟಾ. ನಮ್ಮ ನದೀಸಾರಿಗೆ ಮುಖ್ಯಸ್ಥ. ಶ್ರೇಷ್ಠ ಅಂಬಿಗ."

"ಈಗ ಹೋದವರು ದಳಪತಿ ಖ್ನೆಮ್‌ಹೊಟೆಪ್ ಅಲ್ವಾ ?"

"ಹೌದು."

"ಇವರಿಬ್ಬರ ಹೆಸರು ಕೂಡಾ ನನಗೆ ಪರಿಚಿತ. ಆದರೆ ನೋಡಿರ್ಲಿಲ್ಲ."

"ನೆರೆ ಪ್ರಾಂತಗಳ ದಾರಿಯಾಗಿ ಹೊರಗೆ ಸುದ್ದಿ ಹಬ್ಬಿರ್ಬೇಕು."

"ನಿಜ. ಈ ಸುದ್ದಿ ರಾಜಧಾನಿಗೂ ಹೋಗಿರ್ತದೆ. ಆದರೆ ನಿಮ್ಮ ಅಸಾಧಾರಣ ಆಡಳಿತ ವ್ಯವಸ್ಥೆಯ ವಿಷಯ ಪೆರೋಗೆ ತಿಳಿದಿರಲಾರದು."

ಇಷ್ಟು ಹೇಳಿ, ಮೆನೆಪ್‌ಟಾನ ಮುಖವನ್ನು ನೋಡಿ, ಕೆಫ್ಟ ಮುಂದುವರಿದ :

"ತಿಳೀಬೇಕು, ತಿಳಿಸ್ಬೇಕು. ನೀವು ಆಕ್ಷೇಪಿಸೋದಿಲ್ಲವಾದರೆ ನಾನು ಆ ಕೆಲಸ ಮಾಡ್ತೇನೆ. ನೀವು ವಾಣಿಜ್ಯ ಸಂಬಂಧದ ವಿಷಯ ಚಿಂತಿಸ್ಬೇಕಾಗಿಲ್ಲ. ಅದು ಬೇರೆ, ಇದು ಬೇರೆ."

ಮೆನೆಪ್‌ಟಾ ಏನನ್ನೂ ಹೇಳಲಿಲ್ಲ. ಮುಗುಳುನಕ್ಕ.

ಕೆಫ್ರು, ಮಾತು ಬದಲಿಸಿದ.

"ಆಹಾ ! ಈ ಕಂಬಗಳಲ್ಲಿ ಒಂದಕ್ಕೆ ನಾಯಕರನ್ನು ಬಿಗಿದಿದ್ರು !"

ಮೆನೆಪ್‌ಟಾನನ್ನು ಕಟ್ಟಿದ್ದ ಕಂಬದತ್ತ ಸಾಗಿ, "ಹೌದು ; ಈ ಕಂಬಕ್ಕೆ." ಎಂದ ಇಪ್ಯುವರ್.

ಮೆನೆಪ್‌ಟಾ ಎದ್ದು ನಿಂತು, "ಸ್ನೊಫ್ರು ಸೆಬೆಕ್ಬು ಇನ್ನೇನು ಬಂದ್ಬಿಡ್ತಾರೆ. ನಾವು ಉದ್ಯಾನ ನೋಡ್ತಿರೋಣ," ಎಂದ.

ಕೆಫ್ರು ಎದ್ದು ಮೆನೆಪಟಾನನ್ನು ಹಿಂಬಾಲಿಸಿದ. ಸಿಂಹವಿದ್ದಲ್ಲಿಗೆ ಬಂದಾಗ ಎರಡು ಕ್ಷಣ ನಿಂತು. "ಸೊಗಸಾದ ಪ್ರಸಾದನ ಕೆಲಸ. ಮನುಷ್ಯ ರಕ್ಷಿತ ಶವವಾಗಿ ಗೋರಿ ಕಾಣ್ತಾನೆ. ಪ್ರಾಣಿ ಸೊರಗದ ಬೊಂಬೆಯಾಗಿ ನಿತ್ಯಾಲಂಕಾರಕ್ಕೆ ನೆರವಾಗ್ತದೆ.... ಕಣ್ಣಿಗೆ ಕಪ್ಪು ಪಟ್ಟಿ ! ಇಲ್ಲಿ ಕಂದಾಯ ಅಧಿಕಾರಿ ಟಿಹುಟಿಯು ಭಟರ ಮುಖ್ಯಸ್ಥನ ಒಂದು ಕಣ್ಣು ಹೋಯ್ತಂತಲ್ಲ ? ಕೆಳಗಡೆ ಏನೋ ಬರೆದಿದ್ದೀರಿ. ನನಗೆ ಓದಲು ಬರದು. ನಿಮಗೆ ಗೊತ್ತು. ನಮ್ಮ ದೇಶದಲ್ಲಿ ಆಡುವ ಭಾಷೆಗೆ ಲಿಪಿ ಇಲ್ಲ. ಏನಿದ್ದರೂ, ವರ್ತಕರ ಗುರುತಿನ ಗೆರೆಗಳು ಮಾತ್ರ. ಇದು ಈ ಸಿಂಹ ಹೊಡೆದವರ ಹೆಸರು ಇರಬೇಕು."

"ಹೌದು. ಖ್ನೆಮ್‌ಹೊಟೆಪ್ ಹೊಡೆದದ್ದು."

"ದಳಪತಿ ? ಸಂತೋಷ, ಸಂತೋಷ."

"ಊರಿನ ಹುಡುಗರು ಈ ಸಿಂಹಕ್ಕೆ ಬಕಿಲ ಅಂತ ಹೆಸರಿಟ್ಟಿದ್ದಾರೆ."

"ಬಕಿಲ ? ಕಣ್ಣು ಕಳಕೊಂಡವನು ?"

"ಹೌದು."

ಸಿಂಹವನ್ನೂ ಅದರ ಬಲಗಣ್ಣನ್ನೂ ಮತ್ತೊಮ್ಮೆ ಕೆಫ್ರು ನೋಡಿ ಖೊಖೋ ಎಂದು ನಕ್ಕ. ಎರಡು ಹೆಜ್ಜೆ ಮುಂದೆ ಸರಿದು ಗಡಿಯಾರದ ಬಳಿ ನಿಂತು, "ಭೇಷ್ !" ಎಂದು ಮೆಚ್ಚುಗೆಯ ಉದ್ಗಾರ ತೆಗೆದ.

ಮಹಾದ್ವಾರದ ಹೊರಗೆ ಆತನೆಂದ :

"ಈ ನಿಮ್ಮ ವಿಜಯ ಸ್ತಂಭವೂ ರಮ್ಯ ಕಲ್ಪನೆ, ಪ್ರಾಕಾರವಿಲ್ಲದ ರಾಜಗೃಹ ; ಮುಖವಾಡವಿಲ್ಲದ ಮನುಷ್ಯರು. ವಿಸ್ಮಯಕರ ! ಇಲ್ಲಿಗೆ ಬಂದು ನಾನು ಕಂಡದ್ದನ್ನು ಪೆರೋಗೆ ತಿಳಿಸೋ ವಿಷಯ—"

“ಸ್ನೊಫ್ರು ಸೆಬೆಕ್ಖು ಬರಲಿ. ಹಿರಿಯರ ಸಮಿತಿಯೂ ಪರ್‍ಯಾಲೋಚಿಸ್ಲಿ. ಆಮೇಲೆ—”

“ಆಗಲಿ, ಆಗಲಿ. ಸಂಜೆಯೊಳಗೆ ಹೇಳಿ,”

“ನಾಲ್ಕೈದು ದಿನ ಇದ್ದು ಹೋಗಬಹುದಲ್ಲ ?”

“ಕ್ಷಮಿಸ್ಬೇಕು. ಆಗಲೇ ತಡವಾಗಿದೆ. ರಾಜಧಾನಿಯಲ್ಲಿ ವರ್ತಕರು ನನ್ನ ದಾರಿ ನೋಡ್ತಿರ್ತಾರೆ. ಮುಂದಿನ ಸಲ ಹೇರು ತುಂಬಿಕೊಂಡು ಬಂದಾಗ ನೀವು ಹೇಳಿದಂತೆ ಕೇಳ್ತೇನೆ.”

“ನಿಮ್ಮಿಷ್ಟ. ಇವತ್ತು ಸಂಜೆಯ ಆತಿಥ್ಯವನ್ನಾದರೂ ಸ್ವೀಕರಿಸಿ ಹೊರಡಿ.”

ಕೆಫ್ಟು ಇದನ್ನು ನಿರೀಕ್ಷಿಸಿದ್ದ. ಅವನ ಸಮಸ್ಯೆ, ನಾವೆಯ ನೌಕರರು. ಹೊರಗೆ ಬಿಟ್ಟರೆ ಸಾಕು. ಅವರ ಮೂಗು ಸೂಳೆಗೇರಿಯತ್ತ ನೇರವಾಗಿ ಸಾಗುತ್ತಿತ್ತು. ನೀರಾನೆ ಪ್ರಾಂತದೊಡನೆ ಸ್ಥಾಪಿಸಬೇಕಾದ ವಾಣಿಜ್ಯ ಸಂಬಂಧದ ಸೂಕ್ಷ್ಮ ಘಟ್ಟ ಅದು. ಯಾವುದೇ ಬಗೆಯ ಆಭಾಸಕ್ಕೆ ಎಡೆಗೊಡದೆ ಅಲ್ಲಿಂದ ಹೊರಡುವುದು ಶ್ರೇಯಸ್ಕರ. ದೋಣಿ ಲಂಗರು ಬಿಟ್ಟ ಕಡೆ ಹೆಣ್ಣುಗಳು ಬೇಕು, ನೌಕರರಿಗೂ ತನಗೂ. ನೆಫೆರುರಾ ಬಗೆಗೆ ಕೆಫ್ಟು ಕೇಳಿದ್ದ. ಅವಳು ನರ್ತಿಸುವುದನ್ನು ನೋಡುವ ಆಸೆ ಅವನಿಗಿಲ್ಲವೆ ? ಆದರೆ ಆತ್ಮಸಂಯಮ ಅವನ ವೃತ್ತಿಯ ಮುಖ್ಯ ಲಕ್ಷಣ. ನಿರೀಕ್ಷಿಸಿದ್ದ ಪ್ರಶ್ನೆಗೆ ಉತ್ತರವನ್ನೂ ಅವನು ಸಿದ್ಧಗೊಳಿಸಿದ್ದ.

“ಅನ್ಯಥಾ ಭಾವಿಸಬಾರದು. ಮುಚ್ಚಂಜೆಯ ಹೊತ್ತಿಗೆ ಹೊರಟರೆ ಆರನೆಯ ಬೆಳಗ್ಗೆ ಮೆಂಫಿಸ್ ಸೇರ್ತೇವೆ. ಬಿಸಿಲೇರಿದ ಮೇಲೆ ರಾಜಧಾನಿ ತಲಪಿದರೆ ಆ ದಿವಸ ಏನು ಕೆಲಸವೂ ಆಗೋದಿಲ್ಲ.”

ಮೆನೆಪ್‌ಟಾ ಪರೀಕ್ಷಕ ನೋಟದಿಂದ ಕೆಫ್ಟುವಿನ ಮುಖವನ್ನು ದಿಟ್ಟಿಸಿದ. ವಿನಮ್ರತೆಯ ಹೊರತಾಗಿ ಬೇರೆ ಯಾವ ಭಾವನೆಯೂ ಅಲ್ಲಿರಲಿಲ್ಲ.

ಕೆಫ್ಟು ಮತ್ತು ಮೆನೆಪ್‌ಟಾ ಹೂಗಿಡಗಳನ್ನು ನೋಡುತ್ತಿದ್ದಂತೆ, ಸ್ನೊಫ್ರು ಮತ್ತು ಸೆಬೆಕ್ಖುರನ್ನು ಕರೆದುಕೊಂಡು ಖ್ನೆಮ್‌ಹೊಟೆಪ್ ಅಲ್ಲಿಗೆ ಬಂದ. ವಾಣಿಜ್ಯ ಸಂಬಂಧದ ವಿವರಗಳನ್ನು ಖ್ನೆಮ್‌ನಿಂದ ಅವರು ಆಗಲೇ

ಅರಿತಿದ್ದರು. ಹೊಸ ಸಾಧ್ಯತೆಗಳ ಸುಂದರ ದ್ವೀಪವೊಂದು ಸ್ನೊಫ್ರುಗೆ ಮಸುಕು ಮಸುಕಾಗಿ ಕಾಣಿಸತೊಡಗಿತ್ತು.

ಸ್ನೊಫ್ರು ಮೆನೆಪ್‌ಟಾಗೆಂದ :

"ಈ ವಾಣಿಜ್ಯ ವ್ಯವಹಾರದಿಂದ ಒಳ್ಳೇದಾಗ್ತದೆ. ಅಲ್ಲವಾ ?"

ಆತ ಉತ್ತರಿಸಿದ :

"ನಮ್ಮ ಪ್ರಾಂತಕ್ಕೆ ಇದರಿಂದ ಪ್ರಯೋಜನ ಇದೆ, ಲಾಭ ಇದೆ."

ಕೆಫ್ಟುವಿನತ್ತ ತಿರುಗಿ ಅವನೆಂದ :

"ಬನ್ನಿ. ಸ್ನೊಫ್ರು ಮನೆಯಲ್ಲಿರೋ ಮೂರ್ತಿಗಳನ್ನು ನೋಡುವಿರಂತೆ. ವಿಕ್ರಯಕ್ಕೆ ಇರೋ ಬಟ್ಟೆಗಳನ್ನು ನೇಕಾರರು ಅಲ್ಲಿಗೆ ತಂದು ತೋರಿಸ್ತಾರೆ."

"ಸುತ್ತಿಗೆ, ಗರಗಸ, ಭೈರಿಗೆ ತರಿಸ್ತೇನೆ," ಎಂದು ನುಡಿದು ಕೆಫ್ಟು ಕೈ ತಟ್ಟಿ, ದೂರದಲ್ಲಿದ್ದ ತನ್ನ ನೌಕರರನ್ನು ಕರೆದು, ಅವರಿಗೆ ನಿರ್ದೇಶವಿತ್ತ.

ಸ್ನೊಫ್ರು ಸೆಬೆಕ್ಖುರನ್ನು ಮೆನೆಪ್‌ಟಾ ನಾಲ್ಕು ಹೆಜ್ಜೆ ಮುಂದಕ್ಕೆ ಕರೆದೊಯ್ದು, "ಕೆಫ್ಟು ಪೆರೋನನ್ನು ಕಾಣ್ತಾನಂತೆ," ಎಂದ. "ನಮ್ಮ ರೀತಿ ನೀತಿ ಇವನಿಗೆ ಬಹಳ ಮೆಚ್ಚುಗೆಯಾಗಿದೆ," ಎಂದು ಮಾತು ಸೇರಿಸಿದ.

ಏನು ಹೇಳಬೇಕು ಎಂದು ತೋಚದೆ ಸ್ನೊಫ್ರು ಸೆಬೆಕ್ಖು ಸುಮ್ಮನಿದ್ದರು.

ಮೆನೆಪ್‌ಟಾನೇ ಅಂದ :

"ಆತ ಪೆರೋನನ್ನು ಕಾಣೋದು ತನ್ನ ಕೆಲಸದ ಮೇಲೆ, ನಮ್ಮ ದೂತನಾಗಿ ಅಲ್ಲ, ಒಳ್ಳೇ ಮಾತು ಹೇಳಿದರೆ ಹೇಳ್ಲಿ. ನಷ್ಟವೇನೂ ಇಲ್ಲ. ಸೆಮುನ ಮನೆಗೆ ಹೋಗಿ ಹಿರಿಯರಿಗೂ ತಿಳಿಸಿಬಿಡ್ತೇನೆ, ಈತನನ್ನು ನೀವು ಕರಕೊಂಡು ನಡೀರಿ."

ಕೆಫ್ಟುವಿನೊಡನೆ ಸ್ನೊಫ್ರು ಮತ್ತು ಸೆಬೆಕ್ಖು ಹೋದೊಡನೆಯೇ ಬಟಾ ಮತ್ತು ಖ್ನೆಮ್‌ಹೊಟೆಪ್‌ರ ಜತೆ ಮೆನೆಪ್‌ಟಾ ಸೆಮುನ ಮನೆಗೆ ಹೋದ. ಉಳಿದ ಮೂವರು ಹಿರಿಯರೂ ಅಲ್ಲಿಗೆ ಬಂದರು.

ವಿಷಯದ ಸಾಧಕ ಬಾಧಕಗಳನ್ನು ವಿವೇಚಿಸಿ ಸೆಮು ನುಡಿದ:

"ಇವನು ರಾಜಧಾನಿಯಲ್ಲಿ ನಮ್ಮ ಪ್ರಸ್ತಾಪ ಮಾಡೋದರಿಂದ ಪೆರೋನ

ಮನಸ್ಸಿನಲ್ಲಿ ಏನಿದೆ ಅನ್ನೋದು ಗೊತ್ತಾಗ್ತದೆ. ವರ್ತಕರು ಸಂದೇಶ— ಸಮಾಚಾರ ಒಯ್ಯೋದು ಸಾಮಾನ್ಯ. ಅಲ್ದೆ, ಈತ ಸ್ನೇಹ ಬಯಸಿದ್ದಾನೆ, ನಮ್ಮಿಂದ. ಸದ್ಭಾವನೆಯಿಂದ ಸದ್ಭಾವನೆಯೇ ಹುಟ್ತದೆ. ರಾಜನೀತಿ ಒಂದು ಬಗೆಯ ಚೌಕಮಣೆ ಆಟ, ಒಬ್ಬರು ಒಂದು ಕಾಯಿ ಸರಿಸಿದರೆ ಇನ್ನೊಬ್ಬರು ಇನ್ನೊಂದು ಸರಿಸೋದು. ನಡೀಲಿ. ಆಡುವಾಗ ಯಾರೂ ನಿದ್ದೆ ಮಾಡೋದಿಲ್ವಲ್ಲ ?"

ನಾಯಕನ ಅಭಿಮತವನ್ನು ಸೆನು ತನ್ನದೇ ಆದ ರೀತಿಯಲ್ಲಿ ಪುಷ್ಟೀಕರಿಸಿದ್ದ. ಸಮಿತಿಯ ಇತರರಿಗೂ ಅದು ಸಮ್ಮತವಾಗಿತ್ತು.

ಮೆನೆಪ್‌ಟಾ ಸ್ನೊಫ್ರುವಿನ ಮನೆಗೆ ಬಂದಾಗ ವ್ಯವಹಾರ ಮುಗಿದಿತ್ತು. ಐದು ಬಟ್ಟೆಚೌಕಗಳು, ಐವತ್ತು ಮೂರ್ತಿಗಳಿಗೆ ಎರಡೆರಡು ಸುತ್ತಿಗೆ ಗರಗಸ ಭೈರಿಗೆಗಳು ವಿನಿಮಯವಾಗಿದ್ದುವು. ಉಪಕರಣಗಳನ್ನು ರಾಜಗೃಹಕ್ಕೆ ಕಳುಹಿದರು. ನೇಕಾರರು ಮತ್ತು ಸ್ನೊಫ್ರು ಮಾರಿದ ಸಾಮಗ್ರಿಗಳ ಮೌಲ್ಯವನ್ನು ಇಪ್ಯುವರ್ ಬರೆದಿಟ್ಟ. (ಅಗತ್ಯ ಬಿದ್ದಾಗ ರಾಜಗೃಹದ ಕಣಜದಿಂದ ಆ ಮೌಲ್ಯದ ಧಾನ್ಯ ಪಡೆಯಲು ಆ ದಾಖಲೆ ಆಧಾರ.)

ಒತ್ತಾಯಕ್ಕೆ ಮಣಿದು ಕೆಫ್ಟು ಸ್ನೊಫ್ರುವಿನ ಮನೆಯಲ್ಲಿ ಒಂದು ಬಟ್ಟಲು ಖಿವವ ಕುಡಿದ.

"ಇಷ್ಟು ರುಚಿಯಾದ ಪೇಯ ನೀವು ತಯಾರಿಸ್ತೀರಿ ಅಂತ ಗೊತ್ತಿರ್ಲಿಲ್ಲ. ಇದ್ದರೆ ಒಂದು ಚೀಲ ಖಿವವವನ್ನೂ ಕೊಡಿ," ಎಂದ, ನಗೆ ಗಾಂಭೀರ್ಯಗಳನ್ನು ಬೆರೆಸಿ.

ಮೆನೆಪ್‌ಟಾನೆಂದ :

"ಮುಂದಿನ ಸಲ ಒಂದಲ್ಲ ಹತ್ತು ಚೀಲ ಕೊಡೋಣ."

"ಕೆಫ್ಟು ಹೊರಡಲು ಅನುವಾದಾಗ ಮೆನೆಪ್‌ಟಾನೆಂದ :

"ಕಂಗೆಟ್ಟ ಜನ ನೀರಾನೆ ಪ್ರಾಂತದಲ್ಲಿ ಶಾಂತಿ ನೆಮ್ಮದಿಯ ದಾರಿ ಕಂಡ್ಕೊಂಡಿದ್ದಾರೆ. ಕಷ್ಟದ ದಾರಿ. ಆದರೂ ಮಾಟ್‌ಗೆ ಅನುಗುಣವಾಗಿ ನಡೀತಾ ಗುರಿ ಸೇರ್ತಾರೆ. ಈ ವಿಷಯ ಪೆರೋಗೆ ತಿಳಿಸಿಬಿಡಿ."

ಕೆಫ್ಟು ಗಡ್ಡವನ್ನು ಅಂಗೈಯಿಂದ ಒತ್ತಿ ನುಡಿದ :

"ಭರತೋತ್ಸವಕ್ಕೆ ಬನ್ನಿ ಅಂತ ಒಂದು ವೇಳೆ ಪೆರೋನಿಂದ ನಿಮಗೆ ರಾಯಸ ಬಂದರೆ ?"

"ಪೆರೋನಿಂದ ? ರಾಯಸ ?"

"ಹ್ಞ. ಒಂದು ವೇಳೆ ?

"ಮನಸ್ಸಿನಲ್ಲಿರೋದನ್ನ ಹೇಳಿಯೇ ಬಿಡ್ತೇನೆ, ಕೆಪ್ಟ. ನೀವು ಅಸಾಮಾನ್ಯ ಮನುಷ್ಯ. ಉತ್ತರ ಈಗಲೇ ಬೇಕೆ ? ಹೊಸ ಪರಿಸ್ಥಿತಿ ನಿರ್ಮಾಣವಾದಾಗ ಸೂಕ್ತ ಕಾರ್ಯವಿಧಾನ ರೂಪಿಸೋದು ನಮ್ಮ ಪದ್ಧತಿ."

"ಆಗಲಿ."

ಮೇಲುದವನ್ನು ಬಲಗೈಯಿಂದ ಒತ್ತಿ, ಬಾಗಿ, ಕೆಪ್ಟ ನಮಿಸಿದ.

ಮೆನೆಪ್‌ಟಾ ದಳಪತಿಯತ್ತ ನೋಡಿ ಅಂದ :

"ಖ್ನೆಮ್, ಕಟ್ಟೆಯವರೆಗೂ ಇವರ ಜತೆ ಹೋಗಿ ಬಾ."

ಅಲ್ಲಿದ್ದವರಿಗೆಲ್ಲ ಒಟ್ಟಾಗಿ ವಂದಿಸಿ, ಕೊನೆಯದಾಗಿ ಕೆಪ್ಟ ಅಂದ :

"ದಳಪತಿಯನ್ನು ಬೆಂಗಾವಲಿಗಿಟ್ಟುಕೊಂಡು ನಡೆಯುವವನು ಭಾಗ್ಯ ಶಾಲಿ !"

*  *  *  *

ಚಿಕ್ಕಂದಿನಿಂದಲೂ ತಾನು ಕಾಯ್ದಿರಿಸಿದ್ದ ಲಿಪಿ ಸುರುಳಿಗಳನ್ನೆಲ್ಲ ಇಪ್ಯುವರ್ ಪರಾಮರ್ಶಿಸಿ, 'ನಾಳೆಯ ಸತ್ಪ್ರಜೆ'ಗಳಿಗೆ ಪಾಠ ಹೇಳಲು ಯೋಗ್ಯ ವಾದುದನ್ನು ಒತ್ತಟ್ಟಿಗೆ ಇರಿಸಿದ್ದ.

ನೀಲ ನದಿಯ ಮಹಾಪೂರ ಏರುತ್ತ ಹೋದಂತೆ, ಪಾಠ ಪ್ರವಚನಗಳ ಆಳವೂ ಹೆಚ್ಚಿತು.

ನೀತಿಬೋಧೆಯನ್ನು ಹೇಳಿಕೊಡುವಾಗ ಇಪ್ಯುವರ್‌ಗೆ ಬಲು ಉತ್ಸಾಹ. ನೆಲದ ಮೇಲೆ ಕಾಲುಗಳನ್ನು ಮಡಚಿ ತೊಡೆಗಳನ್ನು ಅಗಲಿಸಿ ಕುಳಿತು, ಲಿಪಿ ಸುರುಳಿಯನ್ನು ಎರಡೂ ಕೈಗಳಲ್ಲಿ ಎತ್ತಿ ಹಿಡಿದು ಅವನು ರಾಗವಾಗಿ ಓದುತ್ತಿದ್ದ :

" ಒಂದು ಮೊಳ ಬುವಿಗಾಗಿ ಆಸೆಬುರುಕನಾಗದಿರು
ವಿಧವೆಯ ಹೊಲಕೆ ಅತಿಕ್ರಮಿಸಿ ನುಗ್ಗದಿರು
ಹೊಲಗಳನ್ನು ಉಳು
ಒಕ್ಕುವ ಕುಟ್ಟುವ ನಿನ್ನ ಅಂಗಳದಿಂದಲೇ
ನಿನಗೆ ಬೇಕಾದ ತಿನಿಸು ಉಣಿಸೆಲ್ಲವನು ನೀ ಪಡೆವೆ
ಅತಿಕ್ರಮಣದಿಂದ ಗಳಿಸುವ ಐದುನೂರು ಬಳ್ಳಕಿಂತ
ದೇವರು ನಿನಗೀವ ಒಂದು ಬಳ್ಳವೆ ಮೇಲು
ಉಗ್ರಾಣದಲ್ಲಿನ ಐಸಿರಿಗಿಂತ
ದೇವರ ಕೈಯಲ್ಲಿ ಬಡತನ ಒಳಿತು
ಸಿರಿವಂತಿಕೆಯ ಸುಖಕಿಂತ ವಾಸಿ
ಬಿಸಿ ಬಿಸಿ ರೊಟ್ಟಿಯ ತುಣುಕು."

ಓದಿ ಆದ ಮೇಲೆ ಇಪ್ಯುವರ್ ಒಬ್ಬೊಬ್ಬರಾಗಿ ಹುಡುಗರನ್ನು ಕರೆದು, ಚಿತ್ರಲಿಪಿಯನ್ನು ನೋಡಿ ಪದಗಳನ್ನು ಗುರುತಿಸಲು ಹೇಳುತ್ತಿದ್ದ.

ರಾಮೆರಿಪ್‌ಟಾ ಜಾಣ ಹುಡುಗ. ಅವನ ಸರದಿ ಯಾವಾಗಲೂ ಕೊನೆಗೆ.

ಇಪ್ಯುವರ್ ಮುಂದುವರಿಯುತ್ತಿದ್ದ :

" ಸಾಯುವುದಕ್ಕೆ ಮುಂಚೆ ರೈತ ತನ್ನ ಮಗನಿಗೆ ಹೇಳುವ ಕಿವಿಮಾತು ಯಾವುದು ? 'ನಿನ್ನ ಹೊಲದಿಂದ ಎಷ್ಟು ಹೆಚ್ಚು ಸಾಧ್ಯವೋ ಅಷ್ಟು ಫಸಲು ಪಡೆ ; ಅತ್ಯಂತ ಶ್ರಮ ಪಡು. ಕೆಲಸದಲ್ಲಿ ಮೂಗು ನೆಟ್ಟು ನೆಲವನ್ನು ಉಳು'."

ಬದುಕಿನ ಅನಂತರದ ಸಮಸ್ಯೆ ಅರ್ಥಮಾಡಿಕೊಳ್ಳಲು ಕಷ್ಟ. ಆದರೂ ಎಲ್ಲ ಎಳೆಯರೂ ಕಲಿಯಲೇಬೇಕಾದ ಸಂಗತಿಯಿದು.

"ಐಹಿಕ ಸುಖದ ಕಾಲಾವಧಿ ಒಂದು ಕನಸು. ಆದರೆ, ಪಶ್ಚಿಮವನ್ನು ತಲಪಿದವನಿಗೆ ಸುಸ್ವಾಗತ ಕಾದಿರುತ್ತದೆ."

ಅರ್ಥವಾಗಲೆಂದು ವಿವರಣೆಯನ್ನೂ ಆತ ನೀಡುತ್ತಿದ್ದ :

" ಪಶ್ಚಿಮ ತಲಪೋದು ಅಂದರೆ ಸಾಯೋದು. ಗೋರಿ ಕಾಣೋದು—ತಿಳೀತೇನ್ರೋ ?"

ಹುಡುಗರು ತಲೆ ಆಡಿಸುತ್ತಿದ್ದರು.

ಇಪ್ಯುವರ್‌ಗೆ ಈಗ ಬಹಳ ಅರ್ಥಪೂರ್ಣವಾಗಿ ಕಂಡ ಒಂದು ಹಳೆಯ ಮಾತು ಇತ್ತು. ದೇವರು ಹೇಳಿದ್ದು :

"ಬಡವರು ಮತ್ತು ದೊಡ್ಡ ಮನುಷ್ಯರು ಇಬ್ಬರಿಗೂ ಹಕ್ಕು ಇರಲೆಂದೇ ಮಹಾ ಪ್ರವಾಹವನ್ನು ನಾನು ಸೃಷ್ಟಿಸಿದೆ."

ಇದಕ್ಕೂ ಇಪ್ಯುವರ್‌ನ ವ್ಯಾಖ್ಯೆ ಇತ್ತು :

"ನೆನಪಿಡಿ ! ನೆನಪಿಡಿ ! ದೇವರೇ ಹೇಳಿದ್ದಾನೆ — ಶ್ರೀಮಂತರಿಗೆ ಇರೋ ಹಕ್ಕು ಬಡವರಿಗೂ ಇದೆ."

ನಾಣ್ಣುಡಿಗಳನ್ನು ಇಪ್ಯುವರ್ ಹೇಳಿಕೊಡುತ್ತಿದ್ದ :

" ಆಡಿದ ಮಾತು ಹೃದಯಕ್ಕೆ ಇಂಧನ."

ಅವನೆನ್ನುತ್ತಿದ್ದ :

" ಈ ಸುಂದರ ವಾಕ್ಯ ಮರೀಬೇಡಿ ! ಬೆಳಗಿನ ಗರ್ಭದಿಂದ ರಾ ಹೊರ ಬರುತ್ತಾನೆ."

ಹುಡುಗರು ಆ ಮಾತನ್ನು ಪುನರುಚ್ಚರಿಸುತ್ತಿದ್ದರು.

ರಾಜಗೃಹದ ಈ ಲೆಕ್ಕಿಗ ಲಿಪಿಕಾರನ ಹಿರಿಮೆಯನ್ನು ಬಣ್ಣಿಸದ ದಿನ ವಿಲ್ಲ :

" ಲಿಪಿಕಾರನಾಗು........ಅಲಂಕೃತ ಗೋರಿಕಲ್ಲಿಗಿಂತ ಹೆಚ್ಚು ಪರಿಣಾಮ ಕಾರಿ, ಪುಸ್ತಕ."

ಶಿಷ್ಯರನ್ನು ಆತ ಪ್ರಶ್ನಿಸುತ್ತಿದ್ದ :

" ಲಿಪಿಕಾರ ಏನೇನು ಮಾಡುತ್ತಾನೆ, ಹೇಳಪ್ಪ. ನೀನು....ನೀನು...."

ಸರಿಯಾದ ಉತ್ತರ ರಾಮೆರಿಪ್‌ಟಾನಿಂದ ಬರುತ್ತಿತ್ತು.

"ಕಸಾಯಿ ಮನೆಗೆ ಹೊರಟ ರಾಸುಗಳನ್ನು ಲಿಪಿಕಾರ ಎಣಿಸುತ್ತಾನೆ; ವಿಕ್ರಯಕ್ಕೆಂದು ಅಳೆಯುವ ಧಾನ್ಯದ ಲೆಕ್ಕವಿಡುತ್ತಾನೆ; ಕರಾರು—ಉಯಿಲು ಗಳನ್ನು ಬರೆದು ಕೊಡುತ್ತಾನೆ."

ಒಂದು ಲಿಪಿ ಸುರುಳಿಯ ಹೊರಗಿನ ಗುರುತನ್ನು ಇಪ್ಯುವರ್ ಗಮನಿಸಿ, ಅದನ್ನು ಜಾಗರೂಕತೆಯಿಂದ ಬಿಡಿಸುತ್ತಿದ್ದ :

" ಶಾಶ್ವತ ಕೀರ್ತಿ ಲಭಿಸೋದು ಲಿಪಿಕಾರನಿಗೆ ಮಾತ್ರ. ಗೊತ್ತೊ ? ಒದ್ದೀನಿ ಕೇಳಿ : ಅವರು ನಮ್ಮ ಮುಂದಿಲ್ಲವಾದರೂ ಅವರ ಹೆಸರುಗಳು ಅಮರವಾಗಿವೆ. ಬಾಗಿಲುಗಳನ್ನೂ ಕಟ್ಟಡಗಳನ್ನೂ ನಿರ್ಮಿಸಿದರೆ ಅವು ನೆಲ ಸಮವಾಗುತ್ತವೆ. ಅಂತ್ಯವಿಧಿ ನಡೆಸಿದರೆ ಏನಾಯಿತು ? ಗೋರಿಕಲ್ಲುಗಳಿಗೆ ಕಲ್ಮಷ ಅಂಟಿಕೊಳ್ಳುತ್ತದೆ. ಗೋರಿಗಳನ್ನೇ ಮರೆತುಬಿಡುತ್ತಾರೆ. ಆದರೆ, ಲಿಪಿಕಾರರು ರಚಿಸಿದ ಪುಸ್ತಕಗಳಿಂದಾಗಿ, ಅವರ ಹೆಸರುಗಳನ್ನು ಈಗಲೂ ಉಚ್ಚರಿಸುತ್ತಾರೆ. ಅವರ ನೆನಪು ಅನಂತ ಕಾಲ ಉಳಿಯುತ್ತದೆ. ಲಿಪಿಕಾರ ನಾಗು, ನಿನ್ನ ಹೆಸರೂ ಅದೇ ರೀತಿ ಸ್ಥಿರವಾಗುತ್ತದೆಂಬುದನ್ನು ಮನಸ್ಸಿನಲ್ಲಿ ಇಟ್ಟುಕೋ."

ಅಂತ್ಯದಲ್ಲಿ ಯಾವಾಗಲೂ ಇಪ್ಯುವರ್ ಅನ್ನುತ್ತಿದ್ದ :

"ಇವತ್ತಿಗೆ ಸಾಕು. ಇನ್ನು ಮನೆಗೆ ಹೋಗಿ. ನಾಯಕರು ಬರೋ ಹೊತ್ತಾಯ್ತು."

ರಾಮೆರಿಯನ್ನು ಹಿಂಬಾಲಿಸಿ ಹುಡುಗರೆಲ್ಲ ಹೊರಬೀಳುತ್ತಿದ್ದರು.

* * * *

ನೆಫಿಸ್‌ಗೆ ಬಸಿರು ನಿಂತಿತೆಂದು ಮೆನೆಪ್‌ಟಾ ಸುಖಿ.

ಮಹಾಪೂರದ ದೈನಂದಿನ ವರದಿಯಿಂದ ನಾಯಕನಿಗೆ ಹರ್ಷ.

ನೀರು ಕ್ರಮ ಕ್ರಮವಾಗಿ ಏರುತ್ತಿತ್ತು. ನೀರು ಅತ್ಯಂತ ಎತ್ತರವನ್ನು ಮುಟ್ಟುತ್ತಿದ್ದುದು ನೂತನ ವರ್ಷದ ಮೂರನೆಯ ತಿಂಗಳಲ್ಲಿ. ಆಗ ನೀಲ ಭರತದ ಭಾರೀ ಹಬ್ಬ ರಾಜಧಾನಿಯಲ್ಲಿ.

ಆ ಹಬ್ಬದ ದಿನ ಹತ್ತಿರ ಬಂದಂತೆ ಮೆನೆಪ್‌ಟಾಗೆ ಆತಂಕ. ಕೆಫು ಪ್ರಸ್ತಾಪಿಸಿದ್ದ ಕರೆಯೋಲೆಯ ನೆನಪಾಗುತ್ತಿತ್ತು, ಎಂದಾದರೊಮ್ಮೆ. ಆದರೆ ಅದು ಅವನಿಗೆ ಮುಖ್ಯವಾಗಿರಲಿಲ್ಲ. ಮಹತ್ವದ್ದು, ಹಬ್ಬದ ವೇಳೆಗೆ ನೀಲ ನದಿ ಮುಟ್ಟುವ ಎತ್ತರ. ಎಂದಿಗಿಂತ ನಾಲ್ಕು ಮೊಳ ಹೆಚ್ಚಾದರೆ ಬಹ್ವಂ

ಹಳ್ಳಿಗಳೆಲ್ಲ ಮುಳುಗಡೆಯಾಗುವ ಸಂಭವ. ಹಾಗೆಯೇ ಕೆಲವು ಮೊಳ ಕೆಳಗೇ ಮಹಾಪೂರ ಮುಕ್ತಾಯವಾದರೆ, ಸಮೃದ್ಧ ಫಸಲು ಸಾಧ್ಯವಾಗದ ಪರಿಸ್ಥಿತಿ.

ಹಾಗೂ ಆಗಲಿಲ್ಲ; ಹೀಗೂ ಆಗಲಿಲ್ಲ. ಹಿತಮಿತಿಯನ್ನು ಮುಟ್ಟಿ ಮಹಾಪೂರ ನಿಂತಿತು. ಅದು ಅವರ ಪಾಲಿಗೆ ' ಒಳ್ಳೆಯ ನೀಲ ' ಸಂವತ್ಸರ.

ಭವಿಷ್ಯದತ್ತ ಹಣಿಕಿ ನೋಡಲು ಅರ್ಚಕ ಅಪೆಟ್ ತನ್ನ ಮಂತ್ರ ತಂತ್ರ ಜ್ಞಾನವನ್ನೆಲ್ಲ ಬಳಸಿ ಯತ್ನಿಸಿದ್ದ. ಶುಭ ಅಶುಭಗಳ ಮಿಶ್ರ ಸೂಚನೆಗಳು ಕಂಡಿದ್ದುವು. ಯಾವುದೂ ಸ್ಪಷ್ಟವಾಗಿರಲಿಲ್ಲ. ಶಾಲಾ ಕಟ್ಟಡ ಸಿದ್ಧವಾದೊಡನೆಯೇ ಉಗ್ರಾಣ ವಸತಿಗಳ ನಿರ್ಮಾಣ ಆರಂಭ ಎಂದು ಇಪ್ಯುವರ್ ತಿಳಿಸಿದ್ದ. ಹೊಸ ವ್ಯವಸ್ಥೆಯಲ್ಲಿ ಆ ಬಡಪಾಯಿ ಕೊನರಿದ ರೀತಿ ಕಂಡು ಅಪೆಟ್‌ಗೆ ಅಸೂಯೆ. ಜತೆಯಲ್ಲೇ, ಇಪ್ಯುವರ್ ತನ್ನ ವಿರೋಧಿಯಲ್ಲ ಎಂಬ ಅಲ್ಪ ಸಮಾಧಾನ.

ಈಗ ಅಪೆಟ್ ಹೆಚ್ಚು ಹೆಚ್ಚಾಗಿ ಮಂದಿರಕ್ಕೇ ಅಂಟಿಕೊಂಡಿರುತ್ತಿದ್ದ. ದೇವರ ಪೂಜೆ; ಅಸ್ವಸ್ಥರಾಗಿ ಬಂದವರಿಗೆ ಔಷಧಿ ನೀಡಿಕೆ, ಮಂತ್ರ ಚಿಕಿತ್ಸೆ; ಕಟ್ಟಡ ಕೆಲಸದತ್ತ ಗಮನ.

ನೀಲ ಭರತದ ಹಬ್ಬದಂದು ಮಂದಿರಕ್ಕೆ ಕಳೆಕಟ್ಟಿತು. "ದೇವಮಂದಿರ, ರಾಜಗೃಹ ಎರಡೂ ಕಡೆ ದೀಪಾಲಂಕಾರ ಇರಬೇಕಪ್ಪ," ಎಂದಿದ್ದ ಅಪೆಟ್ ಇಪ್ಯುವರ್‌ನೊಡನೆ. ನಾರುಗಸೆ ಎಣ್ಣೆಯ ದಾಸ್ತಾನು ಚೆನ್ನಾಗಿತ್ತು. ಬೊಕ್ಕಸದ ಲೆಕ್ಕಿಗ ಕೈ ಬಿಗಿಹಿಡಿಯುವ ಅಗತ್ಯವಿರಲಿಲ್ಲ.

ಮುಖ್ಯ ಪಟ್ಟಣದ ಹೊರವಲಯದ ಹತ್ತಿರ ಹತ್ತಿರಕ್ಕೆ ಬಂದಿತ್ತು, ರೊಚ್ಚೆನೀರು. ರಾಜಗೃಹದ ಮಹಡಿಯ ಮುಖಮಂಟಪದಲ್ಲಿ ನಿಂತರೆ, ಜಗತ್ತು ಜಲಮಯವಾಗಿ ತೋರುತ್ತಿತ್ತು. ಆಗ ಅವರ ಊರು, ಒಂದು ಪುಟ್ಟ ದ್ವೀಪ. ಮಹಾಪೂರದ ಅವಧಿಯಲ್ಲಿ ಐಗುಪ್ತದ ಎಲ್ಲ ಪಟ್ಟಣಗಳೂ ಸಾಗರದ ನಡುಗಡ್ಡೆಗಳಂತೆ ಕಾಣಿಸುತ್ತಿದ್ದವು. (ಮೆನೆಪ್‌ಟಾ ಬಲ್ಲ : ಜಲ ಪ್ರಳಯದ ಹಳೆಯ ಕಥೆ ಹೇಳುವಾಗ ಎಲ್ಲ ಕಡೆಯವರೂ 'ಆ ಪ್ರಳಯದಲ್ಲಿ ಮುಳುಗದೆ ಉಳಿದದ್ದು ನಮ್ಮೂರು ಮಾತ್ರ' ಎನ್ನುತ್ತಿದ್ದರು !) ಈಗ ನದೀ ಪಾತ್ರವನ್ನು ಗುರುತಿಸುವುದು ಕಷ್ಟ. ದೋಣಿಗಳಿಗೆ ಅದರ ಅಗತ್ಯವೂ ಇಲ್ಲ.

ಯಾವ ಊರಿಗೆ ಬೇಕಾದರೂ ಸರಿಯೆ, ನೀರಿನ ಮೇಲೆ ನೇರ ಸಂಚಾರ.

ಮುಂದೆ ಒಂದು ತಿಂಗಳಲ್ಲಿ ನೀರು ಇಳಿಮುಖ. ಅದು ಭೂಮಿಯ ಪುನರುದಯ. ಹೊಲಗಳಲ್ಲಿ ನೀರು ಉಳಿಸಿ ಹೋದ ಫಲವತ್ತಾದ ಕರಿಮಣ್ಣಿನಲ್ಲಿ ಸುಲಭ ಉಳುಮೆ, ಸರಾಗ ಬಿತ್ತನೆ.

ಎಲ್ಲೆಲ್ಲೂ ಚಟುವಟಿಕೆ. ಜನ ಈಗ ಕೃಷೀವಲರು.

(ಈ ವರ್ಷ ಮಹಾಪೂರದ ಅವಧಿಯ ಮೂರು ತಿಂಗಳ ಕಾಲ ನೀರಾನೆ ಪ್ರಾಂತದ ರೈತರಲ್ಲಿ ಯಾರಿಗೂ ದೂರಪ್ರದೇಶಗಳಲ್ಲಿನ ಜೀತದ ದುಡಿಮೆ ಇರಲಿಲ್ಲ. ಈ ಸಂತೋಷ ಯೋಚನೆಗೂ ಎಡೆಕೊಟ್ಟಿತ್ತು. ಸ್ವತಂತ್ರರು ಒತ್ತಾಯವಿಲ್ಲ. ಆದರೆ ಹೊಟ್ಟೆಗೆ? ಮೊದಲ ಅನುಭವ. ಮನೆಯಲ್ಲೇ ಹಾಯಾಗಿ ಮೈಚಾಚಿ ಬಿದ್ದಿರೋಣ ಎನಿಸಿತು. ಹಲವರಿಗೆ. ಕಾಳುಕಡ್ಡಿ ಮುಗಿದಾಗ? ರಾಜಗೃಹದ ಕಣಜಗಳಲ್ಲಿ ಇದ್ದುದರ ಬಹು ಭಾಗ ನೆರವಿನ ರೂಪದಲ್ಲಿ ವಿನಿಯೋಗವಾಯಿತು. ಮೆನೆಪ್‌ಟಾ ಅಂದುಕೊಂಡ: ಮುಂದಿನ ಸಲ ಹೀಗಾಗಬಾರದು; ಪ್ರವಾಹದ ತೊಂದರೆ ಇರದ ಎತ್ತರ ಸ್ಥಳಗಳಲ್ಲಿ ಖಚಿತ ಸ್ವರೂಪದ ನಿರ್ಮಾಣ ಕಾರ್ಯಗಳನ್ನು ಕೈಗೊಳ್ಳಬೇಕು....)

ಭೂಮಾಲಿಕರ ಹೊಲಗಳನ್ನು ನೂತನ ಒಡೆಯರಾದ ಬಂಧಮುಕ್ತ ಸೇವಕರು ಸಾಗು ಮಾಡಿದರು. ಮೆನೆಪ್‌ಟಾ ಹೋರಿಗಳನ್ನು ಎರವಲು ಪಡೆದು ತನ್ನ ಹೊಲವನ್ನು ಉತ್ತ; ಬಿತ್ತಿದ. "ಬೇಡಿ ಮೆನೆಪ್‌ಟಾ ಅಣ್ಣ, ನಿಮ್ಮ ಹೊಲದ ಕೆಲಸ ನಮಗೆ ಬಿಟ್ಬಿಡಿ," ಎಂದು ಹೇಳಿದವರು ಎಷ್ಟೋ ಜನ. ಮೆನೆಪ್‌ಟಾನ ಉತ್ತರ ಒಂದೇ: "ನನ್ನ ಕೈಲಿ ಆಗದೇಇದ್ದಾಗ ನಿಮ್ಮನ್ನು ಖಂಡಿತ ಕರೀತೇನೆ."

ಮಾಗಿ ಕಾಲಿಟ್ಟಿತು. ಬೀಜಗಳು ಮೊಳಕೆಯೊಡೆದು ಎಳೆಯ ಸಸಿಗಳಾದುವು. ನೀಲನದಿಗೆ ಈಗ ಹಸುರುದಂಡೆ. (ಖ್ನೆಮು ದೇವ, "ತಟಗಳಿಗೆ ಹಸುರು ಬಳಿವ ಚಿತ್ರಕಾರ.")

ಕುಯಿಲಿನ ವರೆಗೆ ತುಸು ಅವಕಾಶ. ಇನ್ನು ಅಂಗಳ ಕಣಜಗಳ ದುರಸ್ತಿ. ಮಂದಿರದ ಉಗ್ರಾಣ ಮತ್ತು ಅರ್ಚಕನ ವಸತಿಗಳ ನಿರ್ಮಾಣ.

ಅಪೆಟ್ ನಾಯಕನನ್ನು ಕಾಣಲು ಬಂದ.

" ಮಕ್ಕಳ ಶಾಲೆ...."

" ಇನ್ನೆರಡು ತಿಂಗಳು. ಅನಂತರ ಹೇಗೂ ಕುಯಿಲಿನ ಬಿಡುವು. ಅದು ಮುಗಿದ ಮೇಲೆ ಹೊಸ ಕಟ್ಟಡದಲ್ಲೇ ಶಾಲೆ ನಡೀಲಿ."

"ಆಗಬಹುದು. ನಮ್ಮ ಹುಡುಗನ ಬರಹ ಚೆನ್ನಾಗಿದೆ. 'ಬೆಳಕಿಗೆ ಆಗಮನ' ಪುಸ್ತಕದ ಎರಡು ನೂರು ಪ್ರತಿ ಮಾಡಿಸ್ತೇನೆ. ಉಗ್ರಾಣದಿಂದ ನೂರು ಪೆಪ್ಪೈರಸ್ ಹಾಳೆ ಕೊಡಿಸ್ಬೇಕು."

"ಅಷ್ಟು ಇರಲಾರದು. ಇಪ್ಯುವರ್‌ಗೆ ಹೇಳ್ತೀನೆ. ಮೊದಲು ಒಂದು ಪ್ರತಿ ಮಾಡಿಸಿ. ಸಾಕು."

....ಮಹಾಪೂರದ ವೇಳೆಯಲ್ಲೇ ನೀರಾನೆ ಪ್ರಾಂತದ ನೂರು ಜನರ ಯೋಧದಳ ರೂಪಿಸಲು ಹೆಮ್‌ಟೆ ಯೋಜನೆ ಸಿದ್ಧಪಡಿಸಿದ್ದ.

ಪೆರೋನ ದಂಡಿನಲ್ಲಿ ಸೈನಿಕರಿಗೆ ಚಿಕ್ಕಂದಿನಿಂದಲೇ ತರಬೇತಿ. ಶಿಕ್ಷಣ ಮುಗಿಯುವವರೆಗೂ ದಂಡಿನ ಕೂಡು ಕೊಠಡಿಗಳಲ್ಲಿ ಬಂಧನ. ಹೊಡೆದು ಬಡೆದು ನೀಡುವ ಯೋಧ ದೀಕ್ಷೆ.

ಮನಸ್ಸಿನ ಮೇಲೆ ಬಿಂಬಿಸುವಂತೆ ಹೆಮ್‌ಟೆ ವಿವರಿಸುತ್ತಿದ್ದ :

"ಪೆರೋನ ದಂಡಿಗೆ ನೂರಾಳಿಗೊಂದರಂತೆ ಭರ್ತಿಯಾಗ್ಬೇಕು. ಅದು ನಿಯಮ. ಅಂಥ ಕಡ್ಡಾಯದ ಭರ್ತಿ ನಮಗೆ ಬೇಡ. ಇಲ್ಲಿ ಕೂಡುದೊಡ್ಡಿಯೂ ಇಲ್ಲ. ಸ್ವಪ್ರೇರಣೆಯಿಂದ ಯುವಕರು ಬರಲಿ. ಇಡೀ ಪ್ರಾಂತದಿಂದ ಯಾರಾದರೂ ಸರಿಯೆ. ಯುದ್ಧ ಭೂಮಿಯಲ್ಲಿ ಆಹಾರ ಸರಬರಾಜಿಲ್ಲದೆ ಹುಲ್ಲು ತಿಂದು ಬದುಕಿದವನು ನಾನು. ನಾವು ಕಟ್ಟೋದು ಅಂಥ ದಳವನ್ನಲ್ಲ. ಯಾರ ಮೇಲೂ ನಮಗೆ ಹಗೆತನವಿಲ್ಲ. ಆಕ್ರಮಣಕ್ಕೆ ನಾವು ಹೋಗೋದಿಲ್ಲ. ಈ ದಳ ಸ್ವರಕ್ಷಣೆಗೆ....ಸರಿಯಾ ಖ್ನೆಮ್‌ಹೊಟೆಪ್ ? ದಳಪತಿ ಅವರು. ನಾನು ಶಿಕ್ಷಕ...."

ಪ್ರಾಂತದ ಎಲ್ಲ ಹಳ್ಳಿಗಳಿಂದ ಹೆಸರು ಕೊಟ್ಟವರು ಬಹಳ ಜನ. ನೂರು ಮಂದಿಯನ್ನು ಹೆಮ್‌ಟೆ ಆರಿಸಿದ. ಬಿತ್ತನೆ ಮುಗಿಯುತ್ತಲೇ ಅವರೆಲ್ಲ ತರಬೇತಿ ಪಡೆಯಲು ಮುಖ್ಯ ಪಟ್ಟಣಕ್ಕೆ ಬಂದರು. ಹೊರ ವಲಯದಲ್ಲಿ ಶಿಕ್ಷಣ ಶಿಬಿರ ಸಿದ್ಧವಾಯಿತು.

೧೨

ಖ್ನೆಮ್‌ಹೊಟೆಪ್‌ಗೆ ಚಿಂತೆ. ಶಸ್ತ್ರಗಳಿಲ್ಲದ ದಂಡು ಅದೆಂಥದು ? ಈ ಕೆಫ್ಟು ಬರುವನೋ ಇಲ್ಲವೋ, ಶಸ್ತ್ರಾಸ್ತ್ರ ತರುವನೋ ಇಲ್ಲವೋ.

ಸ್ನೊಫ್ರುಗೂ ಕೆಫ್ಟುವಿನ ಯೋಚನೆ. ಅದನ್ನು ಕೊಳ್ಳುತ್ತೇನೆ, ಇದನ್ನು ಕೊಳ್ಳುತ್ತೇನೆ ಎಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿದ್ದ. ಅದನ್ನು ಗಮನ ದಲ್ಲಿಟ್ಟು ವಸ್ತುಗಳನ್ನು ಸಿದ್ಧಪಡಿಸುವ ಕೆಲಸ ನಡೆದಿತ್ತು. ಅಪೂರ್ವ ಸಾಧ್ಯತೆ ಗಳ ದ್ವೀಪವನ್ನು ದೂರದಿಂದ ಕಂಡಿದ್ದನಲ್ಲ ? ನೀರು ಮತ್ತೆ ಆವರಿಸಿತೆ ಆ ದ್ವೀಪವನ್ನು ?

"ವ್ಯಾಪಾರ ಕುದುರಿದೆ. ಬರದೆ ಇರ್‍ತಾನಾ ? ಕುಯಿಲಿಗೆ ಇನ್ನೂ ಕಾಲವಿದೆಯಲ್ಲ ?" ಎಂದ ಸೆಮು.

ಬಟಾನೆಂದ :

"ಕರಿಯೋಲೆ ಬರೆಯೋದಕ್ಕೆ ಪೆರೋಗೆ ಲಿಪಿಕಾರ ಸಿಗದೆ, ನಮಗೊಂದು ಮೆಂಫಿಸ್ ಪ್ರಯಾಣ ತಪ್ಪಿಹೋಯ್ತು !"

ಹೀಗೆ ಇವರು ನುಡಿದ ಕೆಲವೇ ದಿನಗಳ ಬಳಿಕ ಒಂದು ಬೆಳಿಗ್ಗೆ—

* * * *

ಮೆಂಫಿಸ್‌ನಿಂದ ರಾಜನಾವೆ ಬಂತು. ರಾಜದೂತನೂ ಇಬ್ಬರು ಸಶಸ್ತ್ರ ಭಟರೂ ಕಟ್ಟೆಗೆ ಇಳಿದರು. ದಾರಿ ಕೇಳಿಕೊಂಡು ನಾಯಕನ ಮನೆಯತ್ತ ಹೊರಟರು.

ನಾವೆ ಬಂದ ಸುದ್ದಿ ಬಟಾನಿಗೆ ಮುಟ್ಟುವುದು ತಡವಾಗಲಿಲ್ಲ. ಆತ ಖ್ನೆಮ್‌ಹೊಟೆಪ್‌ಗೆ ತಿಳಿಸಿದ.

ಪಟ್ಟಣದ ರಕ್ಷಕ ಭಟರು ಮಾರ್ಗಮಧ್ಯದಲ್ಲಿ ಆಗಂತುಕರನ್ನು ತಡೆದರು. ಭಟರ ಮುಖ್ಯಸ್ಥ ಕೇಳಿದ :

"ಯಾರು ನೀವು ? ಎಲ್ಲಿಂದ ಬಂದಿರಿ ? ಮಿತ್ರರಾದರೆ ಸ್ವಾಗತ."

ದೂತ ಉತ್ತರಿಸಿದ :

"ನಾನು ರಾಜದೂತ. ಮೆಂಫಿಸಿನಿಂದ ನಾವು ಬಂದಿದ್ದೇವೆ. ಶತ್ರು ಗಳಲ್ಲ."

"ಯಾರನ್ನು ಕಾಣಬೇಕು ?"

"ಪ್ರಾಂತದ ನಾಯಕರನ್ನು."

"ನಮನ್ನು ಅನುಸರಿಸಿ ರಾಜಗೃಹಕ್ಕೆ ಬನ್ನಿ. ಇನ್ನೆರಡು ತಾಸು ಬಿಟ್ಟು ನಾಯಕರು ಅಲ್ಲಿಗೆ ಬರ್ತಾರೆ."

ದೂತ ನಸುನಕ್ಕ. ಸಶಸ್ತ್ರ ಭಟರು ಭುಜ ಕುಣಿಸಿದರು.

"ಆಗಬಹುದು. ಮುಂದೆ ನಡೀರಿ."

ಖ್ನೆಮ್‌ಹೊಟೆಪ್ ಬಂದು ತಿಳಿಸಿದಾಗ ಮೆನೆಪ್‌ಟಾ ತನ್ನ ನೇಗಿಲ ಮೊನೆಯನ್ನು ಸರಿಪಡಿಸುತ್ತ ಕುಳಿತಿದ್ದ. ಕೆಲಸವನ್ನು ಮುಂದುವರಿಸುತ್ತ ಅವನೆಂದ :

"ಪೆರೋನಿಂದ ಸಂದೇಶ ತಂದಿರಬಹುದು."

ನೆಫಿಸಳ ಮುಖದ ಮೇಲೆ ಕಾತರದ ಭಾವನೆ.

ಮೆನೆಪ್‌ಟಾ ಅಸಾಧಾರಣವಾದುದೇನೂ ನಡೆದಿಲ್ಲ ಎನ್ನುವಂತೆ, ಶಾಂತ ಸ್ವರದಲ್ಲಿ ಅಂದ :

"ವರ್ತಕ ಕೆಫ್ರು, ಕಾರ್ಯಜಾಣ."

ಖ್ನೆಮ್ ನುಡಿದ :

"ಮಾತು ಕೊಟ್ಟಂತೆ ಬಂದೇ ಬರ್ತಾನೆ. ಶಸ್ತ್ರಾಸ್ತ್ರಗಳನ್ನು ತರ್ತಾನೆ—ಅನಿಸ್ತದೆ"

"ಹೂಂ. ಹೂಂ."

ನೆಫಿಸಳ ಕಣ್ಣಿಗೆ ಕಟ್ಟಿತು, ಅಬ್ಟು ಬೆಟ್ಟದ ಮೇಲೆ ಮೆರವಣಿಗೆಯಲ್ಲಿ ತಾನು ಕಂಡಿದ್ದ ಪೆರೋನ ಚಿತ್ರ. ಭೂಮಿಯ ಮೇಲಣ ದೇವಪ್ರತಿನಿಧಿ. ಆತನಿಂದ ತನ್ನ ಪತಿಗೆ ಸಂದೇಶ. ಬೆಸ್‌ದೇವತೆಯನ್ನು ಆಕೆ ಸ್ಮರಿಸಿದಳು. ಗಂಡಾಂತರಗಳನ್ನು ದೂರ ಮಾಡು ಎಂದು ಮನಸ್ಸಿನಲ್ಲೇ ಪ್ರಾರ್ಥನೆ ಸಲ್ಲಿಸಿದಳು.

"ಸ್ನೊಫ್ರು, ಸೆಬೆಕ್ಸು, ಹಿರಿಯರನ್ನೆಲ್ಲ ರಾಜಗೃಹಕ್ಕೆ ಬರಹೇಳು," ಎಂದ ಮೆನೆಪ್‌ಟಾ ಖ್ನೆಮ್‌ಗೆ.

ಖ್ನೆಮ್‌ಹೊಟೆಪ್ ಹೊರಟು ಹೋದ ಸ್ವಲ್ಪ ಹೊತ್ತಿನಲ್ಲೇ ರಾಮೆರಿಪ್

ಟಾ ರಾಜಗೃಹದಿಂದ ಬಂದ.

"ಇವತ್ತಿಗೆ ಪಾಠ ಇಷ್ಟು ಸಾಕು, ಅಂದ್ರು ಗುರುಗಳು. ಮೆಂಫಿಸ್ ನಿಂದ ಯಾರೋ ಬಂದಿದ್ದಾರೆ. ರಾಜದೂತ ಅಂತೆ. ಕತ್ತಿನಲ್ಲಿ ಎರಡು ಸರಗಳಿವೆ. ಬಂಗಾರದ ಸರ ಅಂತ ಚಿನಿವಾರರ ಹುಡುಗ ರಾನೊಫರ್ ಹೇಳ್ದ. ಕೈಯಲ್ಲಿ ಬಟ್ಟೆಯಲ್ಲಿ ಸುತ್ತಿದ ಒಂದು ಲಿಪಿ ಸುರುಳಿಯೂ ಇದೆ," ಎಂದ ಹುಡುಗ, ಹೆತ್ತವರೊಡನೆ.

ರಾಜಕಾರ್ಯ. ಮರಳಿ ಬರುವುದು ತಡವಾಗಲೂಬಹುದು....ನೆಫಿಸ್ ಒಂದು ರೊಟ್ಟಿ ಹೆಚ್ಚಾಗಿಯೇ ಬಡಿಸಿದಳು.

ಗಂಡನೂ ಮಗನೂ ಉಣ್ಣುವುದನ್ನು ನೋಡುತ್ತ, ಸುಮ್ಮನಿರಲು ಆಗದೆ "ನನ್ನ ಗುಂಡಿಗೆ ಯಾಕೋ ಡವಡವ ಅನ್ತಿದೆ" ಎಂದಳು ನೆಫಿಸ್.

ಮೆನೆಪ್‌ಟಾ ಮುಗುಳುನಕ್ಕ. ರಾಮೆರಿಪ್‌ಟಾನೆಂದ :

"ಏನು ? ಹೆದರ್‍ಕೆನಾ ಅಮ್ಮ?"

"ಏನಿಲ್ಲವಪ್ಪ," ಎಂದು ಹೇಳಿ, ನೆಫಿಸ್ ಸುಮ್ಮನಾದಳು.

ಮೆನೆಪ ಟಾ ರಾಜಗೃಹ ತಲಪುವಷ್ಟರಲ್ಲಿ ಉಳಿದವರು ಬಂದಿದ್ದರು. ಖ್ನೆಮ್‌ಹೊಟೆಪ್ ಸೂಚಿಸಿದೊಡನೆಯೇ ರಾಜದೂತ ವೇದಿಕೆಯ ಬಳಿ ಸಾರಿ, ನಾಯಕನಿಗೆ ನಮಿಸಿದ; ಸುರುಳಿಯ ಓಲೆಯನ್ನು ಮೆನೆಪ್‌ಟಾನ ಕೈಗಿತ್ತ.

ಪೀಠಗಳತ್ತ ದೃಷ್ಟಿಬೀರಿ; "ಕುಳಿತುಕೋಬಹುದು," ಎಂದ ನಾಯಕ.

ದೂತ ನಿಂತೇ ಇದ್ದ. ಅವನೆಂದ :

" ಓದಿ ಹೇಳಬೇಕೆ ?"

ನಾಯಕನಿಗೆ ಚೇಳು ಕುಟುಕಿದಂತಾಯಿತು. ತನಗೆ ಓದು ಬರದು ಎಂದೆ ಆ ಪ್ರಶ್ನೆ?

"ಅಗತ್ಯವಿಲ್ಲ," ಎಂದ ಆತ. ಇಪ್ಯುವರ್‌ನನ್ನು ಕರೆದು, ಓಲೆಯನ್ನು ಆತನಿಗಿತ್ತು, ಓದುವಂತೆ ಸನ್ನೆ ಮಾಡಿದ.

ಸುರುಳಿಯ ಮೇಲಣ ರಾಜಮುದ್ರೆಯನ್ನು ಇಪ್ಯುವರ್ ಒಡೆದ.

"ಪೆರೋ ಬರೆಸಿದ್ದು. ಅಮಾತ್ಯ ಆಮೆರಬ್ ಅಂಕಿತ ಹಾಕಿದ್ದಾರೆ," ಎಂಬ ಪೀಠಿಕೆಯ ಬಳಿಕ ಆತ ಓದಿದ :

"ತಮ್ಮ ಅರುವತ್ತನೆಯ ವಯಸ್ಸಿಗೆ ಬೀಳುವ ಎರಡನೆಯ ಸೆಡ್ ಉತ್ಸವವನ್ನು ಹತ್ತು ವರ್ಷಕ್ಕೆ ಮುಂಚೆ—ಅಂದರೆ ಐವತ್ತನೆಯ ವಯಸ್ಸಿನಲ್ಲೇ—ವಿಜೃಂಭಣೆಯಿಂದ ಆಚರಿಸಲು, ಹೋರಸ್ ಸಮಾನರಾದ ಐಗುಪ್ತದ ದೊರೆ ಪೆರೋ ಪೇಪಿಯವರು ನಿರ್ಧರಿಸಿದ್ದಾರೆ. ಈ ತಿಂಗಳ ಅಂತ್ಯದಲ್ಲಿ ನಡೆಯುವ ಈ ಉತ್ಸವಕ್ಕೆ ಹತ್ತು ದಿನ ಮುಂಚಿತವಾಗಿಯೇ ರಾಜಧಾನಿಗೆ ಬರಬೇಕೆಂದು ಎಲ್ಲ ಪ್ರಾಂತಪಾಲರಿಗೂ ಕರೆ ಕಳುಹಿಸಲಾಗಿದೆ. ನೀರಾನೆ ಪ್ರಾಂತದ ನಾಯಕ ಮೆನೆಪ್‌ಟಾ ಕೂಡಾ ಈ ಉತ್ಸವದಲ್ಲಿ ಭಾಗವಹಿಸಬೇಕೆಂದು ಈ ಮೂಲಕ ಆದೇಶ ನೀಡಲಾಗಿದೆ."

ನೀರವ ಕ್ಷಣಗಳು.

ಆ ಮೌನವನ್ನು ಛೇದಿಸಿ ನಾಯಕ ಕೇಳಿದ :

"ಅಮಾತ್ಯರು ಇನ್ನೇನಾದರೂ ಹೇಳಿದ್ದಾರೊ ?"

ದೂತನೆಂದ :

"ಯಾವ ಕಸಿವಿಸಿಯೂ ಇಲ್ಲದೆ ಬರಲಿ, ತಿಳಿಸಿಬಿಡಿ—ಅಂದ್ರು."

ದಳಪತಿಯತ್ತ ತಿರುಗಿ ನಾಯಕ ನುಡಿದ :

"ಖ್ನೆಮ್, ಇವರ ಭೋಜನ, ವಿಶ್ರಾಂತಿಗೆ ವ್ಯವಸ್ಥೆ ಮಾಡಬೇಕಲ್ಲ ?"

ಖ್ನೆಮ್‌ಹೊಟೆಪ್ ಉತ್ತರಿಸಿದ :

"ನಮ್ಮ ಮನೆಗೆ ಕರಕೊಂಡು ಹೋಗ್ತೇನೆ."

ದೂತನೂ ಭಟರೂ ವೇದಿಕೆಗೆ ನಮಿಸಿದರು.

"ಅಪ್ಪಣೆಯಾದರೆ ಇವತ್ತು ಸಂಜೆ ವಾಪಸು ಹೊರಡ್ತೇವೆ."

"ಹಾಗೇ ಆಗಲಿ. ಓಲೆಗೆ ಉತ್ತರವನ್ನು ದಳಪತಿಯ ಮನೆಗೆ ಕಳಿಸ್ತೇವೆ."

ಬೆರಗುಗೊಳಿಸುವ ಲೋಕಕ್ಕೆ ಬಂದಂತಾಗಿತ್ತು ದೂತನಿಗೆ, ಭಟರಿಗೆ. ಪುನಃ ಗೌರವದಿಂದ ವಂದಿಸಿ, ಖ್ನೆಮ್‌ಹೊಟೆಪನ ಹಿಂದೆ ಅವರು ಹೊರಟರು. ಬರುತ್ತ ಕಂಡಿದ್ದ ಒಕ್ಕಣ್ಣಿನ ಸಿಂಹವನ್ನು ಮತ್ತೊಮ್ಮೆ ನೋಡಿದರು.

ಅದಕ್ಕೆ ಇಟ್ಟಿದ್ದ ಹೆಸರನ್ನು ಓದಿ ರಾಜದೂತ ನಕ್ಕ.

ಸ್ನೊಫ್ರು, ಸೆಬೆಕ್ಖುರೊಡನೆ, ಹಿರಿಯರೊಡನೆ ಮೆನೆಪ್‌ಟಾ ಸಮಾ

ಲೋಚನೆ ನಡೆಸಿದ.

"ಆದೇಶ ನೀಡಲಾಗಿದೆ.' ಹೋಗಬೇಕೆ, ಬೇಡವೆ?

ವಿವಿಧ ಅಭಿಪ್ರಾಯಗಳು: 'ಆತುರ ಸಲ್ಲದು;' 'ಪೆರೋ ನಮ್ಮ ವಿಷಯದಲ್ಲಿ ಪ್ರೀತಿ ತೋರಿಸೋದಾದ್ರೆ ಅದು ಸ್ವಾಗತಾರ್ಹ;' 'ಏನಾದರೂ ಮೋಸ ಇದ್ದೀತು;' 'ಮೋಸದ ಮಾತಾದರೆ ಒಂಭತ್ತು ತಿಂಗಳು ಮೀರಿ ಕಾಯಬೇಕಾಗಿತ್ತೆ?;' 'ಮುಚ್ಚುಮರೆಯ ಅಕೃತ್ಯ ನಾವೇನೂ ಮಾಡಿಲ್ಲವಲ್ಲ;' 'ಜತನದಿಂದ ಇದ್ದರೆ ಸರಿ.'

ಮೆನೆಪ್‌ಟಾನೆಂದ:

"ನಮ್ಮದು ಋಜುಮಾರ್ಗ. ಈವರೆಗೂ ಅಷ್ಟೆ. ಮುಂದೆಯೂ ಅಷ್ಟೆ. ಭಯ ಲೋಕದ ಭ್ರಮಣದಿಂದ ಏನೂ ಹಿತವಿಲ್ಲ. ನಮ್ಮ ಮಾತ ನಮ್ಮನು ಕಾಯ್ತದೆ. ಹೋಗಿ ಬರ್ತೇನೆ."

ಸೆಬೆಕ್ಕು ಹೇಳಿದ:

"ಖ್ನೆಮ್ ಜೊತೆಗಿರಲಿ."

ಮೆನೆಪ್‌ಟಾ ಒಪ್ಪಲಿಲ್ಲ!

"ಬೇಡ. ಪ್ರಾಂತದ ರಕ್ಷಣೆ ಅವನ ಹೊಣೆ. ನನ್ನನ್ನು ಬಟಾ ಬಿಟ್ಟು ಬರ್ತಾನೆ

"ನೀನಿಲ್ಲದ ವೇಳೆಯಲ್ಲಿ ಇಲ್ಲಿ?"

"ಯಾಕೆ? ಸ್ನೊಫ್ರು ಇಲ್ಲವೆ? ಸೆಬೆಕ್ಕು ಇಲ್ಲವೆ? ಇಬ್ಬರಲ್ಲೊಬ್ಬರು ದಿನವೂ ರಾಜಗೃಹಕ್ಕೆ ಬಂದರಾಯ್ತು. ನಾನಿಲ್ಲ ಅಂತ ಆಡಳಿತ ನಿಲ್ಲಬೇಕೆ? ಹೆಚ್ಚೆಂದರೆ ಒಂದು ತಿಂಗಳು ಅದಷ್ಟು ಬೇಗ ಬಂದ್ಬಿಡ್ತೇನೆ."

ಇಪ್ಯುವರ್ ಉತ್ತರ ಸಿದ್ಧಗೊಳಿಸಿದ:

"ಹೋರಸ್ ಸಮಾನರಾದ ಐಗುಪ್ತದ ಪೆರೋ ಮಹಾಶಯರ ಸನ್ನಿಧಿಯಲ್ಲಿ ನೀರಾನೆ ಪ್ರಾಂತದ ನಾಯಕ ಮೆನೆಪ್‌ಟಾ ಮಾಡುವ ವಿಜ್ಞಾಪನೆಗಳು. ತಮ್ಮ ಸೆಡ್ ಮಹೋತ್ಸವದ ಕರೆಯೋಲೆ ತಲಪಿದೆ. ಕೃತಜ್ಞನಾಗಿದ್ದೇನೆ. ತಾವು ನೀಡಿರುವ ಆದೇಶದಂತೆ ರಾಜಧಾನಿಗೆ ಬರುತ್ತೇನೆ."

"ಕರೆಯೋಲೆಯೇ ಆದೇಶ. ಆದೇಶವೇ ಕರೆಯೋಲೆ. ಸರಿ, ಸರಿ," ಎಂದ ಮೆನೆಪ್‌ಟಾ

ಅವನ ಸಹಿ ಒಂದು ಸಾಧನೆ. ಇಪ್ಯುವರ್ ಬರೆದು ಕೊಟ್ಟ ಸಂಕೇತ ರೂಪವನ್ನು ಅನುಕರಿಸಿ, ಮೆನೆಪ್‌ಟಾ ತನ್ನ ಅಂಕಿತವನ್ನು ಹಾಕಿದ. ಸುರುಳಿಯನ್ನು ಸುತ್ತಿ ಸೆಣಬಿನ ನಾರಿನಿಂದ ಬಿಗಿದರು. ಬಟಾ ಅದನ್ನು ಖ್ನೆಮ್ ಹೊಟೆಪನ ಮನೆಗೆ ಒಯ್ದು ಮುಟ್ಟಿಸಿದ.

*　　*　　*　　*

ಅಯನ ಸಂಕ್ರಮಣ ಬಿಂದುವನ್ನು ಸೂರ್ಯ ತಲಪಿದ್ದ. ಅದು ದೀರ್ಘ ಹಗಲು. ಇನ್ನು ಉತ್ತರಕ್ಕೆ ಪಯಣ.

ರಾಜದೂತರು ಮರಳಿ ಹೋದ ಮೂರನೆಯ ದಿನ, ಅದು. ಅಂದು ಡಂಗುರ: " ಕೇಳಿರಿ ! ಕೇಳಿರಿ ! ನಮ್ಮ ನಾಯಕ ಮೆನೆಪ್‌ಟಾ ಪೆರೋನ ಆಮಂತ್ರಣ ಸ್ವೀಕರಿಸಿ ಸೆಡ್ ಮಹೋತ್ಸವದಲ್ಲಿ ಭಾಗಿಯಾಗುವುದಕ್ಕಾಗಿ, ಮೆಂಫಿಸ್‌ಗೆ ಹೋಗಲಿದ್ದಾರೆ ! "

ತನಗೆ ತಿಳಿದಿದ್ದ ವಿಷಯವೇ. ಆದರೂ ನೆಫಿಸ್ ಅರೆತೆರೆದ ಬಾಗಿಲಿನೆಡೆಯಿಂದ ಡಂಗುರದವನ ಧ್ವನಿಯನ್ನು ಆಲಿಸಿ, ಗೋಡೆಗೊರಗಿ ನಿಂತಳು. ಭೇರಿ ಮಗ್ಗುಲು ಬೀದಿಗೆ ಹೋದಮೇಲೆ, ಮೂರು ಮನೆಯಾಚೆಗಿನ ಹುಡುಗರ ತಂಡ ಅಣಕುಧ್ವನಿಯಲ್ಲಿ ಡಂಗುರವನ್ನು ಮತ್ತೆ ಸಾರಿತು : " ಕೇಳಿರಿ ! ಕೇಳಿರಿ!........"

ಪೆರೋಗೆ ಕಾಣಿಕೆ ಒಯ್ಯಬೇಕೆ ಬೇಡವೆ ? ಮುಖಂಡರಲ್ಲಿ ಚರ್ಚೆ ನಡೆಯಿತು. ಅವರೊಂದು ತೀರ್ಮಾನಕ್ಕೆ ಬಂದರು : ಕಾಣಿಕೆ ಕಪ್ಪವಲ್ಲ ; ಶಿಷ್ಟಾಚಾರದಂತೆ ಏನನ್ನಾದರೂ ಒಪ್ಪಿಸಿದರೆ ಅದರಿಂದ ನಾಡಿನ ಸ್ವಾತಂತ್ರ್ಯಕ್ಕೆ ಚ್ಯುತಿ ಇಲ್ಲ.

"ಕೊಡುವುದು ಏನನ್ನು ?

"ಕಪ್ಪವಿನ ಕಾಣಿಕೆಗಳಲ್ಲಿ ಯಾವುದಾದರೂ ಒಂದು ? "

"ಛೆ ! ಸರಿಯಲ್ಲ ! "

ಖ್ನೆಮನನ್ನು ಕರೆದು ಅಭಿಪ್ರಾಯ ಕೇಳಿದರು.

"ಬೇಕಾದರೆ ಆ ಗಡಿಯಾರ ಕೊಟ್ಟುಬಿಡಿ. ಕಪ್ಪಗೋಸ್ಕರ ಮಾಡ್ತಾ ಇದೇನೆ. ಅದರಲ್ಲೊಂದು ಇಟ್ಟಿದ್ದೇನೆ, " ಎಂದ ಆತ.

"ಒಳ್ಳೇ ಸಲಹೆ."

ಸೆತ್ನಾ ಮತ್ತೆ ಮೆರುಗೆಣ್ಣೆ ಲೇಪಿಸಿ ಗಡಿಯಾರ ಥಳಥಳಿಸುವಂತೆ ಮಾಡಿದ. ಅದನ್ನೊಯ್ಯಲು ಸಣ್ಣ ಪುಟ್ಟ ಚಿತ್ತಾರಗಳಿದ್ದ ಗಾತ್ರದ ಪೆಟಾರಿ ಸಿದ್ಧವಾಯಿತು.

ಹೆಮ್‌ಟಿಯಿಂದ ಯೋಧತರಬೇತಿ ಪಡೆಯುತ್ತಿದ್ದವರಲ್ಲಿ ಅತ್ಯಂತ ದಕ್ಷರಾದ ಇಬ್ಬರು—ಔಟ ಮತ್ತು ಬೆಕ್. ಐವತ್ತು ಯೋಧರ ಮುಖ್ಯಸ್ಥರು. ಅವರು ಮೆನೆಪ್‌ಟಾನ ಅನುಚರರಾಗಿ ರಾಜಧಾನಿಗೆ ಹೋಗಬೇಕೆಂದು ಗೊತ್ತಾಯಿತು.

ಕೆಫ್ಟು ಬಂದು ಹೋದ ಮೇಲೆ ಬಟಾ ತನ್ನ ದೋಣಿಗೆ ಹೊಸದಾಗಿ ಮರದೆಣ್ಣೆ ಬಳಿದಿದ್ದ. ಅವನೊಡನೆ ಅಬ್ಟು ಯಾತ್ರೆಗೆ ಬಂದಿದ್ದ ನಾಲ್ವರು ನೌಕರರು ರಾಜಧಾನಿಯ ಪ್ರಯಾಣಕ್ಕೆ ಅಣಿಯಾದರು.

ಹೊರಡಲು ಮೂರು ದಿನ ಉಳಿಯಿತು....

ಅಪೆಟ್ ನಾಯಕನನ್ನು ಕಾಣಲು ಬಂದ.

"ಪೆರೋ ಆಮಂತ್ರಣ ಕಳಿಸಿದ್ದಾರೆ ಅಂತ ಕೇಳಿ ಸಂತೋಷವಾಯ್ತು."

"ಉಗ್ರಾಣ ವಸತಿಗಳ ಕಟ್ಟಡ ಕೆಲಸ ಮುಗಿಯುತ್ತ ಬಂತು, ಅಲ್ಲವಾ?"

"ಹೌದು. ನಿಮ್ಮನ್ನು ನೋಡಿ ಮಹಾಅರ್ಚಕರಿಗೆ ಆನಂದವಾಗ್ತದೆ."

"ಏನೋ—ಗೊತ್ತಿಲ್ಲ."

"ಪಯಣ ನಡೆಸುವ ದಿವಸ ಬೆಳಿಗ್ಗೆ—"

"ದೇವದರ್ಶನಕ್ಕೆ ಬರ್ತೇನೆ."

ಇನ್ನು ಎರಡು ದಿನ........

ಹಿರಿಯರ ಸಮಿತಿ ದಿನವೂ ಸಭೆ ಸೇರಿತು.

'ಒಳ್ಳೆಯ ನೀಲ' ಸಂವತ್ಸರ ಎಂಬ ಆಧಾರದ ಮೇಲೆ ಮುಂದಿನ ಕವಾಯ ವನ್ನು ಇಪ್ಯುವರ್ ಲೆಕ್ಕಹಾಕಿದ್ದ

"ಅಂದಾಜು ಹಾಕೋದು ಯಾವಾಗಲೂ ಒಳ್ಳೇದು. ಖಚಿತಕಂದಾಯದ ನಿಷ್ಕರ್ಷೆ ಮಾತ್ರ ಕುಯಿಲು ಆದಮೇಲೆ," ಎಂದು ಮೆನೆಪ್‌ಟಾ ಮತ್ತೆ ನೆನಪು ಮಾಡಿಕೊಟ್ಟ.

ಹಿಂದಿನ ದಿನ........

ಜನರಿಗೆ ಮೆನೆಪ್‌ಟಾನನ್ನು ಕಂಡು ಶುಭಕೋರುವ ತವಕ. ಒಬ್ಬೊಬ್ಬರಾಗಿ ಒಂದಷ್ಟು ಜನ ಬಂದರು.

" ಇವರು ಹೀಗೇ ಬರ್‍ತಾ ಇದ್ದರೆ ಬೇರೆ ಯಾವ ಕೆಲಸವೂ ಆಗೋದಿಲ್ಲ. ನಾಳೆ ಸಂಜೆ ಜನ ದೋಣಿಕಟ್ಟೆಯಲ್ಲಿ ಜಮೆಯಾಗೋದೇ ಸರಿ," ಎಂದ ಖ್ನೆಮ್ ಹೊಟೆಪ್.

ಹಿರಿಯ ಸಮಿತಿ ಸದಸ್ಯರು ರಾತ್ರಿ ಬಹಳ ಹೊತ್ತಿನವರೆಗೂ ರಾಜ ಗೃಹದಲ್ಲೇ ಇದ್ದರು. ಅವರು ಹೋದ ಮೇಲೂ ಸ್ನೊಫ್ರು ಸೆಬೆಕ್ಖು ಅದು ಇದು ಮಾತನಾಡುತ್ತ ಕುಳಿತರು.

" ನಡು ಇರುಳು ಆಯ್ತು. ಇನ್ನು ಮೆನೆಪ್‌ಟಾ ಅಣ್ಣನನ್ನು ಮನೆಗೆ ಹೋಗೋದಕ್ಕೆ ಬಿಡೋಣ," ಎಂದ ಬಟಾ, ತನ್ನ ಒಲವಿನ ಮಡದಿ ಮಕ್ಕಳು ನಿದ್ದೆಹೋಗಿರಬಹುದೆಂದು ಭಾವಿಸುತ್ತ.

ಆ ರಾತ್ರಿ........

ತಂದೆಗಾಗಿ ಕಾದು ಕುಳಿತು ಬೇಸತ್ತು ರಾಮೆರಿಪ್‌ಟಾ ನಿದ್ರಿಸಿದ್ದ.

" ರೊಟ್ಟಿ ಪುನಃ ಬಿಸಿ ಮಾಡಲಿ ?" ಎಂದು ನೆಫಿಸ್ ಕೇಳದಳು.

" ಬೇಡ ನೆಫಿ. ಹಸಿವಿಲ್ಲ."

" ನನಗೂ ಅಷ್ಟೆ."

" ನೀನೂ ಉಪವಾಸವಿರೋದೇ ? ಖಂಡಿತ ಸಲ್ಲದು. (ಆಕೆಯ ಹಿರಿಯ ಗಾತ್ರದ ಒಡಲನ್ನು ನೋಡುತ್ತ) ಪುಟಾಣಿ ನನ್ನ ಮೇಲೆ ಕೋಪಿಸ್ಕೊಂಡಿರ್‍ಬೇಕು. ಕೂತ್ಕೊ. ನೀನು ಉಣ್ಣಬೇಕಾದ್ದು ಇಬ್ಬರ ಊಟ. ಬಾ, ಬಾ."

"ನೀನೂ ಒಂದು ತುತ್ತು? "

" ಆಗಲಿ. ಆಗಲಿ."

ಉಣ್ಣುವಾಗ ಬೆರಳುಗಳು ಸಂದೇಶ ನೀಡಲಿಲ್ಲ. ರತಿಸುಖಕ್ಕಿಂತಲೂ ಶ್ರೇಷ್ಠತರವಾಗಿತ್ತು ಅನ್ಯೋನ್ಯ ಸಾಮೀಪ್ಯದ ನೆಮ್ಮದಿ.

" ನೆಜಮುಟ್ ಬಂದಿದ್ಲು."

" ಏನಂತೆ ? "

" ಪೆರೋ ನಿನಗೆ ಉಡುಗೊರೆ ಕೊಡಬಹುದಂತೆ."

" ಹುಚ್ಚಮ್ಮ ! "

" ನಾನೂ ಹಾಗೇಂತ್ಲೇ ಅವಳನ್ನ ಕರೆದೆ. ....ನಾವು ಸ್ವಾರ್ಥಿಗಳಲ್ಲ.

ನಿನ್ನ ಕೆಲಸದ ಗೊತ್ತುಗುರಿ ನನಗೀಗ ಚೆನ್ನಾಗಿ ಅರ್ಥವಾಗ್ತದೆ, ಮೆನೆಪ್‌ಟಾ."

ಊಟ ಮುಗಿದು—

ಮೆನೆಪ್‌ಟಾ ಪತ್ನಿಯನ್ನು ಅಪ್ಪಿಕೊಂಡ, ತನ್ನ ಮೈಗೆ ಆಕೆಯ ಒಡಲನ್ನು ಒತ್ತದಂತೆ.

" ನಾನು ಸುಖಿ, ನೆಫಿ."

" ನಾನೂ. ಅಲ್ಲಿ ಹುಷಾರಾಗಿರು. ಅಪಾಯ ಇರಬಹುದು."

" ಹೂಂ."

" ಪ್ರತಿ ದಿನ ನನ್ನನ್ನು ಜ್ಞಾಪಿಸ್ಕೋತೀಯಾ ? "

" ಪ್ರತಿ ರಾತ್ರಿ."

ಚುಂಬನ, ಮರುಚುಂಬನ.

" ಒಂದು ಕೆಲಸ ಬಾಕಿ ಉಳೀತು."

" ಯಾವುದು ನೆಫಿ ? "

" ಚಿಕ್ಕಮ್ಮನ ಹಳ್ಳಿಗೆ ಹೋಗಿಬರೋದು."

" ನಾನು ವಾಪಸಾದ್ಮೇಲೆ, ಕುಯಿಲು ಮುಗಿಸಿ, ಹೋಗೋಣ."

" ಹೂಂ. ಪ್‌ಟಾ. ನೀನಿನ್ನು ಮಲಕೋ. ನಿದ್ದೆ ಬೇಡವಾ ? ವಿಶ್ರಾಂತಿ ಬೇಡವಾ ? "

" ನಿದ್ದೆ ವಿಶ್ರಾಂತಿ ನಿನಗೂ ಬೇಕು—ನಮ್ಮಿಬ್ಬರಿಗೂ...."

" ಹುಂ."

" ಸ್ವಲ್ಪ ಅಳ್ತೀಯಾ ? "

ನೆಫಿಸ್ ನಕ್ಕಳು.

" ಇವತ್ತು ನಿನ್ನ ತೋಳೇ ನನಗೆ ದಿಂಬು, ಪ್‌ಟಾ. ಕಣ್ಣೀರಿನಿಂದ ತೋಯಿಸೋದಿಲ್ಲ. ಜೊಲ್ಲು ಸುರಿಸಿ ಒದ್ದೆ ಮಾಡ್ತೇನೆ...."

ಕುಳಿತಲ್ಲೇ ನಿದ್ದೆ. ಮೈ ಚಾಚಿಕೊಂಡು ನಿದ್ದೆ....

ಬೆಳಗಾಯಿತು....

ಮಂದಿರಕ್ಕೆ ಹೋಗಿ ಬರುವುದರೊಳಗೆ ನಾಲ್ಕು ಕಡೆಗಳಿಂದ ರಾತ್ರಿಯೇ ಎದ್ದು ನಡೆದು ಬಂದಿದ್ದವರೊಡನೆ ಊರವರೂ ಸೇರಿದರು. ಒಟ್ಟು ನಾಲ್ವತ್ತು

ಜನರ ವಿಶಿಷ್ಟ ತಂಡ. ಅಬ್ಟು ಯಾತ್ರೆಯ ಬಾಂಧವರು. ಅಹೂರಾನೂ ಇದ್ದಳು, ಕುಟು ಕುಟು ನಡೆಯುತ್ತಿದ್ದ ಮಗಳೊಡನೆ. ಅವರ ಜೊತೆ ಬಟಾ.

"ಹೇಳು ಬಟಾ ಹೇಳು, ಹೇಳು."

"ಮೆನೆಪ್‌ಟಾ ಅಣ್ಣ. ಇವರೆಲ್ಲ ಮೆಂಫಿಸಿಗೆ ಬರ್‍ತಾರಂತೆ!"

"ಮೆನೆಪ್‌ಟಾ ನಕ್ಕ. ಬಟಾನೇ ಅಂದ:

"ನಾನು ಹೇಳಿದ್ದೇನೆ: ಇದು ರಾಜಕಾರ್ಯಕ್ಕೆ ಸಂಬಂಧಿಸಿದ್ದು. ಈ ಸಲ ಖಂಡಿತ ಬೇಡ—ಅಂತ."

ಅವರನ್ನೆಲ್ಲ ಒಲವಿನ ನೋಟದಿಂದ ದಿಟ್ಟಿಸುತ್ತ ಮೆನೆಪ್‌ಟಾ ಅಂದ: "ಹೌದು."

"ಈ ಸಲ ಬೇಡ."

"ಮುಂದಿನ ಸಲ? ಖಂಡಿತ?"

"ಹೂಂ—ಹೂಂ."

ಮಧ್ಯಾಹ್ನ....

ರಾಮೆರಿಪ್‌ಟಾನ ಜತೆ ಊಟ.

"ಅಬ್ಟುವಿನಲ್ಲಿ ಕೊಂಡ್ಕೊಂಡ ಲಿಪಿಸುರುಳಿ ನೆನಪಿದೆಯಾ ರಾಮೆರಿ?"

"ಓ! ನಿನ್ನ ತಾಯಿ ನಿನಗಾಗಿ ಏನೇನು ಮಾಡಿರುವಳೆಂಬುದನ್ನು ನೀನೆಂದೂ ಮರೆಯಬೇಡ!...."

"ಅಮ್ಮನನ್ನು ನೋಡ್ಕೊ."

"ಹೂಂ."

ನೆಫೆರುರಾ ಬಂದು ಹೋದಳು:

"ನೆಫಿಸ್ ಅಕ್ಕ. ಇದನ್ನು ತಗೊಳ್ಳಿ. ಅಣ್ಣನಿಗೆ ದಾರಿಬುತ್ತಿ."

"ನಾನು ಆಗಲೇ ಬುತ್ತಿ ಕಟ್ಟಿದ್ದೇನೆ, ನೆಫೆರು"

"ನನ್ನದೂ ಒಂದು ಇರಲಿ....ಅಣ್ಣ ಹೋಗಿ ಬನ್ನಿ...."

ಮೆನೆಪ್‌ಟಾ ಆಕೆಯ ಮುಖ ನೋಡಿ ತುಟಿಗಳಲ್ಲಿ ನಗೆಸೂಸಿ ಅಂದ:

"ಆಗಲಿ ನೆಫೆರುರಾ."

ಬುತ್ತಿಗಳು ಇನ್ನೂ ಹಲವಿದ್ದುವು. ಅಬ್ಟು ಯಾತ್ರಿಕರು ತಂದುದನ್ನಂತೂ ಬಿಡುವಂತಿಲ್ಲವಲ್ಲ? ಬಟಾನೆಂದ: "ಬುತ್ತಿಗಳು ಇನ್ನೂ ಬಂದರೆ ಮೊಸಳೆ

ಗಳಿಗೆ ಕೊಡಬೇಕಾದೀತು."

ಖ್ನೆಮ್‌ಹೊಟೆಪ್ ನಿರ್ಧಾರ ಕೈಗೊಂಡ.

"ಇನ್ನು ಒಬ್ಬೊಬ್ಬರದು ಒಂದೊಂದು ಹಿಡಿ ಮಾತ್ರ."

ಯಾರೋ ನಗುತ್ತ ಕೇಳಿದಳು :

"ನಿನ್ನ ಅತ್ತೆ ಬರ್‍ತಿದ್ದಾರೆ. ಬುತ್ತಿ ತರ್‍ತಿದ್ದಾರೆ !"

ಖ್ನೆಮ್ ದೃಢವಾಗಿ ಅಂದ :

"ಎಲ್ಲರಿಗೂ ಒಂದೇ ನಿಯಮ."

ಸಂಜೆ ರಾ ಮುಳುಗಲು ಇನ್ನೂ ಒಂದು ತಾಸಿದೆ ಎನ್ನುವಾಗ ರಾಜಗೃಹ ದಿಂದ ಒಂದು ಮೆರವಣಿಗೆ ಹೊರಟಿತು. ಎಡ ಬಲಗಳಲ್ಲಿ ಸಾಲುಗಟ್ಟಿದ ಜನರು. ಖ್ನೆಮ್‌ಹೊಟೆಪನ ಶಿಸ್ತು. ನಡುವೆ ಹೂಮಾಲೆಗಳು ಕೊರಳನ್ನು ಬಳಸಿದ್ದ, ಜೊಂಡಿನ ಪಾದರಕ್ಷೆ ಮೆಟ್ಟಿದ್ದ, ನೆಫಿಸ್ ಬಾಚಿದ್ದ ತಲೆಗೂದಲನ್ನು ಭುಜಗಳ ತನಕ ಇಳಿಬಿಟ್ಟಿದ್ದ ಮೆನೆಸ್‌ಟಾ. ಅವನನ್ನು ಸುತ್ತುವರಿದವರು ಸ್ನೊಫ್ರು, ಸೆಬೆಕ್ಖು, ಸೆಮು ಮತ್ತಿತರ ಹಿರಿಯರು ಅವರ ಹಿಂದಿನಿಂದ ಇಪ್ಯುವರ್, ಔಟ, ಬೆಕ್. (ಗರ್ಭಿಣಿ ತಾಯಿಯೊಡನೆ ರಾಮೆರಿಪ್‌ಟಾ ದೋಣಿಕಟ್ಟೆಗೆ ಮೊದಲೇ ಸಾಗಿದ್ದ) ಹರ್ಷೋತ್ಸಾಹದ ಬುಗ್ಗೆಗಳು ಮಾತಾಗಿ ಕಲರವವಾಗಿ ಚಿಮ್ಮು ತ್ತಿದ್ದುವು. ನಡುನಡುವೆ ಜಯಘೋಷ; "ಓ! ಮೆನೆಪ್‌ಟಾ ! ಓ ! ಮೆನೆಪ್‌ಟಾ !"

ದೋಣಿಕಟ್ಟೆಯನ್ನು ತಲಪಿದ್ದ ನೂರಾರು ತೊರೆಗಳನ್ನು ಮೆರವಣಿಗೆಯ ಪ್ರವಾಹವೂ ಕೂಡಿಕೊಂಡಿತು. ಅಸ್ವಸ್ಥರು ಮತ್ತು ತೊಟ್ಟಿಲ ಕೂಸುಗಳನ್ನು ಬಿಟ್ಟು ಮುಖ್ಯ ಪಟ್ಟಣದ ಜನರೆಲ್ಲ ಅಲ್ಲಿ ನೆರೆದಿದ್ದರು. ಅವರೊಂದಿಗೆ ಪ್ರಾಂತದ ಬೇರೆ ಬೇರೆ ಹಳ್ಳಿಗಳಿಂದ ಬಂದವರೂ ಇದ್ದರು.

ಬಟಾನ ದೋಣಿ ಸಿದ್ಧವಾಗಿತ್ತು. ಅದನ್ನು ಹಿಂಬಾಲಿಸಿ ಒಂದಷ್ಟು ದೂರ ಹೋಗುವ ಆಸೆಯಿಂದ ಹಲವು ಪೆಪೈರಸ್ ದೋಣಿಗಳೂ ನೀರಿಗೆ ಇಳಿ ದಿದ್ದುವು.

ದೋಣಿಕಟ್ಟೆಯ ವೇದಿಕೆಗೆ ಮೆನೆಪ್‌ಟಾನನ್ನು ಖ್ನೆಮ್‌ಹೊಟೆಪ್ ಹತ್ತಿಸಿ, "ಅಣ್ಣ ಏನಾದರೂ ಹೇಳಿ," ಎಂದ.

ಮರಳು ಕಣ ಬಿದ್ದರೂ ಸಪ್ಪಳವಾಗುವ ಮೌನ. ಮೆನೆಪ್‌ಟಾ ಸುತ್ತಲೂ ನೋಡಿದ. ಇವರನ್ನೆಲ್ಲ ಬಲ್ಲೆ—ಎನಿಸಿತು ; ಇಲ್ಲ, ಇವೆಲ್ಲ ಅಪರಿಚಿತ ಮುಖಗಳು ಎಂದೂ ತೋರಿತು. ಇದಲ್ಲವೆ ನಿರೀಕ್ಷೆಯ ನೋಟ ? ನಿರೀಕ್ಷೆಯನ್ನು ಈಡೇರಿಸುವುದು ಎಷ್ಟು ಕಷ್ಟ !

ಉಮ್ಮಳ, ಉಸಿರಾಟಕ್ಕೂ ತೊಡಕು. ಏನಾದರೂ ಹೇಳಬೇಕು. ಏನನ್ನಾದರೂ.

ಇದ್ದಕ್ಕಿದ್ದಂತೆ, ಬಿಗಿಯುತ್ತಿದ್ದ ಗಂಟಲನ್ನು ಭೇದಿಸಿಕೊಂಡು ಧ್ವನಿ :

" ನಾನು—ನಾನು—ಮೆಂಫಿಸ್‌ಗೆ ಹೋಗಿ ಬರ್ತೇನೆ."

ಮೆನೆಪ್‌ಟಾ ವೇದಿಕೆಯಿಂದ ಕೆಳಕ್ಕೆ ಜಿಗಿದ. ತನ್ನವರೇ ಆದ ಜನರ ತೋಳ ತೆಕ್ಕೆಗೆ. ಅಶ್ರು ಅವನ ಎರಡು ಕಪೋಲಗಳಿಂದಲೂ ಬಿಕ್ಕುತ್ತ ಬಿಕ್ಕುತ್ತ ಧುಮ್ಮಿಕ್ಕಿತು.

ಈತ ರಾಮೆರಿಪ್‌ಟಾ. ಈಕೆ ನೆಫಿಸ್.

ಮಗನನ್ನು ಬರಸೆಳೆದು ನೆತ್ತಿಯನ್ನು ಮೂಸಿದ. (' ಎತ್ತರಕ್ಕೆ ಬೆಳೀತಿದ್ದಾನೆ.') ನೆಫಿಸಳ ತೋಳು ಮುಟ್ಟಿದ, ಅಂಗೈ ಬೀಸಿದ.

ದೋಣಿಯಲ್ಲಿ ಗಡಿಯಾರವಿದ್ದ ಪೆಟಾರಿ. ಬಟ್ಟೆಬರೆಗಳೂ ಮೌಲ್ಯ ವಿನಿಮಯದ ಕೆಲ ಸಾಮಗ್ರಿಗಳೂ ಇದ್ದ ಇನ್ನೊಂದು ಪೆಟಾರಿ, ಎಣಿಕೆ ಕಷ್ಟವಾಗುವಷ್ಟು ಬುತ್ತಿಯ ಗಂಟುಗಳು, ಹುಟ್ಟು ಹಾಕುವವರು.

ಮೆನೆಪ್‌ಟಾ ದೋಣಿಯನ್ನೇರಿದ. ಕಣ್ಣುಗಳಲ್ಲಿ ನೀರು. ಮಂಜು ಕವಿದಂತೆ ನೋಟ. ದೋಣಿ ಏರುತ್ತಿರುವ ಈ ಇಬ್ಬರು ? ಹಾಂ. ಔಟ, ಬೆಕ್........

ಜನಜಂಗುಳಿಯಿಂದ ಹುಡುಗರ ಧ್ವನಿ ಕೇಳಿಸಿತು :

" ಔಟ....ಬೆಕ್.... "

ಬಟಾನ ಹೆಂಡತಿ ಸಾಮಾನ್ಯವಾಗಿ ದಂಡೆಗೆ ಬರುತ್ತಿರಲಿಲ್ಲ. ಇಂದು ಆಕೆಯೂ ಇದ್ದಳು, ಎಲ್ಲ ಮಕ್ಕಳ ಜತೆಗೆ ಬಟಾನ ನೌಕರರ ಸಂಸಾರಗಳೂ ಇದ್ದುವು.

ಅಂತ್ಯ ಕಾಣದ ಬೀಳ್ಕೊಡುಗೆ.

" ಹೊರಡೋಣ ಬಟಾ." (ತಾನೇ ಹೇಳಿದೆ, ಅಲ್ಲವೆ ?)

ಕಟ್ಟೆಯ ಗೂಟಕ್ಕೆ ದೋಣಿಯನ್ನು ಕಟ್ಟಿದ್ದ ಹಗ್ಗವನ್ನು ಬಟಾ ಬಿಚ್ಚಿದ. ದೋಣಿಯನ್ನು ತುಸು ತಳ್ಳಿ, ಚಂಗನೆ ಒಳಕ್ಕೆ ಹಾರಿ, ಚುಕ್ಕಾಣಿ ಮೂಲೆಯಲ್ಲಿ ನಿಂತು. ಹುಟ್ಟು ಹಾಕುವವರಿಗೆ ಸನ್ನೆ ಮಾಡಿದ.

ನಾವೆ ಚಲಿಸತೊಡಗಿತು. ಕೆಳಗಿದ್ದ ಹಲವು ಪುಟ್ಟದೋಣಿಗಳೂ ಜೀವ ತಳೆದುವು. (ಮಹಾಪೂರ ಇಳಿದು ಮತ್ತೆ ನಿರ್ಮಲವಾಗಿದ್ದ ನೀಲನದಿ. ಮೊದಲು ಅದರ ಮಧ್ಯಕ್ಕೆ. ಅನಂತರ ಉತ್ತರಾಭಿಮುಖವಾಗಿ—ನೀರು ಹರಿಯುತ್ತಿದ್ದ ದಿಕ್ಕಿಗೆ.)

ಮುಗಿಲೆತ್ತರಕ್ಕೆ ಮುಟ್ಟುತ್ತಿದ್ದ ಕಲರವ, ಜಯಘೋಷ.

" ಓ ! ಮೆನೆಪ್‌ಟಾ ! ಓ ! ಮೆನೆಪ್‌ಟಾ ! "

ನಾಯಕ ಕಣ್ಣೆವೆಗಳನ್ನು ಎರಡು ಮೂರು ಬಾರಿ ಒತ್ತಿ ತೆರೆದ. ದೋಣಿ ಕಟ್ಟೆ ಈಗ ನಿಚ್ಚಳವಾಗಿ ಕಂಡಿತು. ಸಹಸ್ರಾರು ತೋಳುಗಳು ಬೀಸಿ ವಿದಾಯ ನುಡಿಯುತ್ತಿದ್ದುವು.

ಚಿಕ್ಕ ದೋಣಿಗಳಲ್ಲಿ ಜನ ಯಾಕೆ ಬರಬೇಕು ? ಇದು ಕಾಲಹರಣ ವಲ್ಲದೆ ಇನ್ನೇನು ?

ಇನ್ನೊಂದು ಮೆರವಣಿಗೆ—ಈ ನದಿಯಲ್ಲಿ ?

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ ! "

ದೋಣಿಕಟ್ಟೆಯ ದೃಶ್ಯ ಮಬ್ಬಾಗುತ್ತಿದೆ. ಘೋಷದ ಅಲೆಗಳು ಮಾತ್ರ ತೇಲಿ ಬರುತ್ತಿವೆ.

ಒಂದು ಕಿರು ದೋಣಿಯಲ್ಲಿ ಖ್ನೆಮ್‌ಹೊಟೆಪ್ ! ತಾನು ಚುಕ್ಕಾಣಿ ತಿರುವುತ್ತ ಇತರರಿಗೆ ಆತ ಆಜ್ಞಾಪಿಸುತ್ತಿದ್ದಾನೆ :

" ಇನ್ನು ಸಾಕು ! ಹೊರಳಿ ! "

ಮೆನೆಪ್‌ಟಾನ ದೋಣಿಯ ಕಡೆಗೂ ಬಂತು ಅವನ ಧ್ವನಿ :

" ಔಟ ! ಬೆಕ್ ! ಜೋಪಾನ ! "

ಆದೇಶ ತನಗಲ್ಲ, ಅನುಚರರಿಗೆ (ಅಂಗರಕ್ಷಕರಿಗೆ)....

ಮೆನೆಪ್‌ಟಾ ನೀಲನದಿಯುದ್ದಕ್ಕೂ ನೋಡಿ, ಉಸಿರೆಳೆದುಕೊಂಡ.

ನಿಂತಲ್ಲಿಂದಲೇ ಕತ್ತು ಹೊರಳಿಸಿ ದೋಣಿಕಟ್ಟೆಯತ್ತ ನೋಡಿ, ಬಿಡಿಸಿದ ಅಂಗೈಯನ್ನು ಆಡಿಸುತ್ತ ತೋಳು ಬೀಸಿದ.

೬

" ಅಣ್ಣಾ, ಮೆನೆಪ್‌ಟಾ ಅಣ್ಣಾ. ಲಿಷ್ಟ್ ಬಂತು."

ಕರೆಯುತ್ತಿದ್ದ ಬೆಳಕು: ಬೇರ್ಪಡಲು ಒಪ್ಪದ ಇರುಳು. ಧ್ವನಿ ಬಟಾನದು. ಏನು ಬಂತು ? ಲಿಷ್ಟ್. ಓ ! ಪಯಣ ಮುಗಿಯಿತು. ಇನ್ನು ಎರಡು ಮೂರು ತಾಸುಗಳಲ್ಲಿ ಮೆಂಫಿಸ್.

ಎವೆಗಳು ಬೇರೆ ಬೇರೆಯಾದುವು; ಕಣ್ಣಾಲಿಗಳನ್ನು ಬೆಳಕು ಮುದ್ದಿಸಿತು. ತುಟಿಗಳು ಅರಳಿದುವು. ಮೆನೆಪ್‌ಟಾ ಎದ್ದ.

ಗೇಬುವಿನ ಊರು. (ಸೆಡ್ ಉತ್ಸವಕ್ಕೆಂದು ಆತನನ್ನೂ ರಾಜಧಾನಿಗೆ ಪೆರೋ ಕರೆದಿರಬಹುದು.)

ಅಂಗಡಿ, ಮನೆಗಳ ಬೀದಿ ದಂಡೆಯುದ್ದಕ್ಕೂ. ನಡುವೆ ದೋಣಿಕಟ್ಟೆ. ಉದಿಸಿದ್ದ ಸೂರ್ಯನ ಹೊಂಬೆಳಕು ಬಿದ್ದು ಆ ಸಾಲು ಅವಕುಂಠನ ಸರಿಸುತ್ತಿತ್ತು. ನದಿಯಲ್ಲಿತ್ತು, ಕೆಲವು ಕಟ್ಟಡಗಳ ಪ್ರತಿಬಿಂಬ. ಗಾನಪ್ರಿಯನೊಬ್ಬನ ಆಲಾಪನೆ ಅಗಲವಾದ ನದಿಯನ್ನು ದಾಟಲು ಯತ್ನಿಸುತ್ತಿತ್ತು.

" ರಾಜಧಾನಿಗೆ ಸಮೀಪದಲ್ಲಿದೆ ಅಂತ ಈ ಊರಿಗೆ ಪ್ರಾಧಾನ್ಯ. ಅಲ್ಲವೆ ಬಟಾ ? "

" ಹ್ಞ. ನಿನಗೆ ಸಮೀಪದವನಾಗಿ ನಾನು ದೊಡ್ಡವ ಅನಿಸಿಕೊಂಡಿಲ್ವಾ?"

ನದಿಯಲ್ಲಿ, ಬದುಕಿನಲ್ಲಿ ಜತೆ ಪಯಣ. ಅದು ಸಾಧಿಸಿದ್ದ ಅಪೂರ್ವ ಬೆಸುಗೆ. ಮಾತಿನಲ್ಲಿ ಆ ಬಂಧುತ್ವದ ಸಲಿಗೆ.

" ಮರೀಬೇಡ ಬಟಾ ; ಸೈನಿಕರಿದ್ದರೆ ಸರದಾರ, ಸಹಚರರಿದ್ದರೆ ನಾಯಕ...."

ನಾಯಕನ ಒಲವು ತುಂಬಿದ ನೋಟ ಇದಿರಾಗಲು, ಪರಮಾನಂದ ಬಟಾನಿಗೆ. ಮೌನ.

ನೀರಾನೆ ಪ್ರಾಂತದ ನದೀ ಸಾರಿಗೆಯ ಮುಖ್ಯಸ್ಥನೆಂದ :

" ನಮ್ಮೂರಿನ ದಂಡೆಯನ್ನು ಎತ್ತರಿಸ್ಬೇಕು. ನದಿಗೆ ಮುಖ ಮಾಡಿ ಒಂದು ಅಂಗಡಿ ಸಾಲು ಕಟ್ಬೇಕು."

" ಹುಂ. ಮಾಡೋಣ. ನೀಲನದಿಯಲ್ಲಿ ಹೋಗುವ ಬರುವವರಿಗೆಲ್ಲ ಆಗ ನೀರಾನೆ ಪ್ರಾಂತದ ದರ್ಶನವಾಗ್ತದೆ."

" ನೆಫೆರುರಾಗೆ ಹೇಳಿದರೆ ಸಾಕು. ಸಾಟಿ ಇಲ್ಲದ ಭೋಜನ ಮಂದಿರ ತೆರೀತಾಳೆ. ಆಗ ಎಲ್ಲ ದೋಣಿಗಳೂ ನಮ್ಮ ಕಟ್ಟೆಗೆ ಬಂದೇ ಬರ್ತವೆ."

ಹಸನ್ಮುಖಿ ಮೆನೆಪ್‌ಟಾ ಏನನ್ನೂ ಹೇಳಲಿಲ್ಲ.

ಲಿಷ್ಟ್ ದಾಟಿದಂತೆ ಜನಸಾಂದ್ರತೆ ಕಡಿಮೆಯಾಯಿತು. ಹಸುರು ಹೊಲಗಳು. ಯೌವನದ ಕಂಪು ಸೂಸುತ್ತಿದ್ದ ಪೈರು.

ದೋಣಿ ಎಡದಂಡೆಯತ್ತ ಹೊರಳಿತು. ಒದ್ದೆ ಮರಳನ್ನು ತೀಡಿ ದೋಣಿ ಸದ್ದಿಲ್ಲದೆ ನಿಂತಿತು. ಪ್ರಾತರ್ವಿಧಿಗಳಿಗಾಗಿ, ಸ್ನಾನಕ್ಕಾಗಿ, ಎಲ್ಲರೂ ಕೆಳಗಿಳಿದರು.

(ನೀರಾನೆ ಪ್ರಾಂತ ಬಿಟ್ಟ ಮೇಲೆ ಮೆನೆಪ್‌ಟಾ ದೋಣಿ ಛಾವಣಿಯ ಕೆಳಗೆ ನಿದ್ದೆಹೋದ ರೀತಿ ಕಂಡು, ಬಟಾ ಬೆಚ್ಚಿದ್ದ. ಆ ಇರುಳು, ಅನಂತರದ ಹಗಲು, ಮತ್ತೊಂದು ಇರುಳು. ದಿನದ ಹೊತ್ತು ಒಮ್ಮೆಯಷ್ಟೇ ಎದ್ದಿದ್ದ. ಬಹಿರ್ದೆಶೆಗೆ ಹೋಗಲು, ಒಂದಿಷ್ಟು ನೀರು ಕುಡಿಯಲು. ಊಟವಿಲ್ಲ, ತಿಂಡಿಯಿಲ್ಲ. " ನೀವೆಲ್ಲ ತಗೊಳ್ಳಿ. ನಾನು ನಿದ್ದೆ ಮಾಡ್ಬೇಕು."

ಕಳೆದ ಒಂಭತ್ತು ತಿಂಗಳ ಬಳಲಿಕೆಯನ್ನೆಲ್ಲ ನೀಗುವ ನಿದ್ದೆ.

ಒಮ್ಮೆ ಬಟಾನಿಗೆ ಗಾಬರಿಯಾಯಿತು. ಏನಾದರೂ ಅಸ್ವಾಸ್ಥ್ಯವಿರಬಹುದೇನೋ ಎಂಬ ಚಿಂತೆ. ದೋಣಿಯ ತ್ರಿವಿಮೂರ್ತಿಯ ಬಳಿ ಕರಂಡಕದಲ್ಲಿತ್ತು ಆಮನ್ ಮೂರ್ತಿ. ಪ್ರವಾಸದ ದೇವರು. ಅದರೆದುರು ಕುಳಿತು ಬಟಾ ತನ್ನ ಅಳಲನ್ನು ತೋಡಿಕೊಂಡ. ಮೆನೆಪ್‌ಟಾ ಮಲಗಿದ್ದಲ್ಲಿಗೆ ಸಾಗಿ, ಒಬ್ಬೂಗಿನ ಹೊಳ್ಳೆಗಳೆದುರು ತನ್ನ ಬೆರಳ ತುದಿಯನ್ನು ಹಿಡಿದ. ಉಸಿರು ಸಣ್ಣನೆ ವಂದೇ ಸಮನಾಗಿ ಆಡುತ್ತಿತ್ತು. "ನಿನ್ನ ಕೀರ್ತಿ ಶಾಶ್ವತವಾಗಲಿ, ಅಮನ್," ಎಂದ.

ಎರಡನೆಯ ಬೆಳಿಗ್ಗೆ ಚೆನ್ನಾಗಿ ಎಚ್ಚರವಾದಾಗ ಮೆನೆಪ್‌ಟಾಗೆ ತಡೆಯಲಾರದ ಹಸಿವು. ಮತ್ತೆ ನಾಯಕನ ಧ್ವನಿ ಕೇಳಿ ದೋಣಿಯಲ್ಲಿ ಎಲ್ಲರಿಗೂ ಹರ್ಷ. ಮನೆಬುತ್ತಿ; ನೆಫೆರುರಾ ಕಟ್ಟಿಕೊಟ್ಟ ಬುತ್ತಿ. ಹಸಿವಿಗೆ ನೆಫಿಸ್ ತಟ್ಟಿದ ರೊಟ್ಟಿ. ರುಚಿಗೆ ನೆಫೆರುರಾ ಅಡುಗೆ.

"ಬಟಾ. ಇದೇನು ಮಾಡಿದಾಳೆ ನಿನ್ನ ಭೋಜನ ಮಂದಿರದ ನೆಫೆರುರಾ. ಸ್ವಲ್ಪ ತಿಂದು ನೋಡು."

ರೊಟ್ಟಿಯ ಆ ಸವಿ ಬಟಾಗೆ ಹೊಸದು. ಬೇಯಿಸಿದ ಮಾಂಸದ ತುಣುಕೊ ? ಬಾಯಲ್ಲಿ ಇಟ್ಟೊಡನೆ ಕರಗುತ್ತಿತ್ತು.

ಅವನೆಂದ :

"ನೆಫೆರುರಾ ಮನುಷ್ಯಳಲ್ಲ, ಮಾಯಾವಿನಿ. ಎಂಥ ರುಚಿ ! ಏನು ರುಚಿ !"

ಹೊಟ್ಟೆ ತುಂಬ ಉಂಡ ಮೇಲೆ ಪುನಃ ತೂಕಡಿಕೆ.

"ಈ ನಿದ್ದೆಯೂ ಒಂದು ವಕ್ರದೇವತೆ," ಎನ್ನುತ್ತ ಮೆನೆಪ್‌ಟಾ ಮೈ ಚಾಚಿದ.

ಬಟಾ ಕೊಳಲನ್ನೆತ್ತಿಕೊಂಡು, ಐಗುಪ್ತದ ಯುವ ಜನತೆಗೆ ಅಚ್ಚುಮೆಚ್ಚಿನದಾದ "ನನ್ನ ನಲ್ಲೆಯ ಒಲವು ನಲಿದಿದೆ ನದಿಯ ತಟದಲ್ಲಿ" ಹಾಡನ್ನು ನುಡಿಸಿದ. ಮೆನೆಪ್‌ಟಾಗೆ ಮಂಪರು. ಮುಗುಳುನಗುತ್ತ ಆತ ಕಣ್ಣೆವೆಗಳನ್ನು ಮುಚ್ಚಿದ

ಮಧ್ಯಾಹ್ನ ಎದ್ದ ಮೇಲೆ, ದಡದಲ್ಲಿ ಕಾಣಿಸಿದ ಅಂಜೂರ ಮರಗಳ ನೆರಳಿನಲ್ಲಿ ತುಸು ವಿಶ್ರಾಂತಿ. ಪಯಣ ಮುಂದುವರಿದಾಗ, ಬಟಾನ ಜೊತೆ ಚೌಕಮಣೆ ಆಟ, ಸಂಜೆಯವರೆಗೂ.

ಮುಂದಿನ ದಿನಗಳಲ್ಲಿ ಮೆನೆಪ್‌ಟಾ ಲವಲವಿಕೆಯ ವ್ಯಕ್ತಿ. ಎಲ್ಲರೊಡನೆ ಮಾತು ಎಲ್ಲರೊಡನೆ ಹರಟೆ. (ಆತ ಹುಟ್ಟು ಹಾಕಿದ, ಚುಕ್ಕಾಣಿ ತಿರುವಿದ.)

ಮುಂದಕ್ಕೆ ಹೊರಟ ದೋಣಿ ಬಿಸಿಲೇರುವುದಕ್ಕೆ ಮೊದಲೇ ರಾಜಧಾನಿಯನ್ನು ಸಮಿಾಪಿಸಿತು.

ಅಂಬಿಗ ಬಟಾನಿಗೆ ರಾಜಧಾನಿ ತಕ್ಕಮಟ್ಟಿಗೆ ಪರಿಚಿತ. ಆವನ ಉದ್ಯೋಗಿಗಳಿಗೂ, ಆತನೆಂದ :

"ಇನ್ನು ಒಂದರ್ಧ ತಾಸಿನ ದೂರ."

ನದೀ ಕಣಿವೆ ವಿಸ್ತಾರಗೊಂಡಿತು. ಮತ್ತೆ ಅಗಲ ಕಿರಿದಾಯಿತು. ಎಡಕ್ಕೂ ಬಲಕ್ಕೂ ಎತ್ತರದ ದಿಬ್ಬಗಳು. ಅವುಗಳ ನಡುವೆ ತಿರುವುತ್ತ ಹೊರಳುತ್ತ ಮಾರ್ಗ ಕ್ರಮಣ. ಬಳಿಕ ಇಬ್ಬದಿಗಳಲ್ಲೂ ಸಮತಟ್ಟು ನೆಲದ ಮೇಲೆ ಹಸುರು ಹೊಲಗಳು, ತಾಳೆ ಮರಗಳು, ಖರ್ಜೂರವೃಕ್ಷಗಳು.

ಕೆಳಗಿನಿಂದ ಹಾಯಿ ಬಿಡಿಸಿದ ದೋಣಿಗಳು. ಮೇಲಕ್ಕೆ ಬರುತ್ತಿದ್ದುವು. ಇವು ರಾಜಧಾನಿಯ ದೋಣಿಕಟ್ಟೆಯಿಂದ ಹೊರಟ ನಾವೆಗಳು ಪವನ ಅತ್ತಣಿಂದ ಜನ ಸಮುದಾಯದ ಅಸ್ಪಷ್ಟ ಧ್ವನಿಗಳನ್ನು ಹೊತ್ತು ತಂದಿತು.

ಮೆನೆಪ್‌ಟಾ ಕುತೂಹಲದಿಂದ ಎಡದಂಡೆಯತ್ತ ನೋಡಿದ. ಇತರ ಕಡೆಗಳಂತೆ ಇಲ್ಲಿಯೂ. ನೀರಿಗಿಳಿದು ಜಲಸಸ್ಯಗಳ ನಡುವೆ ಜನರು—ಬಡ ಜನರು—ಅಲೆಯುತ್ತಿದ್ದರು. ಜೊಂಡು ಸಸ್ಯಗಳಿಗಾಗಿ ಗಡ್ಡೆಗಿಡಗಳಿಗಾಗಿ ಶೋಧೆ. ಇದು ಅವರ ಆಹಾರ. ಪುಟ್ಟ ದೋಣಿಗಳಲ್ಲಿ ಸಿರಿವಂತರೂ ಸಂಚರಿಸುತ್ತಿದ್ದರು. ಅದು ವಿಹಾರ, ಬೇಟೆ. ಕೈಕೋಲುಗಳಿಂದ ಹೊಡೆದು ಅವರು ಕೆಡವಿದ ಕಾಡು ಬಾತುಕೋಳಿಗಳನ್ನು ಸೇವಕರು ನೀರಲ್ಲಿ ಈಸಾಡಿ ಹಿಡಿದು ಕೊಳ್ಳುತ್ತಿದ್ದರು. ಅವು ಔತಣದ ಊಟಕ್ಕೆ.

ಸಹಸ್ರಾರು ದೋಣಿಗಳು ನದಿಯನ್ನು ಆವರಿಸಿದ್ದುವು.

ಎತ್ತರದ ಕೃತಕ ಎಡದಂಡೆ. ಮಹಾಪೂರ ತನ್ನ ನುಟ್ಟದ ಗುರುತನ್ನು ಬಿಟ್ಟು ಹೋಗಿತ್ತು. ದಂಡೆಯುದ್ದಕ್ಕೂ ಜನಸಂಚಾರ. ಇಲ್ಲಿನ ಜನರ ನಡಿಗೆಯ ಗತಿ ತುಸು ತೀವ್ರ. ಗುಡಿಸಲುಗಳು, ಮನೆಗಳು, ಕೊಂಚ ದೂರದಲ್ಲಿ ಭವ ಸೌಧಗಳು.

ಬಟಾ ವಿವರಿಸಿದ:

"ಅವುಗಳಲ್ಲಿ ಒಂದು ಸಣ್ಣ ಅರಮನೆ. ಫೆರೋನ ಇಬ್ಬರು ಸೋದರಿಯರೂ ಅವರ ಮಕ್ಕಳೂ ಅಲ್ಲಿ ವಾಸ ಮಾಡ್ತಾರೆ. ಫೆರೋನ ಮಹಾಮನೆ ಕಟ್ಟೆಯ ಉತ್ತರ ದಿಕ್ಕಿನಲ್ಲಿ. ನದಿಗೆ ಅಂಟಿಕೊಂಡೇ ಇದೆ. ಆದರೆ ಆ ಕಡೆಯಿಂದ ಅಗಮನ ನಿರ್ಗಮನ ಅರಸ ಅರಸಿಯರ ನಾವೆಗಳದ್ದು ಮಾತ್ರ. ಅಲ್ಲಿ ಇತರರಿಗೆ ಪ್ರವೇಶವಿಲ್ಲ."

ಕಟ್ಟೆಯ ಹತ್ತಿರ ಹಲವು ನಾವೆಗಳಿದ್ದುವು. ಬಟಾನ ದೃಷ್ಟಿ ಅತ್ತ ಅಲೆದುದನ್ನು ಗಮನಿಸಿ ಮೆನೆಪ್‌ಟಾ ಕೇಳಿದ.

"ಏನು ಹುಡುಕ್ತಿದೀಯಾ ?"

"ಸೈಪ್ರಸಿನ ಒಂದು ವ್ಯಾಪಾರೀ ನೌಕೆ ಇದೆ. ಮಿನೋ ದ್ವೀಪದ್ದೊಂದು. ಆ ನಾವಿಕರ ರೂಪಲಕ್ಷಣ ನೋಡಿ ಹೇಳ್ತಿದ್ದೇನೆ....ಕೆಫ್ಟಿಯು ದ್ವೀಪದವರಲ್ಲ. ಕೆಫ್ಟು ಮಹಾ ಹಸುರು ಸಮುದ್ರದ ತೀರ ಪಟ್ಟಣಗಳಿಗೆ ಹೋಗಿದ್ದಾನೇಂತ ತೋರ್‍ತದೆ."

ನೀಳವಾಗಿದ್ದ ದೋಣಿಯಲ್ಲಿನ ಜನಸಮ್ಮರ್ದ ಕಂಡು ಬೆರಗಾಗಿ, ಔಟ "ಅಬ್ಬ !" ಎಂದ.

ಈ ಗದ್ದಲದಲ್ಲಿ ಕಟ್ಟೆ ತಲಪುವುದು ತಡವಾಗುತ್ತದೆಂದು ಬಟಾನಿಗೆ ಆತಂಕ. ಆತ "ದಾರಿ ! ದಾರಿ !" ಎಂದು ಕಿರಿಚಿದ. ಕಟ್ಟೆಯ ಕಾವಲ ಭಟನೊಬ್ಬನ ಗಮನವನ್ನು ಸೆಳೆದ. ಆ ಭಟ "ತಡೆ!" ಎಂದು ಕೈಸನ್ನೆ ಮಾಡಿದ. ಕೆಲ ನಿಮಿಷಗಳಲ್ಲಿ ಕಟ್ಟೆಯಿಂದ ಧ್ವನಿ ಕೇಳಿಸಿತು :

"ಹೊಸದಾಗಿ ಬಂದ ದೋಣಿ ಈಶಾನ್ಯ ಮೂಲೆಗೆ ಸಾಗ್ಲಿ !"

ಆಗಬಹುದು ಎನ್ನುವಂತೆ ಬಟಾ ಕೈ ಆಡಿಸಿದನಾದರೂ, ಆ ಕಾವಲು ಭಟ ತನ್ನ ಆದೇಶವನ್ನು ಮತ್ತೊಮ್ಮೆ ಸ್ಪಷ್ಟವಾಗಿ ಉಚ್ಚರಿಸಿದ.

ದೋಣಿ ದಾರಿ ಮಾಡಿಕೊಂಡು ಈಶಾನ್ಯ ಮೂಲೆಯನ್ನು ಮುಟ್ಟಿತು.

ಮೊದಲ ಕೆಲಸ ಕಟ್ಟೆಯ ಅಧಿಕಾರಿಯನ್ನು ಕಾಣುವುದು. ಗೂಟವನ್ನು ಹಿಡಿದು ಬಟಾ ಕಟ್ಟೆಗೆ ಜಿಗಿದ.

"ನೀವೆಲ್ಲ ದೋಣಿಯಲ್ಲೇ ಇರಿ," ಎಂದು ಹೇಳಿ, ಆತ ಮಾಯವಾದ. ಬಟಾನ ಉದ್ಯೋಗಿಗಳಿಬ್ಬರು ಇಳಿದು ದೋಣಿಯನ್ನು ಗೂಟಕ್ಕೆ ಕಟ್ಟಿದರು.

ಅಧಿಕಾರಿಯ ಗೂಡಾರದಲ್ಲಿ. ಒಬ್ಬ ವರ್ತಕ ತೆರಬೇಕಾಗಿದ್ದ ಕಟ್ಟೆಯ ಸುಂಕಕ್ಕೆ ಸಂಬಂಧಿಸಿ ವಿವಾದ ನಡೆಯುತ್ತಿತ್ತು, ಕುಳಿತಿದ್ದ ಅಧಿಕಾರಿಯ ಸುತ್ತಲೂ ಜನ ಗುಂಪು ಕೂಡಿದ್ದರು. ಬಟಾ ಸುಮ್ಮನೆ ನಿಂತ. ಒಮ್ಮೆ ಮಾತುಗಳ ನಡುವೆ ಕ್ಷಣಮೌನ ನೆಲೆಸಿದಾಗ, "ಕಟ್ಟೆಯ ಅಧಿಕಾರಿಗಳಿಗೆ ವಂದನೆ," ಎಂದ. (ಹೀಗೆ ವಂದಿಸುವವರು ಅದೆಷ್ಟು ಜನವೊ) ಅಪರಿಚಿತ ಕಂಠ. ನಿಧಾನ

ವಾಗಿ ಅಧಿಕಾರಿ ಬಟಾನೆಡೆಗೆ ಕತ್ತು ತಿರುಗಿಸಿದ. "ನೀರಾನೆ ಪ್ರಾಂತದಿಂದ," ಎಂದ ಬಟಾ. ಅದು ಕೇಳಿಸಿದ್ದೇ ತಡ, ಅಧಿಕಾರಿ ಸೆಟೆದು ಕುಳಿತು, ಚಂಗನೆ ಎದ್ದ. ಅವನ ಮುಖ ವಿವರ್ಣವಾಯಿತು. ತನ್ನ ತುಟಿಗಳನ್ನು ನಾಲಗೆಯಿಂದ ಸವರಿ ಆತ ಕೇಳಿದ :

" ನಾಯಕರು ಬಂದಿದ್ದಾರೊ ?"

" ಹೌದು."

" ನಡೀರಿ, ಹೋಗೋಣ."

ವರ್ತಕ, " ನನಗೆ ತಡವಾಯಿತಲ್ಲ." ಎಂದು ಗೊಣಗಿದ.

" ಇರಪ್ಪ ಬರ್ತೀನೆ," ಎಂದು ಅಧಿಕಾರಿ ಸಿಡಿನುಡಿದ.

ಕಟ್ಟೆಯ ಅಧಿಕಾರಿಯನ್ನು ಕರೆದುಕೊಂಡು ಬಟಾ ಬಂದಾಗ, ನದಿಯನ್ನೂ ದಂಡೆಯನ್ನು ನೋಡುತ್ತ ದೋಣಿ ಛಾವಣಿಯ ಕೆಳಗೆ ಮೆನೆಪ್‌ಟಾ ಕುಳಿತಿದ್ದ. ಅವನೆಡೆಗೆ ದೃಷ್ಟಿ ಬೀರಿ "ಇವರೇ ನಮ್ಮ ನಾಯಕರು," ಎಂದ ಬಟಾ.

ಅಧಿಕಾರಿಗೆ ನಿರಾಸೆ, ಆಡಂಬರದ, ದರ್ಪದ ವ್ಯಕ್ತಿಯನ್ನು ಅವನು ನಿರೀಕ್ಷಿಸಿದ್ದ. ನಿರುತ್ಸಾಹದ ಸ್ವರದಲ್ಲಿ ಅವನೆಂದ :

" ಇವತ್ತೋ ನಾಳೆಯೇ ನೀವು ಬರಬೌದು, ಆದರದಿಂದ ಬರಮಾಡಿಕೋಬೇಕು—ಅಂತ ಅಮಾತ್ಯರಿಂದ ನಾನು ಆಜ್ಞಪ್ತನಾಗಿದ್ದೇನೆ. ನಿಮಗೆ ವಂದನೆ."

ಮೆನೆಪ್‌ಟಾ ನಸುನಗುತ್ತ, ಗೋಣು ಆಡಿಸಿ, ವಂದನೆ ಸ್ವೀಕರಿಸಿದ.

ಅಧಿಕಾರಿ ಮತ್ತೂ ಅಂದ :

" ಅರಮನೆಗೆ ಸುದ್ದಿ ತಲಪಿಸ್ತೇನೆ. ಅಲ್ಲಿಂದ ಯಾರಾದರೂ ಬರೋ ತನಕ ಗೂಡಾರದಲ್ಲಿ ವಿಶ್ರಾಂತಿ ತಗೊಳ್ಳಿ."

" ದೊಡ್ಡದಲ್ಲಿ, ನಾವೆಲ್ಲ ಇಲ್ಲೇ ದೋಣೀಲೇ ಇರ್ತೇವೆ."

" ಹಾಗೇ ಮಾಡಿ. ಆದರೆ ನಾನು ಉಪಚರಿಸಲಿಲ್ಲ ಅಂತ ಅಮಾತ್ಯರು ಸಿಟ್ಟಾಗ್ತಾರೋ ಏನೋ."

" ಆ ಚಿಂತೆ ನಿಮಗೆ ಬೇಡ. ಚೆನ್ನಾಗಿಯೇ ನೋಡಿಕೊಂಡಿರೀಂತ ನಾನು ಅವರಿಗೆ ಹೇಳ್ತೇನೆ."

ಅಧಿಕಾರಿ ಹಲ್ಲು ಕಿರಿದ. ಮೆಚ್ಚತಕ್ಕ ಗಾಂಭೀರ್ಯ, ತೂಕದ ಮಾತು

ಗಳು—ಎಂದುಕೊಂಡ. ಅಲ್ಲಿಯೇ ಇದ್ದ ಒಬ್ಬ ಕಾವಲು ಭಟನತ್ತ ತಿರುಗಿ, " ಬೇರೆ ದೋಣಿಗಳು ಈ ಕಡೆಗೆ ಬರದ ಹಾಗೆ, ಜನ ಗುಂಪು ಕಟ್ಟದ ಹಾಗೆ ನೋಡ್ಕೊ," ಎಂದ. ಇನ್ನೊಬ್ಬ ಭಟನತ್ತ ಹೊರಳಿ, "ಓಡೋ ಕತ್ತೆ. ಅರಮನೆಗೆ ಹೋಗಿ ಅಮಾತ್ಯ ಭವನಕ್ಕೆ ಸುದ್ದಿ ಮುಟ್ಟಿಸು. ನೀರಾನೆ ಪ್ರಾಂತದ ನಾಯಕರು ಬಂದಿದ್ದಾರೆ, ವಿಶ್ರಾಂತಿ ತಗೋತಿದ್ದಾರೆ—ಅಂತ ಹೇಳು," ಎಂದು ನುಡಿದ.

ಭಟ ಹೋದೊಡನೆ ಮೆನೆಪ್‌ಟಾನನ್ನು ಉದ್ದೇಶಿಸಿ, " ಪ್ರಯಾಣ ಸುಖಕರವಾಗಿತ್ತಾ?"—ಎಂದು ಕೇಳಿದ.

ಬಟಾನ ಮೂಗಿನ ತುದಿ ಕೆಂಪಾಯಿತು. ಆತನೇ ಉತ್ತರವಿತ್ತ :

" ಹೌದು, ಸುಖಕರವಾಗಿತ್ತು. ಆ ವರ್ತಕ ಕಾಯ್ತಿದ್ದಾನೆ. ಕಳಿಸ್ಬಿಟ್ಟು ಬನ್ನಿ."

ಬಟಾನನ್ನು ಅಧಿಕಾರಿ ದುರದುರನೆ ನೋಡುತ್ತ, " ಆಗಲಿ, ಆಗಲಿ," ಎಂದು ಹೇಳಿ, ಮೆನೆಪ್‌ಟಾಗೆ ಮತ್ತೊಮ್ಮೆ ನಮಿಸಿ, ಹಿಮ್ಮುಖವಾಗಿ ನಾಲ್ಕು ಹೆಜ್ಜೆ ಸರಿದು, ಸರಕ್ಕನೆ ತಿರುಗಿ ಹೊರಟು ಹೋದ.

" ಏನು ಬಟಾ ? ಅಪರೂಪಕ್ಕೆ ಸಿಟ್ಟು ಬಂತಾ ? " ಎಂದ ಮೆನೆಪ್‌ಟಾ.

" ಸಿಟ್ಟು ಬರದೆ ಏನು ಮಾಡೀತು ? ರಾಜಧಾನಿಯ ದೋಣಿಕಟ್ಟೆ ಅಧಿಕಾರಿಯಂತೆ ! ವಿದೂಷಕ ನನ್ಮಗ !"

" ಸೈರಣೆ ಬೇಕು. ಇನ್ನೂ ಎಂಥೆಂಥವರು ಸಿಗ್ತಾರೊ ?"

ವಾತ್ಸಲ್ಯದ ಟೀಕೆ. ಬಟಾ ಕುಗ್ಗಿದ ಧ್ವನಿಯಲ್ಲಿ, " ನಿಜ ಮೆನೆಪ್‌ಟಾ ಅಣ್ಣ" ಎಂದ

ನಾಯಕನ ಆ ಮಾತು ಅವರ ಇರುವಿಕೆಯ ಗಭೀರತೆಯನ್ನು ಎತ್ತಿ ತೋರಿಸಿತ್ತು....

ರಾಜಧಾನಿಯ ಅಧಿಕಾರದ ವಿರುದ್ಧ ನೀರಾನೆ ಪ್ರಾಂತ ಬಂಡಾಯವೆದ್ದಿದ್ದ ಸಂಗತಿಯನ್ನು ಬಹ್ವಂಶ ಜನ ಅರಿತಿದ್ದರು. ಆ ಬಂಡಾಯದ ನಾಯಕ ಬಂದಿರುವ ಸುದ್ದಿ ವಿಳಂಬವಿಲ್ಲದೆ ಹಬ್ಬಿತು. ಜನ ನೆರೆದರು. ಎಲ್ಲರೂ ಈಶಾನ್ಯ ಮೂಲೆಯ ದೋಣಿಯತ್ತ ಬೊಟ್ಟು ಮಾಡುವವರೇ.

(ಮಾತುಗಳು :

"ಹಿಡಿದು ತಂದಿದ್ದಾರೊ ?"

"ಇಲ್ಲ. ತಾನಾಗಿಯೇ ಬಂದಿದ್ದಾನೆ."

"ನೋಟಕ್ಕೆ ತೀರಾ ಸಾಮಾನ್ಯ ಮನುಷ್ಯ."

"ಜನನಾಯಕ ಅಲ್ಲವಾ ?"

"ತಪ್ಪಾಯ್ತು ಅಂತ ಕ್ಷಮೆ ಕೇಳ್ತಾನಂತೊ ?"

"ಛೆ ! ಛೆ ! ಎಷ್ಟು ಶಾಂತವಾಗಿದ್ದಾನೆ ! ಅಮಾತ್ಯರೇ ಕರೆಸಿರ ಬಾದು—ಸೆಡ್ ಉತ್ಸವಕ್ಕೆ."

"ಆ ! ಸೆಡ್ ಉತ್ಸವ ! ಯಾವಾಗಲಂತೆ ?"

"ಈ ತಿಂಗಳು ಅಥವಾ ಮುಂದಿನ ತಿಂಗಳು. ಮಹಾ ಅರ್ಚಕರು ಊರಲ್ಲಿಲ್ಲ. ಅವರು ಬಂದ್ಮೇಲೆ ದಿನ ಗೊತ್ಮಾಡ್ತಾರೆ...."

"ಸ್ವಲ್ಪಹೊತ್ತು ಇಲ್ಲೇ ಇರೋಣ. ಈ ನಾಯಕ ಹೋಗೋದು ಅರ ಮನೆಗೊ ಸೆರೆಮನೆಗೊ ಅನ್ನೋದು ತಾನಾಗಿಯೇ ಗೊತ್ತಾಗ್ತದೆ.")

ಸ್ವಲ್ಪ ಹೊತ್ತಿನಲ್ಲಿಯೇ ಗದಾಧಾರಿ ಭಟರು ಬಂದರು. ದಟ್ಟಗೊಳ್ಳು ತ್ತಿದ್ದ ಜನಸಂದಣಿಯನ್ನು ಉದ್ದೇಶಿಸಿ ಅವರೆಂದರು :

"ಹಿಂದಕ್ಕೆ ಸರೀರಿ ! ಸಾಲಾಗಿ ನಿಲ್ಲಿ !"

ಸಾಲು ಬೆಳೆಯಿತು. ದೋಣಿಕಟ್ಟೆಯ ವಿಶಾಲ ಬೀದಿಯ ಎರಡೂ ಬದಿಗಳಲ್ಲಿ ಜನ ಕಲೆತರು. ಬೀದಿ ದಾಟಲು ಅನುಮತಿ ದೊರೆಯದೆ ದಾರಿ ಹೋಕರು ಅಲ್ಲಲ್ಲೇ ನಿಂತರು.

(ತಡವಾಗಿ ಬಂದವರು ಕೇಳಿದರು :

"ಯಾರು ಬರ್ತಾರೆ ?"

"ಗೊತ್ತಿಲ್ಲಪ್ಪ. ಪೆರೋ ಇರ್ಬಾದು."

"ಪೆರೋ ಆಗಿದ್ರೆ ಭಟರ ಉಸ್ತುವಾರಿಗೆ ದಳಪತಿ ಬರ್ತಿದ್ದ. ಅಮಾತ್ಯ ರೂಂತ ಕಾಣ್ತದೆ."

"ಸ್ವಲ್ಪ ಹೊತ್ತು ಕಾದಿರಿ; ತಾನೇ ಗೊತ್ತಾಗುತ್ತಲ್ಲ ?")

* * * *

ಸ್ವಲ್ಪ ಸಮಯದಲ್ಲೇ ಕರಿಯ ಸೇವಕರು ಹೊತ್ತ ಅರಮನೆಯ ಪೀಠ ಪಲ್ಲಕಿ ಬಂತು. ಛಾವಣಿಯ ಕೆಳಗೆ ಒಬ್ಬ ವ್ಯಕ್ತಿ ಕುಳಿತಿದ್ದ. ನಡುಪಟ್ಟಿಯ ಕೊರಳ ಆಭರಣಗಳು ಸಿರಿವಂತಿಕೆಯನ್ನು ಸೂಚಿಸುತ್ತಿದ್ದುವು. ಯಾರೊ ? ಜನರಿಗೆ ತಿಳಿಯದು. ಸಾಲಿನಲ್ಲಿ ಇದ್ದ ರಾಜಧಾನಿಯ ಪ್ರತಿಯೊಬ್ಬ ಹತ್ತಿರದ ಭಟನನ್ನು ಕೇಳಿದ :

"ಪೀಠಪಲ್ಲಕಿಯಲ್ಲಿರೋದು ಯಾರು ?"

"ಗೊತ್ತಿಲ್ಲಪ್ಪ," ಎಂದ ಕಾರ್ಯನಿರತ ಭಟ.

"ಪಲ್ಲಕಿ ದಾಟಿದೊಡನೆ ಜನ ಬೀದಿಗಿಳಿಯಲು ಯತ್ನಿಸಿದರು. ಭಟರು ಬಿಡಲಿಲ್ಲ. ಅವರೆಂದರು :

"ಕಟ್ಟೆಯಿಂದ ಪಲ್ಲಕಿ ವಾಪಸಾಗೋವರೆಗೂ ಅಲ್ಲಿಯೇ ಇರಿ !"

ದೋಣಿಕಟ್ಟೆಯ ಮೇಲಿನ ಕಲರವ ಕಡಿಮೆಯಾಯಿತು. ಬರಬೇಕಾದವರು ಬಂದರು ಎನ್ನುವುದಕ್ಕೆ ಅದು ಮುನ್ಸೂಚನೆ.

ಬಟಾನ ದೃಷ್ಟಿ ಕಟ್ಟೆಯ ದ್ವಾರದ ಮೇಲೆ ನೆಟ್ಟಿತ್ತು. ಕಟ್ಟೆಯ ಅಧಿಕಾರಿ ಅತ್ತ ಧಾವಿಸಿದುದನ್ನೂ ಬೋಯಿಗಳು ಪಲ್ಲಕಿಯನ್ನು ಕೆಳಕ್ಕೆ ಇಟ್ಟುದನ್ನೂ ಆತ ಕಂಡ.

ಪೀಠದಲ್ಲಿದ್ದವನು ಎದ್ದು ಹೊರಬರುತ್ತಿದ್ದಂತೆ ಬಟಾ ಉದ್ಗರಿಸಿದ :

"ಓ ಸೆತ್ ! ಇದನೋಡು ! ಗೇಬು !"

ಗೇಬುವನ್ನು ಕರೆದುಕೊಂಡು ಕಟ್ಟೆಯ ಅಧಿಕಾರಿ ನೀರಾನೆ ಪ್ರಾಂತದ ದೋಣಿಯತ್ತ, ಬರತೊಡಗಿದ.

ಮೆನೆಪ್‌ಟಾನ ಎದೆಗುಂಡಿಗೆ ಒಂದು ಕ್ಷಣ ತೀವ್ರವಾಗಿ ತುಡಿಯಿತು. ಆತ ಆಳವಾಗಿ ಉಸಿರಾಡುತ್ತ ಭಾವೋದ್ವೇಗವನ್ನು ಹತೋಟಿಗೆ ತಂದುಕೊಂಡ. ಬಟಾ ನೀಡಿದ ಕೈಯನ್ನು ಹಿಡಿದು ದೋಣಿಯ ಅಂಚಿನ ಮೇಲಿಂದ ಆತ ಕಟ್ಟೆಗೆ ಬಂದ.

ಆತ್ಮವಿಶ್ವಾಸದ ನಿಲುವು. ಜನಜಂಗುಳಿಯ ದೃಷ್ಟಿಯೇ ಅವನ ಮೇಲೆ. ಗೇಬುವೂ ನೋಡುತ್ತಿದ್ದ. ಇರುವುದಕ್ಕಿಂತಲೂ ಹೆಚ್ಚು ಎತ್ತರದವನಾಗಿ ತಾನು ಕಾಣಿಸುತ್ತಿದ್ದೇನೆ ಎಂದು ಭಾಸವಾಯಿತು ಮೆನೆಪ್‌ಟಾಗೆ.

ವಂದನೆಯ ಸಮಸ್ಯೆಯನ್ನು ಗೇಬು ಬಗೆಹರಿಸಿದ. ಸರಸರನೆ ನಡೆದು ಬಂದು, ಮುಗುಳುನಗುತ್ತಿದ್ದ ಮೆನೆಪ್‌ಟಾನ ಕೈಗಳನ್ನು ತನ್ನ ಕೈಗಳಿಂದ ಹಿಡಿದುಕೊಂಡು, ಆ ಕಡೆ ಈ ಕಡೆ ತೊಟ್ಟಿಲಾಡಿಸುತ್ತ, ಅವನೆಂದ :

"ಓ ಮೆನೆಪ್‌ಟಾ. ಅಂತೂ ಬಂದಿರಲ್ಲ! ಅಮಾತ್ಯರು 'ಗೇಬು, ನೀನೇ ಹೋಗಿ ಕರಕೊಂಡ್ಬಾ' ಅಂದ್ರು. 'ಖಂಡಿತ ಹೋಗ್ತೇನೆ. ಅದಕ್ಕಿಂತ ಹೆಚ್ಚು ಸಂತೋಷದ ಕೆಲಸ ಬೇರೆ ಇಲ್ಲ,' ಎಂದೆ. ಊರಲ್ಲಿ ಎಲ್ಲರೂ ಕ್ಷೇಮವಾ?"

"ಹ್ಞ. ಕ್ಷೇಮವಾಗಿದ್ದಾರೆ."

"ನಾನು ನಿಮ್ಮ ಬಂಧು. ನನ್ನ ಹೆಸರು ಹಿಡಿದ 'ಗೇಬು' ಅಂತ ಕರೀರಿ."

ಮೆನೆಪ್‌ಟಾ ನಕ್ಕ.

"ಹೀಗೆ ನಗ್‌ನಗ್ತಾನೆ ಎಲ್ಲರ ಮನಸ್ಸನ್ನೂ ಗೆದ್ದಿರಿ ಅಂತ ಕಾಣ್ತದೆ.... ರಾಜಧಾನಿಗೆ ಇದೇ ಪ್ರಥಮ ಭೇಟಿ ಅಲ್ವಾ?"

"ಹೌದು, ಪ್ರಥಮ ಭೇಟಿ."

ಕಟ್ಟೆಯ ಅಧಿಕಾರಿ ಬಾಗಿ ನಮಿಸುತ್ತ, "ಗೂಡಾರದಲ್ಲಿ ವಿಶ್ರಾಂತಿ...." ಎಂದು ತೊದಲಿದ.

ಗೇಬು ದರ್ಪದ ಧ್ವನಿಯಲ್ಲಿ, "ಇಲ್ಲ. ನಾವು ನೇರವಾಗಿ ಅರಮನೆಗೇ ಹೋಗ್ತೇವೆ" ಎಂದು ನುಡಿದು ತನ್ನ ಎಡಗೈಯನ್ನು ಹಿಂದಕ್ಕೆ ತೆಗೆದುಕೊಂಡು, ಬಲಗೈಯಿಂದ ಮೆನೆಪ್‌ಟಾನ ಎಡಗೈಯನ್ನಷ್ಟೇ ಹಿಡಿದುಕೊಂಡು, "ನಡೀರಿ," ಎಂದ.

ಗೂಡಾರದಿಂದ ಹೂಹಾರಗಳು ಬಂದುವು. ಕಟ್ಟೆಯ ಅಧಿಕಾರಿ ಮೆನೆಪ್‌ಟಾ ಮತ್ತು ಗೇಬು ಇಬ್ಬರಿಗೂ ಹಾರ ಹಾಕಿ, ತನ್ನ ಕರ್ತವ್ಯ ನೆರವೇರಿಸಿ, ಚಪ್ಪಾಳೆ ತಟ್ಟಿದ. ನೆರೆದ ಎಲ್ಲರ ಅಂಗೈಗಳೂ ಸದ್ದು ಮಾಡಿದುವು. ಭಟರು ದ್ವಾರದ ಬಳಿಗೆ ಸಾಗಿದುದರಿಂದ ಕಟ್ಟೆಯ ಮೇಲಿನ ಜನ ಸಾಲು ಕಡಿದು ಗುಂಪಾದರು.

ಪಲ್ಲಕಿಯ ಪೀಠಗಳ ಮೇಲೆ ಗೇಬು, ಮೆನೆಪ್‌ಟಾ ಇಬ್ಬರೂ ಕುಳಿತರು.

ಎಡಕ್ಕೆ ತೋಟ, ಬಲಕ್ಕೆ ಬೆಕ್, ಮುಂದೆಯೂ ಹಿಂದೆಯೂ ಬೋಯಿಗಳು. ದೋಣಿಯ ಹತ್ತಿರವೇ ಇರುವಂತೆ ತನ್ನ ನೌಕರರಿಗೆ ಸೂಚಿಸಿ, ಬಟಾ ಪಲ್ಲಕಿಯನ್ನು ಹಿಂಬಾಲಿಸಿದ.

ಬೀದಿಯಿಂದ ಬೀದಿಗೆ ಹಬ್ಬಿತ್ತು ವಾರ್ತೆ. ದಾರಿಯುದ್ದಕ್ಕೂ ಜನ ಸಾಲುಗಟ್ಟಿದ್ದರು.

ದೋಣಿಕಟ್ಟೆಯ ರಸ್ತೆಯಿಂದ ಮೆರವಣಿಗೆ ವಕ್ರನಾಯಿಯ ಬೀದಿಗೆ ಹೊರಳಿತು.

ಗೇಬು ವಿವರಿಸಿದ :

"ಅರಮನೆಯವರೆಗೂ ವಿಶಾಲವಾದ ರಾಜವೀಥಿಯೇ ಇದೆ. ಆದರೆ ಅದರಲ್ಲಿ ಪೆರೋ, ಅಮಾತ್ಯರು ಮತ್ತು ಮಹಾ ಅರ್ಚಕರು ಮಾತ್ರ ಮೆರವಣಿಗೆ ಹೋಗ್ಬಹುದು. ಬೇರೆಯವರು ಪಲ್ಲಕೀಲಿ ಕೂತು ಹೋಗೋ ಹಾಗಿಲ್ಲ. ನಡೀಬೇಕು. ಹಿರಿಯ ಅಧಿಕಾರಿಗಳು ಶ್ರೀಮಂತರು ಭೂಮಾಲಿಕರಿಗೆಲ್ಲ ಈ ಅಂಕುಡೊಂಕು ಅಡ್ಡ ದಾರಿ. ಅಗಲ ಕಿರಿದಾದರೇನಂತೆ ? ನಗರ ಪ್ರದಕ್ಷಿಣೆ ಮಾಡಬೇಕಾಗಿಲ್ಲ. ದೂರವೂ ಕಮ್ಮಿ."

ಮೆನೆಪ್‌ಟಾ ಹೂಂಗುಟ್ಟಿದ. ಅವನ ಹಸಿದ ದೃಷ್ಟಿಗೆ ಆಹಾರವಾಗಿತ್ತು, ಇಕ್ಕೆಲಗಳ ಬಾಹ್ಯನೋಟ. ಬಡವರ ವಸತಿ ಪ್ರದೇಶ ಸುಣ್ಣ ಕಲಸಿ ಒಣಗಿಸಿ ಮಾಡಿದ ಇಟ್ಟಿಗೆ ಮನೆಗಳು. ತಾಳೆಯ ತೊಲೆಗಳನ್ನಿರಿಸಿ ಮಣ್ಣು ಮೆತ್ತಿದ ಛಾವಣಿ. ಕುಶಲಕರ್ಮಿಗಳು, ದುಡಿಯುವ ಸ್ತ್ರೀ ಪುರುಷರು, ರೈತರು ಕೂಡಾ.

ಗೇಬುವೆಂದ :

"ಇದು ವಕ್ರನಾಯಿ ಬೀದಿ. ಯಾವಾಗ ಯಾಕೆ ಆ ಹೆಸರಿಟ್ಟರೋ ತಿಳೀದು. ಬೊಗಳುವ ಒಂದು ಪ್ರಾಣಿಯೂ ಇಲ್ಲಿ ಇಲ್ಲ! ಇದಕ್ಕೆ ಸಮಾನಾಂತರವಾಗಿ ಕಟ್ಟೆಯಿಂದ ನೇರವಾಗಿ ಉತ್ತರಕ್ಕೆ ಹೋಗುವ ಒಂದು ರಸ್ತೆ ಇದೆ. ಭಾರೀ ಭಾರೀ ಪಾನ ಮಂದಿರಗಳು, ಉಪಾಹಾರ ಗೃಹಗಳು, ಅಂಗಡಿಗಳು ಅಲ್ಲಿವೆ. ಯಾವತ್ತಾದರೂ ಒಂದು ಸಾಯಂಕಾಲ ಕರಕೊಂಡು ಹೋಗ್ತೇನೆ. ನಿಮ್ಮ ಪ್ರಾಂತದ ಭೂಮಾಲಿಕರೆಲ್ಲ ಅಲ್ಲಿಯೇ ಇದ್ದಾರೆ.

ನಿಮ್ಮನ್ನು ಅಮಾತ್ಯರು ಕರೆಸಿದ ವಿಷಯ ಅವರಿಗೆ ಇನ್ನೂ ತಿಳೀದು."

ಮೆನೆಪ್‌ಟಾ ಏನಾದರೂ ಹೇಳುವನೋ ಎಂದು ಕಾದು ನಿರಾಶನಾಗಿ, ಗೇಬುವೇ ಮುಂದುವರಿಸಿದ :

"ನಾನು ಓದಿದ್ದು ಬೆಳೆದದ್ದು ರಾಜಧಾನಿಯಲ್ಲೇ. ಆಗ ನಮ್ಮ ಸೋದರ ಮಾವ ಅರಮನೇಲಿ ಕಣಜದ ಅಧಿಕಾರಿಯಾಗಿದ್ರು. ಇಲ್ಲಿನ ಗಜಿಬಿಜಿ ಗಡಿಬಿಡಿ ನನಗೆ ಇಷ್ಟವಾಗದೆ ಅವಕಾಶ ಸಿಕ್ಕಿದಾಗಲೆಲ್ಲ ನಮ್ಮೂರು ಲಿಷ್ಟ್‌ಗೆ ಹೋಗಿ ಬಿಡ್ತಿದ್ದೆ....ಈಗಲೂ ಅಷ್ಟೆ."

"ಬರ್‍ತಾ ನಿಮ್ಮೂರು ಕಂಡ್ವಿ."

"ನನ್ನೂರಿನಂಥ ಸುಂದರ ಪಟ್ಟಣ ಐಗುಪ್ತದಲ್ಲಿ ಇನ್ನೊಂದಿಲ್ಲ. ಹುಣ್ಣಿಮೆ ರಾತ್ರೀಲಿ ನದೀಲಿದ್ಕೊಂಡು ಲಿಷ್ಟ್‌ನ ಸೊಬಗು ನೋಡ್ಬೇಕು. ಮುಂದಿನ ಹುಣ್ಣಿಮೆಗೆ ಹೋಗ್ಬರೋಣ. ಅಲ್ದೆ...."

ಮಾತು ಅರ್ಧಕ್ಕೇ ನಿಂತಿತೆಂದು ಮೆನೆಪ್‌ಟಾ ಕೇಳಿದ :

"ಏನು ?"

"ನನ್ನ ಹೆಂಡತಿ ನಿಮ್ಮನ್ನು ನೋಡೋದಕ್ಕೆ ಕಾತರಳಾಗಿದ್ದಾಳೆ. ಏನೋ ಕೇಳ್ಬೇಕಂತೆ."

" ನಿಮ್ಮ ಸಂಸಾರದ ಎಲ್ಲ ಸಾಮಾನುಗಳನ್ನೂ ಎರಡು ದೊಡ್ಡ ಪೆಟಾರಿ ಗಳಲ್ಲಿ ಹಾಕಿ ಮುದ್ರೆ ಒತ್ತಿ, ಸುರಕ್ಷಿತವಾಗಿ ಇಟ್ಟಿದ್ದೇವೆ."

"ಅಬ್ಬ ! ಬದುಕಿದೆ ! ಇನ್ನು ಹೆದರಿಕೆ ಇಲ್ಲ. ನನ್ನ ಹೆಂಡತಿಯ ಬೈಗಳು ಕೇಳಿ ಕೇಳಿ ನಾನು ಸೊರಗಿ ಹೋಗಿದ್ದೇನೆ."

ಸೊರಗಿದ ಯಾವ ಲಕ್ಷಣಗಳನ್ನೂ ತೋರಿಸದ ಪದಚ್ಯುತ ಪ್ರಾಂತ ಪಾಲನ ಸೊಂಪಿನ ಶರೀರವನ್ನು ನೋಡಿ ಮೆನೆಪ್‌ಟಾ ನಸುನಕ್ಕ.

ಗೇಬು ಧ್ವನಿ ತಗ್ಗಿಸಿ ಮುಂದುವರಿಸಿದ :

"ನಿಮ್ಮ ಬಂಡಾಯದಿಂದ ನಾನೂ ನನ್ನ ಹೆಂಡತಿಯೂ ಎಷ್ಟು ಸಂತುಷ್ಟ ರಾಗಿದ್ದೇವೆ ಗೊತ್ತಾ ? ನಿಮ್ಮ ಪ್ರಾಂತ ನಮಗೆ ಯಾರಿಗೂ—ಕ್ಷಮಿಸಿ— ಇಷ್ಟವಾಗಿರ್‍ಲಿಲ್ಲ. ಬಂಡಾಯದಿಂದಾಗಿ ನಮಗೂ ಮುಕ್ತಿ ಸಿಗ್ತು !"

"ಅಮಾತ್ಯರು ಏನು ಹೇಳ್ತಾರೆ ?"

"ಅದೆಲ್ಲ ರಾಜಕಾರಣ. ನೀವೇ ಮಾತಾಡ್ಕೊಳ್ಳಿ. ಅಂತೂ ಆ ಕೆಪ್ಟು ಪವಾಡವನ್ನೇ ಸಾಧಿಸಿದ. ಅವನು ನಿಮ್ಮ ಆಡಳಿತವನ್ನು ಹೊಗಳಿದ್ದೇ ಹೊಗಳಿದ್ದು. ಅವನು ಬಂದಾಗ ಟೆಹುಟಿ ಊರಲ್ಲಿರ್ಲಿಲ್ಲ. ಇದ್ದಿದ್ದರೆ ಸ್ವಲ್ಪ ಕೂಗಾಟವಾಗ್ತಿತ್ತು.

"ಈಗ ಟೆಹುಟಿ ಇಲ್ಲಿಯೇ ಇದ್ದಾರೆ ಅಲ್ಲವಾ ?"

ನಸುನಕ್ಕು, ಒಂದು ಕ್ಷಣ ಸುಮ್ಮನಿದ್ದು, ಗೇಬು ನುಡಿದ :

"ಹೇಳ್ತೀನಿ. ನನಗೇನಂತೆ ? ಅಮಾತ್ಯರಿಗೆ ವಯಸ್ಸಾಯ್ತು; ಆಡಳಿತದ ಮೇಲಿನ ಬಿಗಿ ಸಡಿಲವಾಗಿದೆ—ಅಂತ ಟೆಹುಟಿಯ ದೂರು. ಅಮೆರಬ್‌ರನ್ನು ಮನೆಗೆ ಕಳುಹಿಸಿ ತಾನೇ ಅಮಾತ್ಯನಾಗಬೇಕು ಅನ್ನೋ ಆಸೆ ಅವನಿಗೆ. ಆಗಲೇ ಗುಟ್ಟಾಗಿ ಮಹಾ ಅರ್ಚಕರ ಪಕ್ಷ ವಹಿಸಿದ್ದಾನೆ. ಚಾಣಾಕ್ಷ ಅಮೆರಬ್‌ಗೆ ಇದೆಲ್ಲ ತಿಳಿಯದ್ದಲ್ಲ. ಉತ್ತರದ ಪ್ರಾಂತಗಳಲ್ಲಿ ಗಣತಿ ಕೆಲಸ ಕೊಟ್ಟು ಟೆಹುಟಿಯನ್ನು ಕಳಿಸಿ ಬಿಟ್ಟಿದ್ದಾರೆ. ಸೆಡ್ ಉತ್ಸವಕ್ಕೆ ಅಂತ ನೀವೇನೋ ಬಂದಿದ್ದೀರಿ. ಆದರೆ ಉತ್ಸವಕ್ಕೆ ಇನ್ನೂ ದಿನ ಗೊತ್ತಾಗಿಲ್ಲ. ಮಹಾ ಅರ್ಚಕರೇ ರಾಜಧಾನಿಯಲ್ಲಿಲ್ಲ. ಆನ್‌ನಲ್ಲಿ ವಸತಿ ಮಾಡಿದ್ದಾರೆ. ಹಲವಾರು ಮುಖ್ಯ ದೇವಸೇವಕರನ್ನು ಅಲ್ಲಿಗೆ ಕರೆಸಿದ್ದಾರಂತೆ. ಧಾರ್ಮಿಕ ಜಿಜ್ಞಾಸೆಯಂತೆ."

ಪಲ್ಲಕಿ ಬೇರೊಂದು ಬೀದಿಗೆ ತಿರುಗಿತು. ಅಲ್ಲಿಯೂ ಇಕ್ಕೆಲ್ಲಗಳಲ್ಲಿ ಜನರಿದ್ದರು. ಪಲ್ಲಕಿ ಕಂಡೊಡನೆ ಅವರು ಕರತಾಡನ ಮಾಡಿದರು.

ಗೇಬುವೆಂದ :

"ಅದೃಷ್ಟದ ಬೀದಿ ಒಂದು ಕಾಲದಲ್ಲಿ ಜನ್ಮದಿನದ ಆಧಾರದ ಮೇಲೆ ಭವಿಷ್ಯ ಹೇಳುವ ಹತ್ತಾರು ದೇವಸೇವಕರು ಈ ಬೀದೀಲಿ ವಾಸವಾಗಿದ್ರು. ಕೆಲವರು ತಮ್ಮ ಅದೃಷ್ಟದ ಬೆನ್ನಟ್ಟಿ ಬೇರೆ ಊರುಗಳಿಗೆ ಹೋದ್ರು. ಈಗಲೂ ನಾಲ್ಕಾರು ಕುಟುಂಬಗಳಿವೆ. ಆದರೆ ಕುಶಲಕರ್ಮಿಗಳೇ ಹೆಚ್ಚು ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಹೆಸರು ಮಾತ್ರ ಅದೃಷ್ಟದ ಬೀದಿ ಅಂತಲೇ ಉಳಕೊಂಡಿದೆ. ಇದನ್ನು ದಾಟಿದರೆ ಅಕ್ಕಸಾಲಿಗರ ಬೀದಿ. ಆಭರಣ ಮಾಡುವವರು, ಮಾಡಿಸುವವರು, ಮಾರುವವರು, ಕೊಳ್ಳುವವರು, ಒತ್ತೆಇಡುವವರು—ನಾನಾ ಬಗೆಯ ಜನ ಅಲ್ಲಿರ್ತಾರೆ ಆ ರಸ್ತೆ ಅರಮನೆಯ ಮುಂಭಾಗದ ವಿಶಾಲ

ಬೀದಿಗೆ ಸೇರ್ತ್ತದೆ."

ಮೆನೆಪ್‌ಟಾ ಕೇಳಿದ :

" ಪ್ರಾಂತಪಾಲರೆಲ್ಲ ಬಂದಿದ್ದಾರೇನು ?"

" ಈಗಲೇ ಎಲ್ಲಿ ? ನೀವು ಬರ್ತೀರಿ ಅಂತ ನನ್ನನ್ನು ಮೊದಲೇ ಕರೆಸಿದ್ರು. ಉಳಿದವರೆಲ್ಲ ಇನ್ನು ಮೇಲಿಂದ ಒಬ್ಬೊಬ್ಬರಾಗಿ ಬರ್ತಾರೆ."

ಅಕ್ಕಸಾಲಿಗರ ಬೀದಿಯಲ್ಲಿ ಹೆಂಗಳೆಯರು ಹೇರಳ ಸಂಖ್ಯೆಯಲ್ಲಿದ್ದರು. ದಾಸಿಯರೊಡನೆ ಒಬ್ಬ ಅಕ್ಕಸಾಲಿಗನಿಂದ ಇನ್ನೊಬ್ಬನಲ್ಲಿಗೆ ಅಲೆಯುತ್ತಿದ್ದ ಶ್ರೀಮಂತ ಸ್ತ್ರೀಯರು (ಕೆನ್ನೆ ತುಟಿಗಳಿಗೆ ಕೆಂಪು, ವಕ್ಷಸ್ಥಲ ತುಂಬ ಆಭರಣ.) ನಡುಬಟ್ಟೆಯ ಮೇಲೆ ಇನ್ನೊಂದು ಅರಿವೆ. ಬಳುಕುವ ಶರೀರವನ್ನು ಪಾದಗಳಿಂದ ಎಡಸ್ತನದ ವರೆಗೂ ಅದು ಆಚ್ಛಾದಿಸಿತ್ತು. ಒಂದು ಅಂಚು ಎಡಭುಜವನ್ನು ಹಾದು ಬಲಸ್ತನದ ಕೆಳಗಿನ ವರೆಗೆ ಬಂದು, ಅಲ್ಲಿ ಇನ್ನೊಂದರೊಡನೆ ಗಂಟು ಕೂಡುತ್ತಿತ್ತು. ಸಿರಿವಂತಿಕೆಯ ಲಕ್ಷಣಗಳಿಲ್ಲದ ಸ್ತ್ರೀಯರೂ ಇದ್ದರು. ಇವರಲ್ಲಿ ಪ್ರಾಧಾನ್ಯ ಬೆಳ್ಳಿಗೆ, ಬಂಗಾರಕ್ಕಲ್ಲ. ಮಂಡಿಗಳ ತನಕ ನಡುಬಟ್ಟೆ; ಒಂದು ಮೇಲುದ.

ಪಲ್ಲಕಿ ಬಂದಿತೆಂದು, ಅವರೆಲ್ಲರ ದೃಷ್ಟಿಯೂ ಅದರೆಡೆಗೆ. ಮಹಾನುಭಾವರು ಯಾರೆಂದು ತಿಳಿಯುವ ಬಯಕೆ. ಆದರೆ ಅದನ್ನು ತಣಿಸುವವರು ಯಾರು ?

ಒಬ್ಬಾಕೆ—ಶ್ರೀಮಂತ ಸುಂದರಿ—ಗೇಬುವನ್ನು ನೋಡಿ ಮೋಹಕ ನಗೆ ಬೀರಿದಳು. ಗೇಬು ಕೈ ಆಡಿಸಿದ; ಮೆನೆಪ್‌ಟಾನ ದೃಷ್ಟಿಯನ್ನು ಗಮನಿಸಿ, " ಪರಿಚಯದವಳು," ಎಂದ.

ಕೆಲವೇ ನಿಮಿಷಗಳಲ್ಲಿ ವಿಶಾಲ ಬೀದಿ ಕಾಣಿಸಿತು. ಬಲಕ್ಕೆ ಹೊರಳಿದೊಡನೆಯೇ ಕಣ್ಣಿಗೆ ಬಿತ್ತು, ಪಶ್ಚಿಮಾಭಿಮುಖವಾಗಿದ್ದ ಫೆರೋನ ಅರಮನೆಯ ಮಹಾದ್ವಾರ.

* * * *

ಆರಾಳು ಎತ್ತರದ ಪ್ರವೇಶ ಗೋಪುರ. ತುದಿಯಲ್ಲಿ ಎಡದಿಂದ ಬಲಕ್ಕೆ ಎಂಟು ಮೊಳ; ಆಳ ನಾಲ್ಕು ಮೊಳ. ಆ ಗೋಪುರದಲ್ಲಿ ಹೆಬ್ಬಾಗಿಲು. ಅದು

ಸುಮಾರು ಹದಿನಾರು ಮೊಳ ಅಗಲ. ಎರಡಾಳು ಎತ್ತರ. ಥಳಥಳನೆ ಹೊಳೆಯುತ್ತಿದ್ದ ಬಂಗಾರ ಲೇಪನದ ಬಾಗಿಲು. ಆ ಕಡೆ ಈ ಕಡೆ ಸಶಸ್ತ್ರ ದ್ವಾರಪಾಲಕರು ಒಳಗೆ ವಿಶಾಲ ಪುಷ್ಪೋದ್ಯಾನ. ಉದ್ಯಾನದ ನಡುವೆ ಕೆಂಪು ಇಟ್ಟಿಗೆಯ ಭವ್ಯ ಸೌಧ. ಆ ಸೌಧದ ಬಾಗಿಲವರೆಗೂ ದಾರಿ. ಮಹಾಮನೆ ಅರಸನ ವಸತಿ. ಜತೆಗೆ ಮತ್ತೂ ಹತ್ತಾರು ಕಟ್ಟಡಗಳಿದ್ದುದು ಕಂಡು ಬರುತ್ತಿತ್ತು. ಪ್ರವೇಶ ಗೋಪುರದಿಂದ ಮೊದಲ್ಗೊಂಡು ಆ ವಿಸ್ತಾರ ಪ್ರದೇಶವನ್ನೆಲ್ಲ ಆವರಿಸಿತ್ತು. ಮರಳುಗಲ್ಲಿನ ಎರಡು ಮೊಳ ಅಗಲದ ಹೆಬ್ಬಾಗಿಲಿನಷ್ಟೇ ಎತ್ತರದ ಪ್ರಾಕಾರ.

ಮಹಾದ್ವಾರವನ್ನು ಸಮೀಪಿಸಿದ ಪಲ್ಲಕಿ ಬಲಕ್ಕೆ ಹೊರಳಿತು.

ಗೇಬು ನುಡಿದ :

"ನಾವು ನೇರವಾಗಿ ಅತಿಥಿ ಗೃಹಕ್ಕೆ ಹೋಗ್ತಿದ್ದೇವೆ. ಅದಕ್ಕೆ ಬೇರೆಯೇ ದಾರಿ ಇದೆ."

ನೂರು ಮಾರು ಹೋದೊಡನೆ ಪ್ರಾಕಾರದಲ್ಲಿ ಇನ್ನೊಂದು ಬಾಗಿಲು ಕಾಣಿಸಿತು. ತಲಪುವಷ್ಟರಲ್ಲೇ ಕಿರ್ರೆಂದು ಅದು ತೆರೆದುಕೊಂಡಿತು. ದ್ವಾರಪಾಲಕರು ನಮಿಸಿದರು. ಪಲ್ಲಕಿ ಒಳಗೆ ಹೋಯಿತು.

ಅತಿಥಿಗೃಹದ ಮುಂದೆಯೂ ಪ್ರತ್ಯೇಕ ಹೂದೋಟ, ಮೀನುಕೊಳ ಇದ್ದುವು. ಅತಿಥಿಗೃಹದ ಉಸ್ತುವಾರಿಯ ಅಧಿಕಾರಿ ಬಂದವರನ್ನು ಸ್ವಾಗತಿಸಿ ಒಳಕ್ಕೆ ಕರೆದೊಯ್ದ. ನಾಲ್ಕಾರು ಕೊಠಡಿಗಳು, ಮಂಚಗಳು, ಹಲವಾರು ಪೀಠೋಪಕರಣಗಳು, ಸೇವಕರು. ಬಣ್ಣ ಬಣ್ಣದ ಚಿತ್ತಾರಗಳಿದ್ದ ಹುಲ್ಲು ಚಾಪೆಗಳಿಂದ ಗೋಡೆಗಳು ಅಲಂಕೃತವಾಗಿದ್ದುವು.

ಪ್ರಾಂತಪಾಲರೆಲ್ಲ ಇಲ್ಲಿಯೇ ವಸತಿ ಮಾಡ್ತಾರೇನು ?"

—ಮೆನೆಪ್‌ಟಾ ಕೇಳಿದ.

"ಛೆ! ಛೆ! ನಾಲ್ವತ್ತು ಜನರಿಗೆ ಇಲ್ಲೆಲ್ಲಿದೆ ಜಾಗ ? ನಗರದ ನೈಋತ್ಯ ಭಾಗದಲ್ಲಿ ದೊಡ್ಡ ರಾಜಭವನವಿದೆ. ನಾನೂ ಅಲ್ಲಿಯೇ ಇರ್‍ತೇನೆ. ನೀವು, ನಿಮ್ಮ ಅಂಗರಕ್ಷಕರು, ಸೇವಕರಿಗೆಲ್ಲ ಇಲ್ಲಿ ಆತಿಥ್ಯ"

ಮೆನೆಪ್‌ಟಾನೊಂದಿಗೆ ಮೊಗಸಾಲೆಯಲ್ಲಿ ನಿಂತು, ದೂರ ದೂರಕ್ಕೆ

ಬೊಟ್ಟು ಮಾಡಿ ತೋರಿಸುತ್ತ ಗೇಬು ಅಂದ :

" ಈ ಕಡೆ ಪ್ರಾಕಾರದಲ್ಲಿ ಇನ್ನೊಂದು ದ್ವಾರ ಇದೆ. ಅದನ್ನು ದಾಟಿ ಹೊರ ಹೋದರೆ ನೀಲನದಿಯ ದಂಡೆ ಸಿಗ್ತದೆ. ಒಂದೊಂದು ರಾತ್ರಿ ಪೆರೋ ಮತ್ತು ರಾಣೀ ವಾಸದವರು ಅಲ್ಲಿ ತಿರುಗಾಡೋದುಂಟು. ಆ ದ್ವಾರ ದಾಟಿ ದೊಡನೆ ಸಿಗೋದು ಅರಮನೆಯ ದೇವಮಂದಿರ. ಇದು ಪೂರ್ವಾಭಿಮುಖ. ಅರಮನೆಯ ಶಾಲೆಯೂ ಅದರಲ್ಲೇ. ಹತ್ತಿರದಲ್ಲಿ ಪವಿತ್ರ ಕೊಳವಿದೆ. ಒತ್ತಿ ಕೊಂಡು ದೇವಸೇವಕರ ಮನೆಗಳಿವೆ. ಮಹಾಮನೆಗೂ ಮಂದಿರಕ್ಕೂ ನಡುವೆ ವಿಶಾಲ ಬಯಲು. ಮಹಾಮನೆಯ ಎಡ ಮಗ್ಗುಲಲ್ಲಿರೋದು ಅಮಾತ್ಯ ಭವನ. ರಾಜಕಾರ್ಯ, ವಿಚಾರಣೆ, ತೀರ್ಪು ಎಲ್ಲಾ ಆ ಭವನದಲ್ಲಿ. ರಾಜ ಬಂದಿಗಳಿಗಾಗಿ ಕಾರಾಗೃಹ, ವಧಸ್ಥಾನ. ಅದರ ಪಕ್ಕದಲ್ಲಿರೋದು ದಾಖಲೆ ದಸ್ತಾವೇಜುಗಳ ಉಗ್ರಾಣ. ದೇವಮಂದಿರದ ಆಚೆಗೆ ಅರಮನೆಯ ಕರ್ಮಾ ಗಾರಗಳು. ಅರಮನೆಗೆ ಸಂಬಂಧಿಸಿದ ಮರದ ಕೆಲಸವಿರಲಿ, ನೆಯ್ಗೆ ಇರಲಿ, ಹೊಲಿಗೆ ಇರಲಿ ಎಲ್ಲ—ಈ ಕರ್ಮಾಗಾರಗಳಲ್ಲಿ ನಡೀತವೆ. ಮುಂದೆ ಶಸ್ತ್ರಾ ಗಾರ, ಕಣಜಗಳು, ಪಶುಶಾಲೆ, ಕಾವಲು ಭಟರು ನರ್ತಕರು ಹಾಡುಗಾರರ— ದಾಸದಾಸಿಯರ ಮನೆಗಳು. ಅಮಾತ್ಯ ಭವನದ ಪಕ್ಕದಲ್ಲಿ ಒಂದು ಕಟ್ಟ ದಾರಲ್ಲ ? ಅದು ದಂಡನಾಯಕರ ಕಾರ್ಯಾಲಯ. ಸಂದರ್ಶನ ಕೊಠಡಿ, ಸಭಾಮಂದಿರ, ಔತಣ ಭವನ, ಕಿರೀಟ ಕೊಠಡಿ, ವೇಷಭೂಷಣ ಕೊಠಡಿ ಗಳೆಲ್ಲ ಮಹಾಮನೆಯ ಮುಂದಿನ ಅರ್ಧದಲ್ಲಿವೆ ; ಹಿಂದಿನ ಅರ್ಧ ಪೆರೋ ಮತ್ತು ಅಂತಃಪುರದವರ ವಾಸಕ್ಕೆ. ಅಲ್ಲಿಯೇ ಒಂದು ಕಡೆ ಬೊಕ್ಕಸದ ಕೊಠಡಿಯೂ ಇದೆ. ಮಹಾಮನೆಗೆ ಹತ್ತಿರದಲ್ಲೇ ಇವೆ—ಅಡುಗೆ ಮನೆ, ಉಗ್ರಾಣಗಳು."

ಮೆನೆಪ್ ಟಾ ಮುಗುಳುನಕ್ಕು ಅಂದ :

" ಇಷ್ಟನ್ನೆಲ್ಲ ಒಂದು ಪುಟ್ಟ ನಗರ ಅಂತಲೇ ಕರೀಬಹುದು."

" ಓಹೋ ನಗರದೊಳಗೊಂದು ನಗರ. ಜಗತ್ತಿನಲ್ಲೇ ಅತ್ಯಂತ ಬಲಾಢ್ಯವಾದ ರಾಷ್ಟ್ರದ ಕೇಂದ್ರ ಬಿಂದು ಇದು. ದಂಡೆಯ ಹತ್ತಿರವಿರುವ ಆ ದೊಡ್ಡ ಗೋಪುರ ಕಂಡಿರಾ ? "

"ಹ್ಞ."

"ತಲೆಯ ಮೇಲೆ ಕೆರೆ! ನದಿಯಿಂದ ಷಾಡೂಫ್‌ನಲ್ಲಿ ನೀರೆತ್ತಿ ಒಂದು ಕೆರೆಗೆ ಸುರಿಯೋದು. ಅದರಿಂದ ಎತ್ತಿ ಎತ್ತರದ ಇನ್ನೊಂದು ಕೆರೆಗೆ. ಅದ ರಿಂದ, ಮೇಲಿನದಕ್ಕೆ. ಅಲ್ಲಿಂದ ನೀರು ತಾಮ್ರದ ಕೊಳಾಯಿಗಳಲ್ಲಿ ಹರಿದು ಈ ಪುಟ್ಟ ನಗರದ ಮೂಲೆ ಮೂಲೆಗೂ ಹೋಗ್ತದೆ. ಇಲ್ಲಿ ಜಮೆಯಾಗುವ ಕೊಳೆ ನೀರೆಲ್ಲ ಒಳಚರಂಡಿಯ ಮೂಲಕ ದೂರ ಹೋಗ್ತದೆ—ಬಡ ರೈತರ ಹೊಲಗಳಿಗೆ. ಹೇಗಿದೆ ವ್ಯವಸ್ಥೆ ?"

"ವಿಸ್ಮಯಕರ !"

ತಲೆಬಾಗಿಲ ಬಳಿ ಯಾರೋ ಒಬ್ಬ ಎರಡು ಮೂರು ಸಾರೆ ಮುಖ ತೋರಿಸಿದಂತೆ ಗೇಬುಗೆ ಭಾಸವಾಗಿತ್ತು.

"ಯಾರದು ?" ಎಂದು ಆತ ಕೇಳಿದ.

ಮನುಷ್ಯ—ಲಿಪಿಕಾರ—ಹೊಸ್ತಿಲು ದಾಟಿ ಬಂದು, ಗೇಬು ಮೆನೆಪ್ ಟಾರಿಬ್ಬರಿಗೂ ದೂರದಿಂದಲೇ ನಮಿಸಿ, ಕಣ್ಣುಸನ್ನೆಯಿಂದ ಗೇಬುವನ್ನು ತನ್ನೆಡೆಗೆ ಕರೆದ; ಕಿವಿಯಲ್ಲಿ ಏನನ್ನೋ ಉಸುರಿದ. ಮತ್ತೆ ನಮಿಸಿ ಹೊರಟು ಹೋದ.

ಗೇಬು ಮೆನೆಪ್‌ಟಾನೊಡನೆ ಅಂದ :

"ಅಮಾತ್ಯರು ಈಗ ತಾನೇ ದಿನದ ರಾಜಕಾರ್ಯ ಮುಗಿಸಿ, ನಿಮಗೆ ಆದರಾತಿಥ್ಯ ನೀಡಲು ಆದೇಶವಿತ್ತು, ಮನೆಗೆ ಹೋದರಂತೆ. ಇನ್ನು ನಾಳೆ ಬೆಳಿಗ್ಗೆ ಅವರ ಭೇಟಿ. ನಾಳೆ ಅಮಾತ್ಯ ಭವನ ತಲಪಿದ ಸ್ವಲ್ಪ ಹೊತ್ತಿನಲ್ಲೇ ನಿಮಗೆ ಹೇಳಿ ಕಳಿಸ್ತಾರಂತೆ."

ನೀರಾನೆ ಪ್ರಾಂತದ ನಾಯಕನನ್ನು ಕಾಣಲು ಅಮಾತ್ಯರು ಆತುರ ತೋರಬಹುದು, ಆ ದಿನವೇ ಭೇಟಿ ಸಾಧ್ಯವಾದೀತು—ಎಂದುಕೊಂಡಿದ್ದ ಮೆನೆಪ್‌ಟಾ. ಆದರೆ ಪರಿಸ್ಥಿತಿ ಹಾಗಿರಲಿಲ್ಲ.

ದೋಣಿಕಟ್ಟೆಯಲ್ಲಿ ಪರಸ್ಪರ ಕಂಡಾಗ ಹೇಗೆ ಮಾಡಿದ್ದನೋ ಅದೇ ರೀತಿ, ಗೇಬು ಮೆನೆಪ್‌ಟಾನ ಕೈಗಳನ್ನು ತನ್ನೆರಡೂ ಕೈಗಳಿಂದ ಹಿಡಿದುಕೊಂಡು ತೊಟ್ಟಿಲಾಡಿಸಿ, "ನನಗಿನ್ನು ಅಪ್ಪಣೆ ಕೊಡಿ," ಎಂದ.

ಮೆನೆಪ್‌ಟಾ ಕೇಳಿದ :

"ನಾಳೆ ನೀವೂ ಬರ್‍ತೀರಿ, ಅಲ್ಲವಾ ?"

"ಗೊತ್ತಿಲ್ಲ. ಸಂಜೆಯೊಳಗಾಗಿ ಸೂಚನೆ ಬರದಿದ್ದರೆ ಲಿಷ್ಟ್‌ಗೆ ಹೊರಟು ಹೋಗ್ತೇನೆ. 'ಅರಮನೆಯ ರಸಗವಳಕ್ಕಿಂತ ಮೇಲು ಮಡದಿ ತಟ್ಟಿದ ಬಿಸಿರೊಟ್ಟಿ!' ತಮಾಷೆಗೆ ಹೇಳ್ದೆ. ನಮ್ಮ ಮನೆಯಲ್ಲೂ ರೊಟ್ಟಿ ತಟ್ಟೋದು ದಾಸಿಯರೇ ಅನ್ನಿ."

ಔಪಚಾರಿಕವಾಗಿ ಮೆನೆಪ್‌ಟಾ ನಕ್ಕ.

"ಹೋಗಿ ಬನ್ನಿ."

"ದೋಣಿಯಿಂದ ತರಿಸಬೇಕಾದ್ದು ಏನಾದರೂ ಉಂಟೆ ?"

"ಉಂಟು."

"ಎಷ್ಟು ಕತ್ತೆ ಬೇಕು ?"

"ಪೆಟಾರಿ, ಬಟ್ಟೆ ಬರೆ....ಒಂದು ಸಾಕು."

"ಕಾವಲು ಭಟರಿಗೂ ಆಳುಗಳಿಗೂ ಹೇಳ್ತೇನೆ...."

"ಜೊತೆಗೆ ಬಟಾ ಹೋಗ್ತಾನೆ."

ಗೇಬು ನಸುನಗೆ ಸೂಸಿದ.

"ಹ್ಞ. ಬಟಾ! ನೀರಾನೆ ಪ್ರಾಂತದ ಸಾರಿಗೆ ವ್ಯವಸ್ಥೆಯ ಮುಖ್ಯಸ್ಥ!"

ತಮ್ಮ ಮಾತುಗಳಿಗೆ ಕಿವಿಗೊಡುತ್ತ ಅಲ್ಲಿಯೇ ಹೊರಗೆ ಹೂದೋಟದಲ್ಲಿ ಔಟ, ಬೆಕ್‌ರೊಡನೆ ನಿಂತಿದ್ದ ಬಟಾನ ಮೇಲೆ ಅವನ ದೃಷ್ಟಿ ಬಿತ್ತು.

ಗೇಬು ಹೋದ ಬಳಿಕ ಆ ಮೂವರೂ ಒಳಗೆ ಬಂದರು.

"ಹೊರಗೆ ಹೋಗೀಪ್ಪಾ. ಬೇಕಾದಾಗ ಕರೀತೇವೆ," ಎಂದ ಬಟಾ, ರಾಜಸೇವಕರಿಗೆ. ಹತ್ತಿರದ ಕೊಠಡಿಯನ್ನು ಹೊಕ್ಕೊಡನೆ ದುಗುಡ ತುಂಬಿದ ಧ್ವನಿಯಲ್ಲಿ ಬಟಾ ಅಂದ :

"ಅಣ್ಣ, ಎರಡು ವಿಷಯ ನನಗೆ ಸ್ಪಷ್ಟವಾಗಲಿಲ್ಲ. ಮೊದಲ್ನೇದು ನಾವಿಲ್ಲಿಗೆ ಬಂದದ್ದು ಸ್ವಇಚ್ಛೆಯಿಂದಲೋ, ಇನ್ನೊಬ್ಬರ ಒತ್ತಾಯಕ್ಕೊ ?"

"ನಿನಗೆ ಗೊತ್ತಿದೆಯಲ್ಲ ಬಟಾ. ಸ್ವಂತ ಇಚ್ಛೆಯಿಂದಲೇ."

"ಎರಡನೇದು, ನಮ್ಮಿಷ್ಟದ ಹಾಗೆ ಇಲ್ಲಿಂದ ಹೊರಗೆ ಹೋಗೋದಕ್ಕೂ ಒಳಗೆ ಬರೋದಕ್ಕೂ ನಮಗೆ ಸ್ವಾತಂತ್ರ್ಯ ಇದೆಯೊ ?"

"ಇಲ್ಲ ಅನಿಸುತ್ತಾ ?"

"ಗೇಬು ಹೋಗುತ್ಲೇ ದ್ವಾರ ಮುಚ್ಚಿದ್ರು. ನಾವು ಒಳಗೆ ಬಂದೆವಲ್ಲ? ಅದನ್ನು."

ಮೆನೆಪ್‌ಟಾನ ಹಣೆ ನೆರಿಗೆ ಕಟ್ಟಿತು. ಒಂದು ಕ್ಷಣ ಸುಮ್ಮನಿದ್ದ. ನೆರಿಗೆ ಸಡಿಲಗೊಂಡಿತು. ನಸುನಕ್ಕು ಆವನೆಂದ :

"ನೀರಾನೆ ಪ್ರಾಂತದ ಸಾರಿಗೆ ಮುಖ್ಯಸ್ಥ ಬಟಾ ತಟ್ಟಿದಾಗ ಎಲ್ಲ ಬಾಗಿಲುಗಳೂ ತೆರೆದುಕೊಳ್ಳಲೇ ಬೇಕು."

"ನಿನಗೆ ಪರಿಹಾಸ್ಯ. ಅತಿಥಿಗೃಹಕ್ಕೆ ಕಾರಾಗೃಹ ಬಹಳ ಹತ್ತಿರ. ಔಟ, ಬೆಕ್—ನಾವು ಹುಷಾರಾಗಿರ್ಬೇಕು."

ಹೌದು ಎನ್ನುವಂತೆ ತಲೆ ಆಡಿಸಿದರು ಅಂಗರಕ್ಷಕರು.

"ದೋಣಿಕಟ್ಟೆಗೆ ಹೋಗಿ ಕಾಣಿಕೆ ಪೆಟಾರಿ ಮತ್ತು ನಮ್ಮ ಪೆಟಾರಿ ತರ ಬೇಕಲ್ಲ," ಎಂದು ಮೆನೆಪ್‌ಟಾ ವಿಷಯಾಂತರಿಸಿದ.

"ನಾನೇ ಹೊತ್ತು ತಂದೇನು. ಅದಕ್ಕೆ ಇವರ ಕತ್ತೆ ಬೇಕೆ ?"

"ಹಾಗಲ್ಲ ಬಟಾ. ಅವರ ಆತಿಥ್ಯವನ್ನು ಸ್ವೀಕರಿಸುವಾಗ ಕತ್ತೆ ಯಾಕೆ ಬೇಡ ? ಅದು ಸಾಧು ಪ್ರಾಣಿ. ಯಾರನ್ನು ಬೇಕಾದರೂ—ಯಾರ ಸಾಮಾನು ಬೇಕಾದರೂ—ಹೊರ್ತದೆ."

"ಸರಿ. ಆಗಲಿ."

"ದೋಣಿಯ ಜವಾಬ್ದಾರಿ ಕಟ್ಟೆಯ ಅಧಿಕಾರಿಗೆ ಒಪ್ಪಿಸಿ ಅಂಬಿಗರನ್ನು ಕರಕೊಂಡ್ಬಾ. ಆಮೇಲೆಯೇ ಅರಮನೆ ಊಟ."

* * * *

ಪ್ರಾಕಾರದ ಬಾಗಿಲು ತೆರೆಯಿತು, ಮುಚ್ಚಿತು.

ಮೆನೆಪ್‌ಟಾ ಅತಿಥಿಗೃಹದ ಗೋಡೆಗಳ ಮೇಲಿನ ಚಾಪೆ ಚಿತ್ರಗಳನ್ನು ನೋಡಿದ. ಪೇಪಿಯ ದೋಣಿ ವಿಹಾರ, ಪೇಪಿಯ ದೇವಪೂಜೆ, ಪೇಪಿಯ

ರಾಜಸಭೆ, ಸಮರ ಪೋಷಾಕಿನಲ್ಲಿ ಪೇಪಿ, ಭಕ್ತನ ಉಡುಗೆಯಲ್ಲಿ ಪೇಪಿ, ಕೆಲವು ಹಳೆಯ ಚಿತ್ರಗಳು, ಕೆಲವು ಹೊಸವು. ಆದರೆ ಎಲ್ಲ ಚಿತ್ರಗಳಲ್ಲೂ ಪೇಪಿ ಜವ್ವನಿಗ. ಮತ್ತೆ ಮತ್ತೆ ಸೆಡ್ ಉತ್ಸವ ಅಗತ್ಯವಿದ್ದರೂ ಚಿತ್ರಕಾರರ ಮಟ್ಟಿಗೆ ಆತ ಸದಾ ಯುವಕ.

ಶತಪಥ ತುಳಿಯುತ್ತ ತನ್ನ ಮನಸ್ಸನ್ನು ಮೆನೆಪ್‌ಟಾ ಇಷ್ಟ ಬಂದತ್ತ ಅಲೆಯಲು ಬಿಟ್ಟ. ('ಸತ್ತವನ ಆತ್ಮ ಬೆನ್ನುಪಕ್ಷಿಯಾಗಿ ಅಲೀತದೆ. ಬದುಕಿರುವವನ ಮನಸ್ಸೂ ಸ್ವಚ್ಛಂದವಾಗಿ ಹಾರಾಡ್ತದೆ.')

ಪ್ರದೇಶದ ನೂರಾರು ನಿವಾಸಿಗಳು—ಅರಮನೆಗೆ ಸೇರಿದವರು—ಒಬ್ಬೊಬ್ಬರಾಗಿ ಇಬ್ಬಿಬ್ಬರಾಗಿ, ಪೆರೋಗಿದಿರು ಬಂಡಾಯವೆದ್ದಿದ್ದ ಪ್ರಾಂತದ ನಾಯಕನನ್ನು 'ನೋಡಿಹೋಗಲು' ಬಂದರು. ವಂದನೆಯಾಗಲೀ ಮಾತಾಗಲೀ ಇಲ್ಲದ ಇಣಿಕು ನೋಟ.

ಔಟ ಕೇಳಿದ :

"ಅತಿಥಿಗೃಹದ ಹತ್ತಿರ ಬರಬೇಡಿ ಅಂತ ಅವರಿಗೆ ಹೇಳ್ಲಾ ?"

"ಬೇಡ. ಏನೋ ಕುತೂಹಲ. ನೋಡಿ ಹೋಗ್ತಾರೆ."

ಹೊರಗಿಣಿಕಿ ಬಂದು ಬೆಕ್ ಹೇಳಿದ :

"ಬಾಗಿಲಿನ ಆ ಕಡೆ ಈ ಕಡೆ ಸಶಸ್ತ್ರ ಭಟರು ಮೌನವಾಗಿ ನಿಂತಿದ್ದಾರೆ. ಅತಿಥಿಗೃಹದ ಅಧಿಕಾರಿ ಅವರೊಡನೆ ಮಾತಾಡ್ತಿದ್ದಾನೆ."

ಅಷ್ಟರಲ್ಲಿ ಅಧಿಕಾರಿಯೇ ಒಳಗೆ ಬಂದು, "ಊಟ ಸಿದ್ಧವಾಗಿದೆ," ಎಂದ.

ಮೆನೆಪ್‌ಟಾ ಉತ್ತರಿಸಿದ :

"ನಮ್ಮ ಅಂಬಿಗರು ಬಂದ್ಮೇಲೆ ಊಟ."

ಅಧಿಕಾರಿಗೆ ಅಚ್ಚರಿ, ವಿಸ್ಮಯ. ಸೇವಕರು ಬರುವ ತನಕ ಊಟ ಮಾಡದ ನಾಯಕ!

ಅತಿಥಿಗೃಹದ ಆಳುಗಳಿಗೆ, 'ಭೋಜನಕ್ಕೆ ಅಣಿಗೊಳಿಸಿರಿ' ಎಂದು ನಿರ್ದೇಶ ನೀಡಿ, ಆ ಅಧಿಕಾರಿ ಕಣ್ಮರೆಯಾದ. ರಾಣಿ ನೆಫರುಟೀಮಳ ಆಪ್ತ ದಾಸಿ ಆಗಲೇ ಆತನಿಗೆ ಹೇಳಿ ಕಳುಹಿಸಿದ್ದಳು. ಸಂಜೆ ಅಮಾತ್ಯನಿಗೂ ಸ್ವತಃ

ಪೆರೋಗೂ ಬಂಡಾಯ ನಾಯಕನ ಬಗೆಗೆ ತಿಳಿಸುವ ಹೊಣೆಯೂ ಆತನಿಗಿತ್ತು. ಎಲ್ಲರಿಗೂ ಅಪೂರ್ವ ಅತಿಥಿಯನ್ನು ಕುರಿತು ತಿಳಿದುಕೊಳ್ಳುವ ಆತುರ.

* * * *

"ಮುಂದುಗಡೆ ಭಟರು, ಹಿಂದುಗಡೆ ಭಟರು. ಮಧ್ಯದಲ್ಲಿ ಪೆಟಾರಿಗಳನ್ನು ಹೊತ್ತ ಕತ್ತೆ. ಜತೆಗೆ ನಾವು. ರಾಜಧಾನಿಯ ಪ್ರಜೆಗಳು ನೋಡಿದ್ದೇ ನೋಡಿದ್ದು. ಕಳವಿನ ಸಾಮಾನು ಸಹಿತ ಕಳ್ಳರನ್ನು ಹಿಡಿದ ಹಾಗಿತ್ತು! ನಮಗೆ ನಕ್ಕು ನಕ್ಕು ಸಾಕಾಯ್ತು. ಕತ್ತೆಯೂ ವಿಚಿತ್ರವಾಗಿ ಅರಚ್ತಿತ್ತು," ಎಂದು ಬಟಾ ತಮ್ಮ ದೋಣಿಯಿಂದ ಕಾಣಿಕೆ ಪೆಟಾರಿಯನ್ನೂ ಬಟ್ಟೆಬರೆಯನ್ನೂ ಕೊಳಲನ್ನೂ ತಾವು ತಂದುದನ್ನು ಬಣ್ಣಿಸಿದ.

ಸ್ನಾನ ಮೊದಲೊ ? ಊಟ ಮೊದಲೊ ?

"ಊಟವೂ ಒಂದು ರೀತಿಯ ಸ್ನಾನವೇ. ಗಂಟಲು ಹೊಟ್ಟೆ ತೋಯಿಸಿದ್ಮೇಲೆ ಮೈಗೆ," ಎಂದ ಬಟಾ.

ಭೋಜನದ ಕೊಠಡಿಯಲ್ಲಿ ಎಲ್ಲರೂ ಒಟ್ಟಿಗೆ ಉಂಡರು. ಮದಿರೆ, ಭಕ್ಷ್ಯಭೋಜ್ಯಗಳು ಎಲ್ಲವೂ ರುಚಿಕರ. ಪ್ರತಿಯೊಬ್ಬರಿಗೂ ಹೊಟ್ಟೆ ಭಾರ.

"ಒಂದಷ್ಟು ದಿವಸ ಹೀಗೆಯೇ ಉಂಡರೆ ಹುಟ್ಟು ಹಾಕುವವರಿಗೂ ಕಷ್ಟ. ಪಲ್ಲಕಿ ಹೊರುವವರಿಗೂ ಕಷ್ಟ."

ಮೆನೆಪ್‌ಟಾ ನಕ್ಕ.

ಬಡಿಸುತ್ತಿದ್ದವರ ಮುಖ್ಯಸ್ಥನೊಡನೆ ಬಟಾ ತಮ್ಮೆಲ್ಲರ ಪರವಾಗಿ ಕಿವಿಯಲ್ಲಿ ಉಸುರಿದ :

"ಈಗ ತಿಂದದ್ದು ಜೀರ್ಣವಾಗೋದಕ್ಕೆ ಕಾಲಾವಕಾಶ ಬೇಕು. ರಾತ್ರೆ ಒಂದಿಷ್ಟು ಮದಿರೆ ಸಾಕು. ಬೇರೇನೂ ಬೇಡ."

ಅತಿಥಿಗೃಹದ ಸೇವಕರಿಗೆ ಈ ಜನ ಮೇಲಣ ಅಂತಸ್ತಿನವರಲ್ಲವೆಂದು ತುಸು ಅಸಮಾಧಾನ, ತುಸು ಸಮಾಧಾನ....

* * * *

ರಾ ಮುಳುಗಿದ. ಅರಮನೆಯ ಮಹಾದ್ವಾರವನ್ನು ಮುಚ್ಚಿದರು. ಅರಮನೆಯ ಪ್ರದೇಶದಲ್ಲಿ ಸಹಸ್ರಾರು ದೀಪಸ್ತಂಭಗಳು ಉರಿದುವು; ಕತ್ತಲನ್ನು ಓಡಿಸಿದುವು.

ಅತಿಥಿಗೃಹವೂ ಬೆಳಗಿತು.

ಮದಿರೆಯ ಪಾತ್ರೆಗಳು ಬಂದಾಗ ಮೆನೆಪ್‌ಟಾನೆಂದ :

"ನಾವು ಹುಷಾರಾಗಿರ್ಬೇಕು ಅಂತ ಆಗಲೇ ಯಾರೋ ಅಂದರು !"

ಬಟಾ ನಕ್ಕ. ಸೂಕ್ಷ್ಮ ಹೊಳೆದು, ಔಟ ಮತ್ತು ಬೆಕ್ ಬಾಯಿಗೆ ಅಂಗೈ ಅಡ್ಡ ಹಿಡಿದು, ಹಲ್ಲು ಕಿಸಿದರು.

ತುಸು ಗಂಭೀರನಾಗಿ ಬಟಾ ಅಂದ :

"ನೀರಡಿಕೆಯಾದಾಗ ಒಂದು ಗುಟುಕು ನೀರು ಕುಡಿದರೆ ಹೇಗೋ ಹಾಗೆ ಒಂದು ಬಟ್ಟಲು ಮದಿರೆ, ನನಗೆ. ಅದಕ್ಕಿಂತ ಹೆಚ್ಚು ಮುಟ್ಟೋದಿಲ್ಲ. ನಾಳೆ ಯಿಂದಂತೂ ಪೆರೋನ ಅತಿಥಿಯಾಗಿರುವಷ್ಟು ಕಾಲ ದಿವಸಕ್ಕೆ ಒಂದೇ ಬಟ್ಟಲು."

ತನ್ನ ನೌಕರರೆಡೆಗೆ ನೋಡಿ ಅವನೆಂದ :

"ಒಂದೊಂದು ಗುಟುಕು ಕುಡಿದು ದೋಣಿಕಟ್ಟೆಗೆ ಹೋಗಿ ದೋಣೀಲೆ ಮಲಕ್ಕೊಳ್ಳಿ. ಗಂಟೂ ಇಲ್ಲ ನಂಟೂ ಇಲ್ಲ ಅಂತ ಆದೀತು. ಬೆಳಗ್ಗೆ ಎದ್ದು ಇಲ್ಲಿಗೆ ಬಂದ್ಬಿಡಿ. ನಾಳೆ ಬರ್‍ತೀವೆ ಅಂತ ಇಲ್ಲಿನ ಕಾವಲಿನವರಿಗೆ ತಿಳಿಸ್ಬಿಟ್ಟು ಹೋಗಿ."

'ಅಪ್ಪಣೆ' ಎನ್ನುವಂತೆ ತಲೆ ಆಡಿಸಿ, ಅಂಬಿಗರು ಕಾರ್ಯೋನ್ಮುಖ ರಾದರು.

ಅವರನ್ನು ಕಳುಹಿಸಿಕೊಟ್ಟು ಬಟಾ ತನ್ನ ಬಟ್ಟಲನ್ನು ನಿಧಾನವಾಗಿ ಬರಿದು ಮಾಡತೊಡಗಿದ.

ಕಿಟಕಿಯಿಂದ ಹೊರನೋಡುತ್ತ ನಿಂತಿದ್ದ ಮೆನೆಪ್‌ಟಾನನ್ನು ಬೇಸರ ಆವರಿಸಿತು. ಸೆಡ್‌ಉತ್ಸವದ ದಿನವನ್ನೇ ಇನ್ನೂ ಗೊತ್ತು ಮಾಡಿಲ್ಲ. ಮಹಾ ಅರ್ಚಕ ರಾಜಧಾನಿಗೆ ಬರುವುದು ತಡವಾದರೆ ? ತಾನು ತೀರಾ ಬೇಗನೆ ಬಂದಂತಾಯಿತು. ಅಮಾತ್ಯರು ಏನು ಕೇಳುವರೊ ? ಪೆರೋಗೆ ಕಾಣಿಕೆ

ಸಲ್ಲಿಸುವುದು ಯಾವಾಗ ? ಆ ಕೆಪ್ಟ ಎಲ್ಲಿರುವನೋ ಈಗ ? ಊರು ಬಿಟ್ಟು ಒಂದು ವಾರವಾಯಿತು. ತಾನಿಲ್ಲದೆ ಆಡಳಿತ ನಡೆಸುವುದು ಸ್ನೊಫ್ರುಗೆ, ಸೆಬೆಕ್ಕುಗೆ, ಹಿರಿಯರ ಸಮಿತಿಗೆ ರೂಢಿಯಾಗಿರಬೇಕು. ಯೋಚನೆ ಕದಡಿತು. ನೆಫಿಸಳ ನೆನಪು. ರಾಮೆರಿಪ್‌ಟಾ....

"ಮೆನೆಪ್‌ಟಾ ಅಣ್ಣ. ಮದಿರೆ ಬೇಡ ಅಲ್ಲವಾ ?"

—ಬಟಾನ ಪ್ರಶ್ನೆ.

ಉತ್ತರ :

" ಊಹೂಂ."

"ಅಬ್ಟು ಯಾತ್ರೇಲಿ ಮೆನೆಪ್‌ಟಾ ಅಣ್ಣನ ಮಾತ್ನಂತೆ ನಡಕೊಳ್ಳಿ ಅಂತ ನಮ್ಮ ಜನರಿಗೆ ನಾನು ಹೇಳಿದ್ದು ನೆನಪಿದೆಯಾ ?"

"ಹೂಂ."

"ಆ ಕ್ಷಣದಲ್ಲೇ ನೀನು ನಾಯಕನಾದೆ. ನಮ್ಮ ಜನರು ಮಾತ್ರವಲ್ಲ, ನಾನೂ ನಿನ್ನ ಮಾತಿನಂತೆ ನಡೆಯೋ ಹಾಗಾಯ್ತು !"

"ನಮ್ಮ ಊರಲ್ಲಿ ಇಷ್ಟು ಹೊತ್ನಲ್ಲಿ ಏನು ಮಾಡ್ತಿರಬಹುದು ?"

"ಯಾರು ?"

"ನಮ್ಮ ಜನ ?"

"ರಾಜಧಾನೀಲಿ ನಾಯಕ ಏನ್ಮಾಡ್ತಿದಾನೊ—ಅಲ್ಲ, ಏನ್ಮಾಡ್ತಿದಾರೊ—ಅಂತ ಜನ ಯೋಚಿಸ್ತಿರಬೌದು."

"ಸರಿ !"

"ನಡಿ. ನದಿ ದಂಡೆ ಕಡೆ ಹೋಗ್ಬರೋಣ. ಬಾಗಿಲು ತೆರೆಯುತ್ತೋ ಇಲ್ಲವೋ ಅಂತ ನೋಡಿದ ಹಾಗೂ ಆಯ್ತು."

ಒಬ್ಬ ಸೇವಕ ದಾರಿ ತೋರಿಸಿದ. ಮೆನೆಪ್‌ಟಾ ಮತ್ತು ಬಟಾ ಅವನ ಹಿಂದಿನಿಂದ ನಡೆದರು. ಔಟ ಮತ್ತು ಬೆಕ್ ನಡುಪಟ್ಟಿಯಲ್ಲಿ ಭರ್ಚಿ ಸಿಕ್ಕಿಸಿಕೊಂಡು ಸ್ವಲ್ಪ ದೂರದಿಂದ ಹಿಂಬಾಲಿಸಿದರು.

ಮೊದಲು ದೇವಮಂದಿರಕ್ಕೆ. ಹೊರಗಿನ ದೀಪಗಳು—ಸೊಡರುಗಳು—

ಬಾಗಿಲು ಮುಚ್ಚಿದ್ದ ಕಟ್ಟಡವನ್ನು ಬೆಳಗುತ್ತಿದ್ದುವು. ದ್ವಾರದ ಮೇಲಿನ ಸ್ವರ್ಣಲೇಪನ ಚಕಚಕಿಸುತ್ತಿತ್ತು. ಮೇಲಣ ಹಂತದಲ್ಲಿ ಬೆಳಕು ಮಂದ ವಾಗುತ್ತ ಹೋದಂತೆ ಗೋಪುರ ಇರುಳಿನೊಡನೆ ಬೆರೆಯಲು ತವಕಿಸುತ್ತಿತ್ತು.

ಮೆನೆಪ್‌ಟಾ ಮತ್ತು ಸಂಗಡಿಗರು ಮುಚ್ಚಿದ ಬಾಗಿಲಿನ ಹಿಂದಿದ್ದ ಪ್‌ಟಾ ನಿಗೆ ಮಂಡಿಯೂರಿ ನಮಿಸಿ ಎದ್ದರು. ಅಲ್ಲಿಂದ ಹಿಂದಕ್ಕೆ ಹೊರಳಿ ಪ್ರಾಕಾರದ ದ್ವಾರವನ್ನು ಸಮೀಪಿಸಿದರು. ಅಲ್ಲಿ ಕಾವಲಿನವರ ಮುಖ್ಯಸ್ಥ ಇದಿರಾದ.

"ನೀವು ದಡದ ಮೇಲೆ ತಿರುಗಾಡಬಹುದೂಂತ ಅಮಾತ್ಯರು ತಿಳಿಸಿ ದ್ದಾರೆ. ಆದರೆ, ನಿಮ್ಮ ಅಂಗರಕ್ಷಕರ ಜತೆ ನಮ್ಮ ಭಟರನ್ನೂ ಕಳಿಸ್ಬೇ ಕೂಂತ ಹೇಳಿದ್ದಾರೆ," ಎಂದ ಆತ.

ಬಟಾ ಕುಟುಕಿದ :

"ಯಾಕೆ ? ಇಲ್ಲಿ ಕಳ್ಳರು ಜಾಸ್ತೀನಾ ? ನಮ್ಮ ಮೈ ಮೇಲೆ ಅಭರಣ ಗಳೇ ಇಲ್ವಲ್ಲ !"

ಮುಖ್ಯಸ್ಥ ಉಗುಳು ನುಂಗಿ, ಮೆನೆಪ್‌ಟಾಗೆ ನಮಿಸಿ, ತನಗೆ ನೀಡ ಲಾಗಿದ್ದ ನಿರ್ದೇಶಕ್ಕೆ ಅನುಸಾರವಾಗಿ ನುಡಿದ :

"ರಾಜಕಾರಣಕ್ಕೂ ನನಗೂ ಸಂಬಂಧವಿಲ್ಲ. ಆದರೂ ಹೇಳ್ತೀನೆ. ನೀವು ವಿಚಿತ್ರ ಪ್ರಾಂತದಿಂದ ಬಂದಿದ್ದೀರಿ. ಪೆರೋಗಿದಿರು ಬಂಡಾಯ ಸಾಮಾನ್ಯವೆ? ಅದರ ವಿವರ ಕೇಳಿ, ರಾಜಧಾನಿಯ ಪ್ರಜೆಗಳು ಕೆಂಡವಾಗಿದ್ದಾರೆ. ಯಾರಾ ದರೂ ತಲೆಹೋಕರು ನಿಮ್ಮ ಮೇಲೆ ಏರಿಬರಬಹುದು. ಆದರೆ ನೀವು ಆರ ಮನೆಯ ಮಾನ್ಯ ಅತಿಥಿಗಳು. ನಿಮಗೆ ಏನಾದರೂ ಸಂಭವಿಸಿದರೆ ನಾವು ಅದಕ್ಕೆ ಜವಾಬ್ದಾರರಾಗ್ತೇವೆ. ಅದಕ್ಕೋಸ್ಕರ ಇಷ್ಟೊಂದು ಮುಂಜಾಗ್ರತೆ."

" ನಿಮ್ಮ ಕರ್ತವ್ಯ ನೀವು ಪಾಲಿಸ್ಬೇಕಾದ್ದೇ. ಸಂತೋಷ " ಎಂದ, ಮೆನೆಪ್‌ಟಾ.

" ಸ್ವಲ್ಪ ಹೊತ್ತು ತಿರುಗಾಡ್ಕೊಂಡು ಬನ್ನಿ. ರಾಣೀವಾಸದವರು ಬರೋ ಸಂಭವ ಇದ್ದರೆ, ನಿಮಗೆ ತಿಳಿಸಿ ನಿಮ್ಮನ್ನು ಕರಕೊಂಡು ಬರ್ತೇವೆ. ನಿಮಗೊಬ್ಬ ದೇವಸೇವಕ ಸಿಗ್ಬಹುದು. ಬಡಪಾಯಿ. ಚಿಕ್ಕವಯಸ್ಸು. ತಲೆ ಸರಿಯಿಲ್ಲ. ಮಹಾ ಅರ್ಚಕರ ಪರಿವಾರದಲ್ಲಿದ್ದ. ಅಲ್ಲೇನೋ ಗಲಾಟೆ ಮಾಡಿದಾಂತ

ಅರಮನೆಯ ದೇವಮಂದಿರ ಸ್ವಚ್ಛ ಮಾಡೋದಕ್ಕೆ ನೇಮಿಸಿದ್ದಾರೆ. ರಾತ್ರಿಯಾದರೆ ಸಾಕು. 'ಒಸ್ಸೆರಿಸ್ ಕರೀತಾನೆ. ಹೊರಗೆ ಹೋಗ್ಬೇಕು' ಅಂತ ಗೋಗರೀತಾನೆ. ಬಿಡದೇ ಇದ್ದರೆ ದೇವಮಂದಿರದ ಮುಂದೆ ಎದೆಗೆ ಹೊಡಕೊಂಡು ಕೂಗಾಡ್ತಾನೆ. ಅರಮನೆಯ ಮುಖ್ಯ ದೇವಸೇವಕರು ಇನೇನಿ 'ಹೊರಗೆ ಬೇಕಾದರೆ ಹೋಗಲಿ. ಆದರೆ ನಿಗಾ ಇರಲಿ,' ಅಂದಿದ್ದಾರೆ. ಅವನನ್ನು ಮಾತನಾಡಿಸಿ ಪ್ರಯೋಜನವಿಲ್ಲ. ಆತ ಉತ್ತರ ಕೊಡೋದಿಲ್ಲ. ತನ್ನಷ್ಟಕ್ಕೇ ಗೊಣಗಿಕೊಂಡೋ ಹಾಡ್ಕೊಂಡೋ ಇರ್ತಾನೆ."

"ಆಗಲಿ. ನೀವು ವಿಷಯ ತಿಳಿಸಿದ್ದು ಒಳ್ಳೇದಾಯ್ತು."

"ಹೋಗಿ ಬನ್ನಿ."

ಒಬ್ಬ ಭಟ ಬಾಗಿಲು ತೆರೆದ. ಅರ್ಧ ಮಾತ್ರ. ಮೆನೆಪ್‌ಟಾನ ಪರಿವಾರವನ್ನು ಹಿಂಬಾಲಿಸಿ ನಾಲ್ವರು ಅರಮನೆ ಯೋಧರೂ ಹೊರಬಿದ್ದರು. ಮತ್ತೆ ಬಾಗಿಲು ಮುಚ್ಚಿಕೊಂಡಿತು.

ನದಿಯ ಮೇಲಿನಿಂದ ಬೀಸಿ ಬರುತ್ತಿತ್ತು ಹಿತಕರವಾದ ತಂಗಾಳಿ. ಮಹಾಪೂರದಲ್ಲೂ ಒದ್ದೆಯಾಗದ ಎತ್ತರದ ಕೃತಕ ದಂಡೆ. ಹತ್ತಾಳು ಭುಜಕ್ಕೆ ಭುಜ ತಗಲಿಸಿ ನಡೆಯಬಹುದಾದಷ್ಟು ಅಗಲ. ನುಣುಪಾದ ಮರುಳು ಸುರಿದು ನೆಲವನ್ನು ಮೆದುಗೊಳಿಸಿದ್ದರು. ನೀರಿನ ಬದಿಯುದ್ದಕ್ಕೂ ಹೂಬಳ್ಳಿಯ ಬೇಲಿ. ಈ ಕಡೆಗೆ ಅರಮನೆಯ ಪ್ರಾಕಾರ. ನೂರು ಮಾರುಗಳಿಗೊಂದು ದೀಪಸ್ತಂಭ ; ಅಲ್ಲಿ ಸಶಸ್ತ್ರ ಕಾವಲುಗಾರ. ನದಿಯ ನೀರನ್ನು ನೋಡುತ್ತ ಇಬ್ಬಿಬ್ಬರು ಕುಳಿತುಕೊಳ್ಳಲು ಅಲ್ಲಲ್ಲಿ ಕಲ್ಲಿನ ಪೀಠಗಳು. ಮಾತಿಗಿಂತ ಮೌನ ಮೇಲು ಎನ್ನಿಸುವ ಪರಿಸರ.

ಮೆನೆಪ್‌ಟಾನ ಮನಸ್ಸು ಉಲ್ಲಸಿತವಾಯಿತು. ಬಲಗಡೆಗೆ ದೂರದ ದೋಣಿಕಟ್ಟೆಯನ್ನು ದಾಟಿ, ಅದಕ್ಕೂ ಮುಂದೆ ಉದ್ದಕ್ಕೂ ದೀಪಗಳ ಅಲಂಕಾರ—ಪಾನ ಮಂದಿರಗಳಲ್ಲಿ, ಭೋಜನ ಗೃಹಗಳಲ್ಲಿ, ಉಳ್ಳವರ ಮನೆಗಳಲ್ಲಿ. ಎಡಗಡೆಗೆ ಪ್ರಾಕಾರ ದಾಟಿದ ಮೇಲೆ ಬಡ ಗುಡಿಸಲುಗಳ ಮಿಣುಕು ದೀಪಗಳು. ದೀಪಗಳೊ ? ನಕ್ಷತ್ರಗಳೊ ? ಅಲ್ಲಿ ಇರುಳಿನ ಮೇಲುಗೈ. ನದಿಯ ಮೇಲಂತೂ ತಂಗಿದ್ದ ಚಲಿಸುತ್ತಿದ್ದ ನಾವೆಗಳ ಸಹಸ್ರಾರು ಸೊಡರುಗಳು.

ದೂರದಿಂದ ಆಲಾಪನೆ ಕೇಳಿಸಿದಂತಾಗಿ, " ಯಾರೋ ಹಾಡ್ತಿದಾರೆ ! " ಎಂದು ಮೆನೆಪ್‌ಟಾ ಉದ್ಗರಿಸಿದ.

" ದೇವಸೇವಕನಿರಬೇಕು. ನಡಿ, ಅಲ್ಲಿಗೆ ಹೋಗೋಣ," ಎಂದ ಮೆನೆಪ್‌ಟಾ.

ಅತ್ತ ಸರಿದಂತೆ ಹಾಡಿನ ಪದಗಳು ಸ್ಪಷ್ಟವಾದುವು. ಅಡಿಗಡಿಗೂ ಅಳಲಿನ ಪಲ್ಲವಿ ಇತ್ತು :

" ಇಂದು ಯಾರೊಡನೆ ನಾ ಮಾತಾಡಲೀ !...."

ಒಂದು ಬರಿದು ಶಿಲಾಪೀಠದ ಬುಡದಿಂದ ಸ್ವರ ಬರುತ್ತಿತ್ತು. ನೀರನ್ನು ನೋಡುತ್ತ ಪೀಠದ ಕಾಲಿಗೆ ಒರಗಿ ಕುಳಿತಿದ್ದ ಆತ. ಮೆನೆಪ್‌ಟಾ ಮತ್ತಿತರರು ಹತ್ತು ಹೆಜ್ಜೆ ದೂರ ಸದ್ದಿಲ್ಲದೆ ನಿಂತರು.

ಯಾರ ಪರಿವೆಯೂ ಇಲ್ಲದೆ ಅವನು ಹಾಡಿದ :

" ಇಂದು ಯಾರೊಡನೆ ನಾ ಮಾತಾಡಲೀ....
ಮನುಜನ ಹೃದಯ ದುರಾಶೆಯ ಕಡಲು
ಸಂಧಿ ಸಿಕ್ಕರೆ ಪರರ ಸೊತ್ತಿಗೆ ಕೈಹಾಕುವ ನೀತ

" ಇಂದು ಯಾರೊಡನೆ ನಾ ಮಾತಾಡಲೀ....
ನಯ ವಿನಯ ಇನ್ನಿಲ್ಲ
ಸೊಕ್ಕಿನವರೆಲ್ಲರೂ

" ಇಂದು ಯಾರೊಡನೆ ನಾ ಮಾತಾಡಲೀ....
ಶಿಷ್ಟನ ಕೆರಳಿಸಿ ದುಷ್ಟನು ನಗುವನು
ಉಳಿದವರದ ನೋಡುತ ಅಣಕಿಪರು

" ಇಂದು ಯಾರೊಡನೆ ನಾ ಮಾತಾಡಲೀ........
ಮುಖಗಳನೆಲ್ಲ ಮರೆ ಮಾಡಿಹರು
ನೇರ ನೋಟವಿಲ್ಲ ಸೋದರನೆಡೆಗೆ

“ ಇಂದು ಯಾರೊಡನೆ ನಾ ಮಾತಾಡಲೀ....
ಠಕ್ಕಿಗರೆಲ್ಲರು, ಬಲು ಮೋಸ
ನಂಬಲು ನೆಚ್ಚಲು ಒಬ್ಬನೂ ಇಲ್ಲ....”

ಕೊನೆಯ ಸಾಲು ಮತ್ತೆ ಎರಡು ಬಾರಿ ಕೇಳಿಸಿತು. ಅದನ್ನು ಹಿಂಬಾಲಿಸಿತು, ಬಿಕ್ಕಿ ಬಿಕ್ಕಿ ಬಂದ ಅಳು.

ಮೆನೆಪ್‌ಟಾಗಿದು ಹಿಮಗಡ್ಡೆಯ ಸ್ಪರ್ಶ. ಇಷ್ಟು ಸಂಕಟ ? ಇಂಥ ಯಾತನೆ ? ‘ ಠಕ್ಕಿಗರೆಲ್ಲರು, ಬಲುಮೋಸ ; ನಂಬಲು ನೆಚ್ಚಲು ಒಬ್ಬನೂ ಇಲ್ಲ....’ ಐಗುಪ್ತ ಪ್ರದೇಶದಲ್ಲಿ ಇದು ಎಷ್ಟು ನಿಜ !

ಬಟಾ, ಔಟ, ಬೆಕ್ ಮೂಕರಾಗಿ ನಿಂತರು.

ಅಳು ನಿಲ್ಲಿಸಿ, ನಿಟ್ಟುಸಿರುಬಿಟ್ಟು, ಆ ಮನುಷ್ಯ ಹಾಡು ಮುಂದುವರಿಸಿದ :

“ ಇಂದು ಯಾರೊಡನೆ ನಾ ಮಾತಾಡಲೀ....
ಧರ್ಮಶೀಲನಾರೂ ಇಲ್ಲ
ದುಷ್ಟರೆ ಲೋಕವ ಆಳುವರಲ್ಲ

“ ಇಂದು ಯಾರೊಡನೆ ನಾ ಮಾತಾಡಲೀ....
ಬಳಲಿ ತೊಳಲಿ ಬೆಂಡಾಗಿಹೆನು
ನಂಬಲು ನೆಚ್ಚಲು ಒಬ್ಬನೂ ಇಲ್ಲ

“ ಇಂದು ಯಾರೊಡನೆ ನಾ ಮಾತಾಡಲೀ....
ಪಾಪ ಪೀಡಿತವೀ ನೆಲ ನಾ ಜರ್ಜರಿತ
ಕೊನೆಯೇ ಇಲ್ಲ, ಇದಕೆ ಕೊನೆಯೇ ಇಲ್ಲ....”

ಕಡೆಯ ಎರಡು ಸಾಲುಗಳನ್ನು ಮತ್ತೆರಡು ಬಾರಿ ಆತ ನುಡಿದ. ‘ಪಾಪ ಪೀಡಿತವೀ ನೆಲ ನಾ ಜರ್ಜರಿತ, ಕೊನೆಯೇ ಇಲ್ಲ ಇದಕೆ ಕೊನೆಯೇ ಇಲ್ಲ’ ಪದಗಳು ಮೆನೆಪ್‌ಟಾನನ್ನು ಯೋಚನೆಗೆ ಈಡು ಮಾಡಿದುವು. ಹೀಗೆ ಹಾಡಲು ಎಷ್ಟು ಅಪಾರವಿರಬೇಡ ಈ ವ್ಯಕ್ತಿಯ ಯಾತನೆ !

ಹಾಡು ಮುಗಿದಾಗ, ಮತ್ತೊಮ್ಮೆ ಅಳು. ಮುಂದೆ ಮೌನ ಶೋಕ.

ನಿಂತಲ್ಲೇ ನಿಂತಿದ್ದ ಮೆನೆಪ್‌ಟಾ ಪರಿವಾರಕ್ಕೆ ಆ ನೀರವತೆ ದುಸ್ಸಹವಾಗಿ ಕಂಡಿತು. ನಾಯಕ ತಾನೊಬ್ಬನೆ ಆ ಶಿಲಾಪೀಠದೆಡೆಗೆ ಸಾಗಿದ.

ಹೆಜ್ಜೆ ಸದ್ದು ಕೇಳಿಸಿದರೂ ತಿರುಗಿ ನೋಡದೆ ಆ ಮನುಷ್ಯನೆಂದ:

" ಪೆರೋ ಬರ್‍ತಾರಾ ? ನಾನು ಏಳ್ಬೇಕಾ ? "

ಮೆನೆಪ್‌ಟಾ ನುಡಿದ :

" ನಾನು ಅಪರಿಚಿತ. ಇಲ್ಲಿಯವನಲ್ಲ....ನಿಮ್ಮ ಹಾಡು ಕೇಳಿ ಸಂಕಟ ವಾಯ್ತು. ಮಾತನಾಡಿಸಲು ನಾನು ಅರ್ಹನೋ ತಿಳೀದು. ಆದರೂ ಧೈರ್ಯ ಮಾಡಿದ್ದೇನೆ."

" ಮಹಾತ್ಮರಿಗೆ ಉಚಿತವಾದ ವಿನಯ."

—ಧ್ವನಿ ಉತ್ಸಾಹ ತೋರಿತು.

" ನಾನು ಮೆನೆಪ್‌ಟಾ."

" ನೀರಾನೆ ಪ್ರಾಂತದ ನಾಯಕ ! ಯಾವಾಗ ಬಂದಿರಿ ? "

ಆತ ಗಡಬಡಿಸಿ ಎದ್ದ.

" ನೀವು ದೇವಸೇವಕ ಅಲ್ಲವಾ ? "

" ದೇವಸೇವಕ ಮೆನ್ನ. ಹುಚ್ಚ. ದೀಪಸ್ತಂಭದ ಹತ್ತಿರಕ್ಕೆ ಹೋಗೋಣ. ನಿಮ್ಮ ಮುಖ ನೋಡ್ಬೇಕು."

ಇಬ್ಬರೂ ಸಮೀಪದ ಪ್ರಾಕಾರ ದೀಪದೆಡೆಗೆ ನಡೆದರು.

ದೀಪದ ನಾಲಿಗೆ ಹೊಯ್ದಾಡುತ್ತಿತ್ತು. ಕಣ್ಣು ಕಿವಿ ಇಲ್ಲದವನಂತೆ ಕಾವಲು ಭಟ ನಿಂತಿದ್ದ.

ಮೆನೆಪ್‌ಟಾ ಕಂಡುದು ರೂಪವಂತ ತರುಣನನ್ನು. ಹಣೆಯ ಅಗಲಕ್ಕೆ ಆಳ ಗೆರೆಗಳು. ಸೊರಗಿದ ಮೈ. ಧರಿಸಿದ್ದುದು ಕೌಪೀನವನ್ನು ಮಾತ್ರ.

ತನ್ನ ಎದುರು ನಿಂತವನನ್ನು ನೋಡುತ್ತ ಮೆನ್ನನ ಕಣ್ಣುಗಳು ಅಗಲ ಗೊಂಡುವು. ಭಾವೋದ್ವೇಗದಿಂದ ಮೂಗಿನ ಹೊಳ್ಳೆಗಳು ಅದುರಿದುವು. ಬಿಸಿಯುಸಿರು ಒಳಕ್ಕೂ ಹೊರಕ್ಕೂ ಹೊಯ್ದಾಡಿತು.

ಏನಾಗುತ್ತಿದೆ ಎಂಬುದನ್ನು ಗಮನಿಸುವುದಕ್ಕೆ ಮುಂಚೆಯೇ ಮೆನ್ನ ಮೆನೆಪ್‌ಟಾನ ಕೆರಳಿಗೆ ಆತು ಬಿದ್ದ. ಬಟಾ, ಔಟ, ಬೆಕ್ ಓಡಿ ಬಂದರು.

ದೇವಸೇವಕನನ್ನು ಹಿಡಿಯಲು ತಡೆಯಲು ಮುಂದಾದರು.

" ಇರಲಿ ಬಿಡಿ," ಎಂದ ಮೆನೆಪ್‌ಟಾ.

ಮೆನ್ನ ಬೆಚ್ಚಿಬಿದ್ದು ತಾನೇ ದೂರ ಸರಿದು ನಿಂತ.

" ಓ ! ನಿಮ್ಮ ಅಂಗರಕ್ಷಕರು ! ನಾಯಕ, ನಾನು ಕನಸಿನಲ್ಲಿ ನಿಮ್ಮನ್ನು ಕಂಡಿದ್ದೆ. ಅಸ್ಪಷ್ಟ ಆಕಾರ. ಆದರೂ ಹೆಚ್ಚುಕಡಮೆ ಹೀಗೆಯೇ ಇದ್ದಿರಿ ಅನಿಸ್ತದೆ. ಇಲ್ಲ, ಇನ್ನೂ ಎತ್ತರ ಇದ್ದಿರಿ. ಇವತ್ತು ನೀವು ಮನುಷ್ಯ. ನಾಳೆ ನೀವೇ ದೇವರು. ಐಗುಪ್ತದ ಎರಡು ಸಾವಿರ ದೇವರೆಲ್ಲ ಹಿಂದೆ ಮನುಷ್ಯರೋ ಪ್ರಾಣಿಗಳೋ ಆಗಿದ್ರು. ಹಹ್ಹ! ಹೀಗೆ ಹೇಳಿದ್ದಕ್ಕೆ ನನ್ನನ್ನು ಹುಚ್ಚ ಅಂದ್ರು. ಹೇಳಿ ಜನನಾಯಕ ಮೆನೆಪ್‌ಟಾ, ನಾನು ಹುಚ್ಚ ಹೌದಾ, ಅಲ್ಲವಾ ? ಹೊಹ್ಹೊ ಹೊ !........"

ಮೆನ್ನನ ನಗೆ ನದಿಯ ಎದುರು ದಂಡೆಗೂ ಅಪ್ಪಳಿಸಿತು.

ಇಷ್ಟು ಗಟ್ಟಿಯಾಗಿ ನಗುವ ಸಾಮರ್ಥ್ಯವಿದೆಯಲ್ಲ ಈ ಬಡಕಲು ಜೀವಕ್ಕೆ ಎಂದು ಮೆನೆಪ್‌ಟಾ ಅಚ್ಚರಿಪಟ್ಟ.

ತನ್ನ ನಗೆಯ ಪ್ರತಿಧ್ವನಿ ಕೇಳಿಸಿ ಮೆನ್ನನಿಗೂ ವಿಸ್ಮಯವಾಗಿತ್ತು. ಆ ನಗೆ ತನ್ನದೇ ಎಂದು ಖಚಿತಪಡಿಸಿಕೊಳ್ಳುವುದಕ್ಕೋಸ್ಕರ, ಆತ ಮತ್ತೊಮ್ಮೆ "ಹ್ಹೊ ಹ್ಹೊ ಹ್ಹೊ !" ಎಂದು ನಕ್ಕ.

ಅರಮನೆಯ ಕಾವಲು ಭಟರು ಬಳಿ ಸಾರಿ ಮೆನ್ನನನ್ನು ಸುತ್ತುವರಿದರು. "ನೀವಿನ್ನು ಒಳಗೆ ನಡೀರಿ," ಎಂದ ಅವರಲ್ಲೊಬ್ಬ ಮೆನ್ನನಿಗೆ. " ವಿಶ್ರಾಂತಿಯ ಹೊತ್ತಾಯ್ತು. ನೀವೂ ಒಳಗೆ ಹೋಗಬಹುದಲ್ಲ," ಎಂದ ಇನ್ನೊಬ್ಬ, ಮೆನೆಪ್‌ಟಾನ ಕಡೆ ನೋಡಿ.

" ಅತಿಥಿಗೃಹದಲ್ಲಿ ಇದೀರಿ ಅಲ್ಲವಾ ? " ಎಂದಷ್ಟೇ ಪಿಸುದನಿಯಲ್ಲಿ ನುಡಿದು, ಮೆನ್ನ ತನ್ನ ಕೈಹಿಡಿದಿದ್ದ ಭಟನನ್ನು ವಿಧೇಯನಾಗಿ ಹಿಂಬಾಲಿಸಿದ.

" ಪಾಪ," ಎಂದ ಬಟಾ.

ಮೆನೆಪ್‌ಟಾನೆಂದ :

"ದಹಿಸುವ ಕೆಂಡ. ಸಂಕಟವಾಗ್ತದೆ. 'ಪಾಪಪೀಡಿತವೀ ನೆಲ ನಾ ಜರ್ಜರಿತ; ಕೊನೆಯೇ ಇಲ್ಲ, ಇದಕೆ ಕೊನೆಯೇ ಇಲ್ಲ'...."

ನೆಲ ಪಾಪ ಪೀಡಿತ. ಮೆನೆಪ್‌ಟಾನೇನೂ ಜರ್ಜರಿತವಲ್ಲ. ಆದರೂ ಮೆನ್ನನ ಯಾತನೆ ನೆನೆದು ಅವನಿಗೆ ಸಂಕಟ. ಆತ ನಿಟ್ಟುಸಿರು ಬಿಟ್ಟ.

ನದಿಸಾನ್ನಿಧ್ಯವನ್ನು ಅಷ್ಟಕ್ಕೇ ಮುಕ್ತಾಯಗೊಳಿಸಿ ಅವರು ಅತಿಥಿಗೃಹ ದತ್ತ ನಡೆದರು.

ಮೆನೆಪ್‌ಟಾ ಮಲಗಲು ಅಣಿಗೊಳಿಸಿದ್ದ ಕೊಠಡಿ ವಿಶಾಲವಾಗಿತ್ತು. ಮಂಚವನ್ನು ನೋಡಿ ಆತನೆಂದ :

"ಐಗುಪ್ತದ ಜನರಿಗೆ ಮಂಚದ ಮೇಲೆ ಮಲಗಲು ಮೆಸೆಸ್ ದೊರೆ ಹೇಳಿ ಕೊಟ್ಟು ಏಳುನೂರು ವರ್ಷಗಳೇ ಸಂದಿವೆ. ಆದರೂ, ನನ್ನಲ್ಲಿಗೆ ಇನ್ನೂ ಆ ಪಾಠ ಮುಟ್ಟಿಲ್ಲ. ಶಯನಕ್ಕೆ ನೆಲವೇ ನನಗಿಷ್ಟ."

ಇದನ್ನು ತಿಳಿದಾಗ ಅತಿಥಿಗೃಹದ ಸೇವಕರಿಗೆ ಆಶ್ಚರ್ಯ. ಅವರು ಆ ನಾಲ್ವರಿಗೆ ಮಲಗಲು ಮೆತ್ತೆಗಳನ್ನೂ ಹೊದೆಯಲು ಬಟ್ಟೆಗಳನ್ನೂ ತಂದು ಕೊಟ್ಟರು.

ಅತಿಥಿಗೃಹದ ಅಧಿಕಾರಿ ಬಾಗಿಲ್ಲ ಬಳಿ ನಿಂತು, "ನಾಳೆ ಬೆಳಿಗ್ಗೆ ಉಪಾ ಹಾರವಾದ ಮೇಲೆ ಅಮಾತ್ಯರ ಭೇಟಿ" ಎಂದ.

....ತೋಳಿಗೆ ತಲೆ ಸೋಕಿದೊಡನೆಯೇ ಬಟಾ ಗೊರಕೆ ಆರಂಭಿಸಿದ. ಎಳೆಯ ಜವ್ವನಿಗರಾದ ಔಟ, ಬೆಕ್ ಶಾಂತವಾಗಿ ಉಸಿರಾಡುತ್ತ ಮೈ ಮರೆತರು.

ನಾಯಕ ಬಹಳ ಹೊತ್ತು, ಕ್ರಮಕ್ರಮವಾಗಿ ಕಡಿಮೆಯಾಗತೊಡಗಿದ ಬಾಹ್ಯಸದ್ದುಗಳಿಗೆ ಕಿವಿಗೊಟ್ಟ. ಲಿಷ್ಟ್‌ನಲ್ಲಿ ಎಚ್ಚರಗೊಂಡಾಗಿನಿಂದ ಬೆಳಗ್ಗೆ ಆವರೆಗಿನ ಘಟನೆಗಳನ್ನೆಲ್ಲ ಮೆಲುಕುಹಾಕಿದ. ಮೆನ್ನನ 'ಇಂದು ಯಾರೊಡನೆ ನಾ ಮಾತಾಡಲೀ....' ಪಲ್ಲವಿ ಸಾಲು ಗುಂಯ್‌ಗುಟ್ಟಿತು.

ನೀರಾನೆ ಪ್ರಾಂತವನ್ನು, ಬಂಧುಗಳನ್ನು, ನೆಫಿಸ್ ರಾಮೆರಿಪ್‌ಟಾರನ್ನು ಸ್ಮರಿಸಿದ....

ಕಣ್ಣೆವೆಗಳು ಮೆಲ್ಲನೆ ಒಂದನ್ನೊಂದು ಸಮೀಪಿಸಿದುವು. ಇವನ ಪಾಲಿಗೆ ಬಟಾನ ಗೊರಕೆ ಸದ್ದು ಕ್ಷೀಣವಾಗುತ್ತ ಹೋಯಿತು.

* * * *

("ಪಾಪಿಗಳಾ ! ಹೋಯ್ತು ! ಹೋಯ್ತು ! ಕಸದ ಜತೆ ರಸವೂ ಹೋಯ್ತು !")

"ಮೆನೆಪ್‌ಟಾ ಅಣ್ಣ ! ಮೆನೆಪ್‌ಟಾ ಅಣ್ಣ ! ಏನಾಯ್ತು ? ಏನಾಯ್ತು ?" ಎಂದು ಬಟಾ ಕೈಹಿಡಿದು ಕುಲುಕಿದ. ಬೆಕ್ ಔಟರೂ ಎದ್ದು ಕುಳಿತರು, ಗಾಬರಿಗೊಂಡು. ಮೆನೆಪ್‌ಟಾ ಕನಸಿನಲ್ಲಿ ಚೀರಿಕೊಂಡಿದ್ದ, ವಿಕೃತವಾಗಿ.

ಗಡಬಡಿಸಿ ಎದ್ದು "ಏನಾಯ್ತು ?" ಎಂದು ಮೆನೆಪ್‌ಟಾನೂ ಕೇಳಿದ.

"ಕನಸು ಬಿತ್ತಾ ? ಕೆಟ್ಟ ಕನಸು ಬಿತ್ತಾ ?"

"ಹ್ಞ. ಹೌದು...."

ಕಿಟಕಿಯ ಬಳಿ ನಿಂತು ಔಟ ಹೇಳಿದ :

"ಬೆಳಗಾಯ್ತು."

ಬೆಕ್‌ಕೂಡಾ ಎದ್ದು ನಿಂತ.

"ಕನಸ್ನಲ್ಲಿ ಏನು ಕಂಡೆ ?" ಎಂದು ಬಟಾ ಕೇಳಿದ.

—ಮೆನೆಪ್‌ಟಾನ ಬಾಲ್ಯದಲ್ಲಿ ನಡೆದಿದ್ದ ಘಟನೆ. ಪೂರ್ವ ದಿಕ್ಕಿನ ಮರಳುಗಾಡಿನಲ್ಲಿ ಬಂಗಾರಕ್ಕಾಗಿ ಶೋಧೆ. ದುಡಿಯುವವರು ಹಲವು ಬಗೆಯ ಜನ. ಭೂಮಾಲಿಕರ ಜೀತದಾಳುಗಳು, ದಿನಗೂಲಿಗಾಗಿ ಬಂದವರು. ಗಡಿ ಯಾಚೆಗಿನ ಹೋರಾಟದಲ್ಲಿ ಸೆರೆಸಿಕ್ಕ ಗಂಡು, ಹೆಣ್ಣು. ನೆರಳಿಲ್ಲದ ಬೆಂಗಾಡು. ಇಡಿರೊಟ್ಟಿ ದೊರೆತರೆ ಹಬ್ಬ.ಒಪ್ಪೊತ್ತಿನ ಊಟಕ್ಕೆ ನಿತ್ಯವೂ ಒಂದು ತುಣುಕು ಸಿಕ್ಕಿದರೆ ಅದು ಸೌಭಾಗ್ಯ. ನಡು ಮುಚ್ಚಲು ಬಟ್ಟೆ ಇದ್ದರೆ ಇತ್ತು, ಇಲ್ಲ ದಿದ್ದರೆ ಇಲ್ಲ. ನೀರೇ ಬದುಕಿಗೆ ಮುಖ್ಯ ಆಸರೆ. ಅದೂ ಅಪರೂಪದ ವಸ್ತು. ಒಂದು ತೊಟ್ಟೊ ಉಸುಬಿನಲ್ಲಿ ಇಂಗದಂತೆ, ಆದರ ಹಂಚಿಕೆ. ಎಣ್ಣೆ ಕಾಣದ ಸ್ನಾನವಿಲ್ಲದ ಕೂದಲು, ಮೈ.

ಇರುಳಲ್ಲಿ ಹಿರಿಯರು ಒಂದು ಕೈಯಲ್ಲಿ ಅರೆ ಮುಚ್ಚಿದ ಸೊಡರನ್ನೂ ಇನ್ನೊಂದರಲ್ಲಿ ಮೊನಚು ಮೂತಿಯ ಕಲ್ಲಿನ ಗುರಾಣಿಯನ್ನೂ ಹಿಡಿದು ಮರಳುಗಲ್ಲುಗಳನ್ನು ಪರೀಕ್ಷಿಸುತ್ತಿದ್ದರು. ಹೊಳಪು ಕಂಡಾಗ ಸೊಡರನ್ನು ಮಗ್ಗುಲಲ್ಲಿ ಇರಿಸಿ, ಗುರಾಣಿಯಿಂದ ಮರಳುಗಲ್ಲಿಗೆ ಏಟು ಹೊಡೆದು ಹೆಂಟೆ

ಗಳನ್ನು ಉದುರಿಸುತ್ತಿದ್ದರು. (ಆ ದುಡಿಮೆಗಾರರ ತಂಡದಲ್ಲಿದ್ದ, ಮೆನೆಪ್‌ಟಾನ ತಂದೆ.) ಬೆಳಿಗ್ಗೆ ಆ ಹೆಂಟೆಗಳನ್ನು ಆಯ್ದು, ಬುಟ್ಟಿಗಳಲ್ಲಿ ತುಂಬಿಸಿ ಜಜ್ಜುವ ಒರಳುಗಳ ಬಳಿಗೆ ಒಯ್ಯುವುದು ಹುಡುಗರ ಕೆಲಸ. (ಮೆನೆಪ್‌ಟಾ ಇದ್ದುದು ಆ ತಂಡದಲ್ಲಿ.) ಇತರರ ಬಾಹುಗಳಲ್ಲಿದ್ದ ಬಲ ಹೆಂಟೆಗಳನ್ನು ಜಜ್ಜಿ ಪುಡಿಗೂಡಿಸಲು ವಿನಿಯೋಗವಾಗುತ್ತಿತ್ತು. ಮುದುಕರು ಆ ಪುಡಿಯನ್ನು ಕೊಳಕು ನೀರಿನಲ್ಲಿ ತೊಳೆದು ಸ್ವರ್ಣರೇಕುಗಳನ್ನು ಮಣ್ಣಿನಿಂದ ಬೇರ್ಪಡಿಸುತ್ತಿದ್ದರು.

ಕಾಪೀರು ಹಗಲೂ ರಾತ್ರಿಯೂ ಎಚ್ಚರವಿದ್ದು, ಚಾಟಿ ಏಟಿನ ರುಚಿ ತೋರಿಸುತ್ತಿದ್ದ. ಹೊಡೆಯುವ ಕೋಲಾಗಿಯೂ ಅಧಿಕಾರ ದಂಡವನ್ನು ಮಾರ್ಪಡಿಸುತ್ತಿದ್ದ. ಮುಷ್ಟಿಯಿಂದ ಗುದ್ದುತ್ತಿದ್ದ. ಪಾದದಿಂದ ಒದೆಯುತ್ತಿದ್ದ. ಮೆನೆಪ್‌ಟಾನ ತಂದೆ ಮತ್ತು ಮೆನೆಪ್‌ಟಾ ಇಬ್ಬರೂ ಆತನ ಕೈಯಲ್ಲಿ ಮೈ ನೋಯಿಸಿಕೊಂಡಿದ್ದರು.

"ನಮ್ಮ ತಂದೇನ, ಅವನೂ ನಾನೂ ಮರಳುಗಾಡಿನ ಬಂಗಾರದ ಗಣೀಲಿ ಕೆಲ್ಸ ಮಾಡ್ತಾ ಇದ್ದದ್ದನ್ನ, ಕನಸಿನಲ್ಲಿ ಕಂಡೆ, ಬಟಾ. ಮುದುಕರು ಸರಿಯಾಗಿ ಪುಡಿ ತೊಳೀತಾ ಇಲ್ಲ ಅಂತ ಕಾಪೀರು ಕೂಗಾಡ್ದ. 'ಪಾಪಿಗಳಾ! ಹೋಯ್ತು! ಹೋಯ್ತು! ಕಸದ ಜತೆ ರಸವೂ ಹೋಯ್ತು' ಅಂದ. ಚಾಟಿ ಬೀಸಿದ. ಬಲವಾದ ಏಟು. ಒಬ್ಬ ಮುದುಕನಿಗೆ ತಗಲಿತು. ಅವನು "ಅಯ್ಯೋ!" ಅಂದ. ನಾನು ಕಿರಿಚಿದೆ. ಆ ಮುದುಕ ಯಾರ ಹಾಗಿದ್ದ ಗೊತ್ತೆ? ನಮ್ಮ ಹಿರಿಯರ ಸಮಿತಿಯ ಹೆಮ್‌ಟೆಯು. ಹಾಗೆ ಕೆಟ್ಟ ಕನಸು."

ಮೆನೆಪ್‌ಟಾ ಹೇಳಿದುದನ್ನು ರೆಪ್ಪೆ ಮುಚ್ಚದೆ ಬಟಾ ಕೇಳಿದ.

"ಹೆಚ್ಚು ಕಡಿಮೆ ಬದುಕಿನಲ್ಲಿ ನಡೆದದ್ದನ್ನೇ ಕನಸಿನಲ್ಲಿ ನೀನು ಕಂಡೆ," ಎಂದ.

"ಹಗಲು ಬಗೆಹರಿಯದ ಸಮಸ್ಯೆಗೆ ಕನಸಿನಲ್ಲಿ ಪರಿಹಾರ ಸಿಗೋದುಂಟು. ನಾಳೆಯ ವಿಷಯದಲ್ಲಿ ಕನಸು ಮುನ್ನೆಚ್ಚರಿಕೆ ನೀಡೋದುಂಟು."

"ಈ ಕನಸಿನ ಅರ್ಥ ಏನೂಂತ ಆರಮನೆ ದೇವಮಂದಿರದ ಅರ್ಚಕನನ್ನು ಕೇಳೋಣ."

"ನಮ್ಮ ಮೆನ್ನನೂ ಅರ್ಥ ಹೇಳಬಹುದು."

"ಹ್ಞ. ಈಗ ನೆನಪಾಯ್ತು ಮೆನೆಪ್‌ಟಾ ಅಣ್ಣ. ನನಗೂ ಒಂದು ಕನಸು ಬಿತ್ತು. ಅದರಲ್ಲಿ ಮೆನ್ನ ಹುಚ್ಚ ಹಾಡ್ತಾ ಇದ್ದ!"

"ಇಂದು ಯಾರೊಡನೆ ನಾ ಮಾತಾಡಲೀ...."

"ಏಳು ಅಮಾತ್ಯರಲ್ಲಿಗೆ ಹೋಗ್ಬೇಕಲ್ಲ ಇವತ್ತು ?"

* * * *

ಹಿಂದಿನ ದಿನ ಅಮಾತ್ಯನಿಂದ ಗೇಬುಗೆ ಸಂದೇಶ ತಂದಿದ್ದ ಲಿಪಿಕಾರ ನೊಡನೆ ಅತಿಥಿ ಗೃಹದ ಅಧಿಕಾರಿ ಬಂದ.

ವಿನಯಪೂರ್ವಕವಾಗಿ ಮೆನೆಪ್‌ಟಾಗೆ ಅವನು ತಿಳಿಸಿದ :

"ಇವರು ಆಮಾತ್ಯರ ಹಿರಿಯ ಲಿಪಿಕಾರ, ಸೆನೆಬ್. ಇವರ ಜತೆ ನೀವು ಹೋಗ್ಬೇಕು. ನಿಮ್ಮ ಪರಿವಾರ ಇಲ್ಲಿಯೇ ಇರಲಿ."

ಬಟಾ ಕೈಸನ್ನೆಗಳಿಂದ ಮೆನೆಪ್‌ಟಾನ ಲಕ್ಷ್ಯ ಸೆಳೆದು, ತನ್ನ ಪ್ರತಿ ಭಟನೆ ಸಲ್ಲಿಸಿದ.

ಬಟಾನಿಗೆ ಸುಮ್ಮನಿರುವಂತೆ ಸೂಚಿಸುತ್ತ, ಮೆನೆಪ್‌ಟಾನೆಂದ:

"ಆಗಲಿ. ಅದಕ್ಕೇನೀಗ ? ಇವರೆಲ್ಲ ಉದ್ಯಾನದಲ್ಲಿರ್ತಾರೆ."

"ಇರಬಹುದು. ಆಕ್ಷೇಪವಿಲ್ಲ," ಎಂದ ಸೆನೆಬ್.

ಆತನನ್ನು ಮೆನೆಪ್‌ಟಾ ಹಿಂಬಾಲಿಸಿದ. ದೋಣಿಕಟ್ಟೆಯಿಂದ ಬಂದಿದ್ದ ಅಂಬಿಗರನ್ನೊಳಗೊಂಡು ಪರಿವಾರವೆಲ್ಲ ಉಪಾಹಾರ ಮುಗಿಸಿ ಅಮಾತ್ಯ ಭವನದ ಪುಷ್ಪೋದ್ಯಾನದತ್ತ ಹೊರಟಿತು.

ಭವನದ ಹೆಬ್ಬಾಗಿಲಿನಲ್ಲಿ ಇಬ್ಬರು ದ್ವಾರಪಾಲಕರಿದ್ದರು. ಒಳಹೊಕ್ಕ ಲಿಪಿಕಾರ ಸೆನೆಬ್‌ನನ್ನಾಗಲೀ ನಾಯಕ ಮೆನೆಪ್‌ಟಾನನ್ನಾಗಲೀ ಗಮನಿಸದೆ ಅವರು ಸುಮ್ಮನಿದ್ದರು.

ಆಯತಾಕಾರದ ಕಟ್ಟಡ. ಇನ್ನೂರು ಜನ ಕುಳಿತುಕೊಳ್ಳಲು ಅವಕಾಶ ವಿತ್ತು. ಕಲ್ಲಿನ ಅಡಿಪಾಯದ ಮೇಲೆ ಇಟ್ಟಿಗೆ ಗೋಡೆಗಳು. ಒಳಗೂ

ಹೊರಗೂ ಸುಣ್ಣ ಬಳಿದಿತ್ತು. ತಾಳೆಮರದ ತೊಲೆಗಳನ್ನು ಹಾಸಿ ಅದರ ಮೇಲೆ ಮಣ್ಣು ಮೆತ್ತಿದ್ದ ಛಾವಣಿ. ಛತ್ತಿಗೂ ಸುಣ್ಣ. ಛಾವಣಿಯ ಸಮೀಪದಲ್ಲೇ ನಾಲ್ಕು ಬದಿಗಳಲ್ಲಿ ಜಾಲಂಧ್ರಗಳು. ಛಾವಣಿಯಲ್ಲೂ ಬೆಳಕು ಕಿಂಡಿ. ಹಗಲಿನ ಯಾವ ವೇಳೆಯಲ್ಲೇ ಆಗಲಿ ಏಕಪ್ರಕಾರವಾಗಿ ಬೆಳಕು ಬೀಳುವಂಥ ವ್ಯವಸ್ಥೆ. ಪೂರ್ವ ದಿಕ್ಕಿಗೆ ಮುಖ ಮಾಡಿದ ವಿಶಾಲ ವೇದಿಕೆಯ ಮೇಲೆ ಅಲಂಕೃತ ಅಮಾತ್ಯ ಪೀಠ. ವೇದಿಕೆಯ ಮೇಲೆಯೇ ಅದರ ಎಡಬಲಗಳಲ್ಲಿ ಪೀಠಗಳು. ಆ ಎರಡು ಮೂಲೆಗಳಲ್ಲಿ ಲಿಪಿಕಾರರ ಪೆಟಾರಿಗಳು. ಒಂದರ ಮೇಲೊಂದರಂತೆ ಓರಣವಾಗಿ ಜೋಡಿಸಿದ್ದ ಪೆಪ್ಪೈರಸ್ ಹಾಳೆಗಳು. ಹರಡಿದ್ದ ಬರೆಯುವ ಉಪ ಕರಣಗಳು. ಗೋಡೆಗಳ ಮೇಲೆ ತೂಗಹಾಕಿದ್ದ ಚಿತ್ತಾರ ಚಾಪೆಗಳು. ಉಜ್ವಲ ವರ್ಣಗಳ ಚಿತ್ರಮಾಲಿಕೆ. ಒಸ್ಸೈರಿಸ್‌ನ ನ್ಯಾಯಸ್ಥಾನ, ವಿವಿಧ ದೇವತಾ ಮೂರ್ತಿಗಳು, ಕಟ್ಟುಕಟ್ಟಳೆಗಳನ್ನು ರೂಪಿಸಿದ ಥೊಥ್! ಸಾಲಾಗಿ ನಿಂತ ವಿದೇಶೀಯ ಕೈದಿಗಳು. ಅವರಲ್ಲೊಬ್ಬನ ಶಿರಚ್ಛೇದನ ಮಾಡುತ್ತಿರುವ ಪೆರೋ. ವೇದಿಕೆಯ ಕೊನೆಯಲ್ಲಿ ತುಸು ಎತ್ತರದ ಅಂತಸ್ತಿತ್ತು. ಅದರಲ್ಲೂ ಸ್ವರ್ಣ-ದಂತಗಳ ಕೆತ್ತನೆಯ ಕೆಲಸದ ಪೀಠಗಳಿದ್ದುವು.

ಲಿಪಿಕಾರನೆಂದ :

"ವಿಶೇಷ ವಿಚಾರಣೆ ಅಂಥದೇನಾದರೂ ಇದ್ದಾಗ ಪೆರೋನೂ ಬರ್ತಾರೆ; ಮಹಾ ಅರ್ಚಕರೂ ಬರ್ತಾರೆ. ಅವರ ಜತೆ ಅವರ ಆಸನಗಳೂ ಬರ್ತವೆ. ವೇದಿಕೆಯ ಹಿಂದೆ ಇರೋ ಪೀಠಗಳಲ್ಲಿ ರಾಣೀವಾಸದವರೂ ಬಂದು ಕೂತ್ಕೊಳ್ಳೋದುಂಟು."

ಮೆನೆಪ್‌ಟಾ ಕೇಳಿದ :

"ಅಮಾತ್ಯರು ತಮ್ಮ ವಸತಿಯಿಂದ ನೇರವಾಗಿ ಇಲ್ಲಿಗೇ ಬರ್ತಾರಾ?"

"ಛೆ! ಛೆ! ಅರಮನೆಗೆ ಹೋಗಿ ಪೆರೋಗೆ ದಿನದ ವರದಿ ಸಲ್ಲಿಸಿ, ನಿರ್ದೇಶಗಳನ್ನು ಪಡಕೊಂಡು ಬರ್ತಾರೆ."

"ಹೊಸದಾಗಿ ಒಂದು ಉಸುಬು ಗಡಿಯಾರ ಮಾಡಿದ್ದಾರೆ ಅಂತ ಕೇಳಿದ್ದೇನೆ."

"ಓ ಹೌದು. ಭವನದ ಎಡಗಡೇಲಿ ಗಡಿಯಾರ ಕಟ್ಟೆ ಇದೆ. ಉಸುಬು ಗಡಿಯಾರ, ಮರದ ಗಡಿಯಾರ ಎರಡೂ ಇವೆ. ಇವು ತೋರಿಸುವ ವೇಳೆಯಲ್ಲಿ

ಒಂದು ಬೆರಳಿನ ವ್ಯತ್ಯಾಸವಾದರೂ ಇದ್ದೇ ಇರ್ತದೆ !.....ಪೆರೋ ದರ್ಶನ ಮುಗಿಸಿ ಅಮಾತ್ಯರು ಆಗಲೇ ಬರಬೇಕಾಗಿತ್ತು."

ಒಬ್ಬ ಸೇವಕ ಇಣಿಕಿ ನೋಡಿ, ಲಿಪಿಕಾರನನ್ನು ಕಂಡು ಬಳಿ ಸಾರಿ, ನುಡಿದ :

" ಮಹಾಪ್ರಭು ದೇವಮಂದಿರದಿಂದ ಬಂದ್ರು. ಅಮಾತ್ಯರು ಅವರ ಜತೆ ಮಾತಾಡ್ತಿದ್ದಾರೆ."

ಲಿಪಿಕಾರನೆಂದ :

" ಹಾಗಾದರೆ ಇನ್ನೇನು ಅಮಾತ್ಯರು ಬಂದ್ಬಿಡ್ತಾರೆ."

(ಅಮಾತ್ಯ ವರ್ಷಕ್ಕೆ ಒಮ್ಮೆಯೋ ಎರಡು ಸಲವೋ ನೀಲನದಿ ಯುದ್ದಕ್ಕೂ ಸಂಚಾರ ಹೊರಡುತ್ತಿದ್ದ. ತಸಿಬೆ ಪ್ರವಾಸ. ಉತ್ತರದಲ್ಲಿ ಮಹಾ ಹಸುರು ಸಮುದ್ರ ದಂಡೆಯ ತನಕ. ಅದು ಅತ್ಯಂತ ಫಲವತ್ತಾದ ನದೀಮುಖಜ ಭೂಮಿ. ದಕ್ಷಿಣದಲ್ಲಿ ಸ್ಯೆನೆಯ ವರೆಗೆ. ಅಪಾರ ಶಿಲಾಸಂಪತ್ತಿನ ಸ್ಥಳ ಅದು. ಉಳಿದ ಕಾಲದಲ್ಲಿ ರಾಜಧಾನಿಯಲ್ಲೇ ಆತನ ವಾಸ್ತವ್ಯ.

ಪ್ರಾಂತಪಾಲರಿಂದಲೂ ಇತರ ಅಧಿಕಾರಿಗಳಿಂದಲೂ ವರ್ಷಕ್ಕೆ ಮೂರು ಸಲ ವರದಿಗಳು ಬರುತ್ತಿದ್ದುವು. ಅವನ್ನು ಕ್ರೋಡೀಕರಿಸಿ ಅಮಾತ್ಯ ತನ್ನ ವರದಿಗಳನ್ನು ಸಿದ್ಧಪಡಿಸುತ್ತಿದ್ದ.

ಪ್ರತಿ ದಿನವೂ ಅರಮನೆಗೆ ಬಂದು ಪೆರೋನಿಗೆ ನಮಿಸಿ ಅಂದಿನ ವರದಿ ಒಪ್ಪಿಸುವುದು ಔಪಚಾರಿಕ ಕ್ರಮ. ಅದು ನಿತ್ಯದ ದೇವಪೂಜೆ ಇದ್ದ ಹಾಗೆ. ಅದಕ್ಕೆ ಚ್ಯುತಿ ಇಲ್ಲ.

ಹಲವು ಹದಿನೆಂಟು ಅಧಿಕಾರಗಳು ಅಮಾತ್ಯನಿಗೆ.

ಆತ ಅರಸನ ಕಣ್ಣುಕಿವಿ ; ರಾಜನ ಹೃದಯವನ್ನು ಮುದಗೊಳಿಸುವ ದೇಶದ ಸಂದೇಶವಾಹಕ ; ಅರಸನ ಅಂಗರಕ್ಷಕ ಬಲದ ಮುಖ್ಯಸ್ಥ ; ಅವನ ಶಿಕ್ಷಕ ; ಅರಸನ ಮುದ್ರಾವಾಹಕ, ಆತನ ಏಕಮಾತ್ರ ಸಂಗಾತಿ ; ಹೊಲಗಳು ಅರಮನೆ ಹಸುಗಳು ದಾಸರು ರೈತರು ಕಣಜಗಳು—ಇವೆಲ್ಲದರ ಮೇಲ್ವಿಚಾರಕ ; ಎಲ್ಲ ನಾವೆ ನೌಕೆಗಳ ನಿಯಂತ್ರಕ ; ನಿರ್ಮಾಣ ಕಾರ್ಯಗಳ ಮೇಲಧಿಕಾರಿ ; ಪ್ರಭುತ್ವದ ಮುಖ್ಯ ಅಧಿಕಾರಿ : ಪರಮನ್ಯಾಯಮೂರ್ತಿ ; ಉಚ್ಚತಮ ಕಂದಾಯ ಅಧಿಕಾರಿ ; ವಿದೇಶೀಯ ಕಪ್ಪಕಾಣಿಕೆಗಳ ಸಂಗ್ರಾಹಕ ; ಯುದ್ಧ

ಮಂತ್ರಿ........

ಇವಲ್ಲದೆ, ಪ್ರಾಂತದ ಗಡಿಗಳನ್ನು ಅವನು ನಿರ್ಧರಿಸಬೇಕು; ಭೂಮಿಯನ್ನು ಹಂಚಬೇಕು; ಕಂದಾಯ ಬಾಕಿಯನ್ನು ವಸೂಲು ಮಾಡಬೇಕು; ಕಳ್ಳತನಗಳಾಗದಂತೆ ನೋಡಿಕೊಳ್ಳಬೇಕು; ಪ್ರಾಂತಪಾಲರ ದೂರುಗಳನ್ನು ಗಮನಿಸಬೇಕು........

ದೇವಮಂದಿರದಿಂದ ಪೆರೋ ಹಿಂತಿರುಗುವ ವೇಳೆಗೆ ಅಮಾತ್ಯ ಪಲ್ಲಕಿಯಿಂದ ಇಳಿದು ಬಂದು ಅರಮನೆಯ ಸಭಾಭವನದಲ್ಲಿ ಕಾದಿರುತ್ತಿದ್ದ.

ಪೆರೋಗೆ ಬಾಗಿ ನಮಿಸಿ ಆತ ಹೇಳುತ್ತಿದ್ದ :

" ನಿಮ್ಮ ವ್ಯವಹಾರಗಳೆಲ್ಲ ಸುಭದ್ರವಾಗಿವೆ ; ನಿಮ್ಮ ಸಂಪತ್ತು ಹೆಚ್ಚಿದೆ ; ಪ್ರತಿಯೊಬ್ಬ ಹೊಣೆಗಾರ ಅಧಿಕಾರಿಯೂ 'ನಿಮ್ಮ ವ್ಯವಹಾರಗಳೆಲ್ಲ ಸುಭದ್ರವಾಗಿವೆ. ನಿಮ್ಮ ಸಂಪತ್ತು ಹೆಚ್ಚಿದೆ' ಅಂತ ವರದಿ ಮಾಡಿದ್ದಾನೆ."

ಮುಂದೆ ಮಹತ್ವದ ವಿಷಯಗಳೇನಾದರೂ ಇದ್ದ ದಿವಸ ಕೊಂಚ ಹೊತ್ತು ಮಾತುಕತೆ. 'ಪೆರೋನಿಂದ ನಿರ್ದೇಶ ನೀಡಿಕೆ' ಎಂದು ಔಪಚಾರಿಕವಾಗಿ ಎನ್ನುವುದು ಇದಕ್ಕೇ....'

(ಈ ದಿನ ಅಮಾತ್ಯ ತುಸು ಕಾಯಬೇಕಾಯಿತು.

ಪೆರೋ ನುಡಿದ :

" ನಾವು ಏಳುವುದು ತಡವಾಯಿತು. ಮಹಾ ಅರ್ಚಕರದೇ ಯೋಚನೆಯಾಗಿ ನಿದ್ದೆ ಸರಿಯಾಗಿ ಬರಲಿಲ್ಲ. ನಾಯಕ ಏನಂತೆ ?"

" ಈಗ ಭೇಟಿಗೆ ಕರೆದಿದ್ದೇನೆ. ಮಹತ್ವದ್ದೇನಾದರೂ ಇದ್ದರೆ ತಿಳಿಸಿ ಹೋಗ್ತೇನೆ."

"ಅತಿಥಿಗೃಹದ ಅಧಿಕಾರಿಯ ಪ್ರಕಾರ ಇವನು ತೀರಾ ಸಾಮಾನ್ಯ ಮನುಷ್ಯ"

" ನೋಟಕ್ಕೆ ಹಾಗಿದ್ದಾನೆ. ಇದನ್ನು ಕೆಪ್ಟು ಆ ದಿನವೇ ಹೇಳ್ಲಿಲ್ಲವೆ? ಇವನು ಜನಸಾಮಾನ್ಯರ ನಾಯಕ."

" ನಿಮ್ಮ ಸ್ಪರ್ಶದಿಂದ ಅವನು ಮಣ್ಣಾಗ್ತಾನೋ ಬಂಗಾರವಾಗ್ತಾನೋ ನೋಡೋಣ."

ಅಮಾತ್ಯ ಏನನ್ನೂ ಹೇಳಲಿಲ್ಲ, ಪೆರೋ ಅಂಗೈ ಬೀಸುವುದನ್ನೇ ಅವನು ಕಾಯುತ್ತಿದ್ದ. ಆ ಸಂಜ್ಞೆ ಕಂಡೊಡನೆ ಅವನು ಪೆರೋಗೆ ನಮಿಸಿದ.

ಪೆರೋ ಒಳಹೋಗಲು ಹೊರಳಿದೊಡನೆಯೇ ಅಮಾತ್ಯ ತನ್ನ ಭವನದತ್ತ ಸಾಗಿದ.)

ಮತ್ತೊಬ್ಬ ಸೇವಕ ಓಡಿಬಂದು, "ಅಮಾತ್ಯರು ಬಂದ್ರು," ಎಂದ; ಆ ಆಗಮನವನ್ನು ಸೂಚಿಸಲೆಂದು, ಬಾಗಿಲ ಬಳಿ ತೂಗಹಾಕಿದ್ದ ಕಂಚಿನ ಜಾಗಟೆಯನ್ನು ತುದಿಗೆ ತೊಗಲು ಸುತ್ತಿದ್ದ ಕೋಲಿನಿಂದ ಹೊಡೆದು, ಢಣ್ ಎನಿಸಿದ.

ವೇದಿಕೆಯತ್ತ ಮುಖ ಮಾಡಿ ನಿಂತಿದ್ದ ಸೆನೆಬ್ ಮತ್ತು ಮೆನೆಪ್‌ಟಾ ಬಾಗಿಲ ಕಡೆ ತಿರುಗಿದರು.

ಅರಮನೆಯಿಂದ ಅಲ್ಲಿಗೆ ಕೆಲವೇ ಹೆಜ್ಜೆಗಳ ಶೀಘ್ರನಡಿಗೆ.

ಹೊಸ್ತಿಲು ದಾಟಿ ಒಳಗೆ ಬಂದುದು, ಇಳಿಹರೆಯದಲ್ಲೂ ಚಲನೆ ದೃಢ ವಾಗಿದ್ದ ನೀಳಶರೀರ. ಗೋದಿಗೆಂಪು ಮೈಬಣ್ಣ. ಬೈತಲೆ ತೆಗೆದು ಎರಡು ಪಕ್ಕಗಳಿಗೂ ಹಿಂದಕ್ಕೂ ಕತ್ತಿನ ತನಕ ಬಾಚಿ ಇಳಿಬಿಟ್ಟಿದ್ದ ಅರ್ಧಕ್ಕರ್ಧ ನರೆತ ತಲೆಗೂದಲು. ಅವನ ಕತ್ತನ್ನೂ ಎದೆಯನ್ನೂ ಅಲಂಕರಿಸಿದ್ದುವು ಬಗೆಬಗೆಯ ಅಮೂಲ್ಯ ಹರಳುಗಳನ್ನು ಇರಿಸಿ ಮಾಡಿದ್ದ ಬಂಗಾರದ ಸರಗಳು. ಮೊಣ ಕಾಲಿನ ವರೆಗೂ ನಡುವನ್ನು ಆವರಿಸಿತ್ತು ಉತ್ತಮ ವಸ್ತ್ರ; ಬೆಳ್ಳಿಯ ನಡುಪಟ್ಟಿ. ಬೆರಳಲ್ಲಿ ಸ್ವರ್ಣದ ಮುದ್ರಾ ಉಂಗುರ. ಮುಖಕ್ಷೌರ ಮಾಡಿಸಿಕೊಂಡಿದ್ದುದ ರಿಂದ ಗಲ್ಲ ತುಟಿಗಳು ನುಣುಪಾಗಿದ್ದುವು. ಪಾದಗಳಿಗೆ ಮೃದು ತೊಗಲಿನ ರಕ್ಷೆ. ಬಲಗೈಯಲ್ಲಿ ನೀಳ ಅಧಿಕಾರ ದಂಡ–ಅಮಾತ್ಯ ಲಾಂಛನ.

ಆಮೆರಬ್‌ನನ್ನು ಕಂಡೊಡನೆ ಮೆನೆಪ್‌ಟಾ ತನ್ನ ಮಗ್ಗುಲಿಗೆ ದೃಷ್ಟಿ ಹಾಯಿಸಿದ. ಅಲ್ಲಿರಲಿಲ್ಲ ಲಿಪಿಕಾರ. ತನ್ನೊಬ್ಬನನ್ನೇ ವಿಶಾಲ ಭವನದ ಮಧ್ಯದಲ್ಲಿ ನಗ್ನನಾಗಿ ನಿಲಿಸಿದ್ದಾರೆ ಎನಿಸಿತು ಮೆನೆಪ್‌ಟಾಗೆ. ಆತ ತಬ್ಬಿಬ್ಬಾದ. ಆದರೂ ಮಂದಹಾಸ ಸೂಸಿ ತನ್ನೆಡೆ ಬರುತ್ತಿದ್ದ ವ್ಯಕ್ತಿಗೆ ನಮಿಸಿದ.

ಒಳಬಂದೊಡನೆಯೇ ಲಿಪಿಕಾರನ ಪಕ್ಕದಲ್ಲಿದ್ದಾತನನ್ನು ಆಮೆರಬ್ ನೋಡಿದ. ಪೆರೋಗೆ ಈತನ ಮೈತ್ರಿ ಬೇಕು. ಐಗುಪ್ತದ ಐಕ್ಯಕ್ಕೆ, ಭದ್ರತೆಗೆ, ನೆಮ್ಮದಿಗೆ ಅದು ಅಗತ್ಯ. ಸಜ್ಜನನಂತೆ ತೋರುವ ಈ ವ್ಯಕ್ತಿಯಿಂದ ಅದನ್ನು ಪಡೆಯುವುದು ಕಷ್ಟವೆ?

ನಮಿಸುತ್ತಿದ್ದವನ ಹತ್ತಿರ ಸಮೀಪಿಸಿದೊಡನೆ ಆಮೆರಬ್ ನಿಂತ. ತನ್ನ

ಎಡಗೈ ಬೆರಳುಗಳಿಂದ ನಾಯಕನ ಬಲತೋಳನ್ನು ಮುಟ್ಟಿ, "ಮೆನೆಪ್‌ಟಾ," ಎಂದ- ಯಾವ ಪ್ರತಿಕ್ರಿಯೆಯನ್ನೂ ನಿರೀಕ್ಷಿಸದೆ, ತಾನು ಮುಂದಕ್ಕೆ ಸಾಗಿದ "ಬನ್ನಿ" ಎನ್ನುತ್ತ.

ಅವನ ಹಿಂದೆಯೇ ಇದ್ದರು—ಒಬ್ಬ ಕಟ್ಟಾಳು ಸಶಸ್ತ್ರ ಭಟ, ಲಿಪಿಸುರುಳಿಗಳ ಜಾಡಿಯನ್ನು ಹೊತ್ತಿದ್ದ ಸೇವಕನೊಬ್ಬ, ಯುವಕ ಲಿಪಿಕಾರರಿಬ್ಬರು.

ಮೆನೆಪ್‌ಟಾ ವೇದಿಕೆಯನ್ನೇನೋ ಏರಿದ. ಆದರೆ ಎಲ್ಲಿ ಕುಳಿತುಕೊಳ್ಳಬೇಕು? ಎಷ್ಟು ದೂರದಲ್ಲಿ? ಆಮೆರಬ್ ತನ್ನ ಪೀಠದ ಮೇಲೆ ಕುಳಿತೊಡನೆಯೇ ಆ ಸಮಸ್ಯೆ ಬಗೆಹರಿಯಿತು. ಬಲಪಾರ್ಶ್ವದಲ್ಲಿ ತನಗೆ ತೀರಾ ಹತ್ತಿರದಲ್ಲಿದ್ದ ಪೀಠದತ್ತ ಬೊಟ್ಟು ಮಾಡಿ, ಆತ "ಕುಳಿತುಕೊಳ್ಳಿ," ಎಂದ.

ಆಸೀನನಾದ ನಾಯಕನನ್ನು ಅವನು ಕೇಳಿದ :

"ಅತಿಥಿಗೃಹದಲ್ಲಿ ಎಲ್ಲ ಅನುಕೂಲವಾಗಿದೆಯಾ ? "

"ಹಹ್ಞ."

ಹೊರ ಹೋಗಿ ನೋಡಿ ಬಂದ ಹಿರಿಯ ಲಿಪಿಕಾರ ಕಿವಿಯಲ್ಲೇನೋ ಉಸುರಲು, "ಬರಲಿ, ಮಾತಾಡಿ ಕಳಿಸಿಬಿಡೋಣ" ಎಂದ ಆಮೆರಬ್.

ಹೊರಗೆ ಒಂದು ಗುಂಪು ನೆರೆಯುತ್ತಿದ್ದುದು ಮೆನೆಪ್‌ಟಾಗೆ ಕುಳಿತಲ್ಲಿಂದಲೇ ಕಾಣಿಸಿತು. ಆ ಗುಂಪಿಗಿಂತ ತುಸು ದೂರದಲ್ಲಿ ತನ್ನ ಪರಿವಾರದವರನ್ನು ಕಂಡಂತಾಯಿತು.

ಸೆನೆಬ್ "ಪ್ರವಾಸಿಗಳ ಅಧಿಕಾರಿಯನ್ನು ಕರಿ," ಎಂದ, ಒಬ್ಬ ಸೇವಕನಿಗೆ.

"ಪ್ರವಾಸಿಗಳ ಅಧಿಕಾರಿಯವರು ಸನ್ನಿಧಿಗೆ ಬರಬೇಕೂಂತ ಅಪ್ಪಣೆಯಾಗಿದೆ." ಎಂದು ಬಾಗಿಲ ಬಳಿ ನಿಂತು ಹೊರನೋಡುತ್ತ, ಸೇವಕ ಸಾರಿದ.

ಆ ಅಧಿಕಾರಿ ಒಳಬಂದು, ವೇದಿಕೆಯ ತುಸು ದೂರದಲ್ಲೇ ನಿಂತು, "ಪೆರೋನ ಸಂಪತ್ತು ವರ್ಧಿಸಲಿ," ಎಂದು ಉದ್ಗರಿಸಿ, ಅಮಾತ್ಯನಿಗೆ ಬಾಗಿ ನಮಿಸಿದ.

"ಏನು ಖೊನ್ಸು ? " ಎಂದು ಪ್ರಶ್ನಿಸಿದ ಆಮೆರಬ್.

ಅಧಿಕಾರಿ ಖೊನ್ಸು ಒಂದೊಂದು ಪದವನ್ನು ನುಂಗುತ್ತ ಅವಸರ ಅವಸರವಾಗಿ ನುಡಿದ :

"ರಾಜಧಾನಿಗೆ ಬರೋ ಪ್ರವಾಸಿಗಳಿಗೆ ಊಟಕ್ಕೆ ಸ್ವಲ್ಪ ತೊಂದರೆ

ಯಾಗ್ತಿದೆ. ಭೋಜನ ಗೃಹಗಳಲ್ಲಿ ಗೋದಿ, ಯವೆ ವಾಸ್ತಾನು ಸಾಕಷ್ಟಿಲ್ಲ. ಕುಯಿಲು ಆಗಿ ಹೊಸ ಧಾನ್ಯ ಬರೋವರೆಗೂ ಗೋದಿ ಪೂರೈಕೆಗಾಗಿ ಏನಾದರೂ ಮಾಡ್ಬೇಕು ಅಂತ ಅರಿಕೆ."

ಅಮಾತ್ಯನೆಂದ :

"ಒಳ್ಳೇದು. ರಾಜಕಣಜದಿಂದ ಅಗತ್ಯವಿರುವಷ್ಟು ಆಹಾರಧಾನ್ಯ ಬಿಡುಗಡೆ ಮಾಡೋದಕ್ಕೆ ಆದೇಶ ನೀಡ್ತೇನೆ."

ಎಳೆಯ ಲಿಪಿಕಾರರಲ್ಲೊಬ್ಬ ಅಮಾತ್ಯನ ಉತ್ತರವನ್ನು ಬರೆದುಕೊಂಡ. ಇನ್ನೊಬ್ಬ ಕಣಜದ ಅಧಿಕಾರಿಗೆ ನೀಡಬೇಕಾದ ಆದೇಶವನ್ನು ಅಣಿಗೊಳಿಸಿದ.

ಪ್ರವಾಸಿಗಳ ಅಧಿಕಾರಿ, "ಪೆರೋನ ಸಂಪತ್ತು ವರ್ಧಿಸಲಿ," ಎಂದು ಮತ್ತೊಮ್ಮೆ ಉದ್ಗರಿಸಿ, ಅಮಾತ್ಯನಿಗೆ ವಂದಿಸಿ, ನಾಲ್ಕು ಹೆಜ್ಜೆ ಹಿಂದೆ ಹಿಂದಕ್ಕೆ ಸರಿದು, ಬಳಿಕ ವೇದಿಕೆಗೆ ಬೆನ್ನು ಹಾಕಿ ಹೊರಟು ಹೋದ.

ಅನಂತರ ಬಂದವನು ಒಳನಾಡು ಸಾರಿಗೆ ಅಧಿಕಾರಿ. ಅವನ ಹೆಸರೂ ನೆನಪಿತ್ತು ಅಮಾತ್ಯನಿಗೆ.

ಬಹ್ವಂಶ ಸಾರಿಗೆ ನೀಲನದಿಯಲ್ಲೇ ಆದರೂ, ಒಳನಾಡಿನಲ್ಲಿ ಅಷ್ಟಿಷ್ಟು ಹೇರು ಸಾಗಣೆ ಕತ್ತೆಗಳ ಮೇಲೆ ನಡೆಯುತ್ತಿತ್ತು. ದೇಶದ ಎಲ್ಲ ಕತ್ತೆಗಳ ಐದರಲ್ಲೊಂದು ಭಾಗ ಪ್ರಭುತ್ವದ ಸೊತ್ತು. ಈ ಪ್ರಾಣಿಕಂದಾಯದ ವಸೂಲಿ ತೃಪ್ತಿಕರವಾಗಿ ಆಗದೆ, ಪ್ರಭುತ್ವದ ಸಾರಿಗೆಗೆ ಸಾಕಷ್ಟು ಕತ್ತೆಗಳು ದೊರೆಯದೆ, ತೊಂದರೆಯಾಗಿತ್ತು.

"ಕತ್ತೆಗಳು ಸಾಕಷ್ಟಿಲ್ಲ ಅಂತ ಅರಿಕೆ ಮಾಡ್ಕೊಂಡಿದ್ದೆ. ಜ್ಞಾಪಿಸೋಣ ಅಂತ ಬಂದೆ."

ನೆರಿಗೆ ಕಟ್ಟಲು ಯತ್ನಿಸಿದ ಹಣೆಯನ್ನೊಮ್ಮೆ ನಡು ಬೆರಳನಿಂದ ತೀಡಿ ಅಮಾತ್ಯನೆಂದ :

"ಕುಯಿಲಿಗೆ ಮುಂಚೆ ಪ್ರಾಣಿ ಗಣತಿ ವರದಿಗಳು ಸಿದ್ಧವಾಗ್ತವೆ. ಮುಂದಿನ ಸಲ ಕಂದಾಯ ವಸೂಲಿಗೆ ಹೋದಾಗ, ಬರಬೇಕಾದ ಕತ್ತೆ, ಹಸು, ಎತ್ತುಗಳನ್ನೂ ವಶಪಡಿಸಿಕೊಳ್ತೇವೆ. ಆಗ ನಿನ್ನ ಸಮಸ್ಯೆ ತಾನಾಗಿಯೇ ಬಗೆ ಹರೀತದೆ."

ಒಳನಾಡು ಸಾರಿಗೆ ಅಧಿಕಾರಿ ನಿರ್ಗಮಿಸಿದ ಬಳಿಕ ಆಮೆರಬ್ ಮೆನೆಪ್‌ಟಾ

ನೊಡನೆ ಅಂದ :

" ಐಗುಪ್ತ ದೇಶದ ಸರ್ವಸ್ವವೂ ಪೆರೋನ ಸೊತ್ತು. ಅದು ದೇವರಿಂದ ಅನುಗ್ರಹಿಸಲ್ಪಟ್ಟದ್ದು. ಆದರೂ ದಯಾಮಯ ಪೆರೋ ಇದರಲ್ಲಿ ಒಂದು ಭಾಗ ಮಾತ್ರ ತಮಗೆ ಸಾಕು ಎನ್ನುತ್ತಾರೆ. ಈ ದೇವಭೂಮಿ ಬಲಾಢ್ಯವಾಗ ಬೇಕಾದರೆ ಭಾರೀ ಸೈನ್ಯ ಬೇಕು. ಐವರಲ್ಲೊಬ್ಬರು ಯೋಧರಾದರೆ ತಾನೆ ಅಂಥ ದಂಡು ಸಾಧ್ಯ ? ಏನು ಹೇಳ್ತೀರಿ, ನಾಯಕರೆ ?"

ಮೆನೆಪ್‌ಟಾ ಬರಿಯ ಮುಗುಳು ನಗೆಯ ಉತ್ತರವನ್ನಷ್ಟೇ ನೀಡಿದ.

ಅಮಾತ್ಯ ನಗುತ್ತ ಅಂದ :

" ಮೌನ, ಮಾತಿನ ಮಿತಬಳಕೆ ಶ್ರೇಷ್ಠ ರಾಜನೀತಿಜ್ಞರ ಗುಣಗಳು. ಇದಕ್ಕೇನು ಹೇಳ್ತೀರಾ ?"

ಈ ಸಲವೂ ಸುಮ್ಮನಿರುವುದು ಸಾಧ್ಯವಿರಲಿಲ್ಲ. ಮೆನೆಪ್‌ಟಾನೆಂದ :

" ನೀರಾನೆ ಪ್ರಾಂತದ ನಾವು ಸರಳ ಜನ. ರಾಜನೀತಿ ಕುಶಲರಲ್ಲ."

" ನೇರ ನಡತೆಯ ಸಾಮಾನ್ಯ ರೀತಿಯ ಜನ. ಯಾರು ಈ ಮಾತನ್ನು ಇಲ್ಲಿ ಈ ವೇದಿಕೆಯ ಮೇಲೆ ಈ ಮೊದಲು ಹೇಳ್ದೋರು ? ಆ್ಞ ! ಕೆಫ್ರು. ಜಾಣ ವರ್ತಕ. ನಿಯತ್ತಿನ ಮನುಷ್ಯ. ನಿಮ್ಮ ಸಮಾಚಾರ ನಮಗೆ ಸರಿ ಯಾಗಿ ತಿಳಿದದ್ದೇ ಅವನಿಂದ."

ಈ ಸಂವಾದ ನಡೆಯುತ್ತಿದ್ದಂತೆ ಹಿರಿಯ ಲಿಪಿಕಾರ ಸದ್ದಿಲ್ಲದೆ ಹೊರಕ್ಕೆ ನುಸುಳಿ, ಅಲ್ಲಿದ್ದವರನ್ನು ನೋಡಿ, ಮರಳಿದ.

" ಇನ್ನೂ ಯಾರಾದರೂ ಇದ್ದಾರೊ ?"

ಆಮೆರಬ್‌ನ ಪ್ರಶ್ನೆಗೆ ಗಟ್ಟಿಯಾಗಿ ಉತ್ತರ ನೀಡಲು ಸೆನೆಬ್ ಹಿಂಜರಿ ದಂತೆ ಕಂಡಿತು. ಅದನ್ನು ಗಮನಿಸಿ ಅಮಾತ್ಯ ಕೇಳಿದ :

" ಹೆಸರು ಹೇಳೋದಕ್ಕೆ ಸಂಕೋಚವೆ ?"

" ನುಟ್‌ಮೋಸ್," ಎಂದ ಸೆನೆಬ್, ಹೆಸರು ಹೇಳಲು ತಾನು ಹಿಂಜ ದದ್ದು ಸಕಾರಣವಾಗಿತ್ತೆಂಬುದನ್ನು ಧ್ವನಿಯಲ್ಲೇ ತೋರ್ಪಡಿಸುತ್ತ.

ನುಟ್‌ಮೋಸ್ !

ಇದ್ದಕ್ಕಿದ್ದಂತೆ ಮೆನೆಪ್‌ಟಾನ ದೋಣಿ ನೀರಿನೊಳಗಿನ ಮರಳದಿನ್ನೆಯನ್ನು ಒರೆಸಿತ್ತು.

ಮೆನೆಪ್‌ಟಾನೆಡೆಗೆ ಮುಗುಳುನಗೆ ಬೀರಿ, ಅಮಾತ್ಯನೆಂದ :

" ನುಟ್‌ಮೋಸ್ ನಿಮಗೆ ಗೊತ್ತಿರಬೇಕು."

ನಾಯಕ ಗೋಣು ಆಡಿಸಿದೊಡನೆ ಸೆನೆಬ್‌ನೆಡೆಗೆ ತಿರುಗಿ, ತುಸು ಧ್ವನಿ ಏರಿಸಿ, ಆಮೆರಬ್ ನುಡಿದು :

" ಸಂದರ್ಶನಕ್ಕೆ ಬರಹೇಳಿಲ್ವಲ್ಲ....ಯಾಕೆ ಬಂದ ಇವತ್ತು? (ಲಿಪಿಕಾರ ಸೆನೆಬ್ ತುಟಿಕಚ್ಚಿದ ) ನಿನ್ನ ಏರ್ಪಾಟೊ ? (ಸೆನೆಬ್ ನಿರುತ್ತರ) ಇನ್ನು ಮುಂದೆ ಹೀಗೆ ಮಾಡ್ಬೇಡ. ಅವನಿಗೆ ಹೊರಟು ಹೋಗೋದಕ್ಕೆ ಹೇಳು ಕರೀದೆ ಇಲ್ಲಿಗೆ ಬರಬಾರ್ದು ಅಂತ ತಿಳಿಸು."

ಲಿಪಿಕಾರನ ಮುಖ ಕೆಂಪಡರಿತು. ಆತ ತಲೆ ತಗ್ಗಿಸಿ ಬಾಗಿಲಿನತ್ತ ನಡೆದ.

ಸ್ವರದಲ್ಲಿ ಮತ್ತೆ ಮಾರ್ದವತೆ ತುಂಬಿ ಅಮಾತ್ಯನೆಂದ :

" ನನ್ನ ಹತ್ತಿರ ಬಂದರೆ, ಎಂಥ ಕೆಲಸವಾದರೂ ಆಗ್ತದೆ ಅಂತ ಹಲವರ ಅಭಿಪ್ರಾಯ. ಒಂದು ಕ್ಷಣ ಎಚ್ಚರ ತಪ್ಪಿದರೂ ಸಾಕು, ಬಿಗಿ ಸಡಿಲ್ತದೆ, ಶಿಸ್ತು ಮಾಯವಾಗ್ತದೆ."

ಕೈಸನ್ನೆಯಿಂದಲೇ ನುಟ್‌ಮೋಸ್‌ನನ್ನು ಹೋಗಲು ಹೇಳಿ, ಬೇರೆ ಮೂವರನ್ನು ಒಳಕ್ಕೆ ಕಳುಹಿಸಲು ಸೇವಕರಿಗೆ ಸೂಚನೆ ಇತ್ತು, ಸೆನೆಬ್ ವೇದಿಕೆ ಯತ್ತ ಧಾವಿಸಿದ. ತನ್ನನ್ನು ಕುರಿತ ಮಾತುಕತೆಯನ್ನು ಬೆಳೆಯಗೊಡು ವುದು ಅವನಿಗೆ ಇಷ್ಟವಿರಲಿಲ್ಲ.

ಒಳಗೆ ಬಂದವರು ಶಿಲ್ಪಿ, ಚಿತ್ರಕಾರ ಮತ್ತು ಅಕ್ಕಸಾಲಿಗ. ಶಿಲ್ಪಿಯ ಕೈಯಲ್ಲಿ ಪೆಪೈರಸ್‌ನ ನೀಳ ಸುರುಳಿ ಇತ್ತು. ಚಿತ್ರಕಾರ ಹಲವು ಸುರುಳಿಗಳ ಕಟ್ಟನ್ನೇ ತಂದಿದ್ದ. ಅಕ್ಕಸಾಲಿಗನ ಕೈಯಲ್ಲೂ ಕೆಲವು ಸುರುಳಿಗಳಿ ದ್ದುವು.

ತಾವು ತಂದುದೆಲ್ಲವನ್ನೂ ಅವರು ವೇದಿಕೆಯ ಮೇಲಿರಿಸಿದರು.

ಶಿಲ್ಪಿ :

" ತಾವು ಸೂಚಿಸಿದ ತಿದ್ದುಪಡಿಗಳನ್ನೆಲ್ಲ ಸೇರಿಸಿ ಬೇರೆಯೇ ನಕಾಶೆ ಸಿದ್ಧ

ಪಡಿಸಿದ್ದೇನೆ. ಒಳ, ಹೊರ ನಕಾಶೆ ಎರಡೂ ಇವೆ."

ಚಿತ್ರಕಾರ :

"ಚಿತ್ರದ ಅಂತಿಮ ಮಾದರಿಗಳೆಲ್ಲ ಇಲ್ಲಿವೆ ಅಮಾತ್ಯವರ್ಯ. ಒಪ್ಪಿಗೆ ನೀಡಿದ ಕೂಡಲೇ ಕೆಲಸ ಆರಂಭಿಸ್ತೇವೆ."

ಅಕ್ಕಸಾಲಿಗ :

"ತೀರಾ ಹೊಸ ಬಗೆಯ ಆಭರಣಗಳ ಮಾದರಿ ಚಿತ್ರಗಳು, ಸಮ್ಮತ ವಾದರೆ ಬಂಗಾರ ಅಳೆದು ಕೊಡಬಹುದು."

ಚಿತ್ರಕಾರ ಯುವಕ. ಶಿಲ್ಪಿಯೂ ಅಕ್ಕಸಾಲಿಗನೂ ನಡುವಯಸ್ಸಿನ ಹತ್ತಿರದವರು. ಆ ಮೂವರನ್ನೂ ದಿಟ್ಟಿಸಿ ಅಮಾತ್ಯ ಹೇಳಿದ :

"ನಿಮ್ಮ ನಿಮ್ಮ ಕ್ಷೇತ್ರಗಳ ಪರಮ ಶ್ರೇಷ್ಠರು ನೀವು. ಹೋದ ಸಲವೇ ನಾನು ಹೇಳಿದ ಹಾಗೆ ನೀವು ನಡೆಸಿರುವ ಪೂರ್ವ ತಯಾರಿಯ ವಿಷಯದಲ್ಲಿ ಮಹಾಪ್ರಭು ಅತ್ಯಂತ ಸಂತುಷ್ಟರಾಗಿದ್ದಾರೆ. ಹೋರಸ್ ಸಮಾನರಾದ ನಮ್ಮ ಪೆರೋನ ಗೋರಿ ಅಭೂತಪೂರ್ವವಾಗಿ ರಚನೆ ಯಾಗ್ತದೆ ಅನ್ನೋ ವಿಷಯದಲ್ಲಿ ನನಗೇನೂ ಸಂದೇಹವಿಲ್ಲ. ಈ ನಕಾಶೆ, ಮಾದರಿ ಚಿತ್ರಗಳನ್ನೆಲ್ಲ ಮಹಾಪ್ರಭುವಿನ ಚಿತ್ತಕ್ಕೆ ತಂದು, ಅನುಮತಿ ದೊರಕಿಸಿ, ನಿಮಗೆ ಕರೆಕಳಿಸ್ತೇವೆ. ನಿಮಗೂ ಈಗ ನಿಮ್ಮ ಸಹಾಯಕ ರಿಗೂ ಮೂರು ತಿಂಗಳಿಗಾಗುವಷ್ಟು ಧಾನ್ಯ ತೈಲಗಳನ್ನು ಪೂರೈಕೆ ಮಾಡ ಬೇಕೂಂತ ಕಣಜದ ಅಧಿಕಾರಿಗಳಿಗೂ ಉಗ್ರಾಣದ ಅಧಿಕಾರಿಗೂ ಆದೇಶ ನೀಡ್ತೇವೆ. ನೀವು ಹೋಗಬಹುದು."

ಆ ಮೂವರೂ ನಮಿಸಿ, ಸಂತೃಪ್ತರಾಗಿ, ಹೊರಬಿದ್ದರು.

ಎಳೆಯ ಲಿಪಿಕಾರರತ್ತ ನೋಡಿ ಅಮಾತ್ಯನೆಂದ :

"ಈ ಸುರುಳಿಗಳನ್ನೆಲ್ಲ ಜೋಪಾನವಾಗಿ ಪೆಟಾರಿಲ್ಲಿಟ್ಟು ಕಳುಹಿಸಿ ಕೊಡಿ. ಸೆನೆಬ್, ನೀನೆ ಹೋಗಿ ತಲಪಿಸಿ ಬಾ. ಮಹಾಸನ್ನಿಧಿಗೆ. ಸಂದರ್ಶಕರು ಇನ್ನೂ ಯಾರಾದರೂ ಇದ್ದಾರೋ ?"

ಸೆನೆಬ್ ಅಂದ :

"ಇಲ್ಲ. ಅಮಾತ್ಯರಿಗೆ ಬಿಡುವಾದರೆ ತಮ್ಮನ್ನು ಕರೀಬೇಕು ಅಂತ ಅರ್ಚಕ ಇನೇನಿ ಹೇಳಿದ್ದಾರೆ."

ಕಂಡೂ ಕಾಣಿಸದಂಥ ಅಸಹನೆಯ ತೆರೆ ಅಮಾತ್ಯನ ಮುಖದ ಮೇಲೆ ಮೂಡಿತು.

"ಇವತ್ತು ಬಿಡುವಿಲ್ಲ. ನಾಳೆ ಬರಲಿ."

ಮಹಾ ಅರ್ಚಕ ಹೇಪಾಟ್‌ಗೆ ರಹಸ್ಯವಾಗಿ ಸುದ್ದಿ ಕಳುಹಿಸುವವನೇ ಇನೇನಿ. ನೀರಾನೆ ಪ್ರಾಂತದ ನಾಯಕನನ್ನು ರಾಜಧಾನಿಗೆ ಕರೆಸಿದ್ದಾರೆಂದು ಅವನ ಕುತೂಹಲ ಕೆರಳಿತು. ಇದರಲ್ಲಿ ನಿಗೂಢವಾದುದೇನಾದರೂ ಇದೆಯೆ ಎಂದು ತಿಳಿಯುವ ತವಕ. ಅದೂ ಇದೂ ಮಾತನಾಡಿ ಕೆದಕಿ ತಿಳಿಯಲೆಂದು ಅಮಾತ್ಯ ಸಂದರ್ಶನ—ಅದು ಕೂಡಾ ಮೆನೆಪ್‌ಟಾ ಒಳಗಿರುವಾಗಲೇ. ಇನೇನಿ ಎಷ್ಟು ಚಾಣಾಕ್ಷ ಎಂಬುದನ್ನು ಆಮೆರಬ್ ಬಲ್ಲ.

ಪೆಟಾರಿ ಸಿದ್ಧವಾಯಿತು. ಸೆನೆಬ್ ಇನ್ನೂ ನಿಂತೇ ಇದ್ದ.

"ಪೆಟಾರಿ ಎತ್ಕೊಳ್ಳಿ....ನೀವೆಲ್ಲ ಹೋಗಿ."

ಅವರು ಹೊರಟು, ಮೆನೆಪ್‌ಟಾ ಮತ್ತು ತಾನು ಇಬ್ಬರೇ ಉಳಿದಾಗ, ಆಮೆರಬ್ ಪೀಠದ ಮೇಲೆ ಮೈ ಸಡಿಲಬಿಟ್ಟ.

ತಲೆವಾಗಿಲ ಕಡೆಗೊಮ್ಮೆ ನೋಡಿ ತಗ್ಗಿದ ಸ್ವರದಲ್ಲಿ ಅವನೆಂದ:

"ಐಗುಪ್ತದ್ದು ಧರ್ಮರಾಜ್ಯ. ಫೆರೋ ದೇವರ ಅವತಾರ. ಆನ್ ನಗರಿಯ ರಾ ಇರಲಿ, ಮೆಂಫಿಸಿನ ಪ್‌ಟಾ ಇರಲಿ, ವೆಸಿಯ ಅಮನ್ ಇರಲಿ—ಅವರಿಗೆಲ್ಲ ಪ್ರಥಮ ಪೂಜೆ ಸಲ್ಲೋದು ಫೆರೋನಿಂದ. ಮಹಾ ಅರ್ಚಕರ ಸ್ಥಾನ ಏನಿದ್ದರೂ ಫೆರೋಗಿಂತ ಕೆಳಗೆ. ದೇಶದ ದೇವಮಂದಿರಗಳ ವ್ಯವಸ್ಥೆ ಅವರ ಹೊಣೆ. ಜನನ ಫಲ ಲೇಖನ, ವಿವಾಹ ವಿಧಿ, ಯುದ್ಧದಲ್ಲಿ ವಿಜಯಕ್ಕಾಗಿ ವಿಶೇಷ ಪೂಜೆ, ಸೆಡ್ ಉತ್ಸವ, ಈ ಲೋಕದಲ್ಲಿ ಆಳ್ವಿಕೆ ಮುಗಿದಾಗ ಪರಲೋಕಕ್ಕೆ ವಿದಾಯ ನುಡಿ—ಇವೆಲ್ಲ ಅವರಿಂದ ಆಗಬೇಕಾದ ಧಾರ್ಮಿಕ ಕ್ರಮಗಳು. ದಿನನಿತ್ಯದ ಆಡಳಿತದಲ್ಲಿ ಅವರು ಕೈ ಹಾಕಬೇಕು ಅಂತ ಯಾರೂ ನಿರೀಕ್ಷಿಸೋದಿಲ್ಲ. ಅಂಥ ಹಸ್ತಕ್ಷೇಪ ಧರ್ಮಸಮ್ಮತವಲ್ಲ."

ತಾನು ಸುರಿದುದು ಎಷ್ಟು ಆಳಕ್ಕೆ ಇಳಿಯಿತು ಎಂದು ಅರಿಯಲು ಬಯಸಿ ಆಮೆರಬ್ ಮೆನೆಪ್‌ಟಾನನ್ನು ಸೂಕ್ಷ್ಮವಾಗಿ ದಿಟ್ಟಿಸಿದ.

ನಾಯಕ ನುಡಿದ :

"ನಮ್ಮೂರಿನ ದೇವಮಂದಿರದ ಅರ್ಚಕ ಅಪೆಟ್ ತಮ್ಮ ಕೆಲಸ ಎಷ್ಟೋ ಅಷ್ಟನ್ನು ಮಾಡ್ಕೊಂಡು ಹೋಗ್ತಾರೆ. ಮಂದಿರದ ಖರ್ಚು ವೆಚ್ಚ ನಾವು ನೋಡ್ಕೊಳ್ತೀವೆ."

"ಅಷ್ಟೇ ಸುಲಭವಾಗಿ ದೇಶದ ವ್ಯಾಪ್ತಿಯಲ್ಲೂ ಆ ಸಮಸ್ಯೇನ ಬಗೆಹರಿ ಸೋದು ಸಾಧ್ಯವಿದ್ದರೆ !"

ಪಾದಕ್ಕೆ ಮುಳ್ಳು ನೆಟ್ಟ ಅನುಭವ ಆಮೆರಬ್‌ಗೆ. ಯಾರ ಪಾದಕ್ಕಾದರೂ ನೆಡಬೇಕಾದ ಮುಳ್ಳು ತನಗೆ ನೆಟ್ಟಿತು ಎಂದು ಆತ ತನ್ನನ್ನು ತಾನೇ ಮನಸ್ಸಿನಲ್ಲಿ ಸಂತೈಸಿದ.

ಮುಂದುವರಿದು ಆತನೆಂದ :

"ನೀವೇ ನೋಡಿದಿರಿ. ಶಿಲ್ಪಿ, ಚಿತ್ರಕಾರ, ಅಕ್ಕಸಾಲಿಗ....ಒಂದು ಪಿರಮಿಡ್ಡು ನಿರ್ಮಿಸಬೇಕಾದರೆ ಹಲವು ಸಹಸ್ರ ಜನ, ವರ್ಷಗಟ್ಟಲೆ ಕಲ್ಲುಗಳ ಜತೆ ಸೆಣಸಾಡಬೇಕು ಗೋರಿ ನೆಲದಲ್ಲಿ. ಇಲ್ಲಿ, ಅರಮನೆಯ ಕರ್ಮಾಗಾರಗಳಲ್ಲಿ, ನೂರಾರು ಕುಶಲ ಕರ್ಮಿಗಳು ಗೋರಿಯೊಳಗಿನ ಅಲಂಕರಣ ಸಾಮಗ್ರಿಗಳನ್ನು ಸಿದ್ಧಗೊಳಿಸಬೇಕು. ಕೊನೆಯ ಹಂತದಲ್ಲಿ ಗೋರಿಯೊಳಗೂ ಇವರು ಕೆಲಸ ಮಾಡ್ಬೇಕು. ಇಂಥ ಕೆಲಸ ಆಗಿ ಮುಗಿಯೋ ಹೊತ್ತಿಗೆ ಕಣಜ ಉಗ್ರಾಣ, ಬೊಕ್ಕಸ ಬರಿದು. ಅದು ಬರಿದಾದರೆ ಆಪತ್ತು. ಆಗದ ಹಾಗೆ ನಾವು ನೋಡ್ಕೊಳ್ಬೇಕು. ಈ ಕಾರ್ಯದಲ್ಲಿ ದೇವಮಂದಿರಗಳಿಂದ ನೆರವು ನಿರೀಕ್ಷಿಸೋದು ತಪ್ಪೇ ?"

ದೇಶವ್ಯಾಪ್ತಿಯ ಚೌಕ ಮಣೆ ಆಟದಲ್ಲಿ ತಾನೊಂದು ಕಾಯಿ. ತಾನು ಅಂದರೆ ನೀರಾನೆ ಪ್ರಾಂತ. ಆ ಸೂಕ್ಷ್ಮ ಎಂದೋ ಮೆನೆಪ್‌ಟಾಗೆ ಹೊಳೆದಿತ್ತು.

ಹೌದೋ ಅಲ್ಲವೋ ಎನ್ನುವಂತೆ ಮೆಲುನಗೆ ನಕ್ಕು ಕಾಯಿ ಅಂದಿತು :

"ಮಹಾ ಅರ್ಚಕರ ವಶದಲ್ಲಿ ಅಪಾರ ಸಂಪತ್ತಿದೆ ಅಂತ ಹೇಳೋದನ್ನು ಕೇಳಿದ್ದೇನೆ."

"ಎಲ್ಲ ಕಿಂವದಂತಿಗಳೂ ಸುಳ್ಳಲ್ಲ. ಆಡಳಿತಗಾರರು ಇದನ್ನು ನೆನಪಿಟ್ಕೋಬೇಕು. ನೀವು ಕೇಳಿರೋದು ಅಂಥ ಒಂದು ಕಿಂವದಂತಿ....ದೂರದ ದೊಣೆ,

ಕಣ್ಣಿಗೆ ಚಿಕ್ಕೆ. ಹತ್ತಿರ ಬಂದಾಗಲೇ ಕಾಣಿಸೋದು ಅದರ ಗಾತ್ರ."

"ಆದರೂ ಶಿಲೆಯ ಭಾರ ಶಿಲೆಗೆ, ಮರಳಿನ ಭಾರ ಮರಳಿಗೆ."

"ಶಿಲೆಯ ಭಾರ ಶಿಲೆಗೆ, ಮರಳಿನ ಭಾರ ಮರಳಿಗೆ. ಮೆನೆಪ್‌ಟಾ, ಇದನ್ನು ಬರೆದಿಡಬೇಕು."

ಹಾಗೆ ಹೇಳಿ ಆ ಮಾತುಕತೆಗೆಲ್ಲ ತೆರೆ ಎಳೆದವನಂತೆ ಅಂಗೈ ಆಡಿಸಿ, ಆನೆರಬ್ ಚಪ್ಪಾಳೆ ತಟ್ಟಿದ. ಓಡಿ ಬಂದ ಸೇವಕನೊಡನೆ, "ನಾನು ಆರ ಮನೆಗೆ ಹೋಗ್ತಿದ್ದೇನೆ. ಪಲ್ಲಕೀನ ಅಲ್ಲಿಗೆ ಕಳಿಸು," ಎಂದ. ಪ್ರತಿಮೆಯಂತೆ ನಿಂತಿದ್ದ ಅಂಗರಕ್ಷಕ ಜೀವತಳೆದು ಅಮಾತ್ಯನ ಲಾಂಛನಕೋಲನ್ನು ತಂದು ಕೊಟ್ಟ.

ಅಮಾತ್ಯ ಎದ್ದೊಡನೆ ಭಟ ಮುಂದಾದ. ಮೆನೆಪ್‌ಟಾ ತಾನೂ ಎದ್ದ.

ಓಡಿಬಂದ ಸೆನೆಬ್‌ಗೆ ಅಮಾತ್ಯನೆಂದ :

"ನಾಯಕರನ್ನು ಅತಿಥಿಗೃಹಕ್ಕೆ ತಲಪಿಸಿ ಬಾ. (ಮೆನೆಪ್‌ಟಾನತ್ತ ತಿರುಗಿ, ಸ್ವರ ತಗ್ಗಿಸಿ) ಮಹಾಪ್ರಭು ನಾಳೆ ನಿಮ್ಮನ್ನು ಕರೀತಾರೆ."

"ಆಗಲಿ. ಕಾದಿರ್ತೇನೆ," ಎಂದ ಮೆನೆಪ್‌ಟಾ.

ಎಳೆಯ ಲಿಪಿಕಾರರು ಮುಂದೆ ನಡೆದರು. ಅಮಾತ್ಯ ಹೆಜ್ಜೆ ಇರಿಸಿದ. ಅಂಗರಕ್ಷಕ ಹಿಂಬಾಲಿಸಿದ.

ಸೆನೆಬ್ ಮೆನೆಪ್‌ಟಾನ ಜತೆ ಹೊರಡುತ್ತ, "ಇಬ್ಬರೇ ಬಂದ್ವಿ. ಇಬ್ಬರೇ ಹೋಗ್ತಿದ್ದೇವೆ," ಎಂದ.

"ನಾಳೆ ಮಹಾ ಪ್ರಭುವನ್ನು ಕಾಣ್ತೀರಿ ಅಲ್ಲವಾ ?" ಎಂದೂ ಕೇಳಿದ.

"ಮಹಾಪ್ರಭು ನಾಳೆ ಕರೀತಾರೆ ಅಂತ ಅಮಾತ್ಯರು ಹೇಳಿದ್ದು ನಿಮಗೆ ಕೇಳಿಸಿರಬಹುದು," ಎಂದ ಮೆನೆಪ್‌ಟಾ.

ಯಾರು ಮಿತ್ರರು ? ಯಾರಲ್ಲ ? ಯಾರೊಡನೆ ಮಾತಾಡಬಹುದು ? ಯಾರೊಡನೆ ಮಾತಾಡಬಾರದು ?

ಮೆನ್ನನ ಹಾಡು ನೆನಪಾಗಿ ನಾಯಕ ಮುಗುಳುನಕ್ಕ.

* * * *

ಬಟಾಗೆ ಅಮಾತ್ಯ ಭವನದಲ್ಲಿ ಏನಾಯಿತೆಂದು ತಿಳಿಯುವ ತವಕ. ಬೆಕ್, ಔಟರಿಗೂ. ಬಟಾನ ಸಹಾಯಕರಿಗೂ.

ಸೆನೆಬ್‌ನನ್ನು ಕಳುಹಿಸಿಕೊಟ್ಟ ಮೇಲೆ ಮೆನೆಪ್‌ಟಾ ನೀಡಿದುದು ಚುಟುಕು ವರದಿ. ಆದರೂ ಅವರಿಗೆ ಅದು ಇಷ್ಟವಾಯಿತು.

"ಆಸ್ಥಾನ ಅಮಾತ್ಯನದಿರಲಿ, ಅರಸನದಿರಲಿ, ಎಲ್ಲ ನಮ್ಮ ನಾಯಕರು ನಡೆಸುವ ಸಭೆಯ ಹಾಗೆಯೇ. ಅಲ್ಲವೇನಣ್ಣ ?" ಎಂದ, ಬಟಾ ತನ್ನ ಅಭಿಪ್ರಾಯಕ್ಕೆ ಮೆಚ್ಚುಗೆ ಬಯಸಿ. ಅವನ ನಾಯಕ ನಕ್ಕ.

ಅವರಿಲ್ಲದ ವೇಳೆಯಲ್ಲಿ ಅರಮನೆಯ ಆಳುಗಳು ಅತಿಥಿಗೃಹವನ್ನು ಚೊಕ್ಕಟಗೊಳಿಸಿದ್ದರು. ಮಲಗುವ ಹೊದೆಯುವ ಬಟ್ಟೆಗಳನ್ನು ಬದಲಿಸಿದ್ದರು. ಧೂಪಧೂಮ ಕೊಠಡಿಗಳನ್ನು ವ್ಯಾಪಿಸಿತ್ತು.

"ಇಲ್ಲಿ ಉಸಿರು ಕಟ್ಟದ ಹಾಗೆ ನೋಡ್ಕೋಬೇಕು," ಎಂದ ಬಟಾ.

ಮೆನೆಪ್‌ಟಾನೆಂದ :

"ಈ ಧೂಪ ಆರೋಗ್ಯಕ್ಕೆ ಒಳ್ಳೇದು."

ಅತಿಥಿಗೃಹದ ಅಧಿಕಾರಿ ಬಂದು, "ಅಪರಾಹ್ನದ ವಿಶ್ರಾಂತಿ ಆದ್ಮೇಲೆ ಅರ್ಚಕ ಇನೇನಿ ನಿಮ್ಮನ್ನು ನೋಡಲು ಬರ್‍ತಾರಂತೆ. ಈಗ ಭೋಜನ ಮುಗಿಸಿ ನೀವೂ ಕೊಂಚ ಹೊತ್ತು ವಿಶ್ರಮಿಸಬೌದು," ಎಂದ.

"ಭೋಜನ ಎಂದರೆ ಅಜೀರ್ಣದ ಭಯ. ಒಂದು ರೊಟ್ಟಿ ಮತ್ತು ಈರುಳ್ಳಿ ಕೊಟ್ಟರೆ ಸಾಕು."

—ಬಟಾನ ನುಡಿ.

"ಛೆ! ಛೆ! ಅರಮನೆಯಲ್ಲಿ ಸಾಮಾನ್ಯವಾದದ್ದು ಭೋಜನ. ವಿಶೇಷವಾದದ್ದು ಔತಣ. ಇಲ್ಲೇನಾದರೂ ಲೋಪವಾದರೆ ನನ್ನ ತಲೆ ಹೋದೀತು."

ಮೆನೆಪ್‌ಟಾ ಪರಿಹಾರ ಸೂಚಿಸಿದ :

"ಆರೋಗ್ಯ ಕೆಟ್ಟರೆ ತೊಂದರೆ. ನಮಗೆಲ್ಲ ಮಧ್ಯಾಹ್ನದ ಒಂದೂಟ ಸಾಕು."

ಆ ನಿರ್ದೇಶವನ್ನು ಸ್ವೀಕರಿಸಿ ಅಧಿಕಾರಿ ಬಟಾನತ್ತ ನೋಡಿ, "ರಾತ್ರೆಗೆ ಏನಾದರೂ ಪಾನೀಯ...." ಎಂದ.

ಇರಲಿ—ಎನ್ನಲು ಹೊರಟ ಬಟಾ, ಪದವನ್ನು ನುಂಗಿ, ನಾಯಕನೆಡೆಗೆ ದೃಷ್ಟಿಹರಿಸಿದ.

ನಗೆಯನ್ನು ಹತ್ತಿಕ್ಕಿ ಮೆನೆಪ್‌ಟಾ, "ನೀರಿದೆಯಲ್ಲ ?" ಎಂದ.

"ಹಾಲು—ಹಾಲು ಕಳಿಸ್ತೇನೆ," ಎನ್ನುತ್ತ ಅಧಿಕಾರಿ ಭೋಜನದ ಉಸ್ತುವಾರಿಗೆ ನಡೆದ.

ಬಟಾ ತಲೆ ಚಚ್ಚಿಕೊಂಡು ಅಂದ:

"ನನ್ನ ತಾಯಿ ಈಗ ಇದ್ದಿದ್ರೆ ಸಂತೋಷಪಡ್ತಿದ್ಲು !"

* * * *

ಊಟ ಮುಗಿಸಿ ವಿಶ್ರಾಂತಿಯ ಕೊಠಡಿಯಲ್ಲಿ ಬಟಾ ಒಬ್ಬನೇ ಇದ್ದಾಗ ಮೆನೆಪ್‌ಟಾ ತಾನು ಅರ್ಥಮಾಡಿಕೊಂಡ ರಾಜಧಾನಿಯ ರಾಜಕಾರಣವನ್ನು ಗೆಳೆಯರಿಗೆ ವಿವರಿಸಿದ.

"ದೇಶದ ರಾಜಕಾರಣದಲ್ಲಿ ಮೂರು ಶಕ್ತಿಗಳಿವೆ. ಪೆರೋನದು, ಮಹಾ ಅರ್ಚಕರದು, ಭೂಮಾಲಿಕರದು. ಪೆರೋ ಪ್ರಾಂತಪಾಲರನ್ನು ನೇಮಿಸಿದ್ದರಿಂದ ಭೂಮಾಲಿಕರ ಪ್ರಾಬಲ್ಯ ಸ್ವಲ್ಪ ಕುಗ್ಗಿತಲ್ಲ? ಅವರೀಗ ಮಹಾ ಅರ್ಚಕರ ಆಸರೆ ಪಡೆಯೋ ಹಾಗೆ ಕಾಣ್ತದೆ. ಆಗ ಅವರಿಬ್ಬರ ಶಕ್ತಿ ಪೆರೋನ ಶಕ್ತಿಗಿಂತ ಹೆಚ್ಚಾಗ್ತದೆ; ಮಹಾ ಅರ್ಚಕರಿಗೆ ಅಧೀನವಾಗಿ ಪೆರೋ ಇರಬೇಕಾಗ್ತದೆ."

"ಆಶ್ಚರ್ಯ ! ಅರ್ಚಕರ ಮಾತು ಪೆರೋ ಕೇಳ್ತೋದೆ ?"

"ತೋರಿಕೆಗೆ ಪೆರೋನದೇ ಪ್ರಭುತ್ವ; ಆದರೆ ವಾಸ್ತವವಾಗಿ, ಸೂತ್ರಗಳೆಲ್ಲ ಮಹಾ ಅರ್ಚಕರ ಕೈಲಿ. ಇದೇ ರಾಜಕೀಯದ ಮಹಾರಹಸ್ಯ. ಸಾಮಾನ್ಯ ಪ್ರಜೆಗಳಿಗೆ ಇದೊಂದೂ ಅರ್ಥವಾಗೋದಿಲ್ಲ."

"ನಾವು ಆದಷ್ಟು ಬೇಗ ನಮ್ಮ ಪ್ರಾಂತಕ್ಕೆ ವಾಪಸಾಗೋಣ."

"ಪೆರೋಗೆ ನಮ್ಮ ಪ್ರಾಂತದ ಸ್ನೇಹ ಬೇಕು, ನಿಷ್ಠೆ ಬೇಕು."

"ಮಹಾ ಅರ್ಚಕರ ಬಲ ಕುಗ್ಗಿದ ಮೇಲೆ ಇವರು ನಮ್ಮನ್ನು ಅರೀತಾರೆ."

"ಭಲೆ! ತಿಳ್ಕೊಂಡ್ಬಿಟ್ಟೆ! ಆದರೆ ಸ್ವತಃ ನಾವು ಬಲಿಷ್ಠರಾಗಿದ್ರೆ,

ಸ್ವಾವಲಂಬಿಗಳಾಗಿದ್ರೆ, ನಮ್ಮನ್ನು ಯಾರೂ ಏನೂ ಮಾಡೋದಕ್ಕೂ ಆಗೋದಿಲ್ಲ."

"ಈ ಪಾಠ ಕಲಿಯೋದಕ್ಕೆ ಇಷ್ಟು ದೂರ ಬರಬೇಕಾಯ್ತೆ ?....ಹೂಂ.... ಆ ಮಂದಿರದ ಅರ್ಚಕ ಬಂದಾಗ ನಿನ್ನೆ ರಾತ್ರಿಯ ಕನಸಿನ ಅರ್ಥ ಕೇಳೋಣ."

"ಅವರು ಸಾಮಾನ್ಯ ಅರ್ಚಕ ಅಂತ ಅನಿಸೋದಿಲ್ಲ ಬಟಾ. ಇವತ್ತೇ ಅಮಾತ್ಯರ ಭೇಟಿಗೆ ಬರ್‍ತೇವೆ ಅಂತ ಹೇಳಿಕಳ್ಸಿದ್ರು. ಬಿಡುವಿಲ್ಲ ಅಂದ್ರು ಅಮಾತ್ಯರು. ಏನಾದರೂ ಸುದ್ದಿ ಸಿಗುತ್ತೋ ಅಂತ ಇಲ್ಲಿಗೇ ಬರ್‍ತಿ ದಾರೇನೋ ?"

"ಎಷ್ಟೆಂದರೂ ಅಪೆಟ್ ಜಾತಿ !"

ಹೊರಗೆ ದಪ್ಪ ಗಂಟಲು ಕೇಳಿಸಿತು :

"ಮಲಕ್ಕೊಂಡಿದ್ರೆ ಆಮೇಲೆ ಬರ್‍ತೇನೆ. ಎಬ್ಬಿಸೋದು ಬೇಡ."

ಔಟನ ಧ್ವನಿ :

"ಇಲ್ಲ, ನಿದ್ದೆ ಮಾಡಿಲ್ಲ. ಬರಬೌದು."

ಮೆನೆಪ್‌ಟಾ ಮತ್ತು ಬಟಾ ಹೊರಬಂದರು. ಇವರನ್ನು ಕಂಡೊಡನೆ ಆಶೀರ್ವದಿಸುವ ಭಂಗಿಯಲ್ಲಿ ಲಾಂಛನ ಕೋಲು ಹಿಡಿದಿದ್ದ ಬಲಗೈಯನ್ನು ಎತ್ತಿ ಅರ್ಚಕ ಒಳಕ್ಕೆ ಕಾಲಿರಿಸಿದ. ಆ ಹಿರಿಯ ದೇವಸೇವಕನಿಗೆ ಇಬ್ಬರೂ ಬಾಗಿ ನಮಿಸಿದರು.

ಪಡಸಾಲೆಯಲ್ಲಿ ಎಲ್ಲರೂ ಕುಳಿತಾಗ, ಇನೇನಿ ಅಂದ :

"ಸುಮ್ಮನೆ ನೋಡಿ ಹೋಗೋಣ ಅಂತ ಬಂದೆ. ನಿಮ್ಮನ್ನು ರಾಜ ಧಾನಿಗೆ ಕರೆಸಬೇಕೂಂತ ಮಹಾ ಅರ್ಚಕರು ಹೇಳ್ತಾನೇ ಇದ್ರು."

ಇನೇನಿ ಮಾಡತೊಡಗಿದ್ದು ಅವನ ಪಾಲಿನ ಕರ್ತವ್ಯ.

ಮೆನೆಪ್‌ಟಾಗೆ ಅನಿಸಿತು: ಇಲ್ಲಿ ಎಲ್ಲರೂ ರಾಜಕೀಯ ಪಟುಗಳೇ.

ಅವನೆಂದ :

"ಮಹಾಅರ್ಚಕರು ಆನ್ ನಗರಿಯಲ್ಲಿದ್ದಾರೇಂತ ಕೇಳ್ದೆ."

"ಅಲ್ಲಿ ಮಹತ್ವದ ಧಾರ್ಮಿಕ ಜಿಜ್ಞಾಸೆ ನಡೀತಿದೆ."

"ರಾಜಧಾನಿಗೆ ವಾಪಸಾಗುವ ಕಾರ್ಯಕ್ರಮ ?"

" ಈಗಂತೂ ಮಹಾ ಅರ್ಚಕರಿದ್ದಲ್ಲೇ ರಾಜಧಾನಿ. ಸೆಡ್ ಮಹೋತ್ಸವದ ವಿಷಯ ನೀವು ಕೇಳೋದಾದರೆ, ಸದ್ಯದಲ್ಲಿ ಅದು ನಡೀಲಾರದು. ಎರಡು ಮೂರು ತಿಂಗಳ ಕಾಲ ನಿಮ್ಮ ವಸತಿ ಇಲ್ಲಿಯೇ ! ಇಷ್ಟರ ಮೇಲೆ ಮಹಾ ಅರ್ಚಕರ ಮರ್ಜಿ, ಅಮಾತ್ಯರು ಈ ವಿಷಯ ಏನಾದರೂ ಹೇಳಿದರಾ ?"

" ಹೆಚ್ಚು ಮಾತಾಡಲು ಆಗಲಿಲ್ಲ. ಬಹಳ ಜನ ಸಂದರ್ಶಕರಿದ್ರು."

" ಸಂದರ್ಶಕರಿಗೇನು ಬರಗಾಲ ? ಅಮಾತ್ಯ ಸ್ಥಾನದಲ್ಲಿ ಅವರಿದ್ರೂ, ಬರ್ತಾರೆ, ನಾವಿದ್ರೂ ಬರ್ತಾರೆ. ಅಂದ ಹಾಗೆ, ಟೆಹುಟಿ ನಿಮ್ಮ ವಿಷಯದಲ್ಲಿ ನಿಷ್ಠುರವಾಗಿ ನಡಕೊಂಡ್ರು ಅಂತ ಕೇಳ್ದೆ."

" ಹಾಗೇಂತ ಹೇಳ್ಲಾರೆ. ಅವರು ತಮ್ಮ ಮಾತ್‌ನಂತೆ ನಡಕೊಂಡ್ರು "

" ಸರಿಯಾದ ದೃಷ್ಟಿ. ಸ್ವತಃ ಟೆಹುಟಿಯೇ ನೀರಾನೆ ಪ್ರಾಂತದ ನಾಯಕನ ಬಗೆಗೆ ಅಭಿಪ್ರಾಯ ಬದಲಿಸಬಹುದು....ನಾಳೆ ಪೆರೋನನ್ನು ನೀವು ಕಾಣ್ತೀರಂತೆ."

" ನಿಮಗೆ ಎಲ್ಲಾ ಸಂಗತಿಗಳೂ ಗೊತ್ತಾಗ್ತವೆ "

" ಮಂದಿರದ ಅರ್ಚಕ ನಾನು. ಜನರಿಗೆ ನನ್ನಲ್ಲಿ ಭಕ್ತಿ."

ಮಾತುಗಳ ನಡುವಿನ ಮೌನವನ್ನು ಉಪಯೋಗಿಸಿಕೊಂಡು ಬಟಾನೆಂದ:

" ನಮ್ಮ ನಾಯಕರಿಗೆ ನಿನ್ನೆ ರಾತ್ರೆ ಒಂದು ಭಾರೀ ಕನಸು ಬಿತ್ತು ಅಯ್ಯ."

ಮೆನೆಪ್‌ಟಾನತ್ತ ನೋಡಿ ಇನೇನಿ ಅಂದ :

" ಹೌದಾ ? ಏನು ಕಂಡಿರಿ ?"

ನಾಯಕ ತಾನು ಕಂಡ ಕನಸನ್ನು ಇದ್ದುದು ಇದ್ದಂತೆ ಬಣ್ಣಿಸಿದ.

ವಿಸ್ತರಿಸಿದ್ದ ತನ್ನ ಹೊಟ್ಟೆಗೆ ಅಡ್ಡವಾಗಿ ಇನೇನಿ ಅಂಗೈಗಳನ್ನು ಇರಿಸಿ, ಒಂದು ತೋರು ಬೆರಳಿನಿಂದ ಇನ್ನೊಂದನ್ನು ತಟ್ಟುತ್ತ, ಯೋಚಿಸುವವನಂತೆ ಸ್ವಲ್ಪ ಹೊತ್ತು ಸುಮ್ಮನಿದ್ದು, ಅಂದ :

" ಪಾಪಿಗಳಾ ! ಹೋಯ್ತು ! ಕಸದ ಜತೆ ರಸವೂ ಹೋಯ್ತು ! ಅರ್ಥಪೂರ್ಣ—ಅರ್ಥಪೂರ್ಣ! ನಾಯಕ ಮೆನೆಪ್‌ಟಾ, ನೀವು ಅದೃಷ್ಟಶಾಲಿ. ನೀವು ಬಂಗಾರದ ಗಣಿಯ ಒಡೆಯರಾಗ್ತೀರಿ. ಅಂದರೆ, ಅತುಳೈಶ್ವರ್ಯ ನಿಮ್ಮದಾಗ್ತದೆ. ರಾ, ಪ್‌ಟಾ, ಅಮುನ್ ಈ ಮೂವರು ದೇವರ ಅನುಗ್ರಹವನ್ನೂ

ನೀವು ಸಂಪಾದಿಸ್ತೀರಿ. ಮಹಾ ಅರ್ಚಕರ ಕೃಪಾಕಟಾಕ್ಷಕ್ಕೆ ಪಾತ್ರರಾಗ್ತೀರಿ."

ಇಷ್ಟು ಸಾಕು ಎನಿಸಿ ಇನೇನಿ ನಾಯಕನ ಮುಖವನ್ನು ನೋಡಿದ. ಯಾವ ಭಾವನೆಯನ್ನೂ ಅದು ತೋರ್ಪಡಿಸಲಿಲ್ಲ.

ಬಟಾನೆಂದ :

" ಈ ಅರ್ಥವಿವರಣೆ ಕೇಳಿ ಕೃತಾರ್ಥರಾದ್ವಿ."

ಇನೇನಿ ಎದ್ದ.

" ಒಳ್ಳೇದು, ಬರ್ತೇನೆ. ಹೇಗೂ ಇಲ್ಲೇ ಇರ್ತೀರಲ್ಲ. ಭೇಟಿಯಾಗ್ತಿರೋಣ. ದೈವಭಕ್ತರನ್ನು ಕಂಡರೆ ನನಗೆಷ್ಟೋ ಸಂತೋಷ."

ಎದ್ದು ನಿಂತವನು, ಕೂದಲು ಬೋಳಿಸಿದ್ದ ತಲೆಯನ್ನೊಮ್ಮೆ ಸವರಿ, "ಹ್ಞ. ಒಂದು ವಿಷಯ ನಿಮಗೆ ಹೇಳೋದು ವಾಸಿ." ಎಂದು ನುಡಿದು, ಮತ್ತೆ ಕುಳಿತು, ಮಾತು ಮುಂದುವರಿಸಿದ :

" ಮೆನ್ನ—ಹುಚ್ಚ ಮೆನ್ನ—ಇಲ್ಲಿ ನದೀತಟದಲ್ಲಿ ನಿಮಗೆ ಸಿಕ್ಕಿದ್ನಂತೆ. ಆವನಿಗೆ ಸಲಿಗೆ ಕೊಡ್ಬೇಡಿ. ದಂಡೆಯ ದ್ವಾರಪಾಲಕರು ನಿಮಗೆ ಹೇಳಿರ್ಬಹುದು. ಅವನು ಒಂದು ರೀತಿಯ ದೈವದ್ರೋಹಿ. ನಮ್ಮ ಮಹಾ ಅರ್ಚಕರು ಕರುಣಾಶಾಲಿಯಾದ್ದರಿಂದ ಆತ ಉಳಿದುಕೊಂಡಿದ್ದಾನೆ...."

ಅರ್ಚಕನ ಜತೆ ತಾನೂ ಎದ್ದಿದ್ದ ಬಟಾ ನಿಂತಲ್ಲಿಂದಲೇ. "ಎಷ್ಟು ಸಮಯದಿಂದ ಹೀಗೆ?" ಎಂದು ಕೇಳಿದ, ತನ್ನ ತಲೆಯ ಬಳಿ ಬೆರಳುಗಳನ್ನು ಆಡಿಸಿ.

" ಈ ಮೆನ್ನ ಬಹಳ ವರ್ಷ ವೃತ್ತಿಯಲ್ಲಿದ್ದು ತೀರಿಕೊಂಡ ಒಬ್ಬ ದೇವ ಸೇವಕನ ಮಗ; ಹತ್ತು ವರ್ಷದ ತಬ್ಬಲಿ ಬಾಲಕನನ್ನು ಮಹಾ ಅರ್ಚಕರು ಸ್ವೀಕರಿಸಿದ್ರು. ಸ್ವತಃ ತಾವೇ ಶಿಕ್ಷಣ ಕೊಟ್ರು. ಹುಡುಗ ಆರೇಳು ವರ್ಷ ಅವರ ಕೊಠಡೀಲೇ ಮಲಗ್ತಿದ್ದ. ಅದೃಷ್ಟವಂತ. ಮಹಾ ಅರ್ಚಕರ ನಿತ್ಯ ಸಾನ್ನಿಧ್ಯ ಭಾಗ್ಯ ಅವನಿಗಿತ್ತು. ಮುಂದೆ ಮಹಾಮಂದಿರದಲ್ಲಿ ದೇವಸೇವಕರ ಸಂಖ್ಯೆ ಬೆಳೆಯಿತು. ದೇವಸೇವಿಕೆಯರ ತಂಡವೂ ಸಿದ್ಧವಾಯ್ತು. ಮೆನ್ನನಿಗೆ ಮಹಾಅರ್ಚಕರು ಕಿರಿಯ ದೇವಸೇವಕನ ಕೆಲಸ ಕೊಟ್ಟು ದೂರ ಇಟ್ರು. ಕ್ರಮೇಣ ಮೆನ್ನನಿಗೆ ಮಹಾ ಅರ್ಚಕರಲ್ಲಿ ನಿಷ್ಠೆ ಕಡಿಮೆಯಾಯ್ತು. ದೇವರಲ್ಲಿ ಭಕ್ತಿ ಕುಗ್ಗಿತು. ಇಪ್ಪತ್ತನೆಯ ವರ್ಷದಲ್ಲಿ ಅವನಿಗೆ ಭಡ್ತಿ ಸಿಗಬೇಕಾಗಿತ್ತು. ಆದರೆ...."

* * * *

ಒಬ್ಬ ದೇವಸೇವಿಕೆ ಒಮ್ಮೆ ಮಹಾ ಅರ್ಚಕನಿಗೆ ದೂರು ಕೊಟ್ಟಳು.

ಹಿಂದಿನ ಮುಂಜಾವು ದೇವಸೇವಿಕೆಯರ ವಸತಿಯ ಬಳಿ ಮೆನ್ನ ಸುಳಿಯುತ್ತಿದ್ದನಂತೆ ; ಹೋಗು ಎಂದರೂ ಹೋಗಲಿಲ್ಲವಂತೆ.

ಮಹಾ ಅರ್ಚಕ ಮೆನ್ನನನ್ನು ಕರೆಸಿ ಗದರಿಸಿದ :

" ಯಾಕೊ ?"

ನೀವು ಆ ಕಡೆಗೆ ಹೋದದ್ದನ್ನ ನೋಡಿದೆ ; ಅಯ್ಯ ಯಾವಾಗಲೂ ಸ್ವಲ್ಪ ಹೊತ್ನಲ್ಲೇ ವಾಪಸು ಬರ್ತಿದ್ರಿ. ನಿನ್ನೆ ಮಾತ್ರ ಬರಲಿಲ್ಲ. ನಿಮಗೇನಾಯಿತೋ ಅಂತ ನಿಮ್ಮನ್ನು ಹುಡುಕ್ಕೊಂಡು ಅತ್ತ ಹೋದೆ. ಒಬ್ಬಿಬ್ರು ನನ್ನನ್ನು ಒಳಗೆ ಕರೆದ್ರು. ಅದ್ರೆ ನಾನು ಹೋಗ್ಲಿಲ್ಲ...."

" ಮೂರ್ಖ ! ಮಾಡೋದಕ್ಕೆ ಬೇರೇನೂ ಕೆಲಸ ಇಲ್ದಿದ್ರೆ ಗರ್ಭಗುಡಿ ಮುಂದೆ ಕೂತಿರ್ಬೇಕು."

" ದೇವಸೇವಿಕೇರು ಗರ್ಭಗುಡಿಯೊಳಗೂ ಬಚ್ಚಿಟ್ಕೋತಾರೆ, ಅಯ್ಯ."

" ಅಪವಿತ್ರ ಮಾತನ್ನಾಡಿದ್ರೆ ನಾಲಿಗೆ ಬಿದ್ದುಹೋದೀತು, ಮರುಳೆ !"

" ಯಾವುದು ಪವಿತ್ರ, ಯಾವುದು ಅಪವಿತ್ರ ಅಯ್ಯ? "

" ಹೋಗು ಮಹಾಮಂದಿರದ ಮುಖ್ಯ ಅರ್ಚಕನನ್ನು ಕೇಳು."

ದೂರು ಕೊಡಲು ಬಂದಿದ್ದ ದೇವಸೇವಿಕೆ ನಗುತ್ತ ಹೊರಟು ಹೋದಳು.

ಮೆನ್ನ ಮಹಾ ಅರ್ಚಕನ ಪಾದದ ಬಳಿ ಮುದುರಿ ಕುಳಿತು ಗೋಗರೆದ :

" ಇನ್ನು ನಾನು ನಿಮ್ಮ ಸೇವೆಗೆ ಬರೋದು ಬೇಡವೆ, ಅಯ್ಯ? "

" ಎಲ್ಲರೂ ಅವರವರ ಸ್ಥಾನದಲ್ಲಿದ್ಕೊಂಡು ಮಾಡೋ ಕೆಲಸವೂ ನನ್ನ ಸೇವೆಯೇ."

" ....ಅಯ್ಯ, ಶಂಕೆ ಸಂದೇಹಗಳು ನನ್ನನ್ನು ಬಾಧಿಸ್ತವೆ."

" ಹುಚ್ಚಪ್ಪ! ಮದುವೆ ಮಾಡ್ಕೊಂಡು ನಿಮ್ಮ ತಂದೇ ತರಹ ಗೃಹಸ್ಥ ಅರ್ಚಕನಾಗು. ಮೂರು ತಿಂಗಳು ಮನೇಲಿರು ; ಒಂದು ತಿಂಗಳು ಪರಿಶುದ್ಧವಾಗಿದ್ಕೊಂಡು ಮಂದಿರದಲ್ಲಿ ದುಡಿ."

" ಮದುವೆ ! ನಾನೊಲ್ಲೆ, ನಾನೊಲ್ಲೆ ! "

" ಹಾಗಾದರೆ ಹಾಳಾಗಿ ಹೋಗು ! "

" ....ಅಯ್ಯ, ದೇವಸೇವಿಕೇರೂ ಮದುವೆ ಮಾಡ್ಕೊಂಡು ಮೂರು

ತಿಂಗಳು ಮನೇಲಿದ್ದು...."

"ಕತ್ತೆ! ತೊಲಗಾಚೆ!"

ಮೆನ್ನ ಕಂಬನಿ ತುಂಬಿಕೊಂಡು ಎದ್ದ.

ಅವನು ದಡ್ಡನಲ್ಲ; ಹನ್ನೆರಡು ವರ್ಷಗಳ ಅವಧಿಯ ಶಿಕ್ಷಣವನ್ನು ಆರೇ ವರ್ಷಗಳಲ್ಲಿ ಕರಗತ ಮಾಡಿಕೊಂಡಿದ್ದ ಬುದ್ಧಿವಂತ. "ಇವನ ಮೊದ್ದುತನವೆಲ್ಲ ಬರೀ ನಟನೆ," ಎಂದರು ಕೆಲವರು ಸಹಜ ವರ್ತನೆಯೊ ನಟನೆಯೊ ಸ್ವತಃ ಮೆನ್ನನಿಗೇ ತಿಳಿಯದು. ಮಾಡಬಾರದ ಏನನ್ನಾದರೂ ಆತ ಮಾಡುತ್ತಿದ್ದ. ಪದೇ ಪದೇ ಮಹಾಅರ್ಚಕನ ಕ್ರೋಧಕ್ಕೆ ಬಲಿಯಾಗುತ್ತಿದ್ದ.

ಎರಡು ವರ್ಷ ಹೀಗೆ ಕಳೆಯಿತು. ಮೂರನೆಯ ವರ್ಷ ವಿಕೋಪಕ್ಕೆ ಹೋಯಿತು. ಪರಿಸ್ಥಿತಿ. ಅಬ್ಟುವಿಗೆ ಹೋದ ಮಹಾ ಅರ್ಚಕನ ಪರಿವಾರ ದಲ್ಲಿ ಮೆನ್ನನಿದ್ದ. ಅಲ್ಲಿ ಒಸೈರಿಸನ ಅಂತಿಮ ಯಾತ್ರೆಯ ಪುನರಭಿನಯ ಆದಮೇಲೆ, ದೇವಮಂದಿರದಲ್ಲಿ, ಐಸಿಸ್ ಪಾತ್ರಧಾರಿಣಿಯನ್ನು ಹೇಪಾಟ್ ಮಾತನಾಡಿಸುತ್ತಿದ್ದಾಗ ಮೆನ್ನ ಒಳಗೆ ನುಗ್ಗಿ ಆತನ ಕೋಪಕ್ಕೆ ತುತ್ತಾದ. ಅದು ಕೊನೇ ಭಾರ. ದೋಣಿ ಮುಳುಗಿಯೇ ಬಿಟ್ಟಿತು.

ರಾಜಧಾನಿ ಮೆಂಫಿಸಿಗೆ ಮರಳಿದ ಮಹಾ ಅರ್ಚಕ ಎಲ್ಲ ದೇವಸೇವಕ ಸೇವಿಕೆಯರೆದುರು ಮಹಾಮಂದಿರದಲ್ಲಿ ಮೆನ್ನನನ್ನು ವಿಚಾರಣೆಗೆ ಗುರಿಪಡಿಸಿದ.

"ಮೆನ್ನನಲ್ಲಿ ಸೆತ್‌ನ ಆವಾಹನೆಯಾಗಿದೆ!" ಎಂದು ಮಹಾಅರ್ಚಕ ಸಾರಿದ.

"ಡುರಕ್! ಡುರಕ್! ನಾನೀಗ ಕಾಡುಹಂದಿ! ನಿಮ್ಮನ್ನೆಲ್ಲ ತಿವಿದು ಒಸೈರಿಸನ ರಾಜ್ಯಕ್ಕೆ ಕಳಿಸ್ತೇನೆ!" ಎನ್ನಬೇಕೆ ಮೆನ್ನ ?

ಅಷ್ಟು ಹೇಳಿ ಅವನು ಮಹಾ ಅರ್ಚಕನತ್ತ ನುಗ್ಗಿಯೇ ಬಿಟ್ಟ.

ಅರಮನೆಯ ದೇವಮಂದಿರದ ಅರ್ಚಕ ಇನೇನಿ ಸಭೆಗೆ ಬಂದಿದ್ದ. ಹೇಪಾಟ್‌ನ ಬಳಿಯಲ್ಲೇ ಇದ್ದ ಅವನು ಮೆನ್ನನ ಬಲಗೈಯನ್ನು ಹಿಡಿದು ತಿರುಚಿದ. ಬಾಣ ತಗಲಿದ ಗಿಡುಗ ಮರಿಯಂತೆ ಮೆನ್ನ ಚಡಪಡಿಸಿದ.

ಹೇಪಾಟ್ ಕಿರಿಚಿದ :

"ಧರ್ಮದ್ರೋಹಿ! ಹೇಳು. ಈ ಐಗುಪ್ತವನ್ನು–ಜಗತ್ತನ್ನು–ಸೃಷ್ಟಿಸಿ ದವನು ಯಾರು ?"

"ಗೊತ್ತಿಲ್ಲ. ನಾನಂತೂ ಅಲ್ಲ! (ನಾನಾಗಿದ್ದಿದ್ರೆ ನೀವು ಯಾರೂ ಹುಟ್ತಾನೇ ಇರ್ತಿಲ್ಲ.)"

"ಹುಚ್ಚ! ಹುಚ್ಚ! ಬಿಗೀರೋ ಅವನ ಮುಸುಡಿಗೆ!"

ಇನ್ನೊಬ್ಬ ದೇವಸೇವಕ ಚಂಗನೆ ಹಾರಿಬಂದು ಮೆನ್ನನ ಬಾಯಿಗೂ ಮೂಗಿಗೂ ಗುದ್ದಿದ. (ಹಲ್ಲುಗಳು ಅಲುಗಿ ಭೂಮಿ ನಡುಗಿದಂತೆ ಭಾಸವಾಯಿತು ಮೆನ್ನನಿಗೆ.) ಕಿವಿಗಳಿಗೆ ಬಾರಿಸಿದ. (ಮೆನ್ನನ ನಾಲಗೆ ಉಪ್ಪುಪ್ಪಾಯಿತು. ಮೂಗಿನಿಂದ ರಕ್ತ ಸೋರಿತು.)

"ಅಯ್ಯೋ! ನನ್ನ ಹೃದಯ ಅಳ್ತಿದೆ!" ಎಂದು ಮೆನ್ನ ಅರಚಿದ.

ಹೇಪಾಟ್ ಕೂಗಿ ನುಡಿದ :

"ಅಳು! ಅಳು! ಪಾಪಿ! ಈಗ ಉತ್ತರ ಕೊಡು. ಈ ಪ್ರಪಂಚದಲ್ಲಿ ದೇವರ ಪ್ರತಿನಿಧಿ ಯಾರು ?"

"ನಾನಲ್ಲ, ನಾನಲ್ಲ!"

(ದೇವಸೇವಿಕೆಯರ ಗುಂಪಿನಲ್ಲಿ ಕಿಸಿಕಿಸಿ ನಗು.)

"ಒದೀರಿ ಅವನಿಗೆ!"

ಯಾರೋ (ಇನೇನಿ) ಒದೆದರು, ತೊಡೆಗೆ. ನಡು ಮುರಿದವನಂತೆ ಮೆನ್ನ ಅಂಗಾತ ಬಿದ್ದ.

ಹೇಪಾಟ್ ಆಜ್ಞಾಪಿಸಿದ :

"ಬೆನ್ನಿಗೆ ಬರೆ!"

ವಿಚಾರಣೆ ಆರಂಭವಾದುದಕ್ಕೆ ಮೊದಲೇ ತಾಮ್ರದ ಸಲಾಕೆಯನ್ನು ಗರ್ಭಗುಡಿಯ ಮಗ್ಗುಲಲ್ಲಿ ಕೆಂಡಗಳ ಮೇಲೆ ಇರಿಸಿದ್ದರು. ಕಿರಿಯ ದೇವಸೇವಕನೊಬ್ಬ ಸಲಾಕೆಯನ್ನು ತಂದು ಮರದ ಹಿಡಿಯನ್ನು ಮಹಾ ಅರ್ಚಕನ ಕೈಗಿತ್ತ. ಇನೇನಿ ಮೆನ್ನನ ಕೈಗಳನ್ನು ತಲೆಯ ಮೇಲ್ಗಡೆಗೆ ಒತ್ತಿ ಹಿಡಿದ. ಇನ್ನೊಬ್ಬ ಪಾದಗಳನ್ನು ನೆಲಕ್ಕೆ ಅಮುಕಿದ.

ಹೇಪಾಟ್ ಪೀಠದಿಂದೆದ್ದು, "ಸೆತ್! ತೊಲಗು!" ಎಂದು ಆರ್ಭಟಿಸಿ, "ರಾ!" ಎನ್ನುತ್ತ ಸಲಾಕೆಯನ್ನು ಮೆನ್ನನ ಬೆನ್ನಿಗೆ ಅಡ್ಡವಾಗಿ ಇಳಿಸಿದ. ಮೆನ್ನ "ಅಯ್ಯೋ ಅಯ್ಯ!" ಎಂದು ರೋದಿಸುತ್ತಿದ್ದಂತೆ ಹೇಪಾಟ್ "ಪ್ಟಾ!" ಎಂದು ಇನ್ನೊಮ್ಮೆ ಸಲಾಕೆ ಪ್ರಯೋಗಿಸಿದ. "ಅಮನ್!"

ಎಂದು ಮೂರನೆಯ ಬಾರಿ ಬಾರಿಸಿ, ಸಲಾಕೆಯನ್ನು ಎಸೆದುಬಿಟ್ಟ.

ಸ್ವರ ಉಡುಗಿತೇನೋ ಎನ್ನುವಂತೆ ಮೆನ್ನನ ಆಕ್ರಂದನ ನಿಂತಿತು. ಹೇಪಾಟ್ ಅಂಗೈ ಆಡಿಸಿದೊಡನೆಯೇ, ಮೆನ್ನನನ್ನು ನೆಲಕ್ಕೆ ಅದುಮಿದ್ದವರು ಹಿಡಿತ ಸಡಿಲಿಸಿ ಎದ್ದರು. ಮೆನ್ನ ಬಿದ್ದಲ್ಲಿಯೇ ಇದ್ದ. ಸುಟ್ಟ ಹಾವುಗಳಂತಿದ್ದುವು, ಬೆನ್ನಿನ ಮೇಲಣ ಗೆರೆಗಳು.

"ಉಸಿರಾಡ್ತಿದ್ದಾನೆ. ದೇವಸನ್ನಿಧಿಯ ಸಾವು ಪಾಪಿಗಳಿಗೆ ಲಭಿಸೋದಿಲ್ಲ," ಎಂದು ನುಡಿದು ಹೇಪಾಟ್ ನಾಲ್ಕು ಹೆಜ್ಜೆ ದೂರ ಸರಿದು, ಟೊಂಕದ ಮೇಲೆ ಎರಡೂ ಅಂಗೈಗಳನ್ನು ಇರಿಸಿ ನಿಂತು, ದೇವಸೇವಕ ಸಮುದಾಯ ದತ್ತ ದೃಷ್ಟಿ ಹರಿಸಿದ.

ಪದಗಳನ್ನು ಎಣಿಸಿ ಎಣಿಸಿ ಎಸೆಯುವವನಂತೆ ಅವನೆಂದ :

"ಇವತ್ತಿನಿಂದ ಹುಚ್ಚ ಮೆನ್ನನನ್ನು ನಮ್ಮ ಆಪ್ತ ಪರಿವಾರದಿಂದ ಬಹಿಷ್ಕರಿಸಿದ್ದೇವೆ. ಇನ್ನು ಅವನ ದುಡಿಮೆ ಅರಮನೆಯ ದೇವಮಂದಿರದಲ್ಲಿ. ಅಲ್ಲಿ ಕಸ ಗುಡಿಸುವ ಕೆಲಸ. ಇವನು ಇನ್ನು ಮುಂದೆ ಇನೇನಿಯ ಅಧೀನ. ದೇವರು ದಯೆತೋರಿಸಿ ಇವನ ಹುಚ್ಚೇನಾದರೂ ಬಿಟ್ಟುಹೋದರೆ, ನಾವು ಬರೆ ಎಳೆದದ್ದು ಸಾರ್ಥಕವಾಗ್ತದೆ....ದೇವಸೇವಕ ಗಣಕ್ಕೆಲ್ಲ ಈ ಮೆನ್ನ ಒಂದು ಪಾಠ, ಸದಾಕಾಲ ನೆನಪಿಡಬೇಕಾದ ಪಾಠ."

ಇಷ್ಟು ಹೇಳಿ ಹೇಪಾಟ್ ಬಲತೋಳನ್ನೆತ್ತಿದ. ಅಲ್ಲಿದ್ದವರೆಲ್ಲ ಎದ್ದು ನಮಿಸಿದರು. ಸಭೆ ಚೆದರಿತು.

ಹೇಪಾಟ್ ತನ್ನ ನಿವಾಸಕ್ಕೆ ತೆರಳಿದ ಮೇಲೆ ಮೆನ್ನ ಎದ್ದು ಕುಳಿತ. ಆ ಹಗಲು ಅವನು ಆಹಾರ ಸ್ವೀಕರಿಸಿರಲಿಲ್ಲ. ಕತ್ತಲಾದ ಮೇಲೆ ಅರಮನೆಯ ದೇವಮಂದಿರದತ್ತ ಹೊರಟ ಇನೇನಿಯನ್ನು, ಮರುಮಾತನಾಡದೆ ಅವನು ಹಿಂಬಾಲಿಸಿದ.

* * * *

........ಮತ್ತೊಮ್ಮೆ ತನ್ನ ನುಣುಪು ತಲೆಯನ್ನು ಅಂಗೈಯಿಂದ ಸವರಿ ಕೆಲವು ನಿಮಿಷ ಸುಮ್ಮನಿದ್ದು, ನಿಟ್ಟುಸಿರು ಬಿಟ್ಟು, ಇನೇನಿ ಮೆನೆಪ್‌ಟಾ ನೊಡನೆ ಅಂದ :

"ಕಡು ಪಾಪಿ. ದೇವರು ಕೃಪಾದೃಷ್ಟಿ ಬೀರಿಯೇ ಇಲ್ಲ. ಅವತ್ತು ಹುಚ್ಚ. ಇವತ್ತೂ ಹುಚ್ಚನೇ. ವಿಷಯ ತಿಳಿದಿರಲಿ ಅಂತ ಹೇಳ್ದೆ. ಅವನ ಯಾವ ಮಾತೂ ನೀವು ನಂಬಬೇಡಿ. ಯಾಕೆಂದರೆ ಅವನಿಗೆ ಏನೂ ಗೊತ್ತೇ ಇಲ್ಲ."

ಮೆನೆಪ್‌ಟಾ ಎದ್ದು ಕಿಟಕಿಯ ಬಳಿ ಸಾರಿದ. ಬಿಸಿಲು ಬಾಡಿತ್ತು. ಜರ್ಜರಿತ ಮೆನ್ನನ ರೂಪ ಅವನ ಕಣ್ಣೆದುರು ಕಟ್ಟಿತು.

ಇನೇನಿಯೂ ಎದ್ದ.

ನಿಂತಲ್ಲಿಂದ ಕತ್ತು ಹೊರಳಿಸಿ ಮೆನೆಪ್‌ಟಾ ಅಂದ:

"ಮೆನ್ನನ ವಿಷಯ ನೀವು ಹೇಳಿದ್ದು ಒಳ್ಳೇದಾಯ್ತು."

"ದೈವಕ್ಕೆ ಧರ್ಮಕ್ಕೆ ಎದುರು ನಿಲ್ಲೋದು ಎಷ್ಟು ಅಪಹಾಸ್ಯಕರ! ಅವನ ವಿಷಯ ಮಾತನಾಡೋದೆಂದರೆ ನನಗೆ ಬೇಸರ. ಆದರೂ ಕರ್ತವ್ಯ ಅಂತ........"

ಮುಗುಳುನಗುತ್ತ ಮೆನೆಪ್‌ಟಾ ನಮಿಸಿದ:

"ಹೋಗಿ ಬನ್ನಿ."

ಬಲ ಅಂಗೈಯನ್ನೆತ್ತಿ ಆಡಿಸಿ, ತನ್ನ ಲಾಂಛನಕೋಲಿನೊಡನೆ ಇನೇನಿ ಹೊರಕ್ಕೆ ನಡೆದ.

ಅವನು ಹೂದೋಟ ದಾಟುವವರೆಗೂ ಸುಮ್ಮನಿದ್ದು, ಬಟಾ ಅಂದ:

"ಮೆನೆಪ್‌ಟಾ ಅಣ್ಣಾ. ಈ ಮೆನ್ನ ಖಂಡಿತ ಹುಚ್ಚ ಅಲ್ಲ. ನಾವು ಅವನನ್ನು ನಮ್ಮೂರಿಗೆ ಕರಕೊಂಡು ಹೋಗ್ಬಿಡೋಣ."

"ಬರೋದಕ್ಕೆ ಅವನೂ ಒಪ್ಪಬಹುದು. ಆದರೆ ಇವರು ಬಿಡ್ತಾರೆ ಅಂದ್ಕೊಂಡ್ಯಾ? ಜನರ ಕಣ್ಣಿಗೆ ಅವನು ಹುಚ್ಚನಾಗಿಯೇ ತೋರ್ಬೇಕು, ಇಲ್ದೆ ಹೋದರೆ ಇವರಿಗೆ ತೊಂದರೆ...."

"ಈಗ್ಲೇ ಹೋಗಿ ಮೆನ್ನನನ್ನು ನೋಡೋಣ ಅನಿಸ್ತದೆ."

"ಬೇಡ. ಈಗಲೂ ಬೇಡ. ರಾತ್ರೆಯೂ ಬೇಡ. ಇನ್ನು ಮೂರು ನಾಲ್ಕು ದಿವಸ ಆ ಕಡೆಗೆ ಹೋಗೋದೇ ಬೇಡ. ನಾವಾಗಿಯೇ ಮೆನ್ನನನ್ನು ಭೇಟಿ ಮಾಡ್ತೇವೆಂತ ಗೊತ್ತಾದ್ರೆ ಅವನನ್ನು ಇನ್ನೆಲ್ಲಿಗಾದರೂ ಕಳಿಸ್ಬಿಡ್ತಾರೆ."

"ಶೌಚಗೃಹ ತೊಳೆಯೋಕೆ. ಹುಂ !"

....ಸಂಜೆ ಬಟಾ ತನ್ನ ಅಂಬಿಗರೊಡನೆ ದೋಣಿಕಟ್ಟೆಯ ತನಕ ಹೋದ. ಐವರು ಪ್ರಾಂತಪಾಲರ ನಾವೆಗಳು ದಂಡೆಯುದ್ದಕ್ಕೂ ತಂಗಿದ್ದುವು. ಬೇಸರ ದಲ್ಲೂ ಕುತೂಹಲ ಬಟಾ ಅತಿಥಿಗೃಹಕ್ಕೆ ಮರಳಿದ.

ಕೊಠಡಿಯಲ್ಲಿ ಕುಳಿತು ಕೊಳಲಿನಲ್ಲಿ ಒಂದೇ ಸಾಲನ್ನು ಅವನು ನುಡಿಸಿದ.

"ಇಂದು ಯಾರೊಡನೆ ನಾ ಮಾತಾಡಲೀ ?"

ಕೊಳಲು ಕೆಳಗಿರಿಸಿ, "ನಾಳೆ ಪೆರೋ ಸಂದರ್ಶನದಲ್ಲಿ ಕಾಣಿಕೆ ಕೊಡ್ಬೇಕು ಅಲ್ಲವಾ ?" ಎಂದು ಮೆನೆಪ್‌ಟಾನನ್ನು ಕೇಳಿದ.

"ಹೌದು."

"ಹಾಗಾದರೆ ಥೂಳು ಒರೆಸಿ ಕಾಣಿಕೇನ ಸಿದ್ಧಪಡಿಸ್ತೇನೆ."

ಅಷ್ಟು ಹೇಳಿ ಬಟಾ ಚಪ್ಪಾಳೆ ತಟ್ಟಿದ.

ಸಮೀಪಿಸಿದ ಸೇವಕನಿಗೆ, "ಒಂದಿಷ್ಟು ರಾಳ ಮತ್ತು ಚಿಂದಿ ಸೆಣಬು ತಗೊಂಡು ಬಾಪ್ಪ," ಎಂದ.

ಮೆನೆಪ್‌ಟಾನನ್ನು ನೋಡಿ, "ಅರಸನ ಆಸ್ಥಾನಕ್ಕೆ ನಮ್ಮೂರಿನ ಕಾಣಿಕೆ ನಾವೇ ಒಯ್ದು ಮುಟ್ಟಿಸ್ಬೇಕು. ನಾಳೆ ನಾಯಕನ ಜತೆ ಪರಿವಾರವೂ ಇರ್‍ತದೆ," ಎಂದ.

* * * *

ಬೆಳಕು ಹರಿಯುತ್ತಿದ್ದಂತೆ ಪವಿತ್ರ ಕೊಳದಲ್ಲಿ ಮಿಂದು, ಒದ್ದೆ ಬಟ್ಟೆ ಯುಟ್ಟು, ಎಂದಿನ ಹಾಗೆ ಚಕ್ರವರ್ತಿಯನ್ನು ಕಾಣಲು ತನ್ನ ಸಹಾಯಕ ಕಿರಿಯ ದೇವಸೇವಕನೊಡನೆ ಇನೇನಿ ಅರಮನೆಗೆ ಹೋದ. ಸಾಧಾರಣವಾಗಿ ಬೇಗನೆ ಏಳುವುದು ಪೆರೋನ ಪದ್ಧತಿ. ಅಂದು ಆಗಲೇ ಮುಖಮಾರ್ಜನ ಮುಗಿಸಿ, ಶಯ್ಯಾಗಾರದ ಹೊರಗಿನ ಮೊಗಸಾಲೆಯಲ್ಲಿ ಕುಳಿತಿದ್ದ.

ಇನೇನಿ ಆತನೆದುರು ನಿಂತು ಉದ್ಗರಿಸಿದ :

"ಓ ದೀರ್ಘಾಯು ದೊರೆಯೇ, ಸ್ವರ್ಣದೇವತೆ ಹಾಥೋರ್ ನಿನ್ನ ಮೂಗಿಗೆ ಬಲ ಕೊಡಲಿ."

ಪೆರೋ ನುಡಿದ :

"ಎಲ್ಲ ದ್ವಾರಗಳನ್ನೂ ತೆರೆ; ಒಳಬರುವುದೆಲ್ಲವೂ ಒಳಬರಲಿ, ಹೊರ ಹೋಗುವುದೆಲ್ಲವೂ ಹೊರಹೋಗಲಿ."

ಆ ಆಣತಿಯೊಡನೆ ಇನೇನಿ ಮರಳಿದೊಡನೆಯೇ ನಗಾರಿಯ ಸದ್ದಾಯಿತು. ಸೇವಕರು ಅರಮನೆಯ ಆವರಣದ ಮಹಾದ್ವಾರವನ್ನೂ ಹೆಬ್ಬಾಗಿಲನ್ನೂ ತೆರೆದರು. ಇದರ ಜತೆಗೆ ಭವನಗಳ ವಸತಿಗಳ ನೂರಾರು ಬಾಗಿಲುಗಳೂ ತೆರೆದುಕೊಂಡುವು.

ಅರಸನನ್ನು ದೇವಸನ್ನಿಧಿಗೆ ಬರಮಾಡಿಕೊಳ್ಳುವ ಪೂರ್ವ ಸಿದ್ಧತೆಗಾಗಿ ಇನೇನಿ ಸಹಾಯಕನೊಡನೆ ದೇವಮಂದಿರಕ್ಕೆ ನಡೆದ.

ಅರಮನೆಯ ಹಿರಿಯ ಕ್ಷೌರಿಕ ಆವರಣದ ಮೂಲೆಯಲ್ಲಿದ್ದ ತನ್ನ ವಸತಿಯಿಂದ ಹೊರಟು, ಪೆರೋ ಕುಳಿತ ಮೊಗಸಾಲೆಗೆ ಬಂದ. ಜತೆಗೊಬ್ಬ ಕಿರಿಯ ಕ್ಷೌರಿಕ–ಸಹಾಯಕ. ಅರಮನೆಯ ಪರಿಚಾರಕನೊಬ್ಬ ಒಳಗಿನಿಂದ ಕ್ಷೌರದ ಸಲಕರಣೆಗಳನ್ನು ತಂದು, ಒಂದು ತಗ್ಗು ಮೇಜಿನ ಮೇಲಿರಿಸಿದ : ಮುಖ ಪ್ರತಿಫಲಿಸುವಷ್ಟು ಹೊಳೆಯುತ್ತಿದ್ದ ನುಣುಪಾದ ಕಂಚಿನ ಸ್ವರೂಪ ದರ್ಶಕ. ತಾಮ್ರದ ಪಾತ್ರೆಯಲ್ಲಿ ಬಿಸಿನೀರು; ಹರಿತ ಅಲಗಿನ ಕಂಚಿನ ಕ್ಷೌರ. ಕತ್ತಿ. ಅದನ್ನು ತೀಡಿ ಕ್ಷೌರಕ್ಕೆ ಅಣಿಗೊಳಿಸಲು ತೊಗಲಿನ ನೀಳ ತುಣುಕು ಬಿಸಿನೀರನ್ನು ಮುಖಕ್ಕೆ ಒತ್ತಲು ಸೆಣಬು ಅರಿವೆಯನ್ನು ಮಡಚಿ ಮಾಡಿದ ಮೆತ್ತೆ.

ಹೆಚ್ಚುಕಡಮೆ ಪೆರೋನದು ನಿತ್ಯಕ್ಷೌರ. ತಲೆಗೂದಲು ನರೆಯುವ ಸೂಚನೆ ಕಂಡೊಡನೆಯೇ ಅದಕ್ಕೆ ಕಪ್ಪು ಬಳಿಸಲು ಆರಂಭಿಸಿದ್ದ. ನಡುವಯಸ್ಸು ದಾಟಿದ ಮೇಲೆ ಕೆನ್ನೆ ಗಲ್ಲ ಮೇಲ್ತುದಿಗಳಲ್ಲೂ ನರೆತದ ಛಾಯೆ. ಇನೇನಿ ತಯಾರಿಸಿ ಕೊಟ್ಟ ಗಿಡಮೂಲಿಕೆಗಳ ಕಷಾಯ ಕುಡಿದ. ಪ್ರಯೋಜನವಾಗಲಿಲ್ಲ. ಬೆಳಿಗ್ಗೆ ಕ್ಷೌರಿಕನನ್ನು ಕಂಡಾಗಲೇ ಅವನಿಗೆ ತುಸ ಸಮಾಧಾನ.

ಮುಖಕ್ಷೌರವಾಯಿತು. ಕಂಕುಳ ಕೂದಲನ್ನೂ ಕ್ಷೌರಿಕ ಬೋಳಿಸಿದ. ಸ್ಫಟಿಕದ ತಂಪು–ಉರಿ ಕಿರಿಯ ಕ್ಷೌರಿಕ ತನ್ನೆದುರು ಹಿಡಿದಿದ್ದ ಸ್ವರೂಪ ದರ್ಶಕದಲ್ಲಿ ಪ್ರತಿಬಿಂಬ ನೋಡಿ ಪೆರೋಗೆ ತೃಪ್ತಿ.

ಅಂದು ಉಗುರಿನವನ ಸರದಿ ಕೂಡಾ. (ಮೂರು ದಿನಗಳಿಗೊಮ್ಮೆ ತನ್ನ ಸಹಾಯಕನೊಡನೆ ಅವನು ಬರುತ್ತಿದ್ದ.)

ಮುಂದೆ, ಸ್ನಾನದ ಮನೆಯು ದಾಸದಾಸಿಯರ ಹೊಣೆ. ಭುಜಗಳನ್ನು ಮುಟ್ಟುತ್ತಿದ್ದ ಅರಸನ ನೀಳ ಕೇಶವನ್ನು ಮೇಲಕ್ಕೆ ಎತ್ತಿ ಕಟ್ಟಿ, ಸುಗಂಧ ದ್ರವ್ಯ ಬೆರೆಸಿದ್ದ ನಸುಬೆಚ್ಚಗಿನ ನೀರಿನಲ್ಲಿ ಸ್ನಾನ. ಮೈ ಒರೆಸಲು ಗರಿಗರಿಯಾದ ಬಟ್ಟೆ. ಪ್ರತಿ ಬೆಳಗ್ಗೆ ಉಡುವುದು ಅಗಸ ತಂದ ಮಡಿಮಾಡಿದ ಅರಿವೆಯನ್ನು. ಕಣ್ಣಿನ ರೆಪ್ಪೆಗೆಳಿಗೂ ಕಾಡಿಗೆ. ನರೆತ ಕೂದಲುಗಳಿಗೆ ಕಪ್ಪು. ಬಳಿಕ ಅಂಗಾಂಗಗಳಿಗೆ ಸುಗಂಧ ಸಾಮಗ್ರಿಗಳ ಲೇಪನ. ಮುಖದ ಕೆನ್ನೆಗಳಿಗೂ ತುಟಿಗಳಿಗೂ ಕೆಂಪು. ಬೆರಳು ತುದಿಗಳ ಹಿಮ್ಮೈಗಳಿಗೆ ರಂಗು.

ಅಲಂಕರಣ ಅಧಿಕಾರಿಯೂ ಅವನ ಸಿಬ್ಬಂದಿಯೂ ನಿಷ್ಕ್ರಮಿಸಿದೊಡನೆ ಪಾದುಕೆಗಳ ಅಧಿಕಾರಿ ಬಂದ. ಅರಸ ಬಂಗಾರದ ಹಾವುಗೆಗಳನ್ನು ಮೆಟ್ಟಿದ.

ಅಲ್ಲಿಂದ ಪೆರೋ ಏಳು ಜನ ಅಂಗರಕ್ಷಕರಿಂದ—ಅನುಚರರಿಂದ—ಆವೃತನಾಗಿ ದೇವಮಂದಿರಕ್ಕೆ ಹೊರಟ.

ಪವಿತ್ರೋದಕದ ಪ್ರೋಕ್ಷಾಳನದಿಂದ ಶುಚಿರ್ಭೂತವಾದ ಹೊಸ ನಡು ಬಟ್ಟೆಯಿಂದ, ಅಲಂಕೃತವಾದ, ಧೂಪಧೂಮದಿಂದ ಮುಸುಕಿದ ಸೂರ್ಯನ, ಹೊಂಗಿರಣದಿಂದ ಬೆಳಗಿದ ಪ್ಟಾ ದೇವತಾಮೂರ್ತಿಗೆ ಅರಸನಿಂದ ಪುಷ್ಪ ಪೂಜೆ, ಮೌನ ಪ್ರಾರ್ಥನೆ, ಭಕ್ತಿಪೂರ್ವಕ ಪ್ರಣಾಮ....

ಇದಾದೊಡನೆ ಗರ್ಭಗುಡಿಯ ಬಾಗಿಲನ್ನು ಇಕ್ಕಿದರು.

ಅರಮನೆಯ ಅಭಿಮುಖವಾಗಿ ಪೆರೋ ಹೊರಬೀಳುತ್ತಿದ್ದಂತೆ ಇನೇನಿಯೂ ಅವನ ಸಹಾಯಕರೂ ಘೋಷಿಸಿದರು :

"ಪೆರೋನ ಆಯುರಾರೋಗ್ಯ ವರ್ಧಿಸಲಿ!"

ಅಲ್ಪೋಪಹಾರದ ಬಳಿಕ ಕಿರೀಟಧಾರಣೆಯಾಗಿ ಲಾಂಛನಗಳೊಡನೆ ಸಭಾಭವನಕ್ಕೆ. ಅಲ್ಲಿ ಅಮಾತ್ಯರೊಡನೆ ಔಪಚಾರಿಕ ಭೇಟಿ.

ಅದಾದ ಮೇಲೆ ಈ ದಿನ—

ಲಾಂಛನಗಳಾದ ಕೊಂಡಿಕೋಲನ್ನೂ ಅಡಕತ್ತರಿಯನ್ನೂ ಒಂದಕ್ಕೊಂದು ಅಡ್ಡವಾಗಿ ಎದೆಯ ಮೇಲ್ಗಡೆ ಹಿಡಿದು ವೇದಿಕೆಯ ಮೇಲಣ ರತ್ನ

ಖಚಿತ ಸಿಂಹಾಸನದಲ್ಲಿ ಆರೂಢನಾದ ಅರಸ ಭವನದ ದ್ವಾರದತ್ತ ನಿರೀಕ್ಷೆಯ ನೋಟ ಬೀರಿದ.

ಬೆನ್ನ ಹಿಂದೆ ಅಂಗರಕ್ಷಕರು. ಮುಂದುಗಡೆ ಎಡಬಲಗಳಲ್ಲಿ ಚಾಮರ ಸೇವಕರು. ಲಿಪಿಕಾರರು ವೇದಿಕೆಯ ಮಗ್ಗುಲುಗಳಲ್ಲಿ.

ಬಲಗಡೆ ಸಿಂಹಾಸನದಿಂದ ಮೂರು ಮೊಳ ದೂರದಲ್ಲಿ ಸಾಧಾರಣ ಪೀಠದ ಮೇಲೆ ಅರಸನ ಪಾರ್ಶ್ವನೋಟಕ್ಕೆ ಎದುರಾಗಿ ಅಮಾತ್ಯ ಕುಳಿತಿದ್ದ. ವೇದಿಕೆಯನ್ನೂ ಕೆಳಗಿನ ನೆಲವನ್ನೂ ರತ್ನಗಂಬಳಿ ಆವರಿಸಿತ್ತು.

ಹಿನ್ನೆಲೆಯಲ್ಲಿ ಅದೇ ಮಟ್ಟದಲ್ಲಿ ಇನ್ನೊಂದು ವೇದಿಕೆ. ಪಟ್ಟದ ಮಹಿಷಿಯೂ ಇತರ ರಾಜಪರಿವಾರದವರೂ ಸಭೆಗೆ ಬರಲು ಇಚ್ಛೆಪಟ್ಟ ದಿನ ಅದರ ಬಳಕೆ.

ಭವನದ ತುಂಬ ಐಗುಪ್ತ ರಾಷ್ಟ್ರ ನಿರ್ಮಾಪಕ ಮೆನೆಸ್, ಆಳಿದ ಜೋಸರ್, ಕಾಫ್‌ರಾ, ಮೆನ್‌ಕೋರಾ, ಖೂಫು ಮತ್ತಿತರ ಪೆರೋ–ಪೂರ್ವಜರು ವಿವಿಧ ಚಟವಟಿಕೆಗಳಲ್ಲಿ ನಿರತರಾಗಿರುವುದನ್ನು ತೋರುವ ಭಿತ್ತಿಚಿತ್ರಗಳು. ಶುಭ್ರ ವರ್ಣಗಳಲ್ಲಿ.

ಪೆರೋ ಪೇಪಿಗೆ ಸಭಾಭವನ ಪರಮಪ್ರಿಯ ಸ್ಥಳ. ಅದೂ, ಸಭಾಸದರ ಗದ್ದಲ ಇಲ್ಲದಿದ್ದಾಗ. ಈ ಸಿರಿಸಂಪದ, ವೈಭವ, ಅಧಿಕಾರ ಎಲ್ಲವೂ ವಾಸ್ತವ ಎಂಬ ದೃಢಭಾವ ಪೇಪಿಗೆ ಮೂಡುತ್ತಿದ್ದುದು ಆತ ಸಭಾಭವನದಲ್ಲಿ ಸಿಂಹಾಸನದ ಮೇಲೆ ಕುಳಿತಾಗಲೇ. (ಇದೆಲ್ಲ ಕನಸು ಎಂದು ಭಾಸವಾಗುತ್ತಿದ್ದುದು. ರಾತ್ರೆ ಅರಮನೆಯ ಹಿಂಬದಿಯಲ್ಲಿ ನದಿ ದಂಡೆಯ ಮೇಲೆ ತಂಗಾಳಿಗೆ ಮೈಯನ್ನೊಡ್ಡಿ ಆಕಾಶದಲ್ಲಿನ ಅಸಂಖ್ಯ ನಕ್ಷತ್ರಗಳನ್ನು ದಿಟ್ಟಿಸಿದಾಗ.)

ನಿರೀಕ್ಷೆಯ ನಡುವೆ ಒಂದೆರಡು ಮಾತು.

“ಪ್ರಾಂತಪಾಲರು ಒಬ್ಬೊಬ್ಬರಾಗಿ ರಾಜಧಾನಿಗೆ ಬರತೊಡಗಿದ್ದಾರೆ.”

—ಪೆರೋನಲ್ಲಿ ಅರಿಕೆ.

“ಬರಲಿ. ಮುನ್ನೂರ ಅರವತ್ತೈದು ದಿನಗಳೂ ದುಡಿತ ಸಲ್ಲದು. ರಾಜಧಾನಿಯಲ್ಲಿ ನಮ್ಮ ಸಮೀಪದಲ್ಲಿದ್ದು ವಿಶ್ರಾಂತಿ ಪಡೆಯಲಿ.”

ಮತ್ತೆ ಮೌನ. ನಿರೀಕ್ಷೆ. ಬಳಿಕ ಅರಸ :

" ಗೇಬು ಮತ್ತು ಅವನ ಪತ್ನಿಯನ್ನು ಕರೆದು ಬಹಳ ಕಾಲವಾಯ್ತು. ಒಂದು ಔತಣ ?"

" ಮೆನೆಪ್‌ಟಾ ? "

" ಹ್ಞ. ಆದರೆ ತೀರಾ ಹತ್ತಿರದವರಿಗೆ ಸೀಮಿತ."

" ಅಪ್ಪಣೆ."

ದ್ವಾರದ ಬಳಿ ಇದ್ದವರಲ್ಲಿ ಜೀವಸಂಚಾರ.

* * * *

ಮೆನೆಪ್‌ಟಾ ಬೆಳಗ್ಗೆ ಬೇಗನೆ ಸಿದ್ಧನಾದ, ಪೆರೋ ದರ್ಶನಕ್ಕೆ ಹೋಗಲು. ಕರೆದೊಯ್ಯಲು ಬಂದ ಸೆನೆಬ್ "ಅವಸರವಿಲ್ಲ," ಎಂದ.

ಸಂದರ್ಶನಕ್ಕೆ ಬರುವ ವ್ಯಕ್ತಿ ಪೆರೋವನ್ನು ಕಾಯಿಸುವುದೆಂದರೆ ? ಹಾಗೆ ಆಗಬೇಕೆಂದೇ ಸೆನೆಬ್ ಆ ರೀತಿ ಹೇಳಿದ್ದು ; ಅವನಿಂದ ಯಾರೋ ಆ ಮಾತನ್ನು ಆಡಿಸಿದರು—ಎಂದು ಮೆನೆಪ್‌ಟಾ ಊಹಿಸಲಿಲ್ಲ.

ಸಭಾಭವನದ ಸಮೀಪ ಬಂದಾಗ, ವಿಲಂಬವಾಯಿತೇನೊ ? ಪ್ರಮಾದ ವಾಯಿತೇನೊ ? ಎಂದು ವಿವಂಚನೆಗೆ ಅವರು ಒಳಗಾದ. ಮರುಕ್ಷಣವೇ ಹಾಗಿರಲಾರದು ಎಂದುಕೊಂಡ.

ಸಭಾಭವನದ ದ್ವಾರವನ್ನು ಪ್ರವೇಶಿಸಿದ ಮೆನೆಪ್‌ಟಾಗೆ ಬವಳಿ ಬಂದಂತಾ ಯಿತು. ಅಬ್ಟು ಜಾತ್ರೆಯಲ್ಲಿ ಪೆರೋನನ್ನು ಅವನು ನೋಡಿದ್ದ....ಬೇಕಾದರೆ, ಅಮಾತ್ಯದರ್ಶನಕ್ಕಿಂತ ನೂರುಪಟ್ಟು ಹೆಚ್ಚು ಗಭೀರ....ಅರಸನನ್ನು ಕಂಡಾಗ ತಾನು ವಂದಿಸಬೇಕಾದ ವರ್ತಿಸಬೇಕಾದ ರೀತಿಯನ್ನು ಮತ್ತೆ ಮತ್ತೆ ಮನಸ್ಸಿನಲ್ಲೆ ಅವನು ಚಿತ್ರಿಸಿಕೊಂಡಿದ್ದ. ಆದರೂ—

ಪಾದರಕ್ಷೆಗಳನ್ನು ಕಳಚಿದ. ರತ್ನಗಂಬಳಿಯ ಮೇಲೆ ಬರಿಯ ಪಾದ. ನುಣುಪು ಮರಳನ್ನು ಮೆಟ್ಟಿದಂತೆ ಕನಸಿನಲ್ಲಿ ನಡೆಯುವವನ ಹಾಗೆ ಸಭಾಭವನದ ಮಧ್ಯಕ್ಕೆ ಸಾಗಿದ.

ಪೆಟಾರಿಯನ್ನು ಹೊತ್ತ ಬಟಾ, ಅವನ ಹಿಂದಿದ್ದ ಔಟ ಮತ್ತು ಬೆಕ್ ದ್ವಾರದ ಬಳಿಯೇ ನಿಂತರು, ನಾಯಕನ ನಡಿಗೆಯನ್ನು ನೋಡುತ್ತ.

ಸಿಂಹಾಸನದ ಪ್ರಭೆ ಕಣ್ಣು ಕುಕ್ಕಿತು. ಅದರಲ್ಲೊಂದು ಜೋಡಿ ಕಿರೀಟ.

ಮೆನೆಪ್‌ಟಾ ನಡುಬಗ್ಗಿಸಿ ನಮಿಸಿ, ನೆಟ್ಟಗೆ ನಿಂತು ನುಡಿದ :

" ಫೆರೋನ ಆಯುರಾರೋಗ್ಯ ವರ್ಧಿಸಲಿ !"

ಆ ಬಗೆಗೆ ನೀರಾನೆ ಪ್ರಾಂತದ ನಾಯಕ ಮೊದಲೇ ಯೋಚಿಸಿದ್ದ : ಬಂಡಾಯವೆದ್ದವರು ಶಿಷ್ಟಾಚಾರ ಪಾಲಿಸಬಾರದೆಂದು ಎಲ್ಲಿದೆ ?

ಅವನೆಂದುಕೊಂಡ : ಅತ್ಯಂತ ಕಷ್ಟದ ಹಂತವನ್ನು ದಾಟಿದ್ದಾಯಿತು ; ಇನ್ನು ಉಸಿರಾಡಬಹುದು.

ತುಸು ಕತ್ತು ಹೊರಳಿಸಿ, ಧ್ವನಿ ಬದಲಿಸಿ, ಅವನು ಕರೆದ :

" ಬಟಾ !"

ಕಾಣಿಕೆ ಚಲಿಸಿತು.

ಸೆನೆಬ್‌ನ ಸ್ವರ ಕೇಳಿಸಿತು :

" ಇನ್ನೂ ಮುಂದೆ ಹೋಗಿ."

ಮುಂದಕ್ಕೆ ವೇದಿಕೆಗಿದಿರು.

" ಹಿಡೀಲಾ ?" ಎಂದು ಮೆನೆಪ್‌ಟಾ ಕೇಳಿದುದು, ಬಟಾ "ಬೇಡ" ಎಂದುದು ಎಲ್ಲರ ಕಿವಿಗೂ ಬಿತ್ತು.

ಫೆರೋಗೆ ಇದು ಅಪೂರ್ವ ಅನುಭವ. ಅಮಾತ್ಯನಿಗೂ.

ಫಳಫಳನೆ ಹೊಳೆಯುತ್ತಿದ್ದ ಪೆಟಾರಿಯನ್ನು ಬಟಾ ಕೆಳಗಿಳಿಸಿದ. ಮುಚ್ಚಳ ತೆರೆದು, ಅಮೂಲ್ಯ ಹರಳುಗಳ ಶುಭ್ರತೆಯೊಡನೆ ಸ್ಪರ್ಧಿಸುತ್ತಿದ್ದ ಗಡಿಯಾರ ವನ್ನು ಎತ್ತಿ, ರತ್ನ ಗಂಬಳಿಯ ಮೇಲಿರಿಸಿದ. ಮತ್ತೆ ಪೆಟಾರಿ ಮುಚ್ಚಿ, ನುಣು ಪಾದ ಅದರ ಕವಚದ ಮೇಲೆ ಗಡಿಯಾರವನ್ನಿಟ್ಟ. ಎಲ್ಲರ ದೃಷ್ಟಿಗಳೂ ಅದರ ಮೇಲೆ ನೆಟ್ಟಾಗ, ಬಟಾ ತಾನು ಹಿಂದಕ್ಕೆ ಸರಿದು, ಕರಗಿ ಹೋದ.

ಮೆನೆಪ್‌ಟಾನ ಮಾತು :

" ಐಗುಪ್ತದ ಮಹಾಪ್ರಭುವಿಗೆ ನೀರಾನೆ ಪ್ರಾಂತದ ಅಲ್ಪ ಕಾಣಿಕೆ. ಸ್ವೀಕರಿಸಬೇಕು."

(ಕೆಪ್ಟು ಕೂಡಾ 'ಅಲ್ಪ ಕಾಣಿಕೆ' ಎಂದಿದ್ದ. ವಿನಯ ದ್ಯೋತಕ ಪದ.)

ಮೆನೆಪ್‌ಟಾನ ನೋಟಕ್ಕೆ ಸಿಂಹಾಸನ, ಕಿರೀಟ, ಅದಕ್ಕಂಟಿದ ಶಿರವಸ್ತ್ರ,

ವಸ್ತ್ರದ ಕೆಳಗೆ ಶಿರಸ್ಸು, ಶಿರಸ್ಸಿನ ಭಾಗವಾದ ಮುಖ ಹೊಂದಿಕೊಂಡುವು. ಪರಿಸರದ ಪೂರ್ಣಚಿತ್ರವನ್ನು ಅವನು ಕಂಡ.

ಅದರಲ್ಲಿ ಅಮಾತ್ಯನಿದ್ದ. ಪರಿಚಿತ ಸ್ವರ ಕೇಳಿಸಿತು :

“ ಮಹಾಪ್ರಭುವಿನ ಹತ್ತಿರಕ್ಕೆ ಬನ್ನಿ.”

ವೇದಿಕೆಯನ್ನೇರಲು ಪಾವಟಿಗೆ. ಪೆರೋನ ತುಟಿಗಳ ಮೇಲೆ ಮಂದಹಾಸ. ಕೊಂಡಿ ಕೋಲನ್ನು ಆತನ ಬಲಗೈ ಮುಂದಕ್ಕೆ ಚಾಚಿತು.

ಮೆನೆಪ್‌ಟಾ ಬಾಗಿ ಆ ಕೋಲನ್ನು ಚುಂಬಿಸಿ, ವೇದಿಕೆಯಿಂದ ಇಳಿದ.

ಸೆನೆಬ್‌ನ ಪಿಸು ದನಿ ಪಕ್ಕದಿಂದ ಬಂತು :

“ ಈಚೆಗೆ ಬರಬೇಕು. ಈ ಪೀಠದ ಮೇಲೆ. ಅಮಾತ್ಯರು ಸನ್ನೆ ಮಾಡ್ತಿದ್ದಾರೆ. ಕೂತ್ಕೊಳ್ಳಿ.”

(‘ ಸಂಜ್ಞೆ ತನಗೆ ಕಾಣಿಸುತ್ತಿಲ್ಲವೆ ? ಈತ ಹೇಳಿಕೊಡಬೇಕೆ ಇದನ್ನು ?’)

ಕಿರೀಟಧಾರಿ ತಗ್ಗಿದ ಧ್ವನಿಯಲ್ಲಿ ಏನನ್ನೋ ಹೇಳಿದ ಸದ್ದು.

ಅಮಾತ್ಯ :

“ ಸೆಡ್ ಉತ್ಸವಕ್ಕೆಂದು ನೀರಾನೆ ಪ್ರಾಂತದ ನಾಯಕ ಇಷ್ಟು ಬೇಗನೆ ರಾಜಧಾನಿಗೆ ಬಂದದ್ದನ್ನು ಕಂಡು, ಮಹಾಪ್ರಭು ಸಂತುಷ್ಟರಾಗಿದ್ದಾರೆ.”

(ತಾನು ಏನಾದರೂ ಹೇಳಬೇಕಲ್ಲ?) ಮೆನೆಪ್‌ಟಾ ನುಡಿದ :

“ ಧನ್ಯ.”

ಮತ್ತೆ ಪೆರೋನ ನಿಧಾನ ಮಾತು. ತುಸು ದೀರ್ಘ.

ಅಮಾತ್ಯ :

“ ತನ್ನ ಮಂದೆಯ ಸುಖ ದುಃಖಗಳನ್ನು ಮಹಾಕುರುಬ ಚೆನ್ನಾಗಿ ಬಲ್ಲ—ಎನ್ನುತ್ತಾರೆ—ಮಹಾಪ್ರಭು. ದೊಡ್ಡ ಕುಟುಂಬ. ಸಣ್ಣ ಪುಟ್ಟ ವಿರಸ ಸ್ವಾಭಾವಿಕ. ಎಲ್ಲರ ತಂದೆಯ ಒಲವಿನ ಹೊನಲಿನಲ್ಲಿ ತಾಪಗಳು ಮಾಯವಾಗ್ತವೆ, ಗಾಯಗಳು ಮಾಯುತ್ತವೆ.”

(ಏನು ಪ್ರತಿಮಾತು ಇದಕ್ಕೆ ?) ಮೆನೆಪ್‌ಟಾ ಬರಿದೆ ತಲೆ ಆಡಿಸಿದ.

ತಿರುಗಿ ಪೆರೋ ಮಾತನಾಡಿದುದನ್ನು ಅಮಾತ್ಯ ವಿವರಿಸಿದ :

“ ಎಲ್ಲ ರೀತಿ ರಿವಾಜುಗಳನ್ನೂ ನೀತಿ ನಿಯಮಗಳನ್ನೂ ಮಹಾದೇವ ರಾ ತನ್ನ ಆಳ್ವಿಕೆಯಲ್ಲೇ ತೀರ್ಮಾನ ಮಾಡಿದ. ಚಾಚೂ ತಪ್ಪದೆ ಅದನ್ನೆಲ್ಲ

ಅನುಸರಿಸಿದಾಗಲೇ ಪ್ರಜಾಹಿತ, ದೇಶಹಿತ. ಪ್ರಾಚೀನ ಕಟ್ಟಳೆಗಳನ್ನು ಮುರಿಯುವ ಯತ್ನ ಯಾರೇ ಮಾಡಲಿ, ಯಾರೇ ಮಾಡಲಿ ? ಅದರಿಂದ ಹಾನಿ ಉಂಟಾಗ್ತದೆ. ಜನರೊಡನೆ ಹೊಣೆಗೆಟ್ಟು ವರ್ತಿಸಿದವನು ದಂಡನೆಗೆ ಅರ್ಹ."

(ಯಾರೇ ಮಾಡಲಿ, ಯಾರೇ ಮಾಡಲಿ ? ಮಹಾ ಅರ್ಚಕ ?.... 'ಜನರೊಡನೆ ಹೊಣೆಗೆಟ್ಟು ವರ್ತಿಸಿದವನು '? ಟೆಹುಟ ?)

ಅರ್ಥವಾಯಿತು ಎನ್ನುವಂತೆ ಮೆನೆಪ್‌ಟಾ ಗೋಣು ಆಡಿಸಿದ.

ಕಿರೀಟ ಮಿಸುಕಿತು.

" ಮಹಾಪ್ರಭು ಸಂತೃಪ್ತರಾಗಿದ್ದಾರೆ. ನೀವು ಅತಿಥಿಗೃಹಕ್ಕೆ ವಾಪಸಾಗ್ಬಹುದು." ಎಂದ ಅಮಾತ್ಯ.

ಮೆನೆಪ್‌ಟಾ ಎದ್ದ. ಪೆರೋನನ್ನೂ ಅಮಾತ್ಯನನ್ನೂ ನೋಡಿ ನಸುನಗೆ. ವೇದಿಕೆಗೆ ನಮನ.

ಸೆನೆಬ್ ಪಿಸುನುಡಿದ :

" ಪೆರೋಗೆ ಬೆನ್ನು ಹಾಕ್ಬೇಡಿ."

ನೀಳದೇಹ ಗಂಭೀರವಾಗಿ ಹಿಮ್ಮುಖವಾಗಿ ಚಲಿಸಿತು. ಬಾಗಿಲ ಬಳಿ ಬಟಾ, ಬೆಕ್, ಔಟರು ಆ ದೇಹವನ್ನು ಸುತ್ತುವರಿದರು, ತಮ್ಮ ವಶಕ್ಕೆ ತೆಗೆದುಕೊಂಡರು.

ನಾಯಕ ಹೊಸ್ತಿಲು ದಾಟುತ್ತಿದ್ದಂತೆ ಪೆರೋ ಅಮಾತ್ಯನಿಗೆ ಅಂದ :

" ನೀರಾನೆ ಪ್ರಾಂತ ಮೆಂಫಿಸಿನಿಂದ ಸಿಡಿದು ಹೋಗಿಲ್ಲ; ಮೆಂಫಿಸ್ ತಾನೇ ಆ ಪ್ರಾಂತದಿಂದ ದೂರವಾಗಿದೆ."

* * * *

ಪೆರೋ ಪೇಪಿಯ ತಂದೆಯ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತ್ತು, ಮೆಂಫಿಸಿನ ನಗರೋದ್ಯಾನ. ಶ್ರೀಮಂತರಿಗಾದರೋ ಅವರ ಅಂಗಳದಲ್ಲೇ ತಾವರೆಕೊಳಗಳೂ ಹೂವಿನ ಗಿಡಗಳೂ ಇದ್ದುವು. ಸಾಮಾನ್ಯ ಪ್ರಜೆಗಳು ಬಿಡುವಿನ ವೇಳೆಯಲ್ಲಿ ಬಂದು ವಿಹರಿಸಲೆಂದು ನಗರೋದ್ಯಾನದ ನಿರ್ಮಾಣವಾಯಿತು. ಮೊದಲು ಹೊಸತನದ ಆಕರ್ಷಣೆ. ಕ್ರಮೇಣ, ಸಂಚರಿಸುವ ಜನರು ಹಾದುಹೋಗುವ ಸ್ಥಳ ಮಾತ್ರವಾಯಿತು ಉದ್ಯಾನ. ಅನಂತರ ಕೆಲವು ವರ್ಷ ನೂತನ ಪೆರೋ ಆಸಕ್ತಿ ತೋರಿದ. ಉದ್ಯಾನ ಮಧ್ಯದ ಕೊಳದಲ್ಲಿ ಒಂದು ಮೊಸಳೆಯನ್ನೂ

ಸಾಕಿದ. ಮೂರ್ತಿಗೆ ಆಭರಣಗಳನ್ನು ಚುಚ್ಚಿದ ಮೊಸಳೆ. ಜನರು ಅದರ ಪೂಜೆಗೆ, ಅದಕ್ಕೆ ಆಹಾರ ನೀಡವುದಕ್ಕೆ, ಬರತೊಡಗಿದರು. ಕೆಲವರು ಹೊ ಕೀಳುತ್ತಿದ್ದರು. ಅವರನ್ನು ಗದರಿಸಿ ಓಡಿಸುವುದೇ ಕಾವಲು ಭಟರ ಕೆಲಸ ವಾಯಿತು.

ಊರಿನಲ್ಲಿ ರಾಜಗೃಹದ ಸುತ್ತಲೂ ಉದ್ಯಾನ ನಿರ್ಮಿಸಿದ್ದ ಮೆನೆಪ್‌ಟಾ ರಾಜಧಾನಿಯ ವಿಹಾರೋದ್ಯಾನವನ್ನು ನೋಡಬಯಸಿದ.

ಪೆರೋನನ್ನು ಕಂಡ ಎರಡು ದಿನಗಳ ಅನಂತರ ಬೆಳಿಗ್ಗೆ ಅಂಬಿಗರನ್ನೊಳ ಗೊಂಡ ತನ್ನಪರಿವಾರದೊಡನೆ ನಾಯಕ ಅರಮನೆಯ ಆವರಣದಿಂದ ಹೊರ ಬಿದ್ದ. ಬಟಾ ಎಂದೋ ಒಮ್ಮೆ ಇತರ ಅಂಬಿಗರ ಜೊತೆಯಲ್ಲಿ ಅಮಲೇರಿದ್ದ ಸ್ಥಿತಿಯಲ್ಲಿ ಉದ್ಯಾನ ನೋಡಿದ್ದ. ಯಾವ ಹಾದಿಯೊ ನೆನಪಿರಲಿಲ್ಲ.

ದಾರಿ ಕೇಳುತ್ತ ನಗರೋದ್ಯಾನ ತಲಪಿದರು, ಉದ್ಯಾನ ವಿಶಾಲವಾಗಿತ್ತು. ಬಗೆ ಬಗೆಯ ಮರಗಳಿದ್ದುವು, ಗಿಡಬಳ್ಳಿಗಳಿದ್ದುವು. ಆದರೆ ಕಳೆ ಹೇರಳವಾಗಿತ್ತು. ಮುಳ್ಳು ಪೊದೆಗಳು ಬೆಳೆದಿದ್ದುವು. ನೀರು ಹಾಯಿಸುವ ಕಾಲುವೆ ವ್ಯವಸ್ಥೆ ಕೆಟ್ಟಿತ್ತು. ಕಾಲುದಾರಿಗಳು ಚೊಕ್ಕಟವಿರಲಿಲ್ಲ.

ಬಟಾ ಊರಿನ ಉದ್ಯಾನವನ್ನು ನೆನೆದು, "ನಮ್ಮ ಸೆಬೆಕ್ಳು ಮಾವ ಇದನ್ನು ನೋಡಿದರೆ ಇಸ್ಸಿ ಎಂದಾರು," ಎಂದ.

ಮೆನೆಪ್‌ಟಾನೆಂದ :

"ದೇಶದ ಸ್ಥಿತಿಯೇ ಉದ್ಯಾನಕ್ಕೂ."

ಜನರಿರಲಿಲ್ಲ. ರಾತ್ರಿ ಅಲ್ಲಿಯೇ ಮರಗಳ ಕೆಳಗೆ ಮಲಗಿದ್ದ ವಸತಿಹೀನ ಪಟ್ಟಣಿಗರು ಕೆಲವರು 'ಸೂರ್ಯ ಕಿರಣಗಳು ಚುಚ್ಚುತಿರ್ವೆಯಲ್ಲ, ಇನ್ನು ಏಳ ಬೇಕಲ್ಲ' ಎಂದು ಚಡಪಡಿಸುತ್ತಿದ್ದರು. ಗ್ರಾಮಾಂತರ ಪ್ರದೇಶದಿಂದ ಬಂದಿದ್ದ ಎರಡು ಕುಟುಂಬಗಳು ಕೊಳದ ಬಳಿ ಬುತ್ತಿಯೂಟಕ್ಕೆ ಕುಳಿತಿದ್ದುವು. ಮೊಸಳೆಗೆ ಆಹಾರ ನೀಡುವ ಅಪೇಕ್ಷೆ ಅವರಿಗೆ. ಆದರೆ ಆ ದೇವತೆ ಕೊಳದ ನಡುವಿನ ಬಂಡೆಯ ಅಂಚಿಗೆ ತೆವಳಿ ಎಳೆಬಿಸಿಲು ಕಾಯಿಸುತ್ತ ನಿದ್ದೆ ಹೋಗಿತ್ತು. ಯಾವುದರ ಗಮನವೂ ಅದಕ್ಕೆ ಇರಲಿಲ್ಲ.

ಸ್ವಲ್ಪ ಹೊತ್ತು ಕುಳಿತು ಕಾಲ ಕಳೆಯೋಣವೆಂದು ಉದ್ಯಾನದ ಅಂಚಿನಲ್ಲಿದ್ದ ತಾಳೆ ಮರಗಳ ಒಂದು ಗುಂಪಿನೆಡೆಗೆ ಮೆನೆಪ್‌ಟಾನೂ ಸಂಗಡಿಗರೂ ನಡೆದರು.

ಅವರು ಅದನ್ನು ಸಮಾಪಿಸುತ್ತಿದ್ದಂತೆ ಹಿಂದಿನಿಂದ ಒಂದು ಧ್ವನಿ ಕೇಳಿಸಿತು :

" ಅಣ್ಣಾ ! ಓ ಅಣ್ಣಾ !"

ಹತ್ತಿರ ಬರುತ್ತಿದ್ದ ಕರೆ. ನಡೆಯುತ್ತಿದ್ದವರು ತಡೆದು, ತಿರುಗಿ ನೋಡಿದರು. ತಿರುಗಿ ನೋಡಿ, ನಿಂತರು. ಆತ ಮೆನ್ನ.

ಮೆನ್ನ ಪ್ರಶ್ನಿಸಿದ :

" ಹ್ಯಾಗೆ ತಪ್ಪಿಸ್ಕೊಂಡು ಬಂದ್ರಿ ?"

ಬಟಾ ಮರುಪ್ರಶ್ನೆ ಹಾಕಿದ :

" ಹಾಗ್ಯೆ ತಪ್ಪಿಸ್ಕೊಂಡು ಬಂದ್ರಿ ಅಂತ ನಾವೇ ನಿಮ್ಮನ್ನು ಕೇಳಿದರೆ ?"

" ಹ್ಞ ! ದ್ವಂದ್ವ ! ಉತ್ತರ ಹೇಳ್ತೀನೆ. ಏಳು ದಿನಕ್ಕೊಮ್ಮೆ ಅರಮನೆ ಅರ್ಚಕ ಇನೇನಿ ಮಹಾಮಂದಿರಕ್ಕೆ ಹೋಗ್ತಾರೆ. ಮಹಾ ಅರ್ಚಕರಿದ್ದರೆ, ಅವರ ಭೇಟಿಗೆ, ಅವರಿಲ್ಲವಾದರೆ, ಅರಮನೆ ಸುದ್ದೀನ ಅವರಿಗೆ ತಿಳಿಸೋ ವ್ಯವಸ್ಥೆ ಮಾಡೋದಕ್ಕೆ. ಅಂಥ ದಿವಸ ನಾನು ಇಲ್ಲಿ! ಮೊದಲ ಸಲ ಗೊತ್ತಾದಾಗ ಇನೇನಿ ಕೂಗಾಡಿದ್ರು, ಆ ಮೇಲೆ ಗಲಾಟೆ ಇಲ್ಲ. 'ಎಲ್ಲಾದರೂ ಹಾಳಾಗಿ ಹೋಗ್ಲಿ,' ಅಂತ ಬಿಟ್ಟರ್ಬೇಕು. ನೀವು? ಓ! ತಿಳೀತು! ನೀವು ರಾಜ ಅತಿಥಿಗಳು. ಸ್ವತಂತ್ರರು. ಆದರೂ ಹುಷಾರಾಗಿರ್ಬೇಕಪ್ಪ, ಹುಷಾರಾಗಿರ್ಬೇಕು. ಅರಮನೆಯಿಂದ ಅಂಗರಕ್ಷಣೆಗೆ ಅಂತ ಯಾರೂ ಬಂದಿಲ್ವ? ಕೇಳದೆ ಹೊರಟ್ರಾ? ಇವರು ಯಾರು ? ತೋಳುಗಳ ಮಾಂಸಖಂಡ ನೋಡಿದರೇ ಗೊತ್ತಾಗ್ತದೆ. ನಿಮ್ಮ ಅಂಬಿಗರು ಅಲ್ಲವಾ ?"

ಮೆನೆಪ್‌ಟಾನೆಂದ :

" ಬನ್ನಿ ಮೆನ್ನ. ಆ ಮರಗಳ ಕೆಳಗೆ ಕೂತ್ಕೊಳ್ಳೋಣ."

" ಓಹೋ ! ಓಹೋ ! ನಡೀರಿ."

ಬಟಾ ತುಸು ನಿಧಾನಿಸಿ ಮೆನ್ನನ ಹಿಂದಿನಿಂದ ಬರತೊಡಗಿದ. ಅವನೆಂದ :

" ಬೆನ್ನಿನ ಮೇಲೆ ಗುರುತು ಇನ್ನೂ ಇದೆ. ಅವತ್ತು ಕತ್ತಲೇಲಿ ಕಾಣಿಸ್ಲಿಲ್ಲ."

ಮೆನ್ನ ನಕ್ಕ.

" ಅದಾ ? ಇನೇನಿ ಹೇಳಿದರಾ ? ಪೆರೋ ತಾನು ಸೆರೆಹಿಡಿದವರಿಗೆ ಕಾದ ತಾಮ್ರದ ತುಂಡಿನಿಂದ ಮುದ್ರೆ ಒತ್ತುತ್ತಾರೆ. ಮಹಾ ಅರ್ಚಕರಿಗೆ ಬರೆ

ಎಳೆಯೋ ಹಕ್ಕಾದರೂ ಬೇಡವಾ ?"

"ಬಹಳ ಹಿಂಸೆ ಸಹಿಸಿದಿರಿ, ಮೆನ್ನ," ಎಂದ ಮೆನೆಪ್‌ಟಾ.

"ನೀವು ಸಹಿಸಿದ್ದು ಹೆಚ್ಚೋ? ನನ್ನದು ಹೆಚ್ಚೋ? (ಕುಪ್ಪಳಿಸುತ್ತ ಮೆನೆಪ್‌ಟಾಗೆ ಒಂದು ಸುತ್ತು ಬಂದು) ಕತ್ತಲಲ್ಲೂ ಇಲ್ಲ, ಹಗಲಲ್ಲೂ ಇಲ್ಲ. ನೀರಾನೆ ತೊಗಲಿನ ಚಾವಟೀಲಿ ನಿಮಗೆ ಹ್ಯಾಗೆ ಬಾರಿಸಿದೆ ಅಂತ ಬಕಿಲ ಬಡಾಯಿ ಕೊಚ್ಕೊಳ್ತಿದ್ನಂತೆ....ನಿಮ್ಮದು ಕಣ್ಣೀರು ಒರೆಸೋ ಕೈ. ಚಾಟಿ ಗಾಯಗಳು ಬರಿಯ ಸ್ಪರ್ಶಕ್ಕೇ ಮಾಯವಾಗಿವೆ."

ಮರಗಳ ಬಳಿ ಒಂದು ಕಾಂಡಕ್ಕೊರಗಿ ಮೆನ್ನ ಕುಳಿತ. ಚಿಕ್ಕಮಗುವಿನಂತೆ ಪಾದಗಳನ್ನು ಗಾಳಿಯಲ್ಲಿ ಝಾಡಿಸಿ ಆತನೆಂದ:

"ಈಗ ನಾನೆಷ್ಟು ಸುಖಿ, ಗೊತ್ತೆ ? ನದಿದಂಡೆಯಲ್ಲಿ ನಿಮ್ಮನ್ನೆಲ್ಲ ಆ ರಾತ್ರಿ ಕಂಡ್ಮೇಲೆ ನಾನು ದಂಡೆಗೆ ಹೋಗಿಯೇ ಇಲ್ಲ; ಆ ಹಾಡು ತಿರುಗಿ ನಾನು ಹಾಡಿಯೇ ಇಲ್ಲ. ಅವತ್ತಿನಿಂದ ನಿಮ್ಮ ಜತೆ ನಾನು ಮಾತಾಡ್ತಾನೇ ಇದೇನೆ—ಮನಸ್ನಲ್ಲಿ! ....ಇರೋದನ್ನೆಲ್ಲ ತೊಡೆದು ಹಾಕಿ, ಹೊಸದಾಗಿ ಸೃಷ್ಟಿಸೋದು ಎಷ್ಟು ರೋಮಾಂಚಕಾರಿ! ನಿಮ್ಮ ಬಂಡಾಯದ ವಿಷಯ ಕೇಳಿದಾಗ—ಸಾಧ್ಯವಿಲ್ಲ; ಇದು ಕಟ್ಟುಕತೆ. ಯಾವುದೋ ಉದ್ದೇಶಕ್ಕಾಗಿ ಹುಟ್ಟಿಸಿದ್ದಾರೆ; ನಿಜವಾದ್ದೇ ಆದರೆ ಚಚ್ಚಿ ಸಾಯಿಸ್ಬಿಡ್ತಾರೆ ಅಂದ್ಕೊಂಡೆ. ಮುಂದೆ ಕಥಾನಾಯಕನನ್ನು ಜೀವಂತವಾಗಿ ಕಂಡಾಗ, 'ಎಲ್ಲ ಬದುಕು ಅಸಹ್ಯವಲ್ಲ' ಅನಿಸ್ತು. ನೀಲನದಿಯ ಆಳ ಅಪ್ರಿಯವಾಯ್ತು. ಬದುಕೋ ಆಸೆಯಾಯ್ತು. ನಿನ್ನೆ ಇನೇನಿ ಒಂದಿಷ್ಟೂ ಕಸ ಇಲ್ಲದ ಹಾಗೆ ಗುಡಿಸ್ತಿದೀಯಲ್ಲ—ಆಶ್ಚರ್ಯ' ಅಂದ್ರು. ನಾನೀಗ ಸತ್ತ ಕಡ್ಡಿಯಲ್ಲ. ಜೀವಂತ ಪೊರಕೆ. ಅವರಿಗೆ ಅದು ಹ್ಯಾಗೆ ಅರ್ಥವಾದೀತು ?"

ಇನ್ನಷ್ಟು ಕೇಳೋ ಆಸೆ ಮೆನೆಪ್‌ಟಾಗೆ. ಆದರೆ ಮೆನ್ನ ಸುಮ್ಮನಾದ. ಕಣ್ಣುಗಳನ್ನು ಮುಚ್ಚಿಕೊಂಡ. ಕಂಬನಿ ತೊಟ್ಟಿಕ್ಕಿತು. ಕಣ್ತೆರೆದು, ಬಾಯಿ ಅಗಲಿಸಿ ನಕ್ಕ. ಮೇಲಿನ ಸಾಲಿನ ಎರಡು ಹಲ್ಲುಗಳು ಇರಲಿಲ್ಲ.

ಬಟಾ ಮೆನೆಪ್‌ಟಾನ ಮುಖ ನೋಡಿದ. ಮೆನ್ನನ ಮಾತುಗಳ ಪೂರ್ಣ ಅರ್ಥ ಗ್ರಹಿಸಲು ತಾನು ಅಸಮರ್ಥ ಎಂದಿತು ಅವನ ನೋಟ. ಉಪಯುಕ್ತವಾದುದೇನನ್ನಾದರೂ ಮಾತನಾಡೋಣವೆಂದು, ಬಟಾ ಕೇಳಿದ:

"ನಿಮಗೆ ಜನನ ಫಲ ಹೇಳೋದಕ್ಕೆ ಬರ್‍ತ್ತದಾ ?"

"ಬರದೇನು ? ಜನನ ಫಲ, ಕನಸಿನ ಅರ್ಥ ವಿವರಣೆ, ಮಂತ್ರ ಮಾಯೆ—ಆರ್ತರನ್ನು ಸಾಂತ್ವನಪಡಿಸೋ ಈ ಎಲ್ಲಾ ವಿದ್ಯೆ ಕಲಿತಿದ್ದೇನೆ. ಯಾವನೋ ಬುದ್ಧಿವಂತ—ಥೊಥ್‌ನೇ ಇರಬೇಕು—ಇಂಥದು ಹೀಗೆ, ಅಂದ. ನಾವು ಅದನ್ನು ಪುನರುಚ್ಚರಿಸ್ತೇವೆ; ಲಂಗು ಲಗಾಮಿಲ್ಲದೆ ಬುರುಡೆ ಬಿಡ್ತೇವೆ."

ತಾನು ಮಾಡಿದ ಪ್ರಸ್ತಾಪ ಅನುಚಿತವಾಯಿತೇನೋ ಎನಿಸಿತು ಬಟಾನಿಗೆ. ಹೇಗೂ ಹೆಜ್ಜೆ ಇಟ್ಟಾಯಿತಲ್ಲ ಎಂದು, "ನಾನು ಹುಟ್ಟಿದ್ದು ಪಾವೊಫಿ ಮಾಸದ ಆರರ ದಿನ," ಎಂದ.

"ಪಾವೊಫಿ ಆರು....ಅದ್ಭುತ....ಪ್ರಾಚೀನರ ಜ್ಞಾನದ ಪ್ರಕಾರ ಈ ದಿನ ಹುಟ್ಟಿದವನು ಕುಡಿದು ಕುಡಿದು ಸಾಯ್ತಾನೆ."

"ನೀವು ಹೇಳಿದ್ದು ಸತ್ಯಕ್ಕೆ ಬಹಳವೇನೂ ದೂರವಿಲ್ಲ !" ಎಂದು ಮೆನೆಪ್‌ಟಾ, ಬಟಾನೆಡೆಗೆ ದೃಷ್ಟಿಬೀರಿ, ನಕ್ಕ.

"ನನ್ನ ಹದಿನಾರನೇ ವರ್ಷದಲ್ಲಿ ಒಬ್ಬ ದೇವಸೇವಕ ಹೀಗೆಯೇ ಭವಿಷ್ಯ ಹೇಳಿದ್ರು. ಒಂದು ಗುಟುಕು ಜಾಸ್ತಿ ಕುಡಿಯೋಕೆ ಅವತ್ತೇ ಶುರು ಮಾಡ್ದೆ," ಎಂದ ಬಟಾ, ಗೊಳ್ಳೆಂದು ನಗುತ್ತ.

ಮೆನ್ನನೆಂದ :

"ನಾನು ಹುಟ್ಟಿದ್ದು ಥೊಥ್ ತಿಂಗಳ ಇಪ್ಪತ್ತಮೂರನೇ ದಿವಸ. ನನ್ನ ತಂದೆ ಸ್ವತಃ ದೇವಸೇವಕ. ಈ ಮಗೂಗೆ ಅಲ್ಪಾಯುಸ್ಸು; ಬಹಳ ದಿನ ಇರೋದಿಲ್ಲ—ಅಂತ ಹೇಳಿ, ಅವನು ತಲೆಕೆರೆದುಕೊಂಡ್ನಂತೆ. ನನಗೆ ಸಾವು ಬರಲಿಲ್ಲ. ಅವನಿಗೆ ಬಂತು—ಮುಂದೆ ಒಂದೇ ತಿಂಗಳಲ್ಲಿ ! ಮೆನೆಪ್‌ಟಾ ಅಣ್ಣ, ನಿಮ್ಮ ಜನ್ಮದಿನ ?"

"ಜೊಯಾಕಲೆ ಇಪ್ಪತು....ನಾನು ಕುರುಡನಾಗ್ತೇನೆ ಅಂತ ಅರ್ಚಕ ಹೇಳಿದ್ರು."

"ಹಾದು—ಜನನ ಫಲದ ಪ್ರಕಾರ. ಆದರೆ ಯಾರಿಗೂ ಇಲ್ಲದ ದೃಷ್ಟಿ ಸಾಮರ್ಥ್ಯ ನಿಮಗಿದೆ. ನೀರಾನೆ ಪ್ರಾಂತದಲ್ಲಿ ಈ ಹೊತ್ನಲ್ಲಿ ಯಾರು ಯಾರು ಏನೇನು ಮಾಡ್ತಿದ್ದಾರೆ ಅನ್ನೋದು ಇಲ್ಲಿಂದಲೇ ನಿಮಗೆ ಕಾಣಿಸೋದಿಲ್ವಾ ?"

ಮೆನೆಪ್‌ಟಾ ನಸುನಕ್ಕ.

ಬೆಕ್–ಔಟರೂ ಅಂಬಿಗರೂ ತಮ್ಮ ತಮ್ಮ ಜನನ ಫಲ ಕೇಳಬೇಕು ಎಂದುಕೊಂಡಿದ್ದರು. ಮೆನ್ನನ ಮಾತಿನ ವೈಖರಿ ನೋಡಿ, ಅವರು ತೆಪ್ಪ ಗಾದರು. ನಾಯಕನ ಕನಸಿನ ಬಗೆಗೆ ಹೇಳೋಣವೇ ಎಂದು ಯೋಚಿಸು ತ್ತಿದ್ದ ಬಟಾನೂ ಸುಮ್ಮನಾದ.

ವೃತ್ತಾಕಾರವಾಗಿ ಕುಳಿತಿದ್ದವರನ್ನೆಲ್ಲ ಒಮ್ಮೆ ನೋಡಿ ಮೆನ್ನನೆಂದ :

"ಜ್ಞಾನ ಅಜ್ಞಾನಗಳಿಗೆ ಯಾವಾಗಲೂ ಜಗಳ. ಅರಿವಿನ ಬೆಳಕನ್ನು ಮನುಷ್ಯ ಕಂಡಾಗಿನಿಂದಲೂ ಇದು ನಡೆದಿರಬೇಕು. ವಿದ್ಯಾದೇವತೆ ಥೊಥ್ ಲಿಪಿಯನ್ನೇನೋ ಕಂಡು ಹಿಡಿದ. ಆದರೆ ಜನ ಸುಲಭವಾಗಿ ಅದನ್ನು ಒಪ್ಪಿ ಕೊಳ್ಳಿಲ್ಲ."

"ಹೌದೆ ?"

"ಪೆರೋ ಆಹಮೋಸ್ ಒಳ್ಳೆಯವನು. ಆದರೆ ಲಿಪಿ ಅವನಿಗೆ ಇಷ್ಟ ವಿರಲಿಲ್ಲ. 'ಬರವಣಿಗೆ ನಾಗರಿಕತೆಯ ವೈರಿ' ಅಂದ. 'ಇಷ್ಟಪವರೆಗೆ ಮಕ್ಕಳೂ ಯುವಕರೂ ಶ್ರದ್ಧೆಯಿಟ್ಟು ಕಲೀತಿದ್ರು; ಕಲಿಸಿದ್ದನ್ನು ಕಷ್ಟಪಟ್ಟು ನೆನಪಿಟ್ಕೋ ತಿದ್ರು. ಬರವಣಿಗೆ ಬಂದ್ಮೇಲೆ ಅವರ ಜ್ಞಾಪಕ ಶಕ್ತಿ ಮೊಂಡಾಯ್ತು' ಅಂತ ಗೋಗರೆದ."

"ಹಹ್ಹ !"

ನಾಯಕನ ಜತೆ ಬಟಾನೂ ನಕ್ಕು ಅಂದ :

"ನಮ್ಮಲ್ಲಿ ಅಕ್ಷರಾಭ್ಯಾಸ ಈಗ ತಾನೇ ಶುರುವಾಗಿದೆ. ಚಿಕ್ಕವರ ಜ್ಞಾಪಕ ಶಕ್ತಿ ಮಾಯವಾಗೋದಕ್ಕೆ ಎಷ್ಟು ಕಾಲ ಬೇಕೋ ನೋಡೋಣ !"

ಮೆನೆಪ್‌ಟಾ ಕೇಳಿದ :

"ನಿಮ್ಮ ಜ್ಞಾಪಕ ಶಕ್ತಿ ಮಂದವಾಗಿದೆಯೆ ಮೆನ್ನ ?"

"ಹುಂ ! ಮಹಾ ಅರ್ಚಕ ಬರೆ ಎಳೆದಮೇಲೆ ಅದು ವಿಪರೀತ ಚುರು ಕಾಗಿದೆ ! ಬಾಲ್ಯದ ಕಹಿನೆನಪುಗಳನ್ನು ಮರೆಯೋದಕ್ಕೆ ಯತ್ನಿಸ್ತೇನೆ. ಆಗೋದಿಲ್ಲ. ನೆನಪಿನ ಗವಿಯಲ್ಲಿ ಆಳಕ್ಕೆ ಅದುಮಿದಷ್ಟೂ ಧುಮುಧುಮಿ ಸ್ಕೊಂಡು ಹೊರಗೆ ಬರ್‍ತವೆ....ಮನುಷ್ಯ ವಿಚಿತ್ರ ಪ್ರಾಣಿ. ಒಳ್ಳೇದೂ ಮಾಡ

ಬಲ್ಲ; ಕೆಟ್ಟದೂ ಮಾಡಬಲ್ಲ. ಅದೂ ಇದೂ ಯೋಚಿಸ್ತಿರ್ತೀನೆ. ವಿಚಾರಗಳು ಸಿಕ್ಕುಗಂಟಾದಾಗ ತಲೆ ಬಿಸಿಯಾಗ್ತದೆ. ಸಹಸ್ರ ಹೋಳಾಗ್ತದೇನೊ ಅನ್ನೋ ಹಾಗೆ ಮೆದುಳು ಧಿಮಿಗುಟ್ಟದೆ....ನೀರಾನೆ ಪ್ರಾಂತದಲ್ಲಿ ಅಕ್ಷರಾಭ್ಯಾಸ!....ನಮ್ಮ ಸಮಾಜದ ದೃಷ್ಟೀಲಿ ವಿದ್ಯಾಭ್ಯಾಸದ ಗುರಿಗಳು ಮೂರು. ಒಂದನೇದು, ಆಸ್ಥಾನದಲ್ಲಿ ಉನ್ನತ ಪದವಿಗೇರೋದು; ಎರಡನೇದು, ಯಶಸ್ಸು ಗಳಿಸೋದು—ಅಂದರೆ ವಿಸ್ತಾರ ಭೂಮಿಗೂ ಹೆಚ್ಚು ಸಂಖ್ಯೆಯ ರಾಸುಗಳಿಗೂ ಒಡೆಯನಾಗೋದು; ಮೂರನೇದು, ಭವ್ಯ ಗೋರೀಲಿ ಅಂತಿಮ ವಿಶ್ರಾಂತಿ ಪಡೆಯೋದು. ನೀರಾನೆ ಪ್ರಾಂತದ ಸಮಾಜಕ್ಕೆ ಈ ಗುರಿಗಳು ಸರಿಹೋಗ್ತವಾ ಮೆನೆಪ್‌ಟಾ ಅಣ್ಣ?"

"ಇಲ್ಲ. ಹೊಸ ಸಮಾಜ ಹೊಸ ಧ್ಯೇಯಗಳನ್ನು ರೂಪಿಸ್ಕೋಬೇಕು."

"ಹಳತು–ಹೊಸತು. ಯಾವುದು ಎಷ್ಟರ ವರೆಗೆ ಹಳತು? ಹೊಸತು ಎನ್ನುವುದು ಯಾವುದಕ್ಕೆ? ಎಲ್ಲಿಂದ?—ಇದು ಇತ್ಯರ್ಥವಾಗಬೇಕಾದ ಸಂಗತಿ."

ಬಿಸಿಲು ಮೌನ. ರಾನಿಂದ ತಪ್ಪಿಸಿಕೊಳ್ಳಲೆತ್ನಿಸುತ್ತಿದ್ದ ಸಣ್ಣದೊಂದು ಗಾಳಿ ಮರಗಳ ಬಳಿ ಸುತ್ತಿ ಸುತ್ತಿ, ತಾಳೆಗರಿಗಳು ಚಡಪಡಿಸುವಂತೆ ಮಾಡಿತು. ಬೆಳ್ಳಕ್ಕಿಯ ಹಿಂಡೊಂದು ಉದ್ಯಾನದ ಕೊಳದ ಬಳಿಯಿಂದ, ದೂರು ಕೊಡುವಂತೆ ವಿಕಾರವಾಗಿ ಸದ್ದು ಮಾಡಿ ರೆಕ್ಕೆ ಬಡೆದು ಮೇಲಕ್ಕೇರಿ, ಕೆಳಕ್ಕಿಳಿಯಿತು.

ಸುತ್ತಲಿನ ಗಭೀರತೆಯನ್ನು ಗಾಯಗೊಳಿಸುತ್ತ ಮೆನ್ನ ಮಾತನಾಡಿದ:

"ದೇವಮಂದಿರದಲ್ಲಿ ತಿಂದು ತೇಗಿ ಸೋಮಾರಿಯಾಗಿ ಬಿದ್ದಿರುವ ಬೆಕ್ಕು. ಅದು ಸತ್ತಮೇಲೆ ಅದರ ಲೇಪಿತ ಶವವನ್ನು ಕಾಪಾಡೋದು. ಹೋರಸ್‌ನ ಅವತಾರ ಅಂತ ಗೂಳಿಗಳನ್ನು ಮಂದಿರಗಳಲ್ಲಿ ಸಾಕೋದು, ಮೇಕೆಗಳನ್ನು ಬೆಳೆಸೋದು. ಸುಂದರ ಸ್ತ್ರೀಯರನ್ನು ತಂದು ಸಂಭೋಗಕ್ಕಾಗಿ ಈ ಪ್ರಾಣಿಗಳ ಜತೆ ಬಿಡೋದು. ಪ್ರಾಣಿಗಳ ಜತೆ! ಇದು ಯಾವ ನಾಗರಿಕತೆ? ಇದರ ಬಗ್ಗೆ ಪೆರೋ ಅಹಮೋಸ್ ಏನು ಹೇಳಿದನೊ? ಇಂಥ ಪದ್ಧತಿ ನಿಲ್ಲೋ ವರೆಗೂ ಮನುಷ್ಯ ಎಷ್ಟು ಲಿಪಿಸುರುಳಿ ಓದಿ ಏನು ಪ್ರಯೋಜನ? ಎಷ್ಟು

ಬಾರಿ ಸ್ನಾನ ಮಾಡಿದರೇನು ಫಲ ? ಎಷ್ಟು ಸಾರಿ ಸುಗಂಧದ್ರವ್ಯ ಪೂಸಿಕೊಂಡರೇನು ಲಾಭ ?"

ಮೆನೆಪ್‌ಟಾ ನಿಟ್ಟುಸಿರು ಬಿಟ್ಟ. ಬಟಾ ತಲೆ ಎತ್ತಿ, ಮರಗಳ ತುದಿಯಲ್ಲಿದ್ದ ಗಾಳಿಯನ್ನು ಮೂಸಲೆತ್ನಿಸಿದ. ಉಳಿದವರು ತುಟಿಗಳನ್ನು ಬಿಗಿಯಾಗಿ ಒತ್ತಿ ಶೂನ್ಯ ನೋಟ ಬೀರಿದರು.

ಇದ್ದಕ್ಕಿದ್ದಂತೆ ಮೆನ್ನ ತಗ್ಗಿದ ಧ್ವನಿಯಲ್ಲಿ ಅಂದ :

"ಅಗೋ ಅರಮನೆಯ ಸಶಸ್ತ್ರ ಪಡೆಯ ಒಬ್ಬ ಭಟ ದೂರದಲ್ಲಿ ಬರ್‍ತಿದ್ದಾನೆ. ನಿಮ್ಮನ್ನು ಹುಡುಕ್ತಿರಬೇಕು. ನೀವು ಎದ್ದು ಅವನ ಕಡೆಗೆ ನಡೀತಾ ಇರಿ. ನಾನು ಈ ದಿಕ್ಕಿನಲ್ಲಿ ಮಾಯವಾಗ್ತೇನೆ. ಪುನಃ ಹುಚ್ಚ ಮೆನ್ನನೂ ನೀವೂ ಒಟ್ಟಿಗೆ ಮಾತಾಡ್ತಾ ಇದ್ದಿರಿ ಅಂತ ಇನೇನಿಗೆ ಗೊತ್ತಾದ್ರೆ, ನಿಮ್ಮ ಮೇಲೆ ದ್ವೇಷ ಸಾಧಿಸ್ತಾರೆ."

ಅವರೆಲ್ಲ ಎದ್ದರು. ಭಟ ದೂರದಲ್ಲಿದ್ದ,—ಬಹಳ ದೂರದಲ್ಲಿದ್ದ. ಅಸ್ಪಷ್ಟ ಆಕೃತಿ ಮಾತ್ರ. ಆದರೂ ಮೆನ್ನ ಅವನ ಗುರುತು ಹಿಡಿದಿದ್ದ.

ಮೆನ್ನ ಅಂಬೆಗಾಲಿನಲ್ಲಿ ದೂರ ಸರಿದು ಪೊದೆಗಳಲ್ಲಿ ಮರೆಯಾಗುತ್ತಿದ್ದಂತೆ, ಮೆನೆಪ್‌ಟಾನೂ ಸಂಗಡಿಗರೂ ಉದ್ಯಾನದ ಹೆಬ್ಬಾಗಿಲಿನ ದಿಕ್ಕಿಗೆ ನಡೆಯುತ್ತ ಹೋದರು.

ಇವರು ಕಣ್ಣಿಗೆ ಬಿದ್ದೊಡನೆ ಭಟ ವೇಗದ ಹೆಜ್ಜೆಗಳನ್ನಿಡುತ್ತ, ಏದುಸಿರು ಬಿಡುತ್ತ, ಬಂದ. ಕೈಯಲ್ಲೊಂದು ಈಟಿ ಇತ್ತು. ತುಸು ದೂರದಿಂದಲೇ ಮೆನೆಪ್‌ಟಾಗೆ ಆತ ನಮಿಸಿದ. ಬಳಿಕ ಮಂದಗತಿಯಿಂದ ನಡೆದು, ಅವರನ್ನು ಸಮಿಾಪಿಸಿ ನಿಂತ. ಇವರೂ ನಿಲ್ಲಬೇಕಾಯಿತು.

ಬಟಾ ಕೇಳಿದ :

"ಏನಪ್ಪ ?"

"ನೀವು ಅರಮನೇಲಿ ಇಲ್ಲಾಂತ ಹಾಹಾಕಾರ ಎದ್ದಿದೆ. ಅಮಾತ್ಯರಿಗೂ ದೂರು ಹೋಗಿ ಅವರು ಸಿಟ್ಟು ಮಾಡ್ಕೊಂಡ್ರು. ದಳಪತೀನ ಕರೆಸಿ ಹುಡುಕಿಕೊಂಡು ಬರೋದಕ್ಕೆ ಆಜ್ಞೆ ಕೊಟ್ರು. ನೂರು ಜನ ಹೊರಟಿದ್ದಾರೆ. ನನಗೆ ಸಿಕ್ಕಿದ್ರಿ. ನಾನು ಭಾಗ್ಯಶಾಲಿ !"

"ನಿಮಗೆ ಉಡುಗೊರೆ ಕೊಡಬ್ಹೌದು, ಅಲ್ಲವಾ?"

"ಹೂಂ."

"ಉದ್ಯಾನ ನೋಡಿ ನಾವು ಅರಮನೆಯ ಕಡೆಗೇ ಹೊರಟೆದ್ವಿ."

"ಆದರೂ ನಾನು ಭಾಗ್ಯಶಾಲಿ!"

"ಊಟದ—ಅಲ್ಲ, ಭೋಜನದ—ಹೊತ್ತಾಯ್ತು. ಬೇಗನೆ ಕಾಲು ಹಾಕು."

* * * *

ಅತಿಥಿಗೃಹದ ಪ್ರಾಕಾರ ದ್ವಾರ ತೆರೆದಿತ್ತು. ಅಧಿಕಾರ ದಂಡವನ್ನು ಕೈಯಲ್ಲಿ ಹಿಡಿದಿದ್ದ ದಳಪತಿ ಅಲ್ಲಿ ಜಮೆಯಾಗತೊಡಗಿದ್ದ ತನ್ನ ಯೋಧರಿಗೆ ಛೀಮಾರಿ ಹಾಕುತ್ತ ನಿಂತಿದ್ದ. ಶೋಧೆಗಾಗಿ ತಮ ತಮಗೆ ನಿಗದಿಯಾಗಿದ್ದ ಸ್ಥಳಗಳಲ್ಲಿ ಸುತ್ತಾಡಿ ಹತಾಶರಾಗಿ ಸೈನಿಕರು ಮರಳಿ ಬರತೊಡಗಿದ್ದರು. (ಇವರು ಕೇಳುತ್ತ ಹೋದುದರಿಂದ ಊರೆಲ್ಲ ಸುದ್ದಿ: 'ನೀರಾನೆ ಪ್ರಾಂತದ ನಾಯಕ ಅರಮನೆಯ ಅತಿಥಿಗೃಹದಿಂದ ನಾಪತ್ತೆಯಾಗಿದ್ದಾರಂತೆ.' ಹಲವರು ಕೇಳಿದ್ದರು: 'ಅತಿಥಿಗೃಹದಿಂದಲೊ? ಕಾರಾಗೃಹದಿಂದಲೊ?')

ದ್ವಾರ ಸಮೀಪಿಸಿದಂತೆ ಮೆನೆಪ್‌ಟಾನ ಪರಿವಾರದೊಡನೆ ಇದ್ದ ಯೋಧ ಮುಂದಕ್ಕೆ ಓಡಿ, "ಪೆರೋನ ಆಯುರಾರೋಗ್ಯ ವರ್ಧಿಸಲಿ," ಎಂದು ಕೂಗಿ, ದಳಪತಿಗೆ ವಂದಿಸಿ, ಹಲ್ಲುಗಿಂಜಿ, ಬರುತ್ತಿದ್ದವರೆಡೆಗೆ ಬೊಟ್ಟು ಮಾಡಿ, "ಬಹಳ ಕಷ್ಟ ಪಟ್ಟು ಹುಡುಕ್ದೆ. ನಗರೋದ್ಯಾನದಲ್ಲಿ ಸಿಕ್ಕಿದ್ರು," ಎಂದ.

ದಳಪತಿ ತನ್ನ ಹಣೆಯ ಮೇಲೆ ಮೂಡಿ ಸಾಲುಗಟ್ಟಿದ್ದ ಬೆವರು ಹನಿಗಳನ್ನು ಬೆರಳಿನಿಂದ ಬಾಚಿ ನೆಲಕ್ಕೆ ಸುರಿದು, ನಿಟ್ಟುಸಿರು ಬಿಟ್ಟು, "ಹೋಗು. ಕಾವಲು ದಳದ ಲಿಪಿಕಾರರಿಗೆ ವರದಿ ಒಪ್ಪಿಸು. ಸಂಭಾವನೆ ಸಂದಾಯ ವಾಗ್ಬೇಕೂಂತ ಗುರುತು ಮಾಡ್ಕೊಳ್ತಾರೆ" ಎಂದ.

ಆ ಯೋಧ ಒಳಕ್ಕೆ ಓಡಿದ.

ದಳಪತಿ ಹತ್ತಿರ ಬಂದು ಮೆನೆಪ್‌ಟಾಗೆ ನಮಿಸಿ, "ದಯಮಾಡಿಸಿ. ನನ್ನ ಕೆಲಸವಾಯ್ತು. ಅಮಾತ್ಯರಿಗೆ ತಿಳಿಸ್ಬೇಕು. ನನಗೆ ಅಪ್ಪಣೆ ಕೊಡಿ," ಎಂದು ಹೇಳಿ, ನಿರ್ಗಮಿಸಿದ.

ವಿನುಗುತ್ತಿದ್ದ ಈಟಿಗಳನ್ನೂ ಅತ್ಯಂತ ಕುತೂಹಲದಿಂದ ತಮ್ಮನ್ನ ನೋಡುತ್ತಿದ್ದ ಯೋಧರನ್ನೂ ದಿಟ್ಟಿಸಿ, ಬಟಾನೆಂದ :

"ಅರಮನೆ ಬೊಕ್ಕಸಾನ ನಾವು ಲೂಟಿ ಹೊಡೆದೆವೇನೋಂತ ಭಾವಿಸ ಬೇಕು ಕಂಡೋರು !"

ಪರಿವಾರ ಅತಿಥಿಗೃಹ ಸೇರಿದಾಗ ಸೆನೆಬ್ ಧಾವಿಸಿ ಬಂದ. ಅವನ ಹಿಂದಿದ್ದ, ಅತಿಥಿಗೃಹದ ಅಧಿಕಾರಿ. ಆ ಅಧಿಕಾರಿಯ ಬಿಳಿಚಿಕೊಂಡಿದ್ದ ಮುಖಕ್ಕೆ ಬೊಟ್ಟು ಮಾಡಿ ಸೆನೆಬ್ ಅಂದ :

"ಎಲ್ಲ ಇವನಿಂದಾಗಿ. ಬರೀ ಗುಲ್ಲು. 'ತಿರುಗಾಟಕ್ಕೆ ಹೋಗಿದ್ದಾರು, ಭೋಜನದ ಹೊತ್ತಿಗೆ ಬರ್ತಾರೆ' ಎಂದರೆ ಕೇಳಲಿಲ್ಲ. ತನ್ನ ತಲೆಹೋಗ್ತದೇಂತ ಹೆದರಿ ಅಮಾತ್ಯರಿಗೆ ತಿಳಿಸಿಯೇ ಬಿಟ್ಟ. ಅಂತೂ ಬಂದಿರಲ್ಲ ! ರಾಜಧಾನಿ ಯಲ್ಲಿ ನಿಮಗೆ ವೈರಿಗಳಿದ್ದಾರೆ. ನೀರಾನೆ ಪ್ರಾಂತದ ಭೂಮಾಲಿಕರು ಇಲ್ಲಿ ವಸತಿ ಮಾಡ್ತಿರೋದನ್ನು ಮರೆತಿರಾ ? ನಿಮಗೇನಾದರೂ ಅಪಾಯ ಉಂಟಾ ದರೆ, ರಾಜಧಾನಿಗೆ ಕಳಂಕ. ಆಮೇಲೆ ನಿಮ್ಮ ಜನತೆಗೆ ನಾವು ಮುಖ ತೋರಿ ಸೋದು ಹ್ಯಾಗೆ ?"

ತಾನೇ ಪೆರೋ ಎನ್ನುವಂತೆ ಮಾತನಾಡುತ್ತಿರುವನಲ್ಲ ಈತ ಎಂದು ಬಟಾಗೆ ಸಿಟ್ಟು ಬಂತು. ಆದರೂ ಅದನ್ನು ತೋರ್ಪಡಿಸದೆ, "ಆತ್ಮ ರಕ್ಷಣೆ ಮಾಡಿಕೊಳ್ಳೋ ಸಾಮರ್ಥ್ಯ ನಮಗಿದೆ ಲಿಪಿಕಾರಯ್ಯ," ಎಂದ.

ಪೆಟಾರಿ ಹೊರುವ ದೋಣಿಗಾರನಿಗೆಷ್ಟು ಸೊಕ್ಕು !—ಎಂದು ಮನಸ್ಸಿ ನಲ್ಲಿ ಕಟೂಕ್ತಿಯಾಡಿ, ಸೆನೆಬ್ ರಾಗವೆಳೆದ :

"ಛೆ ! ಛೆ ! ಇಲ್ಲ ಅಂದೆನೆ ? ನನ್ನ ಮಾತಿನಿಂದ ನಾಯಕರಿಗೆ ಬೇಸರವಾಗಿದ್ದರೆ ಕ್ಷಮಿಸ್ಬೇಕು. ನೀವು ('ಏ ದೋಣಿಕಾರ, ನೀನಲ್ಲ !) ಗೌರವಾನ್ವಿತ ಅತಿಥಿ. ಅರಮನೆಯ ಪೀಠಪಲ್ಲಕಿ ಬಳಸ್ಬೇಕು. ಕಾಲ್ನಡಿಗೇಲಿ ಹೋಗ್ಬಾರದು."

"ಚಿಂತಿಸ್ಬೇಡಿ ಸೆನೆಬ್. ನಡೆದು ಹೋಗೋದು ಅವಮಾನಕರ ಅಂತ ನಾನು ಭಾವಿಸಿಲ್ಲ. ನಮ್ಮೂರಲ್ಲಿ ನಾನು ಪಲ್ಲಕಿ ಉಪಯೋಗಿಸೋದಿಲ್ಲ."

"ಹೌದು, ಕೇಳಿದ್ದೇನೆ. ಆದರೆ, ರಾಜಧಾನಿಗೆ ಬಂದ ಮೇಲೆ ಇಲ್ಲಿಯ ರಿವಾಜು ಪಾಲಿಸ್ಬೇಕಲ್ಲ ?"

"ನೀವು ಸೊಗಸಾಗಿ ಮಾತಾಡ್ತೀರಿ."

"ಆ ಪ್ರಶಂಸೆಗೆ ಅರ್ಹನಲ್ಲವಾದರೂ ಸವಿಮಾತು ಕೇಳಿ ಸಂತೋಷ ವಾಗ್ತದೆ....ಇನ್ನು ಮುಂದೆ ನೀವು ತಿರುಗಾಟಕ್ಕೆ ಹೊರಟಾಗ ಅರಮನೆ ಯೋಧರು ನಿಮ್ಮ ಅಂಗರಕ್ಷಕರಾಗಿ ಇರಲೇಬೇಕೂಂತ ಅಮಾತ್ಯರು ಕಟ್ಟಪ್ಪಣೆ ಮಾಡಿದ್ದಾರೆ."

"ಬರಲಿ, ಬರಲಿ. ಆದರೆ ಪಲ್ಲಕಿ ಮಾತ್ರ ಒಲ್ಲೆ."

"ಹಾಗೆಂತ ಅಮಾತ್ಯರಿಗೆ ತಿಳಿಸಲಾ ?"

"ದಯವಿಟ್ಟು ತಿಳಿಸಿ."

ಅನಂತರದ ಮೌನವನ್ನು ಔಟನ 'ಆಕ್ಷಿ' ಭೇದಿಸಿತು.

ಒಂದರ ಬಳಿಕ ಒಂದರಂತೆ ಮೂರು ಸೀನು.

"ಈ ಆಕ್ಷಿ ಶುಭವೊ, ಅಶುಭವೊ ? ಅದೂ ಊಟಕ್ಕೆ ಮುಂಚೆ ! ಮಂದಿರದ ಅರ್ಚಕರನ್ನು ಕೇಳ್ಬೇಕು !" ಎಂದ ಬಟಾ.

ಅತಿಥಿಗೃಹದ ಅಧಿಕಾರಿ ಬಟಾನ ಹತ್ತಿರಕ್ಕೆ ಸರಿದು, ಮೆಲ್ಲನೆ, "ಭೋಜನ ಸಿದ್ಧವಾಗಿದೆ," ಎಂದ.

ಬಟಾನೆಂದ :

"ಸಂತೋಷ. ನಾವೂ ಹಸಿದಿದ್ದೇವೆ ! (ಸೆನೆಬ್‌ನತ್ತ ಹೊರಳಿ) ನೀವೂ ನಮ್ಮ ಜತೆಯೇ ಉಣ್ಣಬಹುದಲ್ಲ ಲಿಪಿಕಾರಯ್ಯ ?"

"ಛೆ ! ಸಲ್ಲದು ! ಭೋಜನದಲ್ಲೂ ಇಲ್ಲ. ಔತಣದಲ್ಲೂ ಇಲ್ಲ."

"ಅಂದ ಹಾಗೆ, ಔತಣ—ಔತಣ ಅಂತೀರಲ್ಲ. ಅದು ಯಾವತ್ತು ?"

ಸೆನೆಬ್ ಹಿಂದೆ ಮುಂದೆ ನೋಡಿದ. ನಕ್ಕ.

"ಎಷ್ಟೋ ರಾಜರಹಸ್ಯಗಳನ್ನು ಕಾಯ್ತೇನೆ. ನನ್ನನ್ನು ಸೀಳಿದರೂ ಸುಳಿವು ಸಿಗೋದಿಲ್ಲ. ಆದರೆ ಔತಣದ ವಿಷಯ ಮಾತ್ರ ಗೋಪ್ಯವಾಗಿಡೋ ದಕ್ಕೆ ನಾನು ಅಶಕ್ತ !"

"ಹಾಗೋ ಹೇಳಿ ಮತ್ತೆ !"

"ಯಾವಾಗ ಅಂತ ಖಚಿತವಾಗಿ ಗೊತ್ತಿಲ್ಲ. ಇನ್ನೆಂಟು ದಿನಗಳಲ್ಲೇ ಇರಬಹುದು. ಅಥವಾ ಇನ್ನೆರಡು ವಾರ ಬಿಟ್ಟು ಇರಬಹುದು. ಅದು ನೆಫರ್ ಟೇಮ್ ಮಹಾರಾಣಿಯವರ ಮರ್ಜಿ. ಗೇಬು ದಂಪತೀನ ಅರಮನೆಗೆ ಕರೀ

ತಾರಂತೆ–ಔತಣಕ್ಕೆ. ತೀರಾ ಖಾಸಗಿ. ಮೆನೆಪ್‌ಟಾ ನಾಯಕರೇ ಅವತ್ತು ವಿಶೇಷ ಅತಿಥಿ."

"ಪರಿವಾರದವರಿಗೆ ಪ್ರವೇಶವಿಲ್ಲ ಅನ್ನಿ."

"ಇಲ್ಲ. ಆದರೆ ಔತಣಕ್ಕೆ ಮಾಡಿದ್ದೆಲ್ಲ ಕೆಳಗಿನವರೆಗೂ ಮುಟ್ತದೆ."

"ಅವತ್ತಾದರೂ, ಕೆಳಗಿನ ನಾವೂ ನೀವೂ ಒಟ್ಟಿಗೆ...."

"ಲಿಪಿಕಾರರೆಲ್ಲ ಮಂದಿರದಲ್ಲೇ ಉಣ್ಣೋದು ಸಂಪ್ರದಾಯ."

"ಆಗ ದೇವರ ಸಾಕ್ಷಿಯಾಗಿ ಉಂಡಂತಾಗ್ತದೆ; ಲೆಕ್ಕ ತಪ್ಪೋದಿಲ್ಲ!"

ಸೆನೆಬ್ ನಗುತ್ತಲಿದ್ದ ಮೆನೆಪ್‌ಟಾಗೆ ವಂದಿಸಿ, "ನಾನು ಹೊರಡ್ತೇನೆ." ಎಂದ.

ಉಂಡಮೇಲೆ ಅಂಬಿಗರು ದೋಣಿಕಟ್ಟೆಗೆ ಹೊರಟರು.

ಅಲೆದು ಬಳಲಿದ್ದ ಮೆನೆಪ್‌ಟಾನೂ ಬಟಾನೂ ಅಡ್ಡಾದರು. ಔಟ ಮತ್ತು ಬೆಕ್ ಮೊಗಸಾಲೆಯಲ್ಲಿ ಚೌಕಮಣೆ ಆಟಕ್ಕೆ ಕುಳಿತರು.

ಊಟದ ವೇಳೆಗೂ ಔಟನನ್ನು ಆಕ್ಷಿ ಕಾಡಿಸಿತ್ತು. ಆಟ ಆರಂಭಿಸಿ ಕಾಯಿಗಳ ಮೇಲೆ ದೃಷ್ಟಿ ನೆಟ್ಟೊಡನೆ ಮೂಗಿನ ಹೊಳ್ಳೆಗಳಿಂದ ನೀರು ಸುರಿಯ ತೊಡಗಿತು.

"ಸುರು ಸುರು ಮಳೆ ಶುರುವಾಯ್ತಪ್ಪೋ" ಎಂದ ಔಟ, ಬೇಸರದಿಂದ.

ಮೂಗು ಬರಿದು ಮಾಡಲೆಂದು ಆತ ಆಗಾಗ್ಗೆ ಎದ್ದು ಹೊರಹೋಗ ಬೇಕಾಯಿತು. ಆದರೂ ಮೊದಲ ಆಟದಲ್ಲಿ ಅವನೇ ಗೆದ್ದ.

* * * *

ರಾ ಅಸ್ತಮಿಸುವ ಹೊತ್ತಿಗೆ ಅರ್ಚಕ ಇನೇನಿ ಮಹಾಮಂದಿರದಿಂದ ಮರಳದಿದ್ದರೆ, ಕಿರಿಯ ದೇವಸೇವಕನೇ ಮೃತ್ಯುಂಜಯ ಪೂಜೆಯನ್ನು ಮಾಡುತ್ತಿದ್ದ. ಹಾಗಾಗುತ್ತಿದ್ದುದು ಮಹಾ ಅರ್ಚಕ ರಾಜಧಾನಿಯಲ್ಲಿರುತ್ತಿದ್ದ ಸಂದರ್ಭಗಳಲ್ಲಿ ಒಮ್ಮೊಮ್ಮೆ ಮಾತ್ರ.

ವರದಿ ಕಳುಹಿಸುವ ಕೆಲಸ ಬೇಗನೆ ಮುಗಿದುದರಿಂದ, ಬಿಸಿಲು ಪೂರ್ತಿ ಬಾಡುವುದಕ್ಕೆ ಮುನ್ನವೇ ಇನೇನಿ ವಾಪಸಾದ.

"ನಿನ್ನ ವರದಿಗಳ ಶೈಲಿ ಮಹಾ ಅರ್ಚಕರಿಗೆ ಇಷ್ಟವಾಗಿದೆ."

—ಈ ಮಾತನ್ನು ಆಡಿದ್ದವನು, ಆನ್ ನಗರದಲ್ಲಿ ಮಹಾ ಅರ್ಚಕರನ್ನು

ಭೇಟಿಯಾಗಿ ಮುನ್ನಾ ದಿನವಷ್ಟೆ ಮೆಂಫಿಸಿಗೆ ಮರಳಿದ್ದ ಮಹಾಮಂದಿರದ ಹಿರಿಯ ದೇವಸೇವಕರಲ್ಲೊಬ್ಬ. ಅದನ್ನು ಕೇಳಿ ಇನೇನಿಯ ಮನಸ್ಸು ಅರಳಿತ್ತು.

ಅರಮನೆಯ ದೇವಮಂದಿರದಲ್ಲಿ ಪ್ರತಿಯೊಂದೂ ಚೊಕ್ಕಟವಾಗಿದ್ದುದನ್ನು ಕಂಡು ಆತ ಹರ್ಷಿತನಾದ. ತನ್ನನ್ನು ಕಂಡೊಡನೆ ಯಾವಾಗಲೂ ಮೂಲೆ ಸೇರುತ್ತಿದ್ದ ಮೆನ್ನ ಇಂದು ಪ್ರಾಂಗಣದಲ್ಲಿ ಕುಳಿತಿದ್ದ! ಇನೇನಿಗೆ ಅಚ್ಚರಿ. ಆತನನ್ನು ಉದ್ದೇಶಿಸಿ ಅವನೆಂದ :

"ಮೆನ್ನ, ಸೆತ್ ನನ್ನು ಮರೆತು ಒಸ್ಸೈರಿಸನ ಸೇವೆ ಮಾಡ್ತಿದೀಯಾ? ಇದೇ ರೀತಿ ನೀನು ಸುಧಾರಿಸ್ತಾ ಹೋದರೆ ಮಹಾ ಅರ್ಚಕರು ನಿನ್ನನ್ನು ಕ್ಷಮಿಸಲೂ ಬಹುದು ಅಂತೇನೆ."

ಆ ಮಾತು ಕೇಳಿಸಲಿಲ್ಲವೆನ್ನುವಂತೆ ಮೆನ್ನ ಸುಮ್ಮನಿದ್ದ. ಅರ್ಚಕ ಮುಂದುವರಿಸಿದ :

"ನದೀತಟಕ್ಕೆ ಹೋಗಿ ಆ ಕೆಟ್ಟ ಹಾಡು ಹಾಡೋದು ಈಗ ಬಿಟ್ಬಿಟ್ಟಿದ್ದೀಯಂತೆ."

ಮೆನ್ನ ತುಟಿಗಳನ್ನು ಅಗಲಿಸಿ, ಎರಡು ಹಲ್ಲುಗಳು ಬಿದ್ದು ತೆರಪಾಗಿದ್ದ ಸ್ಥಳಕ್ಕೆ ಕಿರು ಬೆರಳು ತುರುಕಿಸಿ ಹೊರತೆಗೆದು, ನಕ್ಕು, ಗುಣಗುಣಿಸಿದ :

"ಇಂದು ಯಾರೊಡನೆ ನಾ ಮಾತಾಡಲೀ...."

"ಏಳಲ್ಲಿಂದ! ಇನ್ನೂ ಪೂರ್ತಿ ಹುಚ್ಚು ಬಿಟ್ಟಿಲ್ಲ...." ಎಂದ ಇನೇನಿ.

....ಮುಚ್ಚಂಜೆ ಪೂಜೆ ಮುಗಿಸಿ ಅರ್ಚಕ ಗರ್ಭಗುಡಿಯ ಬಾಗಿಲೆಳೆದುಕೊಂಡು, ಕೊಂಡಿಗೆ ಆವೆಮಣ್ಣು ಮೆತ್ತಿ ಮುದ್ರೆಯೊತ್ತುತಿದ್ದಂತೆ, ಬಟಾ ಅಲ್ಲಿಗೆ ಬಂದ.

ಅವನ ವಂದನೆಗೆ ಉತ್ತರವಾಗಿ, "ಏನಪ್ಪ?" ಎಂದು ಕೇಳಿದ, ಇನೇನಿ.

"ನಮ್ಮ ಔಟನಿಗೆ ನೆಗಡಿ ಗಂಟಲು ನೋವು. ಏನಾದರೂ ಕೊಡ್ತೀರಾ?"

"ಯಾವತ್ನಿಂದ?"

"ಇವತ್ತು ಊಟ—ಅಲ್ಲ—ಭೋಜನಕ್ಕುಂಚೆ ಶುರುವಾಯ್ತು."

ಇನೇನಿ ಪಕ್ಕದಲ್ಲಿದ್ದ ತನ್ನ ವಸತಿಗೆ ಹೋಗಿ, ಹಣತೆಯ ಬೆಳಕಿನಲ್ಲಿ ತಡಕಾಡಿ, ಒಂದು ಬೇರಿನ ಚೂರನ್ನು ಹೊರತಂದು ಬಟಾನಿಗಿತ್ತ.

"ತೇದು, ಗಂಟಲಿನ ಹೊರಗೆ ಲೇಪಿಸು. ನಾಳೆ ಬೆಳಿಗ್ಗೆ ಬರಿಹೊಟ್ಟೇಲಿ ಅವನನ್ನು ಕರಕೊಂಡ್ಬಾ. ಮಂತ್ರ ಹಾಕೋಣ."

ಬಟಾ ಬೇರನ್ನು ಮೂಸಿ ನೋಡಿದ.

"ದೇವರ ಔಷಧಿ. ಮೂಸಬಾರ್ದು," ಎಂದ ಇನೇನಿ, ಛೇಡಿಸುವ ಸ್ವರದಲ್ಲಿ.

"ತಪ್ಪಾಯ್ತು."

"ಊರಿನಿಂದೇನಾದರೂ ಸುದ್ದಿ ಇದೆಯಾ ? "

"ವರದಿ ಕಳಿಸೋದಕ್ಕೆ ನಾವು ಯಾರಿಗೂ ಹೇಳಿಯೇ ಇಲ್ಲ."

"ಹಾಗೋ ? ನಿಮ್ಮೂರಿನ ಅರ್ಚಕ ಆ ಕೆಲಸ ಮಾಡ್ಬಹುದಾಗಿತ್ತು."

"ನಿಜ. ನಾವು ನೀರಾನೆ ಪ್ರಾಂತದವರು. ತಲೆ ಸ್ವಲ್ಪ ದಪ್ಪ. ಹೊಳೀಲಿಲ್ಲ."

"ಹಹ್ಹ !"

"ಬೇರು ಲೇಪನದಿಂದ ಗುಣವಾದ್ರೆ—"

"ಒಂದೆ ಸಲಕ್ಕೆ ಆಗ್ತದಾ? ತಪ್ಪದೆ ಕರಕೊಂಡ್ಬಾ. ಬರೇ ನೆಗಡಿ ಗಂಟಲು ನೋವು ಅಂತ ಉತ್ಪ್ರೇಕ್ಷೆ ಮಾಡಬಾರ್ದು."

"ಆಗಲಿ."

* * * *

ರಾಜಧಾನಿಯಲ್ಲಿ ಕಳೆದ ಮೊದಲ ರಾತ್ರಿಯ ಬಳಿಕ ಔಟ ಮತ್ತು ಬೆಕ್ ಮಲಗುತ್ತಿದ್ದುದು ಮೊಗಸಾಲೆಯಲ್ಲಿ, ನಾಯಕನ ಕೊಠಡಿಯ ಹೊರಗೆ, ಬಾಗಿಲ ಬಳಿ.

ಇನೇನಿ ನೀಡಿದ್ದ ಬೇರಿನ ಲೇಪನದಿಂದ ಕೆಲವು ತಾಸುಗಳ ಮಟ್ಟಿಗೆ ಉಸ್ಸಿರಾಟ ಸರಾಗವಾಗಿ, ಔಟನಿಗೆ ನಿದ್ದೆ ಬಂದಿತ್ತು. ಬೆಳಿಗ್ಗೆ ಎದ್ದಾಗ ಹಿಂದಿನ ದಿನದ್ದೇ ದುಸ್ಥಿತಿ. ಜತೆಗೆ ಬೆಕ್ ಕೂಡಾ ಸುರು ಸುರು ಎನ್ನತೊಡಗಿದ.

ಬಟಾ ಅಂದ: "ಇವತ್ತು ಅರ್ಚಕನ ಅದೃಷ್ಟವೋ ಅದೃಷ್ಟ! ಜೋಡಿ ಗಿರಾಕಿಗಳು!"

"ಸದ್ಯಃ ಜ್ವರಗಿರ ಬರೋದು ಬೇಡ," ಎಂದ ಮೆನೆಸ್‌ಟಾ.

ಅರಸ ದೇವಮಂದಿರಕ್ಕೆ ಬಂದು ಹೋದುದನ್ನು ಅರಿತುಕೊಂಡು, ಔಟ ಮತ್ತು ಬೆಕ್ ಅರ್ಚಕನಲ್ಲಿಗೆ ಹೊರಟರು. ಬಟಾ ಮೆನೆಸ್‌ಟಾನ ಬಳಿ ನಿಂತ. ನಾಯಕ ತನ್ನ ಅಂಗರಕ್ಷಕರಿಗೆ ಹೇಳಿದ:

"ಅರ್ಚಕರಿಗೆ ಕಾಣಿಕೆ ಏನು ಬೇಕೂಂತ ಕೇಳ್ಕೊಂಡು ಬನ್ನಿ. ಕೊಡೋಣ."

ಔಟ ಮತ್ತು ಬೆಕ್ ದೇವಮಂದಿರಕ್ಕೆ ಬಂದಾಗ ಗರ್ಭಗುಡಿ ಮುಚ್ಚಿತ್ತು. ಅವರು ಹೊರಗಿನಿಂದಲೇ ದೇವರಿಗೆ ನಮಿಸಿದರು.

ಮಂದಿರ ಶಾಲೆಯಲ್ಲಿ ಕಿರಿಯರಿಗಾಗಿ ಪಾಠಪ್ರವಚನಗಳು ನಡೆದಿದ್ದವು. ಅಲ್ಲಿದ್ದ ಕಿರಿಯ ದೇವಸೇವಕ ಔಟ–ಬೆಕ್‌ರನ್ನು ಕಂಡು, "ಔಷಧಿ ಅರ್ಚಕರ ಮನೇಲಿ. ಆ ಕಡೆಗೆ," ಎಂದ.

ಅರ್ಚಕನ ವಸತಿಯ ಪಡಸಾಲೆಯಲ್ಲಿ ಒಬ್ಬಳು ಯುವತಿ ಸೆಣಬಿನ ಬಟ್ಟೆಗಳ ಕೊಳಕು ಮೆತ್ತೆಯಲ್ಲಿ ಒಂದು ಎಳೆಯ ಹಸುಳೆಯನ್ನು ತನ್ನ ತೊಡೆಗಳಿಗೆ ಅಡ್ಡವಾಗಿ ಮಲಗಿಸಿಕೊಂಡು, ಕುಳಿತಿದ್ದಳು. ಬೇರೆ ಯಾರೂ ಅಲ್ಲಿ ಕಾಣಿಸಲಿಲ್ಲ.

"ಅರ್ಚಕರು ಇದ್ದಾರಾ?" ಎಂದು ಔಟ ಕೇಳಿದ, ನೋವಿನ ಗೊಗ್ಗರ ಗಂಟಲಲ್ಲಿ.

ಆಕೆ ತಲೆ ಆಡಿಸಿ ತಗ್ಗಿದ ಸ್ವರದಲ್ಲಿ "ಇದ್ದಾರೆ" ಎಂದಳು.

ವ್ಯಥೆಗೆ ಈಡಾಗಿದ್ದ ಮುಖ. ಆದರೂ ಸೌಂದರ್ಯ ಬೆಕ್‌ನನ್ನು ಕುಕ್ಕಿತು. ಆತ ಕೇಳಿದ:

"ಮಗೂಗೆ ಏನಾಗಿದೆ?"

ಒಂದೇ ಸಮನೆ ಅವಳೆಂದಳು:

"ಜೊಚ್ಚಲು ಮಗು. ಗಂಡು. ನಾಲ್ಕು ತಿಂಗಳಾಗಿದೆ. ಐದಾರು ದಿವಸದಿಂದ ಜ್ವರ. ಬಿಟ್ಟೇ ಇಲ್ಲ. ಅಯ್ಯನವರು ಮಂತ್ರ ಹಾಕ್ತೇನೆ ಅಂದಿದ್ದಾರೆ."

ಒಳಗೆ ಅಲ್ಪೋಪಹಾರ ಸ್ವೀಕರಿಸುತ್ತಿದ್ದ ಇನೇನಿಗೆ ಪಡಸಾಲೆಯ ಮಾತು ಕೇಳಿಸಿತು. ಕಿರಿಯ ದೇವಸೇವಕನೊಬ್ಬ ಹೊರಬಂದು ಔಟ ಬೆಕ್‌ರನ್ನು ನೋಡಿ, "ಇರಿ. ಈಗ್ಬರ್‍ತಾರೆ," ಎಂದು ಹೇಳಿ ಹೋದ.

ಯುವತಿಯೊಡನೆ ಮಾತುಕತೆ ಮುಂದುವರಿಸೋಣ ಎಂದು ಬೆಕ್ ಯೋಚಿಸುವಷ್ಟರಲ್ಲಿ ಇನೇನಿ ಬಂದ. ವಂದಿಸುತ್ತಿದ್ದ ಬೆಕ್ ಔಟರನ್ನು ಅವನು ಕೇಳಿದ :

"ಬಟಾ ಬರಲಿಲ್ಲವೇ ?"

ಔಟ ಉತ್ತರಿಸಿದ :

"ಇಲ್ಲ. ನಾನು ಔಟ. ಇವನು ಬೆಕ್. ನಿನ್ನೆ ರಾತ್ರೆ ಲೇಪನಕ್ಕೆ ಬೇರು ಕೊಟ್ಟಿದ್ರಿ. ಇವತ್ತು ಬೆಳಗ್ಗೆ ಇವನಿಗೂ ಶುರುವಾಗಿದೆ."

"ಸ್ವಲ್ಪ ಇರಿ. ಈ ಮಗುವಿನ ಚಿಕಿತ್ಸೆ ಇಷ್ಟು ಮುಗಿಸ್ಬಿಡ್ತೇನೆ."

"ಆಗಲಿ. ನಮಗೇನೂ ಅವಸರವಿಲ್ಲ."

"ಇವತ್ತು ನಾಯಕರಿಗೇನೂ ಕಾರ್ಯಕ್ರಮ ಇಲ್ಲ ಅಂತ ತೋರ್‍ತದೆ."

"ಇಲ್ಲ."

"ಹವೆ ಬದಲಾಗ್ತಿದೆ. ಚೇತನಗಳು ಊರಿಂದೂರಿಗೆ ಅಲೆಯೋ ಹೊತ್ತು. ಹಾಲು ತೆನೆಯಾಗಿ ಕಾಳಾಗೋ ಕಾಲ. ಅದೃಷ್ಟ ಕೆಟ್ಟಿದ್ದರೆ ಉಸಿರಿಗೆ ತೊಡಕಾಗೋ ಸಂಭವ. ಎಷ್ಟು ಹುಷಾರಾಗಿದ್ದರೂ ಸಾಲ್ದು."

ಮಾತಾಡುತ್ತಿದ್ದ ಅರ್ಚಕನ ದೃಷ್ಟಿ ಅಲ್ಲಿ ಕುಳಿತಿದ್ದ ಯುವತಿಯ ಅಂಗಾಂಗಗಳ ಮೇಲೆ ಹರಿದಾಡುತ್ತಿದೆ ಎನಿಸಿತು ಬೆಕ್‌ಗೆ. ಸಣ್ಣನೆ ಸಿಟ್ಟು ಬಂತು. ದಾರಿ ಕಾಣದೆ ಉಗುರು ಕಚ್ಚಿದ.

ಧ್ವನಿ ಏರಿಸಿ ಇನೇನಿ ಅಂದ :

"ತಗೊಂಡ್ಬಾರೋ."

ಕಿರಿಯ ದೇವಸೇವಕ ಜೊಂಡಿನಿಂದ ಹೆಣೆದ ಒಂದು ತಟ್ಟೆಯನ್ನು ತಂದು ಆ ಹೆಂಗಸಿನ ಬಳಿ ಇರಿಸಿದ. ಅದರಲ್ಲಿ ಮಗುವನ್ನು ಹೋಲುತ್ತಿದ್ದ ಆವೆ ಮಣ್ಣಿನ ಬೊಂಬೆ ಇತ್ತು. ಅದರ ಕತ್ತಿನಲ್ಲಿ ಕರಿಕಾಯಿಗಳ ಸರ. ಕೈಯಲ್ಲಿ ಗಂಟು ಹಾಕಿದ ತುಂಡುದಾರ. ಅರ್ಥವಾಗದ ಅಂಕಿತವಿದ್ದ ಬಟ್ಟೆಯ ಚೂರು ಪಕ್ಕದಲ್ಲಿತ್ತು.

ಇನೇನಿ ತಟ್ಟೆಯ ಎದುರು ಸಹಾಯಕ ಹಾಸಿದ ಚಿರತೆ ಚರ್ಮದ ಮೇಲೆ ಕುಳಿತು, "ನಿನ್ನ ಹೆಸರೇನು ?" ಎಂದು ಕೇಳಿದ.

ಅರಮನೆಯ ಆ ಕೆಲಸಗಾರ್ತಿ ಅಂದಳು :

"ಶೀಬಾ ಅಯ್ಯ."

"ಯಾರವಳು ನೀನು ?"

"ಕಸಾಯಿ ಮನೇಲಿ ಕೆಲಸ ಮಾಡ್ತೇನೆ. ಗಂಡ ದಂಡಿನಲ್ಲಿದ್ದಾನೆ."

"ಕಸಾಯಿ ಮನೇಲಿ. ಅದಕ್ಕೇ ಮೈ ತುಂಬಿಕೊಡು ಆರೋಗ್ಯವಾಗಿದ್ದೀಯಾ ! ನೀನು ಔಷಧಿಗೆ ಬರ್ತಿರೋದು ಇದೇ ಮೊದಲ್ನೇ ಸಲ ಅಲ್ಲ ?"

"ಹೌದು, ಅಯ್ಯ."

ಇನೇನಿ ಮಗುವಿನ ಹಣೆಯನ್ನೂ ಎದೆಯನ್ನೂ ಸ್ಪರ್ಶಿಸಿ, ಅದೇ ಬೆರಳುಗಳಿಂದ ತಟ್ಟೆಯಲ್ಲಿದ್ದ ಸಾಮಗ್ರಿಗಳನ್ನು ಮುಟ್ಟಿದ.

"ಮಗೂನ ಕೆಳಗೆ ಮಲಗಿಸಿ, ನೀನು ಮಂಡಿಯೂರಿ ಕೂತ್ಕೋ."

ಆಕೆ ಮಂಡಿಯೂರಿದ ಬಳಿಕ ಇನೇನಿ ಮಾತನಾಡಿದ್ದೆಲ್ಲ, ಎರಡು ಕವಡೆ ಸರಗಳಿಂದ ಅಲಂಕೃತವಾಗಿದ್ದ ಅವಳ ವಕ್ಷಸ್ಥಲದೊಡನೆ.

"ಏನು ಹೆಸರು ಮಗೂದು ?"

"ಮಗ ಅಂತ ಕರೀತೇನೆ. ಗಂಡ ಬಂದ್ಮೇಲೆ ಹೆಸರಿಡೋಣ ಅಂತ...."

"ದಂಡು ಸೇರಿದ್ದು ಯಾವಾಗ?"

"ಒಂದು ವರ್ಷ ಆಯ್ತು."

"ಹುಂ. ಹಾಗೆ ಕೂತಿರು...."

ಬೆಕ್–ಔಟರ ಮೇಲೆ ಇನೇನಿಗೆ ಒಂದು ಕ್ಷಣ ಸಿಟ್ಟು ಬಂತು. ಅವನು ಛಾವಣಿಯತ್ತ ನೋಡಿ, "ಜಗದ್ರಕ್ಷಕ ಪ್ಟಾ, ಸರ್ವಜನ ಪೂಜಿತ ಪ್ಟಾ" ಎಂದು ಆರಂಭಿಸಿ ಒಂದು ಸ್ತೋತ್ರ ಪಠಿಸಿದ. ಐಗುಪ್ತದ ಬಹುಜನಸಮುದಾಯಕ್ಕೆ ಅರ್ಥವಾಗದ ದೇವ ಭಾಷೆ ಅದು. (ಹಿರಿಯ ದೇವಸೇವಕರಿಗಷ್ಟೇ ಅದರ ಪರಿಜ್ಞಾನ.)

ಸ್ತೋತ್ರ ಪಠಿಸಿ ಮೇಲೆದ್ದು ಇನೇನಿ, ಬೆಕ್–ಔಟರನ್ನು ದುರುಗುಟ್ಟಿ ನೋಡಿ, ಒಂದು ಕೊಠಡಿಯ ಬಾಗಿಲು ತೆರೆದ. ಅಲ್ಲಿ ಕತ್ತಲು. ಹೊರಗಿನಿಂದ ಒಳಕ್ಕೆ ನುಸುಳಿದ ಬೆಳಕಿನಲ್ಲಿ ಅವನ ಆಕೃತಿ ಮಬ್ಬಾಗಿ ಕಂಡಿತು. (ಕತ್ತಲು

ಕೊಠಡಿಯಲ್ಲಿ ಇನೇನಿ, ಭದ್ರವಾಗಿ ಮುಚ್ಚಿದ್ದ ಒಂದು ಜಾಡಿಗೆ ಬಳಪದ ಸೌಟು ತುರುಕಿ ರಂಜಕದ ಪುಡಿಯನ್ನು ಹೊರತೆಗೆದು ಜಾಡಿಯ ಮುಚ್ಚಳವನ್ನು ಬಿಗಿಗೊಳಿಸಿದ, ಬಾಗಿಲಿನ ಎದುರಿನ ಗೋಡೆಯಲ್ಲಿ ಎರಡು ಕಿಂಡಿಗಳಲ್ಲಿದ್ದ ತಾಮ್ರದ ತಟ್ಟೆಗಳಿಗೆ ಆ ಪುಡಿಯನ್ನು ಸುರುವಿದ. ಹವೆಯ ಸ್ಪರ್ಶದಿಂದ ರಂಜಕ ನಿಧಾನವಾಗಿ ಜ್ವಲಿಸತೊಡಗಿತು.) ಹೊಗೆ ಮುಸುಕಿದ ಕೊಠಡಿ. ಪಡಸಾಲೆಗೂ ಹೊಗೆ ಧಾವಿಸಿತು. ಔಟ ಮತ್ತು ಬೆಕ್ ಮೂಗುಗಳನ್ನು ಬರಿದುಗೊಳಿಸಲು ಪದೇ ಪದೇ ಹೊರಗೆ ಮನೆಯ ಮೂಲೆಗೆ ನಡೆದರು. ನೀಲಿ ಬೆಳಕಿನ ಎರಡು ಉಂಡೆಗಳ ನಡುವೆ ಮಂತ್ರಪಠಣವನ್ನು ಮತ್ತಷ್ಟು ತೀವ್ರ ಗೊಳಿಸಿದ. ಪಡಸಾಲೆಯಿಂದ ಭವ್ಯವಾಗಿ ಕಂಡಿತು ಆ ನೋಟ. ಹೊಗೆ ಉಸಿರು ಕಟ್ಟಿಸಿದರೂ ಅಳಲಾರದೆ ಮಲಗಿತ್ತು, ಜ್ವರದಲ್ಲಿ ದಹಿಸುತ್ತಿದ್ದ ಮಗು. ಅದರ ತಾಯಿ ಮಂಕಾಗಿ ದಂಗಾಗಿ, ಮಾಯಾಮಂತ್ರದ ಬಂದಿ ಯಾದಳು.

ಕಣ್ಣುಗಳನ್ನು ತುಸು ಒರೆಸಿಕೊಂಡು ಮಂತ್ರ ಪಠಿಸುತ್ತ ಇನೇನಿ ಹೊರ ಬಂದು ಹೆಣ್ಣಿನ ಎದುರು ನಿಂತ.

"ನನ್ನ ಕಡೆ ನೋಡು," ಎಂದ.

ಕತ್ತೆತ್ತಿದ ಆ ತಾಯಿಯ ದೃಷ್ಟಿ ಅರ್ಚಕನ ಹೃಷ್ಟಪುಷ್ಟ ತೊಡೆಗಳನು ತಾಕಿತು.

"ಮಾಯದ ಬೆಳಕು! ಕಂಡಿಯಾ ?"

"ಕಂಡೆ ಅಯ್ಯ."

ತನ್ನ ತೋರುಬೆರಳನ್ನು ಎತ್ತಿಹಿಡಿದು ಅರ್ಚಕ ಗಟ್ಟಿಯಾಗಿ ಅಂದ :

"ಮಗೂಗೆ ಹಿಂಸೆ ಕೊಡುತ್ತಿರೋ ಪೀಡೆಯೇ, ನಿನಗೆ ಹಿಡಿ ಶಾಪ ಹೋರಸ್‌ನ ಕಣ್ಣಿನ ಜೆಂಕಿ ನಿನ್ನ ಮೇಲಿದೆ; ಅದು ನಿನ್ನನ್ನು ಸುಡ್ತಿದೆ; ನಿನ್ನನ್ನು ಇರೀತಿದೆ, ಚುಚ್ತಿದೆ, ತಿನ್ತಿದೆ; ನಿನ್ನನ್ನು ಸುಟ್ಟು ಬೂದಿ ಮಾಡ್ತಿದೆ; ಸಂಪೂರ್ಣ ವಾಗಿ ನಾಶ ಮಾಡ್ತಿದೆ."

ಸ್ವರ ತಗ್ಗಿಸಿ ಇನೇನಿ ಸೂಚನೆ ಇತ್ತ :

"ನಾನು ಒಂದೊಂದೇ ಮಾತು ಹೇಳ್ತಾ ಹೋದ ಹಾಗೆ, ನೀನೂ ಅದನ್ನು ಹೇಳ್ಬೇಕು. ಅರ್ಥವಾಯ್ತಾ ? ಎಲ್ಲಿ ಹೇಳು : ಇರುಳಲ್ಲಿ

ಬರುವವನೆ...."

ಆಕೆ ಅನುಮಾನಿಸಿದಳು. ನಾಲಿಗೆ ಹೊರಳಲಿಲ್ಲ.

ಇನೇನಿ ಪುನಃ ಅಂದ :

"ಹಾಂ....ಇರುಳಲ್ಲಿ ಬರುವವನೆ...."

ತೊದಲುತ್ತ ಆಕೆ ಅಂದಳು :

"ಹಾಂ....ಇರುಳಲ್ಲಿ ಬರುವವನೆ...."

"ಕಳ್ಳತನದಲ್ಲಿ ಒಳನುಗ್ಗುವವನೆ...."

"ಕಳ್ಳತನದಲ್ಲಿ...."

"ಒಳನುಗ್ಗುವವನೆ...."

"ಒಳನುಗ್ಗುವವನೆ...."

"ಹೊರಟುಹೋಗು !"

"ಹೊರಟುಹೋಗು !"

"ಮಗುವನ್ನು ಚುಂಬಿಸುವುದಕ್ಕೆ ಬರ್‍ತೀಯಾ ?"

"ಮಗುವನ್ನು ಚುಂಬಿಸುವುದಕ್ಕೆ ಬರ್‍ತೀಯಾ ?"

"ಅವನನ್ನು ಚುಂಬಿಸುವುದಕ್ಕೆ ನಾನು ಬಿಡುವುದಿಲ್ಲ."

"ಅವನನ್ನು ಚುಂಬಿಸುವುದಕ್ಕೆ ನಾನು ಬಿಡೋದಿಲ್ಲ."

"ನನ್ನಿಂದ ಅವನನ್ನು ಕಸಿದುಕೊಂಡು ಹೋಗಲು ನಾನು ಬಿಡಲಾರೆ."

"ನನ್ನಿಂದ ಅವನನ್ನು ಕಸಕೊಂಡು ಹೋಗಲು...."

"ನಾನು ಬಿಡಲಾರೆ"

ಗಟ್ಟಿಯಾಗಿ ತಾಯಿ ಅಂದಳು :

"ನಾನು ಬಿಡಲಾರೆ...."

"ನೋವುಂಟುಮಾಡೋ ಬೇರಿನಿಂದ—"

"ನೋವುಂಟುಮಾಡೋ ಬೇರ್‍ನಿಂದ—"

"ನಿನಗೆ ಹಾನಿಕರವಾದ ಈರುಳ್ಳಿಯಿಂದ—"

"ನಿನಗೆ ಹಾನಿಕರವಾದ ಈರುಳ್ಳಿಯಿಂದ—"

"ಬದುಕಿರುವವರಿಗೆ ಸಿಹಿಯಾದ ಸತ್ತವರಿಗೆ ಕಹಿಯಾದ ಜೇನಿನಿಂದ—"

"ಬದುಕಿರೋರಿಗೆ ಸಿಹಿಯಾದ...."

"ಸತ್ತವರಿಗೆ ಕಹಿಯಾದ ಜೇನಿನಿಂದ—"

"ಸತ್ತೋರಿಗೆ ಕಹಿಯಾದ ಜೇನಿನಿಂದ—"

"ಎಬ್ಬು ಮೀನಿನ ದುಷ್ಟ ಅಂಗದಿಂದ—"

"ಎಬ್ಬು ಮಿಾನಿನ ದುಷ್ಟ ಅಂಗದಿಂದ—"

"ತಿಳಿನೀರು ಮಿಾನಿನ ಬೆನ್ನು ಹುರಿಯಿಂದ—"

"ತಿಳಿನೀರು ಮಿಾನಿನ ಬೆನ್ನುಹುರಿಯಿಂದ—"

"ಮಗೂಗೆ ನಾನು ರಕ್ಷಣೆ ಒದಗಿಸಿದ್ದೇನೆ."

"ಮಗೂಗೆ ನಾನು ರಕ್ಷಣೆ ಒದಗಿಸಿದ್ದೇನೆ."

"ಇರುಳಲ್ಲಿ ಬರುವವನೆ ಹೊರಟು ಹೋಗು !"

"ಇರುಳಲ್ಲಿ ಬರುವವನೆ ಹೊರಟ್ಹೋಗು !"

ಧ್ವನಿ ಬದಲಿಸಿ ಇನೇನಿ ನುಡಿದ :

"ನೋಡಮ್ಮ, ಈ ತಟ್ಟೆಲಿರೋದನ್ನೂ ಮಗೂ ಜತೆ ಎತ್ಕೊ. ಮನೆಗೆ ಹೋಗಿ ಅದೆಲ್ಲ ಮಗೂನ ಮೈಗೆ ತಗಲೋ ಹಾಗೆ ಇಡು. ಮಗು ಮಲಗಲಿ ಜ್ವರ ಇಳೀತದೆ."

ಕಿರಿಯ ದೇವಸೇವಕ ತಂದು ಹಿಡಿದ ಪವಿತ್ರೋದಕದ ಪಾತ್ರೆಯಲ್ಲಿ ಬೆರಳುಗಳನ್ನು ಅದ್ದಿ ಮಗುವಿನ ಮೇಲೂ ಅದರ ತಾಯಿಯ ಮೇಲೂ ಇನೇನಿ ಒಂದೊಂದು ಹನಿ ರಾಚಿದ.

"ಕಾಣಿಕೆ ಏನು ತಂದ್ಕೊಡ್ಲಿ ಅಯ್ಯ ?"

"ಅವಸರವಿಲ್ಲ. ನಿಧಾನವಾಗಿ ಕೊಡು. ಬೆಸ್ ದೇವರ ಒಂದು ಮೂರ್ತಿ ಸಾಕು."

ಮಂತ್ರಿತ ವಸ್ತುಗಳನ್ನು ಮಗುವಿನ ಜೊತೆಯಲ್ಲಿ ಸುತ್ತಿ, ಎತ್ತಿಕೊಳ್ಳುತ್ತ ಆಕೆ ಅಂದಳು :

"ಮೂರ್ತಿ ಎಲ್ಲಿ ಸಿಗ್ತದೆ ಅಯ್ಯ ?"

"ಮಹಾಮಂದಿರದ ಎದುರಿಗೆ ಅಂಗಡಿ ಸಾಲು ನೋಡಿದ್ದೀಯಾ ?"

"ಹೂಂ."

"ಅಲ್ಲಿ ಸಿಗ್ತದೆ."

"ಏನು ಕೇಳ್ತಾರೊ ?"

"ಕಸಾಯಿ ಮನೆಯಿಂದ ಒಂದು ಬಾತುಕೋಳಿ ಹೊರಗೆ ದಾಟ್ಸು. ಅಂಗಡಿಯವನು ಮೂರ್ತಿ ಕೊಡ್ತಾನೆ."

ಅವಳೆದ್ದು, "ಬರ್ತೀನಿ ಅಯ್ಯ," ಎಂದಳು. ಬೆಕ್‌ನ ಕಡೆ ತಿರುಗಿ, "ಬರ್ತೀನಿ ಅಣ್ಣ," ಎಂದು ಹೇಳಿ ಮಗುವನ್ನು ಎದೆಗವಚಿಕೊಂಡು ಹೊರಟಳು.

ಬೆಕ್-ಔಟರತ್ತ ನೋಡಿ, "ವಿಷಮ ಜ್ವರ," ಎಂದ ಇನೇನಿ, ತಾನು ಮಂತ್ರ ಹಾಕಿದ್ದು ಅಂಥಿಂಥ ಕಾಹಿಲೆಗಲ್ಲ ಎಂಬುದನ್ನು ಸ್ಪಷ್ಟಪಡಿಸಲು.

ತನ್ನ ಸಹಾಯಕ ದೇವಸೇವಕನನ್ನು ಕರೆದು, "ಒಂದು ಚಾಪೆ ತಂದು ಹಾಸು," ಎಂದ, "ನಿಮ್ಮನ್ನು ಬಹಳ ಹೊತ್ತು ಕಾಯಿಸಿದೆ," ಎಂದು ರಾಗವೆಳೆದ.

ಬಿಡಿಸಿದ ಚಾಪೆಯ ಮೇಲೆ ಔಟ ಮತ್ತು ಬೆಕ್ ಕುಳಿತರು. ಇನೇನಿ ಚಿರತೆ ಚರ್ಮವನ್ನು ಅವರೆದುರಿಗೆ ಸರಿಸಿ, ಅದರ ಮೇಲೆ ಚಕ್ಕಂಬಕ್ಕಳ ಹಾಕಿ ಕುಳಿತ.

"ನೀವಿಬ್ಬರೂ ತಲೆ ತಗ್ಗಿಸಿ ಪ್‌ಟಾ ದೇವರ ಹೆಸರನ್ನು ಹತ್ತು ಸಲ ಉಚ್ಚರಿಸಿ."

ಔಟ ಮತ್ತು ಬೆಕ್ ಆ ಸೂಚನೆಯಂತೆ ಮಾಡಿದರು.

ಇನೇನಿ ಪ್‌ಟಾ ಪ್ರಾರ್ಥನಾ ಸ್ತೋತ್ರ ಪಠಿಸಿದ.

ಪಠಣ ಮುಗಿಸಿ ಅವನೆಂದ : "ನಿಮ್ಮ ಬಾಧಿಸ್ತಿರೋ ಪೀಡೇನ ಇನ್ನು ಉಚ್ಚಾಟನೆ ಮಾಡ್ತೀನೆ. ಕಣ್ಣು ಮುಚ್ಚಿಕೊಳ್ಳಿ. (ಅವರು ಕಣ್ಣೆವೆಗಳನ್ನು ಮುಚ್ಚಿದರು.)....ತೊಲಗು, ತೊಲಗು ! ಶೈತ್ಯದ ಮಗನೆ, ಮುಂಜಾವದಲ್ಲಿ ಮೂಳೆಗಳನ್ನು ಮುರಿದು ಮುಕ್ಕುವವನೆ, ತಲೆಬುರುಡೆಯನ್ನು ನಾಶಮಾಡು ವವನೆ, ಶಿರಸ್ಸಿನ ಸಪ್ತದ್ವಾರಗಳನ್ನು ಅಸ್ವಸ್ಥಗೊಳಿಸುವವನೆ, ತೊಲಗು ! ತೊಲಗು ! ನೆಲಕ್ಕೆ ಬೀಳು ಹೊಲಸೆ, ಹೊಲಸೆ, ಹೊಲಸೆ !....ಹುಂ.... ಮುಗೀತು. ಇನ್ನು, ಮೇಲೆ ನೋಡಿ."

ಬೆಕ್ ತಲೆ ಎತ್ತಿದ ಮೇಲೆ, ಸಹಾಯಕ ತಂದುಹಿಡಿದ ಪವಿತ್ರೋದಕ ದಿಂದ ನಾಲ್ಕು ಹನಿಗಳನ್ನು ಅವರ ಮೇಲೆ ಅರ್ಚಕ ಚುಮುಕಿಸಿ, "ಹೊರಗೆ ಹೋಗಿ ನೆಗಡಿ ತೆಗೀರಿ," ಎಂದ.

ಮೂಗು ಸ್ವಚ್ಛಪಡಿಸಿ, ಬೆಕ್ ಮತ್ತು ಔಟ ಒಳಬಂದರು.

ಎದ್ದು ಅತ್ತಿತ್ತ ನಡೆಯುತ್ತಿದ್ದ ಇನೇನಿ ಅಂದ :

"ಇನ್ನು ಎರಡು ಮೂರು ದಿವಸದಲ್ಲೇ ನಿಲ್ತದೆ. ಜ್ವರಗಿರ ಬರೋದಿಲ್ಲ, ಹೆದರ್ಬೇಡಿ....ಇವತ್ತು ರಾತ್ರೆಯೂ ನಾಳೆ ರಾತ್ರೆಯೂ ಮಲಗೋದಕ್ಕೆ ಮುಂಚೆ ನಿನ್ನೆ ಕೊಟ್ಟ ಬೇರನ್ನೇ ತೇದು ಗಂಟಲಿಗೆ ಲೇಪಿಸಿ....ಪ್ರತಿ ತಿಂಗಳೂ ಭೇದಿಗೆ ತಗೋತಿದೀರಾ ?"

ಬೆಕ್ ಉತ್ತರವಿತ್ತ :

"ಓಹೋ. ಪ್ರತಿ ತಿಂಗಳೂ, ಮೂರು ದಿವಸ."

"ದಿನವೂ ತಪ್ಪದೆ ಮೂರು ದಿವಸ ?"

"ಹೌದು."

"ಅದು ಒಳ್ಳೇ ಅಭ್ಯಾಸ. ಮಹಾ ಅರ್ಚಕರು, ಪೆರೋ, ಅಮಾತ್ಯರು, ನಾವು ಎಲ್ಲ ಅದೇ ರೀತಿ ಮಾಡ್ತೇವೆ. ಮಹಾಮಂದಿರದಲ್ಲಿ ಹಿರಿಯ ದೇವ ಸೇವಕರು ಒಂದೊಂದು ವೈದ್ಯಿಕೆಯಲ್ಲಿ ಪರಿಣತಿ ಪಡೆದಿದ್ದಾರೆ. ಕಣ್ಣಿನ ವೈದ್ಯರು, ಕರುಳಿನ ವೈದ್ಯರು, ಗುದದ್ವಾರದ ರಕ್ಷಕರು, ಶರೀರದ್ರವಗಳ ಪರಿಣತರು....ವಿಶೇಷ ಜ್ಞಾನ ಏನೇ ಇರಲಿ, ಒಂದು ವಿಷಯದಲ್ಲಿ ಮಾತ್ರ ಅವರದು ಏಕಾಭಿಪ್ರಾಯ : ಭೇದಿಗೆ ತಪ್ಪದೆ ತಗೊಳ್ತಾ ಇದ್ದರೆ ಹೆಚ್ಚಿನ ರೋಗಗಳು ನಮ್ಮ ಹತ್ತಿರ ಸುಳಿಯೋದೇ ಇಲ್ಲ."

"ನಮ್ಮೂರಿನ ಅರ್ಚಕರು ಕೂಡಾ ಹೀಗೆಯೇ ಹೇಳಿದ್ದಾರೆ."

"ದೇವರಲ್ಲಿ ಭಕ್ತಿ, ಅರ್ಚಕನಲ್ಲಿ ಶ್ರದ್ಧೆ—ಕಾಹಿಲೆ ಬಂದಾಗ ಇಲ್ಲಿ ವಿಶೇಷವಾಗಿ ಬೇಕು."

"ಕಾಣಿಕೆ ಏನು ಅಂತ ಕೇಳ್ಕೊಂಡ್ಬನ್ನಿ, ಕೊಡೋಣ ಅಂದಿದ್ದಾರೆ ನಾಯಕರು."

"ನಿಮ್ಮ ನಾಯಕರು ಅಸಾಧಾರಣ ಮನುಷ್ಯ....ಅವರೂ ನೀವೂ ಅರಮನೆಯ ಅತಿಥಿಗಳಾಗಿರುವಾಗ, ನಾನು ಕಾಣಿಕೆ ಕೊಡಿ ಅನ್ನೋದು ಸರಿಯೆ ? ನಾನಾಗಿ ಏನೂ ಕೇಳೋದಿಲ್ಲ. ನೀವಾಗಿ ಪ್ರೀತಿಯಿಂದ ಏನು ಕೊಟ್ಟರೂ ತಗೋತೇನೆ. ನಿಮ್ಮ ಪ್ರಾಂತದ ವಸ್ತು. ನಿಮ್ಮ ನೆನಪಿಗೆ. ಎಂಥದಾದರೂ ಆಗ್ತದೆ. ಅವಸರವಿಲ್ಲ....ಇನ್ನೂ ಬಹಳ ದಿನ ಇಲ್ಲಿಯೇ

ಇರ್‍ತೀರಿ ಹ್ಯಾಗೂ. ನಿಧಾನವಾಗಿ ಕೊಡಿ."

"ಆಗಲಿ, ಬರ್‍ತೇವೆ."

"ದೇವರು ನಿಮಗೆ ಒಳ್ಳೇದು ಮಾಡ್ತಾನೆ."

ಹೊರಗೆ ಬಂದ ಔಟ ಮತ್ತು ಬೆಕ್ ದೇವಮಂದಿರದ ಪ್ರಾಂಗಣದಲ್ಲಿ ಮೆನ್ನ ಪೊರಕೆ ಹಿಡಿದು ಕಸ ಗುಡಿಸುತ್ತಿದ್ದುದನ್ನು ಕಂಡರು. ಇವರು ಅಪರಿಚಿತರು ಎನ್ನುವಂತೆ ಆತ ನಟಿಸಿದ.

* * * *

ಬಟಾನ ಅಂಬಿಗರು ಸುದ್ದಿ ತಂದರು. ನುಬಿಯದತ್ತ ಹೊರಟಿದ್ದ ಅಳಿವೆ ಪ್ರದೇಶದ ಎರಡು ಹೇರು ದೋಣಿಗಳು ಕಟ್ಟೆಯಲ್ಲಿದ್ದುವು.

ಮೆನೆಪ್‌ಟಾನನ್ನು ಬಟಾ ಕೇಳಿದ :

"ಹೋಗಿ ನೋಡ್ತೇನೆ. ಊರಿಗೇನಾದರೂ ಸುದ್ದಿ ಕಳಿಸೋದು ಸಾಧ್ಯವಾಗ್ಬೌದು."

"ಏನೂಂತ ಸುದ್ದಿ ಕಳಿಸ್ತೀಯಾ ?"

"ರಾಜಾತಿಥ್ಯದಲ್ಲಿ ಸುಖವಾಗಿದ್ದೇವೆ ಅನ್ನಲಾ ?"

"ಅಮಾತ್ಯರನ್ನೂ ಪೆರೋನನ್ನೂ ಭೇಟಿಯಾಗಿದ್ದೇವೆ ; ಸೆಡ್ ಉತ್ಸವದ ದಿನ ಗೊತ್ತಾಗಿಲ್ಲ; ಎಲ್ಲರೂ ನಿಶ್ಚಿಂತೆಯಾಗಿರಬೇಕು ಅಂತ...."

"ನೆಫಿಸ್ ಅಕ್ಕನಿಗೆ ?"

"ಅವಳಿಗೂ ಅಷ್ಟೆ. ಊರಿನ ಹಿರಿಯರಿಗೆ ತಿಳಿಸಿಬಿಡ್ಲಿ."

"ಔತಣದ ಏರ್ಪಾಟಾಗ್ತಿದೆ; ಇನ್ನೂ ಒಂದಷ್ಟು ದಿವಸ ಆಗಬೌದು; ಕಾಡುಕೋಳಿಗಳು ಈಗತಾನೇ ಮೊಟ್ಟೆ ಇಟ್ಟಿವೆ. ಅವು ಒಡೆದು, ಮರಿಗಳಾಗಿ, ದೊಡ್ಡವಾಗಿ...."

"ಔಟ ಬೆಕ್ ಚೆನ್ನಾಗಿದ್ದಾರೇಂತ ಅವರ ಮನೆಯವರಿಗೆ, ನೀನು ಚೆನ್ನಾಗಿದ್ದೀಯಾಂತ ನಿನ್ನ ಮನೆಯವರಿಗೆ, ನಿನ್ನ ಅಂಬಿಗರು ಚೆನ್ನಾಗಿದ್ದಾರೇಂತ—"

"ಹುಂ. ನೀನು ಚೆನ್ನಾಗಿದ್ದೀಯಾಂತ ನೆಫಿಸ್ ಅಕ್ಕನಿಗೆ—"

"ಆಗಲಪ್ಪ. ಆಗಲಿ !"

ಬಟಾ ದೋಣಿಕಟ್ಟೆಯಲ್ಲಿದ್ದ ಹೇರುದೋಣಿಗಳ ನಾವಿಕರನ್ನು ಕಂಡು ಮಾತನಾಡಿದ. ಪರಸ್ಪರ ಅಸ್ಪಷ್ಟ ಪರಿಚಯವಿತ್ತು.

"ನಿಮ್ಮನ್ನು ನದೀಲಿ ನೋಡಿದ್ದೇನೆ."

"ನನಗೂ ನೀವು ಅಪರಿಚಿತರಲ್ಲ."

ನೀರಾನೆ ಪ್ರಾಂತದ ವಿಷಯವಂತೂ ಅವರು ಅರಿತವರೇ.

"ಇದೇನು ದೊಡ್ಡ ಕೆಲಸ ? ಖಂಡಿತ ಅಲ್ಲಿ ನಿಂತು, ನೀವು ಹೇಳಿದ್ದನ್ನ ತಿಳಿಸಿ ಹೋಗ್ತೇವೆ."

"ನಾವು ಬಂಡಾಯವೆದ್ದವರೂಂತ—"

"ಇರಲಿ ಬಿಡಣ್ಣ. ನಿಮ್ಮ ನಾಯಕರೇ ರಾಜಧಾನೀಲಿರುವಾಗ...."

"ಇನ್ನೊಂದ್ಸಲ ಭೇಟಿಯಾದಾಗ ಒಟ್ಟಿಗೆ ಒಂದಿಷ್ಟು...."

"ಒಂದಿಷ್ಟಲ್ಲ, ಒಂದಷ್ಟು...."

"ಆಹಾ !"

೭

ಮುಂದಿನ ಆರೇಳು ದಿನಗಳಲ್ಲಿ ಐಗುಪ್ತದ ಹೆಚ್ಚುಕಡಮೆ ಎಲ್ಲ ಪ್ರಾಂತ ಪಾಲರೂ ರಾಜಧಾನಿ ತಲಪಿದರು. ದೋಣಿಕಟ್ಟೆಯ ಎಡಬದಿಯುದ್ದಕ್ಕೂ ನಾಲ್ವತ್ತರಷ್ಟು ರಾಜನಾವೆಗಳು. ಮೇಲ್ಭಾವಣಿ, ಬಣ್ಣ, ಅಲಂಕಾರ ಎಲ್ಲದ ರಲ್ಲೂ ವೈವಿಧ್ಯ.

ನೋಡಿದವರೆಲ್ಲ ಅಂದುಕೊಳ್ಳುತ್ತಿದ್ದರು :

"ಸೆಡ್ ಉತ್ಸವಕ್ಕೆ ಬಂದಿದ್ದಾರೆ."

ರಾಜಧಾನಿಯ ಪಶ್ಚಿಮ ವಲಯದಲ್ಲಿದ್ದ ನೂತನ ಅತಿಥಿಭವನ ಜೇನು ಗೂಡಾಯಿತು. ರಾಜಧಾನಿಯ ಖ್ಯಾತ ನರ್ತಕಿಯರೂ ಗಾಯಕರೂ ಶ್ರೇಷ್ಠ ಅಡುಗೆಯವರೂ ಆ ಭವನದಲ್ಲಿ ಬೆವರಿಳಿಸಿದರು. ಅಲ್ಲಿ ಹಗಲು ಇರುಳಾಯಿತು, ಇರುಳು ಹಗಲಾಯಿತು.

ಮೊದಲ ದಿನಗಳ ಮಾತುಕತೆಗೆ ವಸ್ತು, ಮೆನೆಪ್‌ಟಾ. ('ಬಂಡಾಯ

ಗಾರನಿಗೆ ರಾಜಾತಿಥ್ಯವೆ ? ಛೆ !" 'ಬೇರೇನೋ ಇರಬೇಕು' 'ಏನೂ ಇಲ್ಲ ನಾಳೆ ಅವನನ್ನೇ ಪ್ರಾಂತಪಾಲ ಮಾಡ್ತಾರೆ'. 'ಹಾಗಾದರೆ ಇಲ್ಲಿಗೇ ಬರಲಿ, ಈಗಲೇ ಬರಲಿ.')

ಸೆಡ್ ಉತ್ಸವಕ್ಕೆ ಇನ್ನೂ ದಿನ ಗೊತ್ತಾಗಿಲ್ಲ ಎಂದು ಪ್ರಾಂತಪಾಲರಿಗೆ ವಿಸ್ಮಯ.

"ಒಂದು ತಿಂಗಳು ಅಥವಾ ಅದಕ್ಕಿಂತಲೂ ಹೆಚ್ಚು ಕಾಲ ರಾಜಧಾನಿ ಯಲ್ಲೇ ಇರಬೇಕಾಗುತ್ತದೆ." ಎಂದು ಯಾರೋ ಒಬ್ಬರು ಗುಟ್ಟಿನ ಸುದ್ದಿ ಹಂಚಿದರು.

"ಸಪತ್ನೀಕರಾಗಿ ಬನ್ನಿ ಅಂತ ಪೆರೋ ತಿಳಿಸಿದ್ದರೆ ಚೆನ್ನಾಗಿತ್ತು," ಎಂದು ಅಸಮಾಧಾನ ವ್ಯಕ್ತಪಡಿಸಿದವರು ಕೆಲವರೇ. ಉಳಿದವರಿಗೆಲ್ಲ ಅದು ಸ್ವಾಗ ತಾರ್ಹ ಬದಲಾವಣೆ. ಇಲ್ಲಿ ಇತಿಮಿತಿ ಇಲ್ಲದ ಆಮೋದ ಪ್ರಮೋದಗಳು. ಆಡಳಿತದ ಸಮಸ್ಯೆಗಳ ತಲೆನೋವೂ ಇಲ್ಲ. ಲಂಗುಲಗಾಮಿಲ್ಲದ ಹರಟೆ ('ಅವರು ಹಾಗಂತೆ' 'ಇವರು ಹೀಗಂತೆ' 'ನನಗೆ ಗೊತ್ತಪ್ಪ, ಸ್ವತಃ ಅವರೇ ನನಗೆ ಹೇಳಿದ್ದು' 'ಮಹಾರಾಣಿ ತಲೆಗೂದಲು ಕತ್ತರಿಸಿ, ಕೃತಕ ಕೇಶಕವಚ ಇಟ್ಟು, ಅದರ ಮೇಲೆ ಕಿರೀಟ ಧರಿಸ್ತಾರಂತೆ.' 'ಯಾವಾಗ ?' 'ಮಹಾಪ್ರಭು ಕೇಶಮುಂಡನ ಮಾಡಿಸ್ಕೊಂಡ್ಮೇಲೆ' 'ಪಾಪ ! ಯಾಕೆ ಈ ಬುದ್ಧಿ ?' 'ಷೋಕಿ. ಗಂಡಸು ಕೃತಕ ಕೇಶ ಧರಿಸಿದರೆ, ತುಂಬಾ ಕೂದ ಲಿದೆ ಅಂತ ತೋರಿಸ್ಕೋಬೌದು. ನರೆತ ಕೂದಲಿಗೆ ಕಪ್ಪು ಹಚ್ಚಬೇಕಾದ ಪ್ರಮೇಯವೂ ಇಲ್ಲ.' 'ಹೆಂಗಸರು ?' 'ಐಗುಪ್ತದ ದೇಶದಲ್ಲಿ ಗಂಡಸರಿಗಿಂತ ಯಾವುದರಲ್ಲಿ ಕಮ್ಮಿ ಹೆಂಗಸರು ?' 'ಹೆಚ್ಚು ತೂಕದ ದೊಡ್ಡ ಸ್ವರ್ಣ ಕಿರೀಟ' 'ಸರಿ, ಸರಿ !')

ವಯಸ್ಸು ಬೇರೆ ಬೇರೆ. ಅಭಿರುಚಿಗಳು ಕೂಡಾ. ಅವರ ನಡುವೆ ಅಸೂಯೆಯೂ ಸುಳಿಯುತ್ತಿತ್ತು. ರಾಜಧಾನಿಯಲ್ಲಿ ಮಿತ್ರರಿದ್ದರು. ಎಲ್ಲರೂ ಇಲ್ಲಿ ನೇಮಕಗೊಂಡೇ ಪ್ರಾಂತಗಳಿಗೆ ಹೋದವರು. ಮಿತ್ರರ ಒಡನಾಟದಲ್ಲಿ ಕಾಲಹರಣ.

ಒಮ್ಮೊಮ್ಮೆ ಗಭೀರ ಹರಟೆ. ('ಮಹಾ ಅರ್ಚಕರ ಧೋರಣೆ ಹ್ಯಾಗೆ ಸರಿ ? ಪ್ರಾಚೀನ ನಡವಳಿಕೆಗೆ ಇದು ವಿರುದ್ಧ ಅಲ್ವಾ ?' 'ದೇಶದಲ್ಲಿ ಬಿಗಿ

ಆಡಳಿತ ಬೇಕೊಂತ ತಾನೇ ಹೇಪಾಟ್ ಕೇಳೋದು. ಅದರಲ್ಲಿ ತಪ್ಪೇನಿದೆ ?' 'ಅವರ ದೃಷ್ಟೀಲಿ ಬಿಗಿ ಆಡಳಿತ ಅಂದರೆ ದೇವಮಂದಿರಕ್ಕೆ ಹೆಚ್ಚು ಕಂದಾಯ ಹೆಚ್ಚು ಸಂಪತ್ತು, ಹೆಚ್ಚು ದಾಸದಾಸಿಯರು.' 'ಭೂಮಾಲಿಕರಿಗೆ ನಮ್ಮ ಮೇಲೆ ಸಿಟ್ಟು ಮೊದಲಿದ್ದ ಹಾಗೆ ನಾವೇ ಆಳ್ತೇವೆ; ನಾವೇ ಕಂದಾಯ ಸಂಗ್ರಹಿಸಿ ಕೊಡ್ತೇವೆ: ರಾಜಧಾನಿಯಿಂದ ಪ್ರಾಂತಪಾಲರನ್ನು ಕಳಿಸೋದು ಬೇಡ—ಅನ್ತಿದಾರೆ ?' 'ಅಂಕುಶ ಅವರಿಗಿಷ್ಟವಿಲ್ಲ.' 'ಅದಕ್ಕೇ ರಹಸ್ಯವಾಗಿ ಮಹಾಅರ್ಚಕರ ಪಕ್ಷ ವಹಿಸ್ತಿದ್ದಾರೆ.')

ಎಲ್ಲರಿಗಿಂತ ಅರಮನೆಗೆ ಹೆಚ್ಚು ಹತ್ತಿರದವನು ಗೇಬು. ಮೆನೆಪ್‌ಟಾಗೆ ಆಮಂತ್ರಣ ಹೋದಾಗ, ತಾನೂ ರಾಜಧಾನಿಯಲ್ಲಿಯೇ ಇರಬೇಕಾಗುತ್ತ ದೇನೋ ಎಂದುಕೊಂಡಿದ್ದ. ಅದು ಅನಗತ್ಯ ಎಂದು ಅರಿತಾಗ, ಆತ ಲಿಷ್ಟ್‌ಗೆ ತೆರಳಿದ. ಅವನಲ್ಲದಿದ್ದರೂ, ಅವನ ಬಗೆಗೆ ಮಾತು ನೂತನ ಅತಿಥಿ ಭವನದಲ್ಲಿ ಮತ್ತೆ ಮತ್ತೆ ಕೇಳಿಸಿತು. ('ಮೆನೆಪ್‌ಟಾ ಬಂದಾಗ ಸ್ವತಃ ಗೇಬು ಅವನನ್ನು ಇದಿರ್ಗೊಂಡನಂತೆ'; 'ರಾಜಿ ಪ್ರಯತ್ನ ?'; 'ಪಾಪ, ಗೇಬು ! ಸಮಾಧಾನ ಪಡಿಸೋಣ ಅಂದರೆ ಅವನೇ ಇಲ್ವಲ್ಲ'; 'ಅದರ ಅಗತ್ಯ ಕಾಣ್ಲಿಲ್ಲ. ಅವನು ಖುಷಿಯಾಗಿಯೇ ಇದ್ದಾನಂತೆ'; 'ಮೊದಲ್ನಿಂದಲೂ ಹಾಗೆಯೇ ಅವನು'; 'ಹುಟ್ಟಿನಿಂದಲೇ ಶ್ರೀಮಂತರಾದವರಿಗೆ ಉತ್ಕರ್ಷ ಸಾಧಿಸೋದರಲ್ಲಿ ಆಸಕ್ತಿ ಕಮ್ಮಿ'; 'ಗೇಬು ಹೆಂಡತಿ ಸನ್ನಿಧಿಗೆ ತೀರಾ ಹತ್ತಿರ ಅನ್ತಿದ್ರು' ಈಗ ಅಂಥದೇನೂ ಇಲ್ಲ.' 'ಎಷ್ಟು ವರ್ಷ ಹತ್ತಿರ ಇರೋಕಾಗ್ತದೆ. ದೂರವಿರಿ ಅಂತಲೇ ಗೇಬೂನ ನೀರಾನೆ ಪ್ರಾಂತಕ್ಕೆ ಕಳಿಸಿದರಂತೆ.' 'ಅವನಿಗೆ ಒಳ್ಳೇ ಫಜೀತಿ.')

ಇಬ್ಬರು ಭವನದ ಮಹಡಿಯ ವಿಶಾಲ ಮುಖಮಂಟಪದಲ್ಲಿ, ನಡು ಉಡುಪು ಧರಿಸಿದ್ದ ದಾಸಿ ತಂದಿಟ್ಟ ದ್ರಾಕ್ಷಾಸುರೆ ಸವಿಯುತ್ತ ಬಹಳ ಗುಟ್ಟಾಗಿ ತಮ್ಮೊಳಗೆ ಮಾತನಾಡಿಕೊಂಡರು :

"ಅಂತಃಪುರದಲ್ಲಿ ಈಗ ಹೆರಿಗೆ ಕಡಿಮೆಯಂತೆ !"

"ಇಷ್ಟು ಬೇಗ ಸೆಡ್ ಉತ್ಸವ ಮಾಡಿಕೊಳ್ಳೋದೇ ಅದಕ್ಕೆ !"

"ಅಂದರೆ ಮುಂದಿನ ವರ್ಷ ಈ ಹೊತ್ನಲ್ಲಿ ಅಂತಃಪುರ ತುಂಬಾ ಮೊಲೆ ಚೀಪೋ ಮಕ್ಕಳೇ ಇರ್ತವೆ ಅನ್ನು."

"ಈಗ ಬಂದಳಲ್ಲ ಇವಳು ಹೇಗೆ ?"

"ಸೆಡ್ ಉತ್ಸವ ಆಗೋವರೆಗೆ ನೀನಿಟ್ಕೊ."

"ಮಹಾ ಅರ್ಚಕನ ಆ ಚಟುವಟಿಕೆಗೆ ಮೇರೆ ಮೀರಿದೆಯಂತಲ್ಲ ?"

"ನೋಡ್ಕೊ. ಅವನದ್ದೇನಾದರೂ ಮೇಲುಗೈ ಆದರೆ, ರಾಣೀವಾಸಕ್ಕೆ ಹತ್ತಿರವಾಗಿ ಗುರುವಸತಿ ಕಟ್ಟಿಸ್ಕೊಂಡ್ಬಿಡ್ತಾನೆ !"

" ಆಗ ಅವನ್ನ ದುರ್ದೈವಿ ಅನ್ನೋಣವೋ ? ಭಾಗ್ಯಶಾಲಿ ಅಂತ ಕರಿಯೋಣವೊ ?"

"ಕಡೆಗೆ ಮಹಾ ಅರ್ಚಕನೂ ಸೆಡ್ ಉತ್ಸವ ಮಾಡಿಸ್ಕೊಳ್ಬೇಕಾಗ್ತದೆ !"

* * * *

ಪ್ರಾಂತಪಾಲರ ಆ ವೃತ್ತಕ್ಕಿಂತ ದೂರವಾಗಿ, ನದೀತಟದ ತಂಗುಮನೆಗಳಲ್ಲಿ ಭೋಜನಗೃಹ–ಪಾನಮಂದಿರಗಳಲ್ಲಿ ಸುಖವನ್ನು ಕೊಂಡು ಅನುಭವಿಸುವುದರಲ್ಲೇ ಕಾಲಯಾಪನೆ ಮಾಡುತ್ತಿದ್ದರು, ಕೆಲವು ಪ್ರಾಂತಗಳ ಭೂಮಾಲಿಕರು. ಅವರು ಸೆಡ್ ಉತ್ಸವಕ್ಕೆಂದೇನೂ ಬಂದವರಲ್ಲ. ರಾಜಧಾನಿಗೆ ಬರಲು ಯಾರ ಆಮಂತ್ರಣವೂ ಅವರಿಗೆ ಅಗತ್ಯವಿರಲಿಲ್ಲ. ವಿಹಾರ ನೌಕೆಗಳಲ್ಲಿ ಯಾನ ಮಾಡುತ್ತ, ಯಾವ ಊರನ್ನು ಯಾವಾಗ ಬೇಕಾದರೂ ಸಂದರ್ಶಿಸುತ್ತ, ವರ್ಷವಿಡೀ ಅಲೆಮಾರಿಗಳಾಗಿ ದಿನಗಳೆಯುವ ಶಕ್ತಿ ಅವರಿಗಿತ್ತು.

ಅಂಥವರಲ್ಲೊಬ್ಬ, ನೀರಾನೆ ಪ್ರಾಂತದ ನುಟ್‌ಮೋಸ್.

ವರ್ಷಕ್ಕೆ ಎರಡು ಮೂರು ಸಲ ಅವನು ರಾಜಧಾನಿಗೆ ಹೋಗಿ ಬರುತ್ತಿದ್ದ. ಅಲ್ಲಿ ಅರಮನೆಯ ಸಣ್ಣ ಪುಟ್ಟ ನೌಕರರೆದುರು ಧಾರಾಳಿಯಾಗಿ, ಅಬ್ಟು ಯಾತ್ರೆಯಲ್ಲಿ ಪೆರೋನ ಬೋಯಿಯಾಗುವ ಅವಕಾಶ ದೊರಕಿಸಿಕೊಂಡ. ಆದರೆ ಪ್ರಾಂತದಲ್ಲಿ ಬಂಡಾಯವಾದ ಮೇಲೆ ತನ್ನ ಹೊಣೆಗೆಟ್ಟ ಬದುಕಿಗೆ ಒಂದು ಖಚಿತ ರೂಪ ಕೊಡುವುದು ಅಗತ್ಯವೆನಿಸಿತು. ಅದು ಸಾಧ್ಯವಾದದ್ದು, ಮೆಚ್ಚಿನ ದಾಸಿಯನ್ನು ಕರೆಸಿಕೊಂಡ ಮೇಲೆ. ಬಾಳಬೇಕಾದರೆ, ಆಡಳಿತಗಾರರ ಕುಶಲಕಲೆಗಳಲ್ಲಿ ಕೆಲವನ್ನಾದರೂ ಕರಗತ ಮಾಡಿಕೊಳ್ಳುವುದು ಅವಶ್ಯ ಎಂದು ಅವನು ಮನಗಂಡ. ಗೇಬು ಹೇಗೂ ಅವನ ಮಿತ್ರ. ಟಿಹುಟಿಯ ಸ್ನೇಹವನ್ನೂ ಸಂಪಾದಿಸಿದ. ಮೇಲು ಮಟ್ಟದ ಆತಿಥ್ಯ ಯಾರಿಗೆ

ತಾನೇ ಇಷ್ಟವಿಲ್ಲ? ಅರಮನೆಯ ಬೇರೆ ಕೆಲ ಅಧಿಕಾರಿಗಳಿಗೂ ಅವನು ಪರಿಚಿತನಾದ.

ನಡಳಿತದ ಚೌಕಮಣೆಯ ಕಾಯಿಗಳನ್ನೇನೋ ಗುರುತಿಸಿದ್ದ. ಹೇಗಾದರೂ ಮಾಡಿ ಅವನ್ನು ಸರಿಸಲು ಶಕ್ತನಾದೆನೆಂದರೆ ತನ್ನ ಉನ್ನತಿ ಖಚಿತ— ಎಂದುಕೊಂಡ.

ಆ ಆಟದ ನಿಯಮಗಳನ್ನು ಅವನು ಕಲಿತುದು ಅಮಾತ್ಯನ ಹಿರಿಯ ಲಿಪಿಕಾರ ಸೆನೆಬ್‌ನಿಂದ. ನುಟ್‌ಮೋಸ್‌ಗೆ ಅಮಾತ್ಯರ ಭೇಟಿ ಲಭಿಸಿದ್ದೂ ಅವನ ಪ್ರಯತ್ನದಿಂದಲೇ. ಅಮಾತ್ಯನೊಡನೆ ಆತ ಸೆನೆಬ್ ಹೇಳಿಕೊಟ್ಟಂತೆಯೇ ವರ್ತಿಸಿದ.

ಅಮಾತ್ಯ : "ಈ ಕಾಣಿಕೆಗಳನ್ನೆಲ್ಲ ಯಾಕೆ ತಂದಿರಿ ?"

ನುಟ್‌ಮೋಸ್ :

"ನನ್ನ ಕಥೆ ಮುಗಿಯೋದಕ್ಕೆ ಮುಂಚೆ ಈ ಅಲ್ಪ ಕಾಣಿಕೆ—"

"ಕಥೆ ?"

"ಇನ್ನೇನು, ನಮ್ಮ ಆಸ್ತಿಪಾಸ್ತಿ ಎಲ್ಲ ಹೋಯ್ತಲ್ಲ ?"

"ನೀವು ನೀರಾನೆ ಪ್ರಾಂತಕ್ಕೆ ವಾಪ್ಸು ಯಾಕೆ ಹೋಗ್ಬಾರ್ದು ?"

"ಅಲ್ಲಿ ನನ್ನನ್ನು ಜೀವದಿಂದ ಬಿಡ್ತಾರಾ ? ಸ್ವತಃ ತಾವೇ ಬಂದರೂ—"

"ಜೀವದಿಂದ ಬಿಡೋದಿಲ್ಲ, ಅಲ್ಲವೆ ?....ಬಂಡಾಯಕ್ಕೆ ಕಾರಣ ಏನು ?"

"ನಾನು ಅಬ್ಟು ಯಾತ್ರೆಗೆ ಹೋಗಿದ್ದೆ."

"ಗೊತ್ತಿದೆ. ಪೆರೋನ ಬೋಯಿಯಾಗಿದ್ರಿ."

"ಹೆಹ್ಹೆ !.... ಆದರೆ ನಾನು ರಾಜಧಾನಿಗೆ ವಾಪಸು ಬರೋದರೊಳಗೆ ಅಲ್ಲಿ ಬಂಡಾಯವಾಯ್ತು."

"ಯಾಕೆ ಆಯ್ತೂಂತ ?"

"ಯಾಕೆ ಅಂದರೆ— (ಸೆನೆಬ್ ಹೇಳಿಕೊಟ್ಟುದನ್ನು ಸ್ಮರಿಸಿಕೊಳ್ಳುತ್ತ) ಹಿರಿಯ ಅಧಿಕಾರಿ ಟೆಹುಟಿ ಸ್ವಲ್ಪ ಖಾರವಾಗಿ ಮಾತಾಡಿದ್ರು. ಈಗಾಗಲೇ ಗೇಬು ಅವರಿಂದ ಈ ವಿಷಯ ನಿಮಗೆ ತಿಳಿದಿರಬಹುದು. ಸ್ವಲ್ಪ ನಯವಾಗಿ ವರ್ತಿಸಿದ್ದರೆ—"

"ಪರಿಸ್ಥಿತಿ ವಿಕೋಪಕ್ಕೆ ಹೋಗ್ತಿರಲಿಲ್ಲ. ಗೇಬು ಅದನ್ನೂ ಹೇಳಿದ್ದಾರೆ."

"ಜನಸಾಮಾನ್ಯರಿಗೆ ಬಂಡಾಯದಿಂದ ತೊಂದರೆಯಾಗಿಲ್ಲ. ಈಗ ತಾವೇ ಯಜಮಾನರು ಅಂತ ತಿಳಕೊಂಡಿದ್ದಾರೆ. ನಮ್ಮಂಥವರ ಪಾಡು ಮಾತ್ರ ಹೇಳತೀರದು."

"ಲೋಕದಲ್ಲೇ ಇದು ಅಪೂರ್ವ ಘಟನೆ. ನಾವು ಸಹನೆಯಿಂದ ವರ್ತಿಸ್ಬೇಕು. ನೀವು ಇಲ್ಲಿಯೇ ಬೀಡುಬಿಟ್ಟಿದ್ದೀರಿ ಅಂತ ಕೇಳಿದ್ದೇನೆ."

ಅಮಾತ್ಯರು ಎಲ್ಲವನ್ನೂ ಬಲ್ಲವರು. ನೀರಾನೆ ಪ್ರಾಂತಕ್ಕೆ ನಾನು ವಾಪ್ಸು ಹೋಗೋದು ಸಾಧ್ಯವಾಗೋ ತನಕ ರಕ್ಷಣೆ ನೀಡ್ಬೇಕು."

"ಯಾವ ಬಗೆಯ ರಕ್ಷಣೆ ?"

"ರಾಜಧಾನಿಯಲ್ಲಿ ಖರ್ಚು ಜಾಸ್ತಿ. ಜೀವನ ನಿರ್ವಹಣಕ್ಕೆ ಬೇಕಾದ್ದೆಲ್ಲ ರಾಜಬೊಕ್ಕಸದಿಂದಲೂ ಉಗ್ರಾಣದಿಂದಲೂ ದೊರೆಯೋ ಹಾಗೆ ಅಪ್ಪಣೆಯಾಗ್ಬೇಕು."

ಕಿರಿಯ ಲಿಪಿಕಾರನತ್ತ ನೋಡಿ, ಬರೆದುಕೊಳ್ಳುವಂತೆ ಸೂಚಿಸಿ, ಅಮಾತ್ಯ "ಆಗಲಿ" ಎಂದ.

ನೀರಾನೆ ಪ್ರಾಂತದಿಂದ ಕೆಲ ತಿಂಗಳ ಬಳಿಕ ಸೆತೆಕ್‌ನಖ್ತ್, ಸೆನ್ ಉಸರ್ಟ್ ಮತ್ತು ಹೆಜಿರೆ ಸಕುಟುಂಬರಾಗಿ ಮೆಂಫಿಸಿಗೆ ಓಡಿಬಂದ ಮೇಲೆ, ನುಟ್‌ಮೋಸ್‌ಗೆ ಸ್ವಲ್ಪ ಕಿರಿಕಿರಿಯಾಯಿತು. ಅವನ ಸ್ವಚ್ಛಂದ ಬದುಕಿಗೆ ಒಂದು ಬಗೆಯ ಅಡ್ಡಿ. ತನ್ನ ಹೆಂಡತಿ ಮತ್ತು ಮಕ್ಕಳು ಊರಲ್ಲೇ ನಿಂತಿದ್ದು ಅವನ ಪಾಲಿಗೆ ಸಮಾಧಾನದ ಸಂಗತಿ. ಆದರೆ ಆಭರಣಗಳೆಲ್ಲ ಅವರ ವಶದಲ್ಲೇ ಉಳಿದುವೆಂದು ಅವನಿಗೆ ವ್ಯಥೆ.

"ಬಂಡಾಯಗಾರರು ಸಾವಿನ ಬೆದರಿಕೆ ಹಾಕಿದ್ದರಿಂದ ನನ್ನ ಹೆಂಡತಿ ಮಕ್ಕಳು ಹೊರಡೋದಕ್ಕಾಗಲಿಲ್ಲ" ಎಂದು, ನುಟ್‌ಮೋಸ್ ರಾಜಧಾನಿಯ ಮಿತ್ರರಿಗೆ ವಿವರಣೆ ನೀಡಿದ.ಅದು ಸುಳ್ಳೆಂದು ಸೆತೆಕ್‌ನಖ್ತ್ ಆಗಲೀ ಇತರರಾಗಲೀ ಹೇಳಲಿಲ್ಲ ರಾಜಧಾನಿಯಲ್ಲೀಗ ತಾನು ಪ್ರಭಾವಶಾಲಿ ಎಂದು ನುಟ್‌ಮೋಸ್ ತಿಳಿಸಿದ್ದನಲ್ಲ ? ಹೊಸ ಜಾಗದಲ್ಲಿ ಜೀವಿಸಲು ಅವನ ನೆರವು ಬೇಡ ಎನ್ನುವುದುಂಟೆ ?

ಸೆತೆಕ್‌ನಖ್ತ್ ಮತ್ತಿತರರಿಗೂ ಸೆನೆಬ್ ಸ್ನೇಹಿತನಾದ—ಸ್ವಲ್ಪ ಮಟ್ಟಿಗೆ.

ಅವರ ಹೆಂಗಸರು ತೊಡುತ್ತಿದ್ದ ಆಭರಣಗಳನ್ನು ಕಂಡು ಅವನ ನಾಲಗೆ ತೇವ ವಾಯಿತು.

ಅವನು ಅವರಿಗೆ ಕಿವಿಮಾತು ನುಡಿದ :

"ರಾಜಧಾನೀಲಿ ಇರೋದಕ್ಕೆ ನಿಮಗೆ ಅರಮನೆಯ ಸಹಾಯ ಬೇಡವಾ ? ಶ್ರೀಮಂತರು ಅಂತ ತೋರಿಸ್ಕೊಳ್ಬೇಡಿ. ಆಭರಣಗಳನ್ನೆಲ್ಲ ಪೆಟಾರೀಲಿ ಭದ್ರ ವಾಗಿಡಿ. ಹಾಗೆ ಮಾಡ್ದೇ ಇದ್ರೆ ಅವು ಕರಗೋತನಕ ನಿಮಗೆ ಏನೂ ಸಿಗೋದಿಲ್ಲ."

ಕಹಿ—ಆದರೂ ಪಥ್ಯ.

ನುಟ್‌ಮೋಸ್‌ನ ನಾಯಕತ್ವದಲ್ಲಿ ನೀರಾನೆ ಪ್ರಾಂತದ ಭೂಮಾಲಿಕರು ಅಮಾತ್ಯನನ್ನು ಕಂಡರು, ತಮ್ಮ ಸ್ಥಿತಿಗತಿಯ ಬಗೆಗೆ ಅರಿಕೆ ಮಾಡಲು.

(ನುಟ್‌ಮೋಸ್ :

"ನನ್ನ ಪ್ರಾಂತದಲ್ಲೀಗ ಪಾಪದ ಮಹಾಪೂರ, ಅಮಾತ್ಯವರ್ಯ. ಇವರು ಬಹಳ ಪ್ರಯಾಸಪಟ್ಟು ತಪ್ಪಿಸ್ಕೊಂಡು ಬಂದಿದ್ದಾರೆ. ಈಗ ಅಲ್ಲಿ ಉಳಿದಿರುವವರು ಸಿನ್ಯುಹೆ ಆತನ ಸಂಸಾರ ಮತ್ತು ನನ್ನ ಹೆಂಡತಿ ಮಕ್ಕಳು. ಇವರನ್ನು ಬಂಡಾಯಗಾರರು ಕೊಂದುಬಿಟ್ಟರೆ ಭೂಮಾಲಿಕರೇ ಆ ಪ್ರಾಂತದಲ್ಲಿ ಇಲ್ಲದಂತಾಗುತ್ತದೆ."

ಅಮಾತ್ಯ :

"ನಿಮ್ಮೆಲ್ಲರ ಯಾತನೆ ನನಗೆ ಗೊತ್ತಿಲ್ಲದ್ದಲ್ಲ. ಮಹಾಪ್ರಭುವಿಗೂ ವಿಷಯ ತಿಳಿಸ್ತೇನೆ. ಪ್‌ಟಾನ ಕೃಪೆಯಿಂದ ನಿಮ್ಮ ಸಂಕಟ ಬೇಗನೆ ಪರಿಹಾರ ವಾದೀತು."

"ನೀರಾನೆ ಪ್ರಾಂತದ ಭೂಮಾಲಿಕರು ಇಲ್ಲಿ ಭಿಕಾರಿಗಳಂತೆ ಬಾಳ್ವೆ ಮಾಡಿದರೆ ಬಂಡಾಯಗಾರರಿಗೆ ಕೋಡು ಮೂಡ್ತದೆ."

"ಆಗಲಿ. ಈ ಭೂಮಾಲಿಕ ಮಿತ್ರರಿಗೂ ಅರಮನೆ ರಕ್ಷಣೆ ನೀಡ್ತದೆ."

ಹಾಗೆ ಹೇಳಿ ಅಮಾತ್ಯ ಕಿರಿಯ ಲಿಪಿಕಾರರತ್ತ ನೋಡಿದ. ನಿರ್ಧಾರ ವನ್ನು ಬರೆದುಕೊಳ್ಳಲು ಅದು ಸೂಚನೆ.

ಸೆನೆಬ್‌ನ ಕಡೆಗೊಮ್ಮೆ ಕಳ್ಳನೋಟ ಬೀರಿ, ಅವನಿಂದ ಮೌನ ಉತ್ತೇಜನ ಪಡೆದು ಅಮಾತನಿಗೆ ಪುನಃ ನಮಿಸಿ, ನುಟ್‌ಮೋಸ್ ಮನವ್ಯಿ

ಮಾಡಿದ :

"ಒಂದು ಸೀತ ಪಲ್ಲಕಿಯನ್ನೂ ನಾಲ್ವರು ಬೋಯಿಗಳನ್ನೂ ದಯ ಪಾಲಿಸ್ಬೇಕು."

"ನಿಮಗೆ ?"

"ನಾನು ಹಾಗೂ ನನ್ನ ಮಿತ್ರರೆಲ್ಲರ ಅನುಕೂಲಕ್ಕೆ. ತಾತ್ಕಾಲಿಕ ಉಪಯೋಗಕ್ಕೇಂತ ಎರವಲು ಪಡೆಯುವ ಬದಲು. ನಮ್ಮದೇ ಪಲ್ಲಕಿ ಇದ್ದರೆ—"

"—ರಾಜಧಾನಿಯಲ್ಲಿ ಓಡಾಟ ಸುಲಭವಾಗ್ತದೆ."

"ನಮ್ಮ ಅಮಾತ್ಯರು ಕರುಣಾಳು, ಮಹಾಪ್ರಭು ದಯಾಮಯಿ ಅಂತ ಹೇಳ್ಕೊಂಡು ದಿನ ಕಳೀತೇವೆ."

ಅಮಾತ್ಯ ಸಿಟ್ಟನ್ನು ಹತ್ತಿಕ್ಕಿದ.

"ಆಗಲಿ. ಪಲ್ಲಕಿ ಸೌಲಭ್ಯ ಒದಗಿಸೋಣ."

ನುಟ್‌ಮೋಸ್ ಕಿರಿಯ ಲಿಪಿಕಾರನತ್ತ ನೋಡಿದ. ಆವರು ಬರೆದ ಕೊಳ್ಳುತ್ತಿರುವುದನ್ನು ಕಂಡು ಸಂತೋಷಪಟ್ಟ.

ಅಮಾತ್ಯ ನಗೆಯ ಮುಖವಾಡ ಧರಿಸಿ ಅಂದ :

"ಉಪಕಾರ ಸ್ಮರಣೆ ಮಾಡಲಿಲ್ಲವಲ್ಲ ನುಟ್‌ಮೋಸ್ ?"

"ಎಲ್ಲಾದರೂ ಉಂಟೆ ? ಎಲ್ಲಾದರೂ ಉಂಟೆ ? ನಾವು ಉಸಿರಾಡ್ತಿರೋದೇ ನಿಮ್ಮ ಕೃಪೆಯಿಂದ," ಎಂದು ನುಟ್‌ಮೋಸ್ ನೆಲದವರೆಗೂ ಬಾಗಿ ಅಮಾತ್ಯನಿಗೆ ನಮಿಸಿದ. ಉಳಿದ ಭೂಮಾಲಿಕರೂ ಆವನನ್ನು ಅನುಕರಿಸಿದರು.

ಇಷ್ಟಾದ ಮೇಲೆ ನುಟ್‌ಮೋಸ್‌ನ ಹಿರಿಮೆಯನ್ನು ನೀರಾನೆ ಪ್ರಾಂತದ ಇತರ ಭೂಮಾಲಿಕರು ಒಪ್ಪಿಕೊಳ್ಳದೆ ಉಂಟೆ ?

ಹೀಗಿದ್ದರೂ ಸೆತೆಕ್‌ನಖ್ತ್‌ಗೆ ಒಂದು ಬಗೆಯ ಕರುಬು. ಆತ ಅಂದುಕೊಂಡ : ತಾನೂ ಇಲ್ಲಿಗೆ ಮೊದಲೇ ಬಂದುಬಿಡಬೇಕಾಗಿತ್ತು; ಆಗ ಅರಮನೆ ವರ್ತುಲದಲ್ಲಿ ತಾನೂ ಪ್ರಭಾವಶಾಲಿಯಾಗಬಹುದಿತ್ತು....

ನೀರಾನೆ ಪ್ರಾಂತದ ನಾಯಕ ಅರಮನೆಯ ಅತಿಥಿಯಾಗಿ ರಾಜಧಾನಿಗೆ ಬರುತ್ತಾನೆ ಎಂದು ತಿಳಿದಾಗ ನುಟ್‌ಮೋಸ್‌ಗೆ ಗಂಟಲಲ್ಲಿ ಮೀನೆಲುಬು

ಸಿಲುಕಿದಂತಾಯ್ತು. ಇದರಿಂದ ತನಗೆ ಒಳಿತಾಗುತ್ತದೋ? ಕೆಡುಕಾಗುತ್ತದೋ? ಅವನು ಅದೃಷ್ಟದ ಬೀದಿಗೆ ಹೋದ. ಇತರ ಭೂಮಾಲಿಕರಿಗೆ ಇದು ಗೊತ್ತಾಗ ಬಾರದೆಂದು ಪಲ್ಲಕಿ ಬಳಸಲಿಲ್ಲ; ಸೇವಕರನ್ನು ಕರೆದೊಯ್ಯಲಿಲ್ಲ. ನಡೆದ.

ಅದೃಷ್ಟ ವಾಚನದಲ್ಲಿ ನಿಷ್ಣಾತನೆಂದು ಹೆಸರಾಗಿದ್ದ ವೃದ್ಧ ಅರ್ಚಕನೊಬ್ಬ ನುಟ್‌ಮೋಸ್‌ನನ್ನು ನೋಡಿ, "ಹಿಂದೆ ಸುಖ ಅನುಭವಿಸಿದವರು. ಈಗ ಕಷ್ಟದಲ್ಲಿದ್ದೀರಿ," ಎಂದ. ವಿಷಯ ತಿಳಿದುಕೊಂಡು, ಆ ಲಿಪಿ ಸುರುಳಿ, ಈ ಲಿಪಿ ಸುರುಳಿ ನೋಡಿ, ಬಹಳ ಯೋಚಿಸಿ, "ನಿಮ್ಮ ಕಷ್ಟದ ದಿನಗಳು ಮುಗಿಯುತ್ತ ಬಂದುವು ಅಂತ ತಿಳೀರಿ. ಮತ್ತೆ ಸುಖದ ದಿನಗಳನ್ನು ನೋಡ್ತೀರಿ," ಅಂದ.

ನುಟ್‌ಮೋಸ್‌ಗೆ ಆದ ಸಂತೋಷ ಅಪಾರ. ತನ್ನ ಬೆರಳಿನಿಂದ ಬಂಗಾರದ ಉಂಗುರವನ್ನು ತೆಗೆದು ಅರ್ಚಕನ ಮುಂದಿರಿಸಿ, ಪ್ರಣಾಮ ಮಾಡಿ, ಆಶೀರ್ವಾದ ಪಡೆದ....

ಮೆನೆಪ್‌ಟಾ ಬಂದು ತಲಪಿದ ವಾರ್ತೆ ಸಂಜೆಯ ಹೊತ್ತಿಗೆ ನುಟ್‌ಮೋಸ್‌ಗೆ ಮುಟ್ಟಿತು. ('ಪೀಠಪಲ್ಲಕಿಯಲ್ಲಿ ಮೆರವಣಿಗೆಯಲ್ಲಿ ಕರೆದೊಯ್ದರು.' ಬೆಳಿಗ್ಗೆ ಎದ್ದು ಬಿಸಿಲೇರುತ್ತಿದ್ದಂತೆ ದೋಣಿಕಟ್ಟೆಗೆ ಬಂದು, ನದೀತಟದ ಭೋಜನ ಗೃಹಗಳತ್ತ ಹೊರಳುವುದು ಅವನ ಪದ್ಧತಿ. ಹಿಂದಿನ ರಾತ್ರೆ ಮನೆ ಸೇರಿದಾಗ ತಡವಾಗಿತ್ತು. ಬೆಳಿಗ್ಗೆ ವಿಪರೀತ ತಲೆಶೂಲೆಯಾಗಿ, ಹೊರ ಬೀಳುವಾಗ ಮಧ್ಯಾಹ್ನವಾಗಿತ್ತು. ಇಲ್ಲದೆ ಹೋಗಿದ್ದರೆ ಅವನೂ ಅನಿವಾರ್ಯವಾಗಿ ಮೆರವಣಿಗೆಯ ವೀಕ್ಷಕನಾಗುತ್ತಿದ್ದ. "ದೇವರು ಆ ಹಿಂಸೆಯಿಂದ ನನ್ನನ್ನು ಪಾರುಮಾಡಿದ.')

ಇತರರು ಮೆನೆಪ್‌ಟಾನನ್ನು ಬಣ್ಣಿಸಿದ್ದರು ಇವನು ಕಂಡಿರಲಿಲ್ಲ. ಊರಿನ ಜನಸಾಮಾನ್ಯರನ್ನೆಲ್ಲ ಯಾರು ನೆನಪಿಡುತ್ತಾರೆ? ಕಾಣುವ ಕುತೂಹಲ. ಅದಕ್ಕಿಂತಲೂ ಹೆಚ್ಚಾಗಿ, ಆ ನಾಯಕ ಬಂದ ಮೇಲೆ ಅರಮನೆಯಲ್ಲಿ ಏನು ನಡೆಯುತ್ತದೆ ಎಂದು ತಿಳಿಯುವ ತವಕ. 'ನಿಮ್ಮ ಕಷ್ಟದ ದಿನಗಳು ಮುಗಿಯುತ್ತ ಬಂದುವು ಅಂತ ತಿಳೀರಿ'. ಅದರ ಸುಳಿವು?

ಸೆನೆಬ್‌ನ ಸೂಚನೆಯಂತೆ, ಮೆನೆಪ್‌ಟಾ ಅಮಾತ್ಯನ ಭೇಟಿಗೆ ಹೋದ ದಿನ ತಾನೂ ಅಲ್ಲಿಗೆ ಧಾವಿಸಿದ. ಅಮಾತ್ಯನನ್ನು ಕಾಣುವುದು ಸಾಧ್ಯವಾಗ

ಲಿಲ್ಲ. ಆದರೆ ಮರೆಯಲ್ಲಿ ನಿಂತು ಮೆನೆಪ್‌ಟಾನನ್ನು ಕಂಡ. ಸಾಮಾನ್ಯ ಮನುಷ್ಯ. ತೀರಾ. ಆದರೂ ಆ ಶೀತಲ ಕಣ್ಣುಗಳ ಹಿಂದೆ ಏನಿತ್ತು ? ಏನಿತ್ತು ?

ರಾತ್ರಿ ಸೆನೆಬ್ ವಿವರಿಸಿದ :

"ಇದು ಸ್ನೇಹವಲ್ಲ. ಶಿಷ್ಟಾಚಾರ."

ಅವನು ಗೂಢವಾಗಿ ಇನ್ನೂ ಒಂದು ಮಾತು ಸೇರಿಸಿದ :

"ಅಮಾತ್ಯರ ಸವಿಮಾತು ಮುಖ್ಯವಲ್ಲ. ಬಂಡಾಯಗಾರನ ವಿಷಯದಲ್ಲಿ ಮಹಾ ಅರ್ಚಕರು ಏನು ಹೇಳ್ತಾರೆ ಅನ್ನೋದು ಮಹತ್ವದ್ದು."

"ಮಹಾ ಅರ್ಚಕರು ಇನ್ನೂ ಆನ್ ನಗರದಲ್ಲೇ ಇದ್ದಾರಲ್ಲಾ ?"

"ಬರ್‍ತಾರೆ, ಬರ್‍ತಾರೆ. ಬರಬೇಕಾದ ಸಮಯಕ್ಕೆ ಸರಿಯಾಗಿ ಪ್ರತ್ಯಕ್ಷ ವಾಗ್ತಾರೆ."

"ಸೆನೆಬ್. ನನಗೆ ತಡೆಯೋಕಾಗ್ಲಿಲ್ಲ. ಆ ನಾಯಕ ರಾಜಧಾನಿಗೆ ಬರ್‍ತಾನೆ ಅಂತ ಗೊತ್ತಾದ್ಮೇಲೆ, ಅದೃಷ್ಟವಾಚನ ಮಾಡಿಸ್ಕೊಂಡು ಬಂದೆ."

"ಮುದುಕನಲ್ಲಿಗೆ ಹೋದಿರೊ ?"

"ಹೌದು. ಮತ್ತೆ ಸುಖದ ದಿನಗಳು ಬರ್‍ತವೆ ಅಂದ್ರು."

"ನಾನು ಅದನ್ನ ಹೇಳ್ತಿರ್‍ಲಿಲ್ವೆ ? ಕಾಣಿಕೆ ಏನು ಕೊಟ್ರಿ ?"

"ಬಂಗಾರದ ಉಂಗುರ."

"ಹೋಯ್ತು."

"ಅರ್ಥವಾಗ್ಲಿಲ್ಲ."

"ನನಗೆ ಸಿಗಬೇಕಾದ್ದು ಆ ವೃದ್ಧನ ಪಾಲಿಗಾಯ್ತು ಅಂತ."

"ಅದೇನು ಮಹಾ ?"

"ನುಟ್‌ಮೋಸ್. ನೀವು ವ್ಯರ್ಥ ಕಾಲಕಳೆಯೋ ಬದಲು ದೇಶದಲ್ಲಿ ಏನಾಗ್ತಿದೆ ಅಂತ ತಿಳಕೊಳ್ಳೋದಕ್ಕೆ ಪ್ರಯತ್ನಪಡಿ."

"ಅರ್ಥವಾಗ್ಬೇಕಲ್ಲ ಸೆನೆಬ್ ?"

"ನದೀತಟದ ಮಂದಿರಗಳಲ್ಲಿ ಮಜಾ ಮಾಡ್ತೀರಿ. ಅಲ್ಲಿಗೆ ಬೇರೆ ಪ್ರಾಂತ ಗಳ ಭೂಮಾಲಿಕರೂ ಆಗಾಗ್ಗೆ ಬರೋದಿಲ್ಲವಾ ? ಅವರ್‍ಜತೆ ಮಾತನಾಡಿ. ದೇಶದ ಭೂಮಾಲಿಕರೆಲ್ಲ ಮಹಾ ಅರ್ಚಕರ ಹತ್ತಿರ ಸರೀತಿದ್ದಾರೆ. ಯಾಕೆ,

ಅಂತ ತಿಳ್ಕೊಳ್ಳಿ."

"ಆದರೆ ನಾನು ಅರಮನೆಗೆ ಋಣಿಯಾಗಿದ್ದೇನೆ."

"ನಾನು ಋಣಿಯಲ್ಲ ಅಂತೀರಾ ? ಇಡೀ ದೇಶವೇ ಅರಮನೆಗೆ ಋಣಿ. ಆ ವಿಷಯ ಬೇರೆ, ರಾಜನೀತಿ ಬೇರೆ."

"ರಾಜನೀತಿ ?"

"ಹ್ಞ. ಆಳೋದಕ್ಕೆ ಸಂಬಂಧಿಸಿದ್ದು. ರಾಜನೀತಿಗೆ ತಳಹದಿ—ಸ್ವಹಿತ."

"ಸ್ವಹಿತ. ಅಂದರೆ, ಇವತ್ತು ಅರಮನೆ ಪಕ್ಷ—ನಾಳೆ ಮಹಾ ಅರ್ಚಕರ ಪಕ್ಷ ?"

"ನಿಮಗೆ ಬುದ್ಧಿ ಇದೆ ನುಟ್‌ವೋಸ್ ! ಆದರೆ, ಇದೆ ಅನ್ನೋ ಸಂಗತಿ ಗೊತ್ತಿಲ್ದೇ ಬೆಪ್ಪನಂತೆ ಕಾಣ್ತೀರಿ, ಅಷ್ಟೆ."

"ಹೆಹ್ಹೆ !"

* * * *

ಚೌಕಮಣೆಯ ಎರಡಾಟ ಮುಗಿಸಿ, ಮೆನೆಪ್‌ಟಾ ಮತ್ತು ಬಟಾ ಬೆರಳುಗಳ ನೆಟಿಕೆ ಮುರಿದರು.

ಬಟಾ, ತನ್ನ ಹೊಟ್ಟೆಯನ್ನು ತೋರು ಬೆರಳಿನಿಂದ ನಾಲ್ಕಾರು ಕಡೆ ಒತ್ತಿ, ನುಡಿದ:

"ಚುಕ್ಕಾಣಿ ಮುಟ್ಟಿ ಎಷ್ಟೋ ದಿವಸ ಆಯ್ತು. ನೆಲದ ಮೇಲೇ ಇದ್ದರೆ ವಾಯು ತೊಂದರೆ. ತುಂಬಿಕೊಂಡ ಹಾಯಿಯ ಹಾಗಿದೆ ಇದು."

"ಭೇದಿಗೆ ತಗೊಂಡ್ಬಿಡೋಣ. ಪೆರೋನ ಔತಣಕ್ಕಾಗಿ ಕಾಯೋದ ಬೇಡ."

"ಸರಿ ಅಣ್ಣ. ಔತಣ ಮಹಾರಾಣಿಯ ಮರ್ಜಿ ಅಂತ ಸೆನೆಬ್ ಅವತ್ತೇ ಹೇಳಿದ್ನಲ್ಲ ? ಆ ಮಹಾತಾಯಿಗೆ ಅದೇನು ತೊಂದರೆಯೊ ?"

"ಪದರದೊಳಗೆ ಪದರ. ಸುರುಳಿಯೊಳಗೆ ಸುರುಳಿ. ಯಾವುದೂ ಹೊರಗೆ ಕಾಣಿಸುವಷ್ಟು ಸುರಳ ಅಲ್ಲ."

ತನ್ನ ಒಳಗಿನ ಕಸಿವಿಸಿಯನ್ನು ಬಟಾ ಹೊರಗೆಡವಿದ:

"ಅಣ್ಣಾ, ಗಹನ ವಿಷಯಗಳು ಈ ಮಂಡೆಯೊಳಗೆ ಹೋಗೋದಿಲ್ಲ. ಇನ್ನು ಎಷ್ಟು ದಿವಸ ಇಲ್ಲಿರಬೇಕು ? ಅದನ್ನು ಹೇಳಿಬಿಡು. ಮೆನ್ನ ಆ ಹಾಡು ಬಿಟ್ಟ. ಅವನಿಗೆ ಅದು ಬೇಡವಾದ್ಮೇಲೆ, ನಾನೂ ಕೊಳಲಲ್ಲಿ ಅದನ್ನು ಬಾರಿ ಸೋದು ಬೇಡ ಅಂದ್ಕೊಂಡೆ.... ಆದರೆ, ಮೆನ್ನನ ಸಂಕಟ ಕಡಿಮೆಯಾಗ್ತಿರೋ ಹಾಗೆ ನನ್ನದು ಜಾಸ್ತಿಯಾಗ್ತಿದೆ."

"ನನ್ನ ಸಂಕಟ ಕಡಿಮೆ ಅಂದ್ಕೊಂಡೆಯ ಬಟಾ ?"

ಮೆನೆಪ್‌ಟಾ ಪೀಠದಿಂದೆದ್ದು ಕೊಠಡಿಯಲ್ಲಿ ಕೆಲವು ಹೆಜ್ಜೆ ಅತ್ತಿತ್ತ ನಡೆದ, ಮೂಲೆಯಲ್ಲಿ ಗೋಡೆಗೊರಗಿಸಿದ್ದ ಬಟಾನ ಕೊಳಲನ್ನು ಎತ್ತಿಕೊಂಡು ಸ್ವರ ಹೊರಡಿಸಲು ಯತ್ನಿಸಿದ. ವಿಫಲನಾದಾಗ ಸಣ್ಣನೆ ನಕ್ಕು, ಕೊಳಲನ್ನು ಬಟಾನ ಕೈಗಿತ್ತು, "ಆ ಹಾಡು ಬಾರಿಸು," ಎಂದ.

"ಯಾವುದು ? "

"ನನ್ನ ನಲ್ಲೆಯ ಒಲವು.... ಬರ್ತಾ ದೋಣೀಲಿ ಬಾರಿಸಿದ್ದು. "

ಮುಗುಳುನಕ್ಕು ಬಟಾ "ಓ!" ಎಂದ. ಕೊಳಲಿನ ಒಂದು ತುದಿಯನ್ನು ಬಾಯೊಳಗಿರಿಸಿ, ಧ್ವನಿ ಸೃಷ್ಟಿಸಿ, ಎರಡೂ ಕೈಗಳ ಬೆರಳುಗಳನ್ನು ತೂತುಗಳ ಮೇಲೆ ಅತ್ತ ಇತ್ತ ಓಡಿಸುತ್ತ, ಧ್ವನಿವಾಹಿನಿಯನ್ನು ಪದಗಳಾಗಿ ಪರಿವರ್ತಿಸಿದ. ಆ ಪದಗಳು ಅತಿಥಿ ಗೃಹದ ತುಂಬ ಅಲೆದುವು.

"ನನ್ನ ನಲ್ಲೆಯ ಒಲವು ನಲಿದಿದೆ ನದಿಯ ತಟದಲ್ಲಿ
ಕ್ರೂರ ಮೊಸಳೆಯು ಅವಿತು ಕುಳಿತಿದೆ ನೆರಳ ಮರೆಯಲ್ಲಿ
ಹೆದರೆ ನಾ, ಬೆದರೆ ನಾ
ನೀರಿಗಿಳಿದು ಈಸುವೆ
ನದಿಯಲಿ ನಾ ಧೀರ, ಬಲು ಧೀರ
ಪಾದಕದು ನೀರಲ್ಲ,—ನೆಲ
ಅವಳೊಲವೆ ನನ್ನ ಬಲ
ನಲ್ಲೆಯ ಕಂಡರೆ ನನಗೆ ಮುದ
ಬರಸೆಳೆಯಲು ನಾನು ಸಿದ್ಧ...."

ಮತ್ತೆ ಮತ್ತೆ ನುಡಿಸಿದ ಸಾಲುಗಳು, ಪುನಃ ಪುನಃ ಗುಂಯ್‌ಗುಟ್ಟಿದ ಪದಗಳು.

ನುಡಿಸಿ ಮುಗಿದಾಗ ಬಟಾ ಕೊಳಲಲ್ಲಿ ತುಂಬಿದ್ದ ಎಂಜಲನ್ನು ಝಾಡಿಸಿದ. ಪೀಠದಿಂದೆದ್ದು ಕೊಳಲನ್ನು ಮೂಲೆಯಲ್ಲಿ ಗೋಡೆಗೆ ಒರಗಿಸಿ, ಕಿಟಕಿಯ ಬಳಿ ಹೊರನೋಡುತ್ತ ನಿಂತ. ಕಣ್ಣುಗಳಲ್ಲಿ ಕಂಬನಿ ಕೋಡಿಗಟ್ಟಿತು.

ಸೂಕ್ಷ್ಮತಮ ಭಾವನೆಗಳನ್ನು ಕಲಕಿದ ಗಾಯನ. ಮೆನೆಪ್‌ಟಾನ ಹೃದಯ ಅರಳಿತು, ಹರ್ಷಾಶ್ರು ಉರುಳಿತು.

ನೆಗಡಿಯ ತೊಂದರೆಯಿಂದ ಆ ವೇಳೆಗಾಗಲೇ ಪಾರಾಗಿದ್ದ ಔಟ ಮತ್ತು ಬೆಕ್ ಕೊಠಡಿಯ ದ್ವಾರಪಾಲಕ ಪ್ರತಿಮೆಗಳಾಗಿದ್ದರು. ಅತಿಥಿಗೃಹದ ಸೇವಕರನ್ನೆಲ್ಲ ಕೊಳಲಿನ ನಾದ ಮೊಗಸಾಲೆಗೆ ಸೆಳೆದಿತ್ತು. ಹೊರಗೆ ಉದ್ಯಾನ ಅರಮನೆಯ ಸಣ್ಣಪುಟ್ಟ ಉದ್ಯೋಗಿಗಳಿಂದ ತುಂಬಿತ್ತು. ಅವರೆಲ್ಲರಿಗೆ ನಾದದ ಸೃಷ್ಟಿಕರ್ತನ ಮುಖ ನೋಡುವ ಬಯಕೆ.

ಬಟಾ ಮೊಗಸಾಲೆಯತ್ತ ತಿರುಗಿ, ಬಗ್ಗಿ ನಡುವಸ್ತ್ರದ ಚುಂಗಿನಿಂದ ಕಂಬನಿ ತೊಡೆದು, ನಗುತ್ತ, "ಆಹಾ! ನನ್ನ ಭಕ್ತಾದಿಗಳು ನಿಂತಿದ್ದಾರೆ. ನಾನಿವರನ್ನು ಆಶೀರ್ವದಿಸಬೇಕು," ಎಂದ.

ಮೆನೆಪ್‌ಟಾ ನಸುನಕ್ಕ.

ಅಷ್ಟರಲ್ಲಿ ಅತಿಥಿಗೃಹದ ಅಧಿಕಾರಿಯ ಸ್ವರ ಕೇಳಿಸಿತು :

"ಚೆದರಿ! ಚೆದರಿ! ಏನಿದು ಗದ್ದಲ?"

ವಾಸ್ತವವಾಗಿ, ಉಗ್ರಾಣದ ಅಧಿಕಾರಿಯೊಡನೆ ಹರಟೆ ಹೊಡೆಯುತ್ತ ನಿಂತಿದ್ದ ಅವನಿಗೂ ಕೊಳಲಿನ ಇಂಪು ತಟ್ಟಿತ್ತು.

ಕೊಠಡಿಯೊಳಕ್ಕೆ ಇಣಿಕಿ, "ಜನರಿಂದ ನಿಮಗೇನಾದರೂ ತೊಂದರೆ ಆಯ್ತೆ?" ಎಂದು ಆತ ಕೇಳಿದ.

ಬಟಾನೆಂದ :

"ಇಲ್ಲವಪ್ಪ, ನನಗೆ ಸ್ವಲ್ಪ ಉಸಿರಿನ ಉಪದ್ರವ."

"ಹಾಗೇನು? ಅರ್ಚಕರನ್ನು ಕರಕೊಂಡ್ಬರಲಾ?"

"ಬೇಡ, ಬೇಡ. ಕೊಳಲು ಬಾರಿಸಿದ್ಮೇಲೆ ಅದು ನಿವಾರಣೆಯಾಯ್ತು."

ಇದು ನಿಜವೋ ಪರಿಹಾಸ್ಯದ ಮಾತೋ ಎಂದು ತಿಳಿಯದೆ ಅಧಿಕಾರಿ ಕಕ್ಕಾವಿಕ್ಕಿಯಾದ.

* * * *

ಅವರ ಪೆಟಾರಿಯಲ್ಲಿ ಮೌಲ್ಯವಿನಿಮಯಕ್ಕೆಂದು ತಂದಿದ್ದ ಕೆಲವು ಸಾಮಗ್ರಿಗಳಿದ್ದುವಲ್ಲ ? ಅವುಗಳಲ್ಲೊಂದು, ಶ್ರೇಷ್ಠ ಜೊಂಡಿನಿಂದ ಮಾಡಿದ್ದ ನೀರಾನೆಯ ಚಿತ್ತಾರಗಳಿದ್ದ ಕಿರುಚಾಪೆ. ಬೆಕ್‌ಆಟನಿಗೆ ನಡೆಸಿದ ಔಷಧೋಪಚಾರಕ್ಕೆ ಕಾಣಿಕೆ ಎಂದು ಅದನ್ನು ಅರ್ಚಕ ಇನೇನಿಗೆ ಕೊಡಲು ಬಟಾ ಯೋಚಿಸಿದ.

"ತಡ ಯಾಕೆ? ಇವತ್ತೇ ಕೊಟ್ಬಿಡು," ಎಂದ ಮೆನೆಪ್‌ಟಾ.

ಮುಚ್ಚಂಜೆ ದೀಪ ಬೆಳಗಿದ ಮೇಲೆ ಬಟಾ ಕಾಣಿಕೆಯನ್ನೆತ್ತಿಕೊಂಡು ಅರ್ಚಕನ ವಸತಿಗೆ ಹೋದ. ಇನೇನಿ ಮಂದಿರದಲ್ಲಿದ್ದ. ಬಟಾ ಸ್ವಲ್ಪ ಹೊತ್ತು ಕಾಯಬೇಕಾಯಿತು. ಪಡಸಾಲೆಯಲ್ಲಿ ಉರಿಯುತ್ತಿದ್ದ ಹಣತೆಯ ಬಳಿ ಕುಳಿತು ಕಿರಿಯನೊಬ್ಬ ಒಂದು ಲಿಪಿ ಸುರುಳಿಯನ್ನು ಕಂಠಪಾಠ ಮಾಡುತ್ತಿದ್ದ.

ಒಂದು ವಾಕ್ಯದ ಪಠಣವನ್ನು ಅರ್ಧಕ್ಕೇ ನಿಲ್ಲಿಸಿ, ತಲೆಯೆತ್ತಿ ಬಟಾನನ್ನು ನೋಡಿ, ಆತ ಕೇಳಿದ :

"ಓ ಮೊನ್ನೆ ಕೊಳಲು ನುಡಿಸಿದ್ದು ನೀವೇ ಅಲ್ಲವಾ ?"

ಬಟಾ "ಹೌದು," ಎಂದೊಡನೆ, ಓದುತ್ತಿದ್ದ ವಾಕ್ಯವನ್ನು ಆತ ಪೂರ್ತಿಗೊಳಿಸಿ, "ಚೆನ್ನಾಗಿತ್ತು," ಎಂದ.

ಒಳಗೆ ಬಂದ ಇನೇನಿ, "ಇವತ್ತಿಗೆ ಸಾಕು," ಎಂದು ನುಡಿದು, ಓದುತ್ತಿದ್ದ ಹುಡುಗನನ್ನು ಕಳುಹಿಸಿಕೊಟ್ಟ.

"ಬಾ ಬಟಾ ಕೂತ್ಕೋ," ಎಂದು ಹೇಳಿ, ಹುಡುಗ ಆ ತನಕ ಕುಳಿತಿದ್ದ ಚಾಪೆಯನ್ನು ತೋರಿಸಿದ. "ಈಗ ಹೋದ್ನಲ್ಲ ? ಅವನು ಅಮಾತ್ಯರ ದೂರದ ಸಂಬಂಧ. ಮಂದಿರ ಶಾಲೆಯಲ್ಲಿ ನನ್ನ ಸಹಾಯಕ ಕಲಿಸೋದು ಸಾಲದೂಂತ ಈ ವಿಶೇಷ ಪಾಠ. ಮೂರು ದಿವಸಕ್ಕೊಮ್ಮೆ, ತನಗೆ ಅನುಕೂಲವಾದ ಹೊತ್ನಲ್ಲಿ ಬರ್ತಾನೆ ! ಹ್ಯಾಗಿದ್ದೀರಿ ಎಲ್ಲ ?"

"ಚೆನ್ನಾಗಿದ್ದೇವೆ. ಕಾಣಿಕೆ ತಂದಿದ್ದೇನೆ."

ಅರ್ಚಕ ಪಡಸಾಲೆಯ ಮೂಲೆಯಲ್ಲಿದ್ದ ಒಂದು ಪೀಠವನ್ನೆತ್ತಿ ತಂದು ಹಣತೆಯ ಬಳಿ ಇಟ್ಟು ಅದರ ಮೇಲೆ ಕುಳಿತುಕೊಂಡ.

ಕಳೆದ ಸಲ ಬಂದಿದ್ದಾಗ ಬಟಾ ಅದನ್ನು ಕಂಡಿರಲಿಲ್ಲ.

"ಹೊಸದು. ಒಬ್ಬ ಅಧಿಕಾರಿಯ ಹೆಂಡತಿಗೆ ಸಕತ್ ಕಾಹಿಲೆ ಆಗಿತ್ತು. ವಾಸಿ ಮಾಡ್ದೆ. ಇದನ್ನು ಕಾಣಿಕೆ ಕೊಟ್ಟ," ಎಂದು ಹೇಳಿ ಅರ್ಚಕ ಬಟಾ ನೀಡಿದ ಸುರುಳಿಯನ್ನು ಬಿಚ್ಚಿ, ಹಣತೆಯ ಬೆಳಕಿನಲ್ಲಿ ನೋಡುತ್ತ, "ಬಹಳ ಸೊಗಸಾಗಿದೆ," ಎಂದು ಮೆಚ್ಚುಗೆ ಸೂಚಿಸಿದ.

"ನಿಮಗೆ ತೃಪ್ತಿಯಾಯ್ತು ಅಂತ ನಾಯಕರಿಗೆ ತಿಳಿಸ್ತೇನೆ."

"ದೇವತಾ ಪ್ರಾರ್ಥನೆಯ ವೇಳೆಯಲ್ಲಿ ನಿಮ್ಮನ್ನು ಜ್ಞಾಪಿಸ್ಕೊಳ್ತೀನಿ. ಏಕಾಕಿಗಳಿಗೆ, ಅಸಹಾಯಕರಿಗೆ, ಆರ್ತರಿಗೆ ದೇವರ ಸಹಾಯ ಬೇಕು. ಅವರ ಪರಿಸ್ಥಿತಿಯನ್ನು ದೇವರ ಗಮನಕ್ಕೆ ತರೋದು ದೇವಸೇವಕರ ಕರ್ತವ್ಯ....ನೀವು ನಿಮ್ಮೂರಿಗೆ ಯಾವಾಗ ವಾಪಸಾಗ್ತೀರಿ ಅಂತ ಹೇಳೋ ಹಾಗೆಯೇ ಇಲ್ಲ ಅಲ್ಲವಾ? ಸೆಡ್ ಉತ್ಸವಕ್ಕೆ ದಿನ ಇನ್ನೂ ಗೊತ್ತಾಗಿಲ್ಲ...."

"ಅದು ಮಹಾ ಅರ್ಚಕರ ಮರ್ಜಿೀನ ಅವಲಂಬಿಸಿದೆ."

"ಹ್ಞ, ನಿಜ. ಮಹಾ ಅರ್ಚಕರಿಗೆ ನಾಳೆ ಅಮಾತ್ಯರಿಂದ ಒಂದು ಪತ್ರ ಹೋಗ್ತದೆ. ಪತ್ರ ಅಲ್ಲ, ನಿವೇದನೆ. ಬನ್ನಿ, ದಯವಿಟ್ಟು ಬನ್ನಿ—ಅಂತ. ಏನು ಉತ್ತರ ಬರ್ತದೋ ನೋಡ್ಬೇಕು. ಅವರು ಬರದಿದ್ದರೆ ಇವರು ಮುಂದೇನು ಮಾಡ್ತಾರೆ ಅನ್ನೋದೂ ನನಗೆ ಗೊತ್ತಿದೆ. ಸರು ಅಧಿವೇಶನ ಕರೀತಾರೆ. ಸರು ಅಂದರೆ ಹಿರಿಯ ಸಲಹೆಗಾರರ ಮಹಾಮಂಡಲಿ. ಇದೆಲ್ಲ ಗೋಪ್ಯ. ಸಾಮಾನ್ಯವಾಗಿ ನಾನು ಎಲ್ಲೂ ಮಾತಾಡೋ ವಿಷಯವಲ್ಲ. ನಾಯಕರಿಗೆ ತಿಳಿಸಿ. ಆದರೆ, ಹೇಳಿದ್ದು ನಾನು ಅನ್ನೋದನ್ನು ಮರೆತು ಬಿಡಿ."

"ಅರ್ಥವಾಯ್ತು, ಅಯ್ಯ. ಇದನ್ನೆಲ್ಲ ನಮ್ಮ ಹಿತಕ್ಕಾಗಿ ನೀವು ಹೇಳ್ತಿರೋ ಮಾತು—"

"ಅಂತೂ ಒಳ್ಳೇ ಸಮಯದಲ್ಲಿ ರಾಜಧಾನಿಗೆ ಬಂದಿರಿ. ಏನೇನಾಗ್ತದೋ ನೋಡೋಣ. ಅಂದ ಹಾಗೆ ಬಟಾ, ಮಹಾಮಂದಿರಕ್ಕೆ ನಾಯಕರೂ ಪರಿವಾರದವರೂ ಭೇಟಿ ಕೊಟ್ಟೇ ಇಲ್ಲ...."

"ಸೆಡ್ ಉತ್ಸವ ಮುಗಿಸಿ ಊರಿಗೆ ಹೊರಡೋದಕ್ಕೆ ಮುಂಚೆ—"

"ಹ್ಞ. ಅದೂ ಒಳ್ಳೇದೇ. ಆಗ ವಿಶೇಷ ಪೂಜೆ ಏರ್ಪಾಟು ಮಾಡೋಣ. ಅಲ್ಲಿಯ ಅರ್ಚಕರಿಗೆ ಹೇಳ್ತೀನೆ."

"ಮಹಾ ಅರ್ಚಕರ ದರ್ಶನವೂ ಆಗ ನಮಗೆ ಲಭಿಸ್ತದೆ."

"ಹೌದು."

"ನಾನು ಬರಲಾ, ಅಯ್ಯ ?"

"ನಿಮಗೆಲ್ಲ ನನ್ನ ಆಶೀರ್ವಾದ."

* * * *

ಮೆಂಫಿಸಿನಿಂದ ಆನ್ ನಗರಕ್ಕೆ ವೇಗದ ದೋಣಿಯಲ್ಲಿ ಒಂದು ಹಗಲಿನ ಪಯಣ.

ಆನ್ ದೇವನಗರಿ. ಪುಟ್ಟ ಊರು. ಅಳಿವೆಯ ಹಲವು ಪ್ರಾಂತಗಳಲ್ಲಿ ಒಂದಕ್ಕೆ ಸೇರಿದ್ದು. ಪ್ರಾಂತದ ಮುಖ್ಯ ಪಟ್ಟಣವೂ ಅಲ್ಲ. ರಾನ ದೇವ ಮಂದಿರ ಅಲ್ಲಿ ಇತ್ತೆಂದು ಅದಕ್ಕೆ ಪ್ರಾಧಾನ್ಯ. ಅಲ್ಲಿಯ ಮುಖ್ಯ ಅರ್ಚಕನೂ ಐಗುಪ್ತದ ಮಹಾ ಅರ್ಚಕನೂ ಮಿತ್ರರು. ಮಂದಿರ, ಅದರ ಎದುರು ಅಂಗಡಿ ಸಾಲುಗಳು. ದೇವಸೇವಕಗಣ. ರಾ ಐಗುಪ್ತದ ಹಿರಿಯ ದೇವರಾದರೂ ರಾಜ ಧಾನಿ ಮೆಂಫಿಸಿನಲ್ಲಿ ಪ್‌ಟಾನಿಗೆ ಅಗ್ರಪೂಜೆ. ರಾನಷ್ಟೇ ಪ್ರಾಚೀನ ಪ್‌ಟಾ ಕೂಡಾ. ರಾನ ದರ್ಶನಕ್ಕೆಂದು ಬರುತ್ತಿದ್ದ ಕೆಲ ಯಾತ್ರಿಕರನ್ನೂ ಹೇರು ದೋಣಿಗಳ ಅಂಬಿಗರನ್ನೂ ಬಿಟ್ಟರೆ, ಆನ್ ನಗರಕ್ಕೆ ಬಂದು ಹೋಗುತ್ತಿದ್ದವರು ಬೇರೆ ಯಾರೂ ಇರಲಿಲ್ಲ. ಯಾತ್ರಿಕರ ಆರೈಕೆಯೇ ಕಸುಬಾಗಿದ್ದ ಹತ್ತಾರು ಕುಟುಂಬಗಳು ಅಲ್ಲಿ ವಾಸವಾಗಿದ್ದುವು. ನಗರಾಧಿಕಾರಿ ಪ್ರಭುತ್ವದ ಪ್ರತಿನಿಧಿ. ಪೆರೋ ರಾ ದರ್ಶನಕ್ಕೆ ಬಂದಾಗ ಅಲ್ಲಿ ಒಂದೆರಡು ತಾಸು ತಂಗುತ್ತಿದ್ದ. ಅವನ ಅನುಕೂಲಕ್ಕಾಗಿ ಕಟ್ಟಿದ ಒಂದು ಸಣ್ಣ ಕಟ್ಟಡವಿತ್ತು. ಅದೇ ರಾಜಗೃಹ. ಸ್ವಲ್ಪ ದೂರದಲ್ಲಿ, ಆ ಪ್ರಾಂತದ ಶ್ರೀಮಂತ ಭೂಮಾಲಿಕರು ಅತ್ತ ಬಂದಾಗ ತಮ್ಮ ವಸತಿ ಸೌಕರ್ಯಕ್ಕೆಂದು ಕಟ್ಟಿಸಿದ್ದ ಎರಡು ಭವನಗಳಿದ್ದುವು.

ಆನ್ ತಲಪಿದ ರಾಜದೂತ ಮಾರನೆಯ ಸಂಜೆಯೇ ಮಹಾ ಅರ್ಚಕನ ಉತ್ತರದೊಡನೆ ಮರಳಿ ಬರುವುದು ಸಾಧ್ಯವಿತ್ತು.

ಆದರೆ ಮಹಾ ಅರ್ಚಕರು ಗರ್ಭಗುಡಿಯಲ್ಲಿ ಮೂರು ದಿನಗಳ ಅಖಂಡ ಅರ್ಚನೆಯಲ್ಲಿ ನಿರತರಾಗಿದ್ದರು. ರಾಜದೂತ ಬರುವ ವೇಳೆಗೆ ಸರಿಯಾಗಿ

ಆ ಅರ್ಚನೆ ಆರಂಭವಾಗಿತ್ತು. ಮೂರು ದಿನ ಕಳೆದ ಮೇಲೆ ಮಾತ್ರ ತಡವಾಗಲಿಲ್ಲ. ಅರಸನ ಓಲೆ ದೊರೆತೊಡನೆಯೇ ಮಹಾ ಅರ್ಚಕ ಉತ್ತರ ಬರೆಸಿದ. ಆ ಉತ್ತರದೊಡನೆ ರಾಜದೂತ ರಾಜಧಾನಿಗೆ ಹೊರಟೂ ಬಿಟ್ಟ.

ಮೆಂಫಿಸ್ ತಲಪಿದಾಗ ಕತ್ತಲಾಗಿ ಸುಮಾರು ಹೊತ್ತಾಗಿತ್ತು. ದೂತನಿಗೆ ದೋಣಿ ಕಟ್ಟೆಯಲ್ಲಿಯೇ ಆದೇಶ ದೊರೆಯಿತು : ಎಷ್ಟು ಹೊತ್ತಿಗೆ ಬಂದರೂ ನೇರವಾಗಿ ಅಮಾತ್ಯರಲ್ಲಿಗೆ ಸಾಗಬೇಕು—ಎಂದು. ದೋಣಿಕಟ್ಟೆಯ ಕಾವಲು ಭಟರು ಒಂದು ಕತ್ತೆಯನ್ನು ತಂದುಕೊಟ್ಟರು. ಒಬ್ಬ ಭಟ ದೀವಟಿಗೆ ಹಿಡಿದು ಕತ್ತೆಯ ಮುಂದುಗಡೆ ನಡೆದ. ಅದನ್ನೇರಿ ದೂತ ಅಮಾತ್ಯನ ವಸತಿಯನ್ನು ತಲಪಿದ.

ಆಮೆರಬ್ ನಿದ್ದೆಯನ್ನು ಕೊಡವಿ, ಥಾಳಾಗಿ ನೀಲಾಂಜನ ಉರಿಯುತ್ತಿದ್ದ ಪಡಸಾಲೆಯಲ್ಲಿ ದೂತನನ್ನು ಬರಮಾಡಿಕೊಂಡ. ಶಿಷ್ಟಾಚಾರದ ಆರಂಭ ಅಂತ್ಯಗಳ ಹೊರತಾಗಿ ಮಹಾ ಅರ್ಚಕನ ಓಲೆಯಲ್ಲಿ ಇದ್ದುದು ಅತ್ಯಲ್ಪ :

" ಧಾರ್ಮಿಕ ಕಾರ್ಯ ನಿಮಿತ್ತ ಇನ್ನೂ ಸ್ವಲ್ಪ ಕಾಲ ನಾವು ಇಲ್ಲಿಯೇ ಇರಬೇಕಾಗಿದೆ. ಅದು ಮುಗಿದೊಡನೆಯೇ ಹೊರಟುಬರುತ್ತೇವೆ."

ರಾಜದೂತ ಆನ್‌ನಗರ ತಲಪಿದ ಸುದ್ದಿ ಮಾರನೆಯ ಸಂಜೆಯೇ ಬೇರೆ ದೋಣಿಕಾರರ ಮೂಲಕ ಅಮಾತ್ಯನಿಗೆ ತಲಪಿತ್ತು. ದೂತ ಮರಳುವುದು ತಡವಾದಾಗ, ವಿಲಂಬಕ್ಕೆ ಮಹಾ ಅರ್ಚಕನೇ ಕಾರಣ ಎಂದು ಅಮಾತ್ಯ ತರ್ಕಿಸಿದ್ದ. ದೂತನ ಪಾಲಿಗೆ ಅಖಂಡ ಅರ್ಚನೆ ಅಸಾಧಾರಣ ಸಂಗತಿ. ಆದರೆ ಆಮೆರಬ್ ಆ ಬಳಿಗೆ ದೂತನ ವರದಿ ಕೇಳಿ, ತುಟಿಯ ಮೂಲೆಯನ್ನು ಮೆಲ್ಲನೆ ಕಚ್ಚಿದ.

" ಅಲ್ಲಿ ಇನ್ನು ಯಾರನ್ನಾದರೂ ಕಂಡೆಯಾ ? "

" ಇಲ್ಲ. ಟೆಹುಟಿ ಅಲ್ಲಿದ್ದಾರಂತೆ. ನನ್ನ ಕಣ್ಣಿಗೆ ಬೀಳಲಿಲ್ಲ."

" ಬಕಿಲ ? "

" ಒಕ್ಕಣ್ಣನೂ ಇದ್ನಂತೆ. ಆದರೆ ಅವನೂ ನನಗೆ ಸಿಗಲಿಲ್ಲ."

" ನಗರಾಧಿಕಾರಿ ಊರಲ್ಲಿದ್ನೊ ? "

" ಇದ್ರು."

" ನೀನೇನು ಮಾಡ್ದೆ ?"

" ನಿದ್ದೆ ಮಾಡ್ತಾ ಕಾಲ ಕಳೆದೆ."

ರಾಜಧಾನಿಯ ಸುದ್ದಿ ಮಹಾ ಅರ್ಚಕನಿಗೆ ತಿಳಿಯಬಾರದೆಂದು ಸ್ವಲ್ಪ ಮಂದ ಬುದ್ಧಿಯ ದೂತನನ್ನೇ ಅಮಾತ್ಯ ಕಳುಹಿಸಿದ್ದ.

'ಮುಂದಿನ ಸಲ ಸಮರ್ಥ ಬೇಹುಗಾರನನ್ನು ಕಳಿಸ್ಬೇಕು'—ಎಂದು ಕೊಂಡ.

(ಆದರೆ ಆನ್ ನಗರದಲ್ಲಿ ನಡೆಯುತ್ತಿದ್ದುದು ರಾಜಧಾನಿಯಿಂದ ಬಂದ ಸಮರ್ಥ ಬೇಹುಗಾರನಿಗೂ ತಿಳಿಯುತ್ತಿತ್ತೋ ಇಲ್ಲವೋ. ಅಷ್ಟು ರಹಸ್ಯ ವಾಗಿತ್ತು ಮಹಾ ಅರ್ಚಕನ ಕಾರ್ಯಾಚರಣೆ. ಆರು ದಿನಗಳ ಅಖಂಡ ಅರ್ಚನೆಯಯೊಂದನ್ನು ಆ ಮೊದಲೇ ಅವನು ನೆರವೇರಿಸಿದ್ದ. ಅಂಥ ಪೂಜೆಯ ಸುದ್ದಿಯನ್ನು ಹೊರಗೆ ಹಬ್ಬಿಸಿ, ಗುಟ್ಟಿನಲ್ಲಿ ಆತ ಐಗುಪ್ತದ ಈಶಾನ್ಯ ಗಡಿಗೆ ಹೋಗಿ ಬಂದಿದ್ದ. ಕೇವಲ ಐದು ನೂರು ಜನ ಇದ್ದ ಕಾವಲು ಪಡೆ. ಐಗುಪ್ತದ ಸೇನಾಬಲವೇ ಅಷ್ಟು. ಆ ದಂಡಿನ ಅಧಿಪತಿಗೆ ಧಾರ್ಮಿಕ ಮಹಾ ಗುರು ಬಂದರೆಂದು ಸಂಭ್ರಮ....)

ಮಹಾ ಅರ್ಚಕ ನೀಡಿದ್ದ ಉತ್ತರ ಓದಿ ಅಮಾತ್ಯನಿಗೆ ಸಂತೋಷವಾಗ ಲಿಲ್ಲವೆಂದು ದೂತನಿಗೆ ಬೇಸರ. ಪ್ರಾಯಶಃ ಬಹುಮಾನ ಸಿಗಲಾರದು ಎಂದು ಮೂಡಿದ್ದ ಶಂಕೆ ಆ ಕ್ಷಣದಲ್ಲೇ ಸತ್ಯ ಸಂಗತಿಯಾಯಿತು.

"ಹೋಗು," ಎಂದುಬಿಟ್ಟ ಅಮಾತ್ಯ. ಬೇಡವಾದುದನ್ನು ದೂರ ಸರಿಸುವವನಂತೆ ಕೈ ಆಡಿಸಿ.

* * * *

ಸರು ಅಧಿವೇಶನ ಮತ್ತು ಪೆರೋನ ಔತಣ—ಒಂದೇ ದಿನ.

ಅಮಾತ್ಯ ಭವನದ ಹಿರಿಯ ಲಿಪಿಕಾರ ಸೆನೆಬ್ ಅತಿಥಿಗೃಹಕ್ಕೆ ಬಂದು ಕುಳಿತು, ಗೊಂದಲಕ್ಕೀಡಾದವನಂತೆ ಮೆನೆಪ್‌ಟಾನೆಡೆಗೆ ನೆಟ್ಟನೋಟ ಬೀರುತ್ತ, ಸಿಕ್ಕುಗಂಟು ಬಿಡಿಸುವವನ ತಲ್ಲೀನತೆಯಿಂದ ಒಂದೊಂದೇ ಎಳೆಯನ್ನು ಜಗ್ಗಿದ:

"ಒಂದು ತಿಂಗಳ ಹಿಂದೆ ಈ ಔತಣ ಏರ್ಪಡಿಸಿದ್ದರೆ ಅದು ನೀರಾನೆ ಪ್ರಾಂತದ ನಾಯಕನ ಗೌರವಾರ್ಥ ಅಂತ ಧೈರ್ಯವಾಗಿ ಹೇಳಬಹುದಿತ್ತು. ಅವತ್ತು ಔತಣದ ಪ್ರಸ್ತಾಪ ಪೆರೋ ಮಾಡಿದ್ದೇ ಆ ದೃಷ್ಟಿಯಿಂದ. ಆದರೆ, ದಂಗೆ ಎದ್ದವರಿಗೆ ಔತಣ ಅಂದರೆ ಲೋಕ ಏನೆಂದೀತು ? ಆದಕ್ಕೇ ಗೇಬು

ದಂಪತೀನ ಔತಣಕ್ಕೆ ಅರಮನೆಗೆ ಕರೆಸಿ ಅಂದ್ರು. ನಾಳೆಯ ಔತಣದಲ್ಲಾ ದರೋ ಸರು ಸದಸ್ಯರಿರ್‍ತಾರೆ, ಗೇಬು ದಂಪತಿಯೂ ಇರ್‍ತಾರೆ, ಜತೆಗೆ ನೀವೂ ಇರ್‍ತೀರಿ—ಅಷ್ಟೆ."

ಮೆನೆಪ್‌ಟಾ ಕೇಳಿದ :

"ಮಹಾ ಅರ್ಚಕರ ಉತ್ತರ ಬಂದ ಮೇಲೆ ಈ ಸರು ಅಧಿವೇಶನ ಕರೆದಿರ ಬೇಕು."

"ಹೌದು. ಆ ಉತ್ತರ ನಾನು ನೋಡಿದ್ದೇನೆ. ಬಹಳ ಸ್ಪಷ್ಟ. ಅನು ಕೂಲವಾದಾಗ ಬರ್‍ತೀವೆ—ಅಂದಿದ್ದಾರೆ."

"ಮಹತ್ವದ ಸಮಸ್ಯೆ ಉದ್ಭವಿಸಿದಾಗ ಹಿರಿಯ ಸಲಹೆಗಾರರ ಮಹಾ ಮಂಡಲಿಯ ಅಧಿವೇಶನ ಸೇರ್‍ತದೆ, ಅಲ್ಲವಾ ?"

"ಸರಿ. ಆದರೆ ನಿಮ್ಮ ಪ್ರಾಂತದಲ್ಲಿ ಬಂಡಾಯವಾದಾಗ ಅಧಿವೇಶನ ಕರೆದಿರ್‍ಲಿಲ್ಲ!"

"ಬಹುಶಃ ಅದು ಮಹತ್ವದ ಪ್ರಶ್ನೆಯಲ್ಲ!"

"ಹಾಗೆ ತಿಳ್ಕೋಬೇಡಿ. ಆ ವೇಳೆಗೆ ಪ್ರಭುತ್ವದ ಚೌಕಮಣೆ ಆಟ ಶುರುವಾಗ್ಬಿಟ್ಟಿತ್ತು. ಇವತ್ತು ಐಗುಪ್ತದಲ್ಲಿ ಯಾವ ಸಮಸ್ಯೆ ಇದ್ದರೂ ಅದು ಆ ಚೌಕಮಣೆ ಆಟದ ಒಂದಂಗವಾಗಲೇಬೇಕು."

"ಸ್ವಾರಸ್ಯವಾಗಿದೆ."

"ಇಂಥ ಸ್ವಾರಸ್ಯ ಇರೋದ್ರಿಂದಲೇ ರಾಜಧಾನಿಯ ಜೀವನ ಸಹ್ಯ. ಇಲ್ದೇ ಹೋಗಿದ್ರೆ, ಬಂದದ್ದಿಷ್ಟು ಹೋದದ್ದಿಷ್ಟು ಉಳಿದದ್ದಿಷ್ಟು ಅಂತ ಬರೆ ದಿಡೋ ಲೆಕ್ಕಿಗರದೇ ಬಹುಸಂಖ್ಯೆಯಾಗಿ, ಬೇರೆಯವರಿಗೆ ಜಾಗವೇ ಇರ್‍ತಿರ್‍ಲಿಲ್ಲ."

"ಸರು ಅಧಿವೇಶನ ಈ ಮೊದಲು ನೀವು ನೋಡಿದ್ದುಂಟೆ ?"

"ಓಹೋ! ಎರಡು ಮೂರು ಸಲ ನೋಡಿದ್ದೇನೆ. ನಾಳೆಯದೇನೋ ಗೋಪ್ಯವಂತೆ. ನಾವು ಯಾರೂ ಬರಬಾರದಂತೆ."

"ಹಾಗಾ ?"

"ಗೋಪ್ಯ ಅನ್ನೋದು ಒಂದು ತಮಾಷೆ. ಅರಮನೆಯಲ್ಲಿ ಕಿವಿಯಿಲ್ಲದ ಗೋಡೆ ಇಲ್ಲ."

ಸಂಭಾಷಣೆಯನ್ನು ಮೌನವಾಗಿ ಕೇಳುತ್ತ ನಿಂತಿದ್ದ ಬಟಾ ಅಂದ :

"ಲಿಪಿಕಾರಯ್ಯ ಇವತ್ತು ಬಹಳ ವಿರಾಮವಾಗಿದ್ದಾರೆ ಅಂತ ಕಾಣ್ತದೆ."

ಬಟಾನೆಡೆಗೆ ತೀಕ್ಷ್ಣನೋಟ ಬೀರಿ ಸೆನೆಬ್ ನುಡಿದ:

"ಅಮಾತ್ಯರು ಇವತ್ತು ಭವನಕ್ಕೆ ಬರೋದಿಲ್ಲ. (ಮೆನೆಪ್‌ಟಾನೆಡೆಗೆ ತಿರುಗಿ) ಮಹಾ ಪ್ರಭುವಿನ ಸನ್ನಿಧಿಗೆ ಆಪ್ತಾಲೋಚನೆಗೆ ಹೋಗಿದ್ದಾರೆ."

ಮೆನೆಪ್‌ಟಾ ಕೇಳಿದ:

"ಸರು ಅಧಿವೇಶನದಲ್ಲಿ ಪೆರೋ ಭಾಗವಹಿಸ್ತಾರಾ?"

"ಇಲ್ಲ. ಅಮಾತ್ಯರದೇ ಅಧ್ಯಕ್ಷತೆ. ಮಾತುಕೂಡಾ ಅವರದೇ ಜಾಸ್ತಿ. ಹಿರಿಯ ಸಲಹೆಗಾರರಲ್ಲಿ ಒಬ್ಬಿಬ್ರು ತುಟಿ ತೆರೆದರೆ ಹೆಚ್ಚು. ಎಲ್ಲರೂ ಧೈವ ಭೀರುಗಳು. ತಮ್ಮ ತಮ್ಮ ಕ್ಷೇತ್ರದಲ್ಲಿ ಉನ್ನತಿ ಸಾಧಿಸಿದವರು."

ಬಟಾನೆಂದ:

"ನಮ್ಮಲ್ಲೂ ಹಿರಿಯರ ಸಮಿತಿ ಇದೆ."

"ಹ್ಞ. ಪೂರ್ವಕಾಲದ ಪದ್ಧತಿ."

"ಲಿಪಿಕಾರಯ್ಯ, ನಾಳೆ ಸಂಜೆ ನಾಯಕರು ಔತಣ ಕೂಟಕ್ಕೆ ಹೋದ್ನಲೇ ನಮ್ಮ ಗತಿ? ನೀವು ವಿಚಾರಿಸ್ಕೋಬೇಕಪ್ಪ ನಮ್ಮನ್ನು...."

"ಹ್ಞ. ನೆನಪಾಯ್ತು. (ನಾಯಕನಿಗೆ) ಔತಣದ ವಿಷಯ ನಿಮಗಿಷ್ಟು ಪೂರ್ವ ಮಾಹಿತಿ ಕೊಡ್ಬೇಕು. ದೊಡ್ಡವರ ಕೂಟ. ಎಲ್ಲರೂ ಸರಗಿರ ಹಾಕ್ಕೊಂಡು ಅಲಂಕೃತರಾಗಿ ಬರ್‍ತಾರೆ. ಸುಗಂಧದ್ರವ್ಯ ಇತ್ಯಾದಿ ಸಾಮಗ್ರಿಗಳನ್ನು ತಂದು ಕೊಡೋದಕ್ಕೆ ಅಧಿಕಾರಿಗಳಿಗೆ ಹೇಳ್ತೀನೆ. ಅಲ್ಲಿ ಪಾದರಕ್ಷೆ ಕಳಚೋದು ಬೇಡ....ಉಳಿದ ಶಿಷ್ಟಾಚಾರ ನಿಮಗೆ ಗೊತ್ತಿದೆಯಲ್ಲ?"

ಬಟಾ ದುಂಬಾಲು ಬಿದ್ದ.

"ನನಗೆ ಈಗಾಗಲೇ ನಾಲಿಗೆಯಲ್ಲಿ ನೀರೂರ್‍ತಿದೆ. ಪ್ರವೇಶವಿಲ್ಲದ ಸ್ಥಳ ನೀವು ಹೇಳೋದನ್ನಾದರೂ ಕೇಳಿ ಸಂತೋಷಪಡ್ತೀನೆ. ಹೇಳಿ ಲಿಪಿಕಾರಯ್ಯ."

"ಇಂಥ ಸಂದರ್ಭಗಳಲ್ಲಿ ಹೇಗೆ ವರ್ತಿಸ್ಬೇಕೂಂತ ಪ್ರಾಚೀನ ಹಿತನುಡಿಗಳೇ ಇವೆ. ಇರಿ. ಜ್ಞಾಪಿಸ್ಕೊಂಡು ಹೇಳ್ತೀನೆ. ನಿನಗಿಂತ ಶ್ರೇಷ್ಠನಾದವನ ಜತೆ ಉಣ್ಣಲು ಕುಳಿತಿದ್ದರೆ, ನಿನ್ನ ಮೂಗಿನ ಮುಂದೆ ಇಟ್ಟದ್ದರಲ್ಲಿ ಏನನ್ನು ಆತ ನಿನಗೆ ಕೊಡ್ತಾನೋ ಅದನ್ನು ಸ್ವೀಕರಿಸು....ನಿನ್ನ ಎದುರು ಇರೋದರ

ಕಡೆಗೆ ನೀನು ಬಿರುನೋಟ ಬೀರಬಾರದು. ಆತನನ್ನು ಪದೇ ಪದೇ ದಿಟ್ಟಿಸ್ಬಾರದು. ಅದರಿಂದ ಅವನು ಅಸಹ್ಯಪಟ್ಕೊಳ್ತಾನೆ. ಆತನಾಗಿಯೇ ನಿನ್ನನ್ನು ಮಾತನಾಡಿಸುವವರೆಗೆ ತಲೆ ತಗ್ಗಿಸಿ ಕುಳಿತುಕೊ. ಅವನು ನಿನ್ನನ್ನು ಮಾತನಾಡಿಸಿದಾಗ ಮಾತ್ರ ನೀನು ಉತ್ತರವೀಯಬೇಕು....ಅವನು ನಕ್ಕಮೇಲೆ ನೀನು ನಗಬೇಕು. ಆದುದರಿಂದ ಅವನ ಹೃದಯಕ್ಕೆ ಆನಂದವಾಗ್ತದೆ.... ಏನೋ....ನೆನಪಾಯ್ತೂಂತ ಇಷ್ಟು ಹೇಳ್ಬಿಟ್ಟೆ. ನಿಜ ಅಂದರೆ, ನಾಯಕರಾದ ನಿಮಗೆ ಇಂಥ ಹಿತನುಡಿಯ ಅಗತ್ಯವೇ ಇಲ್ಲ....ಭಾರೀ ಔತಣ ನಲ್ವತ್ತೆಂಟು ಬಗೆಯ ಬೇಯಿಸಿದ ಮಾಂಸ, ನಲ್ವತ್ತು ವಿಧದ ರೊಟ್ಟಿ, ಇಪ್ಪತ್ತನಾಲ್ಕು ರೀತಿಯ ಪಾನೀಯಗಳು (ಬಾಯಿ ಚಪ್ಪರಿಸಿದ ಬಟಾನನ್ನು ನೋಡಿ ನಕ್ಕು) ಹನ್ನೊಂದು ವಿಧದ ಹಣ್ಣುಗಳು....ಇವತ್ತು ಹೊಟ್ಟೆ ಬಿರಿಯೋ ಹಾಗೆ ತಿಂದ್ಬಿಡಿ. ನಾಳೆದ್ದು ನಾಳೆ ನೋಡ್ಕೊಳ್ಳೋಣ........ಆದರೆ ಪೆರೋ ಮಾತ್ರ—"

ಬಟಾ ಕೇಳಿದ :

"ಏನು ?"

"ನೀವು ಉಣ್ಣೋದನ್ನು ನೋಡ್ತಾ ಕೂತಿರ್ತಾರೆ. ಅವರದು ಯಾವಾಗಲೂ ಮಿತ ಆಹಾರ. ಪ್ರತಿಯೊಂದೂ ಕ್ರಮಬದ್ಧ. ಪೆರೋ ಆರೋಗ್ಯ ಕೆಟ್ಟು ಪ್ರಜೆಗಳು ಗೋಳಾಡೋ ಹಾಗೆ ಆಗಬಾರದಲ್ಲ ?"

"ಲಿಪಿಕಾರಯ್ಯ. ನಾನು ತಮಾಷೆ ಮನುಷ್ಯ. ಹೇಳ್ಬಿಡ್ತೇನೆ. ನನಗೆ ಯಾರಾದರೂ ಪೆರೋ ಪದವಿ ಕೊಡ್ತೇವೆ ಅಂದರೆ, ದಮ್ಮಯ್ಯ ಬೇಡ ಅನ್ತೇನೆ !"

ಸೆನೆಬ್ ಎದ್ದು ಮೆನೆಪ್‌ಟಾಗೆ ನಮಿಸಿ, "ನಾಳೆ ನಿಮ್ಮನ್ನು ಕರಕೊಂಡು ಬರೋದಕ್ಕೆ ಯಾರನ್ನು ಕಳಿಸ್ತಾರೋ ತಿಳೀದು. ಅಂತೂ ಮುಚ್ಚಂಜೆ ಹೊತ್ತಿಗೆ ಸಿದ್ಧವಾಗಿರಿ," ಎಂದು ಹೇಳಿ, ಹೊರಬಿದ್ದ.

* * * *

ಅಂದು ಬೆಳಗಿನಿಂದಲೇ ಅರಮನೆಯಲ್ಲಿ ನಿತ್ಯಕ್ಕಿಂತ ಹೆಚ್ಚು ಗದ್ದಲ. ಒಂದೊಂದಾಗಿ ಹಲವಾರು ಪಲ್ಲಕಿಗಳು ಬಂದುವು. ಅವುಗಳಲ್ಲಿ ಕುಳಿತಿದ್ದವರು

ಇಳಿದ ಬಳಿಕ ಆ ಪಲ್ಲಕಿಗಳನ್ನು ಅರಮನೆ ಮತ್ತು ದೇವಮಂದಿರಗಳ ನಡುವಣ ವಿಶಾಲ ಬಯಲಲ್ಲಿ ಅರಮನೆಯ ಗೋಪುರದ ನೆರಳಿನಲ್ಲಿ ಸಾಲಾಗಿ ಇರಿಸಿದರು. ಮಧ್ಯಾಹ್ನದ ಹೊತ್ತಿಗಷ್ಟೇ ಎರಡು ಮೂರು ತಾಸು ತಡೆಯಲಾಗದ ಬಿಸಿಲು. ಆ ಬಳಿಕ ಪಲ್ಲಕಿಗಳಿಗೂ ಬೋಯಿಗಳಿಗೂ ಅರಮನೆ ಗೋಡೆಯ ನೆರಳಿನ ರಕ್ಷೆ.

ಮಹಾದ್ವಾರದ ಮೂಲಕ ಒಳಗೆ ಬರುತ್ತಿದ್ದ ಪಲ್ಲಕಿಗಳನ್ನೆಲ್ಲ ಬಟಾ, ಅರಮನೆಯ ಉದ್ಯೋಗಿಗಳ ಜತೆ ತಾನೂ ಒಬ್ಬನಾಗಿ ನಿಂತು, ಕೌತುಕದಿಂದ ಈಕ್ಷಿಸಿದ.

ರಾಣೀವಾಸದಲ್ಲೂ ಅಂದು ವಿಶೇಷ ಚಟುವಟಿಕೆ. ದಾಸಿಯರು ಅತ್ತ ಇತ್ತ ಅಲ್ಲಿಗೆ ಇಲ್ಲಿಗೆ ಓಡಾಡುತ್ತಲೇ ಇದ್ದರು.

ಅಮಾತ್ಯರ ಭವನದಲ್ಲಿ ಸರು ಅಧಿವೇಶನ.

ಹೊರಗೆ ನೋಡಿ ಬಂದ ಬಟಾ ನಾಯಕನಿಗೆಂದ :

"ಲಿಪಿಕಾರರೆಲ್ಲ ಹೊರಗೇ ಇದ್ದಾರೆ."

ಮತ್ತೊಮ್ಮೆ ಆ ಕಡೆ ಅಲೆದಾಡಿ ಬಂದು ಅವನು ಹೇಳಿದ :

"ಅಮಾತ್ಯರು ಇವತ್ತು ಮಧ್ಯಾಹ್ನ ಮನೆಗೆ ಹೋಗೋದಿಲ್ಲವಂತೆ. ಇದು ವಿಶ್ರಾಂತಿ ಇಲ್ಲದ ದಿವಸ. ಅಡುಗೆ ವಿಭಾಗದಲ್ಲಂತೂ ಔತಣದ ಸಿದ್ಧತೆ. ಮಧ್ಯಾಹ್ನ ಊಟದ ಯೋಚನೆ ಯಾರೂ ಮಾಡ್ತಿರೋ ಹಾಗೆ ಕಾಣೆ."

ಮೆನೆಪ್‌ಟಾ ನುಡಿದ :

"ಅದು ಸಹಜ. ಈಗ ಊಟ ಮಾಡಿದರೆ ಔತಣಕ್ಕೇಂತ ಮಾಡಿದ್ದನ್ನು ಮುಗಿಸೋರು ಯಾರು ?"

ಒಗೆಯಲು ಒಯ್ದಿದ್ದ ಬಟ್ಟೆಗಳನ್ನು ಆಗಸ ತಂದಿರಿಸಿದ. ಸೇವಕರು ಪರಿಮಳ ಸೂಸುವ ಕೂದಲೆಣ್ಣೆಯನ್ನೂ ಮೈಗೆ ಪೂಸಲು ಸುಗಂಧದ್ರವ್ಯವನ್ನೂ ಕೊಠಡಿಯಲ್ಲಿಟ್ಟು ಹೋದರು.

"ಸಾಯಂಕಾಲದ ಸಿದ್ಧತೆಗೆ ದಾಸಿಯರ ಸಹಾಯ ಬೇಕೆ ? ಯಾರನ್ನಾದರೂ ಕಳಿಸಲಾ ?" ಎಂದು ಕೇಳಿದ, ಅತಿಥಿಗೃಹದ ಅಧಿಕಾರಿ.

ಬಟಾನೆಂದ :

" ನಮ್ಮ ನಾಯಕರಿಗೆ ಅಲಂಕಾರ ? ನಾನು ನೋಡ್ಕೊಳ್ತೀನಪ್ಪ— ಸಾಕು."

" ಔತಣದ ದಿವಸ ಮಧ್ಯಾಹ್ನ ಎಲ್ಲರಿಗೂ ಅಲ್ಪ ಉಪಾಹಾರ."

" ಅಷ್ಟೇ ಸಾಕು. ಬರಲಿ...."

....ಅಪರಾಹ್ನದ ಬಿಸಿಲು ಕಡಿಮೆಯಾದ ಮೇಲೆ ಹಿರಿಯ ಸಲಹೆಗಾರರು ಅಮಾತ್ಯ ಭವನದಿಂದ ಹೊರಕ್ಕೆ ಬಂದರು. ಉದ್ಯಾನದಲ್ಲಿ ಅತ್ತಿತ್ತ ನಡೆದರು. ಕಣ್ಣುಮುಚ್ಚಾಲೆಯಾಡುತ್ತ ಆಗೊಮ್ಮೆ ಈಗೊಮ್ಮೆ ನುಸುಳುತ್ತಿದ್ದ ತಣ್ಣನೆಯ ಗಾಳಿಗೆ ಅವರು ಮೈಯೊಡ್ಡಿದರು.

ಬಳಿಕ ಆ ಹತ್ತು ಜನರೂ ಪ್ರಾಕಾರದ ಹಿಂಬಾಗಿಲು ತೆರೆಯಿಸಿ ಅರ ಮನೆಯ ನದೀತಟಕ್ಕೆ ಹೋದರು, ವಿಹಾರಾರ್ಥ.

ಇನೇನಿಯೂ ಅವನ ಸಹಾಯಕರೂ ಹೊರಗೆ ಕಾಣಿಸಲಿಲ್ಲ.

ದೇವಸೇವಕರು ಲಿಪಿಕಾರರು ಮತ್ತು ಬೇರೆ ಕೆಲವರ ಔತಣಕ್ಕೆಂದು ಮಂದಿರದ ಪ್ರಾಂಗಣವನ್ನು ಮೆನ್ನ ಸ್ವಚ್ಛಗೊಳಿಸಿದ. ಬಟಾ ಅಲೆಯುತ್ತ ಆ ಕಡೆಗೆ ಬಂದುದನ್ನು ಅರಿತರೂ ತಲೆಯೆತ್ತಿ ನೋಡಲಿಲ್ಲ.

ಬಟಾ ಮೆನೆಪ್‌ಟಾಗೆ ಸುದ್ದಿ ತಿಳಿಸಿ ಟಿಪ್ಪಣಿ ನೀಡಿದ :

" ಬಂದರಪ್ಪ ಗೇಬು. ಎರಡು ಪಲ್ಲಕೀಲಿ. ಒಂದರಲ್ಲಿ ಗಂಡ ಹೆಂಡತಿ. ಇನ್ನೊಂದರಲ್ಲಿ ಅವರ ಮೂವರು ಹುಡುಗೀರು. ದೊಡ್ಡವರಿಬ್ಬರೂ ಆಗಲೇ ಮದುವೆಗೆ ಸಿದ್ಧವಾಗಿದ್ದಾರೆ. ಈ ಗೇಬು ಲಿಷ್ಟ್‌ನಲ್ಲಿ ಊಟ ಮುಗಿಸಿ, ಚುಟುಕು ನಿದ್ದೆ ಮಾಡಿ, ಅಲಂಕರಿಸಿಕೊಂಡು ದೋಣಿಹತ್ತಿ ಹೊರಟು ಬಂದಿದ್ದಾನೇಂತ ಕಾಣ್ತದೆ. ವಿಚಿತ್ರ ಪ್ರಾಣಿ. ಊರಿಗೆ ಕರಕೊಂಡು ಹೋಗ್ತೇನೆ ಹಾಗೆ ಹೀಗೆ ಅಂತ ಕೈಹಿಡಿದು ಕುಣಿದೋನು ಒಂದು ಸಲವಾದರೂ ಬಂದ್ನೆ? ಈಗಲೂ ನೇರವಾಗಿ ಮಹಾಮನೆಗೆ ನುಗ್ದ. ಇಲ್ಲಿಗೆ ಬರೋ ಲಕ್ಷಣ ಕಾಣಿಸ್ಲಿಲ್ಲ."

ನಾಯಕನೆಂದ :

" ಹೋಗಲಿ, ಬಿಡು. ಅವತ್ತು ಏನೋ ಒಂದು ಪಾತ್ರ ಕೊಟ್ರು. ಅದನ್ನು ಅಭಿನಯಿಸಿದ. ಮುಖವಾಡ ತೆಗೆದಿಟ್ಮೇಲೆ, ಅಭಿನಯಿಸಿದ್ದನ್ನು ಮರೆತೇ ಬಿಟ್ಟ. ಇವತ್ತು ಇಂಥ ಪಾತ್ರ ಅಂತ ಮೇಲಿನವರು ಹೇಳಿದ್ರೆ, ಆ ಪಾತ್ರ ಧರಿಸ್ತಾನೆ."

" ನಿನಗೆ ಕೋಪ ಬರೋದು ಯಾವತ್ತು ಮೆನೆಪ್‌ಟಾ ಅಣ್ಣ? "

ನಸುನಕ್ಕು ಮೆನೆಪ್‌ಟಾ ಅಂದ :

" ನಮಗೆ ಇಲ್ಲೇನು ಕೆಲಸ—ಇಲ್ಲಿಂದ ಹೊರಡ್ಬೇಕು ಅಂತ ಅನಿಸ್ತದೆ. ಒಮ್ಮೊಮ್ಮೆ. ಪರಿಚಯ ಇಲ್ಲದ ನದಿಯ ಪ್ರವಾಸದ ಹಾಗಿದೆ ಇದು."

" ಅದೂ ಯಾರದೋ ದೋಣಿ! "

" ಹೆಚ್ಚೆಂದರೆ ಒಂದು ತಿಂಗಳೊಳಗೆ ವಾಪಸಾಗ್ತೇವೇಂತ ಹೇಳಿದ್ವಿ. ಆ ಅವಧಿ ಆಗಲೇ ಕಳೆದುಹೋಯ್ತು. ಇನ್ನು ಕುಯಿಲಿನ ವೇಳೆ ಹತ್ತಿರವಾಗ್ತದೆ, ನಾವಿನ್ನು ಬೇಗ್ನೆ ಇಲ್ಲಿಂದ ಹೊರಡ್ಬೇಕು. ಇವತ್ತೇ ಅಮಾತ್ಯರ ಹತ್ತಿರ ಈ ವಿಷಯ ಮಾತಾಡ್ತೇನೆ."

" ಔತಣಕೂಟದಲ್ಲಿ ? "

" ಹೊರಟು ಬರುವಾಗ."

ಮೂಗಿನ ಹೊಳ್ಳೆಗಳನ್ನು ಅಗಲಿಸಿ ದೀರ್ಘ ಉಸಿರೆಳೆಯುತ್ತ ಬಟಾನೆಂದ :

" ಹೋಯ್ತು ಒಳಗೆ! ಒಂದು ಹೊಳ್ಳೆಯಿಂದ ಸುಗಂಧ ದ್ರವ್ಯ. ಇನ್ನೊಂದರಿಂದ ಭಕ್ಷ್ಯ ಭೋಜ್ಯ ಪಾನೀಯ! ಎಂಥ ಸುವಾಸನೆ! ನಡಿಯಣ್ಣ. ಒಂದಿಷ್ಟು ಮೈ ತೊಳಕೋ—ತಪ್ಪು—ಮೈ ತೊಳೀತೇನೆ. ನಿನ್ನ ಪಾದರಕ್ಷೇನ ಇವತ್ತು ನಾನು ಚೊಕ್ಕಟ ಮಾಡ್ಬೇಕು."

" ಆ ಕೆಲಸ ಮಾತ್ರ ಆಗ಼್ೇ ಆಯ್ತು ಬಟಾ."

" ಸರಿ, ಸರಿ. ಒಂದು ಮಾತು ಹೇಳ್ತೇನೆ. ಅವತ್ತು ಪೆರೋ ಎದುರಲ್ಲಿ ಮಾಡಿದ ಹಾಗೆ ತಟಕ್ಕನೆ ತಿರುಗಿ 'ಬಟಾ!' ಅಂತ ಕೂಗ್ಬೇಡ. ನಾನು ಅಲ್ಲಿರೋದಿಲ್ಲ. ಬೆಕ್ ಔಟ ಯಾರೂ ಇರೋದಿಲ್ಲ."

" ಬಾಲ್ಯದಲ್ಲಿ ಪೆಪ್ಪೈರಸ್ ದೋಣಿಯಲ್ಲಿ ಕೂತು ಒಬ್ಬನೇ ಭಾರೀ ಮಡು ಗಳನ್ನು ದಾಟಿ ಹೋಗಿದ್ದೇನೆ, ಬಟಾ."

" ಸಂತೋಷ, ಅಣ್ಣ. ಆದೀಗ ಮೊಸಳೆಗೆ ಹೆದರದ ಗಂಡೆದೆ."

ಮೆನೆಪ್‌ಟಾ ಸಿದ್ಧನಾದ. ಕೌಪೀನ. ಅದರ ಮೇಲೆ ನೆರಿಗೆ ಹಿಡಿದ ನಡು ವಸ್ತ್ರ, ನಡುಪಟ್ಟಿ. ಮೈಗೆ ತುಸುಮಾತ್ರ ಸುಗಂಧದ್ರವ್ಯ ಲೇಪನ. ಸುವಾಸನೆಯ ಎಣ್ಣೆ ಇಟ್ಟು ಬಾಚಿದ—ತಲೆಗೂದಲು. ಕೊರಳಲ್ಲಿ ನೀಲ ಕವಡೆಸರ. ಬೆರಳಲ್ಲಿ ಬೆಳ್ಳಿಯುಂಗುರ.

"ಕಂಡೂ ಕಾಣಿಸದ ಭವ್ಯತೆ; ಇದ್ದೂ ಇಲ್ಲದ ಶೀವಿ," ಎಂದು ಬಟಾ ಮೆಚ್ಚಿದ.

"ಇಂಥ ಔತಣಗಳಲ್ಲಿ ಹೆಂಗಸರ ಕಾಟ ಇದ್ದೀತು. ಹುಷಾರಾಗಿರು, ಅಣ್ಣ" ಎಂದು, ನಗುತ್ತ ಆತ ಮಾತು ಸೇರಿಸಿದ.

ಅರಮನೆಯ ಒಳಗೂ ಹೊರಗೂ ಇತರ ಕಟ್ಟಡಗಳಲ್ಲೂ ನೀಲಾಂಜನಗಳಿಗೆ, ಸಣ್ಣ ದೊಡ್ಡ ಹಣತೆಗಳಿಗೆ ಎಣ್ಣೆ ಸರಬರಾಜು. ಅಂದು, ಸಂಜೆ ಕವಿಯುವುದಕ್ಕೆ ಮೊದಲೇ ದೀಪ ಹಚ್ಚಿದರು. ಎಲ್ಲರಿಗೂ ಅಚ್ಚರಿ : ಹಗಲು ಮುಗಿದು ಇರುಳು ಮೆರೆಯತೊಡಗಿದ್ದು ಯಾವ ಕ್ಷಣದಲ್ಲಿ ?

ಮಹಾದ್ವಾರದೆದುರು ರಾಜವೀಧಿ. ಜನದಟ್ಟಣೆ. ವೈಭವದ ದೀಪಾಲಂಕಾರವನ್ನು ನೋಡುವ ಹುಚ್ಚು ರಾಜಧಾನಿಯ ಪ್ರಜೆಗಳಿಗೆ.

ಸೆನೆಬ್ ಓಡಿ ಬಂದು ಕೇಳಿದ :

"ಸಿದ್ಧವಾಗಿದೀರಾ ?"

"ನಡೀರಿ. ಹೋಗೋಣ."

ಬಟಾನೆಂದ :

"ಮಹಾಮನೆಯ ಉದ್ಯಾನದ ತನಕ ಅಂಗರಕ್ಷಕರಾಗಿ ಬರ್ತೇವೆ."

"ಹಹ್ಹ. ಬೇಗ."

ನಡೆಯುತ್ತ ಸೆನೆಬ್ ಹೇಳಿದ :

"ಸತ್ಕಾರಭವನದಲ್ಲಿ ಸರು ಸದಸ್ಯರನ್ನು ಬರಮಾಡಿಕೊಳ್ತಾ ನಿಂತಿದ್ದೆ. ಅಮಾತ್ಯರು ಗೇಬೂನ ಕರೆದು ಏನೋ ಹೇಳಿದ್ರು, ಗೇಬು ಬಾಗಿಲವರೆಗೆ ಹೋಗಿ, ಅಲ್ಲಿಂದ, ಒಳಗಿದ್ದ ನನಗೆ ಬಾ ಅಂತ ಸನ್ನೆ ಮಾಡಿದ್ರು. "ಸ್ವಲ್ಪ ಆ ಮೆನೆಪ್‌ಟಾನ ಕರಕೊಂಡ್ಬಂದ್ಬಿಡಪ್ಪ" ಅಂತ ನನಗೆ ಹೇಳಿ, ರಾಣೀವಾಸದೊಳಗೆ ತಾವು ನುಸುಳಿದ್ರು, ಈಗ ನಾವು ಅಲ್ಲಿಗೆ ತಲಪೋದರೊಳಗೆ ಪುನಃ ಬಾಗಿಲ ಹತ್ತಿರ ನಿಂತಿರ್ತಾರೆ. ನೋಡಿ ಬೇಕಾದರೆ."

ಸೆನೆಬ್ ಸರಿಯಾಗಿಯೇ ತರ್ಕಿಸಿದ್ದ.

ಗೇಬು ಮೆಟ್ಟಲುಗಳನ್ನು ಇಳಿದು ಬಂದು, ಮೆನೆಪ್‌ಟಾನ ತೋಳು ಹಿಡಿದು ಕುಲುಕಿ, "ಓ ಮೆನೆಪ್‌ಟಾ ಎಷ್ಟು ಸೊಗಸಾಗಿ ಕಾಣ್ತಿದ್ದೀರಿ ! ನಿಮ್ಮ ವಿಷಯ ಯೋಚಿಸದ ದಿನವಿಲ್ಲ. ನಾಳೆ—ನಾಡದು ಅಂತ ಇಷ್ಟು ಕಾಲ

ಆಯ್ತು. ಎಲ್ಲ ಕುಶಲ, ಅಲ್ಲವೆ ?" ಎಂದ.

"ಹ್ಞ. ನೀವು ?"

"ಕುಶಲವೇ. ಲಿಷ್ಟ್‌ನ ಜೀವನ ಅಂದರೆ, ರಣಬಿಸಿಲಿನಲ್ಲಿ ಅಂಜೂರಮರದ ನೆರಳಿನಲ್ಲಿ ಮಲಗಿದ ಹಾಗೆ. ನಿಮ್ಮನ್ನೊಮ್ಮೆ ನಮ್ಮೂರಿಗೆ ಕರಕೊಂಡು ಹೋಗ್ಬೇಕು. ಹಿಂದೆಯೂ ಈ ಮಾತು ಹೇಳಿದ್ದೆ. ಅಲ್ಲವಾ ? ನಾನೊಬ್ಬ ! ಬನ್ನಿ."

ಹೊಸ್ತಿಲ ಬಳಿ ನಿಂತು ಮೆನೆಪ್‌ಟಾ ತಿರುಗಿ ನೋಡಿ, ಬಟಾ ಔಟ ಬೆಕ್‌ರೆಡೆಗೆ ಮುಗುಳುನಗೆ ಬೀರಿದ. ಆ ಮಂದಹಾಸಕ್ಕೆ ಸ್ಥಿರಸ್ಥಾನ ನೀಡಿ, ಆತ ಒಳಕ್ಕೆ ಕಾಲಿರಿಸಿದ. ಆತ್ಮವಿಶ್ವಾಸದ ನಡಿಗೆ. ಅವನೀಗ ಈ ಬದುಕಿಗೆ ಅಪರಿಚಿತನಲ್ಲ.

ಔತಣ ಸಮಾರಂಭಕ್ಕೆ ಪೂರ್ವಭಾವಿಯಾದ ಕಲರವ. ದಾಸದಾಸೀ ಜನರದೇ ಇಲ್ಲಿ ಮೇಲುಗೈ. ಅಮಾತ್ಯನಿದ್ದೆಡೆಗೆ ನಾಯಕ ಸಾಗತೊಡಗಿದ ರೀತಿ ಕಂಡು ಗೇಬುಗೆ ತುಸು ಆಶ್ಚರ್ಯ. ಆತ ಬೇಗನೆ ಹೆಜ್ಜೆ ಇರಿಸಿ ತಾನೇ ಮುಂದಾದ.

ವಯಸ್ಸಾದ ಒಬ್ಬ ವ್ಯಕ್ತಿಯೊಡನೆ ಮಾತನಾಡುತ್ತ ಅಮಾತ್ಯ ನಿಂತಿದ್ದ. ಎದೆ ಪಟ್ಟಿಗೆ ಎಂದಿನದಲ್ಲ, ಬೇರೆ. ಹೆಚ್ಚು ಬೆಲೆಯದು. ಅಧಿವೇಶನಕ್ಕೆಂದು, ಔತಣಕ್ಕೆಂದು ಧರಿಸಿದ್ದು. ಬಳಲಿದ ಮುಖ. ದಿನವಿಡೀ ಜರಗಿದ ಸಭೆಯ ಪರಿಣಾಮ.

ಗೇಬು ಮತ್ತು ಮೆನೆಪ್‌ಟಾ ತನ್ನೆಡೆಗೆ ಬರುತ್ತಿದ್ದುದನ್ನು, ಆಗಲೇ ಆ ಅಮಾತ್ಯ ಗಮನಿಸಿದ್ದ. ಅವರು ತೀರಾ ಹತ್ತಿರ ಬಂದಾಗಲಷ್ಟೇ ಆತ ಅವರೆಡೆಗೆ ಹೊರಳಿದ.

"ಬನ್ನಿ ಮೆನೆಪ್‌ಟಾ," ಎಂದು ನುಡಿದ, ತನ್ನ ಜತೆ ಇದ್ದವನಿಗೆ. "ಹೆಖ್ಪೆಟ್, ನೀರಾನೆ ಪ್ರಾಂತದ ನಾಯಕರನ್ನು ನಿಮ್ಮ ಹತ್ತಿರ ಕೂಡಿಸ್ಕೊಳ್ಳಿ. ಒಂದು ಪಕ್ಕದಲ್ಲಿ ಹೆಖ್ಪೆಟ್, ಇನ್ನೊಂದು ಪಕ್ಕದಲ್ಲಿ ಗೇಬು, ಗೇಬು, ಇವರಿಗೆ ಹೆಖ್ಪೆಟ್ ರ ಪರಿಚಯ ಮಾಡ್ಕೊಡಿ"ಎಂದ, ಅಷ್ಟು ಹೇಳಿ, ಔತಣದ ಪೀಠ ವ್ಯವಸ್ಥೆಯತ್ತ ಕಣ್ಣು ಹಾಯಿಸಲು ನಡೆದ.

ಹಿಂದೆ ಕಂಡು ಬಂದಿದ್ದ ಆತ್ಮೀಯತೆ ಈಗ ಇಲ್ಲ—ಎಂಬ ಭಾವನೆ

ಮೆನೆಪ್‌ಟಾಗೆ. ಪ್ರಸ್ತುತ ಪರಿಸ್ಥಿತಿಯ ಗಭೀರತೆ ಅದಕ್ಕೆ ಕಾರಣವಿರಬಹುದು—ಎಂಬ ಸಮಾಧಾನ.

ಬದುಕಿನ ನೇಗಿಲು ಗೆರೆಗಳು ಮುಖದ ಮೇಲೆ ಆಳವಾಗಿ ಮೂಡಿದ್ದ ವೃದ್ಧ—ಹೆಪ್ಸೆಟ್ ಕತ್ತಿನಲ್ಲಿ ಅಮೂಲ್ಯ ಹರಳುಗಳನ್ನು ಕೂಡಿಸಿದ್ದ ಬಂಗಾರದ ಸರಗಳಿಲ್ಲದೇ ಹೋಗಿದ್ದರೆ, ಯಾವನೋ ಇಳಿವಯಸ್ಸಿನ ಬಡಪಾಯಿ ಈತ ಎನ್ನಬಹುದಿತ್ತು.

ಗೇಬು ಅಂದ :

"ನಾನು ಹೆಪ್ಸೆಟ್‌ರ ಪರಿಚಯ ಮಾಡ್ಕೊಡೋದೆ ? ಹ್ಹ !.... ಇವರು ಪೆರೋನ ಬೆನ್ನುಪಕ್ಷಿ. ಅವರು ಚಡಪಡಿಸಿದರೆ ಇವರು ರೆಕ್ಕೆ ಬಡೀತಾರೆ. ಹೀಗೆ ಹೇಳೋದು ಧರ್ಮದ್ರೋಹವಲ್ಲ ಅಂದ್ಕೊಂಡಿದ್ದೇನೆ. (ಒಳ ಬಾಗಿಲಿನತ್ತ ನೋಡಿ) ಅಗೋ ! ನನ್ನ ಪ್ರೀತಿಯ ಪತ್ನಿ ಕಾಣಿಸ್ಕೊಂಡ್ಳು. ನೀವಿಬ್ಬರೂ ಮಾತಾಡ್ತಾ ಇರಿ ಬಂದ್ಬಿಟ್ಟೆ."

ಹೆಪ್ಸೆಟ್ ಗೇಬುವಿನೆಡೆಗೆ ನೋಡಿ ನಿಟ್ಟುಸಿರು ಬಿಟ್ಟ.

"ಇವನ ಆಳ್ವಿಕೆಯಿಂದ ನಿಮ್ಮ ಪ್ರಾಂತದ ಜನ ಬೇಸತ್ತಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ....ನನಗೆ ಬಹಳ ಹೊತ್ತು ನಿಂತಿರೋದಕ್ಕಾಗಲ್ಲ. ಬಾ ಮಗು. ಕೂತ್ಕೊಳ್ಳೋಣ."

ಹೆಪ್ಸೆಟ್ ಉಷ್ಟ್ರಪಕ್ಷಿಯ ಹಾಗೆ ಹಿಂದಕ್ಕೂ ಮುಂದಕ್ಕೂ ತಲೆ ಆಡಿಸುತ್ತ ಮೆನೆಪ್‌ಟಾನನ್ನು ಹಿಂಬಾಲಿಸಿದ.

ಅರವತ್ತು ಮೊಳ ಅಗಲ ನೂರು ಮೊಳ ಉದ್ದದ ಭವನ.

ಮಹಾಮನೆಗೆ ಅಂಟಿಕೊಂಡಿದ್ದ ಪಾರ್ಶ್ವದಲ್ಲಿ, ಅಲ್ಲಿಂದ ಬಲಲು ಅತ್ತ ಹೋಗಲು ಆರು ಬಾಗಿಲುಗಳು. ಗೋಡೆಗಳಲ್ಲಿ ಪೆರೋನ ಹಿರಿಮೆಯನ್ನು ಬಣ್ಣಿಸುವ ಉಬ್ಬು ಚಿತ್ರಗಳು. ಛಾವಣಿಗೆ ಅಂಟಿಸಿದ್ದ ಹೊಳಪಿನ ಹಸುರು ಹಂಚು. ಕೆಂಪು ಬಣ್ಣದ ಹೊಳಪು ಸಾರಣೆಯ ನೆಲ. ನಡುವೆ ಅಂಡಾಕಾರದ ಖಾಲಿ ಸ್ಥಳವನ್ನು ಬಿಟ್ಟಿದ್ದರು. ಅದರ ಆ ಬದಿಗೂ ಈ ಬದಿಗೂ ಪೀಠಗಳಿದ್ದುವು—ಇಪ್ಪತ್ತರಷ್ಟು. ಪ್ರತಿಯೊಂದು ಪೀಠದ ಎದುರಿಗೂ ಒಂದೂವರೆ ಮೊಳ ಎತ್ತರದ ಒಂದೊಂದು ಮೇಜು. ಭವನದ ಮುಖ್ಯದ್ವಾರಕ್ಕೆ ಇದಿರಾಗಿ ಎದುರು ತುದಿಯಲ್ಲಿ ಮಹಾಪ್ರಭುವಿನ ವಿಶೇಷ ಪೀಠ. ತುಸು ದೂರದಲ್ಲಿ

ಅಮಾತ್ಯನದು. ಎಡಬದಿಯಲ್ಲಿ ಮಹಾರಾಣಿ ಮತ್ತಿತರರಿಗಾಗಿ ಪೀಠಗಳು. ಆ ಎಲ್ಲ ಆಸನಗಳ ಮುಂದೆಯೂ ಪುಟ್ಟ ಮೇಜುಗಳು.

ಪೆರೋಪೀಠದ ಬಲಬದಿಯಲ್ಲಿ ಎರಡು ಪೀಠಗಳ ಮೇಲೆ ಹೆಖ್ವೆಟ್ ಮತ್ತು ಮೆನೆಪ್‌ಟಾ ಕುಳಿತರು.

ಆತ 'ಬಾ ಮಗು' ಎಂದಿದ್ದ. ವೃದ್ಧಾಪ್ಯದ ತೊದಲು ಇರಬಹುದು— ಎಂದುಕೊಂಡ ಮೆನೆಪ್‌ಟಾ.

ಕುಳಿತು ಮಗ್ಗುಲಿಗೆ ದೃಷ್ಟಿಬೀರಿ, ಹೆಖ್ವೆಟ್ ನುಡಿದ :

"ಹೇಳು ಮಗು. ನಿಮ್ಮ ಬಂಡಾಯ ಇತ್ಯಾದಿ ಹೇಗೆ ಮಾಡಿದಿರಿ. ಹೇಳು."

ಅದಂತೂ ತೊದಲಾಗಿರಲಿಲ್ಲ. ಅಹಂಭಾವದ ಪರಾಕಾಷ್ಠೆ ಎನಿಸಿತು ನಾಯಕನಿಗೆ. ವಯಸ್ಸಾದ ಆ ಕಣ್ಣುಗಳಲ್ಲಿ ಮಿಂಚಿದ ತುಂಟ ನಗೆ ಅವನಿಗೆ ಅಸಹನೀಯವಾಯಿತು.

ಅವನೆಂದ :

"ಅದು ದೊಡ್ಡ ಕಥೆ, ತಾತ."

ತಾತ! ಹೆಖ್ವೆಟ್ ಬೆಚ್ಚಿಬಿದ್ದ. (ತುಳಿದದ್ದು ಸರ್ಪದ ಹೆಡೆ.) ಉಗುಳು ನುಂಗಿದ. ನಗಲೆತ್ನಿಸಿ, "ದೊಡ್ಡದಲ್ದೆ ಸುಮ್ಮನೆ ಕಂಪಿಸಿತೆ ರಾಜ ಧಾನಿ? ಅದನ್ನು ಮರೆಮಾಚೋಕೆ ಯತ್ನಿಸಿ ಏನು ಫಲ? ಬಿರುಕು ಬಿರುಕೇ. ಅದನ್ನು ಸಕಾಲದಲ್ಲಿ ಮುಚ್ಚೋದು ಜಾಣತನ. ಅನಗತ್ಯ ಆಟಾಟೋಪ ನನಗೆ ಹಿಡಿಸೋದಿಲ್ಲ. ಶಾಂತಿ ಮುಖ್ಯ ಶಾಂತಿ," ಎಂದ.

ಸುಗಂಧದ ಅಲೆ ಮೆನೆಪ್‌ಟಾನ ಮೂಗಿಗೆ ಅಪ್ಪಳಿಸಿತು. ಆತ ತಿರುಗಿ ನೋಡಿದ. ಗೇಬು ತನ್ನ ಪತ್ನಿ ನೆಹನವೇಯ್ಟ್‌ಳೊಡನೆ ಬರುತ್ತಿದ್ದ. ಹಿಡಿತ ದಿಂದ ನುಸುಳಿ ಹೋಗುತ್ತಿದ್ದ ಯೌವನವನ್ನು ಎತ್ತಿ ಬಿಗಿದಿದ್ದಳು, ವಿವಿಧ ಕಟ್ಟುಗಳಲ್ಲಿ. ಬಲಸ್ತನದ ಕೆಳಗಡೆ, ಭುಜವನ್ನು ಹಾದು ಬಂದಿದ್ದ ದುಕೂಲದ ಗಂಟು. ಪಾರದರ್ಶಕವೆನಿಸುವಷ್ಟು ತೆಳ್ಳಗಿನ ಮಡಿಕೆ ಮಡಿಕೆಯಾದ ಬಿಳಿಯ ವಸ್ತ್ರ ಪಾದಗಳ ತನಕ ಇಳಿದಿತ್ತು. ಕಣ್ಣುಗಳಿಗೆ ಕಾಡಿಗೆ. ಕೂದಲು ಕಿತ್ತು ತೆಳುಗೊಳಿಸಿದ ಹುಬ್ಬುಗಳು. ಅಧರಗಳಿಗೆ ರುಧಿರ ವರ್ಣ. ಬಿಳಿಯ ಚೂರ್ಣ ಲೇಪನ, ಮುಖಕ್ಕೆ, ಕತ್ತು, ಕಿವಿ ಕಂಠಗಳಿಗೆ ಆಭರಣ. ತೋಳ ಬಂದಿ.

ಭುಜಮಟ್ಟದಲ್ಲಿ ಕತ್ತರಿಸಿ ಗುಂಗುರುಗೊಳಿಸಿದ್ದ ಕೇಶರಾಶಿ. ಅದರ ಮೇಲೆ ಶಿರೋಪಟ್ಟಿ.

ಗೇಬು ಹತ್ತಿರ ಬಂದು ನುಡಿದ.

"ಮೆನೆಪ್‌ಟಾ, ನನ್ನ ಹೆಂಡತಿ ನಿನಗೆ ಕೃತಜ್ಞತೆ ಸಲ್ಲಿಸೋದಕ್ಕೆ ಬಂದಿದ್ದಾಳೆ."

ನಾಯಕ ಎದ್ದು ಮುಗುಳುನಗೆಯನ್ನು ಹಿರಿದುಗೊಳಿಸಿ, ಲಲನೆಗೆ ನಮಿಸಿದ. ನೀರಾನೆ ಪ್ರಾಂತದಲ್ಲಿ ಆಕೆಯನ್ನು ಆತ ಕಂಡೇ ಇರಲಿಲ್ಲ. ನೆಹನವೇಯ್ಸ್ಟಳ ಕೆಂಪು ತುಟಿ ಕುಣಿಯಿತು.

ಜೀವಂತ ಕಬಳಿಸುವವಳಂತೆ ಅವನ ಮೈಮೇಲೆ ಕಣ್ಣಾಡಿಸುತ್ತ ಆಕೆ ಅಂದಳು :

"ನಮ್ಮ ವಸ್ತ್ರ ಒಡವೆಗಳ ಆಸೆ ಬಿಟ್ಟಿದ್ದೆ. ಎಲ್ಲ ಜೋಡಿಸಿ ಎರಡು ದೊಡ್ಡ ಪೆಟಾರಿಗಳಲ್ಲಿ ಭದ್ರವಾಗಿ ಇಟ್ಟಿದೀರಂತೆ. ನಿಮ್ಮನ್ನು ಲಿಷ್ಟ್‌ಗೆ ಕರಕೊಂಡ್ಬನ್ನಿ ಅಂತ ಗೇಬುಗೆ ಆವತ್ನಿಂದ ಹೇಳ್ತಾನೆ ಇದೇನೆ. ಇವನನ್ನು ನಂಬ್ಕೊಂಡು ಏನು ತಾನೇ ಸಾಧ್ಯ ? ನೀವೇ ಬನ್ನಿ. ನಿಮ್ಮ ಪ್ರಾಂತಕ್ಕೆ ವಾಪಸಾಗುವಾಗ ನಮ್ಮಲ್ಲಿ ಇಳಿದು, ಎರಡು ದಿನ ಇದ್ದು ಹೋಗಿ."

"ಆಮಂತ್ರಣಕ್ಕಾಗಿ ಕೃತಜ್ಞ. ಆದರೆ ಊರು ಬಿಟ್ಟು ಬಹಳ ದಿನ ಆಯ್ತು."

"ಏನೇ ಇದ್ದರೂ ನಮ್ಮಲ್ಲಿಗೆ ನೀವು ಬರಲೇ ಬೇಕು."

ಗೇಬು ಆತನಿಗೆಂದ :

"ನೆಹನ ಕುಣಿಕೆ ಬೀಸಿದ್ಮೇಲೆ ತಪ್ಪಿಸ್ಕೊಳ್ಳೋದು ಕಷ್ಟ. ಒಪ್ಕೊಂಡ್ಬಿಡಿ ಮೆನೆಪ್‌ಟಾ."

ನಾಯಕ ನಗೆಯ ಉತ್ತರವನ್ನಷ್ಟೇ ನೀಡಿದ. ಆಕೆಯ ದುಕೂಲದ ಹೊರಗಿದ್ದ ಬಲ ಮೊಲೆಯ ತೊಟ್ಟಿನತ್ತ ಆತನ ದೃಷ್ಟಿ ಹರಿಯಿತು. ಅವಳ ತುಟಿ ಮತ್ತೊಮ್ಮೆ ಕಂಪಿಸಿತು.

ಹೆಪ್ಪೆಟ್‌ಗೆ ದಾಹದ ಅನುಭವ. ಕುಳಿತಲ್ಲಿಂದ ನೆಹನವೇಯ್ಸ್ಟಳ ನಡುವನ್ನು ಎವೆ ಇಕ್ಕದೆ ದಿಟ್ಟಿಸುತ್ತಿದ್ದ ಆತ. ಕಂಪಿಸಿದ ಅವಳ ಅಧರವನ್ನು ಕಂಡು, "ನನ್ನನ್ನು ಕರೆಯೋದಿಲ್ವ ಮಗು ?" ಎಂದ.

ಯಾರು ಈ ಪ್ರಾಣಿ ? ಎನ್ನುವ ಭಾವದಿಂದ ಆಕೆ ಗೇಬುವನ್ನು ನೋಡಿದಳು.

"ಹೆಪ್ಸೆಟ್, ಮರೆತ್ಬಿಟ್ಟಿಯಾ ?" ಎಂದ ಆತ.

"ಓ ! ತಾತಯ್ಯ ! ಗುರುತೇ ಸಿಗಲಿಲ್ಲ. ಬಹಳ ಸೊರಗಿದ್ದಾರೆ."

ಒಂದು ಕಾಲದಲ್ಲಿ ನೀನು ಪೆರೋಗೆ ಗೋಪ್ಯದ ಪ್ರಿಯತಮೆಯಾಗಿದ್ದೆ ; ಈಗ ನಿನಗೆ ವಯಸ್ಸಾಗಿದೆ. ಯಾರೂ ಹತ್ತಿರ ಸೇರಿಸೋದಿಲ್ಲ—ಎಂದು ಹೇಳಲು ಹೊರಟ ಅವಮಾನಿತ ಹೆಪ್ಸೆಟ್, ಪದಗಳನ್ನು ಹಿಂದಕ್ಕೆ ತಳ್ಳಿ, ನರಳಿದ ಸದ್ದುಮಾಡಿ, ರಾಣೀವಾಸದ ಕಡೆಯಿಂದ ಬರತೊಡಗಿದ ಮಹಾರಾಣಿ ಯನ್ನು, ರಾಜಕುಮಾರಿಯರಿಬ್ಬರನ್ನು, ಕಿರಿಯವನಾದ ರಾಜಕುಮಾರನನ್ನು ದಿಟ್ಟಿಸಿದ. ಪೆರೋಪುತ್ರನನ್ನು ಹಿಂಬಾಲಿಸಿ, ವಯಸ್ಸಿನಲ್ಲಿ ಆತನಿಗಿಂತ ದೊಡ್ಡವರಾದ ಮೂವರು ಬೆಡಗಿನ ಹುಡುಗಿಯರು ಬಂದರು.

ಮೆನೆಪ್‌ಟಾನೂ ಅವರನ್ನು ನೋಡಿದ.

"ಕೊನೆಯ ಮೂವರು ನನ್ನ ಮಕ್ಕಳು," ಎಂದ ಗೇಬು.

"ನಾನು ಮಗ್ಗುಲಲ್ಲಿ ಇಲ್ಲದಿದ್ದರೆ ಮಹಾರಾಣಿಯ ಮೂಗು ಕೆಂಪ ಗಾಗ್ತದೆ"—ಎಂದು ಗೊಣಗಿ, ಮೆನೆಪ್‌ಟಾನೆಡೆಗೆ ಕುಡಿಗಣ್ಣಿನ ನೋಟ ಹಾಯಿಸಿ ನೆಹನವೇಯ್ಟ್ ಹಂಸದಂತೆ ತೇಲುತ್ತ ಹೊರಟಳು.

ಸರುಸದಸ್ಯರೆಲ್ಲ ಪೀಠಗಳ ಬಳಿಗೆ ಬಂದರು. ಮಹಾರಾಣಿಯೂ ಬಳಗ ದವರೂ ತಮ್ಮ ಪೀಠಗಳನ್ನು ಸಮೀಪಿಸಿದಾಗ ಹೆಪ್ಸೆಟ್ ಎದ್ದ. ಅವರೆಲ್ಲ ಮಹಾರಾಣಿಗೆ ವಂದಿಸಿದರು. ಮಹಾರಾಣಿ ನೆಫರ್‌ಟೀಮ್ ಸೌಂದರ್ಯ ದರ್ಪಗಳ ಸಮ್ಮಿಶ್ರಣ. (ಮಧ್ಯ ವಯಸ್ಸು ಕಾಡಿದರೆ ಏನಂತೆ ? ಮಹಾ ಪ್ರಭುವೇನೂ ಯೌವನಾವಸ್ಥೆಯಲ್ಲಿಯೇ ಇರುವುದಿಲ್ಲವಲ್ಲ ? ಅಲ್ಲದೆ ಅರಸನಿಗೆ ಸೆಡ್ ಉತ್ಸವದ ಸತ್ಫಲ ದೊರೆತಾಗ ಅದರಲ್ಲಿ ಅರಸಿಗೂ ಪಾಲಿಲ್ಲದೆ ಉಂಟೇ ?')

ಹಿರಿಯ ಸಲಹೆಗಾರರಾದರೇನು ? ಸೇವಕರಾದರೇನು ? ಎಲ್ಲರೂ ಪ್ರಜೆಗಳೇ ಅವಳಿಗೆ. ಮಹಾರಾಣಿ ಆಸೀನಳಾಗಲಿಲ್ಲವೆಂದು ಎಲ್ಲರೂ ನಿಂತೇ ಇದ್ದರು. ಗೌರವ ಎಲ್ಲರಿಂದಲೂ ಸಂದಿತೆಂಬುದು ಖಚಿತವಾದ ಮೇಲೆ ನೆಫರ್ ಟೀಮ್ ಕುಳಿತಳು. ಅಲ್ಲಿದ್ದ ಅಪರಿಚಿತ ಮುಖ ಒಂದೇ. ಆತನೇ ಮೆನೆಪ್‌ಟಾ

ಎಂಬುದು ಸ್ಪಷ್ಟ. ಊರ ರಾಣಿಯ ಗೋಣು ತುಸು ಮಿಸುಕಿತು. ಅದನ್ನೇ ಅನುಮತಿಯ ಸಂಜ್ಞೆ ಎಂದು ಬಗೆದು, ಎಲ್ಲರೂ ಕುಳಿತರು.

ನೆಫರ್‌ಟೀಮ್ ತನ್ನ ಎಡಕ್ಕೆ ಹೊರಳಿ, ರಾಜಕುಮಾರಿಯರ ಜತೆಗಿದ್ದ ನೆಹನವೇಯ್ಟ್‌ಳನ್ನು ಕರೆದಳು :

"ಬಾ ನೆಹನ, ಇಲ್ಲಿ ಕೂತ್ಕೊ. (ಆಕೆಯ ವಕ್ಷಸ್ಥಲದ ಮೇಲಿನ ಆಭರಣ ಗಳತ್ತ ದೃಷ್ಟಿ ಹಾಯಿಸಿ) ಅಲಂಕಾರ ಮುಗಿಸ್ಕೊಂಡು ನೇರವಾಗಿ ನನ್ನ ಸನ್ನಿಧಿಗೆ ಬಾ ಅಂತ ಹೇಳಿರ್ಲಿಲ್ವೆ ? ಎಲ್ಲಿಗೆ ಹೋದೆ ?"

"ಗೇಬು ಕರೆದ." ಎಂದಳು ನೆಹನವೇಯ್ಟ್, ರಾಣಿಯ ಮಗ್ಗುಲಲ್ಲಿ ಕುಳಿತು.

ಈ ಔತಣಕ್ಕೆ ಮಹಾರಾಣಿಯನ್ನು ಒಪ್ಪಿಸಲು ಅಮಾತ್ಯ ಬಹಳ ಕಷ್ಟ ಪಟ್ಟಿದ್ದ. ಗೇಬು ದಂಪತಿಗೆ ಔತಣ ? ತನ್ನ ಹಳೆಯ ಪ್ರತಿಸ್ಪರ್ಧಿಯ ಗೌರವಾರ್ಥ ತಾನು ಔತಣ ನೀಡುವುದು ? ಮಹಾರಾಣಿಗೆ ಸಿಟ್ಟು....ಗೇಬು ದಂಪತಿಯ ಹೆಸರು ನೆಪಕ್ಕೆ. ವಾಸ್ತವವಾಗಿ ಮೆನೆಪ್‌ಟಾಗೆ ಔತಣ ; ನೀರಾನೆ ಪ್ರಾಂತ, ತಂಡವನ್ನು ಬಿಟ್ಟು ಹೋಗಿರುವ ಹೋರಿ; ಅದಕ್ಕೆ ಮತ್ತೆ ಕುಣಿಕೆ ಹಾಕಿ ತಂಡದೊಳಕ್ಕೆ ಎಳೆದು ತರಬೇಕು—ಎಂದು ಅಮಾತ್ಯ ಬಿಡಿಸಿ ಹೇಳಿದ. ಆದರೂ ಮಹಾರಾಣಿಗೆ ಆತಂಕ. "ಆ ನೆಹನವೇಯ್ಟ್ ಬರಬೇಕಾದ ಅಗತ್ಯ ವೇನು ?" ಎಷ್ಟು ವಾದಿಸಿದರೂ ಮತ್ತೆ ಮತ್ತೆ ಅದೇ ಪ್ರಶ್ನೆ. ಕಡೆಗೂ ಮಹಾ ರಾಣಿ ಒಪ್ಪಿದ್ದು, ಮನಸ್ಸಿಲ್ಲದ ಮನಸ್ಸಿನಿಂದ.

ತ್ರಿಕೋನ ತಂತೀವಾದ್ಯಗಳನ್ನು ಹಿಡಿದುಕೊಂಡು ಇಬ್ಬರು ವಾದಕರು ಬಂದರು. ಮಹಾರಾಣಿಗೆ ನಮಿಸಿ, ಅಂಡಾಕಾರ ಸ್ಥಳದ ಒಂದು ಮೂಲೆಯಲ್ಲಿ ಕುಳಿತರು. ಔತಣ ಸಮಾರಂಭಕ್ಕೆ ಹಿನ್ನೆಲೆಯ ಸಂಗೀತ ಒದಗಿಸುವುದು ಅವರ ಹೊಣೆ.

ಕರಿಯ ಮೈ ಬಣ್ಣದ ದಾಸಿಯೊಬ್ಬಳು (ರೂಪವತಿ; ಕವಡೆಗಳ ಸೊಂಟ ಪಟ್ಟಿ; ತೀರಾ ಕಿರಿದಾದ ನಾಲ್ಕು ಬೆರಳಗಲದ—ನಡು ವಸ್ತ್ರ) ಮಹಾರಾಣಿಯ ಬಳಿ ಸುಳಿದಳು.

"ಯಾರಿಗಾಗಿ ಕಾಯ್ತಾ ಕೂತಿದ್ದಾರೆ ? ಶುರು ಮಾಡಲಿ !" ಎಂದು

ತಗ್ಗಿದ ಧ್ವನಿಯಲ್ಲಿ ನುಡಿದಳು, ನೆಫರ್‌ಟೀಮ್.

ದಾಸಿ ವಾದಕರ ಬಳಿಗೆ ಸಾರಿ, ಆರಂಭಿಸುವಂತೆ ಸಂಜ್ಞೆ ಮಾಡಿದಳು. ಒಬ್ಬ ತಂತಿಗಳನ್ನು ಮೀಟಿದ. (ಮುಂದೆ ಆವನು ಬಳಲಿದಾಗ ಇನ್ನೊಬ್ಬ.) ಮಾಂತ್ರಿಕ ಹೊರಡಿಸಿದ ಧ್ವನಿ ತರಂಗ ಮೋಹಕ, ಬಲು ಕ್ಷೀಣ. ಬೇರೆ ನೂರು ಮಾತುಗಳಿಗೆ ಸಪ್ಪಳಗಳಿಗೆ ಅಡ್ಡಿಯಾಗದಂತೆ.

"ಮಹಾಪ್ರಭು ಯಾಕೋ ವಿಲಂಬ ಮಾಡ್ತಿದಾರಲ್ಲ," ಎಂದಳು ಮಹಾರಾಣಿ ಪೆರೋ ಬರುವ ಬಾಗಿಲಿನತ್ತ ನೋಡಿ:

ಹಿಂದೆಯೊಮ್ಮೆ ನೆಫರ್‌ಟೀಮ್ ಹಾಗೆ ಕೇಳಿದ್ದಾಗ 'ನೋಡಿಕೊಂಡು ಬರಲೆ ?' ಎಂದು ನುಡಿದು ರಾಣಿಯ ಕೋಪಕ್ಕೆ ಬಲಿಯಾಗಿದ್ದಳು, ನೆಹನ ವೇಯ್ಟ್. ಅದು ನೆನಪಾಗಿ, ನಸುನಕ್ಕು, ಕಣ್ಣು ಕಿರಿದುಗೊಳಿಸಿ, ಮಹಾ ರಾಣಿಯನ್ನು ಆಕೆ ನೋಡಿದಳು.

ಆ ಘಟನೆಯ ಸ್ಮರಣೆ ಹಸುರಾಗಿದ್ದ ನೆಫರ್‌ಟೀಮ್ ಉದ್ದೇಶಪೂರ್ವಕ ವಾಗಿಯೇ ಆ ಮಾತನ್ನು ಆಡಿದ್ದಳು. ನೆಹನವೇಯ್ಟ್ ಪ್ರತಿಕ್ರಿಯೆ ನೀಡದೆ ಇದ್ದುದನ್ನು ಕಂಡು ಆಕೆ ಅಂದಳು :

"ನೆಹನ, ನಿನ್ನ ವಿವೇಚನಾಶಕ್ತಿ ಹೆಚ್ಚಿದೆ."

ಮಹಾರಾಣಿಯ ಮೂಗಿಗೊಮ್ಮೆ ಗುದ್ದಬೇಕೆಂದು ನೆಹನವೇಯ್ಟಳ ಬಹಳ ದಿನಗಳ ಬಯಕೆ. ಈ ದಿನವೂ ಮೂಗನ್ನು ನೋಡಿದಳು. ಆದರೆ, ಎಷ್ಟೋ ಬಾರಿ ಮಾಡಿದ್ದಂತೆ, ಈ ಸಲವೂ ಸುಮ್ಮನೆ ಕುಳಿತಳು.

ರಾಣಿ ನೆಹನಳ ಆಭರಣಗಳನ್ನು ದಿಟ್ಟಿಸಿ, "ನಿನ್ನ ಕಿರೀಟ ಚೆನ್ನಾಗಿದೆ" ಎಂದಳು.

ನೆಹನವೇಯ್ಟ್‌ಗೆ ಸಿಟ್ಟು ಬಂತು.

ಅವಳೆಂದಳು :

"ಮಹಾರಾಣಿಯವರು ಧರಿಸೋದು ಕಿರೀಟ. ನನ್ನದು ಬರೇ ಶಿರೋ ಪಟ್ಟಿ."

"ಕೋಪ ! ಈಗೀಗ ಶಿಷ್ಟಾಚಾರಗಳನ್ನು ಬಿಟ್ಬಿಟ್ಟಿದೀಯಾ ಅಂತೇನೆ. ನನ್ನ ಹೊಸ ಕಿರೀಟ ಹ್ಯಾಗಿದೆ ಅಂತ ಹೇಳಲೇ ಇಲ್ಲ."

"ಇಂಥದನ್ನು ಈವರೆಗೆ ಈ ಬಡ ಕಣ್ಣುಗಳು ಕಂಡಿಲ್ಲ ಮಹಾರಾಣಿ."

" ಭೇಷ್, ಒಂದು ಪದವೂ ತಪ್ಪದಂತೆ ಹೇಳ್ದೆ....ನೆಹನ, ಆ ಮುದಿ ಗೂಬೆ ಹೆಪ್ಸೆಟ್ ಪಕ್ಕದಲ್ಲಿ ಕೂತಿರೋ ಯುವಕ ಯಾರೆ ?"

" ನನ್ನ ಪತಿ, ಇನ್ನಾರು ?"

" ಲೇವಡಿ ಮಾಡ್ತಿದೀಯಾ ?"

" ಯಾಕೆ ಗೇಬು ಯುವಕನಲ್ವೇನು ?"

" ಅವನಲ್ಲವೇ ! ಗೇಬುಗೂ ಗೂಬೆಗೂ ಮಧ್ಯೆ...."

" ತನ್ನ ಪಕ್ಕದಲ್ಲಿ ನೀರಾನೆ ಇರ್ತದೆ ಅಂತ ಗೇಬು ಹೇಳಿದ್ದ."

" ಓ ! ಆ ಕಳ್ಳ ! ನಿನ್ನ ಗದ್ದುಗೆ ಕದ್ದೋನು. ಮೆನೆಪ್‌ಟಾ........"

" ಮಹಾರಾಣಿಯವರ ಮಾನ್ಯ ಅತಿಥಿ."

ನೆಫರ್‌ಟೀಮ್ ಮೂಗು ಕುಣಿಸಿದಳು.

" ನಾನು ಕಣ್ಣೆವೆಗಳಿಗೆ ಹಸುರು ಹಚ್ಕೊಂಡಿದ್ದೇನೆ."

" ನಿಮಗದು ಶೋಭಿಸ್ತದೆ, ಮಹಾರಾಣಿ."

" ಭೇಷ್ ! ಅಗೋ, ನಿನ್ನ ಮಹಾಪ್ರಭು...."

ಕರೆತರಲು ಒಳಹೋಗಿದ್ದ ಅಮಾತ್ಯ. ಆತನ ಹಿಂದೆ ಪೆರೋ. ಅರಸನ ಸುತ್ತ ಏಳು ಜನ ಅಂಗರಕ್ಷಕರು.

ಮಹಾಪ್ರಭುವಿನ ತಲೆಕೂದಲನ್ನು ಆವರಿಸಿದ್ದ ದುಕೂಲವನ್ನು ಜೋಡಿ ಕಿರೀಟದಲ್ಲಿನ ಸರ್ಪಹೆಡೆ ಬಿಗಿಯಾಗಿ ಹಿಡಿದಿತ್ತು. ಎದೆಪಟ್ಟಿಕೆಯ ಚಿಕ್ಕ ದೊಡ್ಡ ಅಮೂಲ್ಯ ಹರಳುಗಳು ನೀಲಾಂಜನಗಳ ಬೆಳಕಿನಲ್ಲಿ ಝಗಝಗಿಸುತ್ತಿದ್ದುವು. ಕೊರಳಲ್ಲಿ ಬೇರೆಯೂ ಒಂದೆರಡು ಹಾರಗಳಿದ್ದುವು. ನಡುವಿನಿಂದ ಸ್ವರ್ಣಪಾದುಕೆಗಳವರೆಗೂ ಇಳಿದಿತ್ತು, ಶ್ವೇತಾಂಬರ. ಅದನ್ನು ರತ್ನ ಖಚಿತ ಬಂಗಾರದ ಸೊಂಟಪಟ್ಟಿ ಭದ್ರಗೊಳಿಸಿತ್ತು. ರಾಜಲಾಂಛನ ಆಂಕ್ ಎಡಗೈಯಿಂದ ತೂಗಾಡುತ್ತಿತ್ತು. ಮಣಿಕಟ್ಟಿಗೆ ಅದನ್ನು ಏಳು ಗಂಟುಗಳಿಂದ ಬಿಗಿದಿದ್ದರು.

ಇತರರ ಜತೆ ಮೆನೆಪ್‌ಟಾನೂ ಎದ್ದು ನಿಂತ. ಈ ದಿನ ಆತನಿಗೆ ಕಂಡು ಬಂದುದು ಬರಿಯ ಕಿರೀಟವಲ್ಲ—ಇಡಿಯ ದೇಹ. ಒಮ್ಮೆಲೆ ಅವನಿಗೆ ಅನಿಸಿತು : ಇದು ಪೆರೋ ಪಾತ್ರ ; ಅಮಾತ್ಯನದೂ ಒಂದು ಪಾತ್ರ ; ಗೇಬು ಕೂಡಾ ಪಾತ್ರಧಾರಿಯೇ ; ತಾನೂ ?

ಪೆರೋಗಿಂತ ತುಸು ಮುಂದಾಗಿಯೇ ಬಂದ ಆಮೆರಬ್ (ಈಗ ತ್ರಿಕೋನ

ತಂತೀ ವಾದ್ಯದ ಗುಂಯಾರವವಿಲ್ಲ) ಉಚ್ಚ ಕಂಠದಲ್ಲಿ ಘೋಷಿಸಿದ :

" ಓ ಹೋರಸ್ ಸಮಾನ ದೀರ್ಘಾಯು ಪೆರೋ! ಸ್ವರ್ಣ ದೇವತೆ ಹಾಥೊರ್ ನಿನ್ನ ಮೂಗಿಗೆ ಬಲ ಕೊಡಲಿ!"

ಅರಸ ತನ್ನ ಪೀಠದ ಮೇಲೆ ಕುಳಿತ; ಮಹಾರಾಣಿ, ನೆಹನ್‌ವೇಯ್ಟ್ ಮತ್ತು ಕಿರಿಯರೆದತ್ತ ಆತ ಆತ್ಮೀಯ ನೋಟ ಬೀರಿದ; ಬಲಗಡೆಯಲ್ಲಿ ಹೆಖ್ವೆಟ್, ಮೆನೆಪ್‌ಟಾ, ಗೇಬುರನ್ನು ಗುರುತಿಸಿ ನಸುನಕ್ಕ.

ಎಲ್ಲರೂ ಕುಳಿತುಕೊಳ್ಳುತ್ತಿದ್ದಂತೆ ತಂತೀವಾದದಿಂದ ಮತ್ತೆ ಅಲೆ ಗಳೆದ್ದುವು.

ಬಳಿಯಲ್ಲಿ ಅನುಜ್ಞೆಗಳ ದಾರಿ ನೋಡುತ್ತ ನಿಂತಿದ್ದ ಸೇವಕರಿಗೆ ಅಮಾತ್ಯ ಅಂದ :

" ಹಾರ, ಹೂ........"

ಒಳಬಾಗಿಲಿನಿಂದ ಪುಷ್ಪಹಾರವಿದ್ದ ಬಂಗಾರದ ತಟ್ಟೆಗಳನ್ನು ಹೊತ್ತು ಕೊಂಡು ದಾಸಿಯರು ಸಾಲುಗಟ್ಟಿ ಬಂದರು. ಮೂವರು ನಾಲ್ವರು ದಾಸಿಯರು ಬಂದಿದ್ದ ಪ್ರತಿಷ್ಠಿತರಿಗೆಲ್ಲ ಹಾರ ಹಾಕಿದರು. ಹಿರಿಯ ರಾಜಕುಮಾರಿ ತಂದೆಯ ಕೊರಳಿಗೆ ಹೂಮಾಲೆ ತೊಡಿಸಿದಳು. ಮಹಾರಾಣಿ ಮತ್ತಿತರ ಸ್ತ್ರೀ ಜನರಿಗೆಲ್ಲ ಕೈಗಳಲ್ಲಿ ಹಿಡಿದುಕೊಳ್ಳಲು, ಅರೆಬಿರಿದ ತಾವರೆ ಮೊಗ್ಗುಗಳನ್ನು ದಾಸಿಯರು ತಂದುಕೊಟ್ಟರು. ಗಂಡಸರ ಹಿಂಗೈಗಳಿಗೆ ಸುಗಂಧದ್ರವ್ಯ ಪೂಸಿದರು. ಮಹಿಳೆ ಯರ ನೆತ್ತಿಗಳಮೇಲೆ ಕ್ರಮೇಣ ಕರಗಿ ಕಂಪು ಬೀರುವ ಸುಗಂಧ ಬಿಲ್ಲೆಗಳನ್ನಿಟ್ಟರು.

ನಾಲ್ಕಾರು ಸೇವಕರ ಎರಡು ತಂಡಗಳು ಹಾಲ್ಲುಗಲ್ಲಿನ ದೊಡ್ಡ ಜಾಡಿ ಗಳನ್ನು ಪ್ರಯಾಸಪಡುತ್ತ ಔತಣ ಭವನಕ್ಕೆ ಹೊತ್ತು ತಂದರು. ಕಪ್ಪುಮಸಿ ಯಲ್ಲಿ ಅವುಗಳ ಮೇಲೇನೋ ಬರೆದಿತ್ತು.

ಗೇಬು ಮೆನೆಪ್‌ಟಾಗೆಂದ :

" ಇದು ಖೋಟಾ ಬದುಕಲ್ಲ ಅನ್ನೋದಕ್ಕೆ ಸಾಕ್ಷ್ಯ. ದೇವತೆಗಳ ಸೇವನೆಗೆ ಯೋಗ್ಯವಾದ ದ್ರಾಕ್ಷಾಸುರೆ. ಹಿಂಡಿದ ದ್ರಾಕ್ಷೆಯ ಜಾತಿ, ಗುಣ ಮಟ್ಟ, ಸುರೆ ತಯಾರಿಸಿದ ಊರು, ದಿನಾಂಕ—ಎಲ್ಲ ಆ ಜಾಡಿಗಳ ಮೇಲೆ ಬರೆದಿದ್ದಾರೆ. (ಇತರ ಹತ್ತಾರು ಜಾಡಿಗಳು ಬರ ತೊಡಗಿದುದನ್ನು ಕಂಡು) ನೋಡಿ ಬೇರೆ ಮದ್ಯಗಳೂ ಇವೆ."

ಔತಣಕ್ಕೆ ಕುಳಿತವರಿಗೆಲ್ಲ ಬೆಳ್ಳಿಯ ಪಾನಪಾತ್ರೆಗಳಲ್ಲಿ ದ್ರಾಕ್ಷಾ ಸುರೆ ನೀಡಿದರು.

ಪೆರೋಗೋಸ್ಕರ ಬಂಗಾರದ ಪುಟ್ಟ ಬಟ್ಟಲಲ್ಲಿ ವಿಶೇಷ ಪಾನೀಯ ಒಳಗಿನಿಂದ ಬಂತು.

ಧ್ವನಿ ತಗ್ಗಿಸಿ ಗೇಬು ನುಡಿದ :

" ಪೆರೋಗೆ ಅತ್ಯಂತ ಹಳೆಯ ಸುರೆಯೇ ಬೇಕು. ಪೂರ್ವಜರ ಕಾಲದ್ದು. ರಾ ಐಗುಪ್ತರನ್ನು ಆಳುತ್ತಿದ್ದಾಗಲೇ ಮಾಡಿದ ಸುರೆ! ಯಾವುದಕ್ಕೂ ಒಂದು ಮಿತಿ ಬೇಡವೆ ?"

ಪಾನಪಾತ್ರೆಗಳನ್ನು ಕೊಡಲು ಬಂದವನನ್ನು ಗೇಬು ಕೇಳಿದ :

" ಖಿವವ ಇದೆಯೇನಪ್ಪ?"

" ಇದೆ ಒಳಗಡೆ, ಮಹಾಸ್ವಾಮಿ. ಕೆಲಸಗಾರರಿಗೇಂತ ತರಿಸಿದ್ದು. ಈಗಲೇ ಬೇಕಾ ?"

" ಆಮೇಲೆ, ಭಕ್ಷ್ಯ ಭೋಜ್ಯ ಬಡಿಸಿದಾಗ ತಂದ್ಕೊಡು, ಇವರಿಗೆ."

ನಾಯಕನತ್ತ ತಿರುಗಿ ಅವನೆಂದ :

" ನೀವು ಚಿಂತಿಸ್ಬೇಕಾದ್ದಿಲ್ಲ ಮೆನೆಪ್‌ಟಾ. ಖಿವವ ಇದೆ."

" ಕೆಲಸಗಾರರಿಗೇಂತ ತರಿಸಿದ್ದು ?"

" ಬೇಸರವಾಯ್ತೆ ?"

" ಇಲ್ಲ, ಇಲ್ಲ." ಉಗುಳುನುಂಗಲೆತ್ನಿಸುತ್ತ ಮೆನೆಪ್‌ಟಾ ಅಂದ : " ಆದರೆ ಔತಣವಿದ್ದ ದಿನ ನಾನು ಸುರೆ ಮುಟ್ಟೋದಿಲ್ಲ."

" ವಿಚಿತ್ರ !"

" ನೀರಾನೆ ಪ್ರಾಂತದ ಎಲ್ಲ ಸಂಗತಿಗಳೂ ಸ್ವಲ್ಪ ಹಾಗೆಯೇ ಅಲ್ಲವೆ ?"

ಪೆರೋ ಮಧು ಬಟ್ಟಲನ್ನು ತುಟಿಗಳಿಗೆ ಮುಟ್ಟಿಸಿದೊಡನೆಯೇ, ಮೆನೆಪ್‌ಟಾನ ಹೊರತಾಗಿ ಉಳಿದವರೆಲ್ಲ ಬಟ್ಟಲುಗಳನೆತ್ತಿಕೊಂಡರು.

ಹೆಷ್ವೆಟ್ ತನ್ನ ಬಟ್ಟಲನೆತ್ತಿ ಅಂದ :

" ಮಗು, ಹುಚ್ಚಾಟ ಬೇಡ. ಸುರೆ ಕುಡೀದೇ ಇದ್ದರೆ ಪೆರೋಗೆ ಅವಮಾನ. ವಿಚಾರಣೆ ನಡೆಸ್ಬೇಕಾದೀತು ! ಎತ್ತಿಕೊ."

" ಆಗಲಿ ತಾತ. ನಿಮ್ಮ ಮಾತಿಗೆ ಬೆಲೆ ಕೊಡದಿದ್ದರೆ ಹ್ಯಾಗೆ ?

ಇದೊಂದೇ ಬಟ್ಟಲು," ಎಂದ ಮೆನೆಪ್‌ಟಾ.

ಆತ ಒಂದು ಗುಟುಕು ಸೇವಿಸಿದಾಗ, ಆಗಲೇ ಅರ್ಧ ಬಟ್ಟಲನ್ನು ಬರಿದು ಗೊಳಿಸಿದ್ದ ಗೇಬು ಕೇಳಿದ :

"ಹೇಗಿದೆ ?"

"ಚೆನ್ನಾಗಿದೆ. ನಿಜ ಹೇಳಲೆ ? ಇಂಥ ರುಚಿಗೆ ನಾನು ಅಪರಿಚಿತ. ಖಿವವ ಬಿಟ್ಟು ಬೇರೆ ಯಾವ ಸುರೆಯನ್ನೂ ನಾನು ಮುಟ್ಟಿದವನಲ್ಲ."

"ಹಾಂ ? ಇನ್ನೊಂದನ್ನು ಮುಟ್ಟಿದವನಲ್ಲ ! ನೆಹನಗೆ ಇದನ್ನ ಹೇಳ್ಬೇಕು !"

....ದಾಸದಾಸಿಯರು ಬರಿದಾದ ಬಟ್ಟಲುಗಳನ್ನು ತುಂಬುತ್ತ ಬಂದರು.

ಎರಡನೆಯ ಸಲ ಬಟ್ಟಲನ್ನೆತ್ತಿಕೊಂಡು ಗೇಬು ಅಂದ :

"ಹೆಖ್ವೆಟ್, ನನಗೆ ಯಾರ ಜತೆಗೂ ಜಗಳಬೇಡ."

"ಜಗಳ ಕಾಯೋಕೆ ತೋಳ್ಬಲ ಬೇಕಪ್ಪ ಗೇಬು," ಎಂದು ಹೆಖ್ವೆಟ್ ಕಡ್ಡಿಯಂಥ ತನ್ನ ಎಡ ತೋಳನ್ನು ಎತ್ತಿ ಮಡಚಿ ತೋರಿಸಿದ.

ಇಬ್ಬರು ವಾದಕರೂ ತಂತಿಗಳನ್ನು ಮೀಟತೊಡಗಿದ್ದರು. ಧ್ವನಿ ಪುಷ್ಟಿ ಪಡೆದಿತ್ತು. ಮಾತುಗಳೂ ಬಲಪಡೆದು ತಾರಕಕ್ಕೇರಿದುವು.

ದಾಸದಾಸಿಯರ ಇರುವೆ ಸಾಲು ಬೆಳ್ಳಿಯ ತಾಟುಗಳನ್ನು ಹೊತ್ತು ತಂದಿತ್ತು. ಪೆರೋಗೂ ಪಟ್ಟದ ಮಹಿಷಿಗೂ ಬಂಗಾರದ ತಾಟುಗಳು, ಪುಟ್ಟ ಮೇಜುಗಳ ಮೇಲೆ ಅವನ್ನಿಟ್ಟರು.

ತನಗೆ ತುಸು ಮತ್ತೇರಿದಂತೆ ಅನಿಸಿತು ಮೆನೆಪ್‌ಟಾಗೆ. ಬಟಾನೊಡನೆ ಮಾತನಾಡಬೇಕೆಂಬ ಹಂಬಲ, ("ತಟಕ್ಕನೆ ತಿರುಗಿ 'ಬಟಾ' ಅಂತ ಕೂಗ್ಬೇಡ. ನಾನು ಅಲ್ಲಿರೋದಿಲ್ಲ") ದೃಷ್ಟಿ ನಿರ್ಲಜ್ಜವಾಗಿ ನೆಹನವೇಯ್ಯಳ ಬಲಮೊಲೆಯ ತೊಟ್ಟಿನತ್ತ ಸರಿಯುತ್ತಿತ್ತು. (ಇವಳು ನನ್ನನ್ನು ನೋಡ್ತಿರೋ ಹಾಗಿದೆಯಲ್ಲ. ನನ್ನನ್ನೋ ? ಗೇಬುವನ್ನೋ ? ಊಹೂಂ. ಗೇಬುವಿನ ದೃಷ್ಟಿ ದಾಸಿಯರ ಮೇಲಿದೆ.) ಸಂಧಿಸುವ ದೃಷ್ಟಿಗಳು (ಮುಗುಳು ನಗೆಯೋ? ಅಟ್ಟಹಾಸವೋ ? ವಿಕಾರವಾಗಿ ಕಾಣಿಸುತ್ತಿದೆಯಲ್ಲ ಅವಳ ಮುಖ ? ಕೆಂಪು ತುಟಿಗಳಿಗಿಂತ ಮೇಲು ಕಡುಗೆಂಪು, ಕಪ್ಪು ಬೆರೆತ ಮೊಲೆತೊಟ್ಟು. ಇವರೆಲ್ಲ ಹಾಲೂಡುವ ತಾಯಂದಿರು. ನಾವೆಲ್ಲ ಮಕ್ಕಳು.)

ಚಪ್ಪಾಳೆ ಬಡಿತ. ತಂತಿವಾದ್ಯದವನಿಗೆ ವಿರಾಮ. ಒಬ್ಬ ಜೊಂಡು ವಾದ್ಯ ಬಾರಿಸುತ್ತಿದ್ದ. ಇಬ್ಬರು ಸಂಗೀತಗಾರ್ತಿಯರು ಒಟ್ಟಿಗೆ ಚಪ್ಪಾಳೆ ತಟ್ಟುತ್ತಿದ್ದರು. ಸೇವಕ ಗಣ ಉಗಿಯೇಳುತ್ತಿದ್ದ ಕೆಂಡರೊಟ್ಟಿಗಳನ್ನು ಒಂದೊಂದು ತಟ್ಟೆಯಲ್ಲಿ ಒಂದೊಂದಾಗಿ ತರತೊಡಗಿತು. (ಚಪ್ಪಾಳೆಯನ್ನು ಅನುಸರಿಸಿ ನಡಿಗೆ. ಇವರದೇ ನರ್ತನ ?) ಬೇರೆ ಕೆಲವರು ಖಾದ್ಯ ಪದಾರ್ಥ ಗಳನ್ನೂ ಸಿಹಿ ಭಕ್ಷ್ಯಗಳನ್ನೂ ತಂದರು. ಮದಿರೆಯವರು ಕುಣಿಯುವವರೇ. ("ನಿಮಗೆ ಯಾವ ಮದ್ಯ ತರಲಿ ?" "ನಿಮಗೆ ಯಾವುದು ?" ಸೇವಕರ ಮುಖ್ಯಸ್ಥ ಒಬ್ಬ ಕೆಲಸಗಾರನಿಗೆ "ಜೋಕೆ ! ಮೈಮೇಲೆ ಚೆಲ್ಲೀಯೆ ! ನೀನೇ ಕುಡಿದೋನ ಹಾಗೆ ಮಾಡ್ತೀಯಲ್ಲ !")

ಚಪ್ಪಾಳೆ ತಾಳದ ಜೋರು. (ಇವನೆಲ್ಲಿಂದ ಬಂದ ? ಎರಡು ಮೊಳ ಎತ್ತರದ ಕುಳ್ಳ ! ತೀವ್ರಗತಿಯಲ್ಲಿ ವೃತ್ತಾಕಾರವಾಗಿ ಸುತ್ತುತ್ತ ಸುತ್ತುತ್ತ ಪೆರೋನ ಮೇಜನ್ನು ತಲಪಿ, ತಲೆಯನ್ನು ನೆಲಕ್ಕೆ ಮುಟ್ಟಿಸಿ, ಸಿಂಬಳ ಹುಳುವಿನಂತೆ ಮುರುಟಿ, ಮಹಾರಾಣಿಯ ಎದುರು ಉರುಳಿ, ರಾಜಕುವರ ರಾಜಕುವರಿ ಯರೆದುರು ತಲೆಯ ಮೇಲೆ ನಿಂತು ಕಾಲುಗಳನ್ನು ಝಾಡಿಸಿ ಮತ್ತೆ ಉಣ್ಣುತ್ತಿದ್ದವರೆದುರು ತಿರುಗುತ್ತ ತಿರುಗುತ್ತ, ಸಂಗೀತಗಾರ್ತಿಯರನ್ನು ತಲಪಿ, ಬೇರೆ ತಾಳಕ್ಕೆಅವನು ಸೂಚನೆ ನೀಡಿದ. ಮೊಣಕಾಲುಗಳನ್ನು ನೆಲದ ಮೇಲೂರಿ ವೇಗದ ಸುತ್ತಾಟ, ಉರುಳಾಟ, ನೆಗೆದಾಟ. ಹುಚ್ಚೆದ್ದ ಬುಗರಿಯ ನೃತ್ಯ. ಜೊಂಡುವಾದ್ಯದವನು ಆವೇಶದಿಂದ ಬಾರಿಸಿದ. (ಕುಳ್ಳನಿಂದ ಇವನು ಉತ್ತೇಜಿತನೊ? ಇವನಿಂದ ಕುಳ್ಳ ಉತ್ತೇಜಿತನೊ?) (ಬಗೆಬಗೆಯ ರೊಟ್ಟಿ. ಆ ನಮೂನೆ ಈ ನಮೂನೆ. ಒಂದು ತಾಟು ಆದ ಮೇಲೆ ಬೇರೊಂದು ತಾಟು....)

ಹೆಖ್ವೆಟ್ : "ಪಾರಿವಾಳದ ಸಾರು ನನಗೆ ಅಚ್ಚುಮೆಚ್ಚು."

ಗೇಬು : "ಎಳೇ ಬಾತು ನನಗಿಷ್ಟ. ನಿನಗೆ (ನಿಮಗೆ, ಕುಡಿತದ ತೊದಲು) ಮೆನೆಪ್‌ಟಾ ?"

ಮೆನೆಪ್‌ಟಾ : " ನೆಫಿಸ್—ಅಂದರೆ ನನ್ನ ಹೆಂಡತಿ—ಬೇಯಿಸಿ ಮಾಡಿದ ಮೀನಿನ ಉಪ್ಪೇರಿ ಬಹಳ ಇಷ್ಟ."

ಹೆಖ್ವೆಟ್ : "ಮೀನಿನ ಉಪ್ಪೇರಿ....ಬಾಲ್ಯದಲ್ಲಿ ಸಿರಿವಂತಿಕೆಯ ಮಹಾ ಪೂರ ಬರೋದಕ್ಕೆ ಮುಂಚೆ ತಿಂದದ್ದುಂಟು."

ಗೇಬು : "ನಾನು ತಿಂದಿಲ್ಲಪ್ಪ. ಮೀನಿನ ವಾಸನೆ ಮಾತ್ರ ನನಗೆ ಆಗೋದಿಲ್ಲ. ನೆಹನಗಂತೂ ವಾಕರಿಕೆ ಬರ್‍ತದೆ....ನೋಡು. ಆ ದಾಸಿಯ ಮುಖ ಮೀನಿನ ಮೂತಿಯ ಹಾಗಿಲ್ಲ ?"

ಹೆಪ್ನೆಟ್ : "ಮೂಗು ಮುಚ್ಕೊಂಡಿಯಾ ಮಗು ?"

ಗೇಬು : ಇಲ್ಲ, ತಾತ. ಈ ಮೀನು ಮುಟ್ಟಿನೋಡೋ ಹಾಗಿದೆ !"

ಹೆಪ್ನೆಟ್ : "ಲಫಂಗ ! ವಯಸ್ಸಾದೋರ ಮುಂದೆ ಹೀಗಾ ಮಾತಾಡೋದು ?"

ಗೇಬು : "ವಯಸ್ಸಾದೋರು ಮನಸ್ಸಿನಲ್ಲೇ ಮುಟ್ಟಿನೋಡ್ತಾರೆ; ನನ್ನಂಥೋರು ಮುಟ್ಟಿ ನೋಡೋ ಮಾತನ್ನಾಡ್ತಾರೆ; ನನಗಿಂತಲೂ ಚಿಕ್ಕೋರು ಮುಟ್ಟಿಯೇ ಬಿಡ್ತಾರೆ."

ಮೆನೆಪ್‌ಟಾ : "ತತ್ತ್ವಜ್ಞಾನ ! ಜ್ಞಾನ ದಿಗಂತ ವಿಸ್ತಾರವಾದ ಹಾಗೆ ಆ ದಿಗಂತದಲ್ಲಿ ತತ್ತ್ವಜ್ಞಾನದ ಚಂದ್ರ ಉದಿಸ್ತಾನೆ."

ಹೆಪ್ನೆಟ್ : "ಮಗು ! ನೀನು !...."

ಕುಳ್ಳನಿಂದ ಅಂತರ್ಲಾಗ, ಚಕ್ರಲಾಗ....

ಮೆನೆಪ್‌ಟಾ : "ಇನ್ನು ನರ್ತಕಿ ಬರ್‍ತಾಳಾ ?"

ಗೇಬು : "ಕುಸ್ತಿಯವರು, ಕುಸ್ತಿಯವರು."

ಡೊಳ್ಳು ಎಲ್ಲಿಂದ ಬಂತು ? ಯಾರೋ ಸಣ್ಣಗೆ ಬಾರಿಸುತ್ತಿದ್ದಾರೆ. ಧಿಗ್ ಧಿಗ್ ಧಿಗಧಿಗ....ಜೊಂಡುವಾದ್ಯವೂ ರಾಗವೆಳೆಯುತ್ತಿದೆ. ಜೋಡಿ ಚಪ್ಪಾಳೆ ಇಲ್ಲ.

ಕೊಬ್ಬಿದ ಕುಸ್ತಿಪಟುಗಳು ಇಬ್ಬರು. ಅರಸನಿಗೂ ಅರಸಿಗೂ ವಂದನೆ. ಪರಸ್ಪರ ಹತ್ತಿರ ಬಂದರು; ಒಬ್ಬರಿಂದೊಬ್ಬರು ದೂರ ಸರಿದರು. ಮುಷ್ಟಿಗಳಿಂದ ಒಬ್ಬರನ್ನೊಬ್ಬರು ಗುದ್ದಿದರು. ಅವರದೇ ಕೂಗು : "ಹಾಳಾಗು ಸೆತ್ !" "ಸೆತ್, ಹಾಳಾಗು !" "ಇಗೋ ಸಾಯಿ !" "ಸಾಯಿ ! ಸಾಯಿ !"

ಹೆಪ್ನೆಟ್ : "ಕೊಬ್ಬಿದ ಗೂಳಿಗಳು ! ಒಂದನ್ನೊಂದು ತಿವಿದರೇನು ? ಬಿಟ್ಟರೇನು ?"

ಗೇಬು : "ಬಕಿಲ. ಬಕಿಲ ನಿಮಗೆ ಗೊತ್ತಿಲ್ಲ ಮೆನೆಪ್‌ಟಾ ?"

ಮೆನೆಪ್‌ಟಾ : "ಓಹೊ. ಓಹೊ."

ಗೇಬು : "ಕುಸ್ತಿಯಲ್ಲಿ ನಿಸ್ಸೀಮ. ಈಗ ಮಾತ್ರ ಸ್ವಲ್ಪ ಕಷ್ಟ. ಎದುರಾಳೀನ ಒಂದೇ ಕಣ್ಣಲ್ಲಿ ನೋಡ್ಬೇಕು !"

ಹೆಖ್ವೆಟ್ : "ಬಿದ್ದ !"

ಒಬ್ಬ ಇನ್ನೊಬ್ಬನನ್ನು ಎತ್ತಿ ಕೆಡವಿದ. ಕೆಳಗೆ ಬಿದ್ದವನು ನಿಂತಿದ್ದವನ ಕಾಲುಹಿಡಿದು ಎಳೆದ. ಆತ ಜಗ್ಗಲಿಲ್ಲ. ಬಿದ್ದವನಿಗೆ ಮತ್ತೆ ಮತ್ತೆ ಗುದ್ದು. ಅವನು ಸೋತು ಅಂಗಾತ ಮಲಗಬೇಕು. ಅಷ್ಟರಲ್ಲೆ ಅದು ಹೇಗಾಯಿತೊ ? ನಿಂತಿದ್ದವನು ಬಿದ್ದ. ಉರುಳಾಟ ನೆಲದ ಮೇಲೆ. ಧಿಗ್ ಧಿಗ್ ಧಿಗ. ಜೊಂಡು ವಾದ್ಯದ ಘೋರ್ಗರೆತ. ಮುಂದೆ ಎರಡೇ ಕ್ಷಣಗಳಲ್ಲಿ ಒಬ್ಬ ಎದ್ದ, ಇನ್ನೊಬ್ಬ ಬಿದ್ದ. ಗೆದ್ದವನು ಯಾರು ? ಮೊದಲು ಬಿದ್ದವನೊ ? ನಿಂತಿದ್ದವನೊ ? ಕೆಲ ಕುಸ್ತಿ ಪ್ರಿಯರಿಗಷ್ಟೇ—ಹೆಚ್ಚಾಗಿ, ಅಲ್ಲಿದ್ದ ಪರಿಚಾರಕರಿಗೆ ಅದನ್ನು ತಿಳಿಯುವ ಕುತೂಹಲ. ಉಳಿದವರಿಗೆ ಬರಿಯ ರಂಜನೆ.

('ಅದೂ ಗೂಳಿ. ಇದೂ ಗೂಳಿ. ಯಾವುದು ಇದ್ದರೇನು ? ಯಾವುದು ಹೋದರೇನು ?')

('ಈ ಮುದುಕ— ಏನಪ್ಪ ಇವನ ಹೆಸರು—ಹೆಖ್—ಹೆಖ್ವೆಟ್. ಎಷ್ಟು ಚೆನ್ನಾಗಿ ಊಟ ಮಾಡ್ದ ! ಈ ಬಡಕಲು ಜೀವದ ಹೊಟ್ಟೇಲಿ ಇಷ್ಟು ಜಾಗ ಇತ್ತೆ ? ಆಶ್ಚರ್ಯ ! ಆಶ್ಚರ್ಯ !')

ಡೋಲು ಬಡೆಯುತ್ತಿಲ್ಲ. ಜೊಂಡುವಾದ್ಯದವನು ಉಸಿರಿನ ಕಸರತ್ತು ನಿಲ್ಲಿಸಿದ್ದಾನೆ. ಮತ್ತೆ ತಂತಿಗಳ ಮೊರೆತ. ನಿಧಾನವಾಗಿ ಆರಂಭವಾಗುತ್ತಿದೆ, ಜೋಡಿ ಚಪ್ಪಾಳೆ.

ಗೇಬು ಉದ್ಗರಿಸಿದ :
"ಆ್ಹ !"

ಇಬ್ಬರು ನರ್ತಕಿಯರು ಬಂದು ದೂರದಿಂದಲೇ ರಾಜನಿಗೂ ರಾಣಿಗೂ ನಮಿಸಿದರು. ಚಪ್ಪಾಳೆಯನ್ನು ಅನುಸರಿಸಿ ಹೆಜ್ಜೆ ಇಟ್ಟರು.

ಗೇಣುದ್ದದ ನಡುವಸ್ತ್ರ. ಹೆಣೆದ ನೀಳಕೇಶ. ಅಂಗಾಂಗಗಳಲ್ಲಿ ಯೌವನದ ಸೊಬಗು.

ಹಿಂದಕ್ಕೆ ಕಾಲು, ಮುಂದಕ್ಕೆ ಕಾಲು. ಮುಂದುಗಡೆಗೆ ಕಾಲನ್ನೆತ್ತಿದಾಗ ಮುಂಡ ಹಿಂದಕ್ಕೆ ಬಾಗುತ್ತಿತ್ತು. ತಲೆಗೂದಲ ತುದಿಯಲ್ಲಿ ಚಪ್ಪಟೆಯಾದ ದುಂಡಗಿನ ಭಾರದ ವಸ್ತು. ನರ್ತಿಸುವಾಗ ಕೇಶವನ್ನು ನೀಳವಾಗಿರಿಸಿ, ಲಯ ಬದ್ಧವಾಗಿ ಅದು ಓಲಾಡುತ್ತಿತ್ತು. ಅವಳಿ ಸೋದರಿಯರೇನೋ ಎನ್ನುವಂತೆ ಹೆಜ್ಜೆ ತಪ್ಪದೆ ಅವರು ಕುಣಿದರು.

(ಈ ಧ್ವನಿ ? ಆಲಾಪನೆ. ಬಂದನಲ್ಲ ಇವನೊಬ್ಬ ?)

ಗತಿ ಬದಲಾವಣೆ. ಹೆಚ್ಚಿನ ವೇಗ. ಈಗ ಪಾರ್ಶ್ವ ಚಲನೆ. ತೋಳು ಗಳಿಗೂ ಕೆಲಸ. ಕಣ್ಣುಹುಬ್ಬುಗಳಿಗೂ. ಸ್ತನಗಳು, ಅಧರಗಳು, ಜಘನ....

ಗೇಬು : "ರಕ್ತ ಬಿಸಿಯಾಗ್ತಿದೆಯಾ ತಾತ ?"

ಹೆಪ್ಪೆಟ್ : ಇಷ್ಟರಿಂದಲೇ ? ಇಲ್ಲ—ತಣ್ಣಗಿದ್ದೇನೆ !"

ಪೆರೋ ಏನನ್ನೂ ಹೆಚ್ಚಾಗಿ ಮುಟ್ಟುತ್ತಿಲ್ಲ. (ಅಥವಾ ಮುಟ್ಟಯೇ ಇಲ್ಲವೋ ? ಕೆಲವರಿಗೆ ಹೊಟ್ಟೆ ಭಾರ. ಕುಡಿತ ಇನ್ನು ಸಾಕು ಎನ್ನುವ ಸ್ಥಿತಿಯಲ್ಲಿ ಬೇರೆ ಕೆಲವರು. ಇನ್ನೊಂದು ಗುಟುಕು ಇನ್ನೊಂದು ಗುಟುಕು ಎಂದು ಪರಸ್ಪರ ಒತ್ತಾಯ.

ಉಣ್ಣುವವರಿಗೆ ಬೇಡವೆನಿಸಿದರೂ ಪರಿಚಾರಕ ಇರುವೆಗಳ ಪಂಧ್ಯ ಮುಗಿದಿಲ್ಲ.

ನರ್ತಕಿಯರು ಹಿಂದೆ ಹಿಂದಕ್ಕೆ ಸರಿದು ಮಾಯವಾದರು ; ಆಲಾಪನೆ ಗಂಟಲು ಮೌನ ತಳೆಯಿತು. ತಾಳ ತಟ್ಟುತ್ತಿದ್ದ ಕೈಗಳು ವಿಶ್ರಾಂತಿ ಪಡೆ ದುವು. ತಂತಿಗಳ ಹಿಮ್ಮೇಳನವಷ್ಟೇ ಉಳಿಯಿತು.

ಅಮಾತ್ಯ ಹತ್ತಿರವಿದ್ದ ಸರುಸದಸ್ಯನೊಬ್ಬನನ್ನು ಉದ್ದೇಶಿಸಿ ಕೇಳಿದ :

"ಚಳಿ ಅನಿಸ್ತಿದೆಯೆ ? ಅಗ್ಗಿಷ್ಟಿಕೆ ತರಿಸೋಣವಾ ?"

"ಬೇಡಿ, ಬೇಡಿ."

ಆದರೂ ಅಮಾತ್ಯ ಎದ್ದ. ಕೆಲ ಕ್ಷಣಗಳಲ್ಲೇ ಮರಳಿದ. ಜತೆಯ ಲ್ಲೊಬ್ಬ ಸೇವಕ. ಆತ ಹೊತ್ತು ತಂದುದು ಅಗ್ಗಿಷ್ಟಿಕೆಯನ್ನಲ್ಲ—ಒಂದು ಪುಟ್ಟ ಶವಪೆಟ್ಟಿಗೆಯನ್ನು. ಅದರೊಳಗೆ ಮರದಿಂದ ಮಾಡಿದ ಸಣ್ಣ ಶವ· ಲೇಪಿತ. ಅಮಾತ್ಯ ಅದನ್ನೆತ್ತಿ ಹಿಡಿದು, "ಎಲ್ಲರೂ ಇಲ್ಲಿ ನೋಡಿ," ಎಂದ.

ಉಣ್ಣುತ್ತಿದ್ದವರು, ಕುಡಿಯುತ್ತಿದ್ದವರು, ಸುಮ್ಮನೆ ಕುಳಿತಿದ್ದವರು ನೋಡಿದರು. ನಕ್ಕರು. ಗಟ್ಟಿಯಾಗಿ ಅವನೆಂದ : "ಔತಣದಲ್ಲಿ ಮೈಮರೆತಾಗಲೂ ಇದನ್ನು ಮರೀಬಾರದು !"

ಸೇವಕ ಅಮಾತ್ಯನಿಂದ ಶವಪೆಟ್ಟಿಗೆಯನ್ನು ಪಡೆದು, ದೂರ ಒಯ್ದ.

ಮೆನೆಪ್‌ಟಾ ಗೇಬುವನ್ನು ಕೇಳಿದ :

"ಔತಣ ಮುಗಿದಂತಾಯ್ತು ಅಲ್ಲವಾ ?"

ಗೇಬು ತಲೆಯಲ್ಲಾಡಿಸಿದ :

"ಇನ್ನು ಮಹತ್ವದ ಕಾರ್ಯಕ್ರಮ. ಶವಪೆಟ್ಟಿಗೆ ನೋಡಿ ಮನುಷ್ಯ ಹೆದರಿದರೆ ಹೇಗೆ ? ಬಂದ್ಲು ! ಪೆರೋನ ಅಚ್ಚುಮೆಚ್ಚಿನ ನರ್ತಕಿ !"

ಎಣ್ಣೆಗಪ್ಪು ಮೈಯ ಹೆಣ್ಣು. ಬೆಡಗಿ. ಬಳಕುವ ಮೈ. ನೀಳ ದೋಳುಗಳು. ಮೋಪಾದ ತೊಡೆಗಳು. ಶಿರಸ್ಸನ್ನು ಸುತ್ತುವರಿದಿರುವ ಹೂಮಾಲೆ. ವಕ್ಷಸ್ಥಲದಲ್ಲಿ ಪುಷ್ಪಹಾರ. ನಡು ಮುಚ್ಚಲು ಗೇಣು ಬಟ್ಟೆ. ಕೆನ್ನೆ ತುಟಿಗಳಿಗೆ ಕೆಂಪು. ಕೈ–ಪಾದಗಳಿಗೆ ಮದರಂಗಿ. ಎತ್ತಿಹಿಡಿದ ಎರಡು ಕೈಗಳಲ್ಲಿ ಚಿಟಿಕೆಗಳು. ಚಿಟಿಕೆ ಸದ್ದನ್ನು ಆಧರಿಸಿ ಚಲನೆ. ಚಲಿಸುತ್ತ ಪೆರೋಗೆ–ರಾಣಿಗೆ ನಮನ.

(ಮಹಾರಾಣಿ ಮೂತಿ ತಿರುವಿದಳು. ನೆಹನವೇಯ್ಗ್ಟೂ ಕರುಬು. ಸೇವಕರು ಮತ್ತೆ ಪಾನಪಾತ್ರೆಗಳೊಡನೆ ಬಂದರು. ಬೇಡವೆಂದವರೇ ಹೆಚ್ಚು ಜನ. ಮೆನೆಪ್‌ಟಾನ ಮೇಜಿನ ಮೇಲಿತ್ತು ಖಿವವ ತುಂಬಿದ ಒಂದು ಬಟ್ಟಲು, ('ಎಲಾ ! ಇದು ಯಾವಾಗ ಬಂತು ?') ಮೆನೆಪ್‌ಟಾ ಅದನ್ನೆತ್ತಿಕೊಂಡು ರುಚಿ ನೋಡಿ, ಗೇಬುವಿನತ್ತ ಹೊರಳಿ, "ಕೆಫ್ಟು ನೀರಾನೆ ಪ್ರಾಂತದಿಂದ ಖಿವವ ಕೊಳ್ತಾನೆ," ಎಂದ. ಬೆಚ್ಚಿ ಬಿದ್ದು ಗೇಬು ಉದ್ಗರಿಸಿದ : "ಕೆಫ್ಟು ! ನಿಮ್ಮೊಡನೆ ವಾಣಿಜ್ಯ ಸಂಬಂಧ ?" "ಹ್ಞ. ಹ್ಞ....")

ಸಂಗೀತಗಾರ್ತಿಯೊಬ್ಬಳು ಆಲಾಪನೆ ಆರಂಭಿಸಿದ್ದಳು. ತಂತೀವಾದ್ಯ ಗುಂಯ್‌ಗುಟ್ಟಿತು. ಆಲಾಪನೆಗೆ ನರ್ತಕಿಯ ಚಿಟಿಕೆ ಧ್ವನಿ ಹಿಮ್ಮೇಳವಾಯಿತು.

ಕುಣಿಯುವವಳು ಹಿಮುಬಾಲಿಕೆಯಾದಳು ಕಡ್ಡಿಯಾಗಿ ಮೆಲ್ಲನೆ ನೆಲಕ್ಕಿಳಿದಳು—ಥರಥರನೆ ಕಂಪಿಸುತ್ತ. ಸುತ್ತಲೂ ಮೌನಸ್ಥಾಪನೆ. ಆಲಾಪನೆ

ಯೊಂದರದೇ ರಾಜ್ಯ. ಶಾಖ ಸ್ಪರ್ಶಕ್ಕೆ ಹಿಮ ಕರುಗಿತು. ತಂತಿಗಳು ಕೂಗಾಡಿದುವು. ಚಿಟಿಕೆಗಳು ಗಡಚಿಕ್ಕಿದುವು. ಮೇಲೆದ್ದ ನರ್ತಕಿ ಕಾಲು ಗಳನ್ನು ಝಾಡಿಸಿದಳು. ಅಂಗಾಂಗಗಳೆಲ್ಲ, ಸ್ಪಂದಿಸಿದುವು. ಗತಿಯನ್ನು ತೀವ್ರ ಗೊಳಿಸಿ, ನೆಲದಗಲಕ್ಕೂ ಅಂಡಾಕಾರವಾಗಿ ಅವಳು ನರ್ತಿಸಿದಳು.

ನರ್ತನದೊಂದಿಗೆ ಸಂಗೀತಗಾರ್ತಿಯ ಹಾಡು ಭವನವನ್ನೆಲ್ಲ ಆವರಿಸಿತು :

" ಪ್ರೇಮದ ಮಧು ಅರಸನ ಮಗಳು.
ಕೆನ್ನೆಯ ಗುಲಾಬಿ
ಬೆಣಚುಕಲ್ಲಿನ ಬಣ್ಣದ ಹಾಗೆ ಬಳುಕುವ ತೋಳ್ಗಳು.
ಮದರಂಗಿಯ ಹಾಗೆ
ಒಲವು ಮರಳಿದೆ ದೊರೆಯ ಹೃದಯಕೆ—
ಪೀಠದ ಎದುರಲಿ ರೂಪಸಿ ನಿಲ್ಲೆ...."

ಸಾಲುಗಳ ಪುನರುಚ್ಚಾರ. ಕುಣಿತದ ಪುನರಾವರ್ತನೆ. ಕೊನೆಗೊಮ್ಮೆ ಪೀಠದ ಎದುರಲ್ಲಿ ರೂಪಸಿ ನಿಂತಳು.

ಎಡಗೈಯಲ್ಲಿ ಆಂಕ್‌ಅನ್ನು ಪೆರೋ ಆಡಿಸಿದ. ಬಯಕೆ ತುಂಬಿದ ಕಣ್ಣು ಗಳಿಂದ ನರ್ತಕಿಯನ್ನು ನೋಡಿದ. (ಮಗ್ಗುಲಲ್ಲಿ ನಡೆಯುತ್ತಿರುವುದರ ಬಗ್ಗೆ ತನಗೆ ನಿರ್ಲಕ್ಷ್ಯ ಎನ್ನುವಂತೆ ಮಹಾರಾಣಿ ತನ್ನ ಬಳಿಗೆ ಸೇವಕರ ಮುಖ್ಯಸ್ಥ ನೊಬ್ಬನನ್ನು ಕರೆದು, "ಉಡುಗೊರೆಗಳು ಸಿದ್ಧವಾಗಿವೆಯೆ ?".... " ಅಮಾತ್ಯ ರನ್ನೂ ಸೇರಿಸಿ ಒಟ್ಟು ಹದಿನೇಳು ಬೇಕು.''...."ಹದಿನಾಲ್ಕೇ ಇದೆಯಾ ? ಮೂರ್ಖ ! ಗೇಬುವಿನ ಮೂವರು ಹುಡುಗೀರಿಗೆ ? ಅವೇನು ತಪ್ಪು ಮಾಡಿವೆ ?" —ಎಂದೆಲ್ಲ ನುಡಿದಳು. ಕೊನೆಯ ಮಾತನ್ನಾಡಿ ನೆಹನವೇಯ್ಟ್ಳ ಕಡೆಗೆ ಕಡೆನೋಟ ಬೀರಿದಳು.) ಪೆರೋ ಕೈಗಳನ್ನು ತನ್ನ ಕೊರಳಿನ ಹಿಂದಕ್ಕೆ ಒಯ್ದು ಕೊಂಡಿಬಿಚ್ಚಿ, ಒಂದು ಹಾರವನ್ನು ತೆಗೆದು, ಕೊಂಡಿ ಬಿಗಿಗೊಳಿಸಿ, ತನ್ನೆಡೆಗೆ ಸರಿದ ನರ್ತಕಿಯ ಕೈಗಿತ್ತ.

ಆಕೆ ಕೃತಜ್ಞತಾಪೂರ್ವಕವಾಗಿ ಪೆರೋಗೆ ಬಾಗಿ ವಂದಿಸಿದಳು. ಬಳಿಕ ಸೆಟೆದು ನಿಂತಳು. ಬಿರಿದ ತುಟಿಗಳು ಮುಟ್ಟದೆಯೇ ಮಹಾಪ್ರಭುವನ್ನು ಮುದ್ದಿಸಿದುವು. ಆಕೆ ಅಲ್ಲಿಂದ ಹೊರಳಿ (ಅರಸ–ಅರಸಿಗೆ ಬೆನ್ನು), ಮಹಾ ರಾಣಿಗೊಪ್ಪುವ ಗಾಂಭೀರ್ಯದಿಂದ ಮಂದಗಮನೆಯಾಗಿ ನಡೆದಳು.

ಅಮಾತ್ಯನ ಸೂಚನೆಯಂತೆ ಹಾಡುಗಾತಿ, ಹಾಡುಗಾರ, ವಾದಕರು, ಕುಳ್ಳ, ಕುಸ್ತಿಯವರು, ಜೋಡಿನರ್ತಕಿಯರು—ಇವರೆಲ್ಲ ಪೆರೋನೆದುರು ಕಾಣಿಸಿಕೊಂಡರು. ತಂದೆಯ ಮಗ್ಗುಲಿಗೆ ಬಂದು ನಿಂತ ಹಿರಿಯ ರಾಜಕುವರಿ ಸೇವಕರು ತಂದ ತಟ್ಟೆಗಳಿಂದ ಪುರಸ್ಕಾರಗಳನ್ನು ಅವರಿಗಿತ್ತಳು. (ಸ್ತ್ರೀಯರಿಗೆ ಕರ್ಣಕುಂಡಲ. ಗಂಡಸರಿಗೆ ಬಂಗಾರದ ಉಂಗುರ.)

ಗೇಬುವೆಂದ :

" ಇನ್ನು ನಮಗೆ."

ವಾದಕರು ತಂತೀವಾದ್ಯಗಳನ್ನು ನುಡಿಸತೊಡಗಿದರು. ಸ್ವರದ ಅಲೆಗಳೆದ್ದುವು.

ದಾಸದಾಸಿಯರು ಬೆಳ್ಳಿಯ ತಟ್ಟೆಗಳಲ್ಲಿ ಉಡುಗೊರೆಗಳನ್ನು ತಂದರು. ದಾಸಿಯರು ತಂದುದು ನೆಹನವೇಯ್ಟ್ ಮತ್ತು ಅವಳ ಪುತ್ರಿಯರಿಗೆ—ದುಕೂಲ ಹಾಗೂ ಶಿರೋಪಟ್ಟ, ಮಹಾರಾಣಿಯಿಂದ ವಿತರಣೆ.

ಎಳೆಯ ರಾಜಕುಮಾರ ಅಮಾತ್ಯರದನ್ನು ಒಪ್ಪಿಸಿದ–ಬೆಲೆಬಾಳುವ ಎದೆಪಟ್ಟಿಕೆ. (ಹೆಖ್ವೆಟ್‌ನ ಅಸೂಯೆಯ ಕಣ್ಣು ಅದರ ಮೇಲೆ.)

ಹಿಂಬಾಲಿಸಿ ಬಂದ ಅಮಾತ್ಯನೊಂದಿಗೆ ರಾಜಕುಮಾರ ಹೆಖ್ವೆಟ್‌ನ ಬಳಿಗೆ ನಡೆದ. (ಇಂಥದು ಇಂಥವರಿಗೆ ಎಂದು ಮೊದಲೇ ಗೊತ್ತು ಮಾಡಿದ್ದ ತಟ್ಟೆ.) ಐದೆಳೆಗಳ ಒಂದು ಸರ, ಎದ್ದು ನಿಂತ ವೃದ್ಧನಿಗೆ.

ಗೇಬು ತಗ್ಗಿದ ಧ್ವನಿಯಲ್ಲಿ ಕುಟುಕಿದ :

" ಇವನ ಎದೆಗೂಡು ಮುಚ್ಚೋದಕ್ಕೆ ಎಷ್ಟು ಹಾರಗಳಿದ್ದರೂ ಸಾಲದು."

ಮೆನೆಪ್‌ಟಾ ಎದ್ದು, ಮಣಿಗಂಟುಗಳಿಗೆ ಬಿಗಿಯುವ ರತ್ನಖಚಿತ ಪಟ್ಟಿಕೆಗಳನ್ನು ಸ್ವೀಕರಿಸಿದ.

ಏಳುತ್ತ ಗೇಬು ಅಂದ :

" ನಾಯಕ, ನಿಮಗೆ ಪ್ರೇಮ ಬಂಧನ."

ಗೇಬುಗೆ ರತ್ನಖಚಿತ ಸೊಂಟಪಟ್ಟಿ.

" ಇನ್ನು ನೀನು ಹೊಟ್ಟೆ ಬೆಳೆಸೋ ಹಾಗಿಲ್ಲ ಮಗು," ಎಂದು ಹೆಖ್ವೆಟ್ ನಗೆಯಾಡಿದ. ಸರು ಸದಸ್ಯರೆಲ್ಲ ಉಡುಗೊರೆಗಳನ್ನು ಸ್ವೀಕರಿಸಲು ರಾಜಕುಮಾರನಲ್ಲಿಗೆ ಬರತೊಡಗಿದಂತೆ ಪೆರೋ ಎದ್ದು ಮಹಾರಾಣಿ ಮತ್ತು ಪುತ್ರಿ

ಯರನ್ನೂ ನೆಹನವೇಯ್ಟ್ ಮತ್ತು ಬಾಲಿಕೆಯರನ್ನೂ ಕರೆದುಕೊಂಡು ಒಳಗೆ ಹೊರಟ.

ಸರುಸದಸ್ಯರಿಗೆ ರಾಜಕುಮಾರ ಉಡುಗೊರೆಗಳನ್ನು ನೀಡುತ್ತಿದ್ದಂತೆ, (ಒಂದೇ ತೆರ ಸೆಣಬಿನ ಅತಿ ನುಣುಪಾದ ಬಟ್ಟೆ. ಎರಡೆಳೆಯ ಬಂಗಾರದ ಸರ.) ಅಮಾತ್ಯ ಹೆಪ್ವೆಟ್‌ನನ್ನು ಬದಿಗೆ ಕರೆದ.

" ಹಾಗಾದರೆ ನಾಳೆ—"

ಹೆಪ್ವೆಟ್ ಪ್ರತಿಭಟಿಸಿದ :

" ನಾಳೆ ! ಔತಣ ಆದ್ಮೇಲೆ ಒಂದು ದಿವಸದ ವಿಶ್ರಾಂತಿಯಾದರೂ ಬೇಡವೆ ?"

" ಸರಿ, ಸರಿ ! ನಾಡದು. ನಾವೆ ಸಜ್ಜುಗೊಳಿಸೋದಕ್ಕೆ ಆದೇಶ ನೀಡ್ತೇನೆ....ಆ ಮೆನೆಪ್‌ಟಾನನ್ನು ಈ ಕಡೆ ಕಳಿಸಿ."

" ಅಮಾತ್ಯರು ಕರೀತಿದ್ದಾರೆ," ಎಂದು ಹೆಪ್ವೆಟ್ ತಿಳಿಸಿದಾಗ ಮೆನೆಪ್‌ಟಾ, ಹೆಪ್ವೆಟ್‌ನಂತೆ ತಾನೂ ಉಡುಗೊರೆ ತಟ್ಟೆಯನ್ನು ಮೇಜಿನ ಮೇಲಿಯೇ ಬಿಟ್ಟು, ಆಮೆರಬ್‌ನನ್ನು ಸಮೀಪಿಸಿದ. ಸಂಜೆ ಅಮಾತ್ಯನ ಮುಖದ ಮೇಲೆ ಕಾಣಿಸುತ್ತಿದ್ದ ದಣಿವಿನ ಛಾಯೆ ಈಗ ಇರಲಿಲ್ಲ. ಅಲ್ಲಿ ಸಂತೃಪ್ತಿಯ ಭಾವವಿತ್ತು. ಆತ್ಮೀಯ ಧ್ವನಿಯಲ್ಲಿ ಆತನೆಂದ :

" ಮೆನೆಪ್‌ಟಾ ಇವತ್ತು ಸರು ಅಧಿವೇಶನ ನಡೀತು. ಮಹಾ ಅರ್ಚಕರ ಜತೆ ಮಾತನಾಡಿ ಅವರನ್ನು ಕರಕೊಂಡು ಬರೋದಕ್ಕೆ ನಾಡದು ಹೆಪ್ವೆಟ್ ಹೋಗ್ತಾರೆ. ಇನ್ನು ಎರಡು ಮೂರು ವಾರಗಳಲ್ಲೇ ಸೆಡ್ ಉತ್ಸವ. ಅದರಲ್ಲಿ ಪಾಲ್ಗೊಳ್ಳುವ ಭಾಗ್ಯ ಎಲ್ಲರಿಗೂ ಲಭ್ಯವಿಲ್ಲ. ನೀವು ರಾಜಧಾನಿಗೆ ಅತಿಥಿಯಾಗಿ ಬಂದ ಮೇಲೆ ಶುಭವನ್ನೇ ಕಾಣ್ತಿದ್ದೇವೆ."

" ಅಮಾತ್ಯವರ್ಯ, ನಾನು ಯಾವಾಗಲೂ ಶುಭವನ್ನೇ ಇದಿರು ನೋಡ್ತೇನೆ; ಅದನ್ನೇ ಹಾರೈಸ್ತೇನೆ."

" ಸರಿ, ಮೆನೆಪ್‌ಟಾ. ದೇವರ ರಕ್ಷೆ ನಿಮಗಿರಲಿ."

ನಾಯಕ ತುಸು ತಲೆಬಾಗಿಸಿ ಅಲ್ಲಿಂದ ಹೊರಟ. ಗೇಬು ಕರೆದು ನುಡಿದ :

" ಮೆನೆಪ್‌ಟಾ, ನಿಮ್ಮ ಉಡುಗೊರೆ."

ನಾಯಕ ಮುಗುಳುನಕ್ಕು ತಟ್ಟೆಯತ್ತ ನೋಡಿದ. ಎಲ್ಲರೂ ಹೊರಡು

ವವರೇ. ರಾಜಕುಮಾರ ನಿರ್ಗಮಿಸಿದ್ದ. ಪಾಕಶಾಲೆಯ ಆಚೆಗೆ ಪ್ರತಿಷ್ಠಿತರ ಬೋಯಿಗಳೂ ನೂರಾರು ಕೆಲಸಗಾರರೂ ಆಗಲೇ ತಿಂದು, ಕುಡಿದು ತಮ್ಮ ದುಡಿಮೆಗೆ ಸಿದ್ಧವಾಗಿದ್ದರು. ದೇವ ಮಂದಿರದ ಪ್ರಾಂಗಣದಲ್ಲೂ ಔತಣ ಮುಗಿದಿತ್ತು. ಸತ್ಕಾರ ಭವನದಲ್ಲಿದ್ದ ಪರಿಚಾರಕರಷ್ಟೇ ಈಗ ಬರಿಹೊಟ್ಟೆಯ ವರು. ಅವರಿಗೆ ಅವಸರ.

ಬಟಾ, ಔಟ, ಬೆಕ್ ಪ್ರವೇಶದ್ವಾರದಲ್ಲಿ ಮುಖ ತೋರಿಸಿದರು. ನಾಯಕ ಕೈಸನ್ನೆ ಮಾಡಿದೊಡನೆ ಒಳಗೆ ಬಂದರು ; ಉಡುಗೊರೆಯ ತಟ್ಟೆಯನ್ನು ಎತ್ತಿ ಕೊಂಡರು.

ಗೇಬು ವತ್ತು ಹೆಪ್ಪಿಟ್ ಭವನದ ಒಂದು ಮೂಲೆಯಲ್ಲಿ ಪಿಸುದನಿಯ ಸಂಭಾಷಣೆ ನಡೆಸಿದ್ದರು.

ಮೆನೆಪ್‌ಟಾ ಪರಿವಾರದೊಡನೆ ಹೊರಕ್ಕಿಳಿದು ಅತಿ ಥಿಗೃಹದೆಡೆಗೆ ನಡೆದ ಅಲ್ಲಿ ಅರಮನೆಯ ಔತಣದ ಸವಿನೋಡಿದ್ದ ಅಂಬಿಗರೂ ಇದ್ದರು.

ಬಟಾನಿಗೆ ನಾಯಕ ಅಂದ :

" ನಾಡದು, ಹೆಪ್ಪಿಟ್ ಅಂತ ಅತ್ಯಂತ ಹಿರಿಯ ಸಲಹೆಗಾರ ಮಹಾ ಅರ್ಚಕನ ಭೇಟಿಗೆ ಹೋಗ್ತಾರೆ....ಅಮಾತ್ಯ ಅಂದರು : ಇನ್ನು ಎರಡು ಮೂರು ವಾರಗಳಲ್ಲೇ ಸೆಡ್ ಉತ್ಸವ ಅಂತ...."

ಬಟಾ ಕೇಳಿದ :

" ಎರಡು ಮೂರು ವಾರ ! ಊರಿಗೊಮ್ಮೆ ಹೋಗಿ ಬರೋಣವಾ ?"

" ಔಟ, ಬೆಕ್, ನಾನು ಇಲ್ಲಿರ್ತೀವೆ, ಬಟಾ. ನೀನು ಊರಿಗೆ ಹೋಗಿ, ನಾಲ್ಕು ದಿನ ಇದ್ದು ವಾಪಸು ಬಂದ್ಬಿಡು. ಸೆಡ್ ಉತ್ಸವ ಮುಗಿದ ತಕ್ಷಣ ಇಲ್ಲಿಂದ ಹೊರಟುಬಿಡೋಣ."

" ಆಗಲಿ ಅಣ್ಣ. ನಾಳೆಯೇ ಹೊರಡಲಾ ?"

" ನಾಡದು. ಹೆಪ್ಪಿಟ್ ಈ ಕಡೆಗೆ ಹೊರಟಾಗ ನೀನು ಆ ಕಡೆಗೆ...."

" ಹೂಂ ಅಣ್ಣ. ನಾಡದು ಬೆಳಗ್ಗೆ."

೮

ಅಂತೂ ಯಾವುದೋ ಗೋಡೆಯ ಕಿವಿ ಚುರುಕಾಗಿತ್ತು. ಔತಣ ಆರಂಭವಾಗುವುದಕ್ಕೆ ಮೊದಲೇ, ಸಭಾ ಅಧಿವೇಶನದ ತೀರ್ಮಾನ ಏನೆಂಬುದನ್ನು ಸೆನೆಬ್ ಅರಿತಿದ್ದ. ಆ ಗೋಡೆಯಿಂದ ಅರಮನೆಯ ದೇವಮಂದಿರಕ್ಕೆ ಸ್ವಲ್ಪವೇ ದೂರ. ಇರುಳಿನಲ್ಲಿ ಇನೇನಿ ಸದ್ದಿಲ್ಲದೆ ಹೊರಬಿದ್ದು (ಅದನ್ನು ಗಮನಿಸಿದವನು ಮೆನ್ನ ಒಬ್ಬನೇ) ಮಹಾಮಂದಿರಕ್ಕೆ ಹೋದ. ಅಲ್ಲಿ ಮಹಾ ಅರ್ಚಕನಿಗೆ ಮುಟ್ಟಿಸಬೇಕಾದ ವರದಿ ಸಿದ್ಧವಾಯಿತು. ಮಧ್ಯರಾತ್ರಿಯ ಬಳಿಕ ಮೆಂಫಿಸ್ ಬಿಡಲು ಅಣಿಯಾಗಿದ್ದ ಹೇರು ದೋಣಿಗಳು ಮೂರು ನಾಲ್ಕು ಇದ್ದುವು. 'ಅಸ್ವಸ್ಥ ಸಂಬಂಧಿಕನನ್ನು ನೋಡಲು' ಆನ್ ನಗರಕ್ಕೆ ಹೊರಟಿದ್ದ ಒಬ್ಬ ಯುವಕ ದೇವಸೇವಕನಿಗೆ, ಅವುಗಳಲ್ಲೊಂದು ದೋಣಿ ಆಸರೆ ನೀಡಿತು.

ಜಾಗೃತಾವಸ್ಥೆಯಲ್ಲಿದ್ದಿದ್ದರೆ ಪೆರೋನ ಬೇಹುಗಾರರು ಅವೇಳೆಯಲ್ಲಿ ಪ್ರಯಾಣ ಹೊರಟ ದೇವಸೇವಕನನ್ನು ಮಾತನಾಡಿಸುತ್ತಿದ್ದರು. ಆದರೆ, ದೋಣಿಕಟ್ಟೆಯ ಗೂಢಚಾರರಿಗೆ ಆಗ ಗಾಢನಿದ್ದೆ.

ದೇಶದಲ್ಲಿ ಪ್ರಜೆಗಳು ಏನು ಆಡುತ್ತಾರೆ ಏನು ಮಾಡುತ್ತಾರೆ ಎಂಬುದನ್ನೆಲ್ಲ ಆಡಳಿತಕ್ಕೆ ತಿಳಿಸುವುದು ಅರ್ಚಕ ಸಮುದಾಯದ ವಿಶೇಷ ಹೊಣೆ. ಗೂಢಚರ್ಯೆ ಅವರದೇ ಗುತ್ತಿಗೆ. ಅದು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದ ಏರ್ಪಾಟು. ಅಂಥ ಬೇಹುಗಾರರ ಬಗೆಗೇ ಪೆರೋ ಈಗ ಎಚ್ಚರ ವಹಿಸಬೇಕಾಗಿ ಬಂದುದು ಹೊಸ ಬೆಳವಣಿಗೆ. ಇದು ಎಲ್ಲಿಯಾದರೂ ಗೊತ್ತಾದರೆ 'ಹೀಗೂ ಉಂಟೆ ?' ಎಂದು ಪ್ರಜಾಸ್ತೋಮ ಮೂಗಿನ ಮೇಲೆ ಬೆರಳಿಡುವ ಪರಿಸ್ಥಿತಿ.

ಬೆಳಗಾಯಿತು. ಸೆನೆಬ್ ಅತಿಥಿಗೃಹಕ್ಕೆ ಭೇಟಿ ಇತ್ತ. "ಅಮಾತ್ಯ ಭವನದಲ್ಲಿ ಹಾಜರಾಗೋದಕ್ಕೆ ಮುಂಚೆ ನಿಮ್ಮನ್ನು ನೋಡ್ಕೊಂಡು ಹೋಗೋಣಾಂತ ಬಂದೆ." ಎಂದ.

ಬಟಾ ಕೇಳಿದ :

"ಎಲ್ಲಿ, ನಿನ್ನೆ ರಾತ್ರಿ ನೀವು ಕಾಣಿಸಲಿಲ್ಲ...."

" ಹೊಟ್ಟೆ ತುಂಬಿತು, ನಿದ್ದೆ ಬಂತು....ಹೆಹ್ಹೆ....ಈಗ ಬರ್‍ತಾ ದಾರೀಲಿ ನನಗೆ ಸಿಕ್ಕಿದ ಎಲ್ಲ ಪರಿಚಾರಕರ ಬಾಯಲ್ಲೂ ನಾಯಕರದೇ ಪ್ರಶಂಸೆ. (ಮೆನೆಪ್‌ಟಾನತ್ತ ನೋಡಿ) ಔತಣ ಅಂದರೆ ತೂಕ ತಪ್ಪಿದ ಮಾತು ಜಾಸ್ತಿ. ಆದರೆ ನೀವು ತುಂಬ ಗಾಂಭೀರ್ಯದಿಂದ ನಡೆದುಕೊಂಡಿರಂತೆ."

ನಾಯಕ ಮುಗುಳುನಕ್ಕ.

ಪಿಸುದನಿಯಲ್ಲಿ ಸೆನೆಬ್ ನುಡಿದ :

" ಸರು ಅಧಿವೇಶನದಲ್ಲಿ ಅಮಾತ್ಯರು ಮಹಾ ಅರ್ಚಕರ ವರ್ತನೆ ವಿಷಯ ದಲ್ಲಿ ದಿಗ್ಭ್ರಮೆ ವ್ಯಕ್ತಪಡಿಸಿದರಂತೆ. ಹೇಪಾಟ್‌ರಿಗೆ ಗೊತ್ತಾದರೆ ಕಿಡಿಕಿಡಿ ಯಾಗ್ತಾರೆ. ಸರು ಸದಸ್ಯ ಹಿರಿಯ ಸಲಹೆಗಾರ ಹೆಶ್ಪೆಟ್ ಅವರ ಜತೆ ಮಾತ ನಾಡೋದಕ್ಕೆ ಹೋಗ್ತಿದ್ದಾರೆ."

" ರಾಯಭಾರ ?"

—ಮೆನೆಪ್‌ಟಾ ಆಡಿದ ಒಂದು ಪದ.

" ಹ್ಞ. ಹ್ಞ."

ಬಟಾ ಕೇಳಿದ :

" ಲಿಪಿಕಾರಯ್ಯ, ಆದರೆ ಒಂದು ವಿಷಯ ನಿಮಗೆ ಗೊತ್ತಾಗಿದೆಯೋ ಇಲ್ಲವೋ ?"

" ಯಾವುದು ?"

" ನಾನು ನೀರಾನೆ ಪ್ರಾಂತಕ್ಕೆ ಹೊರಟಿದ್ದೇನೆ ಅನ್ನೋದು ?"

" ಹೌದಾ ? ಹಾಗಾದರೆ ನಾಯಕರು ಮತ್ತು ಅಂಗರಕ್ಷಕರು ಮಾತ್ರ ಇಲ್ಲಿರ್‍ತಾರೆ. ಇವತ್ತು ಹೀಗೆ. ನಾಳೆ ಹೇಗೋ. ನೀವು ಈವರೆಗೆ ನನಗೇ ನಾದರೂ ಉಡುಗೊರೆ ಕೊಟ್ಟಿದ್ದೀರಾ ? ನಾನು ಕೇಳಿದ್ದೇನಾ ? ನನ್ನದು ಫಲಾ ಪೇಕ್ಷೆ ಇಲ್ಲದ ಗೆಳೆತನ. ನಾನು ನಿಮ್ಮ ಹಿತಚಿಂತಕ."

" ನಮ್ಮದು ಋಜುಮಾರ್ಗ. ನಮ್ಮ ಮಿತ್ರರನ್ನು ನಾವು ಯಾವತ್ತೂ ಮರೆಯೋದಿಲ್ಲ. ಅಲ್ಲವೇನಣ್ಣ ? "

" ನಿಜ. ನಿಜ."

—ಮೆನೆಪ್‌ಟಾ ಪುಷ್ಟೀಕರಿಸಿದ.

ಅಮಾತ್ಯನ ಆಗಮನ ಸೂಚಕ ಜಾಗಟೆ ಸದ್ದು ಕೇಳಿಸಿತು.

ಸೆನೆಬ್ ಉದ್ಗರಿಸಿದ :

" ಓ ದೇವರೇ ! ನಮ್ಮ ಅಮಾತ್ಯರಿಗೆ ದಣಿವು ಅನ್ನೋದೇ ಇಲ್ಲ. ನಿನ್ನೆ ಅಷ್ಟೊಂದು ದುಡಿದರೂ ಇವತ್ತು ನಿತ್ಯದ ಹಾಗೆ ಬಂದೇ ಬಿಟ್ಟಿದ್ದಾರೆ. ನಾನು ಬರ್‍ತೇನೆ...."

ದಡದಡನೆ ಸೆನೆಬ್ ಓಡಿದ.

ಪೆಟಾರಿಯಿಂದ ಕಸೂತಿ ಹಾಕಿದ ಒಂದು ಚೀಲವನ್ನೂ ಸೊಂಟಪಟ್ಟಿಯನ್ನೂ ಹೊರಕ್ಕೆ ತೆಗೆಯುತ್ತ ಬಟಾ ಅಂದ :

" ಐಗುಪ್ತದ ಆಡಳಿತ ಭಾರವೆಲ್ಲ ಇವನ ಮೇಲೆಯೇ ಇದೆ ಅಂದ್ಕೋಬೇಕು ಯಾರಾದರೊ !"

" ಹುಂ. ಏನೋ ಕೊಳ್ಳೋದಕ್ಕೆ ನೀವು ಹೊರಟ ಹಾಗೆ ತೋರ್‍ತದೆ," ಎಂದ ಮೆನೆಪ್‌ಟಾ.

" ಕೋಪಿಸ್ಕೋಬೇಡ. ಏನು ಅಂತ ಈಗಲೇ ನಾವು ಹೇಳೋದಿಲ್ಲ !"

*     *     *     *

....ಬಟಾ ವೇಗವಾಗಿ ನಡೆದು ತಲಪಿದ್ದು ಅದೃಷ್ಟದ ಬೀದಿಯನ್ನು. ದೇವತಾ ಮೂರ್ತಿಗಳನ್ನುಮಾರುವ ಒಂದು ಅಂಗಡಿಯನ್ನುಅಲ್ಲಿ ಅವನು ಕಂಡಿದ್ದ. ಅಂಗಡಿ ಯೇನಾದರೂ ಮುಚ್ಚಿದ್ದರೆ, ತುಸು ದೂರದಲ್ಲಿದ್ದ ಮಹಾಮಂದಿರದ ಮುಂದಿನ ಅಂಗಡಿ ಸಾಲಿಗೆ ಹೋಗಬೇಕು. ಆದರ ಅಗತ್ಯ ಬೀಳಲಿಲ್ಲ. ಅಂಗಡಿ ತೆರೆದಿತ್ತು.

ಅಂಗಡಿಕಾರ ಕೇಳಿದ :

" ಯಾವ ಮೂರ್ತಿ ಬೇಕು ?"

" ಅಮನ್ ಮತ್ತು ಥೊಎರಿಸ್."

ಹೊರಗೆ ಕಿಟಕಿಯಲ್ಲಿ ಪ್ರದರ್ಶನಕ್ಕೆಂದು ಇರಿಸಿದ್ದ ಕೆಲವು ಮೂರ್ತಿಗಳಿದ್ದವು. ' ಇವನ್ನು ಎಲ್ಲೋ ನೋಡಿದ್ದೇನೆ' ಎನಿಸಿತು ಬಟಾನಿಗೆ. ಮರುಕ್ಷಣವೇ, 'ಎಲ್ಲೋ—ನನ್ನ ತಲೆ ! ಸ್ನೊಫ್ರು ಮಾಡಿದ್ದಲ್ಲವೆ ಇವು ?" ಎಂದುಕೊಂಡ.

ಬಾಗಿಲಿನ ಒಳಗೆ ಕತ್ತಲು. ಅಲ್ಲಿ ಅಮನ್ ಮತ್ತು ಥೊಎರಿಸ್ ಮೂರ್ತಿಗಳನ್ನು ಹುಡುಕುತ್ತ ಬಟಾನನ್ನು ಉದ್ದೇಶಿಸಿ ಅಂಗಡಿಕಾರ ಹೇಳಿದ :

"ಮಹಾಮಂದಿರದ ಎದುರಿಗೆ ಇರೋ ಮೂರ್ತಿಗಳ ಅಂಗಡಿಯೂ ನಮ್ಮದ್ದೇ. ನನ್ನ ತಮ್ಮ ನೋಡ್ಕೊಳ್ತಿದಾನೆ. ಇದು ಉಗ್ರಾಣ. ಅಲ್ಲಿ ಮುಗಿದ ಹಾಗೆ ಇಲ್ಲಿಂದ ತಗೊಂಡು ಹೋಗ್ತಾನೆ. ಮೂರ್ತಿ ಮಾರಾಟ ಅಂದರೆ ದೇವರ ಸೇವೆ. ಅಲ್ಲಿ ಇಲ್ಲಿ ಎರಡೂ ಕಡೆ ಮೌಲ್ಯ ಒಂದೇ; ಅಮುನ್ ಸಿಗ್ತು. ಥೊಎರಿಸ್ ಇಲ್ಲವಲ್ಲ. ನನ್ನ ತಮ್ಮ ಎತ್ಕೊಂಡು ಹೋಗಿದ್ದಾನೇಂತ ತೋರ್‍ತದೆ...."

ಬಟಾ ಕಿಟಕಿಯತ್ತ ನೋಡಿದ. ಅಲ್ಲಿತ್ತು ಥೊಎರಿಸ್ ಮೂರ್ತಿ. ನೀರಾನೆ ಮುಖದ ಸ್ತ್ರೀ. ಬಸಿರಿನ ರಕ್ಷಣೆಗೂ ಸುಖಪ್ರಸವಕ್ಕೂ ಹೊಣೆಗಾರ್ತಿ.

"ಇಲ್ಲಿ ಒಂದಿದೆ. ಇದನ್ನು ಕೊಡಿ."

"ಪ್ರದರ್ಶನಕ್ಕೇಂತ ಇಟ್ಟಿದ್ದು. ಆಗಲಿ. ಕೊಡ್ತೇನೆ. ಈ ಮೂರ್ತಿಗಳು ಇಲ್ಲಿಯವಲ್ಲ. ದೂರ ದೇಶದಿಂದ ತರಿಸಿದ್ದು, ಪ್ರಖ್ಯಾತ ದೇವಶಿಲ್ಪಿ ಮಾಡಿದ್ದು. ಮೌಲ್ಯ ಸ್ವಲ್ಪ ಜಾಸ್ತಿ."

ಬಟಾ ನಕ್ಕ.

ಹೊರಬಂದು ಅಂಗಡಿಕಾರ ಸಿಟ್ಟಾಗಿ ಕೇಳಿದ :

"ಯಾಕೆ ನಗ್ತೀರಿ ? ನಾನು ಸುಳ್ಳಾಡೋದಿಲ್ಲ."

"ನಾನೂ ಆಡೋದಿಲ್ಲ. ಆ ದೇವಶಿಲ್ಪಿ ನನ್ನ ಪರಮಮಿತ್ರ. ನಾನು ಅದೇ ಪ್ರಾಂತದವನು. ಇವನ್ನೆಲ್ಲ ವಿದೇಶೀ ವರ್ತಕ ಕೆಫ್ಟುವಿನಿಂದ ನೀವು ಪಡೆದಿರಬೇಕು—ಅಲ್ಲವಾ ?"

"ಓ ! ಗೊತ್ತಾಯ್ತು. ಬನ್ನಿ. ಒಳಗ್ಬನ್ನಿ. ಆತಿಥ್ಯ ಸ್ವೀಕರಿಸಿ ಹೋಗುವಿರಂತೆ."

"ಈಗ ಸ್ವಲ್ಪ ಅವಸರ. ಇನ್ನೊಮ್ಮೆ ಬರ್‍ತೇನೆ."

ಕಿಟಕಿಯಲ್ಲಿದ್ದ ಥೊಎರಿಸ್ ಮೂರ್ತಿಯನ್ನು ಹೊರತೆಗೆದು ಸೆಣಬಿನ ಅರಿವೆಯ ಚೂರಿನಿಂದ ಒರೆಸುತ್ತ ಅಂಗಡಿಗಾರನೆಂದ :

"ನಿಮ್ಮ ನಾಯಕರು ರಾಜಧಾನಿಗೆ ಬಂದ ದಿವಸ ಈ ದಾರಿಯಾಗಿಯೇ ಮೆರವಣಿಗೇಲಿ ಅರಮನೆಗೆ ಹೋದ್ರು ಅಂತ ಕೇಳಿದ್ದೇನೆ. ನಾನು ಇಲ್ಲಿರ್‍ಲಿಲ್ಲ. ಮಹಾಮಂದಿರಕ್ಕೆ ಹೋಗಿದ್ದೆ. ಈ ಥೊಎರಿಸ್...."

"ನಾಯಕರಿಗೆ. ಅವರ ಪತ್ನಿ ಬಸುರಿ. ಇನ್ನು ಒಂದೆರಡು ತಿಂಗಳಲ್ಲಿ ಹೆರಿಗೆ. ಅಮನ್ ಕೂಡಾ ಅವರಿಗೆ. ಇಲ್ಲಿ ಒಬ್ಬರೇ ಇರುವಾಗ ರಕ್ಷಣೆ ನೀಡೋದಕ್ಕೆ."

"ನಿಮಗೊಂದು ?"

"ನನ್ನ ದೋಣೀಲಿದೆ. ನಾಳೆ ನಾನು ಊರಿಗೆ ಹೋಗಿ ಎರಡು ಮೂರು ವಾರಗಳಲ್ಲಿ ವಾಪಸಾಗ್ತೇನೆ."

"ಸೆಡ್ ಉತ್ಸವಕ್ಕೆ ಬಂದ್ಬಿಡಿ. ಹಾಗೇ ಬರ್‍ತಾ...."

"ಏನು ?"

"ನಿಮ್ಮ ಮಿತ್ರರ ಹತ್ತಿರ ಎಷ್ಟು ಮೂರ್ತಿಗಳಿದ್ದರೂ ತಂದ್ಬಿಡಿ. ಕೆಫ್ಟು ನಿಮಗೆ ಕೊಡೋದಕ್ಕಿಂತಲೂ ಸ್ವಲ್ಪ ಜಾಸ್ತಿಯೇ ಕೊಡೋಣ."

"ಕೆಫ್ಟು ತಗೊಂಡು ಉಳಿದರೆ ತರಬಹುದು. ನೋಡ್ತೇನೆ. ಈ ಮೂರ್ತಿಗಳ ಮಾರಾಟ ಮೆಂಫಿಸಿನಲ್ಲಿ ಅಂತ ಕೆಫ್ಟು ಹೇಳಿದ್ದ. ನಾನು ತರೋದರಿಂದ ಕೆಫ್ಟುಗೆ ತೊಂದರೆಯಾಗಬಾರದು."

"ನೋಡಿ ಸಾಧ್ಯವಾದರೆ—"

"ಈ ಮೂರ್ತಿಗಳಿಗೆ ಏನು ಕೊಡಲಿ ?"

"ಏನು ತಂದಿದ್ದೀರಿ ? ತೋರಿಸಿ. ನಿಮ್ಮೂರಿನ ಮೂರ್ತಿಗಳಿಗಾಗಿ ನಿಮ್ಮಿಂದಲೇ ಮೌಲ್ಯ ಪಡೀಬೇಕಲ್ಲಾ...."

"ವ್ಯವಹಾರದಲ್ಲಿ ಹಾಗೆಲ್ಲಾ ಯೋಚಿಸಿದರೆ ಆಗ್ತದಾ ?"

ಮೌಲ್ಯವಿನಿಮಯಕ್ಕೆ ಸೊಂಟಪಟ್ಟಿ ಮತ್ತು ಚೀಲ ಎರಡೂ ಬೇಕಾಗ ಬಹುದೆಂದು ಬಟಾ ಭಾವಿಸಿದ್ದ. ಈಗಿನ ವಿಶಿಷ್ಟ ಪರಿಸ್ಥಿತಿಯಲ್ಲಿ ಚೀಲವನ್ನು ಉಳಿಸುವುದು ಸಾಧ್ಯ ಎಂದು ತೋರಿತು. ಸೊಂಟಪಟ್ಟಿಯನ್ನು ಅಂಗಡಿಯುವನ ಕೈಗಿತ್ತು ಅವನೆಂದ :

"ನಮ್ಮೂರಿನ ದೇವನೇಕಾರನ ಹೆಂಡತಿ ತಯಾರಿಸಿದ್ದು. ಉತ್ಕೃಷ್ಟ ವಸ್ತು. ತಗೊಳ್ಳಿ ಈ ಚೀಲ ಮತ್ತು ಮೂರ್ತಿಗಳನ್ನು ತಗೊಂಡು ಹೋಗೋ ದಕ್ಕೆ ಬೇಕು."

ಇವತ್ತು ಆಗುವ ಲಾಭ ಕಡಿಮೆ ಎಂಬುದು ಅಂಗಡಿಕಾರನಿಗೆ ಸ್ಪಷ್ಟ ವಾಯಿತು. ಊರಿನಿಂದ ನೂರಾರು ಮೂರ್ತಿಗಳನ್ನು ತಂದು ಪೂರೈಸಲ

ಬಟಾ ಒಪ್ಪಿದರೆ ಈ ಎರಡನ್ನು ಉಚಿತವಾಗಿ ಕೊಡಬಹುದಿತ್ತು. ಸದ್ಯಃ ಒಳ್ಳೆಯ ಒಂದು ಸೊಂಟಪಟ್ಟಿಯಾದರೂ ದೊರೆಯಿತಲ್ಲ—ಎಂದು ಆತ ತಕ್ಕ ಮಟ್ಟಿಗೆ ಸಮಾಧಾನಪಟ್ಟುಕೊಂಡ. ಅವನೆಂದ :

"ಪಕ್ಕದಲ್ಲಿ ದೇವಸೇವಕ ಇದ್ದಾರೆ. ಮೂರ್ತಿಗಳಿಗೆ ಪವಿತ್ರ ಜಲ ಪ್ರೋಕ್ಷಾಳನ ಮಾಡಿಕೊಡ್ತಾರೆ ಬೇಕಾದರೆ. ಕಾಣಿಕೆ ಏನೂ ಇಲ್ಲ. ಉಚಿತ."

"ಬೇಡ. ನಾನು ಅರಮನೆಯ ದೇವಮಂದಿರದ ಅರ್ಚಕರ ಭೇಟಿಗೆ ಹೊರಟಿದ್ದೇನೆ...."

"ಹಾಗಾದರೆ ಸರಿ. ನಿಮ್ಮ ಹೆಸರು ಹೇಳಲಿಲ್ಲ...."

"ಬಟಾ...."

"ನಾನು ಅಪೋಫಿಸ್. ನನ್ನ ತಮ್ಮ ಹರ್ಮ್ಯಾಕಿಸ್. ಮೂರ್ತಿಗಳನ್ನಲ್ಲದೆ ಪೂಜಾಸಾಮಗ್ರಿ ಶವಲೇಪದ ಸಾಮಗ್ರಿಗಳನ್ನೂ ಮಾರ್‍ತೀನೆ. ನಾನು ಹೇಳಿದ್ದನ್ನು ಮನಸ್ನಲ್ಲಿ ಇಟ್ಕೊಂಡಿರಿ. ಮರೀಬೇಡಿ."

"ಆಗಲಿ. ಬರಲಾ ?"

"ಹೂಂ. ಅಮನ್ ನಿಮ್ಮನ್ನು ರಕ್ಷಿಸಲಿ."

* * * *

ಇನೇನಿ ತನ್ನ ವಸತಿಯಲ್ಲಿ ಒಬ್ಬನೇ ಇದ್ದ. ಬಟಾನಿಗೆ ಅವನು ನೀಡಿದ ಸ್ವಾಗತ ಕಪಟ ಆತ್ಮೀಯತೆಯಿಂದ ತುಂಬಿತ್ತು. ಪಯಣದ ವಿಷಯ ತಿಳಿದು ಆತನೆಂದ :

"ಹೌದಪ್ಪ. ಎಷ್ಟು ಸಮಯ ಅಂತ ಇಲ್ಲಿ ಇರೋಕಾಗ್ತದೆ ? ಹೋಗಿ ಬಾ. ಹೋಗಿ ಬಾ. ಅಲ್ಲಿ ಏನಾಗಿದೇಂತ ತಿಳಕೊಂಡಾದರೂ ಬರ ಬಹುದಲ್ಲ."

"ಇಲ್ಲಿ ನಾಯಕರು ಏಕಾಕಿಯಾಗಿರ್‍ತಾರೆ."

"ನನ್ನಿಂದೇನಾದರೂ ಬೇಕಾದಾಗ ನಿಮ್ಮ ನಾಯಕ ಸಂಕೋಚವಿಲ್ಲದೆ ಇಲ್ಲಿಗೆ ಬರಲಿ. ನಾನು ಅತಿಥಿಗೃಹಕ್ಕೆ ಹೋಗಿ ಅವರನ್ನು ಕಾಣೋದು ಇನ್ನು —ಇನ್ನು ಮುಂದೆ—ಸೂಕ್ತ ಅನಿಸೋದಿಲ್ಲ. ಏನಿವು ಚೀಲದಲ್ಲಿ ?"

"ದೇವತಾಮೂರ್ತಿಗಳು. ಸ್ವಲ್ಪ ಪ್ರೋಕ್ಷಾಳನ...."

"ಕೊಡು. (ಬಟಾ ನೀಡಿದುದನ್ನು ಕೈಗಳಲ್ಲಿ ಹಿಡಿದು ಪರೀಕ್ಷಿಸುತ್ತ) ಎಲ್ಲಿ ಕೊಂಡದ್ದು ? ಬಹಳ ಸೊಗಸಾಗಿವೆ."

ಹೇಳದೆ ಇರುವುದು ಸರಿಯಲ್ಲವೆನಿಸಿ ಬಟಾ ನುಡಿದ :

"ಕೊಂಡದ್ದು ಅಪೋಫಿಸ್‌ನ ಅಂಗಡೀಲಿ. ಆದರೆ ಮೂಲತಃ ಇವು ನಮ್ಮ ಪ್ರಾಂತದ್ದೇ."

"ಹಾಗಾ ? ಅಪೋಫಿಸ್ ದೊಡ್ಡ ಕಳ್ಳ. ದೈವಭಕ್ತಿ ಕಡಿಮೆ. ಒಂದಕ್ಕೆ ಹತ್ತು ಪಟ್ಟು ಬೆಲೆಗೆ ಮಾರ್ತಾನೆ. ಹೊರಗಿನಿಂದ ಬರೋ ಭಾರಿ ಭಾರೀ ವರ್ತಕರ ಜತೆಗೆಲ್ಲ ಅವನ ಸ್ನೇಹ. ಅಂದ ಹಾಗೆ ಬಟಾ, ಊರಿನಿಂದ ಬರ್ತಾ ಒಂದುನೂರು ಮೂರ್ತಿಗಳನ್ನು ಯಾಕೆ ತರಬಾರದು ನೀನು ?"

ಮೋಸವಾಯಿತು; ಅಪೋಫಿಸನ ಅಂಗಡಿ ಮಗ್ಗುಲಲ್ಲೇ ಮೂರ್ತಿಗಳಿಗೆ ಪವಿತ್ರಸೇಚನ ಮಾಡಿಸಬೇಕಾಗಿತ್ತು—ಎನಿಸಿತು ಬಟಾನಿಗೆ. ಆತ ಸುಮ್ಮನಿದ್ದುದನ್ನು ಕಂಡು ಇನೇನಿಯೇ ಮಾತು ಮುಂದುವರಿಸಿದ :

"ಯೋಚಿಸಿ ನೋಡು. ನನ್ನ ಹತ್ತಿರವೇ ಮೂರ್ತಿಗಳಿದ್ದರೆ ಪವಿತ್ರ ಸೇಚನ ಮಾಡಿ ನೇರವಾಗಿ ಭಕ್ತರಿಗೇ ಕಡಿಮೆ ಮೌಲ್ಯಕ್ಕೆ ಕೊಡಬಹುದು. ಪ್ಟಾ ದೇವರಿಗೂ ಇದು ಇಷ್ಟವಾಗ್ತದೆ."

"ಹೌದು. ನೀವು ಹೇಳೋದು ನಿಜ, ಅರ್ಚಕರೇ."

"ಅಪೋಫಿಸ್ ಏನಾದರೂ ಕೇಳಿದ್ನೆ ?"

"ಕೇಳ್ದ. ಆದರೆ ವರ್ತಕರ ವ್ಯವಹಾರಕ್ಕೆ ನಾವು ಅಡ್ಡ ಬರಬಾರ್ದು ಅಂದ್ಬಿಟ್ಟೆ."

"ಒಳ್ಳೇ ಕೆಲಸ ಮಾಡ್ದೆ," ಎಂದು ಹೇಳಿ ಇನೇನಿ ಮೂರ್ತಿಗಳನ್ನು ಮಗ್ಗುಲು ಕೊಠಡಿಗೆ ಒಯ್ದ, ಪವಿತ್ರ ಜಲಸೇಚನಕ್ಕಾಗಿ. ಅಲ್ಲಿಂದ ಪ್ರಾರ್ಥನಾ ಸ್ತೋತ್ರವನ್ನು ಗಟ್ಟಿಯಾಗಿ ಆತ ಪಠಿಸಿದ.

ಹೊರಗೆ ಬಂದವನು ಮೂರ್ತಿಗಳನ್ನು ಬಟಾನಿಗೆ ಕೊಟ್ಟು, ನೆಲದ ಮೇಲಿದ್ದ ಕಸೂತಿ ಚೀಲವನ್ನೆತ್ತಿಕೊಂಡು, "ಕುಸುರಿ ಕೆಲಸ. ಚೆನ್ನಾಗಿದೆ. ನಿಮ್ಮೂರಿನ್ದಾ ?" ಎಂದ.

ಶರಣಾಗುವುದೇ ಶ್ರೇಷ್ಠ ಮಾರ್ಗವೆಂದು, ಬಟಾ ಹೇಳಿದ.

"ತಗೊಳ್ಳಿ ಅಯ್ಯ."

"ನೀನಾಗಿ ಕೊಟ್ಟೆ ! ಹೇಗೆ ಬೇಡಾ ಅನ್ಲಿ ?"

"ಸೆಡ್ ಉತ್ಸವ...."

"ಅದು ವಿಜೃಂಭಣೆಯ ಸಮಾರಂಭ. ಅಷ್ಟರೊಳಗೆ ನೀನು ಬರಲೇಬೇಕು. ಉತ್ಸವ ಯಾವತ್ತು ಅಂತ ನಿನಗೆ ತಿಳಿಸಬೇಕಾದ್ದೇ ಇಲ್ಲ. ನಮ್ಮ ಐಗುಪ್ತದಲ್ಲಿ ಏನೇ ಸುದ್ದಿ ಮೊದಲು ಗೊತ್ತಾಗೋದು ದೋಣಿಕಾರರಿಗೆ."

"ಎಷ್ಟು ಸುದ್ದಿ ಇದ್ದರೂ ದೋಣೀಲಿ ಜಾಗ ಇರ್ತದೆ," ಎಂದು ಹೇಳಿ ನಸುನಗುತ್ತ ಬಟಾ ಎದ್ದು ನಿಂತು ಅರ್ಚಕನಿಗೆ ನಮಿಸಿದ.

"ಹೋಗಿ ಬಾ. ಅಮನ್ ನಿನ್ನನ್ನು ರಕ್ಷಿಸಲಿ. ಸುದ್ದಿಗೂ ಅಷ್ಟೆ. ಮೂರ್ತಿಗಳಿಗೂ ಅಷ್ಟೆ. ದೋಣೀಲಿ ಯಾವಾಗಲೂ ಜಾಗ ಇರ್ತದೆ—ಮರೆ ತೀಯೆ !" ಎಂದು ಪರಿಹಾಸ್ಯ ಗಾಂಭೀರ್ಯ ಎರಡೂ ಬೆರೆತ ಸ್ವರದಲ್ಲಿ ಇನೇನಿ ನುಡಿದ.

*　　*　　*　　*

ಥೊಎರಿಸ್ ದೇವತಾ ಮೂರ್ತಿಯನ್ನು ನೋಡಿ, ಪತ್ನಿ ನೆಫಿಸಳ ನೆನಪಾಗಿ ಮೆನೆಪ್‌ಟಾನಕಂಠ ಉಮ್ಮಳಿಸಿತು.

ಅವನೆಂದ :

"ಇಂಥ ಮೂರ್ತಿಯ ಅಗತ್ಯ ನೆಫಿಸ್‌ಗೆ ಇದೆ ಅನ್ನೋ ಯೋಚನೆ ಕೂಡಾ ನನಗೆ ಆಗ್ಲಿಲ್ಲ."

"ಸ್ವಂತದ ಯೋಚನೆ, ಹೆಂಡತಿ—ಮಗನ ಯೋಚನೆ ನೀನು ಯಾಕೆ ಮಾಡ್ತಿ ಹೇಳು ?"

ಮೂರನೆಯ ಬೆಳಗ್ಗೆ ಅವರ ದೋಣಿಯ ಪಯಣ ದಕ್ಷಿಣಾಭಿಮುಖವಾಗಿ, ನೀರಾನೆ ಪ್ರಾಂತಕ್ಕೆ. ಬಟಾನ ಪ್ರಶ್ನೆ ಕೇಳಿಸದವನಂತೆ ಮೆನೆಪ್‌ಟಾ ಅಂದ :

"ನಾನೂ ಒಬ್ಬ ದೋಣಿಕಾರನಾಗಬೇಕಾಗಿತ್ತು, ಬಟಾ."

"ಅಮನ್ ದೋಣಿಕಾರರ ದೇವರು, ಸೈನ್ಯದ ದೇವರು, ಪ್ರವಾಸಿಗಳ ದೇವರು. ಇಗೋ; ಗೋಡೆಯ ಗೂಡಿನಲ್ಲಿಡ್ತೇನೆ. ಪ್ರತಿರಾತ್ರೆ ಮಲಗೋದಕ್ಕೆ ಮುನ್ನ...."

ಗೂಡು ಸೇರಿದ ಮೂರ್ತಿಯನ್ನು ನೋಡುತ್ತಾ ಮೆನೆಪ್‌ಟಾ ಉದ್ಗರಿಸಿದ :

"ಓ! ನಮ್ಮ ಅಮನ್ ಥೊಎರಿಸ್—ಎರಡೂ ಸ್ನೊಫ್ರು ಸೃಷ್ಟಿ!"

"ವರ್ತಕ ಅಪ್ರೋಫಿಸ್, ಅರ್ಚಕ ಇನೇನಿ ಇಬ್ಬರಿಗೂ ಸ್ನೊಫ್ರು ಸೃಷ್ಟಿಸಿದ ಮೂರ್ತಿಗಳನ್ನು ನಾನು ತಂದ್ಕೊಡ್ಬೇಕಂತೆ—ಭಕ್ತಾದಿಗಳಿಗೆ ಮಾರೋದಕ್ಕೆ! ಈ ಮೂರ್ತಿಗಳನ್ನು ನಾನು ಕೊಂಡದ್ದು ಅಪ್ರೋಫಿಸ್‌ನಿಂದ; ಇವಕ್ಕೆ ಪವಿತ್ರ ಜಲಸೇಚನ ಮಾಡಿದ್ದು ಇನೇನಿ. ಈ ಅಪ್ರೋಫಿಸ್‌ಗೆ ಕೆಫ್ಟು ಗುರ್ತಂತೆ."

"ಕುಯಿಲಿನ ದಿನ ಹತ್ತಿರ ಬರ್ತಿದೆ. ಕೆಫ್ಟು ಬರುವ ಹೊತ್ತು."

"ಖ್ನೆಮ್‌ಹೊಟೆಪ್ ಅವನ ದಾರಿ ಕಾಯ್ತಿರ್ಬೇಕು."

"ನಾವು ಇಲ್ಲಿಗೆ ಬರದೇ ಇದ್ದಿದ್ದರೆ ಏನಾಗ್ತಿತ್ತು ಬಟಾ?"

"ಈ ಪ್ರಶ್ನೆ ನಾನು ಕೇಳಬೇಕು, ನೀನಲ್ಲ."

"ನೀನು ವಾಪಸು ಹೋಗ್ತಿದಿಯಾ, ನಾನು ಇಲ್ಲಿ ನೀನಿಲ್ಲದೆಯೇ ದಿನ ಕಳೀಬೇಕು."

ಬಟಾ ಸುಮ್ಮನಿದ್ದ ತಲೆ ತಗ್ಗಿಸಿದ. ನೆಲ ನೋಡುತ್ತ ದುಗುಡದ ಸ್ವರದಲ್ಲಿ ಅಂದ :

"ನನ್ನ ಸಂಕಟ ಹೇಳಲಾ ಅಣ್ಣಾ? ಎಷ್ಟು ದಿವಸ ಅಂತ ನನ್ನಲ್ಲೇ ಮುಚ್ಚಿಟ್ಕೊಳ್ಲಿ? ನಾನು ಹೋಗ್ತಿರೋದು ನಮ್ಮವರ್‍ನ ಕರಕೊಂಡು ಬರೋದಕ್ಕೆ, ನಾವಿಷ್ಟೇ ಜನ ನಿನ್ನ ಜತೆ ಇದ್ದು ಏನಾದರೂ ಅಚಾತುರ್ಯ ಆದರೆ ನಾಳೆ ನಮ್ಮ ಜನರಿಗೆ ಹ್ಯಾಗೆ ಮುಖ ತೋರಿಸಲಿ?"

ಮೆನೆಪ್‌ಟಾನೂ ಕೆಲವು ಕ್ಷಣ ಮೌನವಾಗಿದ್ದು, ಬಟಾನನ್ನೇ ನೋಡುತ್ತ ಅಂದ :

"ಸೆಡ್ ಉತ್ಸವ ಆಗೋವರೆಗೂ ಏನೂ ಅಪಾಯವಿಲ್ಲ. ವೈಯಕ್ತಿಕವಾಗಿ ನನಗೇನಾಗ್ತದೆ ಅನ್ನೋದು ಮಹತ್ವದ್ದಲ್ಲ ಬಟಾ. ನೀರಾನೆ ಪ್ರಾಂತದ ಜನ

ನೆಮ್ಮದಿಯಿಂದ ಬದುಕೋದು ಸಾಧ್ಯವಾಗ್ಬೇಕು. ರಾಜಧಾನಿ ಇದಕ್ಕೆ ಆಸ್ಪದ ಇತ್ತರೆ ಎಲ್ಲರಿಗೂ ಹಿತ. ಅದಕ್ಕಾಗಿ ಇಲ್ಲಿದ್ದು ನಾನು ಪ್ರಯತ್ನಿಸ್ತೇನೆ. ಊರಲ್ಲಿ ಎಲ್ಲರಿಗೂ ಇದನ್ನು ವಿವರಿಸಿ ಹೇಳು."

"ಆಗಲಿ, ನೀರಿಗಿಳಿದ್ಮೇಲೆ ಈಸಲೇಬೇಕಲ್ಲ ?"

ಹೊರಗೆ ಜನರ ಗುಜುಗುಜು ಕೇಳಿಸಿತು. ಔಟ ಒಳಗೆ ಬಂದು ನುಡಿದ :

"ಬಟಾ ಅಣ್ಣ ಊರಿಗೆ ಹೋಗ್ತಾರೇಂತ ಸುದ್ದಿ ಹಬ್ಬಿ ಅರಮನೆ ಕೆಲಸ ಗಾರರು ಒಂದಷ್ಟು ಜನ ಬಂದಿದ್ದಾರೆ ನೋಡೋದಕ್ಕೆ."

"ಅಷ್ಟು ಸಂತೋಷವಾಗಿದೆಯೆ ಅವರಿಗೆ ?"

"ಸಂತೋಷ ಅಲ್ಲಣ್ಣ."

"ಅಲ್ಲವಾ ? ದುಃಖ ಅನ್ತೀಯಾ ? (ನಾಯಕನತ್ತ ನೋಡಿ) ನಾನು ಇಷ್ಟೊಂದು ಜನಪ್ರಿಯ ಅಂತ ಮೊದಲೇ ಗೊತ್ತಾಗಿದ್ದಿದ್ರೆ ಊರಿಗೆ ಹೋಗ್ತೋ ಯೋಚ್ನೇನೇ ಮಾಡ್ತಿರ್ಲಿಲ್ಲ. ಇಲ್ಲಿಯೇ ಇನ್ನೊಂದು ಮದುವೆ ಯಾಗಿ, ದೇವತಾಮೂರ್ತಿಗಳನ್ನು ಸರಬರಾಜು ಮಾಡ್ಕೊಂಡು—"

ದುಗುಡವನ್ನು ಮರೆಸಿ ಲವಲವಿಕೆ. ಮೆನೆಪ್‌ಟಾನೂ ಉಲ್ಲಸಿತನಾದ.

"ಹೊರಗೆ ಜನ ಮುತ್ತಿದರು. "ಇವತ್ತು ಸಂಜೆ ಹೊರಡ್ತೀರಾ ?" "ನಾಳೆ ಬೆಳಿಗ್ಗೇನಾ ?" "ಹೋಗ್ಬನ್ನಿ." "ನಿಮ್ಮ ನಾಯಕರನ್ನು ನಾವು ನೋಡ್ಕೊಳ್ತೇವೆ." "ನೀವಿಲ್ಲದೆ ನಮಗೂ ಬೇಜಾರು." "ಬಂದ್ಮೇಲೆ ಒಂದ್ಸಲ ಕೊಳಲು ಬಾರಿಸ್ಬೇಕು ಅಣ್ಣ."

ಬಟಾನ ಕಣ್ಣುಗಳಲ್ಲಿ ಹನಿ ಆಡಿತು. ಬಟಾ ಗಲ್ಲವನ್ನು ಮೇಲಕ್ಕೆತ್ತಿ ಮುಖವರಳಿಸಿ ನಕ್ಕ....

....ಅತಿಥಿಗೃಹದ ಅಧಿಕಾರಿಗೆ ಬಟಾನೆಂದ :

"ನಾಳೆಯಿಂದ ಊಟಕ್ಕೆ—ಅಲ್ಲ, ಭೋಜನಕ್ಕೆ—ಮೂವರೇ."

"ಗೊತ್ತಾಯ್ತು."

ರಾತ್ರಿ ಪರಿಚಾರಕರು ಬಟಾನಿಗೂ ಅಂಬಿಗರಿಗೂ ದಾರಿಯ ಬುತ್ತಿ ತಂದು ಕೊಟ್ಟರು. ಒಂದು ತೊಗಲಿನ ಚೀಲದಲ್ಲಿ ಖಿವವ ಬಂತು. ಅತಿಥಿಗೃಹ, ಪಾಕಶಾಲೆ, ಉಗ್ರಾಣಗಳ ಮುಖ್ಯಸ್ಥರ ಗಮನಕ್ಕೆ ಈ ಅಂಶವನ್ನು ತರುವುದು

ಅಗತ್ಯವೆಂದು ಅರಮನೆಯ ಸೇವಕರಿಗೆ ಅನಿಸಲಿಲ್ಲ.

....ಇರುಳಿನ ಮೌನ ಅರಮನೆಯ ಆವರಣದ ಮೇಲೆ ದಟ್ಟೈಸುತ್ತಿದ್ದಂತೆ ನಾಯಕನ ಕೊಠಡಿಯ ಕಿಟಕಿಯನ್ನು ಯಾರೋ ಮೆಲ್ಲನೆ ತಟ್ಟಿದ ಸದ್ದಾಯಿತು. ಬಟಾ ಚಂಗನೆದ್ದು ಕಿಟಕಿ ತೆರೆದು ಹೊರಗೆ ನೋಡಿದ. ಬೆಕ್ ಔಟರೂ ಅತ್ತ ಧಾವಿಸಿದರು.

ಅಲ್ಲಿದ್ದವನು ಮೆನ್ನ.

ಅವನನ್ನು ಬಟಾ ಕಿಟಕಿಯ ಮೂಲಕ ಒಳಕ್ಕೆ ಎಳೆದುಕೊಂಡ.

ಬಟಾನ ಕೈಯನ್ನು ಭದ್ರವಾಗಿ ಹಿಡಿದು ಆತ ಕೇಳಿದ:

"ನಾಳೆ ಬೆಳಿಗ್ಗೆ ಹೊರಡ್ತೀರಾ ?"

"ಹೌದು, ಮೆನ್ನ."

ನಾಯಕನತ್ತ ನೋಡಿ ಪಿಸುದನಿಯಲ್ಲಿ ಅವನೆಂದ :

"ಮಹಾ ಅರ್ಚಕ, ಪೆರೋ—ಇಬ್ಬರೂ ಪರಸ್ಪರರ ಮೇಲೆ ಬಲೆ ಬೀಸಿದ್ದಾರೆ. ಯಾವ ಬಲೆಗೆ ಯಾರು ಬೀಳ್ತಾರೋ ? ಬಲೆಗಳು ಒಂದಕ್ಕೊಂದು ತಗಲಿ ಸಿಕ್ಕುಗಂಟಾದಾಗ, ಮೀನುಗಳು ಮಾತ್ರವಲ್ಲ ನೀರಾನೆಯೂ ತಪ್ಪಿಸಿಕೊಂಡೀತು ! ಆದರೆ ಎಡವಬಾರದು, ಎಡವಬಾರದು .... ನಿದ್ದೆಯಲ್ಲೂ ಜಾಗೃತಾವಸ್ಥೆಯಲ್ಲೂ ಎಚ್ಚರವಿರಬೇಕು ! ಯೋಚಿಸ್ಬೇಡಿ ಬಟಾ. ನಾನು ಪಕ್ಕದಲ್ಲಿ ಇರದಿದ್ದರೂ ನನ್ನ ಅಗೋಚರ ಕಾ ನಾಯಕರನ್ನು ಕಾಯ್ತದೆ."

ಮೆನೆಪ್‌ಟಾ ಧ್ವನಿ ತಗ್ಗಿಸಿ ಅಂದ :

"ವಿದೇಶೀ ವರ್ತಕ ಕೆಫ್ಟು, ಮಹಾ ಹಸುರು ಸಮುದ್ರದಿಂದ ರಾಜಧಾನಿ ಕಡೆಗೆ ಬೇಗನೆ ಬರಬಹುದು. ಅವನನ್ನು ನಾನು ಕಾಣ್ಬೇಕು.

"ಆತ ಬಂದ ದಿನವೇ ಕಂಡು, ಹಾಗೆಂತ ಹೇಳ್ತೀನೆ...."

ಮೃದು ಧ್ವನಿಯಲ್ಲಿ ಬಟಾ ಹೇಳಿದ :

"ಆ ಇನೇನಿ ಕೈಗೆ ಸಿಕ್ಕಿ ಹಾಕ್ಕೊಳ್ಬೇಡಿ....ಹೊಡೆಯೋದು ಬಡಿಯೊಂದು ಮಾಡಿಯಾನು."

"ಹುಚ್ಚರಿಗೆ ಹೊಡೆದೋರು ಉದ್ಧಾರವಾಗ್ತಾರಾ ? ನೀರಲ್ಲಿರೋ ಮೀನಿನ ಹಾಗೆ ನನ್ನ ಚಲನೆ. ನುಂಗೋಕೆ ಬರೋ ದೊಡ್ಡ ಮೀನುಗಳ ವಿಷಯದಲ್ಲಿ ನನಗೆ ಮೈಯೆಲ್ಲಾ ಕಣ್ಣು !"

"ಇಲ್ಲೀದೆಲ್ಲ ಮುಗಿದು ಮೆನೆಪ್‌ಟಾ ಅಣ್ಣ ವಾಪಸಾಗುವಾಗ ಜತೇಲಿ ಬರ್‍ಬೇಕು, ನಮ್ಮೂರಿಗೆ."

"ಬರದೆ ಇರ್‍ತೀನಾ ? ವಾಸ್ತವವಾಗಿ ಈಗಲೇ ದಿನಗಳನ್ನು ಎಣಿಸ್ತಿದ್ದೀನೆ....ನಾನು ಇನ್ನು ಹೋಗೋದು ಮೇಲು. ದೀಪ ಆರಿಸಿ ನೀವು ಮಲಕ್ಕೊಳ್ಳಿ."

ಮೆನ್ನ ನಿರಾಯಾಸವಾಗಿ ಕಿಟಕಿಯಿಂದ ಹೂದೋಟಕ್ಕೆ ಧುಮುಕಿದ.

....ಬಹಳ ಹೊತ್ತು ಬಟಾಗೆ ನಿದ್ದೆ ಬರಲಿಲ್ಲ. ಮೆನೆಪ್‌ಟಾಗೂ. ಕಳೆದ ದಿನಗಳನ್ನು ಅವರು ಇಳಿದನಿಯಲ್ಲಿ ನೆನೆದರು.

ಬಟಾ : "ಒಂದು ದಿವಸ ದೋಣಿಕಟ್ಟೆ ಹತ್ತಿರ ನೀನು ಮತ್ತು ನೆಫಿಸ್ ತಾಳೆ ಮರದ ಕೆಳಗೆ ಬುತ್ತಿ ಉಣ್ಣುತ್ತ ಕೂತಿದ್ದಿರಿ. ಇಲ್ಲಿ ಉಂಡರೆ ರುಚಿ ಜಾಸ್ತಿ ಅಲ್ಲವಾ ?—ಅಂತ ನಾನು ಕೇಳ್ದೆ."

ಮೆನೆಪ್‌ಟಾ ಅಂದ : ಅದು ಆರು ವರ್ಷದ ಹಿಂದೆ. ಆಗ ನೆಫಿಸ್ ಬಸುರಿ."

ಬಟಾ : "ರಾಮೆರಿ ಬಲು ಚೂಟಿ. ಇನ್ನು ಹತ್ತು ಹನ್ನೆರಡು ವರ್ಷಗಳಲ್ಲಿ ಅವನು ನಮ್ಮ ಪ್ರಾಂತದ ಶ್ರೇಷ್ಠ ವಿದ್ವಾಂಸನಾಗುತ್ತಾನೆ."

ಮೆನೆಪ್‌ಟಾ : "ಹೊಲ ಉಳೋದು, ದೋಣಿ ನಡೆಸೋದು—ಇವೂ ಶ್ರೇಷ್ಠ ವಿದ್ಯೆಗಳೇ."

ಬಟಾ : "ರೊಟ್ಟಿ ತಟ್ಟೋದು ?"

ಮೆನೆಪ್‌ಟಾ : "ಪರಮ ಶ್ರೇಷ್ಠ ವಿದ್ಯೆ."

ಬಟಾ : "ಹಾಗಾದರೆ ನನ್ನ ಹುಡುಗೀರಲ್ಲಿ ಒಬ್ಬಳನ್ನ ರಾಮೆರಿ ಆರಿಸ್ಕೊಳ್ಲಿ."

ಮೆನೆಪ್‌ಟಾ : "ಆಗ ಇನ್ನೂ ಹತ್ತಿರ ಬರ್‍ತೀವಾ ನಾವು ?"

ಬಟಾ : "ಅಲ್ವಾ? ಒಬ್ಬರಿಗೊಬ್ಬರು ಢಿಕ್ಕಿ ಹೊಡೀದ ಹಾಗೆ ನೋಡ್ಕೋಬೇಕು. ಅಲ್ಲ ಮೆನೆಪ್‌ಟಾ. ನಮ್ಮ ಜನ ಎಷ್ಟು ಕಲಿತರೂ ದೇವಸೇವಕರು ತಮ್ಮದ್ದೇ ಹೆಚ್ಚು ಅಂತ ಸಾಧಿಸೋದಿಲ್ಲವಾ ?"

ಮೆನೆಪ್‌ಟಾ : "ಅದು ಪೂರ್ವಕಾಲದಿಂದಲೂ ನಡೆದು ಬಂದಿರೋದು.

ವಿದ್ಯೆ ಕಲಿತ ಯಾರು ಬೇಕಾದರೂ ಮಂದಿರ ಸೇವೆಗೆ ಹೋಗ್ಬಹುದು. ಆದರೆ ವಾಸ್ತವದಲ್ಲಿ, ಅರ್ಚಕರ ಮಕ್ಕಳಷ್ಟೇ ಅರ್ಚಕರಾಗ್ತಾರೆ."

ಬಟಾ : "ಆಡುವವರ ಮಕ್ಕಳು ಆಡ್ತಾರೆ!"

ಮೆನೆಪ್‌ಟಾ : "ಕುಯಿಲಿನ ಸಿದ್ಧತೆ ಮುಗಿದಿರಬೇಕು ನಮ್ಮಲ್ಲಿ."

ಬಟಾ : "ಈ ಸಲ ಕುಯಿಲಿನ ಹಬ್ಬವನ್ನ ಬಹಳ ಅದ್ದೂರಿಯಿಂದ–"

ಮೆನೆಪ್‌ಟಾ : "ಖಿವವ ಕಾಲುವೆಯಾಗಿ ಹರಿದು ನೀಲನದಿ ಸೇರ ಬೇಕೇನೊ ?"

ಬಟಾ : ಒಂದೊಂದ್ಸಲ ಇಡೀ ನದಿಯ ನೀರೇ ಖಿವವ ಆದರೆ ಎಷ್ಟು ಮಜ ಅಂದ್ಕೋತೇನೆ."

ಮೆನೆಪ್‌ಟಾ : "ಒಂದು ದಿವಸ ಕುಡಿದು ಅಮಲೇರಿದಾಗ ನಿಜವಾದ ನೀರಾನೆಯೇ ಬಂದು ನಿನಗೆ ಗುಮ್ತದೆ ನೋಡ್ಕೊ."

ಬಟಾ : "ನೀರಾನೆ ನಮ್ಮ ಪ್ರಾಂತದ ಜನರ ಕುಲದೈವ. ಅದೇ ಮುನಿ ದರೆ ಬಡ ಮನುಷ್ಯ ನಾನೇನು ಮಾಡೇನು ?"

ಮೆನೆಪ್‌ಟಾ : "........"

ಬಟಾ : "ನಮ್ಮ ಲಿಪಿಕಾರ ಇಪ್ಯುವರ್‌ಗೆ ರಾಜಧಾನಿಯವರು ಒಮ್ಮೆ ತನ್ನ ಹಸ್ತಾಕ್ಷರ ನೋಡ್ಬೇಕೂಂತ ಆಸೆ."

ಮೆನೆಪ್‌ಟಾ : "ಸಾಧು. ಅವತ್ತು ಟೆಹುಟಿ ಬಂದಾಗ ನಾನು ಮಾತ ನಾಡಿದೆ ನೋಡು."

ಬಟಾ : "ಬಂಡಾಯ ?"

ಮೆನೆಪ್‌ಟಾ : "ಅದನ್ನೆಲ್ಲ ಇಪ್ಯುವರ್ ಬರೆದಿಟ್ಟಿದ್ದಾನೆ. ಜಾಡಿ ಯೊಳಕ್ಕೆ ಸೇರಿಸಿ ಭದ್ರವಾಗಿ ಮುಚ್ಚಿಟ್ಟಿದ್ದಾನೆ."

ಬಟಾ : "ವಾಪ್ಸು ಬಂದ್ಮೇಲೆ ನಾನು ಪೆರೋನ ಗೋರಿ ನೋಡ್ದೋ ದಕ್ಕೆ ಹೋಗ್ಬೇಕು. ಅಣ್ಣಾ, ನಿನ್ನ ಗೋರಿ ಕಟ್ಟಿಸುವಾಗ ಒಳಗಡೆ ಗೋಡೆ ಮೇಲೆ ನಮ್ಮ ಅಬ್ಟು ಯಾತ್ರೆಯ ಚಿತ್ರ ಬರೆಸ್ಬೇಕು. ಅಮರಲೋಕದ ನಿವಾಸಿಯಾದ್ಮೇಲೂ ವರ್ಷಕ್ಕೊಮ್ಮೆ ಅಬ್ಟು ಯಾತ್ರೆಗೆ ನೀನು ಹೋಗೋದು ಬೇಡವಾ! ನನ್ನ ದೋಣಿ ಇಲ್ದೆ, ನಾನಿಲ್ದೆ, ಹ್ಯಾಗೆ ಯಾತ್ರೆ ಹೋಗ್ತೀಯಾ ?"

ಮೆನೆಪ್‌ಟಾ : "ತಮಾಷೆ ಸಾಕು. ನಮಗೆ ಆಡಬಂರದ ಬದುಕೂ

ಬೇಡ ; ಆಡಂಬರದ ಸಾವೂ ಬೇಡ."

ಬಟಾ : "ನೀನು ಬೇಡ ಅಂದರೂ ಜನ ಕೇಳಬೇಕಲ್ಲ ? ಕನಸಿನಲ್ಲಿ ಇನ್ನೂ ಎತ್ತರವಾಗಿ ಕಾಣಿಸಿದೆ ಅಂತ ಮೊನ್ನೆ ಹೇಳ್ಲಿಲ್ಲವಾ ?"

ಮೆನೆಪ್‌ಟಾ : "ನನಗೆ ನಿದ್ದೆ ಬರ್‍ತಿದೆ." (ಕಪಟದ ಗೊರಕೆ ಸದ್ದು.)

ಬಟಾ : "ಅದು ನನ್ನ ಗೊರಕೆ. ನಿನ್ನದು ಅಷ್ಟು ಜೋರಾಗಿರೋದಿಲ್ಲ. ಶಬ್ದ ಕಮ್ಮಿ ಮಾಡು."

ಮೆನೆಪ್‌ಟಾ : (ಸಣ್ಣನೆ ನಕ್ಕು) "ನಾನು ಕಣ್ಮುಚ್ಕೊಂಡಿದ್ದೇನೆ. ಇನ್ನು ನಿದ್ದೆ ಬಂದೇ ಬಿಡ್ತದೆ."

ಬಟಾ : "ಹೂಂ. ನಾನೂ ಮುಚ್ಕೊಂಡೆ. ಮಾತಿಲ್ಲ ಇನ್ನು."

* * * *

ಆ ದಿನ ಬೆಳಿಗ್ಗೆ ದೋಣಿಕಟ್ಟೆಯಲ್ಲಿ ಹೆಚ್ಚು ಗದ್ದಲವಿರಲಿಲ್ಲ. ಬಟಾನ ಉದ್ಯೋಗಿಗಳು ದೋಣಿಯನ್ನು ಕಟ್ಟೆಗೆ ತಂದು ನಿಲ್ಲಿಸಿದರು. ಮೆಟ್ಟಿಲುಗಳನ್ನಿಳಿದು ಬಟಾ ದೋಣಿಯತ್ತ ಸಾಗುತ್ತಿದ್ದಂತೆ ಒಬ್ಬ ಕಾವಲು ಭಟ ಗಟ್ಟಿಯಾಗಿ ಅಂದ :

" ಗೂಡಾರಕ್ಕೆ ಬನ್ನಿ. ಕಟ್ಟೆ ಅಧಿಕಾರಿ ಕರೀತಿದ್ದಾರೆ."

' ಎದ್ದು ಬರಲಿಲ್ಲ. ಕರೆಕಳಿಸಿದ್ದಾನೆ. ನನಗೆ ತಿಳೀದಾ ಇದರ ಮರ್ಮ' ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ ಬಟಾ ಮತ್ತೆ ಮೆಟ್ಟಿಲುಗಳನ್ನೇರಿ, ಗೂಡಾರದೊಳಕ್ಕೆ ನಡೆದ.

ಅಧಿಕಾರಿ ಕುಳಿತಲ್ಲಿಂದಲೆ ತುಸು ತಲೆ ಎತ್ತಿ ಬಟಾನನ್ನು ನೋಡಿದ.

" ನೀವಾ ? ಯಾವುದೋ ದೋಣಿ ಹೊರಡ್ತಿದೆ ಅಂದ್ರು. ಕಟ್ಟೆಯ ಅಧಿಕಾರಿಗೆ ತಿಳಿಸದೆ ರಾಜಧಾನಿಯಿಂದ ಹೊರಡೋ ದೋಣಿ ಯಾವುದಪ್ಪ ಅಂದ್ಕೊಂಡೆ."

ಬಟಾನ ತುಟಿಗಳು ಬಿಗಿದುವು :

" ನಾವು ಸೆಡ್ ಉತ್ಸವಕ್ಕೆ ಬಂದವರು."

" ಪ್ರಾಂತಪಾಲರ ದೋಣಿಗಳೆಲ್ಲ ಇಲ್ಲೇ ಬಿದ್ದಿವೆ. ನನಗೆ ಗೊತ್ತಿಲ್ಲವಾ?"

ಅಷ್ಟರಲ್ಲಿ ಒಬ್ಬ ಕಾವಲುಭಟ ಓಡಿಬಂದ.

" ಹಪ್ವೆಟ್‌ರ ಪಲ್ಲಕಿ ಬಂತು," ಎಂದ.

ಅಧಿಕಾರಿ ನಿಧಾನವಾಗಿ ಎದ್ದು, "ನೀವು ಹೊರಡ್ಬೌದು" ಎಂದು ನುಡಿದು ಬಟಾನತ್ತ ಕೈಬೀಸಿ. ಕೈಯಲ್ಲಿ ಪದವಿ ದಂಡ ಹಿಡಿದು ಅರಮನೆಯ ಪಲ್ಲಕಿ ಯಿಂದ ಇಳಿಯುತ್ತಿದ್ದ ಹೆಖ್ವೆಟ್‌ನನ್ನು ಸ್ವಾಗತಿಸಲು ಹೊರಕ್ಕೆ ನಡೆದ.

ಕೆಳಗೆ ಕಾವಲು ಭಟನೊಬ್ಬ ಕೂಗಿ ಹೇಳುತ್ತಿದ್ದ:

" ಏ ದೋಣಿ ! ಹೊರಡು ! ರಾಜನಾವೆಗೆ ಜಾಗ ಮಾಡು !"

ಬಟಾನ ಉದ್ಯೋಗಿಗಳು ಮಿಸುಕಲಿಲ್ಲ.

ಆ ಕಾವಲುಭಟ ಕಿರಿಚಿದ:

" ಏಯ್ ! ಯಾರಿಗೆ ಹೇಳಿದ್ದು ?"

ಅಷ್ಟರಲ್ಲಿ ಬಟಾ ಅಲ್ಲಿಗೆ ಬಂದ. ಕ್ಷಣಮಾತ್ರ ಹೆಖ್ವೆಟ್‌ನತ್ತ ದೃಷ್ಟಿ ಹಾಯಿಸಿ, ಕಟ್ಟೆಯನ್ನು ಸಮೀಪಿಸುತ್ತಿದ್ದ ರಾಜನಾವೆಯನ್ನೊಮ್ಮೆ ನೋಡಿ, ಥಳ ಥಳಿಸುತ್ತಿದ್ದ ಬೆಳಗಿನ ಸೂರ್ಯನಿಗೆ ನಮಸ್ಕರಿಸಿ, ತನ್ನ ದೋಣಿಗಿಳಿದ. ಅಂಬಿಗರು ಹುಟ್ಟು ಹಾಕಿದರು.

* * * *

ಹೆಖ್ವೆಟ್ ಬೋಯಿಗಳನ್ನು ಬೀಳ್ಕೊಟ್ಟು, ಕಟ್ಟೆಯ ಅಧಿಕಾರಿಯ ವಂದನೆ ಸ್ವೀಕರಿಸಿ. ನಾವೆಯನ್ನೇರಿದ. ಅವನ ಜತೆಯಲ್ಲಿ ಇಬ್ಬರಿದ್ದರು: ಎಳೆಯ ಲಿಪಿಕಾರನೊಬ್ಬ, ಹೇಳಿದುದನ್ನು ಬರೆದುಕೊಳ್ಳಲು ಮತ್ತು ಒಬ್ಬ ಆಪ್ತಸೇವಕ, ಆತನ ವೈಯಕ್ತಿಕ ಅನುಕೂಲಗಳನ್ನು ನೋಡಿಕೊಳ್ಳಲು.

ನಾವೆಯ ಹಿಂಭಾಗದಲ್ಲಿ ಛಾವಣಿಯ ಕೆಳಗಿದ್ದ ಪೀಠದ ಮೇಲೆ ಕುಳಿತು, ತನ್ನ ಹೊಟ್ಟೆಯನ್ನು ಅಂಗೈಯಿಂದ ಹಲವು ಬಾರಿ ಹೆಖ್ವೆಟ್ ಸವರಿದ. ಜಠರ ದಲ್ಲಿದ್ದ ವಾಯು ತೇವಳುತ್ತ ತಪ್ಪಿಸಿಕೊಂಡು ಹೊರಹೋಯಿತು; ತುಸು ಹಾಯೆನಿಸಿತು.

ಇನ್ನೂ ಸ್ವಲ್ಪ ತಡವಾಗಿ ಏಳಬಹುದಿತ್ತು. ಆದರೆ ಬೆಳಕು ಹರಿಯುವ ಹೊತ್ತಿಗೆ ಅಮಾತ್ಯ ಬಂದುಬಿಟ್ಟಿದ್ದ. ತನ್ನನ್ನು ಎಬ್ಬಿಸಿದ ದಾಸಿಯ ಮೇಲೆ ಹೆಖ್ವೆಟ್ ರೇಗಿದ. "ಅವನಿಗೆ ಬುದ್ಧಿ ಇಲ್ಲಾಂತ ನಿನಗೂ ಇಲ್ಲವಾ ?" ಎಂದು ಗುಡುಗಿದ. "ಈ ಆಮೆರಬ್ ಸರಿಯಾಗಿ ನಿದ್ದೆ ಕೂಡಾ ಮಾಡೋದಿಲ್ಲಾ ನ್ತೇನೆ," ಎಂದು ಗೊಣಗಿದ.

ಅಮಾತ್ಯ ನೇರವಾಗಿ ಶಯ್ಯಾಗಾರಕ್ಕೇ ಬಂದ. ಮಂಚದ ಮಗ್ಗುಲ ಲ್ಲಿದ್ದ ಪೀಠದ ಮೇಲೆ ಕುಳಿತು, "ನಿನ್ನನ್ನು ಕಂಡರೆ ನನಗೆ ಅಸೂಯೆ ಹೆಷ್ಪೆಟ್ : ಯಾವ ಚಿಂತೆಯೂ ಇಲ್ಲದ ಪರಮ ಸುಖಿ ನೀನು," ಎಂದ.

ಹೆಷ್ಪೆಟ್ ಮಾತನಾಡಲಿಲ್ಲ. ಮುಖಮಾಜನಕ್ಕೆಂದು ಪ್ರಾತರ್ವಿಧಿ ಗಳಿಗೆಂದು, ಬಚ್ಚಲು ಕೊಠಡಿಗೆ ನಡೆದ.

ಆಮೆರಬ್‌ಗೆ ಶೌಚಗೃಹದಿಂದ ಸದ್ದುಗಳು ಕೇಳಿಸಿದುವು. ಮುದುಕ ಬೇಕೆಂದೇ ತಡಮಾಡುತ್ತಿದ್ದಾನೆ ಎನಿಸಿತು. ಅನ್ಯ ಗತಿ ಇಲ್ಲದೆ ಕಿಟಕಿಯಿಂದ ಹೊರನೋಡುತ್ತ ಆಮೆರಬ್ ಕುಳಿತ. ಮನೆಯ ಕಿರಿಯರು ದೊಡ್ಡವರು ದೂರದಿಂದ ಇಣಿಕಿ ನೋಡಿ ಹೋಗುತ್ತಿದ್ದರು. ಎಂದಾದರೊಮ್ಮೆ ಬರುವ ಅಮಾತ್ಯನನ್ನು ಹತ್ತಿರದಿಂದ ಮಾತನಾಡಿಸುವ ಧೈರ್ಯ ಅವರಿಗಿರಲಿಲ್ಲ.

ಶಯ್ಯಾಗೃಹಕ್ಕೆ ಮರಳಿದ ಹೆಷ್ಪೆಟ್ ಅಮಾತ್ಯನನ್ನು ಕೇಳಿದ :

"ಏನು ತಗೊಳ್ತೀಯಾ ?"

"ಏನೂ ಬೇಡ. ನಾನು ಮಹಾಮನೆಗೆ ಹೋಗ್ಬೇಕು. ನೀನು ಆದಷ್ಟು ಬೇಗ ಹೊರಡು. ಮುಚ್ಚಂಜೆಯ ಹೊತ್ತಿಗಾದರೂ ಆನ್ ತಲಪಿದರೆ ಚೆನ್ನಾಗಿ ರ್ತದೆ. ನನ್ನ ಪರವಾಗಿ ಆನ್‌ನ ನಗರಾಧಿಕಾರಿಗೆ ಎಚ್ಚರಿಕೆ ಕೊಡು. ಮಹಾ. ಅರ್ಚಕನ ಚಟುವಟಿಕೆಯ ವಿಷಯ ಆತನಿಂದ ವಿವರವಾದ ವರದಿ ಬಂದಿಲ್ಲ. ಅಮಾತ್ಯರಿಗೆ ಇದರಿಂದ ಆಶ್ಚರ್ಯವಾಗಿದೇಂತ ಹೇಳು."

"ಎಚ್ಚರಿಕೆ ಅವನೊಬ್ಬನಿಗೆ ಮಾತ್ರ ಸಾಕೊ ?....ಮಹಾ ಅರ್ಚಕನ ಹತ್ತಿರ ಯಾವ ಧ್ವನಿಯಲ್ಲಿ ಮಾತನಾಡಬೇಕೂಂತ ನೀನು ಹೇಳಿಯೇ ಇಲ್ಲ."

"ಅದು ನಿನಗೆ ತಿಳೀದೆ ಹೆಷ್ಪೆಟ್ ? ನನಗಿಂತ ಎಷ್ಟೋ ವರ್ಷ ಮೊದಲು ನೀನೇ ಅಮಾತ್ಯನಾಗಬೇಕಿತ್ತು. ಎಲ್ಲಿಯೋ ಎಳೆ ತಪ್ತು. ನನ್ನ ದುರದೃಷ್ಟ."

"ಮಹಾ ಅರ್ಚಕನ ಪೀಕಲಾಟ ಇಲ್ಲದೇ ಇರ್ತಿದ್ರೆ, ದುರದೃಷ್ಟ ಅನ್ನೋ ಪದ ನಿನ್ನ ಬಾಯಿಯಿಂದ ಬರ್ತಿತ್ತೆ? ಸೋಗಲಾಡಿತನ ನನಗೆ ಹಿಡಿಸೋದಿಲ್ಲ."

ಅಮಾತ್ಯ ನೋಡಿದ: ಹೆಷ್ಪೆಟ್‌ನ ತಲೆ ಹಿಂದಕ್ಕೂ ಮುಂದಕ್ಕೂ ಆಡು ತ್ತಿತ್ತು. ತುಟಿ ತೆರೆದಾಗ ಗಟ್ಟಿ ಹಲ್ಲುಗಳು ಕಾಣಿಸಿದುವು. ಬಿದ್ದು ಹೋಗಿ ದ್ದುದು ಕೆಲವೇ ಕೆಲವು....

" ಪೆರೋ ಖೂಫು ಆಗಿನ ಮಹಾ ಅರ್ಚಕನಿಗೆ ಬುದ್ಧಿ ಕಲಿಸಿದ ಅಂತ ನಾವೂ ಅದೇ ಮಾರ್ಗ ಅನುಸರಿಸಬೇಕಾಗಿಲ್ಲ. ಮಂದಿರಗಳು ಈಗ ಬಲಿಷ್ಠ ವಾಗಿವೆ. ಈ ಪರಿಸ್ಥಿತೀಲಿ ಆ ರೀತಿಯ ಘರ್ಷಣೆ ಸಾಧ್ಯವೂ ಇಲ್ಲ. ಪೆರೋ ರಾನ ಅವತಾರವಲ್ಲ ಅನ್ನೋ ಹಾಗೆ ಮಹಾ ಅರ್ಚಕ ವರ್ತಿಸಿದರೆ, ದೇವಮಂದಿರ ಗಳಲ್ಲಿ ಜನರ ನಿಷ್ಠೆ ಉಳಿದೀತಾ ? ಅದನ್ನು ಅವನಿಗೆ ಬಿಂಬಿಸಿ ಹೇಳು."

" ಹೇಪಾಟ್‌ಗೆ ನಿನ್ನ ಮೇಲೆ ಸಿಟ್ಟಿದೆ."

" ನಾನು ಅವನ ಆಟದ ಬುಗರಿಯಾಗಲಿಲ್ಲ ಅಂತಲೊ ?"

" ಹ್ಞ. ಇವನ ಎಂಟೆದೆಗೆ ಏನು ಕಾರಣ ಆಮೆರಬ್ ?"

" ಮಂದಿರದೊಳಗಿನ ದೇವರು ತನ್ನ ಅಧೀನ ಅನ್ನೋ ನಂಬುಗೆ ?"

" ಅಲ್ಲ. ಮಂದಿರದೊಳಗಿನ ಸಂಪತ್ತನ್ನು ಆಧರಿಸಿದ ಅಹಂಕಾರ."

ಅಮಾತ್ಯ ಎದ್ದ.

" ನಾನು ಬರ್‍ತೇನೆ, ಹೆಖ್ವೆಟ್. ಸರು ಅಧಿವೇಶನದಲ್ಲಿ ಅವರೆಲ್ಲರ ಎದುರು ನಿನ್ನ ಜತೆ ಹೀಗೆ ಮಾತಾಡೋದಕ್ಕೆ ಆಗ್ಲಿಲ್ಲ. ಹೇಗಾದರೂ ಮಾಡಿ ಮಹಾ ಅರ್ಚಕನನ್ನು ಕರಕೊಂಡು ಬರೋ ಜವಾಬ್ದಾರಿ ನಿನ್ನದು. ಇದು ಐಗುಪ್ತಕ್ಕೆ ನೀನು ಸಲ್ಲಿಸಬಹುದಾದ ಬಹಳ ದೊಡ್ಡ ಸೇವೆ."

" ಇದಾದ ಮೇಲೆ ಹೆಖ್ವೆಟ್‌ಗೆ ಮರಣ ಬಂದರೂ ಸರಿ, ಅನ್ನು. ಶಿಲ್ಪಿ ಹೇಳ್ತಿದ್ದ—ಗೋರಿಯ ಒಳಗೋಡೆಗಳು ಬೋಳಾಗಿ ಕಾಣ್ತವೆ, ಚಿತ್ರಮಾಲಿಕೆ ಗಳು ಸಾಲದು ಅಂತ."

" ಸರು ಅಧಿವೇಶನದಲ್ಲಿ ನಿನ್ನ ಪಾತ್ರ. ಅರಮನೆ ಔತಣ. ಆನ್‌ಗೆ ನಿನ್ನ ಪ್ರಯಾಣ. ಮಹಾ ಅರ್ಚಕನ ಜತೆ ನೀನು ರಾಜಧಾನಿಗೆ ವಾಪಸಾ ಗೋದು ಇದನ್ನೆಲ್ಲ ಚಿತ್ರಿಸಬೇಕೂಂತ ಚಿತ್ರಕಾರನಿಗೆ ಆದೇಶ ಕಳಿಸ್ತೇನೆ."

" ಸಾಟಿ ಇಲ್ಲದ ಔದಾರ್ಯ. ಪೆರೋನ ಗೋರಿಯಲ್ಲಿ ಬಿಡಿಸಬೇಕಾದ ಚಿತ್ರಗಳು ಯಾವುವು ಅನ್ನೋದು ನಿಷ್ಕರ್ಷೆ ಆಗಿದೆಯಂತಲ್ಲ ? ಕೆಲಸವೂ ಶುರುವಾಗಿದೆ. ಅಂತ ಕೇಳ್ದೆ. ಪೆರೋನ ಪರಿವಾರದ ಚಿತ್ರಮಾಲಿಕೆಯಲ್ಲಿ ಮಹಾ ಪ್ರಭುವಿನ ದಾಸ ಈ ಸಣಕಲ ಹೆಖ್ವೆಟ್‌ನನ್ನೂ ಸೇರಿಸು ನೋಡೋಣ."

" ಆಗಲಿ, ಹೆಖ್ವೆಟ್. ಪೆರೋನ ಜತೆ ನೀನೂ ಚಿರಾಯುವಾಗ್ತೀಯ.... ಮಹಾಪ್ರಭು ಖಂಡಿತ ಬೇಡ ಅನ್ನಲಾರರು .ಬರ್‍ತೇನೆ. ನೀನು ಸಿದ್ಧವಾಗೋದ

ರೊಳಗೆ ಅರಮನೆಯ ಪಲ್ಲಕಿ ಇಲ್ಲಿಗೆ ಬರ್ತದೆ. ನಿನ್ನ ಪ್ರಯಾಣ ಸುಖಕರವಾಗಲಿ. ಪೆರೋನ ಆಯುರಾರೋಗ್ಯ ವರ್ಧಿಸಲಿ !"

ಪ್ರತಿಯಾಗಿ ಹೆಪ್ಪೆಟನೂ ಅಂದ :

"ಪೆರೋನ ಆಯುರಾರೋಗ್ಯ ವರ್ಧಿಸಲಿ. ಮಹಡಿಯ ಬಾಗಿಲು ಜೋಪಾನ. ತಲೆ ತಗಲೀತು."

ಹಾಯಿ ಬಿಚ್ಚದೆಯೇ ಅಳಿವೆಯ ದಿಕ್ಕಿಗೆ ಪಯಣ. ಹರಿಯುತ್ತಿದ್ದ ನದಿಯ ಮಂದಗತಿಗೆ ಅನುಗುಣವಾಗಿ ದೋಣಿಯ ಚಲನೆ. ಅರಮನೆಯ ಪ್ರದೇಶದ ಪ್ರಾಕಾರ ಮುಗಿಯಿತು. ಹಳ್ಳಿ. ಗುಡಿಸಲುಗಳು, ಹೊಲಗಳು ಆ ಕಡೆ ಈ ಕಡೆ ಉದ್ದಕ್ಕೂ ಹಸುರು. ('ಕಣ್ಣಿಗೆ ಈ ಬಣ್ಣ ಒಳ್ಳೇದು.... ನೆಫರ್‌ಟೇಮ್ ಮೊನ್ನೆ ಕಣ್ಣುಗಳಿಗೆ ಹಸುರು ಬಳಕೊಂಡಿದ್ದು.' 'ಇಷ್ಟು ನಿಧಾನವಾಗಿ ಹೋದರೆ ಆನ್ ತಲಪೋದು ಯಾವಾಗ ? ಅಮಾತ್ಯ ಹೇಳಿದ ಹಾಗೆ ಮುಚ್ಚಂಜೆಯ ಹೊತ್ತಿಗಾದರೂ ಊರು ಸೇರಬೇಕು. ಮಹಾ ಅರ್ಚಕ ಅಲ್ಲಿ ಏನು ಕಿತಾಪತಿ ನಡೆಸಿದಾನೊ ? ಕತ್ತಲಲ್ಲಿ ಅಪಾಯಗಳಿರ ಬಹುದು.')

ದೋಣಿಕಾರನನ್ನು ಉದ್ದೇಶಿಸಿ ಹೆಪ್ಪೆಟ್ ಅಂದ :

"ರಾಜನಾವೆ ಕತ್ತೆ ಕೆಟ್ಟುಹೋಯ್ತೆ ? ಊಟ ಮಾಡಿಲ್ಲವಾ ನಿನ್ನ ಅಂಬಿಗರು. ಹುಟ್ಟು ಹಾಕೋದಕ್ಕೆ ಹೇಳು."

ಅಪ್ಪಣೆ ಎನ್ನುವಂತೆ ದೋಣಿಕಾರ ತಲೆ ಅಲುಗಿಸಿದ. ಅಂಬಿಗರು ಹುಟ್ಟು ಗಳಿಗೆ ಕೈ ಹಾಕಿದೊಡನೆ ದೋಣಿ ಒಮ್ಮೆ ಅಲುಗಿತು. ಚಲನೆಯ ಗತಿ ಕ್ರಮೇಣ ತೀವ್ರಗೊಂಡಿತು.

'ನನಗಿಂತ ಎಷ್ಟೋ ಮೊದಲು ನೀನೇ ಅಮಾತ್ಯನಾಗಬೇಕಿತ್ತು. ಎಲ್ಲಿಯೋ ಎಳೆ ತಪ್ಪು."

ಹೆಪ್ಪೆಟ್ ಯೋಚಿಸಿದ :

ನಿರ್ವಹಿಸಬೇಕಾದ ಹೊಣೆಯ ಭಾರ ದುಸ್ಸಹವಾಗಿಯೇ ಆಮೆರಬ್ ಆ ಮಾತನ್ನು ಆಡಿದ. ನಿಜ. ಜೀವನಪ್ರವಾಹ ತಮ್ಮಿಬ್ಬರದೂ ಒಂದೇ ಬಗೆ. (ಆದರೆ ಕೆಲ ವರ್ಷಗಳ ಅಂತರದಲ್ಲಿ.) ಅರಮನೆಯ ಉಗ್ರಾಣದ ಅಧಿಕಾರ; ಗೋರಿಗಳ ಪ್ರದೇಶದ ಉಸ್ತುವಾರಿ; ಕಲ್ಲುಗಳನ್ನು ಕಡಿದು ಅವುಗಳ ಸಾಗಿಗೆ.

ಮುಂದೆ ನ್ಯಾಯಾಧೀಶನಾಗಬೇಕಿತ್ತು. ಅಮಾತ್ಯನಾಗಬೇಕಿತ್ತು. ಬದಲು ಸರುಸಭೆಯ ಹಿರಿಯ ಸಲಹೆಗಾರನಾದೆ. ಅಷ್ಟಕ್ಕೇ ತೃಪ್ತನಾಗಬೇಕಾಯಿತು. ತನಗಿಂತ ಕಿರಿಯವನಾದ ಆಮೆರಬ್ ಮೇಲೇರಿದ, ದಕ್ಷನೆಂದು ಹೆಸರು ಗಳಿಸಿದ, ಮೆರೆದ. ಆತ ಅಮಾತ್ಯನಾದ ಸಮಯದಲ್ಲಿ ಹೇಪಾಟ್‌ಗೆ ತನ್ನ ಬಲದ ಅರಿವಿರಲಿಲ್ಲ. ಆಗ ಅವನು ಶಕ್ತಿಶಾಲಿಯಾಗಿದ್ದು, ಅವನ ಮೈತ್ರಿ ತನಗೆ ಲಭ್ಯವಾಗಿದ್ದರೆ ಅಮಾತ್ಯ ಪದವಿ ತನ್ನದಾಗುತ್ತಿತ್ತು.

ಸೆಣಸಾಟದಲ್ಲಿ ಪೆರೋ ಶಕ್ತಿಹೀನನಾಗಿ ಆಮೆರಬ್ ಪದವಿ ಕಳೆದುಕೊಂಡರೆ ? ಆ ಸ್ಥಾನವೇನೂ ತನ್ನದಾಗುವುದಿಲ್ಲ. ಟಿಹುಟಿ ಅಧಿಕಾರಕ್ಕೆ ಬರುತ್ತಾನೆ. ಜೇನು ಕುಡಿದ ಕರಡಿ. ನೀಲನದಿಗೇ ಬೆಂಕಿ ಇಡಲು ಹೊರಡುವ ಮೂರ್ಖ. ಅವನೆದುರಲ್ಲಿ ತಾನು ಮೂಲೆಗುಂಪಾಗುತ್ತೇನೆ. ಆಗ, ಶಾಶ್ವತ ಭವನಕ್ಕೆ—ಗೋರಿಗೆ—ತಡ ಮಾಡದೆ ತಾನು ಸಾಗಬಹುದು.

ಮಾಗಿ ಕಳೆದ ಮೇಲೆ ಗಾಳಿಯಲ್ಲಿ ಕುಳಿರಿನ ಸೋಂಕಿಲ್ಲ. ಬಿಸಿಲಿನಲ್ಲಿ ಅದು ಚುರುಕು.

ಆಪ್ತ ಸೇವಕ ಕೇಳಿದ :

"ಪಾನೀಯ ಏನಾದರೂ ?"

"ತಾ."

ಅರಮನೆಯ ಔತಣದಲ್ಲಿ ತಾನು ಕುಡಿದ ದ್ರಾಕ್ಷಾಸುರೆ ಚೆನ್ನಾಗಿತ್ತು. ಅಮಾತ್ಯನಿಗೆ ಅರಸನ ಉಗ್ರಾಣದಿಂದ ಉದಾರ ಸರಬರಾಜು. ಸರು ಸದಸ್ಯರಿಗೆ—ಅವರಲ್ಲಿ ಅತ್ಯಂತ ಹಿರಿಯನಾದ ತನಗೂ—ನಿಗದಿಯಾದಷ್ಟು ಮಾತ್ರ. ವಿಸ್ತಾರ ಹೊಲಗಳೂ ಹೇರಳ ರಾಸುಗಳೂ ಇರುವುದರಿಂದ, ಅಭಾವದ ಅನುಭವವಾಗುತ್ತಿಲ್ಲ. ಒಬ್ಬನೇ ಮಗ. ಅವನಿಗೆ ಮಧ್ಯವಯಸ್ಸು ಸಮೀಪಿಸುತ್ತಿದೆ. ತನ್ನ ಸಿಡುಕು ಮೊಂಡುತನ ಅವನವಾದುವು. ಬುದ್ಧಿ ಮಾತ್ರ ಆದೆಲ್ಲಿ ಕರಗಿ ಹೋಯಿತೊ ? ಒಬ್ಬ ಪ್ರಾಂತಪಾಲನ ಹುದ್ದೆಯನ್ನಾದರೂ ಅವನಿಗೆ ಕೊಡಿಸುವ ಆಸೆ. ಸಾಧ್ಯವಾಗುತ್ತದೊ, ಇಲ್ಲವೊ ?

ಹಗುರವಾದ ಸಣ್ಣ ಹೂಜೆಯಲ್ಲಿ ದ್ರಾಕ್ಷಾಸುರೆ. ದೋಣಿ ಅಲುಗಿದರೂ ಒಂದು ಹನಿಯೂ ಚೆಲ್ಲದು. ಒಂದೊಂದೇ ಗುಟುಕು. ಹೀಗೆಯೇ ದೂರ, ದೂರ.

ಎಡದಂಡೆಯುದ್ದಕ್ಕೂ ದೃಷ್ಟಿ ಬಳಲುವವರೆಗೂ ಗೋರಿಗಳು. ದೊಡ್ಡವು, ಚಿಕ್ಕವು.

ತನ್ನ ಆ ಲೋಕದ ವಾಸಕ್ಕಾಗಿ ತಾನು ನಿರ್ಮಿಸುತ್ತಿರುವ ಗೋರಿ ಭವ್ಯ ವಾದದ್ದು. ನೋಡಿದ ಪ್ರತಿಷ್ಠಿತರೆಲ್ಲ ಅದನ್ನು ಮೆಚ್ಚಿದರು. (ಕತ್ತೆಗಳು ! ಕರುಬಿದರು....) ಆ ಗೋರಿಯ ನಿರ್ಮಾಣಕ್ಕೆ ಆಧಾರ—ಪೆರೋನ ಶಿಲ್ಪಿಯೇ ತನ್ನ ಬಿಡುವಿನ ವೇಳೆಯಲ್ಲಿ ರಚಿಸಿದ್ದ ನಕಾಶೆ. 'ಗೋರಿಯ ಒಳಗೋಡೆಗಳು ಬೋಳಾಗಿ ಕಾಣ್ತವೆ.' ಸುಳ್ಳು ! ಶಿಲ್ಪಿ ಹಾಗೆ ಹೇಳಿದ್ದೇ ಇಲ್ಲ, ತನ್ನ ಈಗಿನ ಮಹತ್ಸಾಧನೆಗಳೂ ದಾಖಲಾಗುವಂತೆ ಮಾಡಲು ತಾನು ಹಾಗೆಂದೆ. ಕಲಾ ವಿದರು ಈಗಾಗಲೇ ರಚಿಸಿರುವ ಚಿತ್ರಮಾಲಿಕೆ ಅಪೂರ್ವ ಕಲಾಸೃಷ್ಟಿ. ತಾನು ನಾವೆಯಲ್ಲಿ ವಿಹಾರ ಹೋಗುತ್ತಿರುವ ಚಿತ್ರ. ಕಾಡು ಬಾತುಕೋಳಿಯ ಬೇಟೆ. ಹೆಂಡತಿ ಮಕ್ಕಳ ಜತೆ ಭೋಜನ ; ಇನ್ನೊಂದು ಸಾಲಿನಲ್ಲಿ—ತನ ಸೇವಕರಿಂದ ಹೊಲದ ಉಳುಮೆ; ನಾಟಿ; ಬೆಳೆಯ ಕುಯಿಲು; ಕಾಳೊಕ್ಕು ವುದು; ರೊಟ್ಟಿ ತಟ್ಟುವುದು; ಮತ್ತೊಂದು ಸಾಲಿನಲ್ಲಿ—ಹಸುವನ್ನು ಏರಿರುವ ಹೋರಿ; ಹಸು ಈಯುವುದು; ವಯಸ್ಸಾದ ರಾಸು ಕಸಾಯಿಯವನ ಬಳಿ; ಅದನ್ನು ಕಡಿದು ಮಾಂಸ ಸಿದ್ಧಪಡಿಸುವುದು; ಬೇಯಿಸಿದ ಬಿಸಿಮಾಂಸವನ್ನು ಪಾತ್ರೆಯಿಂದೆತ್ತಿ ತನ್ನ ತಾಟಗೆ ಬಡಿಸುವುದು....ಚಿತ್ರಗಳಾದರೆ ಸಾಕೆ ? ತಾನು ಈಗ ಬಳಸುವ ಎಲ್ಲ ಸಾಮಗ್ರಿಗಳ ಪ್ರತಿರೂಪಗಳನ್ನೂ ಮೂಡಿಸಬೇಕು— ಗೋರಿಯಲ್ಲಿಡುವುದಕ್ಕೋಸ್ಕರ. ಒಳ್ಳೆಯ ಒಂದು ಮಂಚ, ಉತ್ತಮ ಪೀಠ ಪಲ್ಲಕಿ. ನೂರಾರು ದಾಸದಾಸಿಯರ ಪುಟ್ಟ ಪ್ರತಿರೂಪಗಳು....ಸಾಯುವುದಕ್ಕೆ ಮುನ್ನ ತಾನು ಮಾಡಿ ಮುಗಿಸಬೇಕಾದ ಕೆಲಸಗಳು ಇನ್ನೂ ಎಷ್ಟೊಂದಿವೆ ! ('ಎಲಾ ! ಈ ಹೂಜೆಯಲ್ಲಿ ಸುರೆಯೇ ಇಲ್ಲವಲ್ಲ. ತಳ ಮೇಲಕ್ಕೆ ಎತ್ತಿದರೂ ಬೀಳ್ತಾ ಇಲ್ಲ !')....

ಸೇವಕ ತನ್ನ ಒಡೆಯ ಪಡುತ್ತಿದ್ದ ಪಾಡು ನೋಡಿ, ತಲೆ ತಗ್ಗಿಸಿಕೊಂಡು ಮನಸ್ಸಿನೊಳಗೇ ನಕ್ಕು, ಮತ್ತಷ್ಟು ಸುರೆಯನ್ನು ತಂದು ಹೂಜೆಗೆ ಸುರಿದ. (ಮನೆಯಲ್ಲಾಗಿದ್ದರೆ ಸೇವಕ ಚಾಮರ ಬೀಸುವ ಹೊತ್ತು. ನದಿಯ ಅಲೆ ಗಳನ್ನು ಸೀಳುತ್ತ ಹೋಗುವಾಗ ಆ ದುಡಿಮೆ ಅನಗತ್ಯ.)

ನೂರು ಬುಟ್ಟಿ ಹಣ್ಣುಗಳು. ಅದು ಹೆಖ್ವೆಟ್‌ನ ಬಯಕೆ. ಅಷ್ಟು ಬುಟ್ಟಿಗಳನ್ನು ಗೋರಿಯೊಳಗಿಡಬೇಕು—ಆಗರ್ಭ ಶ್ರೀಮಂತರು ಮಾಡುವ ಹಾಗೆ. ಇಷ್ಟನ್ನು ಕೊಳ್ಳಲು ಅಪಾರ ಸಂಪತ್ತೇನೂ ಬೇಡ. ಆದರೆ ಮಂಚಕ್ಕೂ ಪೀಠ ಪಲ್ಲಕಿಗೂ ಒಂದಿಷ್ಟು ಬಂಗಾರದ ತಗಡು ? ಬದುಕಿದ್ದಾಗ, ಆ ಸುಖ ಇರಲಿಲ್ಲ. ಸತ್ತಮೇಲೆ ಯಾಕಿರಬಾರದು ?

'ಬೆಳಕಿಗೆ ಆಗಮನ' ಪುಸ್ತಕ ಬೇಕು. ಲಿಪಿಗಳ ಮೇಲೆ ಬಂಗಾರದ ಪುಡಿ ಉದುರಿಸಿ ಮಾಡಿದ ಕೆಲವು ಪುಸ್ತಕಗಳು ಮಹಾ ಮಂದಿರದಲ್ಲಿ ಇವೆಯಂತೆ. ಆ ಅಮೂಲ್ಯ ದಾಸ್ತಾನಿನಿಂದ ಒಂದನ್ನು ತಾನು ಪಡೆಯಬೇಕು.

ಇಷ್ಟಾದರೆ ಆಯಿತೆ ? (ದೋಣಿ ಇದ್ದಕ್ಕಿದ್ದಂತೆ ಜೋರಾಗಿ ಅಲು ಗಾಡಿತು. ಹೆಖ್ವೆಟ್ ಎಡ ಅಂಗೈಯಿಂದ ಪೀಠದ ಕೈಯನ್ನು ಭದ್ರವಾಗಿ ಹಿಡಿದುಕೊಂಡ. ಬಲಗೈಯಲ್ಲಿದ್ದ ಮದಿರೆಯ ಹೂಜೆಯನ್ನು ಎದೆಗೆ ಆತು ಹಿಡಿದ. ಗಟ್ಟಿಯಾಗಿ ಕೂಗಿ ಕೇಳಿದ : "ಏನು ಮಾಡ್ತಿದೀರೋ ? ಏನ್ರೊ ಅದು ?" ಅಸ್ಪಷ್ಟ ಪದಗಳು. "ಏನಿಲ್ಲ ಸ್ವಾಮಿ, ನೀರ ಕೆಳಗಿನ ಮರಳ ದಿಬ್ಬ." ಎಂದು ನುಡಿದು ದೋಣಿಕಾರ ತನ್ನ ಅಂಬಿಗರಿಗೆ ಛೀಮಾರಿ ಹಾಕಿದ : "ಕುಡಿದಿದೀರೇನ್ರೋ ? ಕತ್ತೆಗಳ್ರಾ ! ನೋಡ್ಕೊಂಡು ಹುಟ್ಟು ಹಾಕ್ರೋ...." ) ನದೀ ಪ್ರವಾಸದಲ್ಲಿ ಸಾವು ಒಳ್ಳೆಯದಲ್ಲ. ಒಂದು ರೀತಿಯ ಅಪಮೃತ್ಯು. ನೀರು ತುಂಬಿ ಮೈ ಊದಿಕೊಳ್ತದೆ. ('ಸ್ವಲ್ಪ ಮಾತ್ರ ಊದಿಕೊಂಡರೆ ನೋಡೋದಕ್ಕೆ ಚೆನ್ನಾಗಿದ್ದೀತು.') ಶವರಕ್ಷಣೆಯ ವಿಷಯದಲ್ಲಿ ಮಾತ್ರ ಲೆಕ್ಕಾಚಾರ ಮಾಡಬೇಡ ಅಂತ ಮಗನಿಗೆ ಹೇಳಬೇಕು. ಪೆರೋ ಸತ್ತಾಗ ಯಾವ ಲೇಪನ ಸಾಮಗ್ರಿ ಬಳಸುತ್ತಾರೋ ಅದೇ ತನಗೂ. ಮೂಗಿನ ಹೊಳ್ಳೆಗಳ ಒಳಕ್ಕೆ ತಾಮ್ರದ ಕೊಕ್ಕೆ ಹಾಕಿ, ಮೆದುಳನ್ನು ಹೊರಗೆ ತೆಗೀತಾರೆ (ಹೇಗಿರ್ತದೋ ತನ್ನ ತೀಕ್ಷ್ಣ ಬುದ್ಧಿಯ ಮೆದುಳು ?) ಪಾರ್ಶ್ವದಲ್ಲಿ ಚೂಪು ಗಲ್ಲಿನಿಂದ ಗೀರು ಹಾಕಿ ಕುಯ್ದು ಕರುಳುಗಳನ್ನು ಹೊರಕ್ಕೆ ಎಳೀತಾರೆ. ಒಳ ಭಾಗವನ್ನು ತಾಳೆ ಸುರೆಯಿಂದ ತೊಳೆದು, ಸುಗಂಧ ದ್ರವ್ಯ ತುಂಬಿ ಹೊಲೀತಾರೆ. ಹೊರತೆಗೆದ ಮೆದುಳಿಗೊಂದು ಜಾಡಿ, ಕರುಳಿಗೊಂದು ಜಾಡಿ. ಆ ಮೇಲೆ ಇಡೀ ಶರೀರವನ್ನು ಲೇಪನ ರಸಾಯನದಲ್ಲಿ ಎಪ್ಪತ್ತು ದಿನ ಅದ್ದುತ್ತಾರೆ. ಆ ಅವಧಿ ಮುಗಿದ್ಮೇಲೆ ಶರೀರವನ್ನು ತೆಗೆದು, ಸೆಣಬಿನ ಪಟ್ಟೆಯಿಂದ ಗೋಂದು

ಹಾಕಿ ಸುತ್ತುತ್ತಾರೆ. ರಕ್ಷಿತ ಶವ. ನೆಟ್ಟಗೆ ನಿಲ್ಲಿಸ್ತಾರೆ. ಅಂತಿಮ ಯಾತ್ರೆಗೆ ಸಿದ್ಧತೆ. ಅರ್ಚಕ ತುಟಿಗಳ ನಡುವೆ ಗೀರು ಹಾಕಿ ಬಾಯಿಯ ಸಂದಿ ಬಿಡಿಸುತ್ತಾನೆ.

ಬಹಳ ಜನ ಅಳಬೇಕು, ಬಹಳ ಜನ. ಸಾವಿರಾರು ಶೋಕ ಸ್ತ್ರೀಯರನ್ನು ನೇಮಿಸ್ಬೇಕು. ಸ್ತ್ರೀಯರಿಂದ ಶೋಕರೋದನ. ಅರ್ಚಕನಿಂದ ಶೋಕ ನರ್ತನ. ಮಂತ್ರ ಪಠಣ.

ಎಷ್ಟು ಸೊಗಸಾದ ಭೋಜನ ಏರ್ಪಡಿಸ್ಬೇಕು ಅಂದರೆ, ಉಣ್ಣುತ್ತ ಎಲ್ಲರೂ "ಮಹಾಪುರುಷ" ಎಂದು ತನ್ನನ್ನು ಕೊಂಡಾಡಬೇಕು.

....ಆದರೆ, ತಾನು ಸತ್ತ ಅನಂತರದ ಈ ಕೆಲಸಗಳನ್ನೆಲ್ಲ ಸಮರ್ಪಕವಾಗಿ ಮಾಡಿಸುವವರು ಯಾರು ? ತನ್ನ ಸುಪುತ್ರ. ಆ ಪುತ್ರ ಅದೆಷ್ಟು ಮಾಡಿಸ್ತಾನೊ ? ಅದೆಷ್ಟು ಬಿಡ್ತಾನೊ ?

ಎಲ್ಲದಕ್ಕಿಂತ ದೊಡ್ಡ ಸಮಸ್ಯೆ ಉದ್ಭವವಾಗುವುದು ಗೋರಿಯ ಬಾಗಿಲು ಮುಚ್ಚಿದ ಮೇಲೆ. ಅದು ಭದ್ರವಾಗಿರಬೇಕು. ಗೋರಿ ಕಳ್ಳರಿಂದ ರಕ್ಷಣೆ.... ಇಂಥ ಕಲ್ಲನ್ನು ಹೀಗೆ ಸರಿಸಿದರೆ ಒಳ ಪ್ರವೇಶ—ಅಂತ ಕಲ್ಲು ಕೆಲಸಗಾರರೇ ಚೋರರಿಗೆ ಸುಳಿವು ಕೊಟ್ಟರೆ ? ಈ ವಿಧಾನದಿಂದಲೇ ಅಲ್ಲವೇ ಹಲವು ಗೋರಿಗಳನ್ನು ದರೋಡೆಗಾರರು ಲೂಟಿ ಮಾಡಿರುವುದು ? ಗೋರಿಪ್ರದೇಶಕ್ಕೆ ರಕ್ಷಣೆ ಒದಗಿಸಬೇಕು ಪೆರೋ. ನಿತ್ಯ ಕಾವಲು. ಯಾರೂ ಹೊಲಸು ಮಾಡಿ ಗೋರಿಯನ್ನು ಅಪವಿತ್ರಗೊಳಿಸಬಾರದು. ವರ್ಷಕ್ಕೊಮ್ಮೆ ಪೂಜೆ. ಸತ್ತ ಮೇಲೂ ದೇವರ ರಕ್ಷಣೆ ಬೇಡವೆ ? ಅಂಥ ರಕ್ಷಣೆ ಇದ್ದರಲ್ಲವೆ ಕರೆ ಬಂದಾಗ ಸತ್ತವನು ಎದ್ದು ಬರುವ ಸಾಧ್ಯತೆ ? ಈ ವೆಚ್ಚಕ್ಕೆ ಹಣ ?

—ಒಂದಷ್ಟು ಹೊಲಗಳನ್ನೂ ರಾಸುಗಳನ್ನೂ ದೇವಮಂದಿರಕ್ಕೆ ಉಂಬಳಿಯಾಗಿ ಬಿಡಬೇಕು. ನಾನೇನೋ ಬಿಡಬಹುದು. ಆದರೆ ಮಗ ಅದನ್ನು ಮುಂದುವರಿಸಿಕೊಂಡು ಹೋಗುವವನೋ ಇಲ್ಲವೋ. ಅಥವಾ, ಮಂದಿರದವರೇ ಈ ಹೊಲಗಳನ್ನೂ ರಾಸುಗಳನ್ನೂ ಬಳಸಿ, ಸೋಮಾರಿಗಳಾಗಿ ತನ್ನನ್ನು ಮರೆತರೆ ?

'ಇವರೆಲ್ಲ ನನ್ನನ್ನು ಮರೆತರೆ ?'

ಒಂದು ಹನಿ ಕಣ್ಣೀರು....

ಹೊಜೆಯೂ ಕೈಯಿಂದ ಕೆಳಕ್ಕೆ....(ಸೇವಕ ಅದನ್ನು ಹಿಡಿದುಕೊಂಡ.... ಕಣ್ಣೆವೆಗಳು ಮುಚ್ಚಿಕೊಳ್ಳುತ್ತಿವೆ.)

ಸಾವು ? 'ಥೂ ಮರುಳೆ! ಇದು ನಿದ್ದೆ'....

....ಎಷ್ಟೋ ಹೊತ್ತಿನ ಬಳಿಕ ಗಡಬಡಿಸಿ ಎದ್ದು ಹೆಪ್ವೆಟ್ ಕೂಗಾಡಿದ : "ಏನ್ರೋ ಅದು ? ಸಾಯಿಸ್ತೀರೇನ್ರೋ."

ಎಳೆಯ ಲಿಪಿಕಾರ ಅಂದ :

" ಡಿಕ್ಕಿ ಹೊಡೆದದ್ದಲ್ಲ—ದಂಡೆ ಮುಟ್ಟಿದ್ದು. ಅರ್ಧದಾರಿ ಆಯ್ತು. ಮರಗಳಿವೆ, ನೆರಳಿದೆ. ಊಟ ಮುಗಿಸಿ ಮುಂದಕ್ಕೆ ಪ್ರಯಾಣ."

ಹೆಪ್ವೆಟ್ ಕಣ್ಣುಗಳನ್ನು ಮುಚ್ಚುತ್ತ ತೆರೆಯುತ್ತ, ಮುಚ್ಚುತ್ತ ತೆರೆಯುತ್ತ, ರಣರಣ ಬಿಸಿಲನ್ನು ನೋಡಿದ. ಪೀಠದಿಂದ ನಿಧಾನವಾಗಿ ಎದ್ದು, ಅಡಿ ತಪ್ಪದಂತೆ ಎಚ್ಚರ ವಹಿಸುತ್ತ, ದೋಣಿಕಾರ ನೀಡಿದ ಕೈಯನ್ನು ಆಧರಿಸಿ, ನದಿಯ ಅಂಚಿನ ಒದ್ದೆ ಮರಳಿನ ಮೇಲೆ ಪಾದರಕ್ಷೆಯನ್ನು ಊರಿದ.

* * * *

ಪಶ್ಚಿಮ ದಿಕ್ಕಿಗೆ ಧಾವಿಸುತ್ತಿದ್ದ ರಾ ನ ಕಿರಣಗಳು ತಣ್ಣಗಾಗುವುದಕ್ಕೆ ಮೊದಲೇ ರಾಜನಾವೆ ಆನ್ ನಗರಿಯ ದೋಣಿಕಟ್ಟೆಯನ್ನು ತಲಪಿತು. ಸಣ್ಣ ಕಟ್ಟೆ. ದೂರದಲ್ಲಿ ಮಹಾ ಅರ್ಚಕನ ನಾವೆಯನ್ನು ಕಟ್ಟಿತ್ತು. ಒಂದೆರಡು ಹೇರು ದೋಣಿಗಳೂ ಇದ್ದುವು.

ಹೆಪ್ವೆಟ್ ದೋಣಿಯಿಂದ ಇಳಿಯಲಿಲ್ಲ.

ಎಳೆಯ ಲಿಪಿಕಾರ ಕಾವಲು ಭಟರಿಗೆ ತಿಳಿಯ ಹೇಳಿದ :

" ಇವರು ಪೆರೋನ ಹಿರಿಯ ಸಲಹೆಗಾರರು—ಹೆಪ್ವೆಟ್. ಓಡಿಹೋಗಿ ಆನ್ ನಗರಾಧಿಕಾರಿಗೆ ತಿಳಿಸಿ ಬಿಡಿ. ಆತ ಪಲ್ಲಕಿ ತಗೊಂಡು ಬರಲಿ."

ಎರಡು ಮೂರು ವರ್ಷ ಹಿಂದೆ ಹೆಪ್ವೆಟ್ ಅಲ್ಲಿಗೆ ಬಂದಿದ್ದ. ಸಕುಟುಂಬವಾಗಿ, ಯಾತ್ರಾರ್ಥಿಯಾಗಿ ಇಳಿದು ನಡೆದೇ ರಾಜಗೃಹಕ್ಕೆ ಹೋಗಬಹುದು. ಆದರೆ ರಾಜ ಪ್ರತಿನಿಧಿ ಹಾಗೆ ಮಾಡಿದರೆ ಆತನ ಬಗೆಗೆ ಏನು ಗೌರವ ಉಳಿದೀತು ?

ಮೂಲೆಯಲ್ಲಿ ನಿಂತಿದ್ದ ಹೆಪ್ವೆಟ್‌ನ ಜತೆ ಬಂದಿದ್ದ ಎಳೆಯ ಲಿಪಿಕಾರ

ಕಿರು ಯೌವನಕ್ಕೆ ಕಾಲಿರಿಸಿದ್ದ ದೇವಸೇವಕನೊಬ್ಬ ಕಟ್ಟೆಯ ಕಡೆಗೆ ಬರುತ್ತಿದ್ದು ದನ್ನು ಕಂಡ. 'ಇವನು ಯಾವನೋ ಪರಿಚಿತ' ಎನಿಸಿತು. ಇನ್ನೂ ಹತ್ತಿರ ಬಂದಾಗ, ಗುರುತು ಹಿಡಿದ. ರಾಜಧಾನಿಯವನು. ದೇವಸೇವಕನಾಗುವು ದಕ್ಕೆ ಮುಂಚೆ ಮಹಾಮಂದಿರದ ಶಾಲೆಯಲ್ಲಿ ಅವನ ಸಹಪಾಠಿಯಾಗಿದ್ದವನು.

"ಎಲಾ, ಇಲ್ಲಿಗೆ ಯಾಕೆ ಬಂದೆ ?"

—ಈತ ಕೇಳಿದ.

"ಅಸ್ವಸ್ಥ ಸಂಬಂಧಿಕನನ್ನು ಕಾಣೋದಕ್ಕೆ...."

—ಎಂದ ಆತ.

"ನಿನಗೆ ಯಾವ ಸಂಬಂಧಿಕ ಈ ಊರಲ್ಲಿ ?"

"ಅದನ್ನೆಲ್ಲ ಕೇಳಬಾರದು. ಹೇಳಿದ್ದನ್ನು ನಂಬಿ ಸುಮ್ಮನಿದ್ದರೆ ಯಾರಿಗೂ ತೊಂದರೆಯಾಗೋದಿಲ್ಲ."

ದೇವಸೇವಕ ಕುತೂಹಲದಿಂದ ಹೆಪ್ಪಿಟ್‌ನನ್ನು ನೋಡಿದ.

ಲಿಪಿಕಾರ, "ಅವರು ಹೆಪ್ಪಿಟ್" ಎಂದ.

"ಗೊತ್ತು."

"ಹ್ಯಾಗೆ ?"

"ಮಹಾಮಂದಿರಕ್ಕೆ ಅವರು ಬಂದಾಗ ನೋಡಿದ್ದು."

ಹೆಪ್ಪಿಟ್ ಥಟ್ಟನೆ ತಿರುಗಿ ಆ ದೇವಸೇಕನನ್ನು ನೋಡಿ, "ಬಾ ಇಲ್ಲಿ," ಎಂದ. ಸ್ನೇಹಿತರಿಬ್ಬರಿಗೂ ಅಚ್ಚರಿ. ಮುದುಕನಿಗೆ ತಮ್ಮ ಸಂಭಾಷಣೆ ಕೇಳಿಸಲಾರದು ಎಂದು ಕೊಂಡಿದ್ದರು. ಈಗ....

ಎಳೆಯ ಲಿಪಿಕಾರ ಹೆಪ್ಪಿಟ್‌ನ ಬಳಿ ಸರಿದ.

"ಅವನನ್ನು ಕರಿ," ಎಂದ ಹೆಪ್ಪಿಟ್.

ಇನ್ನೊಬ್ಬ ಹತ್ತಿರ ಬಂದಾಗ ಆತ ಕೇಳಿದ :

"ಮಹಾ ಅರ್ಚಕರನ್ನು ನೋಡೋಕೆ ಈ ಊರಿಗೆ ಬಂದಿದ್ದೆಯಾ ?"

ದೇವಸೇವಕನಿಗೆ ಗಾಬರಿ. ಹೆಪ್ಪಿಟ್ ನಾವೆಯ ಒಡಲಿನಿಂದ ಎತ್ತಿ ಹಿಡಿದಿದ್ದ ತನ್ನ ಪದವಿ ದಂಡದ ಕಡೆಗೊಮ್ಮೆ ನೋಡಿ, ಗುಡುಗಿದ :

"ನಾನು ಯಾರು ಗೊತ್ತಿಲ್ಲ ?"

"ಗೊತ್ತು, ಸ್ವಾಮಿ. ಮಂದಿರದ ಕೆಲಸ. ಮೊನ್ನೆ ರಾತ್ರಿ

ಮಹಾಮಂದಿರದಿಂದ ಕಳಿಸಿದ್ರು. ಬಂಶ್ಷ್ಟೆ. ನಿನ್ನೆ ರಾತ್ರಿಯೇ ವಾಪಸು ಹೋಗ್ಬೇಕಾಗಿತ್ತು. ದೋಣಿ ಸಿಗಲಿಲ್ಲ. ಈಗ ಹೊರಟಿದ್ದೇನೆ."

" ಹಾಗಾದರೆ ಇಲ್ಲಿ ಇಲ್ಲದ ಸಂಬಂಧಿಕನನ್ನು ಯಾಕೆ ಹುಟ್ಟಿಸ್ಕೊಂಡೆ ? "

" ಅದು ಹಿರಿಯ ದೇವಸೇವಕರ ನಿರ್ದೇಶ, ಸ್ವಾಮಿ."

" ಭೇಷ್. ನಾನು ನಿನ್ನೆ ಬೆಳಿಗ್ಗೆಯೇ ಹೊರಟಿದ್ದರೂ ನನ್ನ ಪ್ರಯಾಣದ ಸುದ್ದಿ ಮಹಾ ಅರ್ಚಕರಿಗೆ ಗೊತ್ತಿರ್ತಿತ್ತು. ಅಲ್ಲ ?"

" ಈಗ ನೀವು ಹೇಳಿದ್ದೆಲ್ಲ ನಿಮ್ಮ ಊಹೆ. ನಾನು ಏನೂ ಹೇಳಿಲ್ಲ. ಅಸ್ವಸ್ಥ ಸಂಬಂಧಿಕನನ್ನು ನೋಡೋದಕ್ಕೆ ಅಂತಲೇ ನಾನು ಬಂದದ್ದು. ನೋಡಿ ಯಾಯ್ತು. ಹೋಗ್ತಿದ್ದೇನೆ."

ಹೆಪ್ಪೆಟ್ ತನ್ನ ಪರಿವಾರದ ಲಿಪಿಕಾರನತ್ತ ಹೊರಳಿ, " ಅಸಾಧಾರಣ ಕುಳ ಕಣಯ್ಯ, ನಿನ್ನ ಸ್ನೇಹಿತ. ಮುಂದೆ ಒಂದು ದಿವಸ ಇವನು ಮಹಾ ಅರ್ಚಕನಾಗಲೂ ಬಹುದು," ಎಂದ.

ದೂತನಾಗಿ ಬಂದಿದ್ದ ದೇವಸೇವಕ ಹಲ್ಲುಕಿರಿದ.

ಅಷ್ಟರಲ್ಲಿ ಪೀಠಪಲ್ಲಕಿ ಬಂತು. ಸ್ವರ್ಣಖಚಿತ ಆಸನವಲ್ಲ: ಆದರೂ ಸಾಕಷ್ಟು ಚೆನ್ನಾಗಿತ್ತು. ಅದು ತಲಪಿದ ಕೆಲ ಕ್ಷಣಗಳಲ್ಲಿ ನಗರಾಧಿಕಾರಿ ಸೆರ್ಕೆಟ್ ಏದುಸಿರು ಬಿಡುತ್ತ ಬಂದ. ಅವನೆಂದ :

" ಕ್ಷಮಿಸ್ಬೇಕು. ಸರುಸಭೆಯ ಹಿರಿಯ ಸಲಹೆಗಾರರು ಆನ್‌ನಗರಿಗೆ ಬರೋದು ನನಗೆ ತಿಳಿದಿರಲಿಲ್ಲ."

" ಅಧಿಕೃತವಾಗಿ ಯಾರೂ ತಿಳಿಸಿರಲಿಲ್ಲ, ಅಲ್ಲವಾ ?" ಎಂದು ಹೆಪ್ಪೆಟ್ ಕೇಳಿದ.

ನಗರಾಧಿಕಾರಿ ತಬ್ಬಿಬ್ಬಾದ.

" ಹೌದು. ತಿಳಿಸಿರಲಿಲ್ಲ," ಎಂದು ತೊದಲಿದ.

ದೇವಸೇವಕನಿಗಾಗಿ ಹೆಪ್ಪೆಟ್ ಅತ್ತಿತ್ತ ದೃಷ್ಟಿ ಹರಿಸಿದ. ಹುಡುಗ ಕಾಣಿಸಲಿಲ್ಲ.

" ಸೆರ್ಕೆಟ್ ! ಅಧಿಕೃತವಾಗಿ ತಿಳಿಸದೆ ಇದ್ದರೇನು ? ಬೇರೆ ರೀತಿಯ ಸುದ್ದಿಗಳು ಬರೋದೇ ಇಲ್ಲವೆ ?"

" ಒಮ್ಮೊಮ್ಮೆ ಬರ್ತವೆ...."

ನಿಜಯಿಯ ಮುಂದಹಾಸವನ್ನು ಸೂಸುತ್ತ ಹೆಶ್ಟೆಟ್ ಎದ್ದು, ದೋಣಿ ಕಾರನ ನೆರವು ಸ್ವೀಕರಿಸಿ, ಪದವಿ ದಂಡದೊಡನೆ ನಾವೆಯಿಂದ ಇಳಿದು ಪಲ್ಲಕಿ ಯತ್ತ ಸಾಗಿದ.

....ರಾಜಗೃಹ ತಲಪಿದೊಡನೆ ಹೆಶ್ಟೆಟ್ ಮಹಾ ಅರ್ಚಕನ ಭೇಟಿಗೆ ಹೋಗಬಹುದು ಎಂದು ನಗರಾಧಿಕಾರಿ ಸೆರ್ಕೆಟ್ ಭಾವಿಸಿದ್ದ. ಆದರೆ ಮುದುಕ ಅಂಥ ಆತುರ ತೋರಲಿಲ್ಲ. ಬದಲು, ಶೌಚಗೃಹವನ್ನು ಸಂದರ್ಶಿಸಿ ಬಂದು, ರಾಜಗೃಹದ ಪಡಸಾಲೆಯಲ್ಲಿ ಸುಖಾಸೀನನಾಗಿ, ಸೆರ್ಕೆಟ್‌ನನ್ನು ಹತ್ತಿರಕ್ಕೆ ಕರೆದ.

" ರಾ ಮಂದಿರದಲ್ಲಿ ಭಾರೀ ಧಾರ್ಮಿಕ ಜಿಜ್ಞಾಸೆ ನಡೀತಿದೆ—ಅಲ್ಲವಾ ?"

" ಹ್ಞಾ. ಮಹಾ ಅರ್ಚಕರು ಬಂದಾಗಿನಿಂದ—ಸುಮಾರು ನಾಲ್ಕು ತಿಂಗಳಿಂದ—ಈ ನಗರಿಗೆ ಬರಹೋಗುವವರ ಸಂಖ್ಯೆ ಹೆಚ್ಚಿದೆ."

" ಧಾರ್ಮಿಕ ಜಿಜ್ಞಾಸೆಗೆ ಬರೇ ದೇವಸೇವಕರೇ ಬರಬೇಕೆಂಬ ನಿಯಮ, ಇಲ್ಲ."

" ಹಾಗೇನೂ ಇಲ್ಲ...."

" ಬಂದವರಿಗೆಲ್ಲ ರಾಜಗೃಹದಲ್ಲಿ ವಸತಿ ಏರ್ಪಾಟು ಮಾಡಿ ಮಾಡಿ ದಣಿದಿದ್ದೀಯೇನೊ ?"

" ಸ್ವಾಮಿ, ಮಹಾ ಅರ್ಚಕರು ಒಮ್ಮೆ ರಾಜಧಾನಿಗೆ ವಾಪಸಾದರೆ ಸಾಕು ಅನಿಸಿ ಬಿಟ್ಟಿದೆ."

" ಮುಖ್ಯ ಪಟ್ಟಣದಿಂದ ಮಹಾ ಅರ್ಚಕನ ಭೇಟಿಗೇಂತ ಪ್ರಾಂತಪಾಲ ಇಲ್ಲಿಗೆ ಬರಲಿಲ್ಲವಾ ? ".

" ಇಲ್ಲ. "

" ಇಲ್ಲಿ ನಡೆಯೋದನ್ನೆಲ್ಲ ರಾಜಧಾನಿಗೆ ನೀನು ವರದಿ ಮಾಡಿಲ್ಲವಂತೆ."

" ನನ್ನ ಲಿಪಿಕಾರ ಏನು ಬರೆದುಕೊಟ್ಟರೂ ಮಂದಿರದಲ್ಲಿ ಇರುವವರಿಗೆಲ್ಲ ಗೊತ್ತಾಗ್ತದೆ. ಅಲ್ದೆ, ಏನು ಬರೀಬೇಕು ಏನು ಬರೀಬಾರ್ದು ಅನ್ನೋದೂ ನನಗೆ ತಿಳೀದು....ಮೇಲಿನವರಿಗೆ ಸಂಬಂಧಪಟ್ಟದ್ದು. ನಾನು ಕೈಹಾಕೋದು ಸರಿಯಾ ?"

ರಾಜಗೃಹದ ಪಡಸಾಲೆಯನ್ನೂ ಜಗಲಿಯನ್ನೂ ನೋಡಿ ಹೆಶ್ಟೆಟ್ ಅಂದ :

" ಇವತ್ತಷ್ಟೇ ತೊಳೆಯೋದು ಬಳಿಯೋದು ಮಾಡಿದ್ದೀರಿ. ನಿನ್ನೆ ರಾತ್ರೆ

ಯಾರು ಮಲಗಿದ್ದರಪ್ಪ ಇಲ್ಲಿ ? ”

“ ಹೇಳಬಾರದು ಅಂದಿದ್ರು. ಆದರೆ ನಾನು ಸ್ವಾಮಿನಿಷ್ಠ. ಹೇಳ್ತೀನೆ. ಟೆಹುಟಿ ಮತ್ತು ಬಕಿಲ.”

“ ಈಗೆಲ್ಲಿದ್ದಾರೆ ಅವರು ?”

“ ಭೂಮಾಲಿಕರ ವಸತಿ ಗೃಹದಲ್ಲಿ.”

“ ನಾನು ಕೇಳೋ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಕೊಡು. ಅದರಿಂದ ನಿನಗೆ ಒಳ್ಳೇದಾಗ್ತದೆ. ದೇವರೂ ಮೆಚ್ತಾನೆ. ಇಲ್ಲಿ ಮಹಾ ಅರ್ಚಕರ ಭೇಟಿಗೆ ಯಾರು ಯಾರು ಬರ್ತಾರೆ ?”

“ ಬೇರೆ ಬೇರೆ ಪ್ರಾಂತಗಳ ಭೂಮಾಲಿಕರು. ಬೇರೆ ಬೇರೆ ಮಂದಿರಗಳ ಅರ್ಚಕರು. ಒಬ್ಬಿಬ್ಬರು ಪ್ರಾಂತಪಾಲರೂ ಬಂದದ್ದುಂಟು. ಹೊರಗಿನಿಂದ ಬಂದವರು ಮಹಾ ಅರ್ಚಕರ ಜತೆ ಇದ್ದಾಗ ಒಮ್ಮೆ ನಾನು ಅಲ್ಲಿಗೆ ಹೋದೆ. ‘ಸೆರ್ಕೆಟ್, ನೀನು ರಾಜಗೃಹದಲ್ಲಿರು’ —ಅಂದ್ರು ಹೇಪಾಟ್. ಬಂದ್ಬಿಟ್ಟೆ. ಅಲ್ಲಿದ್ದು ನನಗೆ ಆಗಬೇಕಾದ್ದೇನು ? ಅಲ್ದೆ, ಅವರ ಧರ್ಮಜಿಜ್ಞಾಸೆ ನನಗೆ ಅರ್ಥವಾಗೋದೂ ಇಲ್ಲ.”

“ ಟೆಹುಟಿ ಜತೆ ಬೇರೆ ಯಾರಿದ್ದಾರೆ ?”

“ ನಾಲ್ಕೈದು ದಿವಸದ ಹಿಂದೆಯಷ್ಟೇ ನುಟ್‌ಮೋಸ್, ಸೆತೆಕ್‌ನಖ್ತ್ ಸೆನ್‌ಉಸರ್ಟ್ ಅಂತ ಮೂವರು ನೀರಾನೆ ಪ್ರಾಂತದ ಭೂಮಾಲಿಕರು ಬಂದ್ರು ....ರಾಜಧಾನಿಯಿಂದ. ಇನ್ನೂ ಇಲ್ಲಿಯೇ ಇದ್ದಾರೆ.”

“ ಹೇಪಾಟ್ ಆಗಾಗ್ಗೆ ಮೂರು ದಿನಗಳದ್ದೋ ಆರು ದಿನಗಳದ್ದೋ ಅಖಂಡ ಪೂಜೆ ಮಾಡ್ತಾರಂತಲ್ಲ ?”

“ ಅವರ ಹೆಸರಿನಲ್ಲಿ ಬೇರೆ ದೇವಸೇವಕರು ಮಾಡ್ತಾರೆ. ಆ ಸಮಯದಲ್ಲಿ ಮಹಾ ಅರ್ಚಕರು ಗೋಪ್ಯವಾಗಿ ಅನ್‌ನಗರಿಯಿಂದ ಹೊರಗೆ ಪ್ರವಾಸ ಹೋಗಿ ಬರ್ತಾರೆ.”

“ ಪ್ರವಾಸ ? ಯಾವ ಕಡೆಗೊ ?”

“ ಒಂದು ಸಲ ಅವರು ಹೋದದ್ದು ಈಶಾನ್ಯ ಗಡಿಗೆ. ನಮ್ಮ ದಂಡು ಇದೆಯಲ್ಲ ಅಲ್ಲಿಗೆ.”

“ ಅಮೆನೆಮೊಪೆಟ್ ಸೇನಾಪತಿ—ಅಲ್ಲವಾ ? ”

ಮುದುಕ ಎಲ್ಲವನ್ನೂ ಬಲ್ಲವನು ಎನಿಸಿತು ಸೆರ್ಕೆಟ್‌ಗೆ.

"ಹೌದು....ಆ ದಂಡಿಗೆ ಆಹಾರಧಾನ್ಯ ಸರಬರಾಜು ಆಗೋದು ನಮ್ಮ ನಗರಿಯ ಮೂಲಕ. ಇಲ್ಲಿ ದೋಣಿಗಳಿಂದ ಇಳಿಸಿ ಕತ್ತೆಗಳ ಮೇಲೆ ಹೇರಿಸ್ಕೊಂಡು ಹೋಗ್ಬೇಕು. ಅದರ ಉಸ್ತುವಾರಿಗೇಂತ ಅಮೆನೆಮೊಪೆಟ್ ಒಮ್ಮೆ ಇಲ್ಲಿಗೆ ಬಂದಿದ್ದ ಹಾಗೆ ಬಂದವನನ್ನು ಮಹಾ ಅರ್ಚಕರು ಕರೆಸ್ಕೊಂಡು ಮಾತಾಡಿದ್ರು."

"ಅಥವಾ. ಉಸ್ತುವಾರಿಗೋಸ್ಕರ ಬಾ ಅಂತ ಅವರೇ ಹೇಳಿ ಕಳಿಸಿದರೊ?"

"ಏನೋಪ್ಪ."

"ಅಂತೂ ಆ ಭೇಟಿ ಆದ್ಮೇಲೆ ಹೇಪಾಟ್ ದಂಡು ನೋಡೋಕೆ ಹೋದರು ಅಲ್ಲವಾ ?"

"ಹ್ಞಾ, ಹೌದು."

ಎಷ್ಟೋ ಸಿಕ್ಕುಗಂಟುಗಳು ಬಿಚ್ಚಿಕೊಂಡು, ಪರಿಸ್ಥಿತಿಯ ರೂಪುರೇಖೆಗಳು ಹೆಪ್ವೆಟ್‌ಗೆ ನಿಚ್ಚಳವಾಗಿ ಕಂಡುವು. ಸಂತೃಪ್ತಿಯ ಮುಗುಳುನಗೆ ಒಣ ತುಟಿಗಳ ಮೇಲೆ ಮೂಡಿತು. ನೋಟವನ್ನು ಮೃದುಗೊಳಿಸಿ ಆತ ಸೆರ್ಕೆಟ್ ನತ್ತ ನೋಡಿದ.

"ಅಲ್ಲಪ್ಪ. ಎಷ್ಟು ಹೊತ್ತಾಯ್ತು ನಾನು ಬಂದು ! ಪಾನೀಯ ಉಪಾಹಾರ ಏನಾದರೂ ಬೇಕಾ ಅಂತ ನೀನು ಕೇಳಲೇ ಇಲ್ಲವಲ್ಲ !"

"ಕ್ಷಮಿಸಿ ! ವಿಚಾರಣೆ ಶುರು ಮಾಡಿದಿರಿ. ಮುಗೀಲಿ ಅಂತ...."

ವಿಚಾರಣೆ ನಡೆಸೋ ವಿಶೇಷಾಧಿಕಾರ ನನಗಿದೆ ನಿಜ. ಹಾಗೇಂತ ಹೇಪಾಟ್ ನಿನಗೆ ತಿಳಿಸಿರಬೇಕು ಅಲ್ಲವಾ ?"

"ಅವರಲ್ಲ. ರಾ ಮಂದಿರದ ಮುಖ್ಯ ಅರ್ಚಕರು."

"ಎರಡೂ ಒಂದೇ....ನೀನು ದೇಶದ ಒಂದು ಮೂಲೇಲಿದ್ದೀಯಾ. ಇಂಥಿಂಥ ಕೆಲಸ ನೀನು ಮಾಡಬೇಕೂಂತ ಕಟ್ಟುನಿಟ್ಟಾಗಿ ಯಾರೂ ನಿನಗೆ ಹೇಳಿಯೇ ಇಲ್ಲ. ಅಂದ ಮೇಲೆ, ಅಜ್ಞಾನದ ಕಾರಣ ಯಾವುದೋ ಕೆಲಸ ನೀನು ಮಾಡದೇ ಇದ್ದರೆ, ಅದು ತಪ್ಪು ಹ್ಯಾಗಾಗ್ತದೆ ?"

ಸೆರ್ಕೆಟ್‌ನ ಮುಖ ಗೆಲುವಾಯಿತು. ಹೆಪ್ವೆಟ್‌ನೆದುರು ಆತ ಮೈಬಾಗಿ ನಮಿಸಿದ.

" ಏಳು. ನಾನು ಇಲ್ಲಿಂದ ಹೋಗೋ ವರೆಗೂ ನನ್ನ ಮಗ್ಗುಲಲ್ಲೇ ಇರು."

ಸೆರ್ಕೆಟ್ ಎದ್ದು, ವಿನಮ್ರನಾಗಿ ತಿಳಿಸಿದ :

" ಎಷ್ಟು ಹೊತ್ತಿಗಾದರೂ ಸರಿ, ಹೆಪ್ವೆಟ್ ಮಂದಿರಕ್ಕೆ ಬರಬಹುದು— ಅಂತ ಮಧ್ಯಾಹ್ನವೇ ಹೇಳಿಕಳಿಸಿದ್ರು."

" ನಿನ್ನೆಯೇ ನಾನು ಯಾಕೆ ಬರಲಿಲ್ಲ ಅಂತ ಯೋಚನೆಗೆ ಈಡಾದರೇನೋ ? ಸದ್ಯದಲ್ಲಿ ಅಖಂಡ ಪೂಜೆ ಯಾವುದೂ ಇಲ್ಲವಲ್ಲ...."

" ಇಲ್ಲಾಂತ ಕಾಣ್ತದೆ."

" ಹಾಗಾದರೆ ಏನೂ ಅವಸರವಿಲ್ಲ. ನಿಧಾನವಾಗಿ ನಾಳೆ ನೋಡಿದ ರಾಯ್ತು."

" ಹಾಗೇಂತ ಹೇಳಿ ಕೇಳಿಸಲಿ ?"

" ಏನೂ ಬೇಡ. ಅಲ್ಲಯ್ಯ, ಪುನಃ ಮರೆತೆಯಲ್ಲ ! ಪಾನೀಯ ಉಪಾ ಹಾರ...."

" ಕ್ಷಮಿಸಿ ! ಏನಾದರೂ ಪಾನೀಯ ಉಪಾಹಾರ....?"

" ಬೇಡ. ಕತ್ತಲಾಗ್ತ ಬಂತು. ಭೋಜನಕ್ಕೆ ಮುಂಚೆ ಈಗೇನೂ ಬೇಡ. ಒಳ್ಳೆ ಅಡುಗೆಯವನನ್ನು ಗೊತ್ತು ಮಾಡಿದೀಯಾ ?"

" ಹೂಂ."

" ಶಿಷ್ಟಾಚಾರ ಗೊತ್ತಿರೋ ದಾಸಿಯರು ?"

" ಇಬ್ಬರಿದ್ದಾರೆ."

" ನನ್ನ ಪರಿವಾರದವರ ವಾಸ್ತವ್ಯಕ್ಕೆ ಏರ್ಪಾಟು ಮಾಡಿ ಬಾ. ಹಾಗೆಯೇ, ನನ್ನ ಲಿಪಿಕಾರರನ್ನು ಒಳಗೆ ಕಳಿಸು. ಲೇಖನ ಸಾಮಗ್ರಿ ತಗೊಂಡು ಬರಲಿ."

" ಆಗಲಿ."

ತನ್ನ ಕಾವಲುಭಟನ ಈಟಿ ಹೆಪ್ವೆಟ್‌ಗೆ ಬಾಗಿಲಲ್ಲಿ ಕಾಣಿಸಿತು. ಸೆರ್ಕೆಟ್ ಹೊರಹೋದೊಡನೆ ಆವರಿಸತೊಡಗಿದ್ದ ಒಂಟಿತನದ ಭಾವನೆಯನ್ನು, ಆ ಈಟಿ ಹೊಡೆದೋಡಿಸಿತು. ಸೆರ್ಕೆಟ್ ಅಂಗಳಕ್ಕಿಳಿದ ಕೂಡಲೇ ಹೆಪ್ವೆಟ್‌ನ ಆಪ್ತ ಸೇವಕ ಒಳಹೋದ. ತನ್ನ ಒಡೆಯನ ಆಣತಿಯಂತೆ ರಾಜಗೃಹದಲ್ಲಿ ದೀಪ ಗಳು ಸಾಕಷ್ಟಿವೆಯೆ ಎಂದು ವಿಚಾರಿಸಿದ. ಒಂದೆರಡು ದೀಪಗಳಲ್ಲಿ ಎಣ್ಣೆ ಇರ

ಲಿಲ್ಲ. ಹಾಕಿಸಿದ. ಎಣ್ಣೆಯ ದಾಸ್ತಾನೂ ಇದೆ ಎಂಬುದನ್ನು ಖಚಿತಪಡಿಸಿ ಕೊಂಡ.

ಲಿಪಿಕಾರ ಬಂದು, ಬರೆದುಕೊಳ್ಳಲು ಸಿದ್ಧನಾಗಿ ಹೆಖ್ಪೆಟ್‌ನ ಪೀಠದ ಬುಡದಲ್ಲಿ ಕುಳಿತ.

ಕಣ್ಣು ಮುಚ್ಚಿ, ಯೋಚಿಸುವವನಂತೆ ಲಯಬದ್ಧವಾಗಿ ಗೋಣು ಆಡಿಸಿ, ನಡುನಡುವೆ ತಡೆದು, ಹೆಖ್ಪೆಟ್ ಹೇಳತೊಡಗಿದ :

" ರಾನ ಸಾಮ್ರಾಜ್ಯವಾದ ಐಗುಪ್ತದ ಸರುಸಭೆಯ ಹಿರಿಯ ಸಲಹೆಗಾರ ಹೆಖ್ಪೆಟ್‌ನ ವಿಚಾರಗಳು. ಏನೆಂದರೆ, ಪ್ರತಿಯೊಬ್ಬನೂ ತನ್ನ ತನ್ನ ಕರ್ತವ್ಯ ಮಾಡುತ್ತಾ ಇದ್ದರೆ, ಪ್ರಭುತ್ವನಾವೆ ಎಲ್ಲಿಯೂ ಮಡುವಿನಲ್ಲಿ ತತ್ತರಿಸುವುದಿಲ್ಲ, ನೀರಿನಡಿಯ ಮರಳು ದಿಬ್ಬಕ್ಕೆ ಬಡೆಯುವುದಿಲ್ಲ.

"....ಏಕತಾನದಲ್ಲಿ ಹುಟ್ಟು ಹಾಕಿದರೆ, ನಾವೆ ನೇರಹಾದಿಯಲ್ಲಿ ಚಲಿಸು ತ್ತದೆ.

"....ಅಂತಃಕಲಹದಿಂದ ಶಕ್ತಿ ಹ್ರಾಸ, ನಿದ್ರಾನಾಶ...."

ಅಷ್ಟಕ್ಕೆ ನಿಲ್ಲಿಸಿ. "ಬರಕೊಂಡೆಯಾ ? ಹ್ಯಾಗಿದೆ ?" ಎಂದು ಹೆಖ್ಪೆಟ್ ಲಿಪಿಕಾರರನ್ನು ಕೇಳಿದ.

"ಚೆನ್ನಾಗಿದೆ, ಬಲು ಚೆನ್ನಾಗಿದೆ ಅಯ್ಯ."

" ಹುಂ. ಇನ್ನಷ್ಟು ಹೇಳ್ತೀನೆ. ಬರಕೋ....ಓ ದೇವರೇ ! ನೀನು ಚಿರಂಜೀವತ್ವವನ್ನು ಹಾದು ಹೋಗುತ್ತಿರುವೆ ; ನಿನ್ನ ಆಕಾರಗಳು ಅಸಂಖ್ಯ.... ಬರಕೊಂಡೆಯಾ ? ಇದು ಧಾರ್ಮಿಕ ಜಿಜ್ಞಾಸೆ....ಭೂಮಿಯ ಮೇಲೆ ಅವನ ಎಲ್ಲೆಗಳು ಬಲಿಷ್ಠವಾಗಿವೆ; ಇಡೀ ಭೂಮಿಯಷ್ಟೇ ವಿಶಾಲವಾಗಿವೆ ; ಸ್ವರ್ಗದಷ್ಟೇ ಎತ್ತರವಾಗಿವೆ....ಮುಂಗೈ ಜೋರಿನಿಂದ ಯಾರೂ ಏನನ್ನೂ ಸಾಧಿಸಲಾರರು.... ಯಾರು ದೇವರನ್ನು ಬಾ ಎಂದು ಕರೆಯುವನೋ ಆತನ ನೆರವಿಗೆ ಅವನು ತಕ್ಷಣವೇ.... ಬರುತ್ತಾನೆ....ಎಲ್ಲಿ ಒಮ್ಮೆ ಓದಿ ಹೇಳು. ಸರಿಯಾಗಿ ಬರೆದಿ ದೀಯೊ ನೋಡೋಣ."

ಅಷ್ಟರಲ್ಲಿ ರಾ ಮಂದಿರದಿಂದ ನಗಾರಿಯ ಸದ್ದು ಕೇಳಿತು. ಅಸ್ತಂಗತ ನಾಗುತ್ತಿದ್ದ ರಾನಿಗೆ ಅದು ಮುಚ್ಚಂಜೆಯ ಪೂಜೆ, ಪ್ರಾರ್ಥನೆ. ನಗಾರಿಯ ಮೊರೆತವಿದ್ದಷ್ಟೂ ಹೊತ್ತು ಹೆಖ್ಪೆಟ್ ಕಣ್ಣುಮುಚ್ಚಿ ಕುಳಿತ.

ನೀಲಾಂಜನಗಳನ್ನೂ ಹಣತೆಗಳನ್ನೂ ಹಚ್ಚಿದರು. ಲಿಪಿಕಾರ ತಾನು ಬರೆದುದನ್ನು ಓದಿದ. ಹೆಖ್ಮೆಟ್ ಅಲ್ಲೊಂದು ಪದ ಇಲ್ಲೊಂದು ಪದ ತಿದ್ದಿದ.

ಅವನು ಗದರಿದ :

"ನಾನು ಹೇಳೋದೊಂದು, ನೀನು ಬರೆಯೋದೊಂದು."

ಲಿಪಿಕಾರನೆಂದ :

"ಕ್ಷಮಿಸ್ಬೇಕು ಸ್ವಾಮಿ. ತಾವು ಹೇಳಿದ್ದೇ ಹಾಗೆ."

"ಆದರೇನಂತೆ ? ಉದಾತ್ತ ವಿಚಾರಗಳನ್ನು ಮತ್ತೆ ಮತ್ತೆ ಪರಿಷ್ಕರಿಸ್ಬೇಕು."

ಓದಿ ಕೇಳಿಸಿಕೊಂಡರಷ್ಟೇ ಸಾಕೆ ? ಹೆಖ್ಮೆಟ್ ಪುನಃ ಪುನಃ ಅವನ್ನು ವಿವರಿಸಿದ. ಇದು ತಾಳಲಾರದ ಹಿಂಸೆ ಎನಿಸಿತು ಲಿಪಿಕಾರನಿಗೆ. ಮುದುಕನ ಏರಿಳಿತವಿಲ್ಲದ ಗೊರ ಗೊರ ಸದ್ದು ಕೇಳಿ ಅವನಿಗೆ ಜೊಂಪು ಅಡರಿತು.

"ಇನ್ನು ಪ್ರಚಲಿತ ಪರಿಸ್ಥಿತಿಯ ವಿಷಯವಾಗಿ—"

ನಿದ್ದೆಯ ಲೋಕದಲ್ಲಿ ಹೊಸ ಸದ್ದು ಕೇಳಿಸಿದವನಂತೆ ಲಿಪಿಕಾರ ಬೆಚ್ಚಿಬಿದ್ದು, "ಹ್ಞ ?" ಎಂದ.

ಹೆಖ್ಮೆಟ್ ಕೂಗಿ ನುಡಿದ :

"ನಿದ್ದೆ ಹೋಗಿದ್ದೆಯೇನೊ ಕತ್ತೆ ?"

"ಇಲ್ಲ ಸ್ವಾಮಿ, ಇಲ್ಲ," ಎಂದ ಲಿಪಿಕಾರ, ನೊಂದ ಸ್ವರದಲ್ಲಿ.

ಒಡೆಯನ ರೇಗಾಟ ಕೇಳಿ ಆಪ್ತ ಸೇವಕ ಓಡಿ ಬಂದು, ಸನ್ನಿವೇಶ ಇಂಥದೇ ಎಂದು ಊಹಿಸಿ, ಪಡಸಾಲೆಯ ಮೂಲೆಯಲ್ಲಿ, ಕತ್ತಲಿರುವ ಕಡೆ, ಮೌನವಾಗಿ ನಗುತ್ತ ನಿಂತ.

"ಬರಕೋ....ಐಗುಪ್ತದಲ್ಲಿ ನಡೆದಿರುವ ರಾಜಕೀಯ ಚೌಕಮಣೆ ಆಟದಿಂದ ಯಾರಿಗೂ ಹಿತವಿಲ್ಲ. ದೇವರಿಲ್ಲದೆ, ಆಕಾಶದಲ್ಲಿ ಹಕ್ಕಿ ಹಾರದು, ನೀರಿನಲ್ಲಿ ಮೀನು ಚಲಿಸದು. ಆಳುವ ಮಹಾಪ್ರಭು ಆ ದೇವರ ಪ್ರತಿನಿಧಿ. ಅರಸನ ಪರವಾಗಿ ದೇವರನ್ನು ಅರ್ಚನೆ ನಿವೇದನೆಗಳಿಂದ ಸಂತೃಪ್ತಗೊಳಿಸುವವನು ಮಹಾ ಅರ್ಚಕ....ಲೌಕಿಕ ವಿಚಾರಗಳನ್ನು ದೇವರು....—ಯಾವ ದೇವರೇ ಇರಲಿ—ರಾ, ಅಮುನ್, ಪ್ಟಾ—ಮಹಾಪ್ರಭುವಿನ ಮೂಲಕ ನಡೆಸಿಕೊಡುತ್ತಾನೆ....ಧಾರ್ಮಿಕ ಕ್ರಿಯೆಗಳನ್ನೂ ಪೂಜಾವಿಧಿಗಳನ್ನೂ ಮಹಾ ಅರ್ಚಕನ

ಮೇಲ್ವಿಚಾರಣೆಯಲ್ಲಿ ದೇವರು ಆಗಗೊಳಿಸುತ್ತಾನೆ. ನೀರು ಎರಡು ಕಾಲುವೆ ಗಳಲ್ಲಿ ಹರಿದರೂ ಅದು ಹೋಗಿ ಸೇರುವುದು ಒಂದೇ ಹೊಲಕ್ಕೆ. ಆ ಹೊಲ ರಾನ ಸೊತ್ತು....ಮಾಟ್, ಮಾಟ್ ! ಪ್ರತಿಯೊಬ್ಬನ ನಡೆಯೂ ನುಡಿಯೂ ಮಾಟ್‌ನಂತೆ ಮಂದಿರದ ವಿಷಯದಲ್ಲಿಯೂ ಮಾಟ್, ಮಹಾಮನೆಯ ವಿಷಯದಲ್ಲಿಯೂ ಮಾಟ್. ಸಹನೆ, ಸಮತೋಲನ, ಸಮನ್ವಯ....ಸುಖ, ಶಾಂತಿ....ಹುಂ. ಸಾಕು. ಒಮ್ಮೆ ಓದಿ ಬಿಡು."

ಓದಿದಂತೆ ಮಧ್ಯೆ ಮಧ್ಯೆ ಪರಿಷ್ಕರಣ. ದಣಿದು ಬಾಯಿ ಒಣಗಿದ್ದುದ ರಿಂದ, ವಿವರಿಸುವ ಗೊಡವೆಗೆ ಹೆಖ್ವೆಟ್ ಮತ್ತೆ ಹೋಗಲಿಲ್ಲ.

ಕೊನೆಯಲ್ಲಿ ಆತ ದೊಡ್ಡದಾಗಿ ಆಕಳಿಸಿ, ಎದ್ದು, ಅಂಗಾಂಗಗಳಿಂದ ಲಟಲಟನೆ ನೆಟಿಕೆ ಮುರಿದ.

ಮಸಿ ಆರಲೆಂದು, ಬರೆದುದರ ಮೇಲೆ ಲಿಪಿಕಾರ ಉಸಿರು ಊದಿದ.

ಹೆಖ್ವೆಟ್ ಅಂದ :

"ಸುರುಳಿ ಸುತ್ತಿ ಜೋಪಾನವಾಗಿಡು. ಆ ಅಮಾತ್ಯನಿಂದ ಆದಾತಾ ಹೀಗೆ ಬರೆಸೋದು ? ಹುಂ !"

ಸೆರ್ಕೆಟ್ ಎರಡು ಬಾರಿ ಇಣಿಕಿ ನೋಡಿ ಹಿಂದಕ್ಕೆ ಸರಿದಿದ್ದ. ಅರ್ಥವಾಗದ ಕೆಲವು ಪದಗಳು ಲಿಪಿ ಸುರುಳಿ ಸೃಷ್ಟಿಯಾಗುತ್ತಿದ್ದ ಅಪೂರ್ವ ಸನ್ನಿವೇಶ. ಹೆಖ್ವೆಟ್‌ನ ಹಿರಿಮೆಯ ವಿಷಯದಲ್ಲಿ ಅವನಿಗೆ ಯಾವ ಸಂಶಯವೂ ಉಳಿಯಲಿಲ್ಲ.

(ಹೆಖ್ವೆಟ್ ಏನು ಮಾಡುತ್ತಿದ್ದಾನೆ ಎಂದು ತಿಳಿಯಲು ಮಂದಿರದಿಂದ ಬಂದವನಿಗೆ, ಪಿಸುದನಿಯಲ್ಲಿ ಆತ ಹೇಳಿದ :

"ಕೂತ್ಕೊಂಡು ಏನೇನೋ ಅನ್ತಿದ್ದಾರೆ; ಲಿಪಿಕಾರ ಬರಕೊಳ್ತಿ ದ್ದಾನೆ."

"ಈಗ ದೇವದರ್ಶನಕ್ಕೆ ಬರೋದಿಲ್ಲವಾ ?"

"ಕಾಣ್ಲಿಲ್ಲ. ಎಲ್ಲ ನಾಳೆ, ನಾಳೆ ಬೆಳಿಗ್ಗೆ."

ಸ್ವಲ್ಪ ಹೊತ್ತಿನಲ್ಲಿ ಇನ್ನೊಬ್ಬ ದೂತ ಮಂದಿರದಿಂದ ಬಂದ.

"ನೀವು ಬರಬೇಕಂತೆ."

"ನಾನಾ ? ಸರಿ, ಸರಿ ! ನಾನು ಇಲ್ಲಿಯೇ ಇರಬೇಕೂಂತ ಸ್ವಾಮಿ

ಯವರ ಕಟ್ಟಪ್ಪಣೆಯಾಗಿದೆ....")

ತನ್ನ ಪರಿವಾರ ಅಂಗಳದಲ್ಲಿರುವುದು ಖಚಿತವಾದ ಮೇಲೆ ಹೆಖ್ವೆಟ್ ಅಳುಕೆಂಬುದೇ ತನಗರಿಯದು ಎಂಬಂತೆ, ತಲೆಯನ್ನು ತೂಗಿ ತೂಗಿ ಆಡಿಸುತ್ತ, ಹೊರಗೆ ಬಂದ. ಅಪರಿಚಿತ ಸ್ಥಳದ ಕತ್ತಲು ತನ್ನನ್ನು ಪರಚಿ ದಂತಾಯಿತು. ಆಕಾಶದ ಕಡೆಗೊಮ್ಮೆ ದೃಷ್ಟಿಬೀರಿ, ಕೆಲ ನಕ್ಷತ್ರಗಳನ್ನು ಕಂಡು ಅಷ್ಟಕ್ಕೇ ತೃಪ್ತನಾಗಿ, ಒಳಕ್ಕೆ ಮರಳಿದ.

ಇರುಳಿನ ಭೋಜನದ ಘಮಘಮ ಪಡಸಾಲೆಯನ್ನು ವ್ಯಾಪಿಸಿತ್ತು.

....ರಾತ್ರಿ ಕೊಠಡಿ ತಲಪುತ್ತಲೇ ತೂಕಡಿಕೆ.

ಶಿಷ್ಟಾಚಾರ ಅರಿತಿದ್ದ ದಾಸಿ ಬಂದಳು. ಅನುಭವಿ.

"ನಾಳೆ ಬರಲಾ ?" ಎಂದಳು, ಮುದುಕನನ್ನು ಕಂಡು.

ತನ್ನ ಕಾರ್ಯಕ್ರಮ ಅನಿಶ್ಚಿತವಾಗಿದ್ದರೂ ನಿದ್ದೆಗಣ್ಣಿನಲ್ಲಿ ಹೆಖ್ವೆಟ್ "ಹೂಂ." ಎಂದ.

* * * *

ಮಾರನೆಯ ಬೆಳಿಗ್ಗೆ, ಸೂರ್ಯ ಕೆಲವು ಮಾರೆತ್ತರ ಮೇಲೆ ಬಂದ ಬಳಿಕ, ಹೆಖ್ವೆಟ್ ರಾ ಮಂದಿರಕ್ಕೆ ಹೊರಟ. ಜತೆಯಲ್ಲಿ ಸೆರ್ಕೆಟ್, ಲಿಪಿಕಾರ, ಆಪ್ತ ಸೇವಕ, ಅಂಗರಕ್ಷಕ, ದೋಣಿಕಾರ, ಅಂಬಿಗರು. ಹಿಂದೆ ಮುಂದೆ ಆಡುತ್ತ ಸಾಗಿದ್ದ ತಲೆ, ಅತ್ತಿತ್ತ ಹೊರಳುತ್ತಿದ್ದ ಕಣ್ಣುಗಳು. ಎತ್ತರದ ಆ ನಿಶ್ಪ್ರಾಣ ಜೀವಿಯನ್ನು ದಾರಿಯುದ್ದಕ್ಕೂ ಎಡಬಲಗಳಿಂದ ಎಲ್ಲರೂ ಕುತೂಹಲದಿಂದ ನೋಡುವವರೇ. ಸೆರ್ಕೆಟ್ ಒಮ್ಮೊಮ್ಮೆ ಹೆಖ್ವೆಟ್‌ನ ಮುಂದೆ ಇರುತ್ತಿದ್ದ; ಒಮ್ಮೊಮ್ಮೆ ಹಿಂದೆ ನಿಲ್ಲುತ್ತಿದ್ದ.

ಮಹಾ ಅರ್ಚಕ ಹೇಪಾಟ್‌ಗೆ ಸಿಟ್ಟು ಬಂದಿತ್ತು. ಮಹಾಮಂದಿರದ ಮುಖ್ಯ ಅರ್ಚಕನೆದುರು ಅವನು ಕೂಗಾಡಿದ :

"ನಿನ್ನೆ ಸಂಜೆ ಬರಲಿಲ್ಲ, ರಾತ್ರೆ ಬರಲಿಲ್ಲ. ಬಡ ಮುದುಕ ವಿಶ್ರಾಂತಿ ತಗೊಂಡ. ಒಪ್ಪೋಣ. ಬೆಳಿಗ್ಗೆ ಪೂಜಾವೇಳೆಗಾದರೂ ಯಾಕೆ ಮುಖ ತೋರಿಸಲಿಲ್ಲ ಇವನು ? ಸರು ಸಭೆಯ ಅತ್ಯಂತ ಹಿರಿಯ ಸಲಹೆಗಾರ ಅಂತ ಅಹಂಕಾರ ! ಇಂಥವರಿಂದಾಗಿಯೇ ಐಗುಪ್ತ ದೇಶ ಅಸ್ವಸ್ಥವಾಗಿರುವುದು !"

ಆನ್‌ನಗರಿಯ ದೀರ್ಘಕಾಲದ ವಾಸ್ತವ್ಯದಲ್ಲಿ ತನ್ನನ್ನು ಯಾರೋ ಅಣಕಿಸಿದಂತೆ ಮಹಾ ಅರ್ಚಕನಿಗೆ ಕಂಡುದು ಆ ದಿನವೇ.

ಸೂರ್ಯಕಿರಣಗಳು ವಿಪುಲವಾಗಿ ಗರ್ಭಗುಡಿಯನ್ನು ಹೊಕ್ಕು, ಹೊಸ ವಸನ ಧರಿಸಿದ್ದ ಆಳೆತ್ತರದ ರಾ ಮೂರ್ತಿಯನ್ನು ಬೆಳಗಿದುವು. ಹೇಪಾಟ್ ದೇವರ ಮುಂದೆ ಕುಳಿತು ಮೌನ ಪ್ರಾರ್ಥನೆಯಲ್ಲಿ ಮಗ್ನನಾದ.

ಸ್ವಲ್ಪ ಸಮಯದ ಬಳಿಕ ಕಣ್ಣು ತೆರೆದು, "ಆತ ಬಂದರೆ ಪ್ರಸಾದ ಕೊಟ್ಟು ಕಳಿಸ್ಬಿಡಿ," ಎಂದು ಮುಖ್ಯ ಅರ್ಚಕನಿಗೆ ಹೇಳಿ, ಪುನಃ ಧ್ಯಾನಾಸಕ್ತನಾದ.

ಹೆಶ್ವೆಟ್‌ನ ತಂಡದವರು ಮಂದಿರದ ಪವಿತ್ರ ಕೊಳದಲ್ಲಿ ಪಾದಗಳನ್ನು ತೊಳೆದು, ತಲೆಗಳಿಗೂ ಮೈಗಳಿಗೂ ನೀರಹನಿಗಳನ್ನು ಚಿಮುಕಿಸಿಕೊಂಡರು.

ಹೆಶ್ವೆಟ್ ಪರಿವಾರ ಮಂದಿರದತ್ತ ಹೊರಟ ಸುದ್ದಿ ಮುಖ್ಯ ಅರ್ಚಕನಿಗೆ ತಲಪಿತು. (ಧ್ಯಾನಸ್ಥಿತಿಯಲ್ಲಿದ್ದರೂ ಪಿಸುದನಿಯ ಆ ಸಂದೇಶ ಹೇಪಾಟ್‌ನ ಕಿವಿಗೂ ತಟ್ಟಿತು; ಅವನ ಧ್ಯಾನಾಸಕ್ತಿ ಮತ್ತಷ್ಟು ಗಾಢವಾಯಿತು.) ಮುಖ್ಯ ಅರ್ಚಕ ಅಂದುಕೊಂಡ : "ಈಗ ಪವಿತ್ರ ಕೊಳ ತಲಪಿರಬಹುದು ; ಅಲ್ಲಿಂದ ಈ ಕಡೆಗೆ ಬರ್‍ತಾರೆ." ಆತ ಮಂದಿರದ ಪ್ರವೇಶದ್ವಾರದೆದುರು ನಿಂತ.

ಸೆರ್ಕೆಟ್ ಮುಂದಾಗಿ ಓಡಿ ಬಂದು, "ಬರ್‍ತಿದ್ದಾರೆ" ಎಂದ.

ಮಹಾ ಅರ್ಚಕ ಗರ್ಭಗುಡಿಯಲ್ಲಿ ದೇವರೆದುರು ಧ್ಯಾನಾಸಕ್ತನಾಗಿರುವುದನ್ನು ಆತ ಗಮನಿಸಿದ. ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸದೆ ಮುಖ್ಯ ಅರ್ಚಕನ ಮಗ್ಗುಲಿಗೆ ಸರಿದ.

ಹೆಶ್ವೆಟ್ ದ್ವಾರವನ್ನು ಸಮೀಪಿಸಿ, ಮುಖ್ಯ ಅರ್ಚಕನನ್ನು ನೋಡಿ ತುಸು ತಲೆ ಆಡಿಸಿ, "ಪೆರೋನ ಆಯುರಾರೋಗ್ಯ ವರ್ಧಿಸಲಿ !" ಎಂದ. ಉಳಿದವರು ಅರ್ಚಕನಿಗೆ ತಲೆ ಬಗ್ಗಿಸಿ ನಮಿಸಿದರು. ತೋಳನ್ನೆತ್ತಿ ಅವರೆಲ್ಲರನ್ನೂ ಆಶೀರ್ವದಿಸಿ ಅರ್ಚಕನೆಂದ : "ಪೆರೋನ ಆಯುರಾರೋಗ್ಯ ವರ್ಧಿಸಲಿ !"

ಬಾಗಿಲನ್ನು ದೂರದಿಂದಲೇ ಪರೀಕ್ಷಕ ನೋಟದಿಂದ ನೋಡಿದ್ದ ಹೆಶ್ವೆಟ್ ಹೇಳಿದ :

"ಸೃಷ್ಟಿಕರ್ತ ರಾನ ಮಂದಿರದ ಚೌಕಟ್ಟಿಗಿನ್ನೂ ಬಂಗಾರದ ಲೇಪನವಿಲ್ಲ! ಛೆ! ಛೆ! ಹೀಗೂ ಉಂಟೆ? ಕಳೆದ ಸಲವೇ ನಾನು—"

"ಹೌದು. ಸ್ವರ್ಣಲೇಪನ ಬೇಕು ಅಂದಿದ್ದಿರಿ. ಆದರೆ ಸೃಷ್ಟಿಕರ್ತ ರಾ ಅಷ್ಟು ಶ್ರೀಮಂತನಲ್ಲ."

"ಗೊತ್ತು, ಗೊತ್ತು," ಎಂದು ಹೆಖ್ವೆಟ್ ಗೋಣು ಆಡಿಸಿದ.

"ಒಳಗೆ ಬರೋಣವಾಗಲಿ."

"ಅಲ್ಲಿ ಕುಳಿತಿರೋದು ಮಹಾ ಅರ್ಚಕರಲ್ಲವಾ ?"

"ಹೌದು. ಧ್ಯಾನ ಭಂಗ ಉಂಟಾ ಗಬಾರದು ಅಂದಿದ್ದಾರೆ."

"ಒಳ್ಳೇದು. ಭಕ್ತನ ಕಣ್ಣಿಗೆ ದೇವರು ಎಲ್ಲಿದ್ದರೂ ಕಾಣಿಸಿಕೊಳ್ತಾನೆ. ಇಲ್ಲಿಂದಲೇ ಪ್ರಾರ್ಥನೆ ಸಲ್ಲಿಸ್ತೇವೆ."

ಮುಖ್ಯ ಅರ್ಚಕ ಒಂದು ಕ್ಷಣ ವಿವಂಚನೆಗೊಳಗಾದ. ('ಇವರ ಜಗಳದಲ್ಲಿ ನನಗೇನು ಆಪತ್ತು ಉಂಟಾಗ್ತದೋ ?')

ಹೆಖ್ವೆಟ್ ಅಂಗಳದ ಹಾಸುಗಲ್ಲುಗಳ ಮೇಲೆ ಮಂಡಿಯೂರಿ, ಅಂಗೈ ಗಳನ್ನು ಮುಂದಕ್ಕೆ ಚಾಚಿದ. ಪರಿವಾರದವರೂ ಹಾಗೆಯೇ ಮಾಡಿದರು. ಸೆರ್ಕೆಟನೂ ಅವರನ್ನು ಅನುಸರಿಸಿದ.

ಗಟ್ಟಿಯಾಗಿ ಹೆಖ್ವೆಟ್ ಅಂದ:

"ಓ ಸೃಷ್ಟಿಕರ್ತ ರಾ, ಜಗತ್ತಿನ ಮೇಲೆ ನಿನ್ನ ಆಳ್ವಿಕೆ ಶಾಶ್ವತವಾಗಲಿ. ಐಗುಪ್ತದ ಸುಖ ಸಂಪತ್ತು ಹೆಚ್ಚಲಿ! ನೀಲನದಿ ಎಂದೂ ಬತ್ತದಿರಲಿ! ರಾ ಪುತ್ರ ಪೆರೋ ನಿತ್ಯಯೌವನದಿಂದ ಮೆರೆಯಲಿ! ಈ ದೇಶದ ಎರಡು ಸಹಸ್ರ ದೇವತೆಗಳು ನಿನ್ನ ಪ್ರಜೆಗಳ ಕಲ್ಯಾಣ ಸಾಧಿಸಲಿ!"

ಪ್ರತಿಯೊಂದು ಪದವೂ ಸ್ಪಷ್ಟವಾಗಿ ಹೇಪಾಟ್‌ಗೆ ಕೇಳಿಸಿತು. ಆದರೆ ಅವನ ಶರೀರ ಒಂದಿನಿತೂ ಮಿಸುಕಲಿಲ್ಲ. ಮಂಡಿಯೂರಿದವರೆದ್ದು ಅಂಗೈ ಗಳನ್ನು ಜೋಡಿಸಿ ನಿಂತರು. ಆಗಲೇ ಒಳಹೋಗಿದ್ದ ಮುಖ್ಯ ಅರ್ಚಕ ಜೊಂಡಿನಿಂದ ಹೆಣೆದ ತಟ್ಟೆಯಲ್ಲಿ ಬೆಳಿಗ್ಗೆ ದೇವರಿಗೆ ಅರ್ಪಿಸಿದ್ದ ಅಂಜೂರ, ಖರ್ಜೂರ ಹಣ್ಣುಗಳೊಡನೆ ಮರಳಿದ. ಹೆಖ್ವೆಟ್ ಆದಿಯಾಗಿ ಎಲ್ಲರಿಗೂ ಪ್ರಸಾದ ವಿತರಣೆ ಮಾಡಿದ.

ಊರಿನ ಚಿಕ್ಕವರು ದೊಡ್ಡವರು ಪ್ರಾಂಗಣದ ಕಟಕಟೆಯಾಚೆ ನೆರೆಯ ತೊಡಗಿದರು. ನಗರಾಧಿಕಾರಿ ಅವರ ಬಳಿ ಸಾರಿ "ಹೋಗಿ ! ಹೋಗಿ !" ಎಂದರೂ ಅವರು ಕೇಳಲಿಲ್ಲ.

ಅಂಗಳದಲ್ಲೇ ನಿಂತ ಹೆಚ್ವೆಟ್‌ನನ್ನು ಉದ್ದೇಶಿಸಿ ಮುಖ್ಯ ಅರ್ಚಕ ಅಂದ :

"ಇವತ್ತೇ ರಾಜಧಾನಿಗೆ ವಾಪಸಾಗ್ತೀರೇನೋ ?"

"ವಿಷಯ ನಿಮಗೆ ಗೊತ್ತಿದೆ."

—ನಿಷ್ಠುರವಾಗಿ ಹೆಚ್ವೆಟ್ ನುಡಿದ.

"ಹ್ಞ....ಆದರೆ—"

"ನಾವು ಬಂದಿರೋದು ದೇವದರ್ಶನಕ್ಕೆ ಹಾಗೂ ಮಹಾ ಅರ್ಚಕರ ಭೇಟಿಗೆ. ಒಂದು ನೆರವೇರಿತು. ಇನ್ನೊಂದಕ್ಕಾಗಿ ಕಾಯ್ತೇವೆ. ಅದಾದ ಮೇಲೆ ಪಯಣದ ಯೋಚನೆ. ರಾಜಕಾರ್ಯ. ಅವಸರ ಸಲ್ಲದು."

"ಮಹಾ ಅರ್ಚಕರು ಪೂಜೆ ಮುಗಿಸಿ ಹೊರಬರೋ ತನಕ ನನ್ನ ವಸತೀಲಿ ವಿಶ್ರಾಂತಿ ತಗೋಬಹುದಲ್ಲ."

"ಓಹೋ. ಭೋಜನದ ಹೊತ್ತಿಗಾದರೂ ಮಹಾ ಅರ್ಚಕರು ಏಳ ಬಹುದು ಅಲ್ಲವಾ ?"

"ಅದಕ್ಕೂ ಮೊದಲೇ ಹೊರಗೆ ಬರ್ತಾರೆ. ರಾ ನೆತ್ತಿಗೆ ಬರೋದಕ್ಮುಂಚೆ ಯಾವಾಗಲೂ ಗರ್ಭಗುಡಿಯ ಬಾಗಿಲು ಹಾಕ್ತೇವೆ."

"ನಿಜ, ನಿಜ. ದೇವರಿಗೂ ವಿಶ್ರಾಂತಿ ಬೇಡವೆ? ಬಾ ಮಗು ಸೆರ್ಕೆಟ್, ಇವರ ವಸತಿಗೆ ಹೋಗೋಣ."

ಮಂದಿರದ ಸಮೀಪದಲ್ಲಿಯೇ ಇತ್ತು ಮುಖ್ಯ ಅರ್ಚಕನ ಮನೆ. ಪೀಠ ಗಳು, ಒರಗು ದಿಂಬುಗಳು, ಭಿತ್ತಿ ಚಿತ್ರಗಳು, ಸೇವಕರಂತೆ ಅತ್ತಿತ್ತ ಓಡಾಡು ತ್ತಿದ್ದ ಕಿರಿಯ ದೇವಸೇವಕರು....

ಹೆಚ್ವೆಟ್ ನಸುನಕ್ಕು ಒಂದು ಪೀಠದ ಮೇಲೆ ಕುಳಿತುಕೊಳ್ಳುತ್ತ ಅಂದ :

"ರಾನ ಬಡತನದಿಂದ ನಿಮಗೆ ತೊಂದರೆಯಾದಂತಿಲ್ಲ ಅರ್ಚಕರೇ !"

ಮುಖ್ಯ ಅರ್ಚಕನೆಂದ :

"ಭಕ್ತರ ವಿಶ್ವಾಸ. ಎಲ್ಲ ಅನುಕೂಲಗಳನ್ನು ಒದಗಿಸಿ ಕೊಟ್ಟಿದ್ದಾರೆ."

"ನಿಜ, ನಿಜ. ಭಕ್ತರಿದ್ದರೆ ದೇವರು, ದೇವರಿದ್ದರೆ ಅರ್ಚಕ."

ಮುಖ್ಯ ಅರ್ಚಕ ಸೆರ್ಕೆಟ್‌ನನ್ನು ಕರೆದು ಹೇಳಿದ :

"ನಾನು ಮಂದಿರಕ್ಕೆ ಹೋಗ್ತೇನೆ. ಏನಾದರೂ ಬೇಕಾದರೆ ಒಳಗೆ ಹೇಳಿ. ತಂದುಕೊಡ್ತಾರೆ."

ಆ ಮಾತು ಕಿವಿಗೆ ಬಿದ್ದ ಹೆಪ್ಪೆಟ್ ಅಂದ :

"ನನಗೆ ಹೇಪಾಟ್ ಬೇಕು. ಯಾರು ತಂದುಕೊಡ್ತೀರಿ ?"

ಮುಖ್ಯ ಅರ್ಚಕ ನಕ್ಕು, "ನಾನು ಕರಕೊಂಡ್ಬರ್‍ತೀನೆ." ಎಂದು ಹೇಳಿ, ಹೊರಟು ಹೋದ.

ಗರ್ಭಗುಡಿಯತ್ತ ಮುಖ್ಯ ಅರ್ಚಕ ಬಂದುದನ್ನು ಹೆಜ್ಜೆ ಸಪ್ಪಳದಿಂದಲೇ ಗುರುತಿಸಿ, ಕಣ್ಣು ಮುಚ್ಚಿಕೊಂಡೇ ಹೇಪಾಟ್ ಕೇಳಿದ :

"ಹೋದನೊ ?"

"ನನ್ನ ಮನೇಲಿ ಬಿಟ್ಟುಬಂದೆ, ಎಷ್ಟು ತಡವಾದರೂ ನಿಮ್ಮನ್ನು ನೋಡಿಯೇ ಹೋಗ್ತಾನಂತೆ."

"ಸೆತ್ ! ಉಣ್ಣಿ—ಉಣ್ಣಿ !"

ಮೌನ. ('ಮಂದಿರಕ್ಕೆ ಬಂದೊಡನೆಯೇ ತಾನು ಕಾಣಲು ಸಿಗದಿದ್ದುದ ರಿಂದ ಹೆಪ್ಪೆಟ್‌ಗೆ ಸ್ವಲ್ಪಮಟ್ಟಿಗೆ ಮುಖಭಂಗವಾದಂತಾಯಿತು.')

(ಒಳಮನಸ್ಸಿನ ಹೊರವ್ಯೆ : 'ಏನಿದೆಯೋ ಬೊಗಳಿ ತೊಲಗಲಿ !' ತೀರಾ ಒಳಗೆ : ಮನಸ್ತಾಪದ ಪರಿಹಾರಕ್ಕೆ ಏನು ಸಲಹೆ ತಂದಿರುವನೋ.')

ಮತ್ತೂ ಸ್ವಲ್ಪ ಹೊತ್ತು ರಾ ಮಹಿಮಾಸ್ತೋತ್ರವನ್ನು ಪಠಿಸುತ್ತ ಹೇಪಾಟ್ ಕುಳಿತ. ಬಳಿಕ ಎದ್ದು ಮಂಡಿಯೂರಿ, 'ಮಹತ್ಸಾಧನೆಗಳಿಗೆ ಈ ದೀನ ಸೇವಕನನ್ನು ನಿನ್ನ ಸಾಧನವಾಗಿ ಬಳಸಿಕೋ' ಎಂದು ಮನಸ್ಸಿನಲ್ಲಿ ಪ್ರಾರ್ಥಿಸಿ, ಮುಖ್ಯ ಅರ್ಚಕನಿಗೆಂದ :

"ಗರ್ಭಗುಡಿಯ ಬಾಗಿಲು ಹಾಕಿಕೊಳ್ಳಿ."

ಹೇಗೆ ಹಬ್ಬಿತ್ತೋ ಸುದ್ದಿ ? 'ಏನೋ ಗಲಾಟೆಯಂತೆ. ರಾಜಧಾನಿ ಯಿಂದ ಬಂದ ಅಧಿಕಾರಿಗೂ ಮಹಾ ಅರ್ಚಕರಿಗೂ ವಾಗ್ವಾದವಂತೆ; ಊರಿನ ಜನ ಮಂದಿರದದಿಕ್ಕಿಗೆ ನಡೆಯತೊಡಗಿದರು. ನಗರಿಯ ಹತ್ತು ಮಂದಿ ಕಾವಲು

ಭಟರನ್ನು ಸೆರ್ಕೆಟ್ ಕರೆಸಿದ. ಬಿಸಿಲಲ್ಲಿ ಅವರ ಈಟಿ ಮೊನೆಗಳು ಹೊಳೆದುವು. ಜನರು ಹಿಂದಕ್ಕೆ ಸರಿದರು. ಸರಿದು, ನಿಂತರು. ಅಲ್ಲಿಂದ ಕದಲಲಿಲ್ಲ.

ಹೊರಗೆ ಬರುತ್ತ ಮಹಾ ಅರ್ಚಕನೆಂದ :

"ನಾನು ಏಕಾಂತದ ಕೊಠಡಿಗೆ ಹೋಗಿ ಬಿಡಲೆ? ಆತ ಭೇಟಿಗೆ ಸಾಯಂಕಾಲ ಬರಲಿ."

ಮಾತುಕತೆ ಏನಿದ್ದರೂ ತನ್ನ ಮನೆಯಲ್ಲಿ ಆಗಲಿ ಎಂಬ ಆಸೆ ಮುಖ್ಯ ಅರ್ಚಕನಿಗೆ.

"ಈಗ, ಸಾಯಂಕಾಲ—ಎರಡೂ ಒಂದೇ. ಹೇಗಿದ್ದರೂ ಆಗಬೇಕಾದ ಭೇಟಿ."

"ಸರಿ ಹಾಗಾದರೆ."

ಹೇಪಾಟ್ ಮರದ ಹಾವುಗೆಗಳನ್ನು ಮೆಟ್ಟಿಕೊಂಡ.

"ಅಧಿಕಾರ ದಂಡ ತಾ," ಎಂದ ತನ್ನ ಆಪ್ತ ಸಹಾಯಕ ದೇವ ಸೇವಕನಿಗೆ.

ಆತ ಹೇಪಾಟ್‌ನ ಏಕಾಂತದ ಕೊಠಡಿಗೆ ಧಾವಿಸಿ, ಬೆಳ್ಳಿಹಿಡಿಯ ಆ ದಂಡವನ್ನು ತಂದ.

ಜತೆಯಲ್ಲಿ ಮುಖ್ಯ ಅರ್ಚಕನನ್ನೂ ತನ್ನ ಆಪ್ತ ಸಹಾಯಕನನ್ನೂ ಹಿಂಬಾಲಿಸಲು ಸಿದ್ಧರಾಗಿದ್ದ ಮಂದಿರದ ದೇವಸೇವಕರನ್ನೂ ಕರೆದುಕೊಂಡು, ಹೇಪಾಟ್ ಮುಂದೆ ಸಾಗಿದ.

ಹೇಪಾಟ್ ಬರುತ್ತಲೇ ಮುಖ್ಯ ಅರ್ಚಕನ ಮನೆಯ ಪಡಸಾಲೆಯಲ್ಲಿ ಇದ್ದವರೆಲ್ಲ ಎದ್ದರು.

"ರಾ ಪುತ್ರ ಪೆರೋನ ಆಯುರಾರೋಗ್ಯ ವರ್ಧಿಸಲಿ!" ಎಂದು ನುಡಿದು ಹೆಪ್ಪೆಟ್ ತಲೆಬಾಗಿ ನಮಿಸಿದ. ಉಳಿದವರೆಲ್ಲ ನಡುಬಗ್ಗಿಸಿ, ವಂದಿಸಿದರು.

ಹೇಪಾಟ್ "ವರ್ಧಿಸಲಿ!" ಎಂದಷ್ಟೇ ಹೇಳಿ, ಮುಖ್ಯ ಅರ್ಚಕ ತನ್ನನ್ನು ಕರೆದೊಯ್ದು ತೋರಿಸಿದ ಪೀಠದ ಮೇಲೆ ಆಸೀನನಾದ.

ಒಂದು ಕ್ಷಣ ದೃಷ್ಟಿಗಳಿಂದಷ್ಟೇ ಪರಸ್ಪರ ತಿವಿತ. ಹೆಪ್ಪೆಟ್ ಮುಗುಳು ನಗೆ ಬೀರಿದ. ಹೇಪಾಟ್ ಮುಖದ ಸ್ನಾಯುಗಳನ್ನು ಸಡಿಲಿಸಲಿಲ್ಲ.

ತನ್ನ ಅಧಿಕಾರದಂಡದ ತುದಿಯನ್ನು ಹೇಪಾಟ್ ಒಂದು ಮೊಳ ಮುಂದಕ್ಕೆ ಎತ್ತಿ ಇರಿಸಿದ. ಅವನ ಆಪ್ತ ಸಹಾಯಕ ದೇವಸೇವಕನೆಂದ :

"ಭಕ್ತಾದಿಗಳು ಮಹಾ ಅರ್ಚಕರ ಅಧಿಕಾರ ದಂಡವನ್ನು ಚುಂಬಿಸಿ ಧನ್ಯ ರಾಗಬಹುದು."

ಇದು ಅಸಾಮಾನ್ಯ ಸನ್ನಿವೇಶ ಎಂಬ ಭಾವನೆ ಎಲ್ಲರಿಗೂ. ಅವರ ದೃಷ್ಟಿ ಹೆಪ್ಪೆಟನ ಮೇಲೆ ನೆಟ್ಟಿತು.

ಆತ ಬೆನ್ನು ನೆಟ್ಟಗೆ ಮಾಡಿ, ಧ್ವನಿ ಏರಿಸಿ ಅಂದ :

"ತಡೀರಿ! ತಡೀರಿ! ಅವಸರ ಬೇಡ. ರಾ ಪುತ್ರ ಪೆರೋನಿಂದ ಆಜ್ಞಾಪ್ತನಾಗಿ ನಾನು ಬಂದಿದ್ದೇನೆ. ಮಹಾ ಅರ್ಚಕರ ಜತೆ ಮಾತಾ ಡ್ಬೇಕು. ಮಾತು ಮುಗಿದ್ಮೇಲೆ ಅವರ ಆಶೀರ್ವಾದ ಪಡೆದೇ ನಾವು ಹೊರಡ್ತೇವೆ."

ಹೇಪಾಟ್ ಹಲ್ಲು ಕಡಿದ. ತನ್ನ ಕಣ್ಣುಗಳಿಂದ ಕಿಡಿ ಹಾರಿದಂತೆ ಅವನಿಗೆ ಅನಿಸಿತು. ಇದು ಇವರನ್ನೆಲ್ಲ ದಹಿಸಿಬಿಡುವ ಸಿಟ್ಟು—ಎಂದುಕೊಂಡ. ಕ್ಷಣ ಕಾಲ ಕಣ್ಣುಗಳನ್ನು ಭದ್ರವಾಗಿ ಮುಚ್ಚಿದ.

ಎವೆಗಳನ್ನು ಸರಿಯಾಗಿ ತೆರೆಯದೆಯೇ ಏರುಸ್ವರದಲ್ಲಿ ಅವನೆಂದ :

"ರಾಜಧಾನಿಯ ಹಿರಿಯ ಸಲಹೆಗಾರರ ಮಂಡಲದ ಒಬ್ಬ ಸದಸ್ಯ—"

ಮಹಾ ಅರ್ಚಕನ ಮಾತನ್ನು ನಡುವೆ ಮುರಿದು ಹೆಪ್ಪೆಟ್ ಉದ್ಗರಿಸಿದ :

"ಹಿರಿಯ ಸದಸ್ಯ !"

ಮತ್ತಷ್ಟು ಧ್ವನಿ ಏರಿಸಿ ಕೀರಲು ಗಂಟಲಲ್ಲಿ ಹೇಪಾಟ್ ಮುಂದುವರಿಸಿದ:

"ಆತ ನಿಲ್ಲು ಎಂದಾಕ್ಷಣ ಲೋಕವ್ಯಾಪಾರವೆಲ್ಲ ಸ್ತಬ್ಧವಾಗಬೇಕಾ ?"

"ಲೋಕವೇ ತಾನು ಎಂದು ಭಾವಿಸುವುದು ಉದ್ಧಟತನದ ಪರ ಮಾವಧಿ."

ಹೇಪಾಟ್ ಒಬ್ಬನಿಗೆ ಅರ್ಥವಾಯಿತು ಆ ಚುಚ್ಚುನುಡಿ. ಆತ ಅವುಡು ಗಚ್ಚಿ ಫೂತ್ಕರಿಸಿದ.

"ಐಗುಪ್ತದ ಪರಮೋಚ್ಚ ಧರ್ಮಗುರುವಿನ ಮುಂದೆ ವೃದ್ಧರು ಸ್ವಲ್ಪ ನಾಲಿಗೆ ಬಿಗಿಹಿಡೀಬೇಕು !"

"ಶಾಪಕ್ಕೆ ತುತ್ತಾಗಿ ಗತಪ್ರಾಣನಾದೇನು ಎಂಬ ಭಯ ನನಗಿಲ್ಲ. ಕಾಲ ಕಳೆದ ಹಾಗೆ ಎಲ್ಲರೂ ಮುದುಕರಾಗ್ತಾರೆ. ಗೋರಿಪ್ರವೇಶ ಯಾರಿಗೂ ತಪ್ಪಿದ್ದಲ್ಲ. ಸಾವಿಗೆ ಹೆದರಿ ಕರ್ತವ್ಯಚ್ಯುತನಾಗಲೇ ? ದೇವಸಮಾನರಾದ ಪೆರೋನ ಸೇವೆಯಲ್ಲಿ ಈಗಲೇ ದೇಹವಿಡುವುದಕ್ಕೂ ನಾನು ಸಿದ್ಧ !"

"ದೇವಸೇವೆಗಿಂತ ಪೆರೋ ಸೇವೆಯೇ ಹೆಚ್ಚಿನದು ಎಂದು ನೀವು ಭಾವಿಸಿದ ಹಾಗಿದೆ."

"ಐಗುಪ್ತದಲ್ಲಿ ಪ್ರಾಚೀನ ಕಟ್ಟಳೆಯ ಪ್ರಕಾರ ದೇವರು ಬೇರೆಯಲ್ಲ, ಪೆರೋ ಬೇರೆಯಲ್ಲ. ಹೌದೆ ಮಹಾ ಅರ್ಚಕರೇ ?"

"ಕಟ್ಟಳೆಗೆ ಅನುಗುಣವಾಗಿ ವರ್ತನೆ ಇರಬೇಕು. ಅದಿಲ್ಲದೆ ಹೋದರೆ ಕಟ್ಟಳೆ ಅರ್ಥಶೂನ್ಯವಾಗ್ತದೆ."

"ಕಟ್ಟಳೆಗಳ ಪಾಲನೆಯಲ್ಲಿ ಪೆರೋ ಪೇಪಿ ಅಸಮಾನರು. ಆದ್ದರಿಂದಲೇ ಸೆಡ್ ಉತ್ಸವದ ದಿನ ನಿರ್ಣಯಕ್ಕೆ ಅವರು ಮಹಾ ಅರ್ಚಕರ ದಾರಿ ನೋಡ್ತಿದ್ದಾರೆ."

"ಮಹಾ ಅರ್ಚಕ ಅನಗತ್ಯ ಅಂತ ಇನ್ನೂ ಯಾರೂ ಭಾವಿಸಿಲ್ಲವಲ್ಲ. ಸಮಾಧಾನದ ಸಂಗತಿ !"

"ಯಾಕೆ ಈ ವ್ಯಂಗ್ಯ ? ನಿಮಗೆ ತಿಳೀದೆ ? ಐಗುಪ್ತದ ಸಮಾಜ ವ್ಯವಸ್ಥೆಯಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಪಾತ್ರವುಂಟು. ಯಾವ ಪಾತ್ರವೂ ಅನಗತ್ಯವಲ್ಲ."

"ಸಾಕು ವ್ಯರ್ಥಾಲಾಪ. ಹೇಳಬೇಕಾದ್ದನ್ನು ತಿಳಿಸಿ ನೀವು ಹೊರಡಬಹುದು."

"ನಾನೊಬ್ಬನೇ ಅಲ್ಲ, ಹೊರಡುವವರು ನಾವು."

"ಏನರ್ಥ ಆ ಮಾತಿಗೆ ?"

"ಅರ್ಥ ನೀವು ಬಲ್ಲಿರಿ. ನಿಮ್ಮನ್ನು ಕರಕೊಂಡು ಬರಬೇಕೂಂತ ರಾಜಾಜ್ಞೆಯಾಗಿದೆ."

"ಹೆಡೆಮುರಿ ಕಟ್ಟಿ ?"

ಹೇಪಾಟ್‌ನ ಸಿಟ್ಟು ಅವನನ್ನೇ ದಹಿಸುತ್ತಿತ್ತು. ತಾನು ಶಕ್ತಿಗುಂದುತ್ತಿದ್ದೇನೆ ಎಂದು ಅವನಿಗೆ ತೋರಿತು. ಅದನ್ನು ಗಮನಿಸಿದ್ದ ಸೂಕ್ಷ್ಮಮತಿ

ಹೆಖ್ವೆಟ್ ಧ್ವನಿಯಲ್ಲಿ ವಿನಯ ತುಂಬಿ ನುಡಿದ :

"ಇಂಥ ಮಾತನ್ನು ಈ ವೃದ್ಧ ಕೇಳಬಾರದು. ಧಾರ್ಮಿಕ ಜಿಜ್ಞಾಸೆ ಇಲ್ಲಿ ನಡೀತಿತ್ತು ಅನ್ನೋದು ಎಲ್ಲರಿಗೂ ಗೊತ್ತಿದೆ. ಮಹಾ ಅರ್ಚಕರ ವಿಷಯದಲ್ಲಿ ತೋರುವ ಭಯಭಕ್ತಿ, ಪ್ರೇಮ ಆದರ ಯಾವುದಕ್ಕೂ ಚ್ಯುತಿ ಉಂಟಾಗಿಲ್ಲ. ಈ ಸಂಜೆಯೇ ಹೊರಡೋಣವೇ ? ಬೆಳಗಾಗುವುದಕ್ಕೆ ಮುಂಚೆಯೇ ರಾಜಧಾನಿ ಸೇರಬಹುದು."

ಕರೆಯಲು ಅಮಾತ್ಯನೇ ಬಂದಿದ್ದರೆ ಚೆನ್ನಾಗಿರ್ತಿತ್ತು. ಬದಲು ಅತ್ಯಂತ ಹಿರಿಯ ಸರುಸದಸ್ಯ ಬಂದ. ಇಷ್ಟಾದರೂ ಆಯಿತಲ್ಲ. ತಾನು ನಡೆಸುವ ಹೋರಾಟದ ಮುಂದಿನ ಘಟ್ಟ ತಲಪಲು ಮೆಂಫಿಸಿಗೆ ಮರಳಲೇಬೇಕು. ಹಗ್ಗ ವನ್ನು ಎಷ್ಟು ಬೇಕೋ ಅಷ್ಟೇ ಜಗ್ಗುವುದು ಜಾಣತನ....ಯೋಚಿಸುತ್ತ ಹೇಪಾಟ್‌ನ ಮುಖದ ಸ್ನಾಯುಗಳು ತುಸು ಸಡಿಲಿದುವು. ಆತನೆಂದ :

"ನೀವು ಇವತ್ತೇ ಹೋಗಬಹುದು. ನಾನು ನಾಳೆ ಬರ್ತೇನೆ."

ಹೆಖ್ವೆಟ್ ನಸುನಕ್ಕ.

"ಇಬ್ಬರೂ ನಾಳೆಯೇ ಹೋಗೋಣ. ನಿಮ್ಮ ನಾವೆ ಮುಂದೆ. ಆದರ ಹಿಂದೆ ನಾನು...."

ಇಷ್ಟು ಹೇಳಿ ಆತ ಎದ್ದುನಿಂತು, ಹೇಪಾಟ್‌ನತ್ತ ಹೆಜ್ಜೆ ಇರಿಸಿ, ಮಂಡಿ ಯೂರಿ ಮಹಾ ಅರ್ಚಕನ ಅಧಿಕಾರ ದಂಡವನ್ನು ಚುಂಬಿಸಿ ಏಳುತ್ತ, ಮೆಲು ದನಿಯಲ್ಲಿ "ಕೋಪ ಇಳಿಯಿತಾ ಗುರುವೆ ?" ಎಂದ. ಹೇಪಾಟ್ ನಿಟ್ಟುಸಿರು ಬಿಟ್ಟ.

ತೀವ್ರ ಗತಿಯ ಆ ಸಂಭಾಷಣೆ ಸೆರ್ಕೆಟ್‌ಗೆ ಪೂರ್ತಿ ಅರ್ಥವಾಗಿರಲಿಲ್ಲ. ಆದರೂ ಆತ ಸಂತೃಪ್ತ. ಹೆಖ್ವೆಟ್‌ನ ಹಿಂದೆಯೇ ತಾನೂ ಧಾವಿಸಿ ಮಹಾ ಅರ್ಚಕನ ಅಧಿಕಾರ ದಂಡಕ್ಕೆ ಮುತ್ತು ಕೊಟ್ಟ. ಅವನ ಹಿಂದೆಯೇ ಇತರರೂ ಸಾಲುಗಟ್ಟಿದರು.

ಹೇಪಾಟ್ ಎದ್ದು ಅಧಿಕಾರದಂಡ ಸಹಿತವಾಗಿ ಬಲತೋಳನ್ನೆತ್ತಿ, "ಪೆರೋನ ಆಯುರಾರೋಗ್ಯ ವರ್ಧಿಸಲಿ," ಎಂದ.

ಹೆಖ್ವೆಟ್, "ವರ್ಧಿಸಲಿ," ಎಂದಷ್ಟೇ ನುಡಿದು, ತನ್ನ ನಗೆಯನ್ನು ಹತ್ತಿಕ್ಕಿದ.

ರಾ ಮಂದಿರದ ಮುಖ್ಯ ಅರ್ಚಕ ಸಮಾಧಾನದ ನಿಟ್ಟುಸಿರು ಬಿಟ್ಟ.

*        *        *        *

ಹೆಖ್ವೆಟ್‌ನನ್ನು ರಾಜಗೃಹದತ್ತ ತೆರಳಲು ಬಿಟ್ಟು ಹೇಪಾಟ್ ತನ್ನ ಏಕಾಂತದ ಕೊಠಡಿಗೆ ಮರಳಿದ. ಅಲ್ಲಿ ತನ್ನ ಆಪ್ತ ಸಹಾಯಕ ದೇವಸೇವಕನಿಗೆ ಅವನೆಂದ :

"ಟೆಹುಟಿಯನ್ನು ಬರಹೇಳು."

ಆ ಕೆಲಸ ಸುಲಭವಾಯಿತು. ಟೆಹುಟಿ ತಾನೇ ದೇವಮಂದಿರದತ್ತ ಬರತೊಡಗಿದ್ದ, ಬಕಿಲನೊಂದಿಗೆ.

ಆತನಿಗೆ ಸ್ವಲ್ಪ ಕಸಿವಿಸಿ. ನೀರಾನೆ ಪ್ರಾಂತದ ಬಂಡಾಯ ರಾಜಕೀಯ ಚೌಕಮಣೆ ಆಟದ ರಂಗಮಧ್ಯಕ್ಕೇ ಅವನನ್ನು ತಳ್ಳಿತ್ತು. ಆತ ಇಷ್ಟನ್ನು ತರ್ಕಿಸಿದ್ದ : ಒಂದೋ ಅಮಾತ್ಯನ ಅವಕೃಪೆಗೆ ತಾನು ಗುರಿಯಾಗಿ ಈಗಿನ ಹುದ್ದೆಯನ್ನು ಕಳೆದುಕೊಳ್ಳಬಹುದು; ಸಣ್ಣ ಹುದ್ದೆಗೆ ನಿಯೋಜಿತನಾಗ ಬಹುದು. ಇಲ್ಲವೆ, ಅರಮನೆ ಗುರುಮನೆಗಳ ಸೆಣಸಾಟದಲ್ಲಿ ಅಮಾತ್ಯ ಪದ ಚ್ಯುತನಾಗಿ, ತಾನು ಆ ಸ್ಥಾನವನ್ನು ಏರಬಹುದು....ನೀರಾನೆ ಪ್ರಾಂತದಿಂದ ಹಿಂತಿರುಗಿದ ಟೆಹುಟಿ ತಾನು ಮಹಾ ಅರ್ಚಕನ ಪಕ್ಷಪಾತಿ ಎಂಬುದನ್ನು ಬಹಿ ರಂಗಗೊಳಿಸಿದ. ಅಮಾತ್ಯ ಅವನನ್ನು ಆಗಲೆ ದಂಡಿಸುವ ಗೋಜಿಗೆ ಹೋಗದೆ ಜನಗಣತಿಯ ಉಸ್ತುವಾರಿಗಾಗಿ ಉತ್ತರಕ್ಕೆ ಕಳುಹಿದ. ಟೆಹುಟಿಗೆ ಘರ್ಷಣೆ ಬೇಗನೆ ನಡೆಯಲೆಂಬ ಆಸೆ. ಆದರೆ ಹೇಪಾಟ್ ಹೇಳಿದ್ದ : "ಪೂರ್ವಸಿದ್ಧತೆ ಇಲ್ಲದೆ ನಾವು ದುಡುಕಬಾರದು." ಈಶಾನ್ಯ ಗಡಿಯಲ್ಲಿದ್ದ ಸೈನ್ಯಠಾಣ್ಯಕ್ಕೆ ಮಹಾ ಅರ್ಚಕ ಭೇಟಿ ನೀಡಿದ್ದು, ಅಲ್ಲಿ ಅಮನ್ ದೇವತೆಯ ಉತ್ಸವ ನಡೆ ಸಿದ್ದು ಆ ಪೂರ್ವ ಸಿದ್ಧತೆಯ ಒಂದಂಗ ಎಂದು ಟೆಹುಟಿ ಬಲ್ಲ. ಬಂಟನೊಡನೆ ಆತ ನುಡಿದ : "ಮಹಾ ಅರ್ಚಕ ನಿಧಾನಿ. ಆದರೆ ಭಾರೀ ದೊಡ್ಡ ಮನುಷ್ಯ. ನಿನ್ನನ್ನು ನೀರಾನೆ ಪ್ರಾಂತಕ್ಕೆ ಪ್ರಾಂತಪಾಲನಾಗಿ ನೇಮಿಸಿದಾಗಲೇ ನನಗೆ ಮನಶ್ಶಾಂತಿ."

(ತನ್ನ ಒಡೆಯ ಟೆಹುಟಿ ನೇಮಕದ ಆ ಮಾತನ್ನು ಅದಕ್ಕೂ ಹಿಂದೆ ಹಲವು ಸಲ ಹೇಳಿದ್ದ. ಆರಂಭದಲ್ಲಿ ಬಕಿಲ ಅದನ್ನು ಹಾಸ್ಯೋಕ್ತಿ ಎಂದು

ಭಾವಿಸಿದ್ದ. ಕ್ರಮೇಣ ಪದೇ ಪದೇ ಕಿವಿಗೆ ಬಿದ್ದಾಗ, ಯಾಕಾಗಬಾರದು?.... ಎನಿಸಿತು. ಮುಂದೆ, ತಾನು ನಿಜವಾಗಿಯೂ ಆ ಹುದ್ದೆಗೆ ಅರ್ಹ—ಎಂಬ ಭಾವನೆ ಅವನಲ್ಲಿ ಬಲವಾಯಿತು.

ಅಷ್ಟೇ ಅಲ್ಲ. "ನೀನು ಐಗುಪ್ತದ ಸೇನಾನಿಯಾಗೋದಕ್ಕೂ ಯೋಗ್ಯ," ಎಂದ ಟೆಹುಟಿ, ಒಮ್ಮೆ, ಧುಮುಧುಮಿಸಿದ ಭಾವನೆಗಳನ್ನು ಹತ್ತಿಕ್ಕಲಾಗದೆ ಬಕಿಲನ ಒಂದು ಕಣ್ಣು ಅತ್ತಿತು.

ಅಂದಿನಿಂದ ಬಕಿಲ ಟೆಹುಟಿಯ ಬೆನ್ನಿಗೆ ಅಂಟಿದ ನೆರಳಾದ.)

ಟೆಹುಟಿ ಒಳಬಂದೊಡನೆ ಹೇಪಾಟ್ ಕೇಳಿದ :

"ಎಲ್ಲಿ ಬಕಿಲ?"

"ಹೊರಗಿದ್ದಾನೆ."

"ಅವನನ್ನೂ ಕರಿ."

...ಅವರಿಬ್ಬರಿಗೂ ಮಹಾ ಅರ್ಚಕ ತಿಳಿಸಿದ: ಈಶಾನ್ಯ ಗಡಿಯ ಸೈನ್ಯಠಾಣ್ಯಕ್ಕೆ ಟೆಹುಟಿ ಹೋಗಬೇಕು. ಹೌದು, ಬಕಿಲನನ್ನು ಕರೆದು ಕೊಂಡು. ರಾಜಧಾನಿಯಿಂದ ಸಂದೇಶ ಬರುವ ತನಕ ಅಲ್ಲಿರಬೇಕು.

ಟೆಹುಟಿಗೆ ತಿಳಿಯುವ ಬಯಕೆ. ಯಾರ ಸಂದೇಶ ?

ಮಹಾ ಅರ್ಚಕ :

"ನನ್ನ ಸಂದೇಶ ಬಂದರೆ ಸೇನಾನಿ ಅಮೆನೊಮೆಪೆಟ್ ಎಲ್ಲ ದಂಡಿನೊಡನೆ ಹೊರಟು ಬರಲಿ. ನೀವೂ ಬನ್ನಿ. ಅಮಾತ್ಯನ ಸಂದೇಶ ಬಂದರೆ ಆತ ಎಷ್ಟು ಜನರನ್ನು ಕರೀತಾನೋ ಅವರು ಬರಲಿ. ಜತೆಯಲ್ಲಿ ನೀವೂ ಹೊರಟು ಬನ್ನಿ."

ಟೆಹುಟಿ ಸ್ವರ ತಗ್ಗಿಸಿ ಕೇಳಿದ :

"ರಾಜಿ ಮಾತುಕತೆ ನಡೆಯೋ ಸಾಧ್ಯತೆ ಇದೆಯೆ ?"

"ಮಾತುಕತೆ ಯಶಸ್ವಿಯಾಗಲೂಬಹುದು, ವಿಫಲವಾಗಲೂ ಬಹುದು. ಒಡಂಬಡಿಕೆ ಏರ್ಪಟ್ಟರೂ—ನೆನಪಿಟ್ಕೊ—ಅದು ತಾತ್ಕಾಲಿಕ."

"ದಂಡು ?"

"ಟೆಹುಟಿ ನೀನಿನ್ನೂ ಎಳಸು. ಸದ್ಯಕ್ಕೆ ರಾಜಿ ಎಂದಾದರೆ ನೀರಾನೆ ಪ್ರಾಂತದ ಮೇಲೆ ಏರಿಹೋಗೋದಕ್ಕೆ ಕಡಿಮೆ ಜನರು ಸಾಕು. ಆ ಕೆಲಸ

ನಾನು ಮಾಡ್ತೇನೆ. ಬಕಿಲ ಅಧಿಪತಿಯಾಗಿ ಬರ್ತಾನೆ. ವಿರಸವೇ ಮುಂದು ವರಿಯೋದಾದರೆ ಅಮೆನೊಮೆಪೆಟ್ ಕಾರ್ಯೋನ್ಮುಖನಾಗ್ತಾನೆ...."

"ಅಮೆನೊಮೆಪೆಟ್ ಮೇಲೆ ಬಹಳ ವಿಶ್ವಾಸವಿಟ್ಟದ್ದೀರಿ."

"ಹ್ಞ. ಅವನನ್ನು ಹತ್ತು ಸಹಸ್ರ ಐಗುಪ್ತ ಯೋಧರ ಸೇನಾನಿ ಮಾಡ್ತೇನೆ."

"ರಾಜಿಯಾದರೆ ಟೆಹುಟಿ ಮೇಲೆ ಆಮೆರಬ್ ದ್ವೇಷ ಸಾಧಿಸಬಹು ದೇನೋ."

"ನನಗೆ ಅಷ್ಟೂ ತಿಳೀದು ಅಂದ್ಕೊಂಡಿದಿಯಾ ? ನಿನ್ನ ರಕ್ಷಣೆ ನನ್ನ ಹೊಣೆ."

"ಮೊನ್ನೆ ನಡೆದ ಔತಣದ ವಿಷಯ ನೀವು ಬಲ್ಲಿರಿ."

"ಬಲ್ಲೆ. ನಿನ್ನ ಗೌರವಾರ್ಥವೂ ಒಂದು ಔತಣ ಏರ್ಪಡಿಸೋಣ. ಕುಡಿತ, ಕುಣಿತ, ಲೆಕ್ಕವಿಲ್ಲದ ಭಕ್ಷ್ಯ ಭೋಜ್ಯಗಳು. ಇಷ್ಟೇ ತಾನೆ ಔತಣ ಎಂದರೆ ?"

ಟೆಹುಟಿ ಸುಮ್ಮನಾದ.

ಯಾವ ಅಳುಕೂ ಬೇಡ ಅನ್ನುವಂತೆ, ಹೇಪಾಟ್ ತನ್ನ ಸೊರಗಿದ ಟೆತುಗಳ ಮೇಲೆ ಕಿರುನಗೆ ಮೂಡಿಸಿದ. ಟೆಹುಟಿಯ ಮುಖ ತುಸು ಅರಳಿದು ವನ್ನು ಕಂಡು ಅವನೆಂದ :

"ನೀವು ಮಂದಿರದಲ್ಲೇ ಇದ್ಬಿಡಿ. ಕೆಳಗೆ ಹೋಗಿ ಆ ಹೆಶ್ಪೆಟ್‌ನ ಬಾಯಿಗೆ ಬೀಳ್ಬೇಡಿ. ನೀರಾನೆ ಪ್ರಾಂತದ ಭೂಮಾಲಿಕರು ಹೊರಟು ಹೋದರೊ ?"

ಮಹಾ ಅರ್ಚಕ ತನ್ನ ಕಡೆ ನೋಡಿದುದನ್ನು ಗಮನಿಸಿ ಬಕಿಲ ಅಂದ :

"ಇಲ್ಲ. ಇನ್ನೂ ಇಲ್ಲೇ ಇದ್ದಾರೆ."

ತನ್ನ ಆಪ್ತ ಸಹಾಯಕ ದೇವಸೇವಕನತ್ತ ನೋಡಿ ಹೇಪಾಟ್ ನುಡಿದ :

"ನೀನು ಹೋಗಿ ಆ ಭೂಮಾಲಿಕರಿಗೆ ಹೇಳು. ದೋಣಿಕಟ್ಟೆ ಹತ್ತಿರ ಬಚ್ಚಿಟ್ಕೊಂಡಿರ್ಲಿ ಯಾವುದಾದರೂ ದೋಣಿ ಹತ್ಕೊಂಡು ಇಲ್ಲಿಂದ ಹೊರಟು ಹೋಗ್ಲಿ. ಹೆಶ್ಪೆಟ್‌ನ ಕೈಗೆ ಅವರು ಸಿಗಬಾರ್ದು."

ದೇವಸೇವಕನೆಂದ :

"ಆಗ್ಲಿ. ಹೇಳ್ತೀನೆ."

ಟೆಹುಟಿ ಬಕಿಲರಿಬ್ಬರನ್ನೂ ಮಹಾ ಅರ್ಚಕ ಆಶೀರ್ವದಿಸಿದ. ಬಾಯಿ ತೆರೆದು, ಸಣ್ಣನೆ ಆಕಳಿಸಿ, ತನ್ನ ಸಹಾಯಕನೆಡೆಗೆ ನೋಡಿದ. ಅದು ಊಟಕ್ಕೂ ವಿಶ್ರಾಂತಿಗೂ ಹೊತ್ತಾಯಿತೆಂಬ ಸೂಚನೆ.

* * * *

ನಡೆದದ್ದು ತಣ್ಣಗಿನ ಮಾತುಕತೆ—ಎಂದು ನಿರಾಶರಾದರು ಚಕಮಕಿ ನಿರೀಕ್ಷಿಸಿದ್ದ ಆನ್ ನಗರಿಯ ನಾಗರಿಕರು.

ಮಹಾ ಅರ್ಚಕನೊಡನೆ ಹೆಪ್ನೆಟ್ ಮಾತನಾಡಿದ ರೀತಿ ಸೆರ್ಕೆಟ್‌ನನ್ನು ದಂಗು ಬಡಿಸಿತ್ತು. ಈ ತಾತಯ್ಯನನ್ನು ಭುಜಗಳ ಮೇಲೆ ಹೊತ್ತುಕೋ ಎಂದು ಯಾರಾದರೂ ಹೇಳಿದ್ದರೆ ಅದನ್ನು ಮಾಡುವುದಕ್ಕೂ ಆವನು ಸಿದ್ಧನಿದ್ದ.

ಉತ್ಕೃಷ್ಟ ಭೋಜನ. ("ರುಚಿ! ರುಚಿ! ಹೊಟ್ಟೆ ತುಂಬುವಷ್ಟು ತಿನ್ನಲಾರೆ ಮಗೂ. ವಯಸ್ಸಾಗ್ತಾ ಬಂತು. ಪಚನಶಕ್ತಿ ಕಮ್ಮಿ.") ವಯಸ್ಸಾದ ದ್ರಾಕ್ಷಾಸುರೆ. ಸೊಗಸಾಗಿತ್ತು. ("ಮಹಾ ಅರ್ಚಕರು ಭಾರೀ ಸಿಟ್ಟಿನಲ್ಲಿದ್ದರು ಅಲ್ಲವಾ? ಏನಾಯ್ತು ಕಡೆಗೆ?" "ನೀವು ತುಂಬಾ ಚೆನ್ನಾಗಿ ಮಾತಾಡಿದಿರಿ." "ನಿದ್ದೆ ಬರ್ತಿದೆ. ಸಾಯಂಕಾಲ ಟೆಹುಟಿ, ಬಕಿಲ, ಆ ಭೂಮಾಲಿಕರು—ಅವರನ್ನೆಲ್ಲ ಕರೆಸು. ಅವರ ಜತೆ ಮಾತಾಡ್ತೇನೆ. ಅವರು ಯಾರೂ ನನಗೆ ಹೆದರಬೇಕಾಗಿಲ್ಲ." "ಕರೆಯೋದಕ್ಕೆ ನಾನೇ ಹೋಗ್ತೇನೆ." "ಬೇಡ, ಬೇಡ. ನೀನು ಇಲ್ಲೇ ಇರು. ಬೇರೆ ಯಾರಾದರೂ ಹೋಗ್ಲಿ." "ಆಗಲಿ, ಸ್ವಾಮಿ.")

ಹೆಪ್ನೆಟ್ ಎದ್ದಾಗ ಬಿಸಿಲು ಬಾಡಿತ್ತು. ಸೆರ್ಕೆಟ್ ಬಾಗಿಲ ಬಳಿ ನಿಂತಿದ್ದ. ಅವನ ಜೋಲುಮೋರೆ ನೋಡಿ ಹೆಪ್ನೆಟ್ ಕೇಳಿದ:

"ಟೆಹುಟಿ, ಭೂಮಾಲಿಕರು ಯಾರೂ ಇಲ್ಲ ಅಲ್ಲವಾ?"

ಸೆರ್ಕೆಟ್‌ಗೆ ಆಶ್ಚರ್ಯ! ನಿದ್ದೆಹೋಗಿದ್ದ ಈ ಹಿರಿಯರಿಗೆ ಅದು ಹೇಗೆ ತಿಳಿಯಿತು?

"ಇಲ್ಲ, ಸ್ವಾಮಿ. ಮಾಯವಾಗಿದ್ದಾರೆ."

" ನಿನ್ನ ಕೆಳಗೆ ಬೇಹಿನವರು ಎಷ್ಟು ಜನ ಇದ್ದಾರೆ ಮಗೂ ? "

" ಇಬ್ಬರು. "

" ಅವರು ಏನು ಹೇಳ್ತಾರೆ ? "

" ಅವರಿಬ್ಬರೂ ಇಲ್ಲೇ ಇದ್ರು."

" ಸರಿಹೋಯ್ತು ! " ಎಂದು ಹೆಖ್ಷೆಟ್ ಕನಿಕರದ ನೋಟದಿಂದ ಸೆರ್ಕೆಟ್‌ನನ್ನು ನೋಡಿದ.

ಅಳು ಬರುವಂತಾಯಿತು, ಸೆರ್ಕೆಟ್‌ಗೆ. ಉಮ್ಮಳವನ್ನು ಪ್ರಯತ್ನ ಪೂರ್ವಕವಾಗಿ ಆತ ಹತ್ತಿಕ್ಕಿದ.

ತನ್ನ ಲಿಪಿಕಾರನನ್ನು ಕರೆದು ಹೆಖ್ಷೆಟ್ ಹೇಳಿದ :

" ರಾ ಮಂದಿರಕ್ಕೆ ಹೋಗಿ, ಮಹಾ ಅರ್ಚಕರು ನಾಳೆ ಬೆಳಿಗ್ಗೆ ಎಷ್ಟು ಹೊತ್ತಿಗೆ ರಾಜಧಾನಿಗೆ ಹೊರಡ್ತಾರೆ ಅಂತ ಕೇಳ್ಕೊಂಡ್ಬಾ."

" ಹೂಂ. ಸ್ವಾಮೀ."

" ಅದೂ ಇದೂ ಮಾತಾಡ್ತಾ ಅಲ್ಲಿ ನಿಂತ್ಕೋಬೇಡ. ತಕ್ಷಣ ಬಂದ್ಬಿಡು."

" ಹೂಂ. "

ಲಿಪಿಕಾರ ಹೊರಟ ಬಳಿಕ, ತನ್ನ ದೋಣಿಕಾರರನ್ನು ಕರೆಸಿ ಹೆಖ್ಷೆಟ್ ಆದೇಶವಿತ್ತ :

" ರಾತ್ರೆ ಬೇಗನೆ ಮಲಕೊಳ್ಳಿ. ನಸುಕಿನಲ್ಲೇ ಎದ್ಬಿಡಿ."

" ಹೂಂ. ಒಡೆಯ."

ರಾಜಕಾರ್ಯ ತೃಪ್ತಿಕರವಾಗಿಯೇ ಮುಕ್ತಾಯಗೊಂಡಿತ್ತು. ಮಹಾ ಅರ್ಚಕ ಮನಸ್ಸು ಬದಲಿಸಬಹುದೆಂಬ ಶಂಕೆ ಹೆಖ್ಷೆಟ್‌ಗೆ ಇರಲಿಲ್ಲ. ಅಷ್ಟೊಂದು ಜನರ ಮುಂದೆ ನಡೆದ ಮಾತುಕತೆ....ಈಗ ಅಪಸ್ವರ ತೆಗೆದರೆ ರಾ ಮಂದಿರದ ಅರ್ಚಕ ಏನೆಂದಾನು ? ದೇವಸೇವಕ ಗಣ ಏನೆಂದೀತು ?

ಪಡಸಾಲೆಗೆ ಬಂದು ಪೀಠದ ಮೇಲೆ ಕುಳಿತು, ತೆರೆದ ಹೆಬ್ಬಾಗಿಲಿನಿಂದ ಕಾಣಿಸುತ್ತಿದ್ದ ನಿರ್ಜನ ಬೀದಿಯನ್ನು ಹೆಖ್ಷೆಟ್ ದಿಟ್ಟಿಸಿದ. ರಾಜಧಾನಿಯ ಕಲರವ ಒಗ್ಗಿ ಹೋಗಿದ್ದ ಅವನಿಗೆ ಆನ್‌ನಗರಿ ಕುಗ್ರಾಮದಂತೆ ಕಾಣಿಸುತ್ತಿತ್ತು.

ಅವನ ಲಿಪಿಕಾರ ಮರಳಿದ.

" ನಸುಕಿನಲ್ಲಿ ಪೂಜೆ ಮುಗಿದ ತಕ್ಷಣ ಪ್ರಯಾಣವಂತೆ, " ಎಂದು ತಿಳಿಸಿದ.

" ಒಳ್ಳೇದು." ಎಂದ ಹೆಖ್ಷೆಟ್, 'ಬೆಳಗಿನ ನಿದ್ದೆಗೆ ತುಸು ಅಡ್ಡಿ' ಎಂದು ಗೊಣಗುತ್ತ.

* * * *

ರಾತ್ರೆ ಹೆಖ್ಷೆಟ್ ಲಘು ಆಹಾರ ಸ್ವೀಕರಿಸಿದ.

ಹಿಂದಿನ ರಾತ್ರೆ ದಾಸಿಗೆ ತಾನು "ಹೂಂ" ಎಂದುದು ನೆನಪಿತ್ತು.

ಇಂದು ಅಪರಾಹ್ನದ ವಿಶ್ರಾಂತಿಯಿಂದ ಆವನ ದೇಹದಲ್ಲಿ ಲವಲವಿಕೆ ಮೂಡಿತ್ತು.

ಬಡಿಸುವಾಗ ಕಾಣಿಸಿಕೊಂಡಿರಲಿಲ್ಲ ಆ ದಾಸಿ. ಆದರೆ ಮಲಗುವ ಕೊಠಡಿಯಲ್ಲಿ ಆವಳಿದ್ದಳು.

ಉಡುಗೊರೆ ?

ತನ್ನ ಎದೆಯಲ್ಲಿದ್ದ ಸರಗಳಿಂದ ಸೊಬಗಿನ ಕವಡೆಹಾರ ಒಂದನ್ನು ಹೆಖ್ಷೆಟ್ ಬಿಚ್ಚಿ ದಾಸಿಗಿತ್ತ. ('ಇದು ಪೆರೋ ಸಂಸ್ಕೃತಿ, ಅಮಾತ್ಯ ಸಂಸ್ಕೃತಿ.')

ದಾಸಿ ಮೆಖ್‌ಮೆಖ್ ಹೂಗಳ ಶಿರೋಪಟ್ಟಿಯನ್ನೂ ಸೊಂಟಪಟ್ಟಿಯನ್ನೂ ಧರಿಸಿದ್ದಳು. ಹೆಖ್ಷೆಟ್ ಇತ್ತ ಸರವನ್ನು ಕತ್ತಿಗೆ ಹಾಕಿಕೊಂಡಳು.

ಆವಳನ್ನು ಹತ್ತಿರ ಬರಸೆಳೆದಾಗ ಹೆಖ್ಷೆಟ್‌ಗೆ ಟಿಹುಟಿಯ ನೆನಪಾಯಿತು. ಆನ್ ನಗರಿಗೆ ರಾಜಕಾರ್ಯ ನಿಮಿತ್ತ ಬರುವ ಎಲ್ಲರ ಸೇವೆಯನ್ನೂ ಇವಳು ಮಾಡಬೇಕು. ರಾ ಮಂದಿರದಲ್ಲಿ ದೇವಸೇವಿಕೆಯರು ಇರಲಿಲ್ಲ. ಈಕೆ ಮಹಾ ಅರ್ಚಕನ ಸೇವೆಯನ್ನು ಕೂಡಾ ?

ಇಲ್ಲದ ಶಕ್ತಿಯನ್ನು ತೋಳುಗಳಿಗೆ ತಂದುಕೊಂಡು ಹೆಖ್ಷೆಟ್ ಆ ದಾಸಿಯನ್ನು ಬಿಗಿದಪ್ಪಿದ.

ಆವನ ಬಾಹುಬಲದಿಂದ ನೋವಾಗುತ್ತಿದೆ ಎಂದು ನಟಿಸುತ್ತ ದಾಸಿ ನರಳಿಕೆಯ ಸದ್ದು ಮಾಡಿದಳು.

ಇವಳು ಮಹಾ ಕಳ್ಳಿ—ಎನಿಸಿತು ಹೆಪ್ಪೆಟ್‌ಗೆ. ತನ್ನ ನಿಶ್ಯಕ್ತಿಗಾಗಿ ಮೌನವಾಗಿ ರೋದಿಸುತ್ತ ಬೆರಳಿನ ಉಗುರುಗಳಿಂದ ದಾಸಿಯ ಮೈಮೇಲಿ ಗುರುತುಗಳನ್ನು ಉಳಿಸಲು ಆತ ಯತ್ನಿಸಿದ.

೯

ಅತಿಥಿಗೃಹದ ಹೊರಗಿನಿಂದ ಕೇಳಿಸುತ್ತಿದ್ದ ಹೆಜ್ಜೆ ಸಪ್ಪಳ ಹಾಗೂ ಗಂಟಲು ಧ್ವನಿಗಳು ಮೆನೆಪ್‌ಟಾಗೆ ಪರಿಚಿತವಾದುವು. ಎದುರುಗಡೆಯಿಂದ ಹಾದುಹೋದವರು ಯಾರು ? ಮಾತು ಯಾರದು ?—ಎಂದು ಕುಳಿತ ಲ್ಲಿಂದಲೇ ಗುರುತು ಹಿಡಿಯಲು ಅವನು ಶಕ್ತನಾದ.

ಬಟಾ ಊರಿಗೆ ಹೋದಂದಿನಿಂದ ಮೆನೆಪ್‌ಟಾಗೆ ಬೇಸರ. ಅದು ಅಂಟು ಜಾಡ್ಯವಾಗಬಾರದೆಂದು, ಬೆಕ್—ಔಟರೆದುರು ಸಾಧ್ಯವಾದಷ್ಟು ಮಟ್ಟಿಗೆ ಪ್ರಸನ್ನ ಭಾವದಿಂದಿರಲು ಅವನು ಯತ್ನಿಸಿದ. ಔಟನ ಜತೆಗೋ ಬೆಕ್‌ನ ಜತೆಗೋ ಚೌಕಮಣೆ ಆಟ ಆಡುತ್ತಿದ್ದ. ಅತಿಥಿಗೃಹದ ಎದುರಿನ ಉದ್ಯಾನದಲ್ಲಿ ಹೊತ್ತು ಕಳೆಯುತ್ತಿದ್ದ. ಆಗೊಮ್ಮೆ ಈಗೊಮ್ಮೆ ಅರಮನೆಯ ಕೆಲಸಗಾರರು ಉದ್ಯಾನದ ಅಂಚಿನಲ್ಲಿ ವಿನಮ್ರ ಭಾವದಿಂದ ನಿಂತಾಗ, ಅವರೊಡನೆ ಅವರ ಸುಖದುಃಖದ ಒಂದೆರಡು ಮಾತು ಆಡುತ್ತಿದ್ದ. ಅತಿಥಿಗೃಹದ ದ್ವಾರಪಾಲಕ ಭಟರು ಆ ಆಳುಗಳನ್ನು ಓಡಿಸಲು ಒಮ್ಮೆ ಯತ್ನಿಸಿದಾಗ ಅವನೆಂದ : "ಓಡಿಸ್ಬೇಡಿ. ನನಗೇನೂ ತೊಂದರೆಯಾಗೋದಿಲ್ಲ."

ಎಚ್ಚರದ ಶಯನ, ಮಂಪರು, ಮಾತು.

ಅಮಾತ್ಯ ಭವನದ ಲಿಪಿಕಾರ ಸೆನೆಬ್ ದಿನಕ್ಕೊಮ್ಮೆ ಬಂದು ಹೋಗು ತ್ತಿದ್ದ. ಮಾತನಾಡಲು ವಿಷಯದ ಅಭಾವ. ("ಉಪಾಹಾರ (ಭೋಜನ) ಆಯ್ತೆ? " ಅಥವಾ, "ಬಟಾ ಊರು ಸೇರಿದ ಏಳನೇ ದಿವಸ ಯಾವನಾದರೂ ದೋಣಿಕಾರ ಸಂದೇಶ ತರಬಹುದು ಅನ್ತೇನೆ." ಇಲ್ಲವೆ, "ಒಂಟಿಯಾಗಿ ಹೊತ್ತು ಕಳೆಯೋದು ಕಷ್ಟವಾಗಿರ್ಬೇಕು." ಒಮ್ಮೊಮ್ಮೆ ಕಣ್ಣು ಮಿಟುಕಿಸಿ, "ಇದೊಳ್ಳೇ ಸೆರೆಮನೆ ಇದ್ದ ಹಾಗೆ ನಿಮಗೆ!")

ಅತಿಥಿಗೃಹದ ಉಸ್ತುವಾರಿಯ ಅಧಿಕಾರಿ ಕ್ರಮಬದ್ಧವಾಗಿ ದಿನಕ್ಕೆ ಮೂರು ಸಲ ಮುಖ ತೋರಿಸುತ್ತಿದ್ದ. ("ಭೋಜನಕ್ಕೆ ನಿಮಗೆ ಇಷ್ಟವಾದದ್ದು ಏನು ಬೇಕಾದರೂ ಹೇಳಿ. ಮಾಡಿಸ್ತೇನೆ.")

ಮೆನ್ನ ಬಂದಿರಲಿಲ್ಲ. ಆದರೆ ಇರುಳಲ್ಲಿ ಒಮ್ಮೆ ಔಟನನ್ನು ಕಂಡು, "ಕೆಫ್ಟು ವಿಷಯ ನೆನಪಿದೆ. ಕಟ್ಟೆಯ ಮೇಲೆ ಲಕ್ಷ್ಯವಿಟ್ಟಿದ್ದೇನೆ. ನಾವೆ ಬಂದ ತಕ್ಷಣ ಅವನನ್ನು ಕಾಣ್ತೇನೆ," ಎಂದಿದ್ದ.

....ಬಟಾ ಹೋದ ಮೂರನೆಯ ದಿನ.

ಮೆನೆಪ್‌ಟಾ ಅಂದುಕೊಂಡ: "ಬಟಾ ಅರ್ಧಕ್ಕೂ ಹೆಚ್ಚಿನ ದೂರ ಕ್ರಮಿಸಿರಬೇಕು. ಇನ್ನು ಎರಡು ಮೂರು ದಿನಗಳಲ್ಲೇ ಬಂಧುಗಳ ಮಧ್ಯದಲ್ಲಿ ರ್‍ತಾನೆ."

ಮಧ್ಯಾಹ್ನ ತಟ್ಟೆಯ ಮುಂದೆ ಕುಳಿತಾಗ ಅವನಿಗೆ ವಿಸ್ಮಯ: "ರುಚಿಕರವಾದ ಇದೊಂದೂ ನನಗೆ ಸೇರುತ್ತಿಲ್ಲವಲ್ಲ. ನೆಫಿಸ ತಟ್ಟಿದ ರೊಟ್ಟಿ, ಈರುಳ್ಳಿ ಬೇಕು ಅಂತ ಆಸೆಯಾಗ್ತಿದೆಯಲ್ಲ...."

ಬೇಸರ ಮತ್ತಷ್ಟು ಹೆಚ್ಚಿ. ಆತ ಪವಡಿಸಿದ.

ಎಚ್ಚರವಾದಾಗ, ರಾ ಪಶ್ಚಿಮದತ್ತ ಹೊರಳಿ ಎಷ್ಟೋ ಹೊತ್ತಾಗಿತ್ತು. ರಾ ಬಿಂಬ ಥಳಥಳಿಸುತ್ತಿದ್ದರೂ ಪ್ರಖರತೆ ಕಡಿಮೆಯಾಗಿತ್ತು. ಕಿಟಕಿಯಿಂದ ತನ್ನ ದೃಷ್ಟಿಯನ್ನು ಬಾಗಿಲಿನತ್ತ ಮೆನೆಪ್‌ಟಾ ಹರಿಸಿದ. ಅಲ್ಲಿ ಔಟ ಕುಳಿತಿದ್ದ.

"ಏನು ಔಟ?"

ನಾಯಕ ಎಚ್ಚರಿರುವುದನ್ನೆ ಇದಿರುನೋಡುತ್ತಲಿದ್ದ ಔಟನಿಗೆ ಸಂತಸ.

ಆತನೆಂದ:

"ಸ್ವಲ್ಪ ಹೊತ್ತಿಗೆ ಮುಂಚೆ ಮಹಾ ಅರ್ಚಕರು ಮತ್ತು ಹೆಪ್ಟೆಟ್ ಬಂದರಂತೆ."

ಮುಗುಳುನಗೆ ಮೆನೆಪ್‌ಟಾನ ಮುಖದಗಲಕ್ಕೂ ಹರಡಿತು.

ಅವನು ನೀಳವಾಗಿ ಉಸಿರುಬಿಟ್ಟು. ಕೈಕಾಲುಗಳನ್ನು ಹಗುರಗೊಳಿಸಿ ಎದ್ದು ಕುಳಿತ. ಹರ್ಷದ ಭಾವನೆ. ಗಟ್ಟಿಯಾಗಿ ಧ್ವನಿಗಳನ್ನು ಹೊರಡಿಸ ಬೇಕೆನಿಸಿತು. 'ಬಟಾ ಇದ್ದಿದ್ದರೆ ಭಾವಣಿ ಎತ್ತರಕ್ಕೆ ನೆಗೆಯುತ್ತಿದ್ದ' ಎಂದು ಕೊಂಡ.

ಮೇಲೆದ್ದು ಅಮನ್ ದೇವತೆಯನ್ನು ಇರಿಸಿದ್ದ ಗೋಡೆಗೂಡಿನೆದುರು ಬಹಳ ಹೊತ್ತು ಮೂಕನಾಗಿ ಅವನು ನಿಂತ.

* * * *

ಮೆಂಫಿಸಿನ ದೋಣಿಕಟ್ಟೆಯಲ್ಲಿ ಮಹಾ ಅರ್ಚಕನನ್ನು ಮತ್ತೆ ಮಾತ ನಾಡಿಸುವುದು ಅಗತ್ಯವೆಂದು ಹೆಪ್ಪೆಟ್‌ಗೆ ತೋರಲಿಲ್ಲ. ರಾಜಧಾನಿ ಸಮೀಪಿಸು ತ್ತಿದ್ದಂತೆ ಆತ ದೋಣಿಕಾರನಿಗೆಂದ :

" ಅವರು ಮೊದಲು ಇಳಿದು ಹೋಗಲಿ, ನಮ್ಮದು ಸ್ವಲ್ಪ ನಿಧಾನ ವಾಗಲಿ."

ದೋಣಿಕಟ್ಟೆಯಲ್ಲಿ ಸಂಭಾಷಣೆ ಮಹಾ ಅರ್ಚಕನಿಗೂ ಬೇಕಾಗಿರಲಿಲ್ಲ. ಅವನೆಂದ :

" ಹೆಪ್ಪೆಟ್‌ನ ನಾವೆ ಹತ್ತಿರ ಬಂತಾ ?"

ಹಿಂದಕ್ಕೆ ಹೊರಳಿ ನೋಡಿ ದೋಣಿಕಾರನೆಂದ :

" ಅವರು ಹುಟ್ಟು ಹಾಕೋದು ನಿಲ್ಲಿಸಿದ್ದಾರೆ. ಬರೇ ಹಾಯಿ ವೇಗ."

" ಒಳ್ಳೇದಾಯ್ತು. ನಾವು ಸ್ವಲ್ಪ ಮುಂಚೆ ಕಟ್ಟೆ ಸೇರೋಣ."

" ಆಗಲಿ."

ದೋಣಿಕಾರನ ಕೈಸನ್ನೆ ಕಂಡೊಡನೆಯೇ ಅಂಬಿಗರು ಹುಟ್ಟು ಹಾಕುವು ದನ್ನು ತೀವ್ರಗೊಳಿಸಿದರು.

ಹಿಂದಿನ ಅಪರಾಹ್ನವೇ ಅಮಾತ್ಯನ ನಿರ್ದೇಶದಂತೆ ಅರಮನೆಯಿಂದ ಎರಡು ಪಲ್ಲಕಿಗಳು ದೋಣಿಕಟ್ಟೆಗೆ ಬಂದಿದ್ದುವು. ಹೆಪ್ಪೆಟ್‌ನ ರಾಯಭಾರಕ್ಕೆ ಸಂಬಂಧಿಸಿ ತುಸು ಅನಿಶ್ಚಯತೆ ಇದ್ದೇ ಇತ್ತು. ಆದರೂ ಪಲ್ಲಕಿಗಳು ಕಟ್ಟೆ ಯಲ್ಲಿಯೇ ಇರುವುದು ಮೇಲು ಎಂದು ಅಮಾತ್ಯನಿಗೆ ಕಂಡಿತ್ತು. ಬೋಯಿ ಗಳಿಗೆ ಇರುಳಲ್ಲಿ ಗೂಡಾರದ ಆಶ್ರಯ. ಹಗಲು ಅಲ್ಲಿ ಇಲ್ಲಿ ನೆರಳಲ್ಲಿ ನಿದ್ದೆ. ಸರದಿಯಲ್ಲಿ ಅರಮನೆಯ ಆವರಣಕ್ಕೆ ಹೋಗಿ, ಊಟ.

ಅಧಿಕಾರ ದಂಡವನ್ನೂರಿ ಹಾಯಿ ಕಂಬದ ಮುಂದುಗಡೆ ಒಂದು ಪೀಠದ ಮೇಲೆ ನೆಟ್ಟಗೆ ನಿಂತಿದ್ದ ಮಹಾ ಅರ್ಚಕನ ದೋಣಿ ಕಣ್ಣಿಗೆ ಬಿದ್ದೊಡನೆ, " ಬಂತು !" ಎಂದು ಹಿಬ್ಬ ಕೂಗಿ ನುಡಿದ. ಕಟ್ಟೆಯ ಮೇಲೆ ಅಲ್ಲಲ್ಲಿ ಇದ್ದ

ಅಂಬಿಗರೊಡನೆಯೂ ವರ್ತಕರ ಆಳುಗಳೊಡನೆಯೂ ಹರಟುತ್ತಲಿದ್ದ ಬೋಯಿಗಳು ಆಕಳಿಸಿ ಮೈ ಮುರಿದು, ಸೇವೆಗೆ ಸನ್ನದ್ಧರಾದರು.

ಕಟ್ಟೆಯ ಅಧಿಕಾರಿ ಸ್ವಾಗತಕ್ಕೆ ಬಂದ. ಮಹಾ ಅರ್ಚಕನಿಗೆ ಅಲ್ಲಿದ್ದ ಎಲ್ಲರೂ ಮಂಡಿಯೂರಿ ಪ್ರಣಾಮ ಮಾಡಿದರು.

ತಾನು ಬರುವ ಬಗೆಗೆ ಮಹಾಮಂದಿರಕ್ಕೆ ಸುದ್ದಿ ಕಳುಹಿಸುವುದು ಹೇಪಾಟ್‌ಗೆ ಸಾಧ್ಯವಾಗಿರಲಿಲ್ಲ. ಸಂದೇಶವಾಹಕನಾಗಿ ಹೊರಟಿದ್ದ ಕಿರಿಯ ದೇವಸೇವಕನೊಬ್ಬ ನಡುವಿರುಳಿನವರೆಗೂ ಕಟ್ಟೆಯಲ್ಲಿ ಕಾದಿದ್ದು, ದೋಣಿ ಸಿಗದೆ, ಅಲ್ಲಿಯೇ ನಿದ್ದೆಹೋಗಿ ಬೆಳಗಾಗುವ ಹೊತ್ತಿಗೆ ರಾ ಮಂದಿರಕ್ಕೆ ಹಿಂತಿರುಗಿದ್ದ. " ಈಗ ಹೋಗಲೆ ? " ಎಂದು ಕೇಳಿ, ಹೇಪಾಟ್‌ನ ಕೋಪಕ್ಕೆ ತುತ್ತಾಗಿದ್ದ.

ಸುದ್ದಿ ತಲಪಿದ್ದರೆ ಮಹಾ ಅರ್ಚಕನದೇ ಪಲ್ಲಕಿ ಕಟ್ಟೆಯಲ್ಲಿ ಕಾದಿರುತ್ತಿತ್ತು. ಈಗ ? ನಾವೆಯಲ್ಲಿಯೇ ಕುಳಿತಿದ್ದು ಮಹಾಮಂದಿರಕ್ಕೆ ಹೇಳಿ ಕಳುಹಿಸಬೇಕು—

ಆದರೆ, ಕಟ್ಟೆಯಲ್ಲಿದ್ದ ಅರಮನೆಯ ಎರಡು ಪಲ್ಲಕಿಗಳನ್ನು ಕಂಡು ಅವನ ಹುಬ್ಬುಗಳು ಗಂಟಿಕ್ಕಿದುವು. 'ರಾಯಭಾರ ಯಶಸ್ವಿಯಾಯಿತು ; ನಾಳೆ ಬೆಳಿಗ್ಗೆ ಹೊರಡುತ್ತೇವೆ' ಎಂದು ಹೆಷ್ವೆಟ್ ಸುದ್ದಿ ಕಳುಹಿಸಿರಬಹುದು—ಎಂಬ ಶಂಕೆ ಮೂಡಿತು.

ಸಂಧಾನದ ಸನ್ನಿವೇಶ ; ಅರಮನೆಯ ಪಲ್ಲಕಿಯಲ್ಲೇ ಹೋದರಾಯಿತು ಎಂದುಕೊಂಡ.

ಅಧಿಕಾರಿಯೆಂದ :

" ಅಮಾತ್ಯರು ಪಲ್ಲಕಿ ಕಳಿಸಿದ್ದಾರೆ."

ಹೇಪಾಟ್ ಏನನ್ನೂ ಹೇಳದೆ, ಶೀತಲ ದೃಷ್ಟಿಯಿಂದ ಎಲ್ಲರನ್ನೂ ನೋಡುತ್ತ ಕಟ್ಟೆಗೆ ಇಳಿದ. ತನಗೆ ಸಮೀಪವಾಗಿ ಇದ್ದ ಪೀಠ ಪಲ್ಲಕಿಯತ್ತ ಸಾಗಿ, ಅದನ್ನೇರಿದ.

ಆಪ್ತಸಹಾಯಕ ದೇವಸೇವಕ ವಿನಮ್ರನಾಗಿ ಕೇಳಿದ :

" ಮಹಾಮಂದಿರಕ್ಕೊ ? ಅರಮನೆಗೊ ?"

ಹೇಪಾಟ್ ಗುಡುಗಿದ :

" ಮೂರ್ಖ ಶಿಖಾಮಣಿ ನೀನು ! ಮಹಾಮಂದಿರಕ್ಕೆ ಅಂತ ಹೇಳು !"

ಮಹಾ ಅರ್ಚಕನ ಸಿಟ್ಟಾಗಲೀ ಬೈಗಳಾಗಲೀ ಆ ದೇವಸೇವಕನಿಗೆ ಹೊಸದಲ್ಲ. ಅವನು ತುಸು ಹೆದರಿದವನಂತೆ ನಟಿಸಿ, ನಡುಗುವ ಸ್ವರದಲ್ಲಿ, "ಮಹಾಮಂದಿರಕ್ಕೆ" ಎಂದು ಬೋಯಿಗಳಿಗೆ ನಿರ್ದೇಶವಿತ್ತ.

ಭಟನೊಬ್ಬ "ದಾರಿ ! ದಾರಿ !" ಎನ್ನುತ್ತ ಪಲ್ಲಕಿಯ ಮುಂದುಗಡೆಯಿಂದ ಸಾಗಿದ.

* * * *

ಮುಂದೆ ಸ್ವಲ್ಪ ಹೊತ್ತಿನಲ್ಲೇ ಹೆಪ್ಪೆಟ್‌ನ ದೋಣಿ ಕಟ್ಟೆ ಮುಟ್ಟಿತು. ಕೆಳಕ್ಕಿಳಿದು ಆತ ವಂದನೆಗಳನ್ನೆಲ್ಲ ಮುಗುಳುನಗೆ ಬೀರುತ್ತ ಸ್ವೀಕರಿಸಿದ.

ಹೆಪ್ಪೆಟನ ಪ್ರಸನ್ನ ಮುಖಮುದ್ರೆಯಿಂದ ಉತ್ತೇಜಿತವಾಗಿ ಕಟ್ಟೆಯ ಅಧಿಕಾರಿ, ತಗ್ಗಿದ ಧ್ವನಿಯಲ್ಲಿ "ಹೋದ ಕೆಲಸ ಆಯ್ತೂಂತ ತೋರ್‍ತದೆ," ಎಂದ.

ಅವನನ್ನು ದುರುಗುಟ್ಟಿ ನೋಡಿ ಹೆಪ್ಪೆಟ್ ಉತ್ತರವಿತ್ತ :

" ಸುಂಕದವನು ಸುಖ ದುಃಖ ಕೇಳಬಾರದು ಮಗೂ. ಬಂದ ದೋಣಿ, ಹೋದ ದೋಣಿ, ಜಮೆಯಾದ ಹಣ ಎಷ್ಟು ಅಂತ ಲೆಕ್ಕ ಇಟ್ಟರೆ ಸಾಕು."

ಅಧಿಕಾರಿ ಮನಸ್ಸಿನಲ್ಲೆ 'ಸಿಡುಕಗೂಬೆ' ಎಂದು ಹೆಪ್ಪೆಟನನ್ನು ಜರೆದು, ಅಂಗೈಗಳನ್ನು ಪರಸ್ಪರ ತೀಡಿ ದೇಶಾವರಿ ನಗೆ ಬೀರಿದ.

ಸ್ವರವನ್ನು ಮೆದುಗೊಳಿಸಿ ಹೆಪ್ಪೆಟ್ ಕೇಳಿದ :

" ಅಮಾತ್ಯರು ಎರಡು ಪಲ್ಲಕಿ ಕಳಿಸಿದ್ರಾ ?"

" ಹೂಂ,"

" ನಾನು ಮನೆಗೆ ಹೋಗಿ ಹಾಯಾಗಿ ಒಂದಿಷ್ಟು ನಿದ್ದೆ ಮಾಡ್ತೇನೆ."

" ಹೂಂ."

ಒಂದೇ ದಿನದಲ್ಲಿ ನಾಲ್ಕು ಬೆರಳು ಎತ್ತರ ಬೆಳೆದವನಂತೆ ನಡೆಯುತ್ತ ಆತ ಪಲ್ಲಕಿಯ ಬಳಿ ಸಾರಿ ಅದನ್ನೇರಿದ....

....ಹಾಯಾಗಿ ನಿದ್ದೆ ಹೋಗುವುದು ಮಾತ್ರ ಆಗಲಿಲ್ಲ. ಹೆಪ್ಪೆಟ್ ಮನೆತಲಪಿದ ಸ್ವಲ್ಪ ಹೊತ್ತಿನಲ್ಲೇ ಅಮಾತ್ಯ ಆಮೆರಬ್ ಅವನನ್ನು ಕಾಣಲು ಬಂದ. ಆನ್ ನಗರಿಯಲ್ಲಿ ಹೇಪಾಟ್‌ನೊಂದಿಗೆ ಏನೇನು ಮಾತುಕತೆ ಆಯಿ

ತೆಂದು ತಿಳಿಯುವ ತವಕ ಅವನಿಗೆ. ಬಂದವನು ಹೆಖ್ವೆಟ್‌ನ ಮನೆಯಲ್ಲೇ ಊಟಕ್ಕೆ ನಿಂತ.

ಹೇಪಾಟ್–ಹೆಖ್ವೆಟ್‌ರ ನಡುವೆ ನಡೆದ ಮಾತುಕತೆ ಪರಿಣಾಮಕಾರಿ ಯಾಗಿತ್ತು. ಆದರೆ ದೀರ್ಘವಾಗಿರಲಿಲ್ಲ. ತಾನು ಆಡಿದ್ದ ಬಣ್ಣದ ಮಾತು ಗಳಿಗೆ ಮತ್ತಷ್ಟು ಮೆರುಗು ಕೊಟ್ಟು ಹೆಖ್ವೆಟ್ ವರದಿ ನೀಡಿದ. ಸೈನ್ಯ ಗಡಿಗೆ ಮಹಾ ಅರ್ಚಕ ನೀಡಿದ್ದ ರಹಸ್ಯ ಭೇಟಿಯ ವಿಷಯವನ್ನು ತಿಳಿಸಿದ.

"ನನಗೆ ಒಪ್ಪಿಸಿದ್ದು ಮಹಾ ಅರ್ಚಕನನ್ನು ಕರಕೊಂಡು ಬರೋ ಕೆಲಸ; ಅದನ್ನಂತೂ ನಿರ್ವಹಿಸಿದ್ದೇನೆ" ಎಂದ, ಕೊನೆಯಲ್ಲಿ.

ಆಮೆರಬ್ ತಾನು ಹಾಕಿದ್ದ ಉಡುಗೆಳನ್ನು ಜಗ್ಗತೊಡಗಿದ.

"ಮಹಾ ಅರ್ಚಕನನ್ನು ಅರಮನೆಗೆ ಯಾವಾಗ ಕರೆಯೋಣ?"

"ನಾಳೆ ಬೆಳಿಗ್ಗೆಯೇ ಕರೆಸು. ಯಾರು ಬೇಡ ಅಂದೋರು?"

"ನೀನು ಮಹಾಮಂದಿರಕ್ಕೆ ಹೋಗಿ—"

"ಅದು ಬೇರೆ ಇನ್ನು. ಸರಿ, ಸರಿ...."

"ಹೆಖ್ವೆಟ್, ಇದು ನಿನ್ನಿಂದಲೇ ಆಗಬೇಕಾದ್ದು. ಬಲು ಸೂಕ್ಷ್ಮ ಪರಿಸ್ಥಿತಿ ಆವನೇನಾದರೂ ಹಟಕೊಟ್ಟು ಇವತ್ತು ನಾಳೆ ಅಂದರೆ ಅವಮಾನ ವಾಗ್ತದೆ. ಇಡೀ ರಾಜಧಾನಿಯೇ ಕುತೂಹಲದಿಂದ ನಮ್ಮ ಕಡೆ ನೋಡ್ತಿದೆ."

"ಈಗ ನೀನು ಇಲ್ಲಿಂದ ಮಹಾಮನೆಗೆ ಹೋಗ್ತೀಯೇನೊ?"

"ಹೌದು. ನಾನು ನಿನ್ನಲ್ಲಿಗೆ ಬಂದಿರೋದು ಪೆರೋಗೆ ತಿಳಿದಿದೆ. ಕಾಯ್ತಾ ಇರ್ತಾರೆ. ನಾಳೆ ಬೆಳಿಗ್ಗೆ ಹೇಪಾಟ್ ಜತೆ ಮಾತುಕತೆಗೆ ಏರ್ಪಾಟು ಮಾಡ್ಬೇಕು."

"ಹೊರಡು ಹಾಗಾದರೆ."

"ಹೂಂ. ನೀನು ವಿಶ್ರಾಂತಿ ತಗೋ."

"ಮುದುಕ ಹೆಖ್ವೆಟ್‌ಗೆ ವಿಶ್ರಾಂತಿಯ ಆಗತ್ಯ ಇದೆ ಅಂತ ಈಗಲಾದರೂ ನಿನಗೆ ಹೊಳೀತಲ್ಲ!"

"ನಾಳೆ ಆದಷ್ಟು ಬೇಗ ಹೋಗು. ಪೂಜೆ ಗೀಜೆ ಅಂತ ಕೈಕೊಟ್ಟಾನು. ಅರಮನೆಯ ಪಲ್ಲಕಿಯಲ್ಲೇ ಹೋಗು. ಬೋಯಿಗಳ ಜತೆ ಭಟರೂ ದಳ ಪತಿಯೂ ಇರಲಿ. ಅವರೆಲ್ಲ ನಸುಕಿನಲ್ಲೇ ಇಲ್ಲಿಗೆ ಬಂದು ನಿನಗಾಗಿ ಕಾಯ್ತಾರೆ."

"ನನ್ನ ನಿದ್ರೆಯ ಮೇಲೆ ನಿನಗೆ ಕಣ್ಣು!"

ಆಮೆರಬ್ ಎದ್ದ. ಹೆಖ್ವೆಟನ ತೋಳನ್ನು ಆತ್ಮೀಯತೆಯಿಂದ ಮುಟ್ಟಿದ. ಸ್ವರ ತಗ್ಗಿಸಿ ಕೇಳಿದ :

"ಹೇಪಾಟ್ ಏನಾದರೂ ಶರತ ಹಾಕಬಹುದು ಅಂತೀಯಾ ?"

ಹೆಖ್ವೆಟ್ ಎದ್ದು, ಹುಬ್ಬು ಹಾರಿಸಿ, ತಲೆಯನ್ನು ಹಿಂದಕ್ಕೂ ಮುಂದಕ್ಕೂ ಅಡಿಸುತ್ತ ಆಮೆರಬ್ ಜತೆ ಬಾಗಿಲಿನತ್ತ ನಡೆಯುತ್ತ ಅಂದ :

"ದೇಶದ ಅಮಾತ್ಯ ನೀನು. ರಾಜಕೀಯ ಊಹೆ–ತರ್ಕ ನೀನೇ ಮಾಡ್ಬೇಕು."

"ನನ್ನ ಮೇಲೆ ಇನ್ನೂ ಸಿಟ್ಟೆ?"

"ಸಿಟ್ಟೂ ಇಲ್ಲ, ಏನೂ ಇಲ್ಲ. ಇಲ್ಲದ್ದು ಹರಟ್ಬೇಡ. ಹೇಪಾಟ್ ಸುಲಭವಾಗಿ ಮಣಿಯೋದಿಲ್ಲ—ನೆನಪಿಟ್ಕೊ."

"ನಾಳೆ ಪೆರೋ ಭೇಟಿಗೆ ಹೇಪಾಟ್‌ನನ್ನು ಕರಕೊಂಡ್ಬಂದ್ಮೇಲೆ ನೀನು ಅಲ್ಲೇ ಇರ್ಬೇಕು...."

"ಸರಿಯಪ್ಪ. ಈ ವಿನಮ್ರ ಸೇವಕ ಆಗೋದಿಲ್ಲ ಅನ್ನ್ತಾನಾ ?"

ಅಮಾತ್ಯ ದೀರ್ಘವಾಗಿ ಉಸಿರೆಳೆದುಕೊಂಡ.

* * * *

ಮಹಾ ಅರ್ಚಕ ರಾಜಧಾನಿಗೆ ಮರಳಿದ ಸುದ್ದಿ ತಿಳಿದಾಗ ಪೆರೋ ಪೇಪಿ ಅಂತಃಪುರದಲ್ಲಿ ತನ್ನ ಅಚ್ಚುಮೆಚ್ಚಿನ ದಾಸಿಯೊಂದಿಗೆ ಚಾಕಮಣೆ ಆಟ ಆಡುತ್ತ ಕುಳಿತಿದ್ದ. ಆತ ಆಟ ನಿಲ್ಲಿಸಿ ಮೈ ಕೈ ಮುರಿದು, ಮುಖವರಳಿಸಿ, ದಾಸಿಯನ್ನು ಬರಸೆಳೆದು ತಬ್ಬಿಕೊಂಡ.

ಸ್ವಲ್ಪ ಹೊತ್ತಿನಲ್ಲಿ ಅಮಾತ್ಯನ ದೂತ ಬಂದ : "ಹೆಖ್ವೆಟರನ್ನು ಭೇಟಿಯಾಗಿ ವಿಷಯ ತಿಳಿದು ರಾತ್ರೆ ಸನ್ನಿಧಿಗೆ ಬರ್ತೇನೆ–ಅಂದ್ರು," ಎಂದ.

ಮತ್ತೂ ಸ್ವಲ್ಪ ಹೊತ್ತಾದಾಗ ಒಬ್ಬಳು ಪರಿಚಾರಿಕೆ ಬಂದು ನುಡಿದಳು:

"ಮಹಾರಾಣಿಯವರು ಇಲ್ಲೇ ಹೊರಗೆ ಹೋಗಿ ಬರ್ತಾರಂತೆ."

ಪೆರೋ ತನ್ನ ಪ್ರೀತಿಯ ದಾಸಿಯ ಕಡೆ ನೋಡಿದ. ನೋಟದಿಂದಲೇ ಇಂಗಿತವನ್ನು ಅರಿಯುವ ಆ ಜಾಣೆ ಪರಿಚಾರಿಕೆಗೆ ಆದೇಶವಿತ್ತಳು :

"ಬಾಗಿಲೆಳೆದುಕೋ. ದೂತರು ಯಾರಾದರೂ ಬಂದರೆ, ಮಹಾಪ್ರಭು ಹೊರಗೆ ಕಾಣಿಸಿಕೊಳ್ಳುವ ತನಕ ಕಾದಿರಲಿ."

ಪೆರೋನತ್ತ ತಿರುಗಿ ಆಕೆ ಕೇಳಿದಳು :

"ಆಟ ? "

"ನನ್ನನ್ನು ನೀನು ಸೋಲಿಸಲಾರೆ."

"ಯಾವತ್ತಾದರೂ ನಾನು ಗೆದ್ದಿದ್ದೇನಾ ? "

ಅರಸ ನಕ್ಕು ಚೌಕಮಣೆಯ ಕಾಯಿಗಳನ್ನು ಅಂಗೈಯಿಂದ ಬದಿಗೆ ಸರಿಸಿ, ಎದ್ದು, ಪಲ್ಲಂಗದತ್ತ ನಡೆದ. ದಾಸಿ ಮದಿರೆ ತರಲು ಧಾವಿಸಿದಳು.

* * * *

ಅಂತಃಪುರಕ್ಕೆ ಬಂದ ಪೆರೋ ತನ್ನ ಪ್ರೀತಿಪಾತ್ರ ದಾಸಿಯ ಬಳಿಗೆ ಹೋದುದು ತಿಳಿದೊಡನೆ, ಮಹಾರಾಣಿ ನೆಫರ್‌ಟೇಮ್ ಅರಮನೆಯ ಮಂದಿರದ ಅರ್ಚಕ ಇನೇನಿಯನ್ನು ಕರೆಸಿದಳು. ಇಂಥ ಕರೆ ಇನೇನಿಗೆ ಹೊಸದಲ್ಲ. ಏನಾದರೂ ಸಮಾಲೋಚನೆಗಾಗಿ, ತಿಂಗಳಿಗೆ ಒಮ್ಮೆಯಾದರೂ ಅರಸಿ ಅವನನ್ನು ಬರಮಾಡಿಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಆತ ತಾನಾಗಿಯೇ ರಾಣಿಯ ಭೇಟಿಗೆ ಹೋಗುವುದೂ ಇತ್ತು.

ಆಕೆ ಅಂದಳು :

"ಅಯ್ಯನವರು ಚೆನ್ನಾಗಿದ್ದೀರಾ ? ನಿಮ್ಮನ್ನು ನೋಡಿ ಬಹಳ ದಿವಸ ಆಯ್ತು."

ಇನೇನಿ ನೆಲಕ್ಕೆ ಹಾಸಿದ್ದ ರತ್ನಗಂಬಳಿಯ ಮೇಲೆ ಕುಳಿತುಕೊಂಡು, ನಗುನಗುತ್ತ ಉತ್ತರವಿತ್ತ :

"ಮಹತ್ವದ ಘಟನೆಗಳು ಅರಮನೆಯಲ್ಲಿ ನಡೀತಿರುವಾಗ ಭೇಟಿಗೆ ಬಂದು ಸನ್ನಿಧಿಗೆ ತೊಂದರೆ ಕೊಡಬಾರದು ಅಂದ್ಕೊಂಡೆ."

"ನಿಮ್ಮ ಹುಚ್ಚಪ್ಪ ಹೇಗಿದ್ದಾನೆ ?"

"ಮುಂಚಿನಷ್ಟು ಉಗ್ರವಾಗಿಲ್ಲ, ಮಹಾರಾಣಿ."

"ಆ ನೀರಾನೆ ಪ್ರಾಂತದ ನಾಯಕನ ಜತೆ ಯಾರಾದರೂ ಇದ್ದಾರಾ ?"

"ಯಾರೂ ಇಲ್ಲ. ಅಂದರೆ ಅಂಗರಕ್ಷಕರಿದ್ದಾರೆ, ಅಷ್ಟೆ."

"ಹೊತ್ತು ಹೋಗೋದು ಕಷ್ಟವಾಗ್ತಿರ್ಬೇಕು."

"ಬಂಧನದಲ್ಲಿರೋ ವನ್ಯಮೃಗದ ಹಾಗೆ ಅತ್ತ ಇತ್ತ ನಡೀತಾ ಇರ್ತಾನೆ."

(ಸೊಗಸಾಗಿ ಬಣ್ಣಿಸಿದೆನೆಂದು ಇನೇನಿಗೆ ಹಿಗ್ಗು.)

ಮಹಾರಾಣಿ ಕುಳಿತಿದ್ದ ಆಸನದ ಬಲಮಗ್ಗುಲಲ್ಲಿ ಮುಗ್ಗಾಲುಪೀಠದ ಮೇಲೆ ಬಂಗಾರದಲ್ಲಿ ಎರಕ ಹುಯ್ದಿದ್ದ ಸಿಂಹವಿತ್ತು. ಆಕೆ ಅದರ ಮೈ ದಡವಿದಳು.

"ಸೆಡ್ ಉತ್ಸವಕ್ಕೇಂತ ಬಂದವನಿಗೆ ಈ ಗತಿಯಾಯ್ತು. ನಿಮ್ಮದೇನು ಅಂಬೋಣ ?" ಇವತ್ತೋ ನಾಳೆಯೋ ಮಹಾ ಅರ್ಚಕರು ಬಂದ್ಬಿಡ್ತಾರೆ, ಅಲ್ಲವಾ ?"

"ಅವರು ಬೇಗನೆ ಬರಲಿ ಅಂತ ದೇವರಿಗೆ ನಿತ್ಯಪ್ರಾರ್ಥನೆ ಸಲ್ಲಿಸ್ತಾ ಇದ್ದೇನೆ."

ಆತ ಹಾಗೆ ಹೇಳುತ್ತಿದ್ದಂತೆಯೇ ಒಬ್ಬ ಪರಿಚಾರಿಕೆ ಅಲ್ಲಿಗೆ ಬಂದಳು. ಮಹಾರಾಣಿಗೆ ನಮಿಸಿ, "ಪೆರೋನ ಆಯುರಾರೋಗ್ಯ ವರ್ಧಿಸಲಿ. ಮಹಾ ಅರ್ಚಕರು ರಾಜಧಾನಿಗೆ ಇದೇ ತಾನೇ ವಾಪಸಾದರೂಂತ ಹಿರಿಯ ಲಿಪಿಕಾರಯ್ಯ ಹೇಳಿ ಕಳಿಸಿದ್ದಾರೆ," ಎಂದಳು.

ಇನೇನಿಗೆ ಆಶ್ಚರ್ಯ. 'ಅವರು ಬೇಗನೆ ಬರಲಿ ಅಂತ ದೇವರಿಗೆ ನಿತ್ಯ ಪ್ರಾರ್ಥನೆ ಸಲ್ಲಿಸ್ತಾ ಇದ್ದೇನೆ' ಎಂದು ತಾನು ಸುಳ್ಳು ಹೇಳಿದಾಗಲೇ ಮಹಾ ಅರ್ಚಕರ ಆಗಮನದ ಸುದ್ದಿ ಬರಬೇಕೆ ?

ಮಹಾರಾಣಿಗೆ ಹರ್ಷ.

"ನಿಮ್ಮ ಪ್ರಾರ್ಥನೆಯನ್ನು ದೇವರು ಈಡೇರಿಸಿಯೇ ಬಿಟ್ಟಿದ್ದಾನೆ ಅಯ್ಯ!" ಎಂದಳು, ಆಕೆ.

ಇನೇನಿ ನಕ್ಕು ಅಂದ :

"ಇನ್ನು, ಸೆಡ್ ಉತ್ಸವ ಬೇಗನೆ ನೆರವೇರುವಂತೆ ಮಾಡು—ಅಂತ ದೇವರನ್ನು ಕೇಳಿಕೋತೇನೆ !"

"ಅದಾದ ಮೇಲೆ ಇದಾಗದೆ ಇರ್‍ತದಾ ? ಆದರೂ ಅಯ್ಯ, ಮಹಾ ಅರ್ಚಕರು ಬಲು ಕೋಪಿಷ್ಠ ಅಲ್ಲವಾ ?"

"ಹ್ಞ ಮಹಾರಾಣಿ. ಅದು ನಿಜ."

"ಧರ್ಮರಕ್ಷೆ ಇಲ್ಲದೆ ಐಗುಪ್ತ ಉಳಿದೀತಾ, ಅಯ್ಯ ? ಧರ್ಮಗುರುವಿನ ಕೋಪ ಶಮನಕ್ಕೆ ಏನು ಬಲಿ ಬೇಕಾಗ್ತದೊ ?"

"ಮಹಾರಾಣಿ ನಿಮಗೆ ಗೊತ್ತೇ ಇದೆ. ನಾನು ಮಹಾ ಅರ್ಚಕರಿಗೆ ಹತ್ತಿರದವನಾದರೂ ಅವರ ಮನಸ್ಸಿನಲ್ಲಿ ಏನಿದೆ ಅಂತ ತಿಳಿಯೋದು ನನಗೆ ಪೂರ್ತಿ ಶಕ್ಯವಾಗಿಲ್ಲ."

"ಆಶ್ಚರ್ಯ."

"ಊಹಿಸಿಕೊಂಡು ಇಷ್ಟು ಹೇಳಬಲ್ಲೆ : ದೇಶದ ಆಡಳಿತದಲ್ಲಿ ಬಿಗಿ ಇಲ್ಲ ಅಂತ ಮಹಾ ಅರ್ಚಕರಿಗೆ ಬೇಸರ."

"ಅದಕ್ಕೆ ಯಾರು ಕಾರಣ—ಮಹಾಪ್ರಭುಗಳೆ? ಅಮಾತ್ಯರೆ ? ಫಲ ಸಾಲದು ಅಂತ ಅಂಜೂರ ಮರವನ್ನೇ ಕಡಿಯೋದೆ ? ನಮಗೆಲ್ಲ ಇನ್ನು 'ಶಾಶ್ವತ ಮನೆ'ಯ ಯೋಚನೆ. ಹಿರಿಯರಾದ ಮೇಲೆ ಕಿರಿಯರು ಪರಂಪರೇನ ಮುಂದುವರಿಸೋದಿಲ್ಲವಾ ? ಏನೇ ಇರಲಿ, ಮಹಾ ಅರ್ಚಕರು ನನ್ನ ಮೇಲೆ ಮುನಿಸು ತೋರೋದು ಸರ್ವಥಾ ಸರಿಯಲ್ಲ. ಅಯ್ಯ, ನೀವು ಈ ವಿಷಯ ಮಹಾ ಅರ್ಚಕರಿಗೆ ತಿಳಿಸ್ಬೇಕು."

"ಆಗಲಿ, ಮಹಾರಾಣಿ."

"ಇವತ್ತೇ ಅವರನ್ನು ಭೇಟಿ ಮಾಡ್ತೀರಾ ?"

"ಹೌದು. ರಾತ್ರೆ ಮಹಾಮಂದಿರಕ್ಕೆ ಹೋಗ್ತೇನೆ."

ಅರಸಿಯ ಮನಸ್ಸು ಹಿಗ್ಗಿತು. ಆಕೆ ಒಳಹೋಗಿ ಸೆಣಬಿನ ಅತ್ಯುತ್ತಮ ವಸ್ತ್ರವನ್ನೂ ಒಂದು ಸ್ವರ್ಣಹಾರವನ್ನೂ ತಂದು ಇನೇನಿಗೆ ಉಡುಗೊರೆ ಇತ್ತಳು.

ಎಲ್ಲ ಹಲ್ಲುಗಳನ್ನೂ ತೋರ್ಪಡಿಸುತ್ತ ಅವನೆಂದ :

"ಮಹಾರಾಣಿ, ಬಡ ದೇವಸೇವಕನಿಗೆ ಯಾಕೆ ಈ ಬಂಗಾರದ ಸರ ?"

ನೆಫರ್‌ಟೀಮ್ ನಸುನಕ್ಕಳು.

"ಇರಲಿ, ಅಯ್ಯ. ಯಾವುದಕ್ಕಾದರೂ ಆಗ್ತದೆ."

"ಮಹಾರಾಣಿ ಕೈ ಎತ್ತಿಕೊಟ್ಟಾಗ ಹೇಗೆ ತಾನೆ ಬೇಡ ಅನ್ನಲಿ ?"

ಇನೇನಿ ಎದ್ದು, ಸ್ವರ್ಣಹಾರ ಹೊರಗೆ ಕಾಣಿಸದಂತೆ ವಸ್ತ್ರದಲ್ಲಿಟ್ಟು, ಮಡಚಿ, ತನ್ನ ನಿವಾಸಕ್ಕೆ ತೆರಳಿದ.

ನೆಫರ್‌ಟೀಮ್ ಗಲ್ಲಕ್ಕೆ ಅಂಗೈ ಆನಿಸಿ ಕುಳಿತು, ಕಿಟಕಿಯ ಆಚೆ ಬಿಸಿಲು

ಬಾಡುತ್ತಲಿದ್ದುದನ್ನು ಕಂಡಳು. ರಾಜಕುಮಾರನನ್ನು ನೋಡುವ ಬಯಕೆ ಯಾಯಿತು.

ಕೈ ತಟ್ಟಿ ಪರಿಚಾರಿಕೆಯನ್ನು ಕರೆದು, "ರಾಜಕುಮಾರನನ್ನು ಕರ ಕೊಂಡು ಬರಬೇಕೂಂತ ಬೆಂಟ್‌ರಷ್ಟ್‌ಗೆ ಹೇಳು," ಎಂದಳು.

ಮಹಾರಾಣಿಯ ದೃಷ್ಟಿ ಎಡಗಡೆ ಮರದ ಅಟ್ಟಣಿಗೆಯ ಮೇಲೆ ಹಾಸಿದ್ದ ಚಿರತೆಯ ಚರ್ಮದತ್ತ ಹರಿಯಿತು,

ತಕ್ಷಣವೇ ಅವಳಿಗೆ ಅನಿಸಿತು : ಮಹಾ ಅರ್ಚಕನನ್ನು ತಾನು ಕಾಣ ಬೇಕು. 'ಈ ದಿನವೇ. ಈಗಲೇ.' ರಾಜಕುಮಾರನನ್ನೂ ಕರೆದುಕೊಂಡು ?

ರಾಜಕುಮಾರನನ್ನು ಶೈಶವದಿಂದಲೂ ಲಾಲಿಸಿ ಪಾಲಿಸಿದ್ದ ವೃದ್ಧೆ ಪರಿ ಚಾರಿಕೆ ಬೆಂಟ್‌ರಷ್ಟ್ ಬಂದು ಅಂದಳು :

"ನದೀ ವಿಹಾರದಿಂದ ರಾಜಕುಮಾರ ಇನ್ನೂ ವಾಪಸಾಗಿಲ್ಲ, ಮಹಾ ರಾಣಿ."

"ಬಂದ ತಕ್ಷಣ ನನ್ನನ್ನು ಕಾಣೋದಕ್ಕೆ ಹೇಳು."

"ಹೂಂ. ಮಹಾರಾಣಿ."

ನೆಫರ್‌ಟೀಮ್ ತನ್ನ ತಲೆಗೂದಲ ಮೇಲೆ ಕೈ ಆಡಿಸಿದಳು. ಸೆಡ್ ಉತ್ಸವದ ತನಕ ಅದರ ಆಯುಸ್ಸು. ಮುಂದೆ ತನ್ನ ತಲೆಗೆ ಕೃತ್ರಿಮ ಕೇಶ ಕವಚ. ಹೊಸದಾಗಿ ಮಾಡಿಸಿದ ದೊಡ್ಡ ಕಿರೀಟ ಅದರ ಮೇಲೆ....

ಮಹಾರಾಣಿ ಕೈ ತಟ್ಟಿದಳು. ಮುಖ ತೋರಿಸಿದ ಪರಿಚಾರಿಕೆಯೊಡನೆ ಅವಳೆಂದಳು :

"ಹೊರಗೆ ಹೋಗ್ತಿದ್ದೇನೆ."

ನೆಫರ್‌ಟೀಮ್ ಸಿಂಗರಿಸಿಕೊಳ್ಳುವ ಕೊಠಡಿಗೆ ತೆರಳಿ, ಕಂಚಿನ ಸ್ವರೂಪ ದರ್ಶಕದಲ್ಲಿ ತನ್ನ ಪ್ರತಿಬಿಂಬವನ್ನು ದಿಟ್ಟಿಸುತ್ತಿದ್ದಂತೆ, ಅಲಂಕಾರದ ದಾಸಿ ಯರು ಓಡಿ ಬಂದರು. (ಹೊರಗೆ ಅಂಗರಕ್ಷಕರಿಗೂ ಬೋಯಿಗಳಿಗೂ ಸುದ್ದಿ ಮುಟ್ಟಿತು.)

ಸ್ವರೂಪದರ್ಶಕದೆದುರು ವಿಶಾಲ ಪೀಠದ ಮೇಲೆ ಏಳು ಬಗೆಯ ಮುಖ ಚೂರ್ಣಗಳೂ ಎರಡು ಬಗೆಯ ಕೆಂಪು ವರ್ಣಗಳೂ ಇದ್ದುವು. ಕೂದಲನ್ನು ಗುಂಗುರುಗೊಳಿಸುವ ತಾಮ್ರದ ಉಪಕರಣ. ಹುಬ್ಬು ತೀಡುವ ತೀಕ್ಷ್ಣ

ಸಾಧನ, ದಂತದ—ಹಾಲುಗಲ್ಲಿನ—ಕಂಚಿನ ಪಾತ್ರೆಗಳಲ್ಲಿ ವಿವಿಧ ಸುಗಂಧ ದ್ರವ್ಯಗಳು—ಅಲ್ಲಿದ್ದುವು. ಸ್ವರೂಪದರ್ಶಕದ ಇಕ್ಕೆಲೆಗಳಲ್ಲೂ ತಾವ್ರುದ ತೆರೆದ ಕಪಾಟಗಳಲ್ಲಿ ಝಗಝಗಿಸುತ್ತಿದ್ದುವು. ಕಿರೀಟಗಳು, ಕೊರಳಿನ, ತೋಳು ಮಣಿಕಟ್ಟುಗಳ ಎಣಿಕೆಗೆ ನಿಲುಕದ ಆಭರಣಗಳು

"ನಿಧಾನಿಸ್ಬೇಡಿ....ನಾನು ಹೋಗ್ತಿರೋದು ದೇವದರ್ಶನಕ್ಕೆ, ಔತಣ ಕ್ಕಲ್ಲ."

ದಾಸಿಯರು ಒರೆಸುವ–ಹಚ್ಚುವ, ಕಳಚುವ–ತೊಡಿಸುವ ತಮ್ಮ ಕೆಲಸ ವನ್ನು ತೀವ್ರಗೊಳಿಸಿದರು.

ಅನುಜ್ಞೆಗಳಿಗಾಗಿ ಕಾದಿದ್ದ ಸೇವಕಿಯರನ್ನು ಉದ್ದೇಶಿಸಿ ನೆಫರ್‌ಟೀಮ್ ಅಂದಳು :

"ಹೂವಿನ ತಟ್ಟೆಗಳನ್ನು ಸಿದ್ಧಗೊಳಿಸಿ."

ಮೇಲುದವನ್ನು ಬಲ ಸ್ತನದ ಕೆಳಗೆ ದಾಸಿ ಬಿಗಿಯುತ್ತಿದ್ದಂತೆ, ರಾಣಿ ಆದೇಶವಿತ್ತಳು :

"ಹೊರಗಿರೋ ಚಿರತೆ ಚರ್ಮವನ್ನು ಸುರುಳಿ ಸುತ್ತಿ."

ಇದು ಯಾಕೆ ಎಂಬುದನ್ನು ಒಬ್ಬಿಬ್ಬರು ಊಹಿಸಿದರು.

ನೆಫರ್‌ಟೀಮ್‌ಳ ಸರಳ ಅಲಂಕಾರ ಮುಗಿಯಿತು. ಕೊನೆಯದಾಗಿ ತನ್ನ ಪ್ರತಿಬಿಂಬವನ್ನು ಆಕೆ ನೋಡಿಕೊಂಡಳು. ತಲೆಯ ಹಿಂದೆ ದಾಸಿ ಹಿಡಿದ ಸ್ವರೂಪದರ್ಶಕದಲ್ಲಿ ಮೂಡಿಬಂದ ಹಿಂಭಾಗದ ಪ್ರತಿಫಲನವನ್ನೂ ಗಮ ನಿಸಿದಳು.

ನದೀತಟದ ಬಳಿಗೆ ಓಡಿಹೋಗಿ ಮರಳಿದ ಬೆಂಟ್‌ರಷ್ಟ್ ಅಂದಳು :

"ರಾಜಕುಮಾರ ನದಿಯ ಆಚೆ ದಡದಲ್ಲಿ ಇರೋ ಹಾಗೆ ಕಾಣ್ತಿದೆ, ಮಹಾರಾಣಿ. ಕರಕೊಂಡು ಬರಲು ಅಂಬಿಗರು ಹೋಗಿದ್ದಾರೆ."

ಕಾಯುವುದೆಂದರೆ ಕಾಲವ್ಯಯ.

ತನ್ನ ಮೆಚ್ಚುಗೆಯ ಪರಿಚಾರಿಕೆಯನ್ನು ಕರೆದು ರಾಣಿ ಅಂದಳು :

"ಹೊರಡೋಣ. ಚಿರತೆ ಚರ್ಮ ಮತ್ತು ಹೂವಿನ ತಟ್ಟೆಗಳ ಜತೆ ಇನ್ನೊಂದು ಪಲ್ಲಕ್ಕೀಲಿ ನೀನು ಬಾ."

* * * *

ಸೂರ್ಯಾಸ್ತವಾಗುತ್ತಿದ್ದಂತೆ ಮಹಾರಾಣಿಯ ಪರಿವಾರ ಮಹಾ ಮಂದಿರವನ್ನು ತಲಪಿತು. ರಕ್ಷಕಭಟರು, ಪಲ್ಲಕಿಗಳು, ಮತ್ತೆ ರಕ್ಷಕ ಭಟರು, ಅವರ ಹಿಂದೆ ಉರಿಸದ ಪಂಜುಗಳೊಡನೆ ಇಬ್ಬರು.

ಪವಿತ್ರ ಕೊಳದಲ್ಲಿ ಮಿಂದು, ಒದ್ದೆವಸ್ತ್ರದಲ್ಲೇ, ಅಸ್ತಮಿಸುತ್ತಿದ್ದ ರಾನಿಗೆ ವಂದಿಸಲೆಂದು ಕೊಳದ ಬಳಿಯ ದಿಬ್ಬವನ್ನು ಮಹಾ ಅರ್ಚಕ ಏರಿದ್ದ. ಮಹಾಮಂದಿರವನ್ನು ಸಮೀಪಿಸುವ ಏರುದಾರಿ ಅವನು ನಿಂತಲ್ಲಿಗೆ ಕಾಣಿಸುತ್ತಿತ್ತು. ಅಂಗರಕ್ಷಕರನ್ನೂ ಪಲ್ಲಕಿಗಳನ್ನೂ ಕಂಡಾಗ, ಸ್ವತಃ ಪೆರೋ ಬಂದನೆ ? ಎನಿಸಿತು. ಆದರೆ ಮರುಕ್ಷಣ ಪಲ್ಲಕಿ ಪೀಠದ ಮೇಲಿಂದ ಸ್ತ್ರೀ ಲಾವಣ್ಯ ಮೆರೆದಂತಾಯಿತು. ನಿಸ್ಸಂದೇಹವಾಗಿಯೂ ಮಹಾರಾಣಿಯೇ.

ಹೇಪಾಟ್ ಎರಡು ತೋಳುಗಳನ್ನೂ ಸೂರ್ಯನತ್ತ ಚಾಚಿ, "ರಾ, ರಾ, ರಾ," ಎಂದ. ಮೈ ಸಡಿಲಬಿಟ್ಟು ನಿಂತು, ಗಾಳಿ ಸೇವಿಸಿದ. ಸುವಾಸನೆಯೇನೂ ತಟ್ಟಲಿಲ್ಲ. ದೂರದಲ್ಲಿಯೇ ಇದ್ದಾಳೆ—ಎನಿಸಿತು.

ಓಲಾಡತೊಡಗಿದ್ದ ತನ್ನ ಮನಸ್ಸನ್ನು ಕಂಡು ಹೇಪಾಟ್ ಕ್ರುದ್ಧನಾದ. ತನ್ನ ಸಂದರ್ಶನಕ್ಕೆ ಆಕೆ ಬರುತ್ತಿರಬೇಕು. ಇವತ್ತೆ ಯಾಕೆ ? ಯಾರು ಹೂಡಿರುವ ಹಂಚಿಕೆ ಇದು ? ಸ್ವತಃ ಪೆರೋ ? ಅಮಾತ್ಯ ? ಗೂಬೆ ಹೆಪ್ಟೆಟ್ ? 'ಮಾಯಾವಿನಿ ! ನೀನು ಯಾವ ಬಲೆ ನೇಯಬಲ್ಲೆ ಅಂತ ನನಗೆ ತಿಳೀದೆ ?' ತಾನು ಏಕಾಂತ ಕೊಠಡಿಗೆ ಸೇರುವುದಲ್ಲವೆ ಮೇಲು ? ಪೂಜಾನಿರತರಾಗಿದ್ದಾರೆ ಎಂದರಾಯಿತು. ಸಪ್ಪೆಮೋರೆ ಹಾಕಿಕೊಂಡು ವಾಪಸು ಹೋಗಲಿ.

ಹೇಪಾಟನ ಹಾವುಗೆಗಳು ಟಕ್ ಟಿಕ್ ಸದ್ದು ಮಾಡಿದವು. ವಸತಿಯತ್ತ ನಡಿಗೆ.

ಮಹಾರಾಣಿಗೆ ಹೆದರಲೆ ತಾನು ? ಸ್ತ್ರೀ ಜಾತಿಯೊಡನೆ ಮಾತನಾಡಿ ಎಷ್ಟು ಕಾಲವಾಯಿತು?

ಮಹಾರಾಣಿಯನ್ನು ವರ್ಷಕ್ಕೆ ಒಂದೆರಡು ಬಾರಿ ಆಕೆ ದೇವದರ್ಶನಕ್ಕೆಂದು ಮಹಾಮಂದಿರಕ್ಕೆ ಬಂದಾಗಲೋ ಭರತ ಹಬ್ಬದ ವೇಳೆಯಲ್ಲೋ ಹತ್ತಿರದಿಂದ ನೋಡುತ್ತಿದ್ದ. ಒಂದು ಬಗೆಯ ಆಕರ್ಷಣೆಗೆ ಒಳಗಾಗುತ್ತಿದ್ದ. ತುಟಿಗಳೊ, ಸ್ತನಗಳೊ, ಮೈಕಟ್ಟೊ—ಆಕರ್ಷಣೆಯ ಕೇಂದ್ರ ಇಂಥದೇ ಎಂದು

ಹೇಳಲುಅವನು ಅಸಮರ್ಥ.

ವಸತಿಯನ್ನು ಪ್ರವೇಶಿಸಿದವನು ಏಕಾಂತ ಕೊಠಡಿಗೆ ಹೋಗದೆ ಪಡಸಾಲೆಯಲ್ಲಿ ಆಸೀನನಾದ. ದೀಪಗಳನ್ನು ಹಚ್ಚಿದ್ದರು. ಕಣ್ಣೆವೆಗಳನ್ನು ಅರೆಮುಚ್ಚಿಕೊಂಡು ಹೇಪಾಟ್ ಧ್ಯಾನಮಗ್ನನಂತೆ ನಟಿಸಿದ.

ಆಪ್ತಸಹಾಯಕ ಓಡಿಬಂದು "ಮಹಾರಾಣಿ ಇಲ್ಲಿಗೆ ಬರ್‍ತಿದ್ದಾರೆ," ಎಂದ. ಮಹಾ ಅರ್ಚಕನ ಗೋಣು ತುಸು ಆಡಿದಂತೆ ಅವನಿಗೆ ಕಂಡಿತು.

ನೆಫರ್‌ಟೇಮ್ ಬಂದೇಬಿಟ್ಟಳು. ಅವಳನ್ನು ಹಿಂಬಾಲಿಸಿ ಬಂದು ದೂರ ನಿಂತಳು ಚಿರತೆಯ ಚರ್ಮದ ಸುರುಳಿ ಹೊತ್ತಿದ್ದ ದಾಸಿ.

ಬಂಗಾರದ ಸರಿಗೆಗಳಿಂದ ಬಂಧಿಸಿದ್ದ ಜೊಂಡಿನ ಮೆದು ಪಾದರಕ್ಷೆಯನ್ನು ಮಹಾರಾಣಿ ಕಳಚಿದಳು.ಚಿರತೆಯ ಚರ್ಮದ ಸುರುಳಿಯನ್ನು ತಾನು ಎತ್ತಿಕೊಂಡು, ಸದ್ದಾಗದಂತೆ ಹೆಜ್ಜೆ ಇಡುತ್ತ, ಮಹಾ ಅರ್ಚಕನನ್ನು ಸಮೀಪಿಸಿ ಸುರುಳಿಯನ್ನು ಕೆಳಗಿರಿಸಿ ಅವನೆದುರು ಮಂಡಿಯೂರಿದಳು. (ಮಹಾ ಅರ್ಚಕನ ಆಪ್ತಸಹಾಯಕ ವಿಸ್ಮಿತ. ಅಷ್ಟು ಹತ್ತಿರಕ್ಕೆ ಮಹಾರಾಣಿ ಹಿಂದೆಂದೂ ಹೋಗಿರಲಿಲ್ಲ!) ಬಾಹ್ಯನೋಟಕ್ಕೆ ಮುಚ್ಚಿದಂತಿದ್ದರೂ ಧರ್ಮಗುರುವಿನ ಕಣ್ಣುಗಳು ಅರ್ಧ ತೆರೆದೇ ಇದ್ದುವು. (ಅಸ್ತಮಿಸುತ್ತಿದ್ದ ರಾನಿಗೆ ಹೇಪಾಟ್ ವಂದನೆ ಸಲ್ಲಿಸುತ್ತಿದ್ದುದನ್ನು ಪೀಠಪಲ್ಲಕಿಯಿಂದ ಇಳಿಯುವುದಕ್ಕೆ ಮೊದಲೇ ನೆಫರ್‌ಟೇಮ್ ಕಂಡಿದ್ದಳು. ಅಷ್ಟುಬೇಗನೆ ಧ್ಯಾನದಲ್ಲಿ ತಲ್ಲೀನನಾಗುವುದು ಸುಳ್ಳು. ಅಲ್ಲಿ ನಿಂತಿದ್ದ ದೇವಸೇವಕ ಸುದ್ದಿ ತಿಳಿಸದೆ ಇರುತ್ತಾನೆಯೆ?) ರಾಣಿ ಕಣ್ಣು ಮುಚ್ಚಿ, ಅದೇ ಭಂಗಿಯಲ್ಲಿ ಕಾದಳು.

ಹೇಪಾಟ್ ಎವೆಗಳ ಸಂದಿಯಿಂದಲೇ ಮಂಡಿ ಊರಿದ್ದವಳ ಸೊಬಗನ್ನು ಸವಿದ. ಪುನಃ ಕರಗುತ್ತಿದ್ದೇನೆ ಎಂದು ಕಸಿವಿಸಿ. "ಯಾರು?" ಎನ್ನುತ್ತ ಕಣ್ಣು ತೆರೆದ.

ಕಣ್ಣು ಮುಚ್ಚಿಕೊಂಡೇ ಮಹಾರಾಣಿ ಅಂದಳು :

"ನಾನು ನೆಫರ್‌ಟೇಮ್....ಐಗುಪ್ತದ ರಾಜಕುಮಾರನ ತಾಯಿ."

"ಏಳಿ.'

ಅರಸಿ, ಧರ್ಮಗುರುವಿನ ಹಾವುಗೆಗಳನ್ನು ಚುಂಬಿಸುವವಳಂತೆ ಅವುಗಳ ಮೇಲೆ ಬಾಗಿದಳು. ಹೇಪಾಟ್ ಮತ್ತೊಮ್ಮೆ "ಏಳಿ" ಎಂದ. ಅವನ

ಅಂಗೈಗಳು ಅವಳ ತೋಳುಗಳನ್ನು ಸೋಂಕಿದುವು. ನೆಫರಟೇಮ್ ಎದ್ದಳು.

"ಐಗುಪ್ತದ ಮಹಾರಾಣಿಗೆ ಒಂದು ಪೀಠ ತಂದ್ಕೊಡು."

ದೇವಸೇವಕನಿಗೆ ಹೇಪಾಟ್ ಆಜ್ಞಾಪಿಸಿದ:

ಅರ್ಚಕನ ಆಸನಕ್ಕಿಂತಲೂ ತಗ್ಗಾದ ಒಂದು ಮುಗ್ಗಾಲು ಪೀಠವನ್ನು ಆ ದೇವಸೇವಕ ತಂದಿರಿಸಿದ. ಉಡುಪಿನ ನೆರಿಗೆಗಳು ಕೆಡದಂತೆ, ಹಿಂಭಾರದಿಂದ ತಾನು ಹಿಂದಕ್ಕೆ ಕುಸಿಯದಂತೆ, ಎಚ್ಚರ ವಹಿಸುತ್ತ ನೆಫರ್‌ಟೇಮ್ ಅದರ ಮೇಲೆ ಕುಳಿತಳು. ಮಹಾ ಅರ್ಚಕನ ಕಣ್ಣುಗಳಲ್ಲಿ ಲಜ್ಜೆ ಇರಲಿಲ್ಲ. ಆದರೆ ಸಿಟ್ಟನ್ನು ಬಿಟ್ಟುಕೊಡಲಾರದ ಅವನ ದವಡೆಯ ಸ್ನಾಯುಗಳು ಮಿಸುಕಿದುವು.

ಮಹಾರಾಣಿಯೇ ಮಾತು ಆರಂಭಿಸಿದಳು:

"ನೀವು ಬಯಸುವ ಬಲಿ ಯಾವುದೂ ಅಂತ ತಿಳಿಯೋದಕ್ಕೆ ಬಂದಿದ್ದೇನೆ."

ಅವಳ ಮೈಮೇಲೆ ದೃಷ್ಟಿಯನ್ನು ಹರಿಯಬಿಡುತ್ತ, ಸ್ವರವನ್ನು ಏರಿಸದೆಯೇ, ಹೇಪಾಟ್ ಕೇಳಿದ:

"ಎಂಥ ಬಲಿ? ಯಾವುದಕ್ಕೆ?"

ಆ ಪ್ರಶ್ನೆಗಳನ್ನು ಉತ್ತರಿಸದೆ ನೆಫರ್‌ಟೇಮ್ ಮುಂದುವರಿಸಿದಳು:

"ಆಶ್ರಿತರಿಂದ ತಪ್ಪುಗಳಾಗಿದ್ದರೆ ತೋರಿಸಿಕೊಟ್ಟು, ತಿದ್ದಬೇಕೇ ಹೊರತು ಸಂತಾಪದಿಂದ ದಹಿಸಿ ಬೂದಿಯಾಗೋ ಹಾಗೆ ಮಾಡೋದೆ?"

ಮನಸ್ಸಿಲ್ಲದ ಮನಸ್ಸಿನಿಂದ ಹೇಪಾಟ್ ನಕ್ಕ.

"ರಾಜನೀತಿಯಲ್ಲಿ ಮಹಾರಾಣಿ ಪಾರಂಗತರಾದಂತಿದೆ. ರಾಜಕುಮಾರನ ಶಿಕ್ಷಣದ ಹೊಣೆಯನ್ನು ನೀವೇ ಹೊತ್ತಿದ್ದೀರೊ?"

"ಆಳುವ ಮಹಾಪ್ರಭುವಿಗೆ ಅಂತಃಪುರವೇ ಜಗತ್ತು. ಪಿತೃಸಮಾನರಾದ ಧರ್ಮಗುರುವಿಗೆ ನಿರಾಸಕ್ತಿ. ನಾನೇ ಶಿಕ್ಷಣ ನೀಡದೆ ಇನ್ನೇನು ಮಾಡಲಿ?"

"ಸಿಂಹಾಸನದ ಉತ್ತರಾಧಿಕಾರಿ ಸಿದ್ಧನಾಗುತ್ತಿದ್ದಾನೆಂದೆ ಇದರ ಅರ್ಥ?"

"ಅಲ್ಲವೆ?....ಆದರೆ, ಸಲಹಬೇಕಾದ ನೀವು—ತಂದೆ—ಸಿಂಹಾಸನದ ಮೇಲೆಯೇ ಯುದ್ಧ ಸಾರಿದ್ದೀರಿ!"

ಹೇಪಾಟ್ ಸಿಡಿನುಡಿದ :

"ಸುಳ್ಳು ! ಅಪ್ರಬುದ್ಧರ ವ್ಯವಹಾರದಿಂದ ಸಿಂಹಾಸನದ ಮೂಲೆ ಗುಂಪಾಗ್ತ್ತದಲ್ಲ ಅನ್ನೋದೆ ನನ್ನ ಕಾತರ."

"ರಾಜಕುಮಾರ ಅಪ್ರಾಪ್ತ ವಯಸ್ಕ—ಒಪ್ತೇನೆ."

"ರಾಜಕುಮಾರನದಲ್ಲ—ಅಪ್ರಬುದ್ಧತೆ ಸೆಡ್ ಉತ್ಸವಕ್ಕಾಗಿ ಹಾತೊರೆಯುತ್ತಿರೋ ಆರಸನದು."

"ಪ್ರಾಚೀನ ಕಟ್ಟಳೆಗೆ ಅನುಗುಣವಾಗಿಲ್ಲವಾ ಸೆಡ್ ಉತ್ಸವ ?"

"ಮಹಾ ಅರ್ಚಕರ ಸ್ಥಾನಮಾನಗಳ ವಿಷಯದಲ್ಲಿ ಪ್ರಾಚೀನ ಕಟ್ಟಳೆ ಏನು ಹೇಳ್ತದೆ ಮಹಾರಾಣಿ ?"

"ಮಹಾ ಅರ್ಚಕರು ಕ್ಷಮಿಸ್ಬೇಕು. ಗುರುಮನೆಯ ವಿಷಯದಲ್ಲಿ ಅರಮನೆಯಿಂದ ಮುಂದೆ ಯಾವ ಅಪಚಾರವೂ ಆಗುವುದಿಲ್ಲ ಅಂತ ಭರವಸೆ ನೀಡ್ತೇನೆ."

ಹೇಪಾಟ್ ಮೌನವಾಗಿ ಮಹಾರಾಣಿಯನ್ನು ಆಪಾದಮಸ್ತಕ ದಿಟ್ಟಿಸಿ ನೋಡಿದ. ನೆಫರ್‌ಟೀಮಳ ಮುಖ ರಕ್ತರಂಜಿತವಾಯಿತು.

ಚಿರತೆ ಚರ್ಮದ ಸುರುಳಿ ಅಲ್ಲಿಯೇ ಇತ್ತು. ಮಹಾ ಅರ್ಚಕನ ದೃಷ್ಟಿ ಅದರ ಮೇಲೆ ತಂಗಿತು.

ನೆಫರ್‌ಟೀಮ್ ಅಂದಳು :

"ಪುಟ್ಟ ಕಾಣಿಕೆ ಸ್ವೀಕರಿಸ್ಬೇಕು. ನಿಮಗೆ ಇಷ್ಟವಾಗಬಹುದು. ಬಿಡಿಸಿ ತೋರಿಸಲೆ ?"

"ಬೇಡ. ಅಲ್ಲೇ ಇರಲಿ. ಮಹಾರಾಣಿ ತಂದುದನ್ನು ಸ್ವೀಕರಿಸಿದ್ದೇನೆ."

"ಇದರ ಸೊಬಗು ಅಪೂರ್ವವಾದದ್ದು. ಸೆಡ್ ಉತ್ಸವದ ಪೂಜೆಯ ವೇಳೆ ಮಹಾ ಅರ್ಚಕರು ಇದನ್ನು ಧರಿಸಿದರೆ ಈ ಭಕ್ತೆಗೆ ಪರಮ ಸಂತೋಷವಾಗ್ತದೆ. ನನ್ನ ಮೇಲೂ ರಾಜಕುಮಾರನ ಮೇಲೂ ಕರುಣೆ ತೋರಿದ್ದೀರಿ. ನಾನು ಆರಂಭದಲ್ಲಿ ಕೇಳಿದ ಪ್ರಶ್ನೆಗೆ ಉತ್ತರ ದಯೆಪಾಲಿಸಿಬಿಡಿ. ಹೊರಡ್ತೇನೆ."

"ಯಾವ ಪ್ರಶ್ನೆ ಮಹಾರಾಣಿ ?"

"ನೀವು ಬಯಸುವ ಬಲಿ...."

ಹೇಪಾಟ್ ಎದ್ದು ನಿಂತ. ಮಹಾರಾಣಿಯೂ ಎದ್ದಳು. ಮಹಾ ಅರ್ಚಕನೆಂದ :

"ನಿಮ್ಮ ಪ್ರಶ್ನೆಗೆ ನಾಳೆ ಉತ್ತರ ಕೊಡ್ತೇನೆ."

"ನಾಳೆ ?"

"........"

"ಬೆಳಿಗ್ಗೆ ಪೂಜೆ ಮುಗಿಸಿ ಅರಮನೆಗೆ ಆಗಮಿಸಿ, ಮಧ್ಯಾಹ್ನ ಅಲ್ಲಿಯೇ ಭೋಜನ ಸ್ವೀಕರಿಸಬೇಕು. ಇದು ನನ್ನ ಪ್ರಾರ್ಥನೆ."

"ಮಹಾರಾಣಿ...."

ನೆಫರ್‌ಟೀಮಳ ಕಿವಿಗೆ ಇಂಪಾಗಿ ಕೇಳಿಸಿದ ಸಂಬೋಧನೆ.

"ಹೇಳೋಣವಾಗಲಿ."

"ಏನಿಲ್ಲ....ಏನೂ ಇಲ್ಲ...."

"ಬರಲಾ ? ನಾಳೆ ದಾರಿ ನೋಡ್ತೇನೆ "

ಹೇಪಾಟ್ ಆಶೀರ್ವದಿಸಲು ಕೈ ಎತ್ತಿದ. ಮಹಾರಾಣಿ ನಡುಬಾಗಿಸಿ ನಮಿಸಿ ಹೊರಟಳು. ನಿರ್ಗಮಿಸುತ್ತಿದ್ದ ಆಕೆ ದಾಸಿಯೊಡಗೂಡಿ ಬಾಗಿಲನ್ನು ದಾಟುವವರೆಗೂ ಮಹಾಅರ್ಚಕನ ದೃಷ್ಟಿ ಅವಳನ್ನು ಹಿಂಬಾಲಿಸಿತು.

ತನ್ನೆಡೆಗೆ ಬಂದ ದೇವಸೇವಕನಿಗೆ ಆತ ನುಡಿದ :

"ಸುರುಳಿಯನ್ನು ಬಿಚ್ಚು."

ಐದು ಮೊಳ ಉದ್ದ. ದೇವಸೇವಕ ಅದನ್ನು ತನ್ನ ಮೈಗೆ ಅಡ್ಡವಾಗಿ ಹಿಡಿದ. ಹೇಪಾಟ್ ಒಂದು ಹೆಜ್ಜೆ ಮುಂದಿರಿಸಿ, ಚಿರತೆ ಚರ್ಮದ ಕತ್ತು ಬೆನ್ನುಗಳ ಮೇಲೆ ಕೈ ಆಡಿಸಿದ.

....ಪ್‌ಟಾ ದೇವನಿಗೆ ಪುಷ್ಪಗಳನ್ನರ್ಪಿಸಿ, ಪ್ರಸಾದ ಪಡೆದು, ನೆಫರ್ ಟೀಮ್ ಪಲ್ಲಕಿಯತ್ತ ಧಾವಿಸಿದಳು. ದೀವಟಿಗೆಯವರು ತಮ್ಮ ಪಂಜು ಗಳನ್ನು—ಸೆಣಬಿನ ಚಿಂದಿಗಳನ್ನು ಬಿಗಿದು ಕಟ್ಟಿ ನಾರಗಸೆ ಎಣ್ಣೆಯಿಂದ ತೋಯಿಸಿ ಮಾಡಿದ್ದ ಕಂಚಿನ ಹಿಡಿಯ ದೀಪಗಳನ್ನು—ಉರಿಸಿ ಈಗ ಮುಂಭಾ ಗದ ಅಂಗರಕ್ಷಕರ ಮುಂದುಗಡೆ ನಿಂತಿದ್ದರು.

ನೆಫರ್‌ಟೇಮ್ ಪಲ್ಲಕಿಯಲ್ಲಿ ಅರಮನೆಯತ್ತ ಸಾಗುತ್ತ ಮಹಾ ಅರ್ಚಕ ನೊಡನೆ ತನ್ನ ಸಂವಾದವನ್ನು ಸ್ಮರಿಸಿಕೊಳ್ಳುತ್ತ, ಕತ್ತಲಿನ ರಕ್ಷಣೆಯಲ್ಲಿ ಆತ್ಮ ಸಂತೃಪ್ತಿಯಿಂದ ಮತ್ತೆ ಮತ್ತೆ ತನ್ನಷ್ಟಕ್ಕೆ ನಸುನಕ್ಕಳು.

* * * *

ಆ ರಾತ್ರೆ ಅಮಾತ್ಯ ತನ್ನ ಭೇಟಿಗೆ ಬರುವ ವೇಳೆಗೆ ಪೆರೋ, ಮೈ ದಣಿವು ನೀಗಲೆಂದು ನಸುಬಿಸಿ ಸ್ನಾನ ಮಾಡಿ, ಮೈಗೆ ಸುಗಂಧ ದ್ರವ್ಯ ಲೇಪಿಸಿ ಕೊಂಡು ಕುಳಿತಿದ್ದ. ಒಳಗೆ ಬಂದ ಆಮೆರಬ್‌ನ ಹಸನ್ಮುಖ ಅವನ ಮನಸ್ಸಿಗೆ ಮುದ ನೀಡಿತು.

ಹೆಪ್ವೆಟ್ ನಡೆಸಿದ ಯಶಸ್ವೀ ರಾಯಭಾರದ ವಿವರ ತಿಳಿದಾಗ ಅವನು ಸಂತುಷ್ಟನಾದ.

"ಅಂತೂ ಪರವಾಗಿಲ್ಲ ಹೆಪ್ವೆಟ್."

ಅಮಾತ್ಯನೆಂದ:

"ಆನ್ ನಗರಿಗೆ ಹೊರಡೋದಕ್ಕೆ ಮುಂಚೆಯೇ ಹೆಪ್ವೆಟ್ ಕೇಳಿದ್ದ— ಈ ರಾಯಭಾರದ ತನ್ನ ಕಥೇನ ಗೋರಿಯೊಳಗೆ ಚಿತ್ರಿಸೋದಕ್ಕೆ ಅವಕಾಶ ಕೊಡಬೇಕೂಂತ."

"ಆಗಲಿ. ಅದಕ್ಕೇನೀಗ ?"

"ಮಹಾಪ್ರಭುಗಳ ಗೋರಿಯಲ್ಲೂ ಒಂದು ಕಡೆ ಆತನ ಚಿತ್ರ ಸೇರಿಸ್ಬೇಕಂತೆ."

"ಸೇರಿಸೋಣವೆ ?"

"ತಪ್ಪೇನೂ ಅಲ್ಲ."

"ಸರಿ ಹಾಗಾದರೆ."

"ಒಪ್ಪಿಗೆ ನೀಡಿದ್ದೀರಿ—ಅಂತ ನಾಳೆ ಆತ ಬಂದಾಗ ಮಹಾಪ್ರಭುಗಳೇ ಒಂದು ಮಾತು ಹೇಳ್ಬೇಕು"

"ಹೂಂ. ಹೂಂ."

"ಅಂತೂ ಒಂದು ಘಟ್ಟ ಮುಟ್ಟಿದ ಹಾಗಾಯಿತು."

"ಹೌದು. ಆದರೆ ಅವನ ಬತ್ತಳಿಕೇಲಿ ಇನ್ನೆಷ್ಟು ಬಾಣಗಳಿವೆಯೊ ?"

ಏನು ಉತ್ತರ ನೀಡಬೇಕೆಂದು ಅಮಾತ್ಯನಿಗೆ ಒಂದುಕ್ಷಣ ತೋಚಲಿಲ್ಲ. ತನ್ನ ಮೆದುಳು ಹೆಪ್ಪುಗಟ್ಟಿರಬೇಕು ಎಂದು ತನ್ನ ಮೇಲೆಯೇ ಸಿಟ್ಟಾದ. ಕತ್ತಿನ ಹಿಂಭಾಗವನ್ನು ತುರಿಸಿದ.

ಅಷ್ಟರಲ್ಲಿ ಬಾಗಿಲಿನ ಹೊರಗೆ "ಅಮಾತ್ಯರು ಬಂದಿದ್ದಾರಾ ?" ಎಂದು ಮಹಾರಾಣಿ ಪ್ರಶ್ನಿಸುತ್ತಿದ್ದುದು ಆಮೆರಬ್‌ಗೆ ಕೇಳಿಸಿತು. ಮರುಕ್ಷಣವೇ ಆಕೆ ಒಳಬಂದಳು. ಕೈಯಲ್ಲಿ ಮಂದಿರದ ಪ್ರಸಾದದ ತಟ್ಟೆ ಇತ್ತು. ಅಮಾತ್ಯ ಎದ್ದು ನಿಂತು ನಮಿಸಿದ. ಪೆರೋ ರಾಣಿಯ ಕಡೆಗಾಗಲೀ ರಾಣಿ ಪೆರೋನ ಕಡೆಗಾಗಲೀ ನೋಡಲಿಲ್ಲ. ಕಡೆಗಣ್ಣಿನಿಂದ ಗಂಡನನ್ನು ದಿಟ್ಟಿಸಿ, 'ದಿನವೂ ಆ ದಾಸಿಯ ಸೇವೆಯನ್ನು ಈತ ಸ್ವೀಕರಿಸಿದರೆ ಸೆಡ್ ಆಚರಣೆ ಪ್ರತಿ ವರ್ಷವೂ ಬೇಕಾದೀತು' ಎಂದು ತನ್ನ ಮನಸ್ಸಿನಲ್ಲೆ ಕಹಿನುಡಿದಳು. ಗಟ್ಟಿಯಾಗಿ ಅವಳೆಂದಳು :

"ನೀವು ಕೂತ್ಕೊಳ್ಳಿ ಅಮಾತ್ಯರೇ. ಮಂತ್ರಾಲೋಚನೆ ಮುಂದುವರೀಲಿ. ನಾನು ಅಡ್ಡಿಯಾಗೋದಿಲ್ಲ. ಒಂದೇ ಕ್ಷಣ. ಹೊರಡ್ತೇನೆ. ಇಗೊಳ್ಳಿ ಮಂದಿರದ ಪ್ರಸಾದ."

ಪೆರೋ ಕಣ್ಣೆವೆಗಳನ್ನು ಅರ್ಧಮುಚ್ಚಿ ಮಹಾರಾಣಿಯತ್ತ ಕತ್ತನ್ನು ತುಸು ಹೊರಳಿಸಿ, ರಾಣಿಯ ಸರಳ—ಆದರೂ ಸೊಬಗು ಸೂಸುವ—ಅಲಂಕಾರವನ್ನು ನೋಡಿದ.

ಆತ ಮತ್ತು ಅಮಾತ್ಯ ಇಬ್ಬರೂ ತಟ್ಟೆಯಿಂದ ಹಣ್ಣಿನ ತುಣುಕುಗಳನ್ನೆತ್ತಿಕೊಂಡು ಬಾಯಿಗಿಟ್ಟರು.

ಮಹಾರಾಣಿ ಮಾತು ಮುಂದುವರಿಸಿದಳು:

"ಇಲ್ಲಿ ಕೇಳಿ. ನಾನು ಇದೇ ಈಗ ಹೇಪಾಟ್‌ರನ್ನು ಭೇಟಿ ಮಾಡಿ ಬರ್‍ತಿದ್ದೇನೆ. ಅವರು ನಾಳೆ ಬೆಳಗ್ಗೆ ಅರಮನೆಗೆ ಆಗಮಿಸ್ತಾರೆ. ಮಧ್ಯಾಹ್ನ ನಮ್ಮ ಆತಿಥ್ಯ ಸ್ವೀಕರಿಸಬೇಕು ಅಂತ ಕೇಳ್ಕೊಂಡಿದ್ದೇನೆ."

ಪೆರೋನ ಕಣ್ಣುಗಳು ಪೂರ್ತಿ ತೆರೆದುಕೊಂಡುವು. ದ್ವೇಷ, ತಿರಸ್ಕಾರ. ('ಇದು ಅಧಿಕಪ್ರಸಂಗ. ಹೇಪಾಟ್ ಜತೆ ಇವಳಿಗೇನು ಕೆಲಸ?') ಆದರೆ, ಬಾಯಿ ತೆರೆದು ಏನನ್ನೂ ಆತ ಹೇಳಲಿಲ್ಲ. ಅಮಾತ್ಯ ವಿಸ್ಮಿತನಾಗಿ ಕಣ್ಣುಗಳನ್ನು

ಕಿರಿದುಗೊಳಿಸಿ ಅಂದ:

"ತುಂಬಾ ಸಂತೋಷದ ಸುದ್ದಿ ಮಹಾರಾಣಿ. ಹೇಪಾಟ್‌ರನ್ನು ಕರ ಕೊಂಡು ಬರೋದಕ್ಕೆ ನಾಳೆ ಬೆಳಿಗ್ಗೆ ಮಹಾಮಂದಿರಕ್ಕೆ ಹೋಗಬೇಕೂಂತ ಹೆಪ್ಪೆಟ್‌ಗೆ ನಿರ್ದೇಶ ನೀಡಿದ್ದೇನೆ. ಮಹಾ ಅರ್ಚಕರು ಇನ್ನೇನಾದರೂ ಹೇಳಿದರೆ?"

ಮಾತುಕತೆಯ ವಿವರವನ್ನು ಇವರಿಗೆ ತಿಳಿಸುವುದು ಅಗತ್ಯವೆಂದು ನೆಫರ್ ಟೀಮ್‌ಗೆ ಅನ್ನಿಸಲಿಲ್ಲ. ಅವಳೆಂದಳು :

"ಏನೂ ಇಲ್ಲ. ಹೇಗೂ ನಾಳೆ ಬರ್‍ತಾರಲ್ಲ...."

"ಒಟ್ಟಿನಲ್ಲಿ, ಸಿಟ್ಟು ಇಳಿದು ಹೇಪಾಟ್ ಶಾಂತಚಿತ್ತರಾಗಿದ್ದಾರೇಂತ ಆಯ್ತು."

"ಅದನ್ನು ನಾನು ಹೇಳಲಾರೆ. ಮೊಂಡಾಟಕ್ಕೆ ಪ್ರತಿಮೊಂಡಾಟ ಇದ್ದೇ ಇರ್‍ತದೆ." ಪೆರೋ ಮಧ್ಯೆ ಪ್ರವೇಶಿಸಿ ಅಂದ :

"ನೆಫರ್, ಚರ್ಚೆ ಬೇಡ."

ಮಹಾರಾಣಿ ಸ್ವರವೇರಿಸಿದಳು.

"ಬೇಡವಪ್ಪಾ ಬೇಡ. ಅರಮನೆ—ಗುರುಮನೆ ವಿರಸ ದೇಶಕ್ಕೂ ರಾಜ ವಂಶಕ್ಕೂ ಗಂಡಾಂತರಕಾರಿ. ಮರೀಬೇಡಿ !"

ಅಷ್ಟು ಹೇಳಿ ಸರಸರನೆ ಆಕೆ ಅಂತಃಪುರದತ್ತ ನಡೆದಳು.

ಅಮಾತ್ಯ ಮತ್ತೆ ಆಸೀನನಾದ.

ಪೆರೋ ಮತ್ತು ಆತ ಪರಸ್ಪರ ನೋಡುತ್ತ ಕುಳಿತರು, ಸ್ವಲ್ಪ ಹೊತ್ತು, ಮೌನವಾಗಿ. ಬಳಿಕ ಪೆರೋ ನಿಟ್ಟುಸಿರು ಬಿಟ್ಟು, ಬಲ ಮುಷ್ಟಿಯಿಂದ ತನ್ನ ತೊಡೆಯನ್ನು ಮೆಲ್ಲನೆ ಗುದ್ದಿದ.

ಅಮಾತ್ಯ ಪುನಃ ಮಾತು ಆರಂಭಿಸಿದ :

"ಕಹಿಯಾದದ್ದೇನೂ ನಡೆದೇ ಇಲ್ಲ ಅನ್ನೋ ಹಾಗೆ ಹೇಪಾಟ್‌ನನ್ನು ನಾವು ಬರಮಾಡಿಕೊಳ್ಬೇಕು."

ಅರಸನೆಂದ :

"ಮಹಾರಾಣಿ ಹೇಳಿದ್ದು ಕೇಳಿದಿರಲ್ಲ? ಅವನೇ ತಪ್ಪು ನಾವೇ ಸರಿ ಅಂತ ವಾದಿಸಿ ಪ್ರಯೋಜನವಿಲ್ಲ."

"ಮಾತುಕತೆ ನಡೆಯುವಾಗ ಮಹಾರಾಣಿಯವರೂ ಇರುವುದು ಮೇಲು ಅನಿಸ್ತಿದೆ."

"ನಿಮಗೆ ಅನಿಸದೇ ಇದ್ದರೂ ನೆಫರ್ ಅಲ್ಲಿರ್ತಾಳೆ."

"ರೇಗಿಸೋದಕ್ಕೆ ನಾನು ಮತ್ತು ಹೆಖ್ವೆಟ್, ಸಾಂತ್ವನಗೊಳಿಸೋದಕ್ಕೆ ಅರಸಿ. ಹೇಪಾಟ್‌ನನ್ನು ಹಣ್ಣು ಮಾಡೋದು ಸುಲಭವಾಗ್ತದೆ."

"ಆಮೆರಬ್, ನಾಳೆ ನಿಮ್ಮ ಮುತ್ಸದ್ದಿತನದ ಮಹಾಪರೀಕ್ಷೆ."

ಅಮಾತ್ಯನಿಗೆ, ಪಕ್ಕೆಲುಬನ್ನು ಯಾರೋ ಚುಚ್ಚಿದ ಅನುಭವವಾಯಿತು. ತಾನು ಸೋತರೆ ಅಮಾತ್ಯಗಿರಿ ಅಂತ್ಯವಾಗುತ್ತದೆ ಎಂದಲ್ಲವೆ ಆ ಮಾತಿನ ಸೂಚ್ಯಾರ್ಥ?

ಅವನೆಂದ :

"ನಿಶ್ಚಿಂತೆಯಾಗಿರಬೇಕು, ಮಹಾಪ್ರಭು. ದುರ್ಬಲನಾದ ಅಮಾತ್ಯ ದೊರೆತರೆ ತನ್ನ ಕೆಲಸ ಸುಗಮವಾಗ್ತದೆ ಅಂತ ಹೇಪಾಟ್ ಭಾವಿಸಿದ್ದಾನೆ. ಅವನ ಆ ಆಸೆ ಕೈಗೂಡೋದು ಅಷ್ಟು ಸುಲಭವಲ್ಲ."

ಪೆರೋ ಅಮಾತ್ಯನ ಮುಖವನ್ನು ದಿಟ್ಟಿಸಿದ.

"ಸರಿ ಆಮೆರಬ್. ಮಹಾಪರೀಕ್ಷೇಲಿ ನೀವು ಯಶಸ್ವಿಯಾಗ್ಬೇಕು ಅನ್ನೋದೇ ನನ್ನ ಅಪೇಕ್ಷೆ."

"ಮಹಾಪ್ರಭು ನನ್ನಲ್ಲಿ ವಿಶ್ವಾಸವಿಟ್ಟಿದ್ದೀರಿ—ನನಗೆ ಅಷ್ಟು ಸಾಕು."

"ಆನ್‌ನಗರಿಯಲ್ಲಿ ಅಷ್ಟು ದೀರ್ಘಕಾಲ ಧಾರ್ಮಿಕ ಜಿಜ್ಞಾಸೆ ನಡೆಸಿದ ನಲ್ಲ ? ಅದೇನು ಅಂತ ಅವನನ್ನು ಕೇಳ್ಬೇಕು."

"ಮಾತು ಆರಂಭಿಸೋದಕ್ಕೆ ಒಳ್ಳೇ ವಿಷಯ, ಮಹಾಪ್ರಭು."

ಪೆರೋ "ಹ್ಞ ಹ್ಞ" ಎಂದ; ಆಕಳಿಸಿದ. ಹಸಿವು, ನಿದ್ದೆ.

ಅಮಾತ್ಯ ಎದ್ದು, ಬೆಳಿಗ್ಗೆ ಹೆಖ್ವೆಟ್‌ಗೆ ಪಲ್ಲಕಿ ಕಳುಹಿಸಲು ವಾಹನಗಳ ಅಧಿಕಾರಿಗೆ ಆದೇಶವೀಯಬೇಕೆಂಬುದನ್ನು ನೆನೆಯುತ್ತ, ರಾಜಸನ್ನಿಧಿಯಿಂದ ನಿರ್ಗಮಿಸಿದ.

* * * *

ವಿಹಾರದಿಂದ ಮರಳಿದ ರಾಜಕುಮಾರನ ಹೊಟ್ಟೆ ಚುರುಗುಟ್ಟುತ್ತಿತ್ತು.

ಅಕ್ಕಂದಿರೊಡನೆ ತಿಂಡಿ ಊಟಗಳ ವಿಷಯ ಪ್ರಸ್ತಾಪಿಸುವುದು ಅವಮಾನ. ಮಗುವಲ್ಲ. ಈಗೀಗ ತಾಯಿಯ ಮುತ್ತುಗಳೂ ಅವನಿಗೆ ಮುಜುಗರ ಉಂಟು ಮಾಡುತ್ತಿದ್ದುವು. ಪೆರೋ ಅವನನ್ನು ಮಾತನಾಡಿಸುತ್ತಿದ್ದುದು ಎಂದೋ ಒಮ್ಮೆ; ಸಲಿಗೆಯ ಸಂವಾದಕ್ಕೆ ಏನಿದ್ದರೂ ವೃದ್ಧೆ ದಾಸಿ ಬೆಂಟ್‌ರಷ್ಟೇ ಸರಿ.

ಆಕೆ ಧಾವಿಸಿಬಂದು, ತನ್ನ ಅಳಲನ್ನು ತೋಡಿಕೊಂಡಳು:

"ರಾಜಕುಮಾರ! ಎಷ್ಟು ಹೊತ್ತು ವಿಹಾರ! ನಿಮ್ಮನ್ನು ಮಂದಿರಕ್ಕೆ ಕರಕೊಂಡು ಹೋಗಬೇಕೊಂತ ಮಹಾರಾಣಿ ಬಹಳ ಹೊತ್ತು ಕಾದ್ರು."

"ಬೆಂಟ್, ಸದ್ಯಃ ಆ ಹಿಂಸೆ ತಪ್ಪಿತಲ್ಲ! ಇಲ್ಲಿ ಕೇಳು. ನಾನಿವತ್ತು ಕೈಕೋಲಿನಿಂದ ಕಾಡು ಬಾತುಕೋಳಿ ಹೊಡೆದೆ. ಇದು ಮೊದಲನೇದು!"

"ಓ ನನ್ನ ರಾಜಕುಮಾರ! ಹೌದೆ? ಹೌದೆ? ಅರಮನೆಯ ಸರ್ವಜನರಿಗೆ ಈ ಸಂತೋಷದ ಸುದ್ದೀನ ತಿಳಿಸ್ತೇನೆ. ಎಲ್ಲಿದೆ ಬಾತುಕೋಳಿ?"

"ಅಂಬಿಗರು ಅಡುಗೆ ಮನೆಗೆ ತಗೊಂಡ್ಹೋದ್ರು. ನನಗೆ ಹಸಿವು. ಅದನ್ನು ಅಡುಗೆಮಾಡಿ ಬಡಿಸೋದಕ್ಕೆ ಎಷ್ಟು ಹೊತ್ತು ಬೇಕು, ಬೆಂಟ್?"

"ಅಷ್ಟು ಅವಸರ ಯಾಕೆ ರಾಜಕುಮಾರ? ನಾಳೆ ಮಧ್ಯಾಹ್ನಕ್ಕೆ ವಿಶೇಷ ಅಡುಗೆ ಮಾಡಿಸೋಣ. ಈಗ ನಡೀರಿ ಊಟಕ್ಕೆ."

"ನಾನು ಬಾತುಕೋಳಿ ಬೇಟೆಯಾಡ್ದೆ ಅಂತ ಎಲ್ಲರಿಗೂ ಸಂತೋಷ ವಾಗ್ತದೆ ಅಲ್ಲವಾ?"

"ಓಹೋ."

"ಅಕ್ಕಂದಿರಿಗೂ ಹೇಳ್ತೀಯಾ?"

"ಹೇಳ್ತೀನಿ."

ದೀಪಗಳನ್ನು ಬೆಳಗಿದ್ದರು. ಅರಮನೆಯಲ್ಲೀಗ ಇರುಳಿನ ಹಗಲು. ರಾಜ ಕುಮಾರ ಉಡುಗೆ ಬದಲಿಸಿ, ಮೈ ಕೈ ತೊಳೆದು, ಭೋಜನಶಾಲೆಗೆ ಬರಲು ಬೆಂಟ್‌ರಷ್ಟು ನೆರವಾದಳು.

ಬೇಟೆಯ ಸುದ್ದಿ ತಲುಪಿದೊಡನೆ ರಾಜಕುಮಾರಿಯರು ತಮ್ಮ ವಸತಿ ವಿಭಾಗದಿಂದ ಒಬ್ಬೊಬ್ಬರಾಗಿ ಬಂದು, "ಹೌದೇನೋ?" "ನಿಜವಾಗಿಯೂ ನೀನೇ ಬೇಟೆಯಾಡಿದೆಯೇನೊ?" "ಎಷ್ಟು ಚೆನ್ನ!" ಎಂದೆಲ್ಲ ಉದ್ಗರಿಸಿ ಬಾತುಕೋಳಿಯನ್ನು ನೋಡಲು ಹೋದರು.

ದೋಣಿಯಲ್ಲಿ ತಾನು ಯಾವ ಭಂಗಿಯಲ್ಲಿ ನಿಂತೆ; ಕೈಗೋಲನ್ನು ಹೇಗೆ ಹಿಡಿದು ಗುರಿ ಇಟ್ಟೆ; ತಾನು ಅತ್ತಿತ್ತ ಮಿಸುಕದಂತೆ ಒಬ್ಬ ಅಂಬಿಗ ತನ್ನ ಮೊಣಕಾಲುಗಳನ್ನು ಯಾವ ರೀತಿ ಭದ್ರವಾಗಿ ಹಿಡಿದುಕೊಂಡ; ತಾನು ಎಸೆದ ಕೋಲು ತಗುಲಿದಾಗ ಬಾತು ಕ್ವಾಕ್ ಸದ್ದು ಮಾಡುತ್ತ ಹೇಗೆ ಪಟಪಟನೆ ಹಾರಿ ನೀರಿಗೆ ಬಿತ್ತು ಎಂಬುದನ್ನೆಲ್ಲ ಉತ್ಸಾಹದಿಂದ ವಿವರಿಸುತ್ತ ರಾಜಕುಮಾರ ಊಟ ಮಾಡಿದ. ಬೆಂಟ್ ಮತ್ತು ಭೋಜನಶಾಲೆಯ ದಾಸದಾಸಿಯರಿಗೆ ಇದು ಎಳೆಯನ ಸಾಹಸದ ಅಪೂರ್ವ ಕಥೆ.

ರಾಜಕುಮಾರ ತನ್ನ ಕೊಠಡಿಗೆ ಹಿಂತಿರುಗಿದ ಕೆಲ ಸಮಯದಲ್ಲೇ ಮಹಾರಾಣಿಯ ಆಗಮನವಾಯಿತು. ಪೆರೋ ಸಮ್ಮುಖದಿಂದ ಬರುತ್ತಿದ್ದ ಒಡತಿಯನ್ನು ಇದಿರ್ಗೊಳ್ಳಲು ಹೋದ ಬೆಂಟ್ ರಾಜಕುಮಾರನ ಬೇಟೆಯ ವಿಷಯ ತಿಳಿಸಿದಳು.

"ಹ್ಹಾ! ಹೌದೆ?" ಎಂದಳು ನೆಫರ್‌ಟೀಮ್.

(ಹುಡುಗಿ ಋತುಮತಿಯಾಗುವಷ್ಟೇ ಸಂಭ್ರಮದ ಸಂಗತಿ, ಹುಡುಗ ಬೇಟೆಯಲ್ಲಿ ಹೊಡೆದು ಕೆಡಹುವ ಮೊದಲ ಕಾಡುಬಾತುಕೋಳಿ.)

ರಾಜಕುಮಾರನ ಕೊಠಡಿಗೆ ಬಂದವಳೇ ಮಹಾರಾಣಿ ಮಗನ ಬಾಯಿಗೆ ಪ್ರಸಾದ ಹಾಕಿದಳು. ತಟ್ಟೆಯನ್ನು ಬದಿಗಿರಿಸಿ ಆವನನ್ನು ಆಲಿಂಗಿಸಿದಳು.

"ಅಮ್ಮ, ನಿನ್ನ ತುಟಿ ರಂಗು...." ಎಂದು ಮಗ ಎಚ್ಚರಿಸಿದರೂ, ತಾಯಿ ಆತನ ಹಣೆ ಮುಖ ಎದೆಗೆಲ್ಲ ಲೊಚಲೊಚನೆ ಮುತ್ತುಕೊಟ್ಟು ಅಂದಳು :

"ಇವತ್ತಿನಿಂದ ನೀನು ಪ್ರಬುದ್ಧ. ಹೆಚ್ಚು ಗಾಂಭೀರ್ಯದಿಂದ ಇರ್ಬೇಕು. ರಕ್ಷಣೆಗೆ ಬೇರೆ ಭಟರೂ ದೋಣಿಗಳೂ ಇಲ್ದೆ ವಿಹಾರ–ಗಿಹಾರಕ್ಕೆ ಹೋಗ್ಬಾರ್ದು. ಕೇಳಿಸ್ತಾ ?"

"ಹೂಂ."

ಮಹಾರಾಣಿ ಚಪ್ಪಾಳೆ ತಟ್ಟಿದಳು. ಒಳಗೆ ಬಂದ ಬೆಂಟ್‌ರಷ್ಟ್‌ಗೆ ಆಕೆ ಹೇಳಿದಳು :

"ನಾಳೆ ಮಹಾ ಅರ್ಚಕರು ಭೋಜನಕ್ಕೆ ಬರ್ತಾರೆ. ರಾಜಕುಮಾರ ಬೇಟೆಯಾಡಿದ ಕಾಡುಕೋಳಿಯ ವಿಶೇಷ ಅಡುಗೆ ಆಗ್ಬೇಕೂಂತ ಪಾಕಶಾಲೆಗೆ ತಿಳಿಸಿಬಿಡು."

"ಹೂಂ. ಮಹಾರಾಣಿ."

ಆ ಅಡುಗೆಯನ್ನು ಹೊಟ್ಟೆ ತುಂಬ ತಾನು ಉಣ್ಣಬೇಕು ಎಂದು ಕೊಂಡಿದ್ದ, ರಾಜಕುಮಾರ. ಮಹಾರಾಣಿಯ ಏರ್ಪಾಟು ತಿಳಿದಾಗ, 'ಅಮ್ಮ, ನನಗೆ ನಿದ್ದೆ ಬರ್‍ತಿದೆ,' ಎಂದು ಹೇಳಿ, ತನ್ನ ಮುಖಕ್ಕೂ ಎದೆಗೂ ಅಂಟಿದ್ದ ತುಟಿರಂಗನ್ನು ತೊಳೆಯಲು ಪಕ್ಕದಲ್ಲಿದ್ದ ಶೌಚಗೃಹಕ್ಕೆ ಹೋದ.

* * * *

ನಿರೀಕ್ಷೆ. ಕಾತರ, ಸಂಬಂಧಪಟ್ಟವರಿಗೆಲ್ಲ.

(ಬೆಳಿಗ್ಗೆ ಹೆಖ್ವೆಟ್‌ನನ್ನು ಕಂಡೊಡನೆ ಹೇಪಾಟ್ ಕೇಳಿದ :

"ಏನು ವೃದ್ಧರು ಮತ್ತೆ ಬಂದಿರಿ?"

"ಮಹಾ ಅರ್ಚಕರನ್ನು ಅರಮನೆಗೆ ಕರಕೊಂಡು ಹೋಗೋದಕ್ಕೆ," ಎಂದ ಹೆಖ್ವೆಟ್.

"ಬರ್‍ತೇನೆ ಅಂತ ಮಹಾರಾಣಿಯವರಿಗೆ ಹೇಳಿದ್ದೆನಲ್ಲ."

ಅದು ಹೊಸ ಸಂಗತಿ. 'ನಿನ್ನೆ ಸಂಜೆಯೋ ರಾತ್ರಿಯೋ ಅರಸಿ ಮಹಾ ಮಂದಿರಕ್ಕೆ ಬಂದು ಹೇಪಾಟ್‌ನನ್ನು ಕಂಡಿರಬೇಕು.' ತಾನು ಯೋಚಿಸುತ್ತಿದ್ದುದರ ಸುಳಿವೂ ಸಿಗದಂತೆ ಹೆಖ್ವೆಟ್ ನಗೆಯ ಮುಖವಾಡ ಧರಿಸಿ ನುಡಿದ :

"ಜತೆಗೆ ಒಬ್ಬರು ಇದ್ದರೆ ಭೂಷಣ ಅಲ್ಲವಾ ?" )

ಅಮಾತ್ಯ ಬೇಗನೆ ಬಂದಿದ್ದ. ಅರಸನೂ ಅರಮನೆಯ ಮಂದಿರಕ್ಕೆ ಹೋಗಿ ಬಂದು ಸಿದ್ಧನಾದ. (ರಾತ್ರೆ ಅರೆಬರೆ ನಿದ್ದೆ. ಒಂದು ಕನಸು. ಭಾರಿ ಮೆರವಣಿಗೆ. ಮಧ್ಯದಲ್ಲಿ ಪಲ್ಲಕಿಯಲ್ಲಿ ನೆಫರ್‌ಟೀಮ್ ; ಎಡಕ್ಕೆ ಹೇಪಾಟ್, ಬಲಕ್ಕೆ ತಾನು—ಪಲ್ಲಕಿಗಳಲ್ಲಿ; ಜನ ಹರ್ಷೋದ್ಗಾರ ಮಾಡುತ್ತಿದ್ದರು. ಮುಂದುಗಡೆ ತಾನು, ಅನಂತರ ನೆಫರ್‌ಟೀಮ್, ಬಳಿಕ ಹೇಪಾಟ್ ಇರಬೇಕಾಗಿತ್ತು. ಹೋಗಲಿ. ಹೀಗೆಯೇ ಇರಬೇಕು ಎಂದಾದರೆ ಹೀಗೆಯೇ ಇರಲಿ, ಇದು ಕೆಟ್ಟ ಕನಸಂತೂ ಅಲ್ಲ. ಅಮಾತ್ಯನಿಗೆ ಸ್ವಪ್ನದ ವಿಷಯ ಹೇಳಲೋ ಬೇಡವೋ ಎಂಬ ತಾಕಲಾಟ, ಮನಸ್ಸಿನಲ್ಲಿ. ಬೇಡ ಎನಿಸಿತು.

'ಪೆರೋನ ಕನಸು ಪೆರೋಗೆ ಇರಲಿ. ಇದು ನೆಫರ್‌ಟೀಮಳ ಕಿವಿಗೆ ಬಿದ್ದು ಅವಳು ಕುಣಿಯೋದನ್ನು ಬೇರೆ ನಾನು ನೋಡಬೇಕೆ ?')

ಅದು ಅರಮನೆಯ ಒಳಭಾಗದಲ್ಲಿದ್ದ ಮಂತ್ರಾಲೋಚನೆಯ ವಿಶಾಲ ಕೊಠಡಿ. ರತ್ನಖಚಿತ ಸಿಂಹಾಸನ. ಬಂಗಾರದ ಮೆರುಗು ನೀಡಿದ್ದ ಆರೆಂಟು ಪೀಠಗಳು. ಸುತ್ತಲೂ ಮರದ ಅಟ್ಟಣಿಗೆಯ ಮೇಲೆ ಅಲಂಕಾರದ ವಸ್ತುಗಳು; ಬೆಳ್ಳಿಯ ತಟ್ಟೆಯಲ್ಲಿ ಬಂಗಾರದ ಮೀನು, ನೀಲಿ ಒರೆಯೊಳಗೆ ಇರಿಸಿದ ಕಂಚಿನ ಭರ್ಚಿ, ಬಂಗಾರದ ಹಿಡಿಗಳಿದ್ದ ಹೊಳಪು ಕಲ್ಲಿನ ಹೂಜೆ, ಸಿಂಹದ ಚರ್ಮ, ಜಿಂಕೆಯ ಚರ್ಮ, ಅನರ್ಘ್ಯ ಹರಳುಗಳನ್ನು ಕೂಡಿಸಿದ್ದ ಆಲಂಕಾರಿಕ ದೋಣಿ, ರಾ–ಪ್‌ಟಾ–ಅಮನ್ ದೇವರ ಮೂರ್ತಿಶಿಲ್ಪಗಳು....

ಅರಸ ಆಸೀನನಾಗುವುದಕ್ಕೆ ಮೊದಲೆ ಲಿಪಿಕಾರ ಸೆನೆಬ್ ಧಾವಿಸಿ ಬಂದ.

"ಪೆರೋನ ಆಯುರಾರೋಗ್ಯ ವರ್ಧಿಸಲಿ ! ಮಹಾ ಅರ್ಚಕರೂ ಹೆಪ್ಪೆಫ಼್‌ರನರೂ ದಯಮಾಡಿಸಿದ್ದಾರೆ."

ಪೆರೋ ಆತನ ಕಡೆ ನೋಡಲಿಲ್ಲ. 'ಬರಲಿ' ಎಂದು, ದೃಷ್ಟಿಯಿಂದಲೆ, ಅಮಾತ್ಯನಿಗೆ ಸಂಜ್ಞೆ ಮಾಡಿದ.

"ಕರಕೊಂಡು ಬಾ," ಎಂದ ಅಮಾತ್ಯ.

ಲಿಪಿಕಾರ ಹೊರಳಿದೊಡನೆ ಪೆರೋ ಅವಸರವಾಗಿ ಸಿಂಹಾಸನದ ಮೇಲೆ ಕುಳಿತ, ಉದ್ವೇಗವಿಲ್ಲದೆ ಸಮಾಧಾನಚಿತ್ತನಾಗಿರಲು ಯತ್ನಿಸುತ್ತ.

ಅಷ್ಟರಲ್ಲಿ ರಾಣಿ ಯಾವ ಮುನ್ಸೂಚನೆಯೂ ಇಲ್ಲದೆ ರಾಣಿ ಒಳ ಬಂದಳು.

ಪೆರೋಗೆ ಕನಸಿನ ನೆನಪು. ಕಸಿವಿಸಿ. ಆತ ಆಮೆರಬ್‌ನ ಮುಖ ನೋಡಿದ. ಅಮಾತ್ಯ ಅರಸಿಗೆ ಗೌರವ ಸೂಚಿಸಲೆಂದು ಎದ್ದು ನಿಂತ.

ನೆಫರ್‌ಟೀಮ್‌ಗೆ ದುಗುಡ. ಆದರೂ ಅದನ್ನು ಹೊರತೋರಿಸದೆ ಮುಗುಳು ನಗಲು ಯತ್ನಿಸುತ್ತ ಅವಳೆಂದಳು :

"ಮಹಾರಾಣಿ ಪೆರೋ ಸನ್ನಿಧಿಯಲ್ಲಿ ಇರೋದಕ್ಕೆ ಅಮಾತ್ಯರು ಅನು ಮತಿ ನೀಡಬೇಕು."

ಆಸೆರಬ್ ನುಡಿದ :

"ಛೆ ! ಛೆ ! ಎಂಥ ಮಾತು ! ಈ ಸಂದುಕಟ್ಟಿನ ಸಮಯದಲ್ಲಿ ಮಹಾರಾಣಿಯವರು ಪೆರೋ ಸನ್ನಿಧಿಯಲ್ಲಿರೋದು ಅತ್ಯಗತ್ಯ."

ಸಿಂಹಾಸನದ ಎಡಗಡೆ ತುಸು ದೂರದಲ್ಲಿದ್ದ, ಅಮಾತ್ಯ. ಅದರ ಬಲ ಗಡೆಯಲ್ಲಿದ್ದ ಪೀಠದತ್ತ ಮಹಾರಾಣಿ ಸರಿದಳು.

ಆ ಕ್ಷಣ ದ್ವಾರದ ಬಳಿ ಹೆಖ್ವೆಟ್ ಕಾಣಿಸಿಕೊಂಡ.

"ಪೆರೋನ ಆಯುರಾರೋಗ್ಯ ವರ್ಧಿಸಲಿ !"

ಆ ವಂದನೆ ಮುಗಿಯುತ್ತಿದ್ದಂತೆ ಬೆಳ್ಳಿಯ ಪದವಿ ದಂಡದೊಡನೆ ಮಹಾ ಅರ್ಚಕ ಒಳಕ್ಕೆ ಕಾಲಿರಿಸಿದ. (ಪಾದಗಳಲ್ಲಿ ರತ್ನಗಂಬಳಿಯ ಮೇಲೆ ಸಪ್ಪಳ ಮಾಡಲಾರದ ಹಾವುಗೆಗಳು.)

ಮಹಾರಾಣಿಯೂ ಅಮಾತ್ಯನೂ ಬಾಗಿ ನಮಿಸುತ್ತಿದ್ದಂತೆ ಹೇಪಾಟ್ ಅಂದ :

"ಸ್ವರ್ಣದೇವತೆ ಹಾಥೊರ್ ಪೆರೋನ ಮೂಗಿಗೆ ಬಲ ಕೊಡಲಿ."

"ಮಹಾ ಅರ್ಚಕರಿಗೆ ಸ್ವಾಗತ, ಆಸೀನರಾಗಬೇಕು," ಎಂದ ಅರಸ, ಕುಳಿತಲ್ಲಿಂದಲೇ.

ಹೆಖ್ವೆಟ್ ಆಗಲೇ ಅಮಾತ್ಯನ ಮಗ್ಗುಲಿಗೆ ಸರಿದಿದ್ದ. ನೆಫರ್‌ಟೇಮ್ ಅರಸನ ಬಲಗಡೆಯಲ್ಲಿ ಕುಳಿತಳು. ಮಹಾರಾಣಿಯ ಬಲಕ್ಕೆ ತುಸು ದೂರ ದಲ್ಲಿದ್ದ ಆಸನವನ್ನು ಹೇಪಾಟ್ ಆರಿಸಿಕೊಂಡ. ಮಹಾ ಅರ್ಚಕನ ಮೈಯ ಕೂದಲೆಲ್ಲ ಆ ಬೆಳಗ್ಗೆ ಕಿರಿಯ ದೇವಸೇವಕನೊಬ್ಬನ ಕ್ಷೌರದ ಕತ್ತಿಗೆ ಆಹುತಿ ಯಾಗಿತ್ತು. ಛಾವಣಿಯ ಬೆಳಕಿಂಡಿಯಿಂದ ಬರುತ್ತಿದ್ದ ಸೂರ್ಯಪ್ರಭೆಯಲ್ಲಿ ಆವನ ಮಂಡೆ ಹೊಳೆಯಿತು. ಮುಖದ ಮೂಳೆಗಳು ಎದ್ದು ಕಾಣಿಸಿದುವು.

ಅವರೆಲ್ಲ ಆಸೀನರಾದ ಮೇಲೆ ಪೆರೋ ಮಹಾ ಅರ್ಚಕನತ್ತ ನೋಡುತ್ತ, ಮಾತು ಆರಂಭಿಸಿದ :

"ಪ್ರಯಾಣ ಸುಖಕರವಾಗಿತ್ತೆ ?"

ಶಿಷ್ಟಾಚಾರದ ನಾಟಕದಲ್ಲಿ ಮಹಾ ಅರ್ಚಕನೂ ಭಾಗಿಯಾಗಿ "ಹೂಂ," ಎಂದ.

"ಧಾರ್ಮಿಕ ಜಿಜ್ಞಾಸೆಯಲ್ಲಿ ನಿರತರಾಗಿದ್ದರಂತಲ್ಲ ?"

"ಹ್ಞ."

"ಜಿಜ್ಞಾಸೆಯ ಸ್ವರೂಪವೇನು ? ಫಲಿತಾಂಶಗಳೇನು ? ಎಂದು ತಿಳಿಯುವ ಕುತೂಹಲ—ನಮಗೆ, ಗುರುಮನೆಯ ಚಟುವಟಿಕೆಗಳನ್ನು ತಿಳಿದು ಅರಮನೆಗೂ ಪುಣ್ಯಪ್ರಾಪ್ತಿಯಾಗ್ತದೆ."

ನೀರವತೆ. ಹೇಪಾಟ್‌ನ ದವಡೆಯ ಮೂಳೆಗಳು ಮಿಸುಕಿದುವು. ಆತ ಮಹಾರಾಣಿಯಿಂದ ಮೊದಲ್ಗೊಂಡು ಎಲ್ಲರ ಮುಖಗಳನ್ನೂ ಒಂದೊಂದಾಗಿ ದಿಟ್ಟಿಸಿದ. ಕಡೆಯಲ್ಲಿ, ಅವನತಶಿರವಾಗಿ ತನ್ನ ಪಾದಗಳನ್ನು ನೋಡಿದ. 'ಮಹಾ ಅರ್ಚಕ ಕಕ್ಕಾವಿಕ್ಕಿಯಾಗಿದ್ದಾನೆ. ಧಾರ್ಮಿಕ ಜಿಜ್ಞಾಸೆಯ ಬುರುಡೆ ಈಗ ಬಯಲಾಗ್ತದೆ' ಎಂದು ಪೆರೋ—ಅಮಾತ್ಯರಿಬ್ಬರೂ ಮನಸ್ಸಿನಲ್ಲಿ ಸಂತಸ ಪಡುತ್ತಿದ್ದಂತೆಯೇ ಹೇಪಾಟ್ ಸರಕ್ಕನೆ ತಲೆ ಎತ್ತಿ, ಪೆರೋನನ್ನು ನೇರವಾಗಿ ದಿಟ್ಟಿಸಿ ನುಡಿದ :

"ಧಾರ್ಮಿಕ ಜಿಜ್ಞಾಸೆ ನಡೆದೇ ಇಲ್ಲ ಅಂತ ಭಾವಿಸುವ ವ್ಯಕ್ತಿಗಳು ಇರಬಹುದು. ಅಂಥವರನ್ನು ದೇವರು ಕ್ಷಮಿಸಲಿ. ಐಗುಪ್ತ ಜನತೆಯ ವಿಚಾರ ಸರಣಿಯಲ್ಲೇ ಬದಲಾವಣೆ ಉಂಟುಮಾಡುವಂಥಾದ್ದು ಈ ಜಿಜ್ಞಾಸೆ. ನಮ್ಮ ಸಮಾಜ ಅಸ್ತಿತ್ವಕ್ಕೆ ಬಂದು ಎಷ್ಟೋ ಸಹಸ್ರ ವರ್ಷ ಸಂದಿದೆ. ಜೀವನ ಸುಗಮವಾಗಬೇಕಾದರೆ ಧಾರ್ಮಿಕ ವಿಚಾರಗಳಲ್ಲಿ ಸೂಕ್ತ ಸುಧಾರಣೆಗಳನ್ನು ಮಾಡ್ಬೇಕು."

ಅಮಾತ್ಯ ಪೆರೋನ ಕಡೆಗೊಮ್ಮೆ, ನೋಡಿ, ನಡುವೆ ಬಾಯಿ ಹಾಕಿದ :

"ಪ್ರಾಚೀನ ಕಟ್ಟು ಕಟ್ಟಳೆಗಳನ್ನು ಬದಲಾಯಿಸಬೇಕೂಂತ ಮಹಾ ಅರ್ಚಕರ ಅಭಿಮತವಾ ? ಹಾಗೆ ಮಾಡಿದರೆ ಜನರಲ್ಲಿ ಕ್ಷೋಭೆ ಉಂಟಾಗ ಬಹುದಲ್ಲ ?"

ಅಮೆರಬ್‌ನತ್ತ ತಿರುಗದೆ ಪೆರೋನನ್ನೇ ನೋಡುತ್ತ, ಧ್ವನಿಯಲ್ಲಿ ವ್ಯಂಗ್ಯ ಬೆರೆಸುತ್ತ, ಹೇಪಾಟ್ ಅಂದ :

"ಅಮಾತ್ಯರು ಐಗುಪ್ತದ ಅತ್ಯಂತ ಹಿರಿಯ ಆಡಳಿತಾಧಿಕಾರಿ ; ಅರಸನ ಕಣ್ಣು ಕಿವಿ; ರಾಜನ ಹೃದಯವನ್ನು ಮುದಗೊಳಿಸುವ ಸಂದೇಶವಾಹಕ; ಅರಸನ ಮುದ್ರಾಧಾರಕ; ಏಕಮಾತ್ರ ಸಂಗಾತಿ—ಇಂಥ ಮಹಾನುಭಾವನಿಗೆ

ಮಹಾ ಅರ್ಚಕನ ಮಾತನ್ನು ಪೂರ್ತಿ ಕೇಳುವಷ್ಟು ಸಹನೆಯೂ ಇಲ್ಲವಲ್ಲ! ದೇಶದ ದುರದೃಷ್ಟ!"

ಅರಸನೆಂದ:

"ಜಿಜ್ಞಾಸೆಯ ಸಂಗತಿ ಸ್ವಾರಸ್ಯಕರವಾಗಿದೆ. ಮಹಾ ಅರ್ಚಕರು ಮುಂದುವರಿಸ್ಬೇಕು."

ಹೇಪಾಟ್ ಎರಡು ಕ್ಷಣ ಸುಮ್ಮನಿದ್ದ. ಆನ್‌ನಗರಿಯ ರಾ ಮಂದಿರದ ಮುಖ್ಯ ಅರ್ಚಕನೊಡನೆಯೂ, ವೆಸಿಪಟ್ಟಣದ ಅಮನ್ ಮಹಾಮಂದಿರದ ಮುಖ್ಯ ಅರ್ಚಕನೊಡನೆಯೂ ಒಬ್ಬಿಬ್ಬರು ಹಿರಿಯ ದೇವಸೇವಕರೊಡನೆಯೂ ರಾ, ಪ್‌ಟಾ ಮತ್ತು ಅಮನ್ ಮೂವರು ದೇವರಿಗೂ ಸಮಾನ ಸ್ಥಾನ ನೀಡುವ ಬಗೆಗೆ ಮಹಾ ಅರ್ಚಕ ಮಾತನಾಡಿದ್ದ. ಅದಿನ್ನೂ ಅಸ್ಪಷ್ಟ ರೂಪ ದಲ್ಲಿದ್ದ ವಿಚಾರ. ಗುರುಮನೆಯ ಬಲಸಂವರ್ಧನದ ಪ್ರಯತ್ನಕ್ಕೆ ಆ ಜಿಜ್ಞಾಸೆ ಒಳ್ಳೆಯ ಧಾರ್ಮಿಕ ತೆರೆಯಾಗಿತ್ತು. ತನ್ನ ಹೋರಾಟದ ನಿರ್ಣಾಯಕ ಹಂತ ದಲ್ಲಿ ಆ ತೆರೆ ಸರಿದರೂ ತಪ್ಪಲ್ಲ. ಯೋಚನೆಗೆ ಕಡಿವಾಣ ಹಾಕಿ, ಆತ ಮಾತನಾಡಿದ:

"ನಮ್ಮ ಪರಂಪರಾಗತ ದೇವರಾದ ರಾಗೆ ಈಗ ಸಿಗುತ್ತಿರೋ ಮನ್ನಣೆ ಸಾಲದು. ರಾಜಧಾನಿಯಲ್ಲಿರೋ ಕಾರಣ ಕುಶಲ ಕರ್ಮಿಗಳ ದೇವರಾದ ಪ್‌ಟಾಗೆ ವೈಭವದ ಪೂಜೆ ಸಲ್ತದೆ. ದಕ್ಷಿಣ ಭಾಗದ ವೆಸಿಪಟ್ಟಣದ ಅಮನ್ ಪ್ರವಾಸದ ದೇವರು ದಂಡಿನ ದೇವರು ಮಾತ್ರವಲ್ಲ. ಅಮನ್‌ಗೆ ಅಲ್ಲಿನ ಗ್ರಾಮಾಂತರ ಪ್ರದೇಶದಲ್ಲೂ ಅಸಂಖ್ಯ ಭಕ್ತರಿದ್ದಾರೆ. ಈ ಮೂವರು ದೇವರಿಗೂ ಒಂದೇ ಸ್ಥಾನಮಾನ ಲಭಿಸಿದರೆ ಐಗುಪ್ತ ಸಮಾಜದ ಒಗ್ಗಟ್ಟು ಮತ್ತಷ್ಟು ಬಲವಾಗ್ತದೆ. ಇಂಥ ಸುಧಾರಣೆಯಿಂದ ಪ್ರಾಚೀನ ಕಟ್ಟು ಕಟ್ಟಳೆ ಗಳನ್ನು ಮುರಿದಂತಾಗೋದಿಲ್ಲ; ಇನ್ನಷ್ಟು ದೃಢಪಡಿಸಿದ ಹಾಗಾಗ್ತದೆ. (ಅಮಾತ್ಯನ ಕಡೆ ತಿರುಗಿ) ತಿಳೀತೆ?"

ಆಮೆರಬ್‌ಗೆ ಒಂದು ಬಗೆಯ ಮುಖಭಂಗ. ಆದರೂ ಗಾಂಭೀರ್ಯದ ಮುಖಚರ್ಯೆಯನ್ನು ಬದಲಾಯಿಸದೆ ಆತನೆಂದ:

"ನಿಸ್ಸಂದೇಹವಾಗಿಯೂ ಉದಾತ್ತ ವಿಚಾರ. ಗುರುಮನೆಯ ಸಂಪತ್ತನ್ನು ಸಮನಾಗಿ ವಿತರಣೆ ಮಾಡಿದರಾಯ್ತು."

"ಅಪಕ್ವ ಸಲಹೆ. ಹಾಗೆ ಮಾಡಿದರೆ ಬಡತನವನ್ನು ಹಂಚಿದಂತಾಗ್ತದೆ. ಬದಲು ಎಲ್ಲ ಮಂದಿರಗಳ ಸಂಪತ್ತನ್ನೂ ಜಾಸ್ತಿ ಮಾಡ್ಬೇಕು."

"ಸಂಪತ್ತು ಬರೋದು ದುಡಿಮೆಯಿಂದ."

"ದುಡಿಮೆ ಹೆಚ್ಚಲಿ !"

"ಅದಕ್ಕೊಂದು ಮಿತಿ ಇದೆ. ಜನ ಅಸಂತುಷ್ಟರಾಗ್ತಾರೆ."

ಹೇಪಾಟ್‌ನ ಕಣ್ಣುಗಳು ಕೆಂಪಾದುವು; ಶಿರಸ್ಸು ಅದುರಿತು. ಮಾತು ಅವನ ಗಂಟಲಿನಿಂದ ಹೊರಡುವುದರೊಳಗೇ ನೆಫರ್‌ಟೀಮ್ ಅಂದಳು :

"ರಾ–ಪ್‌ಟಾ–ಅಮನ್‌ರಿಗೆ ಸಮಾನ ಸ್ಥಾನ ನೀಡಿಕೆ ಅದ್ಭುತ ಕಲ್ಪನೆ. ಆದರೆ ಸಹಸ್ರಾರು ವರ್ಷಗಳಿಂದ ಅವರನ್ನು ಬೇರೆ ಬೇರೆಯಾಗಿ ಪೂಜಿಸಿದ್ದೇವೆ. ಆ ಭಾವನೇನ ತಿದ್ದೋದು ಅಷ್ಟು ಸುಲಭವಾ ? ಮಹಾ ಅರ್ಚಕರು ಭಕ್ತರ ಶಂಕೆ ಬಗೆಹರಿಸ್ಬೇಕು."

ಹೇಪಾಟ್‌ನ ಸಿಟ್ಟು ಅಂಕೆ ಮೀರದಂತೆ ಮಹಾರಾಣಿ ನೋಡಿಕೊಳ್ಳು ತ್ತಿದ್ದಾಳೆ ಎನಿಸಿತು ಹೆಷ್ಪೆಟ್‌ಗೆ, ಅಮಾತ್ಯನೂ ಮುಗುಳು ನಕ್ಕ. ಬಿಗಿಹಿಡಿದಿದ್ದ ಉಸಿರನ್ನು ಪೆರೋ ನಿಧಾನವಾಗಿ ಬಿಟ್ಟ.

ಮಹಾ ಅರ್ಚಕ ಅನ್ಯಗತಿಯಿಲ್ಲದೆ ಧ್ವನಿಯನ್ನು ತುಸು ಮೃದು ಗೊಳಿಸಿದ :

"ನಿಜ ಈ ಹೊಸ ಕಲ್ಪನೆ ಸರ್ವಮಾನ್ಯವಾಗೋದಕ್ಕೆ ಒಂದು ಸಹಸ್ರ ವರ್ಷವೇ ಬೇಕಾಗಬಹುದು. ಈಗ ಬೀಜ ಬಿತ್ತಿದರೆ ಮುಂದೆ ಯಾವತ್ತೋ ಒಂದು ದಿನ ಫಲ ಕೊಡ್ತದೆ."

ಆರಾಧನೆಯ ದೃಷ್ಟಿಯಿಂದ ನೆಫರ್‌ಟೀಮ್ ಆತನೆಡೆಗೆ ನೋಡಿದಳು. 'ನಿರ್ಲಜ್ಜ', ಎಂದುಕೊಂಡ ಹೆಷ್ಪೆಟ್. ಆಮೆರಬ್ ನಸುನಕ್ಕ. ರಾಣಿಯ ಪ್ರತಿಕ್ರಿಯೆಯನ್ನು ಅರಸ ಗಮನಿಸಲಿಲ್ಲ.

ಅಮಾತ್ಯ ಕಾಯಿ ಸರಿಸಿದ :

"ಧರ್ಮದ ಬೆಳಕು ತೋರಬೇಕಾದ ಗುರು ನಮ್ಮನ್ನು ತೊರೆದರಲ್ಲ ಅಂತ ಚಿಂತೆಗೆ ಈಡಾಗಿದ್ವಿ."

ಹೇಪಾಟ್ ಸ್ವರ ಏರಿಸಿದ :

"ವೃಥಾರೋಪ."

ಸೆಡ್ ಉತ್ಸವದ ಸುದ್ದಿ ರಾಜಧಾನಿಯಲ್ಲಿ ಹಬ್ಬಿತ್ತು."

"ಹಬ್ಬಿಸಿದೋರು ಯಾರು ?"

"ಇದಕ್ಕೆಲ್ಲ ಡಂಗುರ ಅನಗತ್ಯ. ಮಹಾ ಅರ್ಚಕರಿಲ್ಲದೆ ಸೆಡ್ ಉತ್ಸವ ಮುಂದಕ್ಕೆ ಬೀಳ್ತಿದೆ ಅಂತ ಜನ ಗುಸುಗುಸು ಮಾತಾಡಿದ್ದಾರೆ. ಹೀಗಾದರೆ ದೇವ ಮಂದಿರದಲ್ಲಿ, ಮಹಾ ಅರ್ಚಕರಲ್ಲಿ, ಜನರ ನಿಷ್ಠೆ ಉಳಿದೀತೆ ?"

"ಧರ್ಮಗುರುವನ್ನು, ಗುರುಮನೆಯನ್ನು ಮಹಾಪ್ರಭು ಅಸಡ್ಡೆಯಿಂದ ಕಂಡರೆ ಪೆರೋನ ಬಗ್ಗೆ ಜನ ಏನೆಂದಾರು ? ಅವರ ರಾಜಭಕ್ತಿ ಮಾಯವಾಗದೆ ಇದ್ದೀತೆ ?"

"ಪೆರೋ ರಾನ ಅವತಾರವಲ್ಲ ಅನ್ನೋಹಾಗೆ ನೀವು ವರ್ತಿಸಿದರೆ ಈ ದೇಶದ ಗತಿ ಏನಾದೀತು ? ನಂಬಿಕೆ ಕಳೆದುಕೊಂಡ ಸಮಾಜ ಬಹಳ ಕಾಲ ಇರೋದು ಸಾಧ್ಯವೆ ?"

"ದೈವದ್ರೋಹಿ ಪೆರೋ ಖೂಫುನ ಅನಂತರ ಆದದ್ದೇನು ? ಬೇರೆ ಪೆರೋ ಬರಲಿಲ್ಲವಾ ?"

"ಯಾವ ಪೆರೋನೂ ಶಾಶ್ವತವಲ್ಲ; ಹಾಗೆಯೇ ಯಾವ ಧರ್ಮಗುರುವೂ ಶಾಶ್ವತವಲ್ಲ—ಬಲ್ಲಿರಾ ?"

"ಧರ್ಮಗುರು ಇದ್ದರೇನೇ ರಾ ಪ್ರತಿನಿಧಿ ಪೆರೋಗೆ ಕಿರೀಟ ಧಾರಣೆ !"

"ರಾ ಪ್ರತಿನಿಧಿಯ ಒಪ್ಪಿಗೆಯಿಂದಲೇ ಮಹಾ ಅರ್ಚಕನ ಆಯ್ಕೆ, ನೇಮಕ !"

ಮಹಾರಾಣಿ ರಾಗವಾಗಿ, ದೃಢವಾಗಿ ಅಂದಳು :

"ಐಗುಪ್ತದ ದೈವಸಂಭೂತ ರಾಜವಂಶದ ಸೌಭಾಗ್ಯ. ಮಹತ್ವದ ಧಾರ್ಮಿಕ ಜಿಜ್ಞಾಸೆ ಮುಗಿಸಿ ಧರ್ಮಗುರು ರಾಜಧಾನಿಗೆ ವಾಪಸಾಗಿದ್ದೀರಿ. ಸೆಡ್ ಉತ್ಸವ ನಡೀತದೆ. ಪ್ರಜೆಗಳು ಆನಂದದಿಂದ ಕುಣಿದಾಡ್ತಾರೆ."

ಹೇಪಾಟ್ ಆಕೆಯ ಕಡೆ ತಿರುಗಿ, ಕೊಂಚ ಸ್ವರ ಬದಲಿಸಿ, ಅಂದ :

"ಸೆಡ್ ಉತ್ಸವಕ್ಕೆ ಧಾರ್ಮಿಕ ಒಪ್ಪಿಗೆ ನೀಡೋದಕ್ಕೆ ಮುಂಚೆ ಇತ್ಯರ್ಥ ವಾಗಬೇಕಾದ ವಿಷಯಗಳಿವೆ."

(ಇದು ಬಲಿಗೆ ಸಂಬಂಧಿಸಿದ್ದು—ಎಂದುಕೊಂಡಳು ನೆಫರ್‌ಟೀಮ್.)

"ಆಗಲಿ, ಆಗಲಿ."

"ಸರು ಸಭೆಯಲ್ಲಿ ದೇಶದ ಧರ್ಮಗುರುವನ್ನು ಹೀಗಳೆಯಲಾಯಿತಂತೆ ಹೌದೆ ?"

"ಸುಳ್ಳು, ಮಹಾ ಅರ್ಚಕರ ಪ್ರತಿಷ್ಠೆಗೆ ಧಕ್ಕೆ ಉಂಟಾಗೋ ಹಾಗೆ ಯಾರೂ ನಡಕೊಂಡಿಲ್ಲ," ಎಂದ ಹೆಖ್ಸೆಟ್.

ಆತನತ್ತ ಒಮ್ಮೆ ನೋಡಿ ಆಮೆರಬ್ ನುಡಿದ:

"ಅಸ್ವಸ್ಥ ಸಂಬಂಧಿಕರನ್ನು ನೋಡೋದಕ್ಕೇಂತ ಕೆಲವರು ಆನ್‌ನಗರಿಗೆ ಹೋಗ್ತಾ ಇದ್ರು."

ಹೇಪಾಟ್ ಕಿರಿಚಿದ:

"ದೇವ ಸೇವಕರ ಮೇಲೆ ಬೇಹುಗಾರಿಕೆಯ ಆರೋಪ ಹೋರಿಸ್ತಿದೀರ?"

ಪೆರೋ ಅಂದ:

"ಪ್ರಜೆಗಳು ಏನು ಹೇಳ್ತಿದಾರೆ ಅಂತ ದೇಶದ ನಾನಾ ಭಾಗಗಳ ಅರ್ಚಕ ವರ್ಗ ತಿಳಿಸುವ ರಹಸ್ಯ ಮಾಹಿತಿಯನ್ನು ಆಧರಿಸಿ ರಾಜ್ಯಭಾರ ನಡೆಯೋದು ಪ್ರಾಚೀನ ಕಟ್ಟಳೆ."

"ಆಗ ನಾವು ನಿಮ್ಮ ಕಣ್ಣು ಕಿವಿ ಆಗಿದ್ದೆವು. ಈಗ ಆ ಬಿರುದು ಅಮಾತ್ಯರಿಗೆ ಬಂದಿದೆ !"

ನೆಫರ್‌ಟೇಮಳ ಸಾಂತ್ವನದ ಧ್ವನಿ ಮತ್ತೆ ಕೇಳಿಸಿತು:

"ವಿಷಯ ತಿಳಿಯೋ ಕುತೂಹಲ ಸ್ವಾಭಾವಿಕ. ಅದನ್ನು ಬೇಹುಗಾರಿಕೆ ಅಂತ ಕರೀಬೇಕಾದ ಅಗತ್ಯವೇನೋ?........"

ಮಹಾರಾಣಿಯನ್ನೊಮ್ಮೆ ದಿಟ್ಟಿಸಿ ಪೆರೋ ವಾಗ್ಬಾಣ ಪ್ರಯೋಗಿಸಿದ:

"ರಾ ಸಂತಾನವಾದ ನಾವು ಧಾರ್ಮಿಕ ವಿಷಯಗಳಲ್ಲಿ ಯಾವತ್ತೂ ಹಸ್ತಕ್ಷೇಪ ಮಾಡೋದಿಲ್ಲ."

"ಅರಮನೆ ವಿಷಯಗಳಲ್ಲಿ ಗುರುಮನೆ ಕೈ ಹಾಕ್ತಿದೆ ಅನ್ನುತ್ತೀರಾ ?"

ಅಮಾತ್ಯ ತನ್ನ ದಾಳವನ್ನು ಮುಂದಿಟ್ಟ, ಅಡ್ಡಗಟ್ಟಲೆಂದು.

"ಮಹಾಪ್ರಭುಗಳು ಹಾಗೆ ಅನ್ನೋದಿಲ್ಲ. ಹಲವರಲ್ಲಿ ಅಂಥ ಭಾವನೆ ಮೂಡಿದೆ ಅಂತ ಅವರಿಗೆ ವ್ಯಥೆ. ವಿಚಾರಣೆಗೆ ಗುರಿಯಾಗಬೇಕಾಗಿದ್ದ ಒಬ್ಬ ಉದ್ಧಟ ಅಧಿಕಾರಿಗೆ ಮಹಾ ಅರ್ಚಕರ ಕೃಪಾಶ್ರಯ ದೊರೆತಿದೆ."

ಅಮಾತ್ಯ ದುರ್ಬಲನಾಗಿದ್ದಂತೆ ಹೇಪಾಟ್‌ಗೆ ಅನಿಸಲಿಲ್ಲ. ತಾನು ಪಟ್ಟು ಬಿಡಬಾರದೆಂದು, ಅವನು ಸತ್ಯಕ್ಕೆ ಸುಳ್ಳನ್ನೂ ಬೆರೆಸಿದ.

"ಧರ್ಮಗುರುವಿನ ಭೇಟಿಗೆ ಎಷ್ಟೋ ಜನ ಅಧಿಕಾರಿಗಳೂ ಪ್ರಾಂತಪಾಲರೂ ಬರ್‍ತಾರೆ. ಅವರನ್ನೆಲ್ಲ ಉದ್ಧಟರು ಅಂತ ಕರೀತೀರಾ?"

ಮಹಾ ಅರ್ಚಕ ಸುಳ್ಳಾಡುತ್ತಿದ್ದಾನೆ ಎನಿಸಿತು ಅಮಾತ್ಯನಿಗೆ. ಸುಳ್ಳಿಗೆ ಪ್ರತಿಯಾಗಿ ಸುಳ್ಳೇ ಬೇಕು.

"ಟೆಹುಟಿಯ ಸಿಡುಕು ದುಡುಕು ಒಂದು ಪ್ರಾಂತ ಬಂಡಾಯ ಏಳೋದಕ್ಕೆ ಕಾರಣವಾಯ್ತು. ಆ ಅಧಿಕಾರಿಯ ಅಂಕೆಮೀರಿದ ವರ್ತನೆ ಬಗ್ಗೆ ಬೇರೆ ಪ್ರಾಂತಗಳಿಂದಲೂ ದೂರುಗಳು ಬಂದಿವೆ."

"ಟೆಹುಟಿ ಮೇಲೆ ರಾಜದ್ರೋಹದ ಆರೋಪ ಹೊರಿಸಿ ಅವನನ್ನು ವಿಚಾರಣೆಗೆ ಗುರಿಪಡಿಸೋ ಯೋಜನೆ ಏನಾದರೂ ಇದ್ದರೆ, ಅದನ್ನು ಬಿಟ್ಬಿಡಿ !"

ನೆಫರ್‌ಟೀಮ್ ಅಂದಳು:

"ವಿಚಾರಣೆಯ ಪ್ರಸ್ತಾಪ ಯಾರೂ ಮಾಡಿಲ್ವಲ್ಲ...."

ಅಮಾತ್ಯನಿಗೆ ಸಂತಸ. ಮೊದಲ ಸುತ್ತಿನಲ್ಲಿ ಅವನಿಗೆ ಜಯ. ಟೆಹುಟಿ ಪ್ರತಿಸ್ಪರ್ಧಿಯಾಗುವ ಮಾತು ದೂರ ಉಳಿಯಿತು. ಈ ಸಲ ಅವನನ್ನು ದಂಡಿಸುವುದಕ್ಕಾಗುವುದಿಲ್ಲ, ಅಷ್ಟೆ.

ಹೇಪಾಟ್ ಮಹಾರಾಣಿಯತ್ತ ನೋಡಿ ಸ್ವರ ಬದಲಾಯಿಸದೆಯೇ ಕಾಯಿ ಸರಿಸಿದ :

"ವಿಚಾರಣೆಗೆ ನಡೀಬೇಕಾದ್ದು ಟೆಹುಟೀದ್ದಲ್ಲ— ನೀರಾನೆ ಪ್ರಾಂತದ ಬಂಡಾಯಗಾರರ ನಾಯಕನದು. ಆತ ರಾಜ ಅತಿಥಿಯಾಗಿದ್ದಾನೆ, ಅಮಾತ್ಯರ ಪ್ರೀತ್ಯಾದರಗಳಿಗೆ ಪಾತ್ರನಾಗಿದ್ದಾನೆ—ಹೌದೆ?"

ಅಮಾತ್ಯ ಉತ್ತರಿಸಿದ:

"ರಾಜ ನೀತಿ ಅರಿಯದ ಅವಿದ್ಯಾವಂತರು ಮಹಾ ಅರ್ಚಕರಿಗೆ ಆ ರೀತಿ ವರದಿ ಮಾಡಿರ್ಬೇಕು. ಮಹಾ ವೈದ್ಯರೂ ಆದ ನಿಮಗೆ ತಿಳಿಯದ್ದಲ್ಲ? ಒಂದು ಕಾಹಿಲೇನ ಗುಣ ಪಡಿಸೋದಕ್ಕೆ ಬೇರೆ ಬೇರೆ ವಿಧಾನಗಳಿವೆ."

"ಪಾಪ! ವೈದ್ಯಕೆ ವಿಷಯ ಅಮಾತ್ಯರು ಮಾತಾಡಬಾರದು. ಬಂಡಾಯ ರೋಗಕ್ಕೆ ಶಸ್ತ್ರಕ್ರಿಯೆಯೊಂದೇ ಮದ್ದು ! ಅವನನ್ನು ನ್ಯಾಯ ಸ್ಥಾನದಲ್ಲಿ

ನಿಲ್ಲಿಸಿ, ಶಿಕ್ಷೆ ವಿಧಿಸಿ, ಐಗುಪ್ತಕ್ಕೆ ತಟ್ಟಿರೋ ಕಳಂಕವನ್ನು ತೊಡೆದು ಹಾಕ್ಬೇಕು.

ಮೌನದ ಪ್ರತಿಕ್ರಿಯೆ. ಪೆರೋ ಆ ನೀರವತೆಯನ್ನು ಮುಕ್ತಾಯ ಗೊಳಿಸಿದ.

"ಸೆಡ್ ಉತ್ಸವಕ್ಕೆಂತ ಆತನನ್ನು ರಾಜಧಾನಿಗೆ ಕರೆಸಿದ್ದೇವೆ."

ಮಹಾರಾಣಿ ಸಿಕ್ಕನ್ನು ಬಿಡಿಸಿದಳು :

"ಸೆಡ್ ಉತ್ಸವ ಮುಗಿಯಲಿ. ಆಮೇಲೆ ವಿಚಾರಣೆ ನಡೆಸಿದ ರಾಯ್ತು."

ಹೇಪಾಟ್ ಏರುದನಿಯಲ್ಲೇ ನುಡಿದ :

"ಉತ್ಸವದ ದಿವಸ ಅವನನ್ನು ಬಂಧಿಸ್ಬೇಕು ; ಮರುದಿನವೇ ವಿಚಾ ರಣೆ !"

ಪೆರೋ ತನ್ನೆಡೆಗೆ ನೋಡುತ್ತಿದ್ದಂತೆ ಅಮಾತ್ಯನೆಂದ :

"ಆಗಬಹುದು, ಆಗಬಹುದು."

ಹೇಪಾಟ್‌ಗೆ ಜಯ ಈ ಸುತ್ತಿನಲ್ಲಿ. ಆದರೆ ಈ ಗೆಲುವು ಯಾವ ಶ್ರಮವೂ ಇಲ್ಲದೆ ಲಭಿಸಿತೆಂದು ಆತನಿಗೆ ಅಸಮಾಧಾನ. ಕಂಪಿಸುವ ಸ್ವರದಲ್ಲಿ ಅವನೆಂದ :

"ಕೇಳಿ ! ಹೇಳ್ತೇನೆ ! ಮಾತು ಹೊರಗೆ ಹಬ್ಬಿ, ಆ ನೀರಾನೆ ಕ್ರಿಮಿ ಎಲ್ಲಾದರೂ ತಪ್ಪಿಸಿಕೊಂಡರೆ, ಅಮಾತ್ಯರ ಅಧಿಕಾರ ಉಳಿಯೋದಿಲ್ಲ ! ದೇಶ ದಲ್ಲಿ ಕ್ಷೋಭೆ ಉಂಟಾಗ್ತದೆ !"

ನೆಫರ್‌ಟೀಮಳ ಗುಂಡಿಗೆ ಬಡಿತ ತೀವ್ರವಾಯಿತು. ಪೆರೋ ಗದ್ದುಗೆ ಬಿಟ್ಟು ಕೊಟ್ಟು ರಾಜಕುಮಾರ ಪಟ್ಟವನ್ನೇರುವ ಸಾಧ್ಯತೆ ?....ಆದರೆ ತನ್ನದೇ ಜಾಡು ಹಿಡಿಯಿತು ಮಹಾ ಅರ್ಚಕನ ಗಂಟಲು....

"ನೀರಾನೆ ಪ್ರಾಂತದಲ್ಲಿ ದೈವಭೀತಿ ನಾಶವಾಗಿದೆ. ಅಜ್ಞ ಜನ ಸೆತ್‌ನ ಆರಾಧಕರಾಗಿದ್ದಾರೆ. ದೇಶದ ದೃಷ್ಟಿ ಆ ಪ್ರಾಂತದ ಮೇಲೆ ನೆಟ್ಟಿದೆ. ಅಲ್ಲಿ ನಮಗೆ ಸೋಲಾದರೆ ಇಡೀ ದೇಶ ಅರಾಜಕವಾಗ್ತದೆ. ಬಂಡಾಯ ನಾಯಕನ ವಿಚಾರಣೆ ಮುಗಿಯುತ್ಲೇ ಪ್ಟಾದೇವರ ಜತೆ ನಾನು ದಕ್ಷಿಣಕ್ಕೆ ಪ್ರವಾಸ

ಹೋಗ್ತೀನೆ. ನೀರಾನೆ ಪ್ರಾಂತದ ಪ್ರಜೆಗಳು ಮತ್ತೆ ದೇವರ ದಾರಿ ತುಳಿಯೋ ಹಾಗೆ ಮಾಡ್ತೀನೆ."

"ಇದು ಎಲ್ಲರಿಗೂ ಹರ್ಷ ನೀಡುವ ಯೋಜನೆ !" ಎಂದಳು ಅರಸಿ.

"ಅದು ಧರ್ಮದ ಜೈತ್ರ ಯಾತ್ರೆ. ಆಗ ದುಷ್ಟರು ದಂಡನೆಗೆ ಗುರಿ ಯಾಗ್ತಾರೆ; ಶಿಷ್ಟರು ದೈವಕೃಪೆಗೆ ಪಾತ್ರರಾಗ್ತಾರೆ. ಈ ದಿಗ್ವಿಜಯಕ್ಕೆ ದಂಡಿನ ಬೆಂಬಲ ಬೇಕು. ಸೈನ್ಯ ಗಡಿಯಿಂದ ರಾಜಧಾನಿಗೆ ಇನ್ನೂರು ಯೋಧರನ್ನು ಕರೆಸಿ."

ಅಮಾತ್ಯ ಆತಂಕಕ್ಕೊಳಗಾದ. ಏನಾದರೂ ಒಳಸಂಚು ? ಹೇಪಾಟ್‌ನ ಮನಸ್ಸಿನಲ್ಲಿರುವುದೇನು ? ಧರ್ಮ ಯಾತ್ರೆಯೋ ? ದಂಡಯಾತ್ರೆಯೋ ? ಹೆಶ್ವಿಟ್ ತಿಳಿಸಿದ್ದ ಆ ಸುದ್ದಿ ? ಸೈನ್ಯಗಡಿಯ ದಂಡನಾಯಕ ಅಮೆನೆ-ಮೊಪೆಟ್ ಜತೆ ಮಹಾ ಅರ್ಚಕ ಬೆಳೆಸಿರಬಹುದಾದ ಸ್ನೇಹ ?

ಪೆರೋಗೆ ಕಸಿವಿಸಿ. ಆತ ಅಮಾತ್ಯನ ಮುಖ ನೋಡಿದ.

ಹೆಶ್ವಿಟ್ ಯೋಚಿಸಿದ : ಭೂಮಾಲಿಕರೊಡನೆ ಹೇಪಾಟ್ ನಡೆಸಿದ್ದ ಸಮಾಲೋಚನೆ, ದಂಡನ್ನು ಒಲಿಸಿಕೊಳ್ಳಲು ಮಾಡಿರುವ ಪ್ರಯತ್ನ ಇದನ್ನೆಲ್ಲ ಬಯಲಿಗೆಳೆಯಲೆ ? ಅಮಾತ್ಯನ ಮನಸ್ಸಿನಲ್ಲಿ ಏನಿದೆಯೋ ?

ಮಹಾರಾಣಿ ಕಕ್ಕಾವಿಕ್ಕಿಯಾದಳು. ಸದ್ಯದ ಮಟ್ಟಿಗೆ ಸಮಸ್ಯೆ ಶಾಂತ ವಾಗಿ ಬಗೆ ಹರೀತಿದೆ ಎನ್ನುವಾಗಲೇ ಪುನಃ ಬಿಕ್ಕಟ್ಟು ತಲೆದೋರುತ್ತಿದೆಯಲ್ಲ ? (ಒಳಮನಸ್ಸಿನಲ್ಲಿ—ಪ್ರಾಯಶಃ ಇನ್ನೂ ಒಂದೆರಡು ವರ್ಷ....ಮಹಾ ಅರ್ಚ ಕನ ಬೆಂಬಲ ನಾನು ಪಡೆಯಲೇ ಬೇಕು....ಆಮೇಲೆ ಸಮಯ ಸಾಧಿಸಿ ರಾಜ ಕುಮಾರನಿಗೆ....)

ರಾಜಕೀಯ ಮುತ್ಸದ್ದಿ ಆಮೆರಬ್ ಒಳಗಿನ ಅಳುಕನ್ನು ಹತ್ತಿಕ್ಕಿ, ಧ್ವನಿ ಯಲ್ಲಿ ದೃಢತೆ ತುಂಬಿ ನಿಧಾನವಾಗಿ ಅಂದ :

"ಸೆಡ್ ಉತ್ಸವಕ್ಕೆ ಹೇಗಿದ್ದರೂ ದಂಡಿನ ಒಂದು ಭಾಗವನ್ನು ಕರೀಬೇಕು. ದಂಡನಾಯಕ ಅಮೆನೆಮೆಪೆಟ್‌ನನ್ನೂ ಬರಹೇಳ್ತೀನೆ. ('ತಿಳಿದುಕೋ, ಹೇಪಾಟ್, ನಿನ್ನ ಗೂಢ ಯೋಚನೆ ನಾನು ಬಲ್ಲೆ.') ನೀರಾನೆ ಪ್ರಾಂತದಲ್ಲಿ ಶಾಂತಿ ಸ್ಥಾಪಿಸೋದಕ್ಕೆ ಯೋಧರನ್ನು ಬಳಸೋದರಲ್ಲಿ ತಪ್ಪಿಲ್ಲ."

"ಸದ್ಯಃ !" ಎಂದು ಮನಸ್ಸಿನೊಳಗೇ ಉದ್ಗರಿಸಿದಳು, ಮಹಾರಾಣಿ.

ಅಮಾತ್ಯ ಹೆಖ್ಮೆಟ್‌ನತ್ತ ಹೊರಳಿ ಕೇಳಿದ :

"ಸರು ಮಹಾಮಂಡಲಿಯ ಹಿರಿಯ ಸದಸ್ಯರ ಅಭಿಪ್ರಾಯವೇನೊ ?"

ಅಮಾತ್ಯನ ಭರ್ಚಿ ಒರೆ ಸೇರಿದ್ದು ಸ್ಪಷ್ಟವಾಗಿತ್ತು. ಹೆಖ್ಮೆಟ್ ತನ್ನ ಹಿರಿತನದ ನೆಲೆಯಿಂದ ತಲೆ ಅಲುಗಿಸುತ್ತ, ಆನ್ ನಗರಿಯಲ್ಲಿ ತಾನು ಲಿಪಿ ಸುರುಳಿ ಬರೆಸಿದ್ದನ್ನು ಜ್ಞಾಪಿಸಿಕೊಳ್ಳುತ್ತ ನುಡಿದ :

"ಮಹಾಪ್ರಭುವಿನ ಸನ್ನಿಧಿಯಲ್ಲಿ ನಾನು ಅರಿಕೆ ಮಾಡಿಕೊಳ್ಳೋದು ಇಷ್ಟು : ಪ್ರತಿಯೊಬ್ಬನೂ ತನ್ನ ತನ್ನ ಕರ್ತವ್ಯ ಮಾಡ್ತಾ ಇದ್ರೆ ಪ್ರಭುತ್ವದ ನಾವೆ ಎಲ್ಲಿಯೂ ಮಡುವಿನಲ್ಲಿ ತತ್ತರಿಸೋದಿಲ್ಲ; ನೀರಿನಡಿಯ ಮರಳು ದಿಬ್ಬಕ್ಕೆ ಅದು ಬಡಿಯೋದಿಲ್ಲ, ಏಕತಾನದಲ್ಲಿ ಹುಟ್ಟು ಹಾಕಿದರೆ ನಾವೆ ನೇರ ದಾರಿಯಲ್ಲಿ ಚಲಿಸ್ತದೆ. ಅಂತಃಕಲಹದಿಂದ ಕಂದಾಯಕ್ಕೆ ಸಂಚಕರ, ಶಕ್ತಿ ಹ್ರಾಸ, ನಿದ್ರಾನಾಶ...."

ಅಷ್ಟು ಹೇಳಿ ಹೆಖ್ಮೆಟ್ ಒಂದೊಂದಾಗಿ ಎಲ್ಲರ ಮುಖಗಳನ್ನೂ ಹೆಮ್ಮೆ ಯಿಂದ ನೋಡಿದ.

ಈ ಅಂದಗೇಡಿಗೆ ಪಾಂಡಿತ್ಯದ ಬೆಡಗು ಬೇರೆ—ಎಂದುಕೊಂಡಳು ನೆಫರ್‌ಟೇಮ್. ಅಮಾತ್ಯನಿಗೆ ಅಸೂಯೆ. ಪೆರೋ ನಸುನಕ್ಕ. ಮಹಾ ಅರ್ಚಕ ಮುಖದ ಸ್ನಾಯುಗಳನ್ನು ಸಡಿಲಿಸಿದ.

ಆ ಮುಖ ಭಾವಗಳಿಂದ ಸಂತೃಪ್ತನಾಗಿ ಹೆಖ್ಮೆಟ್ ಮುಂದುವರಿದ :

"ನನ್ನ ಅಭಿಪ್ರಾಯವನ್ನು ಚುಟುಕಾಗಿ ಹೀಗೆ ಹೇಳಬಹುದು. ಮಾಟ್ ! ಮಾಟ್! ಪ್ರತಿಯೊಬ್ಬನ ನಡೆಯೂ ನುಡಿಯೂ ಮಾಟ್‌ನಂತೆ. ಮಹಾಮಂದಿರದ ವಿಷಯದಲ್ಲಿಯೂ ಮಾಟ್, ಮಹಾಮನೆಯ ವಿಷಯದಲ್ಲಿಯೂ ಮಾಟ್.... ಸಹನೆ, ಸಮತೋಲನ, ಸಮನ್ವಯ, ಸುಖ, ಶಾಂತಿ...."

ತಲೆದೂಗಿ ಪೆರೋ ಅಂದ :

"ಇದನ್ನು ಬರೆದಿಡಬೇಕು."

ಹೆಖ್ಮೆಟ್ ಪೀಠದಿಂದೆದ್ದು ತಲೆಬಾಗಿ ವಂದಿಸಿ, "ಆಗಲೇ ಬರೆಸಿದ್ದೇನೆ" ಎಂದು ಹೇಳಿ, ಮತ್ತೆ ಆಸೀನನಾದ.

ನೆಫರ್‌ಟೇಮ್ ಎದ್ದು, ಸುತ್ತಲೂ ದೃಷ್ಟಿ ಹಾಯಿಸಿ ಹೇಳಿದಳು.

"ನಾನು ಇವತ್ತು ಪರಮ ಸುಖಿ. ರಾನನ್ನೂ ರಾ ವಂಶವನ್ನೂ ಕೆಲ ಸಮಯದಿಂದ ಕವಿದಿದ್ದ ಕೆಟ್ಟ ಮೋಡವನ್ನು ಧರ್ಮಗುರು ಚೆದರಿಸಿಬಿಟ್ಟಿದ್ದಾರೆ.

ಆನ್‌ನಗರಿಯಿಂದ ರಾಜಧಾನಿಗೆ ಅವರು ಮರಳಿದ ಕ್ಷಣದಿಂದ ಶುಭವೇ ಆಗ್ತಿದೆ. ರಾಜಕುಮಾರ ನಿನ್ನೆ ತನ್ನ ಮೊದಲ್ನೇ ಕಾಡು ಬಾತುಕೋಳಿಯನ್ನು ಬೇಟೆ ಯಾಡಿದ್ದನ್ನು ನಾನು ನಿಮ್ಮ ಗಮನಕ್ಕೆ ತರಬೇಕು. (ಪೆರೋನ ಹುಬ್ಬುಗಳು ಗಂಟಿಕ್ಕಲು ಯತ್ನಿಸಿ ಸುಮ್ಮನಾದುವು. 'ನಿನ್ನೆಯೇ ಈ ಸಂಗತಿಯನ್ನು ನನಗೆ ತಿಳಿಸಲಿಲ್ಲವಲ್ಲ ಈಕೆ ?') ಮಹಾ ಅರ್ಚಕರು ಅರಮನೆಗೆ ಭೋಜನಕ್ಕೆ ಬಂದಾಗಲೇ ಆ ಬಾತುಕೋಳೀನ ವಿಧ್ಯುಕ್ತವಾಗಿ ಅಡುಗೆ ಮಾಡ್ತಿರೋದು ಅಪೂರ್ವ ಸಂಯೋಗ. ಧರ್ಮಗುರು ಅರಮನೆಯ ಆತಿಥ್ಯ ಸ್ವೀಕರಿಸಿ ಎಷ್ಟೋ ಕಾಲವಾಯಿತು. ಇವತ್ತು ಇಲ್ಲಿ ಉಂಡು ನಮ್ಮನ್ನು ಧನ್ಯರಾಗಿ ಮಾಡ್ಬೇಕು."

ರಾಣಿಯ ನಾದ ಮಾಧುರ್ಯಕ್ಕೆ ಭೇರಿಯ ಪಕ್ಕವಾದ್ಯವಾಯಿತು, ಪೆರೋನ ಮಾತು.

"ಎಲ್ಲಿ ರಾಜಕುಮಾರ ?"

"ಬೇಟೆಯಾಡಿದ ಬಾತುಕೋಳಿಯ ಜತೆ ಅರಮನೆಯ ಮಂದಿರಕ್ಕೆ ಕಳಿಸಿ ದ್ದೇನೆ—ಪೂಜೆಗೋಸ್ಕರ."

ಪೆರೋ ಒಬ್ಬನಿಗೇ ಅಲ್ಲ. ಉಳಿದವರಿಗೂ ಕೇಳಿಸಲೆಂದು ಹೇಳಿದ ಉತ್ತರ ಅದು.

ಅಷ್ಟು ಹೇಳಿ, "ನಾನು ಬರಲೆ? ಒಳಗಿನ ಉಸ್ತುವಾರಿಗೆ ಹೋಗ್ಬೇಕು" ಎನ್ನುತ್ತ, ನೆಫರ್‌ಟೀಮ್ ನಿರ್ಗಮಿಸಿದಳು.

ಮೌನ ನೆಲೆಸಲು ಅವಕಾಶ ನೀಡದೆ ಹೆಪ್ಪೆಟ್‌ನನ್ನು ಕುರಿತು ಅರಸನೆಂದ :

"ಸಿಂಹಾಸನಕ್ಕೆ ನೀವು ಸಲ್ಲಿಸಿದ ಸೇವೆಯನ್ನು ಐಗುಪ್ತ ದೇಶ ಮರೀ ಬಾರದು. ನಮ್ಮ ಗೋರಿಯಲ್ಲಿ ನಿಮ್ಮ ಚಿತ್ರವನ್ನೂ ಬರಸಲು ಆಗಲೇ ಒಪ್ಪಿಗೆ ನೀಡಿದ್ದೇನೆ. (ಕುಳಿತಲ್ಲಿಂದಲೇ ಧನ್ಯವಾದ ಸೂಚಕವಾಗಿ ಪೆರೋಗೆ ಹೆಪ್ಪೆಟ್ ವಂದಿಸಿದ. ಅರಸ ಅಮಾತ್ಯನತ್ತ ಹೊರಳಿದ.) ಮಹಾ ಅರ್ಚಕರು ಅರ ಮನೆ ಮಂದಿರಕ್ಕೆ ಸಂದರ್ಶನ ನೀಡಬಹುದು. ಅರಮನೆಯ ವಿಸ್ತರಣದಲ್ಲಿ ನಾವು ಮಾಡಿರೋ ಸುಧಾರಣೆಗಳನ್ನು ಅವರು ನೋಡಲಿ. (ಸಿಂಹಾಸನದಿಂದ

ಏಳುತ್ತ ಮಹಾ ಅರ್ಚಕನತ್ತ ತಿರುಗಿ) ಭೋಜನದ ವೇಳೆ ಭೇಟಿ ಯಾಗೋಣ."

ಆಮೆರಬ್, ಹೇಸಾಟ್, ಹೆಪ್ಟೆಟ್—ಮೂವರೂ ಎದ್ದರು. ಮಹಾ ರಾಣಿ ಹೋದ ದಿಕ್ಕನ್ನು ಅನುಸರಿಸಿ ಅರಸ ಹೊರನಡೆದ.

ಹೆಪ್ಟೆಟ್ ಸಂತುಷ್ಟ, ತಾನು ಅಮಾತ್ಯನಾಗದಿದ್ದರೇನಾಯಿತು? ಅಮಾತ್ಯನ ಸಮಾನ—ಅಥವಾ ಆತನಿಗಿಂತಲೂ ದೊಡ್ಡವನು—ಎನ್ನುವ ರೀತಿ ಯಲ್ಲಿ ನಡೆದುಕೊಳ್ಳಲು ಅವಕಾಶ ದೊರೆಯಿತಲ್ಲ? ಸದಾ ಕಾಲವೂ ಜನ ನೆನ ಪಿಡಲು ಯೋಗ್ಯವಾದ ಮಾತುಗಳನ್ನು ತಾನು ಆಡಿದ್ದೆ....

ಆಮೆರಬ್‌ಗೆ ಸಾಕಷ್ಟು ಸಮಾಧಾನ. ಪರಿಸ್ಥಿತಿ ಇನ್ನಷ್ಟು ಬಿಟ್ಟದ್ದರೆ ದೇಶಕ್ಕೆ ಘೋರ ವಿಪತ್ತು ಒದಗುತ್ತಿತ್ತು. ವೈಯಕ್ತಿಕವಾಗಿ ತಾನೂ ಸಂಕಟಕ್ಕೆ ಸಿಲುಕುತ್ತಿದ್ದೆ....

ಮಹಾ ಅರ್ಚಕನಿಗೆ ತಕ್ಕಮಟ್ಟಿನ ತೃಪ್ತಿ. ಆತ ಯೋಚಿಸಿದ : ತಾನು ಬಲಶಾಲಿ ಎಂಬುದನ್ನು ತೋರಿಸಿಕೊಟ್ಟದ್ದಾಯಿತು ; ನೀರಾನೆ ಪ್ರಾಂತವನ್ನು ಬಗ್ಗು ಬಡಿದಮೇಲೆ ತನ್ನ ಹಿರಿಮೆ ಅಬಾಧಿತ ; ಟೆಹುಟಿಗೆ ನಿರಾಶೆಯಾಗ ಬಹುದು ; ಇನ್ನೂ ಸ್ವಲ್ಪ ಕಾಲ ಆತ ಕಾಯಲಿ.... ಹತ್ತು ಸಹಸ್ರ ದಾಸದಾಸಿ ಯರನ್ನೂ ಹತ್ತು ಸಹಸ್ರ ದೆಬೆನ್ ಬಂಗಾರವನ್ನೂ ಮಹಾಮಂದಿರಕ್ಕೆ ಅರಮನೆ ನೀಡಬೇಕು ; ಸೆಡ್ ಉತ್ಸವದ ಸಂಬಂಧದ ಕಾಣಿಕೆ ಅಂತ ಕೊಡಲಿ....

ಅಮಾತ್ಯ ಹೇಸಾಟ್‌ಗೆ ಹೇಳಿದ :

"ಉತ್ಸವದ ಸಿದ್ಧತೆಯ ಬಗ್ಗೆ ಚರ್ಚಿಸ ಬೇಕಲ್ಲ? ಅಮಾತ್ಯ ಭವನಕ್ಕೆ ಹೋಗೋಣ. ಅರ್ಚಕ ಇನೇನಿಯನ್ನು ಕರೆಸ್ತೇನೆ. ಆಮೇಲೆ ಅವರೊಂದಿಗೆ ಮಂದಿರಕ್ಕೆ ಭೇಟಿ ನೀಡುವಿರಂತೆ."

"ಸರಿ," ಎಂದ ಮಹಾ ಅರ್ಚಕ.

ಅಮಾತ್ಯ ಹೆಪ್ಟೆಟ್‌ನನ್ನು ಕರೆಯದಿದ್ದರೂ ಈತ ಅವರನ್ನು ಹಿಂಬಾ ಲಿಸಿದ.

0 0 0 0

ಅಮಾತ್ಯ ಭವನದ ಲಿಪಿಕಾರ ಸೆನೆಬ್ ಬೆಳಿಗ್ಗೆ ಒಮ್ಮೆ ಅತಿಥಿ ಗೃಹಕ್ಕೆ

ಬಂದಿದ್ದ. ಮಹಾ ಅರ್ಚಕರು ಅರಮನೆಗೆ ಆಗಮಿಸಿದರೆಂಬ ಸುದ್ದಿ ಆ ವಿಶಾಲ ಆವರಣದಲ್ಲೆಲ್ಲ ಹರಡಿತ್ತು.

ಮೆನೆಪ್‌ಟಾಗೆ ಆತನೆಂದ :

"ಮಹತ್ವದ ಸಭೆ. ಕಾತರಕ್ಕೆ ಕಾರಣವಿಲ್ಲ. ಯಾಕೆ ಅಂದರೆ ಇದು ಸ್ನೇಹದ ವಾತಾವರಣದಲ್ಲಿ ನಡೀತಿದೆ. ದಾಸದಾಸಿಯರು ಯಾರೂ ಇಲ್ಲವಂತೆ. ಮಾತುಕತೆಯಲ್ಲಿ ಮಹಾರಾಣಿಯವರೂ ಭಾಗವಹಿಸ್ತಿದ್ದಾರೆ. ಸೋಜಿಗ."

"ಅಂತೂ ಸೆಡ್ ಉತ್ಸವ ನಡೆಯೋ ಹಾಗೆ ಕಾಣ್ತದೆ, ಅಲ್ಲವಾ ?" ಎಂದ ಮೆನೆಪ್‌ಟಾ.

"ನಡೀತದೆ, ನಡೀತದೆ. ಫೆರೋಗೆ ಕಾಯಕಲ್ಪ ಬೇಡ ಅಂತ ಯಾರು ತಾನೇ ಅಂದಾರು ?"

ಕೆಲ ಕ್ಷಣಗಳ ಮೌನದ ಬಳಿಕ ಸೆನೆಬ್ "ಇನೇನಿ....ಇನೇನಿ"....ಎಂದು ಗೊಣಗಿದ.

"ಏನದು ?"

"ಸಭೆಯ ತೀರ್ಮಾನಗಳು ಮಂದಿರದ ಅರ್ಚಕ ಇನೇನಿಗೆ ಮೊದಲು ಗೊತ್ತಾಗ್ತವೆ. ಧರ್ಮಗುರು ಅವರಿಗೆ ಹೇಳ್ತಾರೆ....ನಾನು ಪುನಃ ಬಂದು ನಿಮ್ಮನ್ನು ನೋಡ್ತೇನೆ."

ಅಷ್ಟು ಹೇಳಿ ಸೆನೆಬ್ ಬಿರಬಿರನೆ ರಾಣೀವಾಸದತ್ತ ಹೋದ.

ಮೆನೆಪ್‌ಟಾಗೆ ನಗು ಬಂತು.

ಯಾವಾಗಲೂ ಆ ಹೊತ್ತಿನಲ್ಲಿ ಶಾಂತವಾಗಿರುತ್ತಿದ್ದ ಅರಮನೆಯ ಆವರಣದಲ್ಲಿ ಇಂದು ಅತೀವ ಚಟುವಟಿಕೆ. ಧರ್ಮಗುರುವನ್ನು ಕಂಡು ನಮಿಸಿ ಪುಣ್ಯ ಸಂಪಾದಿಸುವ ಅಪೇಕ್ಷೆ ಅಲ್ಲಿನ ದುಡಿಯುವ ಜನರಿಗೆ. ಅತಿಥಿಗೃಹದ ಸೇವಕನೊಬ್ಬ ಹಿಂದಿನ ಸಂಜೆಯೇ ರಾಜಕುಮಾರನ ಮೊದಲ ಬೇಟೆಯ ಸುದ್ದಿ ತಂದಿದ್ದ. ಈಗ ಸೆನೆಬ್ ಹೋದ ಬಳಿಕ ಆತ ಇನ್ನೊಂದು ವಾರ್ತೆ ತಂದ :

"ಇವತ್ತು ಮಹಾ ಅರ್ಚಕರಿಗೆ ಅರಮನೆಯಲ್ಲಿ ಭೋಜನ. ರಾಜಕುಮಾರ ಹೊಡೆದ ಬಾತುಕೋಳೀನ ಅಡುಗೆ ಮಾಡ್ತಾರೆ."

ಮುಂದೆ ಕೆಲ ಕ್ಷಣಗಳಲ್ಲಿ ದಾಸಿಯರಿಂದ ಆವೃತನಾದ ಅಲಂಕೃತ ರಾಜಕುಮಾರ ದೇವ ಮಂದಿರಕ್ಕೆ ಬಂದ. ಮುಗುಳು ನಗುತ್ತಲಿದ್ದ ಒಬ್ಬಳು ಸುಂದರಿ

ದಾಸಿಯ ಕೈಗಳಲ್ಲಿ ಒಂದು ಬಂಗಾರದ ತಟ್ಟೆ. ರಾಜಕುಮಾರನಿಗೆ ಕೀರ್ತಿ ತಂದುಕೊಟ್ಟ ಬಾತುಕೋಳಿ ಆ ತಟ್ಟೆಯಲ್ಲಿ ನಿರ್ಜೀವವಾಗಿ ಕತ್ತು ಚಾಚಿ ಮಲಗಿತ್ತು. ಇನ್ನೊಬ್ಬಳು ದಾಸಿಯ ಕೈಯಲ್ಲಿದ್ದ ಬಂಗಾರದ ತಟ್ಟೆಯಲ್ಲಿ ಅಂಜೂರದ ಹಣ್ಣುಗಳು.

ಅತಿಥಿಗೃಹದಲ್ಲಿದ್ದ ಮೆನೆಪ್‌ಟಾ ಆ ದೃಶ್ಯವನ್ನು ಕೌತುಕದಿಂದ ನೋಡಿದ. ರಾಮೆರಿ ಮೀಸೆ ಚಿಗುರೊಡೆಯೋದಕ್ಕೆ ಮುಂಚೆ ಬಾತುಕೋಳಿ ಹೊಡೀತಾನೋ, ನೂರಾರು ಲಿಪಿ ಸುರುಳಿಗಳ ವಾಚನ ಮಾಡ್ತಾನೊ ನೋಡ್ಬೇಕು—ಎಂದುಕೊಂಡ ಆತ, ಮಗನ ನೆನಪಾಗಿ.

ಸ್ವಲ್ಪ ಸಮಯದಲ್ಲೇ ರಾಜಕುಮಾರ ಮರಳಿದ. ಬಾತುಕೋಳಿಯಿದ್ದ ಬಂಗಾರದ ತಟ್ಟೆಯನ್ನು ಸುಂದರಿ ದಾಸಿಯೇ ಈಗಲೂ ಹಿಡಿದಿದ್ದಳು. ಆ ತಟ್ಟೆಯಲ್ಲಿ ಪ್ರಸಾದನೆಂದು ಅರ್ಚಕ ನೀಡಿದ್ದ ಕೆಲ ಹಣ್ಣುಗಳೂ ಇದ್ದುವು. ಅಂಜೂರದ ಹಣ್ಣುಗಳನ್ನು ಹೊತ್ತಿದ್ದವಳದು ಈಗ ಬರಿಗೈ. ಹಣ್ಣುಗಳ ಜತೆಗೆ ತಟ್ಟೆಯೂ ದೇವರಿಗೆ ಅರ್ಪಿತವಾಗಿತ್ತು.

ಮತ್ತೆ ಕೊಂಚ ಹೊತ್ತಿನಲ್ಲಿ ಸೆನೆಬ್ ಮಂದಿರದತ್ತ ಓಡಿದ. ಮೈಭಾರವನ್ನೂ ಲೆಕ್ಕಿಸದೆ ಬೇಗಬೇಗನೆ ಹೆಜ್ಜೆ ಇಡುತ್ತಿದ್ದ ಇನೇನಿಯೊಡನೆ ಹಿಂತಿರುಗಿದ.

ಒಬ್ಬ ಚಾಕರನೆಂದ :

"ಮಹಾ ಅರ್ಚಕರು ಈಗ ಅಮಾತ್ಯ ಭವನಕ್ಕೆ ದಯಮಾಡಿಸಿದ್ದಾರೆ."

ಅಲ್ಲಿಂದ ಹೇಪಾಟ್ ಮಂದಿರಕ್ಕೆ ಬಂದ. ಅಲ್ಲಿ ತುಸು ಕಾಲ ಇದ್ದ. ನೀರು ಸರಬರಾಜಿನ ವ್ಯವಸ್ಥೆಯನ್ನು ಈಕ್ಷಿಸಿ ಆದಮೇಲೆ ಪೆರೋನ ನಿವಾಸಕ್ಕೆ ತೆರಳಿದ.

ಅಬ್ಟುವಿನಲ್ಲಿ ಮಹಾ ಅರ್ಚಕನನ್ನು ಮೆನೆಪ್‌ಟಾ ಕಂಡಿದ್ದ. ಇಲ್ಲಿ ಅತಿಥಿಗೃಹದ ಮುಂದುಗಡೆಯಿಂದ ಆತ ಹೋದಾಗ ಇನ್ನಷ್ಟು ಹತ್ತಿರದಿಂದ ನೋಡಿದ. ಆತ ಯಾವ ಕಡೆಗೆ ಹೆಜ್ಜೆ ಇಟ್ಟರೂ ಇಕ್ಕೆಲಗಳಲ್ಲೂ ಜನ ಮಂಡಿಯೂರಿ ನಮಿಸುತ್ತಿದ್ದರು. ಬೆಳ್ಳಿ ಹಿಡಿಯ ಅಧಿಕಾರ ಕೋಲು ಕೈಯಲ್ಲಿದ್ದ, ಮುಖದ ಮೂಳೆಗಳು ಕಾಣಿಸುತ್ತಿದ್ದ ಈ ವ್ಯಕ್ತಿಯ ಬಗೆಗೆ ಇಷ್ಟೊಂದು ಭಯ, ಭಕ್ತಿ ? ಧಾರ್ಮಿಕ ಕಟ್ಟುಕಟ್ಟಳೆಗಳಲ್ಲಿ ಜನ ಸಮುದಾಯಕ್ಕೆ ಇಂಥ ನಿಷ್ಠೆ ? ಐಗುಪ್ತದ ಆದ್ಯಂತ ಇರುವ ಸಾವಿರಾರು ಸಣ್ಣ ದೊಡ್ಡ ಮಂದಿರಗಳಲ್ಲೂ ಗುಡಿಸಲು

ಗಳಲ್ಲೂ ಮನೆಗಳಲ್ಲೂ ಅರ್ಚಿಸಲ್ಪಡುವ ಸಹಸ್ರಾರು ದೇವತಾ ಮೂರ್ತಿಗಳು, ಸಹಸ್ರ ಸಹಸ್ರ ದೇವಸೇವಕ, ದೇವಸೇವಕಿಯರು, ಎಷ್ಟೋ ಸಹಸ್ರ ದಾಸ ಜನ, ಅಪಾರ ಧನಕನಕ—ಇಷ್ಟೆಲ್ಲಕ್ಕೂ ಜವಾಬುದಾರ ಈತ. ಧರ್ಮಗುರು ಪ್ರಸನ್ನನಾಗಬೇಕೆಂದು ರಾಜವಂಶ ಹಾತೊರೆಯುತ್ತದೆ. ಅವನ ಆಶ್ರಯಕ್ಕಾಗಿ ಭೂಮಾಲಿಕರು ಬಾಯಿ ಬಿಡುತ್ತಾರೆ. ಹಾಗೆ ಯೋಚಿಸುತ್ತ ಮೆನೆಪ್‌ಟಾಗೆ ಅನಿಸಿತು: ಸಮಾಜವನ್ನು ಬಿಗಿಯಾಗಿ ಹಿಡಿದಿರುವ ಶಕ್ತಿಗಳು ಮೂರು—ಸಮೀಪದಿಂದ ಭೂಮಾಲಿಕ ಗಣ, ದೂರದಿಂದ ಫೆರೋ ಮತ್ತು ಮಹಾ ಅರ್ಚಕ....

(ಅತಿಥಿಗೃಹವನ್ನು ಸಮೀಪಿಸಿದಾಗ ಮಹಾ ಅರ್ಚಕನ ಹಿಂದಿದ್ದ ಇನೇನಿ ಮುಂದಕ್ಕೆ ಕತ್ತು ಚಾಚಿ ಹೇಪಾಟ್‌ನ ಕಿವಿಯಲ್ಲಿ ಏನನ್ನೋ ಉಸುರಿದ್ದ. ಅದು ಕೇಳಿಯೂ ಕೇಳಿಸದವನಂತೆ ಮಹಾ ಅರ್ಚಕ ಸುಮ್ಮನಿದ್ದ. ಮಗ್ಗುಲು ಕಟ್ಟಡದಲ್ಲಿ ಮೆನೆಪ್‌ಟಾ ಇದ್ದಾನೆ ಅಂತ ಇನೇನಿ ಹೇಳಿರಬಹುದೆ ? ಎನಿಸಿತ್ತು ನೀರಾನೆ ಪ್ರಾಂತದ ನಾಯಕನಿಗೆ. ವಾಸ್ತವವಾಗಿ ಅದು ಸರಿಯಾಗಿದ್ದ ಊಹೆ. ಆದರೆ ಹೇಪಾಟ್ ಅತಿಥಿಗೃಹದತ್ತ ನೋಡಿರಲಿಲ್ಲ. ಏನೇ ಇರಲಿ, ಅಬ್ಟು ಜಾತ್ರೆಯಲ್ಲಿ ಕಂಡಷ್ಟು ಭೀಕರನಾಗಿ ಮಹಾ ಅರ್ಚಕ ಈಗ ಕಾಣಿಸಲಿಲ್ಲ, ಮೆನೆಪ್‌ಟಾಗೆ. ವಾತಾವರಣ ಕಾರಣವಿರಬೇಕು ಎಂದುಕೊಂಡ.)

ಔಟ ಅತಿಥಿಗೃಹದ ಒಬ್ಬ ಪರಿಚಾರಕನನ್ನು ಕೇಳಿದ:

"ಇವತ್ತು ಅರಮನೆ ಭೋಜನ ಆ ದೊಡ್ಡವರಿಗೆ ಮಾತ್ರ ಅಲ್ಲವಾ ?"

"ಹೌದು ಹೌದು. ಬೇರೆಯವರಿಗೆಲ್ಲ ಸಾಮಾನ್ಯ ಅಡುಗೆ. ಆದರೆ ಅವರು ಹೊರಡೋವರೆಗೆ ನಾವು ಕಾಯ್ಬೇಕು, ಎಂದು ಉತ್ತರ ಬಂತು.

* * * *

ಅರಸಿ ನೆಫರ್‌ಟೀಮ್ ಭೋಜನಕ್ಕೆ ಮುನ್ನ ಮಹಾ ಅರ್ಚಕನನ್ನು ರಾಣೀವಾಸಕ್ಕೆ ಕರೆದೊಯ್ದು, ರಾಜಕುಮಾರನಿಗೆ ಆಶೀರ್ವಾದ ಕೊಡಿಸಿದಳು.

"ಯುದ್ಧ ಶಿಕ್ಷಣ ಆರಂಭಿಸ್ಬೇಕು. ಇದರ ಜವಾಬ್ದಾರಿಯನ್ನು ಸೇನಾನಿ ಅಮೆನೊಮೆಪೆಟ್‌ಗೆ ವಹಿಸೋಣಾಂತಿದ್ದೀನಿ," ಎಂದಳು ಮಹಾರಾಣಿ.

"ಒಳ್ಳೇ ವಿಚಾರ" ಎಂದು ಹೇಪಾಟ್ ಸಮ್ಮತಿ ಸೂಚಿಸಿದ ; "ಸೆಡ್ ಉತ್ಸವಕ್ಕೆ ಅವನು ಹೇಗೂ ಬರ್‍ತಾನಲ್ಲ. ಆಗ ಹೇಳಬಹುದು," ಎಂದು ಮಾತು ಸೇರಿಸಿದ.

ಆರು ಜನರ ಊಟ ಸುಸೂತ್ರವಾಗಲು ನೂರು ಜನ ಓಡಾಡಿದರು. ದೊಡ್ಡವರ ಜತೆ ಕುಳಿತವನು ರಾಜಕುಮಾರನೊಬ್ಬನೇ. ಅವನ ಅಕ್ಕಂದಿರು ತಮ್ಮ ವಸತಿ ಭಾಗದಲ್ಲೇ ಭೋಜನ ಸ್ವೀಕರಿಸಿದರು.

ಬಂಗಾರದ ತಟ್ಟೆ ಬಟ್ಟಲು. ಬಂಗಾರದ ಮಧು ಪಾತ್ರೆಗಳು. ತ್ರಿಕೋನ ತಂತೀ ವಾದ್ಯ ಹೊರಡಿಸುತ್ತಿದ್ದ ಸ್ವರ ತರಂಗದ ಹಿನ್ನೆಲೆ.

ಹೊಟ್ಟೆ ತುಂಬಾ ಉಂಡವರು ಹೇಪಾಟ್ ಮತ್ತು ಹೆಖ್ವೆಟ್ ಇಬ್ಬರೇ. ರಾಜಕುಮಾರ ಬೇಟೆಯಾಡಿದ ಬಾತುಕೋಳಿಯ ಅಡುಗೆ ರುಚಿಕರವಾಗಿತ್ತು. ಇವರಿಗೆಲ್ಲ ಬಡಿಸಿದ ಮೇಲೆ ತನಗೆ ಸಿಗುವುದು ಸ್ವಲ್ಪ ಮಾತ್ರ ಎಂದು ರಾಜ ಕುಮಾರ ಭಾವಿಸಿದ್ದ. ವಾಸ್ತವವಾಗಿ ಆತನಿಗೆ ಇತರರಿಗಿಂತ ತುಸು ಹೆಚ್ಚೇ ಬಡಿಸಿದ್ದರು. ಆದರೆ ಒಂದು ತುತ್ತು ಸವಿದಮೇಲೆ, ಇಷ್ಟೇ ಸಾಕು ಎನಿಸಿತು.

ಭೋಜನದ ವೇಳೆ ಅರಮನೆ–ಗುರುಮನೆ ಸಂಬಂಧದ ಮಾತು ಹೊರಡ ಲಿಲ್ಲ ಎಂದು ಮಹಾರಾಣಿಗೆ ಸಮಾಧಾನ. ಮುಂದುವರಿಯುತ್ತಿದ್ದ ಗೋರಿ ನಿರ್ಮಾಣ ಕಾರ್ಯ, ರಚಿತವಾಗಿದ್ದ ಭಿತ್ತಿಚಿತ್ರಗಳು, ತಗಡು ತಾಮ್ರಗಳ ಮಿಶ್ರಣದಲ್ಲಿ ಪ್ರಯೋಗಗಳನ್ನು ನಡೆಸಿ ಬಲಿಷ್ಠ ಲೋಹವನ್ನು ಪಡೆಯುವ ವಿಧಾನ, ಬಂಗಾರದ ಆಭರಣಗಳ ತಯಾರಿಯಲ್ಲಿ ಅಸ್ಸೀರಿಯದ ಅಕ್ಕಸಾಲಿಗರ ಕೌಶಲ—ಇವನ್ನು ಕುರಿತು, ಉಣ್ಣುವುದರ ಜತೆಗೆ ಚೂರುಪಾರು ಸಂಭಾಷಣೆ ನಡೆಯಿತು.

ಆಭರಣಗಳ ಮಾತು ಬಂದಾಗ ನೆಫರ್‌ಟೀಮ್ ಅಂದಳು :

"ಅಸ್ಸೀರಿಯದ ಅಕ್ಕಸಾಲಿಗರು ನಿರ್ಮಿಸಿರೋ ಹೊಸ ನಮೂನೆಗಳನ್ನು ತರ್‍ತೇನೆ ಅಂತ ವರ್ತಕ ಕೆಪ್ಟು ಹೇಳಿದ್ದಾನೆ."

ಬರಿದಾಗಿದ್ದ ಪಾತ್ರೆಗೆ ಸೇವಕರು ಮಧು ಸುರಿಯುತ್ತಿದ್ದಂತೆ, ಹೆಖ್ವೆಟ್ ತೊದಲುತ್ತ ನುಡಿದ :

"ಕೆಪ್ಟುನ ಸಹಾಯದಿಂದಲೇ ನೀರಾನೆ ಬೇಟೆ ಸಾಧ್ಯವಾಗಿರೋದು."

ಮಹಾ ಅರ್ಚಕನೆಂದ :

"ಈ ಮಾತೆಲ್ಲ ನನಗೆ ಇಷ್ಟವಾಗೋದಿಲ್ಲ. ಬೆಳಿಗ್ಗೆಯೇ ಹೇಳಿದ್ದೇನೆ..ಆ

ನೀರಾನೆ ಕ್ರಿಮಿ ಎಲ್ಲಾದರೂ ತಪ್ಪಿಸಿಕೊಂಡರೆ—"

ಅಮಾತ್ಯ ಸಿಟ್ಟು ನುಂಗಿಕೊಂಡು ಅಂದ :

"ಆತ ಇವತ್ತಿನಿಂದಲೇ ದಿಗ್ಬಂಧನದಲ್ಲಿರ್‍ತಾನೆ. ಮಹಾ ಅರ್ಚಕರು ಚಿಂತಿಸಬೇಕಾಗಿಲ್ಲ."

ಹೇಪಾಟ್‌ಗೆ ಮೆಲ್ಲನೆ ಮತ್ತೇರತೊಡಗಿತ್ತು. ಅದನ್ನು ಆತ ನಿಗ್ರಹಿಸಲು ಯತ್ನಿಸುತ್ತ, ಪ್ರಯಾಸಪಟ್ಟು ಸುಸ್ಪಷ್ಟ ಪದಗಳನ್ನು ಹೊರಡಿಸಿದ :

"ಚಿಂತೆ ? ನನಗೆ ? ನೀವು ಅಮಾತ್ಯರೇ—ಚಿಂತಿಸಬೇಕಾದವರು ನೀವು."

"ಈ ಹೇಪಾಟ್‌ಗೆ ಇನ್ನಷ್ಟು ಕುಡಿಸಿದರೆ ಅವನ ಒಳಗಿರೋ ಯೋಚನೆಗಳನ್ನೆಲ್ಲ ಹೊರಕ್ಕೆ ಎಳೀಬಹುದು'—ಎಂದುಕೊಂಡ ಹೆಪ್ಪೆಟ್. ಆದರೆ ಸ್ವತಃ ಆತನಿಗೇ ಜಡವೆನಿಸಿತು ; ಮೈ ಬಾಗಿಸಿಕೊಂಡು ಪೀಠಕ್ಕೆ ಒರಗುವಂತಾಯಿತು.

ಈ ದಿನವೂ ನಿತ್ಯದಂತೆ ಪೆರೋ ಕಡಿಮೆ ಆಹಾರ ಸೇವಿಸಿದ್ದ. ಮಹಾ ಅರ್ಚಕ ಮತ್ತೆ ಗದ್ದಲ ಆರಂಭಿಸಲು ಅವಕಾಶ ನೀಡಬಾರದೆಂದು ಆತ ತೇಗಿದ. ತನ್ನ ಹೊಣೆಯನ್ನರಿತಿದ್ದ ಮಹಾರಾಣಿ ಹೆಚ್ಚು ಕುಡಿದಿರಲಿಲ್ಲ. ಪೆರೋ ತೇಗಿದಾಗ ಅವಳಿಗೆ ಸಮಾಧಾನವಾಯಿತು. ರಾಜಕುಮಾರನನ್ನು ಎಬ್ಬಿಸಿದಳು ; ತಾನೂ ಎದ್ದಳು.

ಭೋಜನ ಮುಗಿಯಿತು.

* * * *

ಹೇಪಾಟ್ ಮಹಾಮಂದಿರಕ್ಕೆ ತೆರಳಿದ. ಹೆಪ್ಪೆಟ್ ತನ್ನ ಮನೆಗೆ ಹೋದ. ಆಮೆರಬ್ ಮಾತ್ರ ಅರಮನೆಯಿಂದ ಕದಲುವಂತಿಲ್ಲ. ಅಮಾತ್ಯ ಭವನದಲ್ಲಿ ಕುಳಿತು ಸಾರಿಗೆ ಅಧಿಕಾರಿ, ಉಗ್ರಾಣದ ಅಧಿಕಾರಿ, ಪಾಕಶಾಲೆಯ ಅಧಿಕಾರಿ, ಬೊಕ್ಕಸದ ಲೆಕ್ಕಿಗ ಮತ್ತಿತರರನ್ನೆಲ್ಲ ಕರೆಸಿ ಆತ ಸಮಾಲೋಚನೆ ನಡೆಸಿದ. ಸಹಸ್ರ ಸಹಸ್ರ ಜನರ ದುಡಿಮೆಯ ಅಗತ್ಯವಿತ್ತು, ಸೆಡ್ ಉತ್ಸವದ ಸಿದ್ಧತೆಗೆ.

ಕಾರಾಗೃಹದ ಅಧಿಕಾರಿಯನ್ನು ಕರೆದು ಅಮಾತ್ಯ ಹೇಳಿದ :

"ಸೆಡ್ ಉತ್ಸವದ ಮುನ್ನಾ ದಿನ ರಾತ್ರೆ ಕೈದಿಗಳನ್ನೆಲ್ಲ ಬಿಡುಗಡೆ ಮಾಡ್ಬೇಕು."

"ಹೂಂ."

"ಗೋರಿದರೋಡೆಗಾರ ಜಜಮುಂಖ್ ಮತ್ತು ಅವನ ಇಬ್ಬರು ಸಂಗಡಿಗರನ್ನೂ ಸೇರಿಸಿ ಒಟ್ಟು ನೂರ ಎಂಬತ್ತೆಂಟು ಜನ ಇದ್ದಾರೆ, ಅಲ್ಲವಾ ?"

"ಹೌದು. ಆದರೆ ಅವರಲ್ಲಿ ಹತ್ತಿಪ್ಪತ್ತು ಜನ ಹೋಗ್ತಾರೋ ಇಲ್ಲವೋ. ವಯಸ್ಸಾಗಿದೆ. ದುಡಿಯೋದಕ್ಕಾಗಲೀ ಮತ್ತೆ ಅಪರಾಧ ಎಸಗೋದಕ್ಕಾಗಲೀ ಅವರಿಗೆ ಶಕ್ತಿ ಸಾಲದು."

"ನಾವು ಏನೂ ಮಾಡುವಂತಿಲ್ಲ. ಸೆಡ್ ಉತ್ಸವದ ನಿಮಿತ್ತ ಎಲ್ಲ ಕೈದಿಗಳ ಬಿಡುಗಡೆ ಆಗಲೇಬೇಕು. ಆ ಬೆಳಗ್ಗಿನಿಂದ ಕೈದಿಗಳ ಆಹಾರಕ್ಕಾಗಿ ಉಗ್ರಾಣದಿಂದ ಧಾನ್ಯ ಸರಬರಾಜು ಮಾಡೋದಿಲ್ಲ."

ಅಪ್ಪಣೆ ಎನ್ನುವಂತೆ ಆ ಅಧಿಕಾರಿ ಬಾಗಿ ವಂದಿಸಿದ :

ಇನೇನಿ ಅಮಾತ್ಯರನ್ನು ಕಾಣಲು ಬಂದ.

"ಇವತ್ತು ಸಂಜೆಯ ಪೂಜೆ ಆದ್ಮೇಲೆ ನಾನು ಮಹಾಮಂದಿರಕ್ಕೆ ಹೋಗ್ತೇನೆ. ಬರಹೇಳಿದ್ದಾರೆ," ಎಂದ.

"ಆಗಲಿ."

"ಸೆಡ್ ಉತ್ಸವದ ವರೆಗೂ ನಾನು ಅಲ್ಲಿಯೇ ಇರಬೇಕಂತೆ. ಮಹಾ ಅರ್ಚಕರಿಗೆ ಸಹಾಯ ಮಾಡ್ಬೇಕಂತೆ. ಅರಮನೆ ಮಂದಿರದಲ್ಲಿ ಪೂಜೆಗಾಗಿ ಹದಿನೈದು ದಿನಗಳ ಮಟ್ಟಿಗೆ ಬೇರೆ ದೇವಸೇವಕರನ್ನು ಕಳಿಸ್ತಾರಂತೆ."

ವೇದ್ಯವಾಯಿತು ಎನ್ನುವಂತೆ ಆಮೆರಬ್ ತಲೆ ಆಡಿಸಿದ.

ಬಳಿಕ ಅರಮನೆಯ ರಕ್ಷಕ ಭಟರ ದಳಪತಿಯೊಡನೆ ಅಮಾತ್ಯ ಮಾತನಾಡಿದ :

"ಕಿವಿ ಅಗಲಿಸಿ ಕೇಳು. ಸೆಡ್ ಉತ್ಸವದ ವರೆಗೆ ಆ ನೀರಾನೆ ಪ್ರಾಂತದ ನಾಯಕನನ್ನು ಹೊರಗಿನವರು ಯಾರೂ ಬಂದು ನೋಡಬಾರದು. ಆತ ಹೊರಗೆ ಹೋಗಲೂ ಬಾರದು. ಅಂಗರಕ್ಷಕರು ಬೇಕಾದರೆ ಓಡಾಡಲಿ. ಯಾಕೆ ಏನು ಅಂತ ಅವನು ಕೇಳಿದರೆ, ನಿಮ್ಮ ರಕ್ಷಣೆಗಾಗಿ ಅಮಾತ್ಯರು ಈ ಆಜ್ಞೆ ಮಾಡಿದ್ದಾರೆ ಅನ್ನು. ಬಾಕಿ ವಿಷಯಗಳಲ್ಲಿ ಗೌರವದಿಂದಲೇ ವರ್ತಿಸು. ಆತನೇನಾದರೂ ಅತಿಥಿಗೃಹದಿಂದ ಅದೃಶ್ಯನಾದರೆ ನಿನ್ನನ್ನು ಕಾರಾಗೃಹಕ್ಕೆ ಕಳಿಸ್ತೇನೆ, ಕೇಳಿಸ್ತಾ ?"

ಅಮಾತ್ಯನ ಮುಂದೆ ದಳಪತಿ ಮಂಡಿಯೂರಿ ನಮಿಸಿದ.

ಸಂಜೆ ಆಮೆರಬ್ ಅರಮನೆಯಿಂದ ಹೊರಟ ಮೇಲೆ ಸೆನೆಬ್ ಇನೇನಿಯ ಬಳಿಗೆ ಧಾವಿಸಿದ.

ದಳಪತಿಗೆ ಅಮಾತ್ಯ ಮಾಡಿದ ಆಜ್ಞೆಯನ್ನು ತಿಳಿಸಿ, "ಏನು ಹಾಗಂದರೆ ?" ಎಂದು ಕೇಳಿದ.

ಇನೇನಿ ತಲೆಯಾಡಿಸಿದ.

"ಬಹಳ ಗೋಪ್ಯ. ಬಹಳ ಗೋಪ್ಯ. ಮಹಾ ಅರ್ಚಕರು ನನಗೂ ಹೇಳಿಲ್ಲ. ಏನೋ ಇರಬೇಕು. ಗೆದ್ದದ್ದಂತೂ ಗುರುಮನೆಯೇ. ಸಂಶಯವಿಲ್ಲ."

"ಟೆಹುಟಿ ಅಮಾತ್ಯರಾಗ್ತಾರಾ ?"

"ಹ್ಯಾಗೆ ಹೇಳೋಕಾಗ್ತದೆ ? ನೀನು ಇಲ್ಲದ್ದೆಲ್ಲ ತಲೇಲಿ ಹಾಕ್ಕೊಂಡು ಇರೋ ಹುದ್ದೇನೂ ಕಳಕೋಬೇಡ."

ಸೆನೆಬ್ ಸಣ್ಣನೆ ನಕ್ಕ. ಸಿಕ್ಕುಗಳು ಹಾಗೆಯೇ ಉಳಿದು ತಲೆ ನೋಯ ತೊಡಗಿತು. ಆತ ರಾಣೀವಾಸದತ್ತ ಸುಳಿದ. ನೆಫರ್‌ಟೇಮ್ ಅಮಾತ್ಯನ ಆಜ್ಞೆಯ ವಿಷಯ ಕೇಳಿ. "ಸಾಮಾನ್ಯ ಆದೇಶ. ರಕ್ಷಣೆಗೆ ಮೊದಲೇ ಏರ್ಪಾಟು ಮಾಡ್ಬೇಕಾಗಿತ್ತು. ಆ ನಾಯಕನಿಗೆ ಏನಾದರೂ ಆದರೆ ಅಮಾತ್ಯರಿಗೆ ಅಪಾಯ ಅಲ್ಲವಾ ?" ಎಂದು ಪ್ರತಿಕ್ರಿಯೆ ವ್ಯಕ್ತಪಡಿಸಿ, ಸೆನೆಬ್‌ನನ್ನು ಕಳುಹಿಸಿಬಿಟ್ಟಳು.

ಲಿಪಿಕಾರ ಅತಿಥಿಗೃಹಕ್ಕೆ ಹೋದ. ಬಳಸಿ, ಬಳಸಿ ನೀರಾನೆ ಪ್ರಾಂತದ ನಾಯಕನಿಗೆ ವಿಷಯ ತಿಳಿಸಿದ. ಮೆನೆಪ್‌ಟಾ ಮುಗುಳುನಕ್ಕ. ಏನನ್ನೂ ಹೇಳಲಿಲ್ಲ.

(ಎದೆಗುದಿ ನಾಯಕನಿಗೆ. ಸೆಡ್ ಉತ್ಸವ ನಡೆಯುತ್ತದೆನ್ನುವುದು ಸಮಾಧಾನದ ವಿಷಯ. ಇನ್ನು ಹದಿನೈದೇ ದಿನ. ಆ ಬಳಿಕ ಹಕ್ಕಿಯ ವೇಗದಲ್ಲಿ ನೀರಾನೆ ಪ್ರಾಂತಕ್ಕೆ ನಾನು ಹಾರಿ ಹೋಗಬೇಕು. ಆದರೆ ಈ ರಕ್ಷಣೆಯ ಮಾತು ? ಒಂದು ಬಗೆಯ ದಿಗ್ಬಂಧನ ? ಬೆಳಿಗ್ಗೆ ಅರಮನೆಯಲ್ಲಿ ನಡೆದ ಸಂಧಾನದ ನಿಜವಿವರಗಳು ಸೆನೆಬ್‌ಗೆ ತಿಳಿದಂತಿಲ್ಲ. ಅಥವಾ, ರಹಸ್ಯದ್ದು ಮಹತ್ವದ್ದು ಏನೂ ಇಲ್ಲ ಎಂದೆ ? ಹಾಗಾದರೆ ತನ್ನ ಸುತ್ತಲೂ ಮುಳ್ಳು ಬೇಲಿ ಯಾಕೆ ? ಇದಕ್ಕೆ ಹೆದರಬೇಕೆ ತಾನು ? ಮೆನ್ನನಿಗೇನಾದರೂ ಗೊತ್ತಿರ

ಬಹುದು. ಆತ ತನ್ನನ್ನು ಭೇಟಿ ಮಾಡುವುದು ಕೂಡಾ ಸಾಧ್ಯವಾಗುತ್ತದೋ ಇಲ್ಲವೋ ?)

ಹತ್ತಾರು ಭಟರು ಕೈಗಳಲ್ಲಿ ಈಟಿ ಹಿಡಿದು ಅತ್ತಿತ್ತ ಚಲಿಸುವುದು ಮೆನೆಪ್‌ಟಾಗೆ ಕಾಣಿಸಿತು. ಎದೆಗುಂಡಿಗೆಯ ಬಡಿತ ತೀವ್ರಗೊಂಡಿತು, ಒಂದು ಕ್ಷಣ. ಶಾಂತ ಚಿತ್ತನಾಗಿರಲು ಅವನು ಯತ್ನಿಸಿದ.

ಅತಿಥಿಗೃಹದಿಂದ ಹೊರಟು ಸೆನೆಬ್ ನೀರಾನೆ ಪ್ರಾಂತದ ಭೂಮಾಲಿಕ ನುಟ್‌ಮೋಸ್‌ನಲ್ಲಿಗೆ ಧಾವಿಸಿದ. ಮಧ್ಯಾಹ್ನದ ಭೋಜನದಲ್ಲಿ ದೊಡ್ಡವರು ಎಷ್ಟು ವರ್ಷ ಹಿಂದಿನ ದ್ರಾಕ್ಷಾಸುರೆಯನ್ನು ಕುಡಿದರೊ ? ರಾಜಕುಮಾರ ಬೇಟೆಯಾಡಿದ ಬಾತುಕೋಳಿಯ ಅಡುಗೆ. ಅದೇನೂ ತನಗೆ ಬೇಕಿರಲಿಲ್ಲ. ಆದರೆ ಒಂದಿಷ್ಟು ಒಳ್ಳೆಯ ಸುರೆ....ಅರಮನೆಯ ದಳಪತಿಗೆ ಅಮಾತ್ಯ ನೀಡಿದ ಆನುಜ್ಞೆಗೆ ಉಪ್ಪುಖಾರ ಹಚ್ಚಿ ನುಟ್‌ಮೋಸ್‌ಗೆ ತಿಳಿಸಬೇಕು. ಆಗ ಆತ ಸಂತುಷ್ಟನಾಗುತ್ತಾನೆ. ಹೊರಬರುತ್ತವೆ ಮದಿರೆಯ ಬಟ್ಟಲುಗಳು.ಬ

ಸೆನೆಬ್ ಸರಿಯಾಗಿಯೇ ತರ್ಕಿಸಿದ್ದ, ನುಟ್‌ಮೋಸ್ ಹರ್ಷಾತಿರೇಕದಿಂದ ಕುಣಿದಾಡಿದ. "ಕಾರಾಗ್ರ: ಹಕ್ಕೆ ತಳ್ಬೇಕು ಕತ್ತೆಮಗನನ್ನು," ಎಂದ.

ಮದಿರೆಯ ಬಟ್ಟಲುಗಳು ಹೊ :ಂದುವು.

*  *  *  *

ಕತ್ತಲಾದ ಮೇಲೆ ಇನೇನಿ ;ಟ್ಟೆಯಲ್ಲಿ ಬಟ್ಟೆಯ ಚಿಕ್ಕ ಗಂಟು ಹಿಡಿದು ಹೊರಟುದನ್ನು ಔಟ ನೋಡಿದ. ಮೆನೆಪ್‌ಟಾನ ಸೂಚನೆಯಂತೆ ಆತ ಮೆನ್ನನನ್ನು ಕಾಣಲು ಮಂದಿರಕ್ಕೆ ಹೆ :ೀದ.

ಮೆನ್ನನ ನೆರವು ಪಡೆದ ನೀರಾನೆ ಪ್ರಾಂತಕ್ಕೆ ಸುದ್ದಿ ಮುಟ್ಟಿಸುವ ತವಕ ನಾಯಕನಿಗೆ.

ಕತ್ತಲೆಯ ಮರೆಯ ; ಮೆನ್ನ, ಉದ್ವಿಗ್ನತೆಯನ್ನು ಪ್ರಯತ್ನಪೂರ್ವಕವಾಗಿ ಹತ್ತಿಕ್ಕುತ್ತ, ಪಿಸ ನುಡಿದ :

"ರಕ್ಷಕರ ಕಣ್ಣು ತಪ್ಪಿಸಿ ಬರೋದಕ್ಕೆ ಎರಡು ಸಲ ನೋಡ್ದೆ. ಆಗಲಿಲ್ಲ. ಇನೇನಿ ಇಲ್ಲ. ಸೆಡ್ ಉತ್ಸವದವರೆಗೆ ಬೇರೆ ಅರ್ಚಕರು ಪೂಜೆ ಮಾಡ್ತಾರೆ.

ನೀವು ದಿನವೂ ಬೆಳಿಗ್ಗೆ ಒಮ್ಮೆ, ರಾತ್ರೆ ಒಮ್ಮೆ ಇಲ್ಲಿಗೆ ಬರ್‍ತಿರಿ. ಪ್ರತಿಬಂಧ ನಿಮ್ಮ ನಾಯಕರಿಗೆ ಮಾತ್ರ."

"ಸೆಡ್ ಉತ್ಸವ ಗೊತ್ತಾಗಿರೋ ಸಂಗತಿ ನಮ್ಮ ಪ್ರಾಂತದವರಿಗೆ ತಿಳಿಸ ಬೇಕಲ್ಲ...."

"ಹೌದು. ಅದು ನನ್ನ ಜವಾಬ್ದಾರಿ. ಬಟಾ ಬೇಗ್ನೆ ಇಲ್ಲಿಗೆ ವಾಪಸಾಗ್ಬೇಕು. ಆ ಕಡೆ ಹೋಗೋ ದೋಣಿಗಳಿರಬಹುದು. ಕಟ್ಟೆಗೆ ಹೋಗಿ ನೋಡ್ತೇನೆ."

"ನಾಳೆ ಬೆಳಿಗ್ಗೆ ಬರ್‍ತೇನೆ, ಹಾಗಾದರೆ."

"ಹ್ಞ. ದೇವರ ದರ್ಶನಕ್ಕೆ ಬನ್ನಿ"

* * * *

ನದಿಯ ಅಂಚಿಗೆ ಹೋಗಬೇಕು. ದ್ವಾರಪಾಲಕರು. ಬಿಡಲಾರರು. ತಾನು ಲಬೊ ಲಬೊ ಎಂದು ಗೋಳಾಡಿದರೂ ಬಾಗಿಲು ತೆರೆಯದಿದ್ದರೆ ? ಮೆನ್ನನಿಗೆ ಕಸಿವಿಸಿ.

ಮಂದಿರದ ಬಲದಿಕ್ಕಿಗೆ ಮುಂದಕ್ಕೆ ಮೇಲಟ್ಟಣಿಗೆಯ ಕೊಳಗಳಿರುವಲ್ಲಿ, ಒಂದು ಮನುಷ್ಯ ಸುಲಭವಾಗಿ ತೂರಿಹೋಗಲು ಸಾಕಾಗುವಷ್ಟು ತೂಬು ಇತ್ತು. ಅದು ಆಗೊಮ್ಮೆ ಈಗೊಮ್ಮೆ ಅರಮನೆಯ ಅಂಗಳವನ್ನು ಸ್ವಚ್ಛ ಗೊಳಿಸಿ, ಕೊಳಕು ನೀರು ಹರಿದು ನದಿ ಸೇರಲು ನಿರ್ಮಿಸಿದ್ದ ದ್ವಾರ. ಅದಕ್ಕೆ ಅಡ್ಡವಾಗಿ ಒಂದು ಕಲ್ಲನ್ನು ಇಡುತ್ತಿದ್ದರು. ಆ ಕಲ್ಲನ್ನು ಸರಿಸುವುದು ಸಾಧ್ಯ ವಾದರೆ—ಎಂದು ಕೊಂಡ ಮೆನ್ನ....

ಇನೇನಿಯ ಬದಲು ಪೂಜೆಗೆಂದು ನಿಯೋಜಿತನಾದ ದೇವಸೇವಕ ಬಂದ.

"ಈಗ ನಿನ್ನದೇನೂ ಗಲಾಟೆ ಇಲ್ಲವಾ ಮೆನ್ನ ?" ಎಂದು ಕೇಳಿದ.

"ಗಲಾಟೆ ಎಲ್ಲ ಮುಗೀತಲ್ಲ," ಎಂದ ಈತ.

"ಒಳ್ಳೇದಪ್ಪ ಇನ್ನು ಮಲಕೋ."

ಮೆನ್ನನ ಮೇಲೆ ಲಕ್ಷ್ಯವಿಡಬೇಕೆಂದು ಇನೇನಿ ಆ ದೇವಸೇವಕನಿಗೆ ಹೇಳಿದ್ದ. ಮೆನ್ನ ಅಪಾಯಕಾರಿಯಾಗಿ ಬದಲಿ ಬಂದವನಿಗೆ ತೋರಲಿಲ್ಲ. ತುಂಬ ಸಾಧುವಾಗಿದ್ದಾನೆ ಎನಿಸಿತು.

ಬಂದವನು ನಿದ್ದೆಹೋದೊಡನೆ, ಮೆನ್ನ ಒಂದು ಬಟ್ಟೆ ಹೊದೆದು ಕತ್ತಲೆಯ ಮರೆಯಲ್ಲಿ ಪ್ರಾಕಾರದ ತೂಬಿನತ್ತ ನಡೆದ. ಎರಡು ಮೂರು ಸಾರಿ ಯತ್ನಿಸಿದ ಮೇಲೆ ಕಲ್ಲನ್ನು ಬದಿಗೆ ಸರಿಸುವುದು ಸಾಧ್ಯವಾಯಿತು. ಪ್ರಾಕಾರದಾಚೆಗೆ ನದಿಯ ದಂಡೆ. ಅದನ್ನು ತಲಪಿ ಎದ್ದು ನಿಂತು, 'ಆಹಾ!' ಎಂದು ಮನಸ್ಸಿನೊಳಗೇ ಆತ ಉದ್ಗರಿಸಿದ.

ಆದರೆ ದೋಣಿಕಟ್ಟೆ ಮುಟ್ಟಿದಾಗ ಮೆನ್ನನಉತ್ಸಾಹ ಇಳಿದುಹೋಯಿತು. ನೀರಾನೆ ಪ್ರಾಂತವನ್ನು ಹಾದು ಮುಂದೆ ಹೋಗುವ ಒಂದು ದೋಣಿಯೂ ಅಲ್ಲಿರಲಿಲ್ಲ. ಗೂಡಾರದಲ್ಲಿ ಕಟ್ಟೆಯ ಸಹಾಯಕ ಅಧಿಕಾರಿ ಇದ್ದ. ರಾತ್ರಿ ಪಾಳಿಯವನು. ಮೆನ್ನ ಅತ್ತ ಸುಳಿಯಲಿಲ್ಲ. ಆ ಅವೇಳೆಯಲ್ಲಿ ಅವನ ಗುರುತು ಹಿಡಿಯುವವರು ಕಟ್ಟೆಯಲ್ಲಿ ಯಾರೂ ಇರಲಿಲ್ಲವಾದರೂ ಜಾಗರೂಕನಾಗಿದ್ದು ಉತ್ತರದಿಂದ ಬರುವ ದೋಣಿಗಳಿಗಾಗಿ ಮೆನ್ನ ಕಾದು ಕುಳಿತ.

ನಡುವಿರುಳು ದಾಟಿ ಸ್ವಲ್ಪ ಹೊತ್ತಾದ ಮೇಲೆ ಒಂದು ದೋಣಿ ಬಂತು. ಅದು ಹೊರಟದ್ದುದು ನೀರಾನೆ ಪ್ರಾಂತದ ಎದುರುದಂಡೆಯ ಟಗರು ಪ್ರಾಂತಕ್ಕೆ. 'ಕೇಳಿಕೊಂಡರೆ ಇವರು ಸುದ್ದಿ ಮುಟ್ಟಿಸಲೂ ಬಹುದು.' ಆ ವಿಷಯವಾಗಿ ಅಂಬಿಗರೊಡನೆ ಮಾತು ಆರಂಭಿಸೋಣ ಎನ್ನುವಷ್ಟರಲ್ಲಿ ದೊಡ್ಡ ಹೇರುನಾವೆ ಕೆಳಗಿನಿಂದ ಬರುತ್ತಿರುವುದು ಕಾಣಿಸಿತು. ಕಟ್ಟೆಯನ್ನೇರಿದ್ದ ಟಗರು ಪ್ರಾಂತದ ಅಂಬಿಗರು ಆ ನಾವೆಯತ್ತ ನೋಡಿ, "ಕೆಫ್ಟು" "ಕೆಫ್ಟು" ಎಂದುದು ಕೇಳಿಸಿತು. ಮೆನ್ನನಿಗೆ ಪಾರವಿಲ್ಲದ ಹರ್ಷ. ತನ್ನನ್ನು ತಾನೆ ನಂಬ ದಂಥ ಪರಿಸ್ಥಿತಿ.

ಹೇರುನಾವೆ ದೋಣಿಕಟ್ಟೆಯ ದಕ್ಷಿಣ ತುದಿಯಲ್ಲಿ ತಂಗಿತು. ನಿಧಾನ ವಾಗಿ ನಾವೆಯಿಂದ ಕಟ್ಟೆಗೆ ಹಲಗೆಗಳನ್ನು ಹಾಸಿ ವಿದೇಶಿ ಅಂಬಿಗರು ಕೆಲವರು ನಡೆದು ಬಂದರು.

ಅವರ ಬಳಿ ಸಾರಿ ಮೆನ್ನ ಕೇಳಿದ :

"ಕೆಫ್ಟು ನಾವೆಯಲ್ಲಿದ್ದಾರಾ ?"

ಆ ಅಂಬಿಗರು ಕಟ್ಟೆಯ ದೀಪದ ಮಬ್ಬು ಬೆಳಕಿನಲ್ಲಿ ಮೆನ್ನನನ್ನು ದಿಟ್ಟಿಸಿದರು.

ಅವರಲ್ಲೊಬ್ಬ ಸ್ನೇಹಪರವಲ್ಲದ ಸ್ವರದಲ್ಲಿ ಕೇಳಿದ :

"ಯಾರಯ್ಯ ನೀನು ?"

"ಮೆನ್ನ."

"ಮೆನ್ನ ?"

"ಹುಚ್ಚ ಮೆನ್ನ. ಈ ಊರಿನವನೇ."

"ಹುಚ್ಚ ಮೆನ್ನ !" ಅವನಿಗೂ ಉಳಿದ ಅಂಬಿಗರಿಗೂ ನಗು.

ಒಬ್ಬ ಗದರಿದ :

"ಸಾಹುಕಾರರು ಮಲಗಿದ್ದಾರೆ. ಗಲಾಟೆ ಮಾಡ್ಬೇಡ. ಹೊರಟ್ಹೋಗು."

ಪಿಸುದನಿಯಲ್ಲಿ ಮೆನ್ನನೆಂದ :

"ನೀರಾನೆ ಪ್ರಾಂತಕ್ಕೆ ಸಂಬಂಧಿಸಿದ ಸುದ್ದಿ. ನಾನು ನಿಮ್ಮ ಸಾಹುಕಾರ್ರನ್ನು ತಕ್ಷಣ ಕಾಣ್ಬೇಕು."

ನೀರಾನೆಪ್ರಾಂತ ಎಂದೊಡನೆ ಅಂಬಿಗರಲ್ಲಿ ಇಬ್ಬರು ಪರಸ್ಪರ ಮುಖ ನೋಡಿದರು. ಈತ ಹುಚ್ಚ ಎಂದು ತಾವೇನೋ ಉಪೇಕ್ಷೆ ಮಾಡಬಹುದು. ಆದರೆ ಕೆಫ್ರು ತಮ್ಮನ್ನು ತರಾಟೆಗೆ ತೆಗೆದುಕೊಂಡರೊ ?

ತಮ್ಮ ಭಾಷೆಯಲ್ಲಿ ಅವರೇನನ್ನೋ ಚರ್ಚಿಸಿದರು. ಒಬ್ಬ ನಾವೆಗೆ ಮರಳಿದ. ಕೆಲ ಕ್ಷಣಗಳಲ್ಲೇ ಹಿಂದಿರುಗಿ, ಮೆನ್ನನನ್ನು ಕರೆದ.

ಯಾವ ಊರಾದರೂ ಸರಿಯೆ, ಎಂಥ ಅಪರಾತ್ರಿಯಾದರೂ ಸರಿಯೆ, ದೋಣಿಕಟ್ಟೆ ಸಮಿಾಪಿಸುವಾಗ ಕೆಫ್ರುಗೆ ಎಚ್ಚರವಾಗುತ್ತಿತ್ತು. ಮೆಂಫಿಸ್ ತಲಪಿದಾಗಲೂ ಅಷ್ಟೆ. ಅವನು ಎದ್ದು ಕುಳಿತಿದ್ದ. ಸೆಡ್ ಉತ್ಸವ ಇನ್ನೂ ಜರಗಿಲ್ಲ ಎಂದು ಅವನಿಗೆ ಗೊತ್ತಾದುದು ಆನ್ ನಗರಿಯಲ್ಲಿ. ಗುರುಮನೆ–ಅರಮನೆ ವಿರಸದ ವಿಷಯವೂ ತಿಳಿಯಿತು; ಮಹಾ ಅರ್ಚಕ ರಾಜಧಾನಿಗೆ ವಾಪಸಾದ ಸಂಗತಿಯನ್ನು ಅಲ್ಲಿಯೇ ಆತ ಅರಿತ. ನೀರಾನೆ ಪ್ರಾಂತದ ನಾಯಕ ಮೆಂಫಿಸ್‌ನಲ್ಲಿರುವನಂತೆ. ಪೆರೋ ಅವನನ್ನು ಕ್ಷಮಿಸಬಹುದೇ ? ತಾನು ಹೇಳಿ ಕೊಡಿಸಿದ ಆಮಂತ್ರಣ. ಇದರಿಂದ ಒಳ್ಳೆಯ ಪರಿಣಾಮ ಉಂಟಾದರೆ ತನಗೆ ಕೀರ್ತಿ. ವ್ಯಾಪಾರದ ದೃಷ್ಟಿಯಿಂದ ನೀರಾನೆ ಪ್ರಾಂತ ಪ್ರತ್ಯೇಕವಾಗಿ ಉಳಿದರೂ ನಷ್ಟವಿಲ್ಲ. ಬದಲು, ಲಾಭವೇ ಎನ್ನಬಹುದು. ಆದರೆ ಆ ಮೆನೆಪ್‌ಟಾನಿಗೆ ಏನಾದರೂ ಧಕ್ಕೆ ತಟ್ಟಿದರೊ ? ಹಾಗಾಗಬಾರದು, ಹಾಗಾಗಬಾರದು.

ಆನ್‌ನಗರಿ ಬಿಟ್ಟ ಕ್ಷಣದಿಂದ ಅವನಿಗೆ ಅದೇ ಯೋಚನೆ. ಕೆಲ ತಾಸು ಗಳ ಮಟ್ಟಿಗೆ ನಿದ್ದೆ ಆ ಯೋಚನೆಯನ್ನು ತಡೆಯಿತು. ಇಲ್ಲಿ ನೀರಾನೆ ಪ್ರಾಂತಕ್ಕೆ ಸಂಬಂಧಿಸಿ ಯಾವನೋ ತನ್ನೊಡನೆ ಮಾತನಾಡಲು ಬಯಸಿ ದಾಗ....

ಅವನು ಹುಚ್ಚನಿರಲಾರ ಎನಿಸಿತು. ಹೇಪಾಟ್‌ನ ಆಕ್ರೋಶಕ್ಕೆ ಒಬ್ಬ ಯುವಕ ದೇವಸೇವಕ ತುತ್ತಾದ ಕಥೆಯನ್ನು ಕಳೆದ ಬಾರಿ ಮೆಂಫಿಸ್‌ನಲ್ಲಿ ತಂಗಿ ದ್ದಾಗ ಕೇಳಿದ್ದ. ಆತನೆ ಇರಬಹುದೆ ಈ ಮೆನ್ನ ?

ಅರೆತೆರೆದ ಎವೆಗಳೆಡೆಯಿಂದ ಮೆನ್ನನನ್ನು ನೋಡುತ್ತ ಅವನ ಮಾತು ಗಳಿಗೆ ಕೆಫ್ಟು ಕಿವಿಗೊಟ್ಟ. ಅವು ಒಳಗಿನ ಆತಂಕವನ್ನು ಹತ್ತಿಕ್ಕಿ, ವಯೋ ವೃದ್ಧನ ಸಂಯಮದಿಂದ ಆಡಿದ ಮಾತುಗಳು.

ಕೆಫ್ಟು ಕೇಳಿದ :

"ಮಹಾ ಅರ್ಚಕರು ಒಮ್ಮೆ ಕೆಂಡ ಕಾರಿದ್ದು ನಿಮ್ಮ ಮೇಲೆಯೇ ಅಲ್ಲವಾ ?"

ಮೆನ್ನನ ದೃಷ್ಟಿಯಲ್ಲಿ ಈ ಲೋಕಸಂಚಾರಿ ಸರ್ವಜ್ಞ. ಮುಗುಳ್ನಗೆ ಬೀರಿ, "ನಾನೇ ಆ ಭಾಗ್ಯಶಾಲಿ," ಎಂದ.

ಆತ ಹೇಳಿದುದನ್ನೆಲ್ಲ ನಂಬಲು ಬೇರೆ ಪ್ರಮಾಣ ಪತ್ರ ಕೆಫ್ಟುಗೆ ಬೇಕಿರಲಿಲ್ಲ.

ಅತಿಥಿಗೃಹದ ಮೇಲಿನ ದಿಗ್ಬಂಧನಕ್ಕೆ ರಕ್ಷಣೆಗಿಂತಲೂ ಹೆಚ್ಚು ಪ್ರಬಲ ವಾದ ಬೇರೆ ಕಾರಣ ಇರಬೇಕು ಎನಿಸಿತು ವರ್ತಕನಿಗೆ.

ಆತ ಪ್ರಶ್ನಿಸಿದ :

"ನೀರಾನೆ ಪ್ರಾಂತದ ನಾಯಕರಿಗೆ ಅಪಾಯ ಸಂಭವಿಸಬಹುದು ಅಂತೀರಾ ?"

ಮೆನ್ನನ ಕಣ್ಣುಗಳಲ್ಲಿ ಕಂಬನಿ ತುಂಬಿತು. ಎವೆಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು ಆತ ಉತ್ತರಿಸಿದ :

"ಹೌದು. ಮಹಾ ಹಸುರು ಸಮುದ್ರದಿಂದ ನಿಮ್ಮ ನಾವೆ ಬರ್ತದೆ, ಬಂದ ತಕ್ಷಣ ನಿಮ್ಮನ್ನು ಕಾಣ್ಬೇಕು ಅಂತ ಮೆನೆಪ್‌ಟಾ ಅಣ್ಣ ಅವತ್ತೇ ಹೇಳಿದ್ರು."

"ಆಗಲಿ, ನಾಳೆ ಅರಮನೆಗೆ ಬರ್‍ತೀನೆ; ಅಮಾತ್ಯರನ್ನು ಭೇಟಿಯಾಗ್ತೀನೆ. ಹಾಗೆಯೇ ಮೆನೆಪ್‌ಟಾರನ್ನೂ ಕಾಣ್ತೀನೆ. ಅವರಿಗೆ ತಿಳಿಸಿಬಿಡಿ."

"ನೀರಾನೆ ಪ್ರಾಂತಕ್ಕೆ ಯಾರ ಕೈಲಾದರೂ ಸಂದೇಶ ಕಳಿಸ್ಬೇಕು ಅಂದ್ಕೊಂಡು ಕಟ್ಟೆಗೆ ಬಂದೆ. ನೀವೇ ಸಿಕ್ಕಿದಿರಿ. ನೆಮ್ಮದಿಯಿಂದ ವಾಪಸು ಹೋಗ್ತೀನೆ."

"ಕಳ್ಳಬಾಗಿಲಿನ ಮೂಲಕ ಹೊರಗೆ ಬಂದಿರಾ ?"

"ಹೂಂ !"

"ನೀರಾನೆ ಪ್ರಾಂತಕ್ಕೆ ಸುದ್ದಿ ಮುಟ್ಟಿಸೋ ವಿಷಯ ಚಿಂತೆ ಬೇಡ. ನಾಳೆ ರಾತ್ರಿಯೇ ನಾವು ಆ ದಿಕ್ಕಿಗೆ ಹೊರಡ್ತೀವೆ."

ಮೆನ್ನ ಕುಪ್ಪಳಿಸುತ್ತ ಕಟ್ಟೆಗೆ ಬಂದು, ದಂಡೆಯುದ್ದಕ್ಕೂ ಸಾಗಿದ. ಪ್ರಾಕಾರದ ತೂಬಿನತ್ತ.

ಕಟ್ಟೆಯ ಮೇಲಿದ್ದ ಕೆಫ್ಟುವಿನ ಅಂಬಿಗರು ತಮ್ಮ ಯಜಮಾನ ಏನಾದರೂ ಹೇಳಬಹುದೆಂದು ಕಾದರು. ಹುಚ್ಚ ಮೆನ್ನ ಮಹತ್ವದ ಸಂಗತಿಯನ್ನು ತಿಳಿಸಿದಂತಿತ್ತು.

ಅಂಬಿಗರ ಮುಖ್ಯಸ್ಥನನ್ನು ಕರೆದು ಕೆಫ್ಟು ನುಡಿದ :

"ಇಲ್ಲಿ ಹೇರು ಇಳಿಸುವುದೂ ತುಂಬಿಕೊಳ್ಳುವುದೂ ಒಂದೇ ಹಗಲಿನಲ್ಲಿ ಆಗ್ಬೇಕು. ನಾಳೆ ರಾತ್ರಿಯೇ ಇಲ್ಲಿಂದ ಪ್ರಯಾಣ.

ಆತ ತಲೆ ತುರಿಸಿದ :

"ಮೆಂಫಿಸ್‌ನಲ್ಲಿ ಒಂದು ದಿವಸದ ವಿಹಾರ ಅಂತ ಹೇಳಿದ್ದಿರಿ...."

"ಹೌದು. ಆದರೆ ಇದು ಅಸಾಧಾರಣ ಪರಿಸ್ಥಿತಿ. ವಾಪಸು ಬರ್‍ತಾ ಒಂದು ದಿವಸವಲ್ಲ ಒಂದು ವಾರ ತಂಗೋಣ. ಅಂಬಿಗರಿಗೆಲ್ಲ ಹೇಳು. ಆ ವಾರ ವಿಡೀ ಕುಡಿತದ ಖರ್ಚೆಲ್ಲ ನನ್ನದೇ...."

* * * *

ಕೆಫ್ಟುವಿನ ನಾವೆ ಬಂದಾಗ ಮೆಂಫಿಸಿನ ವಣಿಕಪ್ರಮುಖರಿಗೆ ಸಡಗರ. ಆದರೆ ಈ ದಿನ ಕೆಫ್ಟು ವರ್ತಕರೊಡನೆ ಮೌಲ್ಯಮಾಪನದ ಮಾತುಕತೆಯನ್ನು ಬೇಗನೆ ಮುಗಿಸಿ, ಕೊಡುವ ಕೊಳ್ಳುವ ಹೊಣೆಯನ್ನು ನಾವೆಯ ಲೆಕ್ಕಿಗನಿಗೆ ಒಪ್ಪಿಸಿ, ಕಾಣಿಕೆಯೊಡನೆ ಹಾಗೂ ವಿಕ್ರಯಕ್ಕೆಂದು ತಂದ ಆಭರಣಗಳೊಡನೆ

ಆರಮನೆಗೆ ಧಾವಿಸಿದ, ವಣಿಕ ಮಿತ್ರನೊಬ್ಬ ಎರವಲು ನೀಡಿದ ಪಲ್ಲಕಿಯಲ್ಲಿ ಕುಳಿತು.

ರಾಣಿ ನೆಫರ್‌ಟೀಮ್‌ಳ ಎದುರು ಕೆಪ್ಪು, ಸಕಲ ಶಿಷ್ಟಾಚಾರಗಳ ಸಾಕಾರ ಮೂರ್ತಿ. ಒಮ್ಮೊಮ್ಮೆ ಆತ ತಲೆ ಎತ್ತಿ ನಸುನಗೆ ಬೀರುತ್ತಿದ್ದ. ಆದರೆ ಮಾತುಗಳ ನಡುವೆ ಅವನ ದೃಷ್ಟಿ ನೆಲದ ಮೇಲೆಯೇ ನೆಟ್ಟಿರುತ್ತಿತ್ತು.

ನೆಫರ್‌ಟೀಮ್ ತನ್ನ ಸಂತೋಷವನ್ನು ಮರೆಮಾಚಲಿಲ್ಲ.

"ನಿನ್ನೆಯಷ್ಟೇ ನಿಮ್ಮನ್ನು ಜ್ಞಾಪಿಸ್ಕೊಂಡೆ. ಇವತ್ತು ಬಂದೇ ಬಿಟ್ಟಿರಿ!"

"ಆನ್ ನಗರಿಯಲ್ಲಿ ಒಂದು ಮೀನು ನೆಲಕ್ಕೆ ಹಾರಿ, ಬಡವ, ಮಹಾ ರಾಣಿ ನಿನ್ನನ್ನು ನೆನೆದ್ರು! ಅಂತ ಹೇಳ್ತು. ನೇರವಾಗಿ ಇಲ್ಲಿಗೆ ಬಂದೆ...." ಎಂದ ಕೆಪ್ಪು, ತಲೆ ಬಾಗಿ ನಮಿಸಿ.

ಮುಗ್ಗಾಲುಪೀಠದ ಮೇಲಿರಿಸಿದ್ದ ಕಾಣಿಕೆ ತಟ್ಟೆಯತ್ತ ನೋಡಿ ನೆಫರ್‌ಟೀಮ್ ಕೇಳಿದಳು :

"ಏನೋ ತಂದಿರೋ ಹಾಗಿದೆ."

"ಶಿರಸ್ಸಿಗೆ ಕೇಶ ಕವಚ, ಮಹಾರಾಣಿ," ಎನ್ನುತ್ತ ಕೆಪ್ಪು ಕಾಣಿಕೆಯನ್ನು ಆವರಿಸಿದ್ದ ಹಳದಿ ಬಣ್ಣದ ನುಣುಪು ಬಟ್ಟೆಯನ್ನು ಎತ್ತಿದ.

ಸೆಡ್ ಉತ್ಸವದ ವೇಳೆಗೆ ಬೇಕಾಗುತ್ತದೆಂದು ರಾಜಧಾನಿಯಲ್ಲೇ ಒಂದೆರಡು ಕೇಶಕವಚಗಳನ್ನು ಮಹಾರಾಣಿ ಮಾಡಿಸಿದ್ದಳು. (ಪೆರೋನಿಗಾಗಿಯೂ ಒಂದೆರಡು ಸಿದ್ಧವಾಗಿದ್ದುವು.) ಕೆಪ್ಪು ಅತ್ಯಂತ ಜಾಗರೂಕತೆಯಿಂದ ಆ ಕವಚವನ್ನೆತ್ತಿ ಅದರ ಹಿಂಬದಿ ಕಾಣಿಸುವಂತೆ ಹಿಡಿದ. ಸಮೃದ್ಧ ಹೆರಳಿನ ಬೆಡಗುಗಾತಿ ಬೆನ್ನು ಹಾಕಿ ಕುಳಿತಿದ್ದಂತೆ ಕಂಡಿತು.

"ಓಹ್! ಎಷ್ಟು ಸೊಗಸಾಗಿದೆ!" ಎಂದಳು ಅರಸಿ.

ಕೆಪ್ಪು ಕವಚವನ್ನು ತಟ್ಟೆಯ ಮೇಲಿರಿಸಿದ. ನೆಫರ್‌ಟೀಮ್ ಬಾಗಿ, ಆ ಕೂದಲಿನ ಮೇಲೆ ಕೈ ಆಡಿಸಿದಳು.

ಆಕೆಯ ದೃಷ್ಟಿಯನ್ನು ಸಂಧಿಸಿ ನಸುನಗೆ ಬೀರಿ, ಪುನಃ ಅವನತ ಶಿರನಾಗಿ ವರ್ತಕ ನುಡಿದ :

"ಮಹಾರಾಣಿಯವರಿಗೆ ಇಷ್ಟವಾಯಿತಲ್ಲ—ನಾನು ಧನ್ಯ. ಇದು

ಅಸ್ಸೀರಿಯದ ಪರಮಸುಂದರಿಯೊಬ್ಬಳ ಕೇಶರಾಶಿ. ಇದನ್ನು ತಯಾರಿಸಿದವನು ಈ ಕಲೆಯಲ್ಲಿ ಅತ್ಯಂತ ನಿಷ್ಣಾತ. ಜಗತ್ತಿನಲ್ಲೇ ಅಪ್ರತಿಮ. ಸೆಡ್ ಉತ್ಸವ ದಲ್ಲಿ ಕೇಶಕವಚದ ಮೇಲೆ ಕಿರೀಟ ಧರಿಸ್ತೀರೆಂತ, ಹೋದ ಸಲ ನಾನು ಇಲ್ಲಿ ದ್ದಾಗ ಗೊತ್ತಾಯ್ತು. ಹೋಗ್ತಾ ಆ ಕುಶಲ ಕರ್ಮಿಗೆ ಹೇಳಿ ಹೋದೆ. ಅವನೇನೋ ಸಕಾಲದಲ್ಲಿ ಸಿದ್ಧಪಡಿಸಿದ. ಆದರೆ ನಾನು ಬ್ಯಾಬಿಲನಿನಲ್ಲಿ ತಿಂಗಳಿಗೂ ಹೆಚ್ಚುಕಾಲ ನಿಲ್ಲಬೇಕಾಯಿತು. ಈ ಕವಚಕ್ಕೆ ಅದೃಷ್ಟವಿಲ್ಲ, ಸೆಡ್ ಉತ್ಸವ ಮುಗಿದಿರ್‍ತದೆ—ಅಂದ್ಕೊಂಡೇ ಬಂದೆ. ಆದರೆ ನನ್ನ ಪುಣ್ಯ. ಮಹಾ ಅರ್ಚಕರ ಕೃಪೆಯಿಂದ ಸಕಾಲದಲ್ಲೇ ನಾನು ಬಂದ ಹಾಗಾಯ್ತು !"

"ಹಹ್ಹ ! ಎಲ್ಲರ ಮೇಲೂ ಮಹಾ ಅರ್ಚಕರ ಕೃಪೆ ಇರೋದರಿಂದಲೇ ನಾವು ಇವತ್ತು ಇಷ್ಟು ಪ್ರಸನ್ನರಾಗಿದ್ದೇವೆ."

"ಎಲ್ಲ ಸುಖಾಂತವಾಯಿತಲ್ಲ. ನೀರಾನೆ ಪ್ರಾಂತದ ದೆಸೆಯಿಂದ ತೊಂದರೆ ಯಾಗಲಿಲ್ಲವಲ್ಲ...."

"ನೀರಾನೆ ಪ್ರಾಂತ ? ಹ್ಣ.... ಸಮಸ್ಯೆಗಳೆಲ್ಲ ಬಗೆಹರೀತವೆ. ಅದು ರಹಸ್ಯ."

"ಸಹಜವೇ. ಆಭರಣಗಳನ್ನು ತರ್‍ತೀನೆ ಅಂದಿದ್ದೆನಲ್ಲ ? ನೋಡ್ತೀರಾ ?"

"ಹುಂ. ಹುಂ."

ಪೆಟಾರಿಯನ್ನು ತೆರೆಯಲೆಂದು ಬಾಗಿದಾಗ ಕೆಫ್ರುವಿನ ಗಡ್ಡ ಅವನ ಹರವಾದ ಎದೆಯನ್ನು ಸವರಿತು. ಮಹಾರಾಣಿ ಅದನ್ನೂ ಅವನ ಮೇಲುದ ವನ್ನೂ ದಿಟ್ಟಿಸಿದಳು.

ಸೊಂಟಪಟ್ಟಿ, ತೋಳುಬಂದಿಗಳು, ಕಿರೀಟ ಪ್ರತಿಯೊಂದೂ ರತ್ನಖಚಿತ. ಛಾವಣಿಯ ಜಾಲಂದ್ರದಿಂದ ಒಳಕ್ಕೆ ನುಸುಳಿದ್ದ ಸೂರ್ಯ ಕಿರಣಗಳು ಆಭರಣಗಳ ಮೇಲೆ ಬಿದ್ದು, ಅವು ಝಗಝಗಿಸಿದುವು. ಕೆಫ್ರು ಕಿರೀಟವನ್ನೆತ್ತಿ ಕೇಶಕವಚದ ಮೇಲ್ಗಡೆಗೆ ತಂದು, ರಾಣಿಯ ಮುಖ ನೋಡಿದ. ನೆಫರ್ ಟೀಟೀ ಗಂಭೀರವಾಗಿರಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಅವಳ ಅಂಗೈಗಳು ಪರಸ್ಪರ ಹೆಣೆದುಕೊಂಡು ವಕ್ಷಸ್ಥಲದ ಮೇಲೆ ವಿರಮಿಸಿದುವು.

"ಮೌಲ್ಯ ಮೂರು ಸಹಸ್ರ ದೆಬೆನ್ ಬಂಗಾರ, ಮಹಾರಾಣಿ."

"ಬೊಕ್ಕಸದಿಂದ ಈಗಲೇ ಕೊಡಿಸ್ಲಾ ?"

ಬೇಡಿ, ವಾಪಸಾಗುವಾಗ ತಗೊಳ್ತೇನೆ. ಅಷ್ಟೊಂದು ಬಂಗಾರ ಹೊತ್ಕೊಂಡು ದಕ್ಷಿಣದ ಕಡೆ ಯಾಕೆ ಹೋಗ್ಲಿ ? ದಾರೀಲಿ ನೀರಾನೆ ಪ್ರಾಂತ ದಂಥ ಅಪಾಯದ ಸ್ಥಳಗಳು ಬೇರೆ."

"ಅರಮನೆಯ ಪ್ರೀತಿಪಾತ್ರ ವರ್ತಕರಾದ ನಿಮಗೆ ಐಗುಪ್ತದಲ್ಲಿ ಯಾರಿಂದಲೂ ಅಪಾಯ ತಟ್ಟದು. ಸೆಡ್ ಉತ್ಸವ ಆದ್ಮೇಲೆ ನೀರಾನೆ ಪ್ರಾಂತವೂ ಸುರಕ್ಷಿತವಾಗ್ತದೆ. ಅಲ್ಲಿಗೆ ನಮ್ಮ ದಂಡು ಕಳಿಸ್ತೇವೆ.

ಕೆಫ್ಟು ಗೌರವಪೂರ್ವಕವಾಗಿ ವಂದಿಸಿ, ತಲೆಯೆತ್ತಿ ಹೇಳಿದ :

"ದೃಢವಾದ ಆತ್ಮವಿಶ್ವಾಸವನ್ನೂ ತೋಳ್ಬಲವನ್ನೂ ಸೂಚಿಸುವ ಅಧಿ ಕಾರವಾಣಿ ! ನಿಮ್ಮ ದೇಶದಲ್ಲಿ ಹೊಸ ಉಸಿರು ಸಂಚರಿಸ್ತದೆ, ಮಹಾರಾಣಿ.... ಆಭರಣಗಳ ಮೌಲ್ಯವನ್ನು ಈಗಲೇ ಪಡೀಬೇಕು ಅನ್ನೋ ಆತುರ ನನಗಿಲ್ಲ. ಮೂರು ಸಹಸ್ರ ದೆಬೆನ್ ಬಂಗಾರ ಆಮೇಲೆ ಕೊಡುವಿರಂತೆ."

"ಇವತ್ತಿನಿಂದ ಹತ್ತನೇ ದಿವಸ ಸೆಡ್ ಉತ್ಸವ. ಅದನ್ನು ಮುಗಿಸಿ ಕೊಂಡು ಇಲ್ಲಿಂದ ಮುಂದಕ್ಕೆ ಹೋಗಿ ಕೆಫ್ಟು."

"ನನ್ನೂರಿನಿಂದ ಹೊರಡ್ತಾ ನಾನೂ ಹಾಗೆ ಯೋಚಿಸಿದ್ದೆ, ಒಡತಿ. ಆದರೆ ದಾರಿಯಲ್ಲಾದ ವಿಲಂಬದ ಕಾರಣ ನಾನು ಬೇಗ ಬೇಗನೆ ಪ್ರವಾಸ ಮುಗಿಸ್ಬೇಕು. ಪ್ರಯತ್ನಿಸ್ತೇನೆ. ಉತ್ಸವದ ಹೊತ್ತಿಗೆ ಇಲ್ಲಿಗೆ ವಾಪಸು ಬಂದರೂ ಬಂದೆ."

"ವರ್ತಕರು. ನಿಮಗೆ ವ್ಯಾಪಾರ ಮುಖ್ಯ."

"ನಾನು ಅರಿಯದೆ ಮಹಾರಾಣಿಯ ಮನಸ್ಸನ್ನು ನೋಯಿಸಿದ್ದರೆ ಕ್ಷಮಿಸ್ಬೇಕು."

"ಕ್ಷಮಿಸಿದ್ದೇವೆ. ಉತ್ಸವಕ್ಕೇನಾದರೂ ಬರದಿದ್ದರೆ ನೀವು ತಪ್ಪು ಕಾಣಿಕೆ ಕೊಡಬೇಕಾದೀತು. ಒಬ್ಬ ಗುಲಾಮನನ್ನು—"

"ನಾನೇ ಗುಲಾಮನಾಗಿ ಇಲ್ಲಿರಲಾ ?"

"ಊಹೂಂ. ನೀವು ಹತ್ತು ದೇಶ ಸುತ್ತುತ್ತಿದ್ದರೇ ನಮಗೆ ಲಾಭ. ನುಬಿಯದಿಂದ ಒಬ್ಬ ಕುಳ್ಳ ಮನುಷ್ಯಪ್ರಾಣಿಯನ್ನು ತನ್ನಿ."

"ತರ್ತೇನೆ ಮಹಾರಾಣಿ !"

* * * *

ಮಹಾರಾಣಿಯ ಮಾತುಗಳು ಗಂಡಾಂತರದ ಮುನ್ಸೂಚನೆಯನ್ನು ನೀಡಿದ್ದುವು. ರಾಣೀವಾಸದಿಂದ ಅಮಾತ್ಯಭವನಕ್ಕೆ ಹೋಗುತ್ತ, ಸದ್ಯದಲ್ಲೆ ಏನಾಗಬಹುದೆಂಬುದನ್ನು ಕೆಫ್ಟು ತರ್ಕಿಸಿದ: ನೀರಾನೆ ಪ್ರಾಂತದ ಮೇಲೆ ದಂಡಯಾತ್ರೆ ನಡೆಯುವುದು ಖಂಡಿತ. ಮೆನೆಪ್ಟಾನನ್ನು ಊರಿಗೆ ತೆರಳಲು ಬಿಡುವರೋ ಇಲ್ಲವೋ....

ಅಮಾತ್ಯ ಕೆಫ್ಟು ಜತೆ ಬಹಳ ಎಚ್ಚರಿಕೆಯಿಂದ ಮಾತನಾಡಿದ, ಬಹಳ ನಯವಾಗಿ. ಕಳೆದ ಬಾರಿ ಕಂಡಿದ್ದ ಅಳುಕು ಈಗ ಇರಲಿಲ್ಲ....

ಕುಶಲ ಪ್ರಶ್ನೆಗಳ ಬಳಿಕ ಆಮೆರಬ್ ಕೇಳಿದ:

"ನಿಮ್ಮ ಸ್ನೇಹಿತ ಇಲ್ಲಿದ್ದಾನೆ."

"ಯಾರು? ಮೆನೆಪ್ಟಾ? ನನ್ನ ಹೊಸ ಗಿರಾಕಿ."

"ಹ್ಞ. ಹ್ಞ."

"ಇಲ್ಲಿದ್ದಾನೇಂತ ಇವತ್ತು ತಾನೇ ಗೊತ್ತಾಯ್ತು. ಅವನನ್ನು ನೋಡಿ ಹೋಗ್ತೇನೆ."

ಆಮೆರಬ್ ಕಣ್ಣೆವೆಗಳನ್ನು ಅರೆಮುಚ್ಚಿ ಯೋಚನೆಗಳಿಗೆ ತೆರೆ ಎಳೆದು, ಸ್ಪಷ್ಟವಾಗಿ ನುಡಿದ:

"ಕೆಫ್ಟು ನೀವು ನಮಗೆ ಬಹಳ ಬೇಕಾದವರು. ಮೆನೆಪ್ಟಾನ ಭೇಟಿಗೆ ನೀವು ಹೋದರೆ, ಮಹಾಪ್ರಭುವಿನ ಮನಸ್ಸಿಗೆ ನೋವಾಗ್ತದೆ."

"ಮಹಾಪ್ರಭುವಿಗೊ? ಮಹಾ ಅರ್ಚಕರಿಗೊ?"

"ಹ್ಯಾಗೆ ಬೇಕಾದರೂ ತಿಳಕೊಳ್ಳಿ."

"ಇಂಥ ವಿಷಯದಲ್ಲಿ ಅಮಾತ್ಯರು ಅಸಹಾಯರು ಅಂತಲೆ?"

"ದೇಶದ ಹಿತದೃಷ್ಟಿಯಿಂದ ಇದು ನಾನೇ ಹೊರಿಸಿರೋ ನಿರ್ಬಂಧ, ಕೆಫ್ಟು."

"ನನಗೊಬ್ಬ ಗಿರಾಕಿ ಕಡಿಮೆಯಾದ ಹಾಗಾಯ್ತು!"

"ಹಹ್ಹ" ಎಂದು ನಕ್ಕು ಆಮೆರಬ್ ಮಾತು ಬದಲಿಸಿದ. "ಅಸ್ಸೀರಿಯದ ದೊರೆಯನ್ನು ಕಂಡಿದ್ದಿರಾ?"

"ಹೌದು. ಹತ್ತು ದಿನ ಅವರ ಆತಿಥ್ಯ ಸ್ವೀಕರಿಸಿದೆ. ವಾಣಿಜ್ಯಾಭಿವೃದ್ಧಿಯಾಗಿದೆ. ಜನರ ಸಂಪತ್ತು ಹೆಚ್ಚಿದೆ. ಅವರು ಯುದ್ಧಾತುರರಾಗಿಲ್ಲ.

ಆದರೂ ದೇಶದ ಗಡಿ ರಕ್ಷಣೆಯ ವಿಷಯದಲ್ಲಿ ಅಲಕ್ಷ್ಯ ಮಾಡಿಯೂ ಇಲ್ಲ."

"ಸಂತೋಷದ ಸಂಗತಿ. ಸ್ನೇಹಿತರ ಉತ್ಕರ್ಷದಿಂದ ನಮಗೆ ಸಹಜ ವಾಗಿಯೇ ಆನಂದವಾಗ್ತದೆ."

"ಮಹತ್ವದ ಸುದ್ದಿ—ಕಂಚಿಗಿಂತಲೂ ಗಟ್ಟಿಯಾದ ಒಂದು ಲೋಹ ವನ್ನು ಅವರು ಕಂಡುಹಿಡಿದಿದ್ದಾರೆ."

"ಹೌದೆ ? ಹೌದೆ ? ಎಂಥ ಲೋಹ ?"

"ಹೆಸರಿಟ್ಟಿಲ್ಲ. ನೋಡೋದಕ್ಕೆ ಕಪ್ಪಗಿದೆ."

"ಎರಡು ಲೋಹಗಳ ಮಿಶ್ರಣದಿಂದ ಅದನ್ನು ತಯಾರಿಸ್ತಾರೊ ?"

"ನೇರವಾಗಿ ಕಲ್ಲುಮಣ್ಣಿಂದ್ಲೇ ಪಡೀತಾರಂತೆ."

"ವಿಧಾನ ಯಾವುದೊ ?"

"ಮಹಾ ಗೋಪ್ಯ. ಅರಮನೆಯ ಕರ್ಮಾಗಾರದಲ್ಲಿ ಅದು ಗುಟ್ಟಾಗಿ ಸಿದ್ಧವಾಗ್ತಿದೆ."

"ಖಂಡಿತ ಬಂಗಾರದಷ್ಟು ಬೆಲೆ ಉಳ್ಳದ್ದು ಅಲ್ಲ ಅಲ್ಲವೆ ?...."

"ಬೆಲೆ ಅಷ್ಟಿಲ್ಲ. ಆದರೆ, ಹೇರಳವಾಗಿ ಈ ಲೋಹ ಸಿಕ್ಕಿದ್ರೆ ಶಕ್ತಿಯುತ ಅಸ್ತ್ರಗಳನ್ನು ತಯಾರಿಸ್ಬೌದು. ಆಗ ಬೇರೆಯವರ ಬಂಗಾರವೆಲ್ಲ ಸುಲಭವಾಗಿ ಅವರ ವಶವಾಗ್ತದೆ."

ಅಮಾತ್ಯ ಯೋಚನಾಮಗ್ನನಾದ. ನಿಧಾನವಾಗಿ ಆತನೆಂದ :

"ಅಸ್ಸೀರಿಯ ನಮ್ಮ ಮಿತ್ರದೇಶ. ಆದರೂ ಈ ಹೊಸ ಲೋಹದ ಸುದ್ದಿ ದಿಗಿಲು ಉಂಟು ಮಾಡುವಂಥಾದ್ದು. ನಿಮ್ಮನ್ನು ನೋಡಿದಾಕ್ಷಣ ಎಲ್ಲ ಅರ ಮನೆಗಳ ಬಾಗಿಲುಗಳೂ ತೆರೆದುಕೊಳ್ತವೆ. ಮುಂದಿನ ಸಲ ನೀವು ಅಸ್ಸೀರಿ ಯದ ದೊರೆಯ ಆತಿಥ್ಯ ಸ್ವೀಕರಿಸುವಾಗ ಈ ಕಪ್ಪು ಲೋಹದ ವಿಷಯ ವಿವರ ವಾಗಿ ತಿಳೀಬೇಕು. ಒಬ್ಬಿಬ್ಬರು ಆ ಲೋಹ ಕರಗಿಸೋ ತಜ್ಞರನ್ನೂ ನಮಗೆ ತಂದುಕೊಡ್ಬೇಕು."

"ಅರಮನೆ ಬಾಗಿಲುಗಳು ತೆರೆದುಕೊಳ್ತವಾ ನನ್ನ ಎದುರು ? ಇಲ್ಲಿ ಅರಮನೆ ಆವರಣದಲ್ಲಿ, ಒಬ್ಬ ಸಾಮಾನ್ಯ ಮನುಷ್ಯನನ್ನು ನೋಡೋದಕ್ಕೂ ನಾನು ಅಶಕ್ತ !"

ಆಮೆರಬ್ ಉಗುಳು ನುಂಗಿದ. ಆತ ಯೋಚಿಸಿದ : ದೀರ್ಘಾವಧಿ

ಲಾಭದ ಆಸೆಯಿಂದ ಸದ್ಯದ ಪರಿಸ್ಥಿತಿಯಲ್ಲಿ ಏರುಪೇರಾಗಲು ಅವಕಾಶ ನೀಡಲಿ? ನಾಳೆ ಲಭ್ಯವಾಗುವ ಲೋಹಕ್ಕಿಂತಲೂ ಈ ದಿನ ಸಾಧ್ಯವಿರುವ ಭದ್ರತೆಗೇ ಹೆಚ್ಚು ಬೆಲೆ. ಅಲ್ಲವೆ ?

ಆದಷ್ಟು ಆತ್ಮೀಯವೆನಿಸುವ ಮುಗುಳುನಗೆ ಸೂಸುತ್ತ ಅಮಾತ್ಯ ಹೇಳಿದ :

"ಪ್ರತಿ ಸಲವೂ ನೀವು ಐಗುಪ್ತದಲ್ಲಿರುವಷ್ಟು ಕಾಲ ರಾಜ ಅತಿಥಿ. ನೀವು ಇಷ್ಟಪಡೋದಾದರೆ, ನಮ್ಮ ವಿದೇಶೀ ವ್ಯಾಪಾರವನ್ನೆಲ್ಲ ಅಧಿಕೃತವಾಗಿ ನಿಮ್ಮ ಮೂಲಕವೇ ನಾವು ಮಾಡಬಹುದು. ನಿಮಗೆ ಈ ಮೆನೆಪ್‌ಟಾನನ್ನು ಭೇಟಿ ಮಾಡುವಂಥ ಚಿಲ್ಲರೆ ವಿಷಯ ಮುಖ್ಯವೊ ? ವಾಣಿಜ್ಯದಿಂದ ಬರುವ ಅಪಾರ ಲಾಭ ಮುಖ್ಯವೊ ?"

ಕೆಫ್ಟು ತಾನೂ ಮಂದಹಾಸ ಬೀರಿದ.

"ಮೆನೆಪ್‌ಟಾ ರಾಜಬಂದಿಯಾಗಿದ್ದಾನೆ ಅಂತ ಭಾವಿಸ್ಲೆ ?"

"ಇನ್ನೂ ಆಗಿಲ್ಲ....ನನ್ನ ವೈಯಕ್ತಿಕ ಅಭಿಪ್ರಾಯ ಹೇಳಲಾ ? ಸಮರ್ಥನಾದ ಹಿರಿಯ ಅಧಿಕಾರಿಯಾಗೋ ಯೋಗ್ಯತೆ ಅವನಿಗಿದೆ. ಆದರೆ...."

ಕೆಫ್ಟು ಒಂದು ಕ್ಷಣ ಕಾದು ನೋಡಿದ. ಅಮಾತ್ಯನ ಮಾತು ಅಲ್ಲಿಗೇ ಕಡಿದುಹೋಯಿತು. ಸಣ್ಣನೆ ನಕ್ಕು ಕೆಫ್ಟು ಅಂದ :

"ಅವನ ವಿಷಯ ಮರೆತುಬಿಡಿ. ಏನೋ ವಾದಕ್ಕೋಸ್ಕರ ಹೇಳ್ದೆ. ಜಗತ್ತಿನ ಬಲಾಢ್ಯ ರಾಷ್ಟ್ರ ಐಗುಪ್ತದ ಅಮಾತ್ಯ ಆಮೆರಬ್‌ರ ಸ್ನೇಹಿತ ನಾನು–ಅಷ್ಟು ಸಾಲದೆ ?"

ಆ ಮಾತುಗಳಿಂದ ಅಮಾತ್ಯ ಸಂತುಷ್ಟನಾದ.

ಕೆಫ್ಟು ತನ್ನ ಮನಸ್ಸಿನ ಅಸಮಾಧಾನವನ್ನು ಒಂದು ಮೂಲೆಗೆ ತಳ್ಳಿ, "ಅಲ್ಲಿ ಇಲ್ಲಿ ಸಣ್ಣಪುಟ್ಟ ಪ್ರವಾಸ ಮಾಡಿ ಬರ್‍ತೇನೆ; ಉತ್ಸವದ ಹೊತ್ತಿಗೆ ಇಲ್ಲಿ ರೋದಕ್ಕೆ ಯತ್ನಿಸ್ತೇನೆ," ಎಂದು ಹೇಳಿ, ದೋಣಿಕಟ್ಟೆಗೆ ಮರಳಿದ.

* * * *

ಮೆನೆಪ್‌ಟಾ ದಿನವಿಡೀ ಕೆಫ್ಟುವಿನ ದಾರಿ ನೋಡಿದ. ಅಮಾತ್ಯನನ್ನು ವರ್ತಕ ಭೇಟಿ ಮಾಡಿದ ಸಂಗತಿ ಸೆನೆಬ್‌ನಿಂದ ತಿಳಿಯಿತು. ('ನಾನು ಹೊರ

ಗಿದ್ದೆ. (ಅಂಗರಕ್ಷಕರೂ ಇರ್‍ಲಿಲ್ಲ. ಏನುಮಾ ತಾಡ್ಕೊಂಡ್ರೋ ಗೊತ್ತಾಗ ಲಿಲ್ಲ. ಯಾಕೊ ಬರಬರ್‍ತಾ ರಾಜಧಾನೀಲಿ ರಹಸ್ಯ ಸಮಾಲೋಚನೆಗಳು ಜಾಸ್ತಿಯಾಗ್ತಿವೆ....')

ಔಟನಿಂದ ಇದನ್ನೆಲ್ಲ ಅರಿತ ಮೆನ್ನ ರಾತ್ರೆ ಮಂದಿರದ ಅರ್ಚಕ ನಿದ್ದೆ ಹೋದೊಡನೆ ದೋಣಿಕಟ್ಟೆಗೆ ಧಾವಿಸಿದ. ಕಟ್ಟೆಯ ಮೇಲೆ ಕೆಫ್ಟುವಿನ ಅಂಬಿಗರು ಮೆನ್ನನಿಗಾಗಿ ಕಾಯುತ್ತಿದ್ದಂತಿತ್ತು. ಕಂಡೊಡನೆ "ಬನ್ನಿ, ಬನ್ನಿ, ಸಾಹುಕಾರ್‍ರು ಕಾಯ್ತಾ ಇದ್ದಾರೆ," ಎಂದರು.

ತನ್ನ ಮುಂದೆ ನಿಂತ ಮೆನ್ನನೊಡನೆ ಕೆಫ್ಟು ಮೃದುಧ್ವನಿಯಲ್ಲಿ ಅಂದ:

"ಒಂದು ನಿಮಿಷ ಕೂಡಾ ಪುರಸೊತ್ತು ಸಿಗಲಿಲ್ಲ. ನೀರಾನೆ ಪ್ರಾಂತದ ನಾಯಕರನ್ನು ನೋಡೋದಕ್ಕೆ ಆಗಲಿಲ್ಲ. ಅವರು ನನ್ನನ್ನು ಕ್ಷಮಿಸ್ಬೇಕು. ನೀವು ಬರೋದನ್ನೇ ಇದಿರು ನೋಡ್ತಿದ್ದೆ. ಈ ಸುಮಾರಿಗೆ ನೀವು ಬಂದೇ ಬರ್‍ತೀರಿ ಅಂತ ನನಗೆ ಖಾತರಿ ಇತ್ತು. ಈಗಿಂದೀಗ ನೀರಾನೆ ಪ್ರಾಂತಕ್ಕೆ ಹೊರಡ್ತೇವೆ. ಸೆಡ್ ಉತ್ಸವದ ಮುನ್ನಾ ದಿನವೇ ಅವರ ಸಂಗಡಿಗರೆಲ್ಲ ಇಲ್ಲಿಗೆ ಬರೋ ಹಾಗೆ ಮಾಡ್ತೇನೆ. ನಾಯಕರು ನಿಶ್ಚಿಂತೆಯಾಗಿರ್‍ಲಿ. ಎಲ್ಲ ಸರಿ ಹೋಗ್ತದೆ."

"ಬಟಾನನ್ನು ಕಂಡು ನೀವು ವಿಷಯ ತಿಳಿಸೋದರಿಂದ ದೊಡ್ಡ ಉಪಕಾರ ಮಾಡಿದಂತಾಗ್ತದೆ."

—ಮೆನ್ನನ ಮಾತು ತಡೆತಡೆದು ಬಂತು.

"ರಾ ನಿಮಗೆ ಒಳ್ಳೇದು ಮಾಡ್ಲಿ—ಅಂತ ನೀವು ನನಗೆ ಹೇಳೋದಿಲ್ಲವಾ ?"

"ನಾನು ದೇವಸೇವಕ. ಅಷ್ಟಾದರೂ ಹೇಳೋದು ಬೇಡವೆ ? ಪ್‌ಟಾ ಅಮೆನ್ ರಾ—ಎಲ್ರೂ ನಿಮಗೆ ಒಳ್ಳೇದು ಮಾಡ್ಲಿ. ಬರಲಾ ?"

ಕೆಫ್ಟು ಕೈಹಿಡಿದು ವಿದಾಯ ಹೇಳಿದ. ನಾವೆಯು ಹಾಯಿಗಳನ್ನಾಗಲೇ ಏರಿಸಿ ಕಟ್ಟಿದ್ದರು. ಅವುಗಳಲ್ಲಿ ಗಾಳಿ ತುಂಬಿಕೊಂಡು ಮುಂದುವರಿಯಲು ನಾವೆ ತುಡಿಯುತ್ತಿತ್ತು. ಮೆನ್ನ ಕಟ್ಟೆ ಸೇರಿದೊಡನೆ, ಹಲಗೆಗಳನ್ನು ತೆಗೆದರು. ಕಟ್ಟೆಯ ಗೂಟದ ಬಂಧನದಿಂದ ನಾವೆಯನ್ನು ಮುಕ್ತಗೊಳಿಸಿದರು. ನಾವೆ ನದಿಯ ನಡುವಿಗೆ ಬರಲೆಂದು ಹುಟ್ಟು ಹಾಕಿದರು ಕೂಡಾ.

ಕೆಲವೇ ಕ್ಷಣಗಳಲ್ಲಿ ನಾವೆಯ ದೀಪಗಳು ಮಸಕು ಚಿಕ್ಕೆಗಳಾದುವು. ನದಿಯ ಹರಿವಿಗೆ ಇದಿರಾಗಿ, ದಕ್ಷಿಣಕ್ಕೆ, ನೀರನ್ನು ಸೀಳಿಕೊಂಡು ನಾವೆ ಸಾಗಿತು.

೧೦

ಹಿರಿಯ ಸಲಹೆಗಾರ ಹೆಖ್ವೆಟ್ ಆನ್‌ನಗರಿಗೆ ಹೊರಟ ದಿನ ರಾಜಧಾನಿ ಯನ್ನು ಬಿಟ್ಟು ಬಟಾ ವೇಗವಾಗಿ ಮಾರ್ಗಕ್ರಮಿಸಿದ. ಪವನ ಶಕ್ತಿಗೆ ತೋಳ್ಬಲ ವನ್ನೂ ಸೇರಿಸಿದರು ಅವನ ಅಂಬಿಗರು. ಬಟಾನೂ ಆಗಾಗ್ಗೆ ಹುಟ್ಟು ಹಾಕಿದ. ಮೆಂಫಿಸ್ ದೂರವಾದಷ್ಟೂ ಹೆಚ್ಚಿತು ಮೆನೆಪ್‌ಟಾನ ನೆನಪು.

—'ಇಷ್ಟು ಹೊತ್ತಿಗೆ ಚೌಕಮಣೆ ಆಟ ಆಡ್ತಿರಬೌದು.'

—'ಊಟದ ಸಮಯ. ನಮ್ಮನ್ನು ನೆನಸ್ಕೋತಿರಬೌದು.'

ನೀರಾನೆ ಪ್ರಾಂತ ಹತ್ತಿರವಾದಂತೆ ಸಂಗಾತಿಗಳೆಲ್ಲರ ಸ್ಮರಣೆ. ತಾನು ಈ ಪ್ರಾಂತದ ಸಾರಿಗೆ ಮುಖ್ಯಸ್ಥ. ಎರಡು ತಿಂಗಳಾಗುತ್ತ ಬಂತಲ್ಲ ಊರಿನ ದೋಣಿಕಟ್ಟೆಯನ್ನು ನೋಡದೆ. ತಾನು ನೇಮಿಸಿದ್ದ ಕಿರಿಯ ಸಹಾಯಕ ಬಂದ–ಹೋದ ದೋಣಿಗಳ ಲೆಕ್ಕವನ್ನು ಇಟ್ಟಿರುವನೊ ಇಲ್ಲವೊ ? ಮೆನೆಪ್‌ಟಾಗೆ ಹೆಂಡತಿಯ–ಮಗನ ಯೋಚನೆಯೇ ಇಲ್ಲ ಎಂದು ತಾನು ಪರಿಹಾಸ್ಯ ಮಾಡಿದ್ದ. ಆದರೆ ತನಗೊ? ಕಳೆದ ಕೆಲ ವರ್ಷಗಳಲ್ಲಿ ಇಷ್ಟು ದೀರ್ಘ ಕಾಲ ತಾನೆಂದೂ ಊರು ಬಿಟ್ಟಿರಲಿಲ್ಲ.....ಖ್ನೆಮುದೇವ ಎರಡು ದಂಡೆಗಳಿಗೂ ಹಸಿರು ಬಳಿದಿದ್ದ. ಬಂಗಾರಹಳದಿಯಾಗಿ ಮಾರ್ಪಟ್ಟಿತ್ತು ಆ ಬಣ್ಣ. ತೆನೆ ಭಾರದಿಂದ ಬಾಗಿದ್ದ ಸಸಿಗಳು. ಗೋದಿ, ಯವೆ. ಕುಯಿಲು ಹತ್ತಿರ ಬಂತು. ಒಂದೆರಡು ಪ್ರಾಂತಗಳಲ್ಲಿ ಕುಯ್ಲು ನಡೆಸಿದ್ದರು ಕೂಡಾ. ತಮ್ಮಲ್ಲಿ ನಾಯಕನಿಗಾಗಿ, ತಮಗಾಗಿ ಕಾಯುತ್ತಿರಬೇಕು ಜನ. ಒಬ್ಬ ಹೇರು ದೋಣಿಯವನ ಮೂಲಕ ತಾನು ಕಳುಹಿಸಿದ್ದ ಸಂದೇಶ ತಲಪಿರಬಹುದು. ತಮ್ಮ ಬಂಧುಗಳ ಆತಂಕವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿರಬಹುದು. ಆದರೂ ಖ್ನೆಮ್‌ಹೊಟೆಪ್ ಕೂಗಾಡುವುದು ಖಂಡಿತ. ಸ್ನೊಫ್ರು ಕೂಡಾ 'ಮೆನೆಪ್‌ಟಾ ರಾಜಧಾನಿ ಯಲ್ಲಿ ಉಳಿದುದು ಸರಿಯಲ್ಲ' ಎನ್ನಬಹುದು. ಅಂತೂ ಪೇಚಿನಲ್ಲಿ ಸಿಲುಕಿ ಕೊಂಡೆವು.

ಮೆನೆಪ್‌ಟಾ ಅಂದಿದ್ದ :

"ಐದಾರು ದಿನ ಇದ್ದು ವಾಪಸಾಗು...."

ಬಟಾ ನುಡಿದಿದ್ದ :

"ನಾನು ಹೋಗ್ತಿರೋದು ನಮ್ಮವರನ್ನು ಕರಕೊಂಡು ಬರೋದಕ್ಕೆ. ನಾವಿಷ್ಟೇ ಜನ ಇದ್ದು ಏನಾದರೂ ಅಚಾತುರ್ಯ ಆದರೆ, ನಾಳೆ ನಮ್ಮ ಜನರಿಗೆ ಹ್ಯಾಗೆ ಮುಖ ತೋರಿಸಲಿ ? ಏನೂಂತ ಹೇಳಲಿ ?"

ಔಟ, ಬೆಕ್ ನಂಬುಗೆಯ ಸಹಚರರು. ನಾಯಕನನ್ನು ಅವರು ನೋಡಿ ಕೊಳ್ತಾರೆ. ಆದರೂ ಬೇಗ, ಆದಷ್ಟು ಬೇಗ ತಾನು ಅವರ ಬಳಿಗೆ ಮರಳ ಬೇಕು, ಇತರ ಬಂಧುಗಳೊಡನೆ.

ಮೇಲು ದಿಕ್ಕಿನಿಂದ ಬಂದ ಕೆಲ ನಾವೆಗಳ ಅಂಬಿಗರು "ಹೋಯ್ !" ಎಂದರು, ದಾಟುತ್ತ. ಪರಿಚಯವಿದ್ದವರು "ಹೋಯ್! ಬಟಾ!" ಎಂದೂ ಕೂಗಿದರು.

ನೀರಾನೆ ಪ್ರಾಂತದ ಗಡಿ ಕಾಣಿಸಿತು.

ಅಂಬಿಗರೆಲ್ಲರಿಗೂ ಮಾತಾಡುವ ಆತುರ.

—"ಪೈರು ಚೆನ್ನಾಗಿದೆ !"

—"ಬೇರೆ ಪ್ರಾಂತಗಳ ಬೆಳೆಗಿಂತ ನಮ್ಮದೇ ಚೆನ್ನ !"

—"ನೋಡಿ. ರೈತರು ಹೊಲಗಳ ಕಡೆ ಬರ್ತಿದ್ದಾರೆ. ಕುಯಿಲು ಯಾವತ್ತು ಅಂತ ನಿಷ್ಕರ್ಷೆ ಮಾಡ್ತಾರೇನೋ...."

ಸ್ವಲ್ಪ ಹೊತ್ತು ಕಳೆದೊಡನೆ ಬಟಾ ಆಳವಾಗಿ ಉಸಿರೆಳೆದು, ಎದೆ ಹಿಗ್ಗಿಸಿಕೊಂಡು, ಚಲಿಸದೆ ನಿಂತ.

"ಇದು ನಮ್ಮ ಜನರ ವಾಸನೆ ! ಊರು ಬಂತು !" ಎಂದ.

ಹೀಗೆ, ಮೆಂಫಿಸಿನಲ್ಲಿ ಕೆಫ್ಟು ಸರಕು ಇಳಿಸುತ್ತಿದ್ದಾಗ ; ಬಟಾ ನೀರಾನೆ ಪ್ರಾಂತದ ಮುಖ್ಯಪಟ್ಟಣದ ದೋಣಿಕಟ್ಟೆಯನ್ನು ಮುಟ್ಟಿದ.

ಬಟಾ ನೇಮಿಸಿದ್ದ ಕಿರಿಯ ಸಹಾಯಕ ಕಟ್ಟೆಯಲ್ಲಿದ್ದ. ಮರದ ಬುಡ ದಲ್ಲಿ ಅವನ ಕಾರ್ಯಾಲಯ. ಒಂದು ಲಿಪಿಸುರುಳಿ ಮತ್ತು ಮಸಿಪಾತ್ರೆ. ಪೀಠ ಗಳಿರಲಿಲ್ಲ.

ಇವನು ಯಾವಾಗ ಬರೆಯಲು ಕಲಿತ ಎಂದು ಬಟಾನಿಗೆ ಅಚ್ಚರಿ. ಅವನ ಅಂಬಿಗರು ಬೆರಗಾಗಿ ಆ ಎಳೆಯನನ್ನು ನೋಡಿದರು.

ಊರೊಳಗೆ ಧಾವಿಸುವ ಆತುರದಲ್ಲಿದ್ದರೂ ಬಟಾ ಆತನನ್ನು ಕೇಳಿದ :

"ಅದೇನು ಲೆಕ್ಕ ಬರೆದಿದ್ದೀಯೋ ನೋಡೋಣ."

ಆತ ಲಿಪಿಸುರುಳಿಯನ್ನು ತಂದ. ಎರಡು ಭಾಗ ಮಾಡಿ ತುಂಡು ಗೆರೆಗಳನ್ನು ಮೂಡಿಸಿದ್ದ. ಬಂದ ದೋಣಿಗೊಂದು ಗೆರೆ, ಹೋದ ದೋಣಿಗೊಂದು.

"ಭೇಷ್ ! ಈ ಲಿಪಿ ನಾನೂ ಕಲೀಬೌದು," ಎಂದ ಬಟಾ.

ನಾಯಕ ಬರಲಿಲ್ಲವೆ ಎಂದು ಕೇಳುವ ಆಸೆ ಆ ಯುವಕಗೆ. ಆದರೆ ಬಾಯಿ ಬಿಡಲಾರ. ಕುತೂಹಲದ ಎಲ್ಲ ಪ್ರಶ್ನೆಗಳಿಗೂ ಮುಂಚಿತವಾಗಿಯೇ ಬಟಾ ಉತ್ತರ ನೀಡಿದ :

"ನಾವು ಐದಾರು ದಿನಗಳ ಮಟ್ಟಿಗೆ ಬಂದಿದ್ದೇವೆ. ನಾಯಕರನ್ನು ಕರಕೊಂಡು ಬರೋಕೆ ಪುನಃ ಹೋಗ್ಬೇಕು. ಲೆಕ್ಕ ಇಡೋ ಕೆಲಸ ನೀನು ಮುಂದುವರಿಸು. ಊರಲ್ಲೆಲ್ಲ ಚೆನ್ನಾಗಿದ್ದಾರಾ ?"

ಎಡಗೈಯಲ್ಲಿ ಬಟ್ಟೆ ಸುತ್ತಿದ ಓಸಿರಿಸ್ ಮೂರ್ತಿ, ಕಂಕುಳಲ್ಲಿ ಕೊಳಲು ದಾಪುಗಾಲಿಡುತ್ತ ಬಟಾ ನಡೆದ. "ಹೂಂ. ಹೂಂ...." ಕ್ಷೀಣಸದ್ದು ಅವನನ್ನು ಹಿಂಬಾಲಿಸಿತು.

ನೇರವಾಗಿ ಸ್ನೊಫ್ರುವಿನ ಮನೆಗೆ ಹೋಗಬೇಕೆಂದು ಬಟಾ ಉದ್ದೇಶಿಸಿದ್ದ. ಮುಖ್ಯ ಬೀದಿ ಆರಂಭವಾಗುವಲ್ಲಿ ಜನ ಅವನನ್ನು ಕಂಡರು. ಅವನಿಗಿಂತ ಮುಂಚೆಯೇ, ಬಟಾ ಬಂದನೆಂಬ ಸುದ್ದಿ ಹಾರುವ ಹಕ್ಕಿಯಾಯಿತು. ಸೂರ್ಯನಾಗಲೇ ಎರಡು ಮಾರು ಮೇಲಕ್ಕೆ ಏರಿದ್ದ. ಕಿರಣಗಳು ಪ್ರಖರವಾಗಿದ್ದವು. ಕುಶಲಕರ್ಮಿಗಳ ಮನೆಗಳಿಂದ ದುಡಿಮೆಯ ಸದ್ದು ಕೇಳಿಸುತ್ತಿತ್ತು. ರೈತರ ಮನೆಗಳ ಸ್ವಚ್ಛ ಅಂಗಳಗಳು ಪೈರನ್ನು ಸ್ವಾಗತಿಸಲು ಅಣಿಯಾಗಿದ್ದುವು. 'ಎಲ್ಲ ಎಷ್ಟೊಂದು ಚೊಕ್ಕಟವಾಗಿದೆ! ನನ್ನೂರು ಇಷ್ಟು ಸೊಗಸಾಗಿ ಯಾವತ್ತೂ ಕಂಡಿರಲಿಲ್ಲ,' ಎಂದುಕೊಳ್ಳುತ್ತ ಬಟಾ ತನ್ನನ್ನು ಇದಿರ್ಗೊಂಡವರಿಗೆಲ್ಲ ಆತ್ಮೀಯತೆಯಿಂದ ಕೈಬೀಸಿದ.

ಆತ ನಿಲ್ಲುತ್ತಿಲ್ಲವಲ್ಲ ಎಂದು ಜನರಿಗೆ ಕಸಿವಿಸಿ. "ನಿಲ್ಲಪ್ಪೋ" ಎನ್ನುತ್ತ

ಹಲವರು ಅವನನ್ನು ಅಡ್ಡಗಟ್ಟಿದರು.

"ನಾಯಕರು ಬಂದರಾ ? ಔಟ–ಬೆಕ್ ಬರಲಿಲ್ಲವಾ ? ನೀನೊಬ್ಬನೇ ಯಾಕ್ಬಂದೆ ತಿರುಗಿ ಹೋಗ್ತೀಯಾ ?"

ಇವನೂ ಪ್ರಶ್ನೆ ಕೇಳಿದ :

"ನಾವೆಲ್ಲ ಚೆನ್ನಾಗಿದ್ದೇವೇಂತ ಸುದ್ದಿ ಹೇಳಿ ಕಳಿಸಿದ್ದೆ ; ಸುದ್ದಿ ಬಂತಾ?"

"ಹೂಂ ಹೂಂ. ಮಹಾ ಸುದ್ದಿ....ನೀನು ಹೇಳು, ನೀನು ಹೇಳು."

ದಾರಿಯಲ್ಲಿ ನಿಂತರೆ ಆದೀತೇ ಕೆಲಸ ? ಬಟಾ ಸ್ನೊಫ್ರುವಿನ ಮನೆ ಯತ್ತ ಧಾವಿಸಿದ

ಸ್ನೊಫ್ರುವಿನ ಮನೆ ತಲಪುವವರೆಗೂ ಬೀದಿಯುದ್ದಕ್ಕೂ ಜನ. ಮನೆ ಯೊಳಕ್ಕೆ ಕಾಲಿರಿಸಿದಾಗ 'ಅಬ್ಬ ! ಪಾರಾದೆ' ! ಎನಿಸಿತು. ಆದರೆ ಆ ಭಾವನೆ ಗಿದ್ದ ಆಯುಸ್ಸು ಒಂದೇ ಕ್ಷಣ. ಜನ ನುಗ್ಗಿದರು. ಒಳಗಿನ ಸ್ಥಳ ಸಾಲದೆ ಹೊರಗೂ ಸಂದಣಿ ನೆರೆಯಿತು.

ಕಲರವವನ್ನು ಮೀರಿಸಿ ದಳಪತಿಯ ಗಂಟಲು ಕೇಳಿಸಿತು :

"ಶಿಸ್ತು ! ಶಿಸ್ತು ಮರೀಬೇಡಿ !"

ಕ್ಷಣ ಮೌನ. ಬಳಿಕ ಒಂದು ಧ್ವನಿ.

"ವಿಷಯವೆಲ್ಲಾ ಬಟಾ ತಿಳಿಸ್ಲಿ. ಕೇಳ್ಕೊಂಡು ಹೊರಟ್ಹೋಗ್ತೇವೆ."

ಅದಕ್ಕೆ ಹಲವು ಕಂಠಗಳ ಬೆಂಬಲ.

"ಹೌದು, ಹೌದು."

ಖ್ನೆಮ್‌ಹೊಟೆಪ್ ದಾರಿಮಾಡಿಕೊಂಡು, ಒಳಗೆ ಸ್ನೊಫ್ರುವಿನ ಮಗ್ಗು ಲಲ್ಲಿ ನಿಂತಿದ್ದ ಬಟಾನೆಡೆಗೆ ಸಾಗಿ ಪ್ರೀತಿಯಿಂದ ಅವನ ತೋಳು ಮುಟ್ಟಿದ.

"ಜನರಿಗೇನಾದರೂ ಹೇಳಪ್ಪ ಬಟಾ, " ಎಂದು ಸ್ನೊಫ್ರು.

"ಸೆತ್ ನನ್ಮಗಂದು. ಇದು ಚೆನ್ನಾಗಿದೆ," ಎಂದು, ಸುತ್ತಲೂ ಇದ್ದ ವರಿಗೆ ಕೇಳಿಸುವಂತೆ, ಬಟಾ ಗೊಣಗಿದ. ಬಳಿಕ ಇದ್ದಕ್ಕಿದ್ದಂತೆ, ಅರ್ಚಕ ಆಪೆಟ್‌ನ ಹಾಗೆ ಆಶೀರ್ವದಿಸುವ ಭಂಗಿಯಲ್ಲಿ ತೋಳನ್ನೆತ್ತಿದ. ಒಂದೇ ಕ್ಷಣ ದಲ್ಲಿ ಜನರಿಗೆ ಅರ್ಥವಾಯಿತು. ಹಲವರು ಒಟ್ಟಿಗೆ "ಹೊಹ್ಹೋ !" ಎಂದು ನಕ್ಕರು.

"ಥೂ ನಿಮ್ಮ! ನಮಸ್ಕಾರ ಮಾಡೋದ್ಬಿಟ್ಟು ನಗ್ತೀರಾ ?" ಎಂದು

ಬಟಾ ಹುಸಿ ಮುನಿಸು ತೋರಿದ. ಜನ ಬಿದ್ದು ಬಿದ್ದು ನಕ್ಕರು. ಅವರ ಜತೆ ಬಟಾನೂ ಸೇರಿಕೊಂಡ.

ಆ ನಗೆ ನಿಲ್ಲುತ್ತಿದ್ದಂತೆ ಅವನೆಂದ :

"ಕೇಳ್ರಪೋ. ಈಗಾಗಲೇ ನಿಮಗೆ ತಿಳಿದಿರೋ ಹಾಗೆ, ಮೆನೆಪ್‌ಟಾ ಅಣ್ಣ ಚೆನ್ನಾಗಿ ಇದ್ದಾರೆ. ಅವರು ರಾಜಧಾನಿ ತಲಪ್ದಾಗ, ಇಲ್ಲಿ ಪ್ರಾಂತ ಪಾಲನಾಗಿದ್ನಲ್ಲ ಗೇಬು—ಅವನು ಬಂದು ಕೈಹಿಡಿದು ಕುಣಿದ. ಪಲ್ಲಕೀಲಿ ಅರಮನೆಗೆ ಕರಕೊಂಡ್ಹೋದ. (ಕೇಳುತ್ತಿದ್ದವರಿಗೆ ಅಚ್ಚರಿ, ವಿಸ್ಮಯ.) ಟೆಹುಟಿ ಊರಲ್ಲಿರ್ಲಿಲ್ಲ. ನಮ್ಮ ನಾಯಕನ ರಾಜವಂಶದ ಕುಡಿಯೋ ಅನ್ನೋ ಹಾಗೆ ನೋಡ್ಕೊಂಡ್ರಪ್ಪ. ಅರಮನೆಯ ಅತಿಥಿಗೃಹದಲ್ಲಿ ವಾಸ. ಅಲ್ಲಿ ಊಟಕ್ಕೆ ಭೋಜನ ಅನ್ತಾರೆ. ಭೂರಿ ಭೋಜನ. ತಿನ್ನೋದು ಕುಡಿಯೋದು. (ಒಂದು ಸ್ವರ : ಮಜಾ ಮಾಡಿದಿಯಾ ಬಟಾ ?") ಎಲ್ಬಂತು ? ಯಾವ ಘಳಿಗೇಲಿ ಏನಾಗ್ತದೋ ಅಂತ. ನಾನೇ ಹೇಳ್ಬಿಟ್ಟೆ–ದಿವಸಕ್ಕೆ ಒಂದೇ ಬಟ್ಟಲು ಸಾಕು ಅಂತ. ಅಮಾತ್ಯರನ್ನು ನಾಯಕರನ್ನು ಕಂಡ್ರು. ಪೆರೋನ ಭೇಟಿಯೂ ಆಯ್ತು. ಹೋದ ವಾರ ಒಂದು ಭಾರೀ ಔತಣವೂ ಜರುಗ್ತು. ಭೋಜನಕ್ಕಿಂತಲೂ ದೊಡ್ಡ ಔತಣ. ಹೊರಟು ಬರೋಣ ಅಂದರೆ ಸೆಡ್ ಉತ್ಸವ ಒಂದು ಆಗ್ಬೇಕಲ್ಲ. ಆ ಉತ್ಸವ ನಡೀಬೇಕಾದ್ರೆ ಮಹಾ ಅರ್ಚಕರು ಮಂತ್ರ ಹೇಳ್ಬೇಕು. ಅವರೇ ಇಲ್ಲ. ಅವರ್ನ ಕರಕೊಂಡು ಬರೋಕೆ ಹೆಪ್ಟೆಟ್ ಅಂತ ಒಬ್ಬ ಆನ್‌ನಗರಿಗೆ ಹೋದ. ನಾನು ಈ ಕಡೆ ಬಂದೆ. ಊರಿಗೆ ಹೋಗಿ ಐದಾರು ದಿನ ಇದ್ಬಿಟ್ಟು ಬಾ ಅಂತ ಅಣ್ಣನೇ ಹೇಳಿದ್ದು. ಮೆನೆಪ್‌ಟಾ ಅಣ್ಣ ಇದನ್ನೂ ಅಂದ : ನೀರಾನೆ ಪ್ರಾಂತದ ಜನ ನೆಮ್ಮದಿಯಿಂದ ಬದು ಕೋದು ಸಾಧ್ಯವಾಗ್ಬೇಕು; ರಾಜಧಾನಿ ಇದಕ್ಕೆ ಆಸ್ಪದವಿತ್ತರೆ ಎಲ್ರಿಗೂ ಹಿತ; ಅದಕ್ಕಾಗಿ ಇಲ್ಲಿದ್ದು ನಾನು ಪ್ರಯತ್ನಿಸ್ತೇನೆ ; ಊರಲ್ಲಿ ನಮ್ಮ ಜನಕ್ಕೆ ಅದನ್ನು ವಿವರಿಸಿ ಹೇಳು—ಅಂತ. (ಜನರಿಗೆ ಸಮಾಧಾನ, ಅಸಮಾಧಾನ ಎರಡೂ.) ಕುಯಿಲಿಗೆ ತಾನು ಇಲ್ಲಿರ್ಬೇಕು ಅನ್ತಾನೆ ಮೆನೆಪ್‌ಟಾ ಅಣ್ಣ. ಒಂದಷ್ಟು ಜನರ ಜತೆ ಹೋಗಿ ಅಣ್ಣನನ್ನು ಕರಕೊಂಡ್ಬರ್ತೇನೆ. ಸೆಡ್ ಉತ್ಸವ ಮುಗಿದ್ಮೇಲೆ ಒಂದು ಕ್ಷಣವೂ ಅಲ್ಲಿ ನಿಲ್ಲೋದಿಲ್ಲ. (ಒಬ್ಬ : "ಏನೂ ಅಪಾಯ ಇಲ್ಲವಾ?") ಔಟ ಬೆಕ್ ಇದ್ದಾರೆ. ರಕ್ಷಣೆಗೆ ಅಮನ್ ಮೂರ್ತಿ ಕೊಟ್ಬಂದಿದ್ದೇನೆ

(ಇನ್ನೊಬ್ಬ: "ಅದೇನು ನಿನ್ನ ಎಡಗೈಲಿ?") ಥೊಎರಿಸ್ ಮೂರ್ತಿ ನೆಫಿಸ್ ಅತ್ತಿಗೆಗೆ. (ಮತ್ತೊಬ್ಬ: "ಹ್ಹಾದು. ಅವಳಿಗೆ ಇದು ಒಂಭತ್ನೇ ತಿಂಗಳು.") ಮೆನೆಪ್‌ಟಾ ಅಣ್ಣನಿಗೆ ಅಲ್ಲಿರೋದಕ್ಕೆ ಬೇಸರ. ಆದರೂ ಆಮಂತ್ರಣ ಸ್ವೀಕರಿಸಿ ಹೋದ್ಮೇಲೆ ಉತ್ಸವ ಮುಗಿಯೋ ನಕ ಇರಬೇಕಲ್ಲ? (ಒಂದು ಧ್ವನಿ: "ನಮ್ಮ ಭೂಮಾಲಿಕರು ಸಿಕ್ಕಿದ್ರಾ?") ಮಾತಾಡೋಕೆ ಸಿಗಲಿಲ್ಲ. ಅಲ್ಲೇ ಇದ್ದಾರೆ. ರಾಜಧಾನಿ ಬಲು ದೊಡ್ಡ ಊರು. ಒಂದು ಮೂಲೇಲಿ ಸೇರ್ಕೊಂಡಿದ್ದಾರೆ. ಅವರ ಖರ್ಚು ಅರಮನೆ ನೋಡ್ಕೊಳ್ತದೆ. (ಒಬ್ಬ: "ಒಳ್ಳೇ ಅರಮನೆ." ಸುತ್ತಲೂ ನಗೆ.) ಚುಟುಕಾಗಿ ಹೇಳಿದ್ರೂ ಇಷ್ಟೆ, ಉದ್ದವಾಗಿ ಎಳೆದ್ರೂ ಇಷ್ಟೆ, ಕಣ್ರಪ್ಪೋ...."

ಜನ ನಗುತ್ತ ಅದೂ ಇದೂ ಮಾತನಾಡುತ್ತ ಚೆದರತೊಡಗಿದರು.

"ಸೊಗಸಾಗಿ ಮಾತಾಡ್ದೆ, ಬಟಾ ಅಣ್ಣ," ಎಂದ ಖ್ನೆಮ್‌ಹೊಟೆಪ್.

"ಹೋಗಲಿ ಬಿಡಪ್ಪ!" ಎಂದು ಬಟಾ ಹೇಳುತ್ತಿದ್ದಂತೆ ರಾಮೆರಿಪ್‌ಟಾ ಕಾಣಿಸಿಕೊಂಡ.

"ಅಮ್ಮ ಕರೀತಾಳೆ. ಬರ್ತೀರಾ?" ಎಂದ.

"ನೆಫಿಸ್ ಅತ್ತಿಗೇನ ನೋಡಿ ಬರ್ತೇನೆ." ಎಂದು ಬಟಾ ಸ್ನೊಫ್ರುಗೆ ಹೇಳಿ ಮುಗ್ಗುಲು ಮನೆಗೆ ಹೋದ.

ಸ್ನೊಫ್ರುವಿನ ಪತ್ನಿ ನೆಜಮುಟ್ ತಲೆ ಹೊರಹಾಕಿ, "ನಿನ್ನ ಮನೆಗೂ ಹೋಗೋದಕ್ಕೆ ಮರೀಬೇಡ!" ಎಂದಳು.

ಸ್ನೊಫ್ರುವೆಂದ:

"ಅವಸರ ಬೇಡ. ನಾಯಕರ ಮನೆಯಿಂದ ನಿನ್ನಲ್ಲಿಗೆ ಹೋಗಿ ಊಟ ಮಾಡ್ಕೊಂಡು ಬಾ. ಸಾಯಂಕಾಲ ಹಿರಿಯರ ಸಮಿತಿ ಸಭೆ ಕರೆಯೋಣ. ಎಲ್ಲ ವಿಷಯ ಅಲ್ಲಿಯೇ ಮಾತಾಡಿದರಾಯ್ತು."

"ಹೂಂ ಹೂಂ."

* * * *

ತುಂಬು ಗರ್ಭಿಣಿ ನೆಫಿಸ್ ಬಟಾ ತಂದಿತ್ತ ಥೊಎರಿಸ್ ಮೂರ್ತಿಯನ್ನು

ಎದೆಗೊತ್ತಿಕೊಂಡಳು. ಅವಳ ಗಂಟಲಿನಿಂದ ಅರ್ಥಹೀನ ಧ್ವನಿ ಹೊರಟಿತು. 'ಬಸಿರಿನ ರಕ್ಷಣೆಗೂ ಸುಖಪ್ರಸವಕ್ಕೂ ಹೊಣೆಗಾರ್ತಿಯಾದ ದೇವತೆ.'

ರಾಮೆರಿಯನ್ನು ಮಗ್ಗುಲಲ್ಲಿ ಕೂಡಿಸಿಕೊಂಡು ನೆಫಿಸ್ ಕೇಳಿದಳು.

"ಮೂರ್ತಿಯನ ರಾಮೆರಿಯ ತಂದೆಯೇ ಕಳಿಸಿದ್ದಾ ?"

ಹೆಂಗಸಿನ ಲಲ್ಲೆಗರೆಯುವ ಮಾತು ಇದೆಲ್ಲ. ಬಟಾ ಬಲ್ಲ.

"ಹೂಂ, ಅತ್ತಿಗೆ, ತನಗೋಸ್ಕರ ಒಂದು ಅಮೆನ್ ಮೂರ್ತಿಯನ್ನೂ ಅಣ್ಣ ತಗೊಂಡ. ದೂರ ಪ್ರವಾಸದಲ್ಲಿರುವಾಗ ಅಮೆನ್ ದೇವರಲ್ಲವಾ ಬೇಕಾದ್ದು ?"

"ಹೌದು." ಎಂದಳು ನೆಫಿಸ್.

ಮೂರ್ತಿಯನ್ನು ದಿಟ್ಟಿಸಿದ ರಾಮೆರಿಸ್‌ಟಾ ಹೇಳಿದ :

"ಸ್ನೊಫ್ರು ಮಾವ ಇಂಥದೇ ಮಾಡ್ತಾರೆ."

ಬಟಾನ ಉಸಿರು ನಡುದಾರಿಯಲ್ಲೇ ನಿಂತಿತು. ಅರ್ಧ ಕ್ಷಣ. ಧೈರ್ಯ ತಂದುಕೊಂಡು ಆತನೆಂದ :

"ಇನ್ನು ಐಗುಪ್ತದ ದೇಶದಲ್ಲೆಲ್ಲಾ ಸ್ನೊಫ್ರು ಮಾವ ಮಾಡಿದ ಮೂರ್ತಿಗಳೇಇರ್ತವೆ. ಇದು ವರ್ತಕ ಕೆಫ್ಟುವಿನ ಉಪಕಾರ. ಥೊಎರಿಸ್ ಅಮೆನ್‌ರನ್ನು ರಾಜಧಾನಿಯ ಮೂರ್ತಿಗಳ ಅಂಗಡಿಯಿಂದ ಕೊಂಡ್ವಿ. ಅಂಗಡಿಕಾರನ ಹೆಸರು ಅಪೋಫಿಸ್ ಅಂತ. ಅರಮನೆಯ ದೇವಮಂದಿರದ ಅರ್ಚಕ ಇನೇನಿ ಪವಿತ್ರ ಜಲ ಪ್ರೋಕ್ಷಾಳನ ಮಾಡಿದ್ರು."

ಮೂರ್ತಿಯನ್ನು ಎದೆಗವಚಿಕೊಂಡೇ ನೆಫಿಸ್ ಅಂದಳು :

"ಹೌದಾ ? ಹೌದಾ ? ಓ ಥೊಎರಿಸ್, ನಿನ್ನಿಂದಾಗಿ ಎಲ್ಲ ಸುಗಮವಾಗಲಿ ದೇವಿ...."

ಸ್ನೊಫ್ರುವಿನ ಮನೆಯಲ್ಲಿ ಜನರೆದುರು ಹೇಳಿದುದನ್ನೇ ಇಲ್ಲಿಯೂ....

ಬಳಿಕ ಪ್ರಶ್ನೆ :

"ರಾಮೆರಿಯ ತಂದೆ ಪ್ರತಿ ದಿವಸವೂ ನನ್ನನ್ನು ಜ್ಞಾಪಿಸ್ಕೊಳ್ತಿದ್ನಾ ?"

"ಹೂಂ. ರಾಮೆರಿಯನ್ನೂ ಜ್ಞಾಪಿಸ್ಕೊಳ್ತಿದ್ದ."

ಹುಡುಗ ಸಣ್ಣನೆ ನಕ್ಕ.

ನೆಫಿಸ್ ತನ್ನ ಕಣ್ಣುಗಳನ್ನು ಅಗಲಿಸಿ ಅಂದಳು :

"ಅಲ್ಲಿ ದಾಸಿಯರಿಲ್ವಾ ?"

"ಅರಮನೇಲಿ ದಾಸಿಯರಿಗೇನು ಬರಗಾಲ ? ಆದರೆ ಅತಿಥಿಗೃಹಕ್ಕೆ ನಾವು ಯಾರನ್ನೂ ಸೇರಿಸ್ತಿರ್ಲಿಲ್ಲ. ಪೆರೋ ಔತಣಕ್ಕಾಗಿ ಮೆನೆಪ್‌ಟಾ ಅಣ್ಣ ನನ್ನ ಅಲಂಕರಿಸೋದಕ್ಕೆ ದಾಸಿಯರನ್ನು ಕಳಿಸ್ತೇವೆ ಅಂದ್ರು. ಬೇಡ—ಅಂದೆ. ನಾನೇ ಅಣ್ಣನನ್ನು ಅಲಂಕರಿಸ್ದೆ !"

ಸಂತೋಷದಿಂದಲೂ ಸಮಾಧಾನದಿಂದಲೂ ನೆಫಿಸ್ ನಕ್ಕಳು.

"ಎಂಥ ಅಲಂಕಾರ ?"

"ಅದೇ ಕವಡೆಸರ, ಬೆಂಡಿನ ಪಾದರಕ್ಷೆ, ಬೆಳ್ಳಿ ಉಂಗುರ...."

"ಹೊಹ್ಹೋ !"

"ಔತಣದಲ್ಲಿ ಅಣ್ಣನಿಗೆ ಒಂದು ಉಡುಗೊರೆ ಕೊಟ್ರು—ಮಣಿಕಟ್ಟಿನ ಪಟ್ಟಿ."

"ಬಂಗಾರದ್ದಾ ?"

"ಹೂಂ. ರತ್ನಖಚಿತ."

"ಅದನ್ನು ಕಟ್ಕೊಂತಾನಾ ?"

"ಯಾರು ಮೆನೆಪ್‌ಟಾ ಅಣ್ಣನೆ ? ಸರಿ, ಸರಿ...."

ನಿಟ್ಟುಸಿರಿನೊಂದಿಗೆ ನೆಫಿಸ್ ಅಂದಳು :

"ಅವನಿಗೆ ಯಾವುದೂ ಬೇಡ."

ಕುಳಿತಿದ್ದ ಬಟಾನ ಹಿಂಬದಿಯಲ್ಲಿ, ಬಾಗಿಲ ಬಳಿ, ಚಿಲಿಪಿಲಿ ಸದ್ದಾಯಿತು. ಆತನ ಗುಬ್ಬಚ್ಚಿಗಳೇ.

"ಅರೇ !" ಎಂದ ಬಟಾ, ಕೊರಳು ಹೊರಳಿಸಿ, ಎರಡು ತೋಳುಗಳನ್ನೂ ಚಾಚಿದ. ಅವನ ಮಕ್ಕಳಲ್ಲಿ ನಾಲ್ವರು—ಚಿಕ್ಕವರು—ಓಡಿಬಂದು ತಂದೆಯ ಕತ್ತಿಗೆ ಆತು ಬಿದ್ದರು.

"ಏಯ್ ! ಹೇಸು ಜಾಸ್ತಿಯಾಯ್ತು ! ದೋಣಿ ಮಗುಚೀತು ! ಹುಷಾರ್ !" ಎಂದ ಆತ.

ಆ ಸಡಗರದ ಕಾವು ಇಳಿಯುತ್ತಿದ್ದಂತೆ, ನೆಫಿಸ್ ನುಡಿದಳು :

"ಖ್ನೆಮು ಹೆಂಡತಿ ಈ ತಿಂಗಳು ಅಸ್ವಸ್ಥಳಾಗಿಲ್ಲ."

"ಹಾದೆ ? ಒಂದು ಥೊಎರಿಸ್ ಮೂರ್ತಿ ಕೊಂಡ್ಕೊಡು ಅಂತ

ಖ್ನೆಮುಗೆ ಹೇಳ್ಬೇಕು."

"ತಬಬುವಾ ತುಂಬಾ ಖುಷೀಲಿದ್ದಾಳೆ."

"ಪ್ರೀತಿಯ ಮಗಳು ಬಸುರಿ. ಖುಷಿ ಸಹಜವೇ."

ಬಟಾನ ಕಿರಿಯ ಕುವರಿ ಅಂದಳು :

"ಮನೆಗೆ ಹೋಗೋಣ ಅಪ್ಪ."

"ನಡೀರಿ," ಎನ್ನುತ್ತ ಬಟಾ ಎದ್ದ.

"ಹೋಗಿ ಬಾ ಅಣ್ಣ," ಎಂದಳು ನೆಫಿಸ್.

* * * *

ಗಂಡ ಊರಿಗೆ ಬಂದುದು ತಿಳಿದೊಡನೆ ಬಟಾನ ಹೆಂಡತಿ ತಬಬುವಾ ಳಲ್ಲಿಗೆ ಹೋಗಿ ಒಂದು ಹೂಜಿ ಖಿನವ ಎರವಲು ತಂದಳು. ಮಾಂಸದ ತುಣುಕುಗಳ ಉಪ್ಪೇರಿ ಮಾಡಿದಳು. ಮಕ್ಕಳೊಡನೆ ಗಂಡ ಮನೆಯೊಳಕ್ಕೆ ಕಾಲಿರಿಸುತ್ತಲೇ "ಬಿಸಿ ರೊಟ್ಟಿ ತಟ್ತೀನೆ. ಏಳು ಊಟಕ್ಕೆ," ಎಂದಳು.

ಪಡಸಾಲೆಯ ಮಧ್ಯದಲ್ಲಿರಿಸಿದ್ದ ಹೂಜಿ ನೋಡಿ ಬಟಾ, "ನಿಮ್ಮಮ್ಮ ಒಳ್ಳೇವಳು !" ಎಂದ ಮಕ್ಕಳಿಗೆ.

ಬೇರೆ ಊರುಗಳಿಂದ ಬರುತ್ತ ಎಂದೂ ಏನೂ ತಂದವನಲ್ಲ ಬಟಾ. ಉಡುಗೊರೆ ನಿರೀಕ್ಷಿಸುವ ಅಭ್ಯಾಸವೂ ಮಡದಿ ಮಕ್ಕಳಿಗೆ ಇರಲಿಲ್ಲ. ಆತ ಆಗಾಗ್ಗೆ ಮನೆಗೆ ಬರುವುದೇ ಅವರಿಗೆ ಮುಖ್ಯವಾಗಿತ್ತು. "ಏನೇನ್ಕಂಡೆ ?" ಎಂದೂ ಅವರು ಕೇಳುತ್ತಿರಲಿಲ್ಲ. ಆಗ ಚೂರು ಈಗ ಚೂರು ಅವನೇ ಹೇಳು ತ್ತಿದ್ದ.

ಈ ದಿನ ಊಟ ಮುಗಿಯುವುದಕ್ಕೆ ಮೊದಲೇ ಮತ್ತೆ ಜನ ಬರತೊಡ ಗಿದರು. ಬೇರೆಯವರು—ತಡವಾಗಿ ಸುದ್ದಿ ಸಿಕ್ಕಿದವರು.

"ಬನ್ನಿ ಬನ್ನಿ ನೀವೂ ಊಟಕ್ಕೆ," ಎಂದ ಬಟಾ.

"ಬೇಡ, ನೀನು ಉಣ್ಣು," ಎಂದರು ಅವರು.

"ನೀರಾನೆ ಪ್ರಾಂತದವರು ಎಂದರೆ ಸಾಕು. ಎಲ್ಲರೂ ಕಣ್ಣರಳಿಸಿ ನೋಡ್ತಾರೆ," ಎಂದ. ಕೇಳುವವರಿಗೆ ಹೆಮ್ಮೆ.

ಇಲ್ಲಿ ಆ ಎರಡು ತಿಂಗಳಲ್ಲಿ ಏನಾಯಿತೆಂಬುದನ್ನು ಆತ ಕೇಳಿ ತಿಳಿದ.

ಭೂಮಾಲಿಕರ ದಾಸ್ಯವಿಮುಕ್ತರೂ ಚೆನ್ನಾಗಿ ನಾಟಿ ಮಾಡಿದ್ದರು. ಎಲ್ಲ ಹೊಲಗಳಲ್ಲೂ ಫಸಲು ಹುಲುಸಾಗಿ ಬಂದಿತ್ತು.

ಅವರೆಲ್ಲರದೂ ಒಂದೇ ಅಭಿಪ್ರಾಯ : 'ಖುಯಿಲಿಗೆ ಮುಂಚೆ ನಾಯಕರನ್ನು ಕರಕೊಂಡು ಬಂದ್ಬಿಡ್ಬೇಕು."

ಎಲ್ಲರ ಬಯಕೆಗೆ ಒಬ್ಬ ಧ್ವನಿ ನೀಡಿದ :

"ಈ ಸಲ ನಾವೆಲ್ಲ ಬರ್‍ತೀವಪ್ಪೋ."

ಹೊರಗೆ ರಣರಣ ಬಿಸಿಲು. ಆದರೂ ಜನ ಮೆಲ್ಲಮೆಲ್ಲನೆ ಚೆದರಿ ತಮ್ಮ ಮನೆ ಗುಡಿಸಲುಗಳನ್ನು ಸೇರಿಕೊಂಡರು.

ಕಡುಬಿಸಿಲಿನ ವೇಳೆ ಮನೆಯ ತಣುಪು ನೆಲದ ಮೇಲೆ ಮಲಗುವುದು ಬಟಾನಿಗೆ ಇಷ್ಟ.

"ಬಿಸಿಲು ಬಾಡೋ ಹೊತ್ತಿಗೆ ಎಬ್ಬಿಸ್ಬಿಡ್ರಿ. ರಾಜಗೃಹಕ್ಕೆ ಹೋಗ್ಬೇಕು. ಹಿರಿಯರ ಸಮಿತಿ ಸಭೆ ಇದೆ," ಎಂದು ಹೇಳಿ, ತೋಳನ್ನೇ ದಿಂಬಾಗಿ ಮಾಡಿ, ಬಟಾ ಪವಡಿಸಿದ. ಯಾವ ಬಿಸಿಲೂ ತಮಗೆ ನಾಟದೆಂದು ಮಕ್ಕಳೆಲ್ಲ ಆಡಲು ಹೊರ ಹೋದರು. ಬಟಾನ ಹೆಂಡತಿ ಗಂಡನ ಗೊರಕೆ ಸದ್ದಿಗೆ ಕಿವಿಗೊಡುತ್ತ, ಆತನ ಮುಖವನ್ನು ದಿಟ್ಟಿಸುತ್ತ, ಬಹಳ ಹೊತ್ತು ಗೋಡೆಗೊರಗಿ ಕುಳಿತಳು.

* * * *

ರಾಜಗೃಹಕ್ಕೆ ಹೊರಡಲು ಬಟಾ ಅಣಿಯಾಗುತ್ತಿದ್ದಾಗ, ನೆಫರುರಾ ಬಂದಳು :

"ಸಭೆಯಂತೆ. ಹೊರಟಿದ್ದಾನೆ," ಎಂದಳು ಬಟಾನ ಹೆಂಡತಿ.

"ಹಾಗಾದರೆ ಆಮೇಲೆ ಬರ್‍ತೇನೆ," ಎಂದಳು ನೆಫರುರಾ.

ಧ್ವನಿ ಕೇಳಿ ಬಟಾ ಒಳಗಿನಿಂದಲೇ, "ಇರು ನೆಫರು ನೀನು ಬಂದಿದ್ದೆ. ಅಂತ ತಿಳಿಸಿದರೆ ಹಿರಿಯರು ಸುಮ್ನಾಗ್ತಾರೆ. ಚೆನ್ನಾಗಿದ್ದೀಯಾ ?"

"ಹೂಂ. ನೀನು ?"

"ಓಹೋ."

"ಅಣ್ಣನವರು ?"

"ಚೆನ್ನಾಗಿದ್ದಾರೆ. ಆದರೆ ರಾಜಾತಿಥ್ಯದಿಂದ ಬೇಸರ ಬಂದಿದೆ. ವಾಪಸು

ಹೋಗಿ, ಸೆಡ್ ಉತ್ಸವ ಮುಗಿದ ಮಾರನೆ ದಿನವೇ ಕರಕೊಂಡ್ಬರ್ತೀನೆ."

"ಬಹಳ ಜನ ಹೋಗ್ತೀರಾ ?"

"ದೋಣಿ ತುಂಬುವಷ್ಟು."

ಕತ್ತು ಕೊಂಕಿಸಿ ನೆಫರುರಾ ಕೇಳಿದಳು :

"ನಾನೂ ಬರಲಾ ?"

"ಯಾರು ಯಾರು ಹೋಗೋದೂಂತ ಇವತ್ತು ತೀರ್ಮಾನ ಮಾಡ್ತಾರೆ. ನಿನ್ನ ಅಪೇಕ್ಷೇನ ಹಿರಿಯರ ಮುಂದೆ ಇಡ್ತೀನೆ."

"ಅಷ್ಟು ಮಾಡಪ್ಪ."

"ನೆಫರು, ರಾಜಧಾನಿಗೆ ಹೋಗ್ತಾ ನಿನ್ನ ಬುತ್ತಿ ಸವಿದದ್ದೇ ಸವಿದದ್ದು!"

"ಅಣ್ಣನವರಿಗೆ ಇಷ್ಟವಾಯ್ತಾ"

"ಹೂಂ. ಅಣ್ಣನವರಾದ ಅವರಿಗೂ ತಮ್ಮನವರಾದ ನಮಗೂ ! ಇದೇನು ಮಾಡಿದ್ದಾಳೆ ಈಕೆ, ಸ್ವಲ್ಪ ತಿಂದು ನೋಡು—ಅಂದ ನನಗೆ. ತಿಂದು ನೋಡಿ, ಇವಳು ಮನುಷ್ಯಳಲ್ಲ ಮಾಯಾವಿನಿ—ಅಂದೆ....ಒಂದು ವಿಚಾರ ಇದೆ, ನೆಫರು. ನಮ್ಮ ದೋಣಿಕಟ್ಟೆ ಉದ್ದಕ್ಕೂ ಎಡಗಡೆ ಬಲಗಡೆ ಅಂಗಡಿ ಸಾಲು ಕಟ್ಸೋದು. ಅಲ್ಲೊಂದು ಉಪಾಹಾರ ಮಂದಿರ—ನಿನ್ನದು !"

"ಅಣ್ಣ ಒಪ್ತಾರಾ ?"

"ಹೂಂ. ಒಪ್ಪಿದ್ದಾರೆ. ಆಗ ನೀಲನದೀಲಿ ಸಂಚರಿಸೋ ಸಮಸ್ತ ದೋಣಿಗಳೂ ಇಲ್ಲಿ ಒಂದುಹೊತ್ತು ತಂಗ್ತವೆ."

ನೆಫರುರಾಳ ಮುಖಸೌಂದರ್ಯ ಮತ್ತಷ್ಟು ಕಾಂತಿಯುತವಾಗಿ ಬೆಳಗಿತು. ಆಗ ಅವಳೆಂದಳು :

"ನನ್ನ ಬದುಕು ಸಾರ್ಥಕವಾಯ್ತು."

"ನಾನಿನ್ನು ಹೊರಡ್ತೀನೆ," ಎಂದು ಹೇಳಿ ಬಟಾ ಹೊರಬಿದ್ದ.

ರಾಜಗೃಹದತ್ತ ಬಿರಬಿರನೆ ಆತ ನಡೆದ. ನಾಯಕನ ಮೆಂಫಿಸ್ ವಾಸ್ತವ್ಯದ ಬಗೆಗೆ ಜನರೆದುರು ಬೆಳಗ್ಗೆ ಅವನು ಹೇಳಿದ್ದುದು ಊರಿನ ಕೇರಿಗಳಲ್ಲಿ ಸುತ್ತಾಡಿತ್ತು. ನಡೆಯುವ ಬಟಾನನ್ನು ಜಾಲಂದ್ರದ ಮೂಲಕವೋ ತೆರೆದ ಬಾಗಿಲೆಡೆಯಿಂದಲೋ ಎಲ್ಲರೂ ನೋಡುವವರೇ. ಕೆಲವರು ಹೊಸ್ತಿಲು

ದಾಟಿ ಹೊರಬಂದರು. ಸಲಿಗೆಯ ವಂದನೆ. "ಹೇ ಬಟಾ!" "ಹೋ ಬಟಾ!"

ನಿಂತೆನೆಂದರೆ ಕತ್ತಲಾದರೂ ರಾಜಗೃಹ ತಲಪಲಾರೆ ಎಂದುಕೊಂಡು, ಬಟಾ ನಡಿಗೆಯ ವೇಗವನ್ನು ಹೆಚ್ಚಿಸಿದ.

ರಾಜಗೃಹಕ್ಕೆ ಹಸುರು ಕಳೆ. ಸುತ್ತಲಿನ ಉದ್ಯಾನದಲ್ಲಿ ಗಿಡಬಳ್ಳಿಗಳು ಸೊಂಪಾಗಿ ಬೆಳೆದು ಎಲ್ಲಿ ನೋಡಿದರಲ್ಲಿ ಹೂ. ವರ್ಣ ವೈವಿಧ್ಯ. ಆ ಸುಂದರ ಜಗತ್ತಿನೆಡೆಗೆ ತಾನೂ ಅರಳುತ್ತ ಬಟಾ ಅಲಂಕೃತ ಸ್ಮಾರಕ ಕಂಬವನ್ನು ಸಮಿಾಪಿಸಿದ. ಬಳಿಯ ಬಳ್ಳಿ ಮಾಡದ ಕೆಳಗೆ ಯಾರೋ ವಯಸ್ಸಾದ ವ್ಯಕ್ತಿ ಕುಳಿತಿದ್ದುದು ಕಂಡಿತು. ಅಪರಿಚಿತ. ಆತ ಮುಗುಳು ನಕ್ಕು ಬಟಾನೊಡನೆ ಮಾತನಾಡಲು ಬಾಯಿ ತೆರೆದ. 'ನಿಂತರೆ ಕೆಟ್ಟೆ' ಎಂದುಕೊಂಡು ಬಟಾ ರಾಜಗೃಹದ ಮೆಟ್ಟಲುಗಳನ್ನೇರಿದ.

ಮಹಡಿಯ ಮುಖಮಂಟಪದ ದಿಮ್ಮಿಯಿಂದ ಕೆಳಮುಖವಾಗಿ ಬೆಳೆಯುತ್ತಿದ್ದ ಜೇನು ತೊಟ್ಟಿ ಕಾಣಿಸಿತು.

ಸಭಾಂಗಣದ ಮೂಲೆಯಲ್ಲಿ ಸೆಮು, ಥಾನಿಸ್, ಹೆಪೊನ್, ಹೆಮ್‌ಟಿ ಹಾಗೂ ಸ್ನೊಫ್ರು–ಸೆಬೆಕ್ಕು ಮಾತನಾಡುತ್ತ ಕುಳಿತಿದ್ದರು. ಹೊರಗೆ ಇದ್ದ ಇಪ್ಯುವರ್ ತನ್ನೆಲ್ಲ ಹಲ್ಲುಗಳನ್ನೂ ತೋರಿಸುತ್ತ ಬಟಾನನ್ನು ಇದಿರ್ಗೊಂಡ. ಸಭಾಂಗಣದ ಇನ್ನೊಂದು ಮೂಲೆಯಲ್ಲಿ ಒಬ್ಬ ಕಾವಲು ಭಟನೊಡನೆ ಮಾತನಾಡುತ್ತ ನಿಂತಿದ್ದ ಖ್ನೆಮ್‌ಹೊಟೆಪ್, "ಆಗಲಿ, ನೀನೀಗ ಹೋಗು," ಎಂದು ನುಡಿದು, ಆ ಯೋಧನನ್ನು ಬೀಳ್ಕೊಟ್ಟು ಬಟಾನೆಡೆಗೆ ಧಾವಿಸಿದ.

ಹಿರಿಯರ ಗುಂಪಿನ ಬಳಿ ಕುಳಿತುಕೊಳ್ಳುತ್ತ ಬಟಾನೆಂದ :

"ತಡವಾಯ್ತು. ಅಂಬಿಗ ಬಟಾನನ್ನು ಕಂಡರೆ ಜನರಿಗೆ ಇಷ್ಟೊಂದು ಪ್ರೀತಿ ಅಂತ ನನಗೆ ಗೊತ್ತಾದದ್ದೇ ಇವತ್ತು. ಎಲ್ಲರೂ ಮಾತನಾಡಿಸುವವರೇ. ಹೊರಡುವ ಹೊತ್ತಿಗೆ ಸರಿಯಾಗಿ ನೆಫರುರಾ ಬೇರೆ ಬಂದ್ಲು."

ಹೆಮ್‌ಟಿ ಕೇಳಿದ :

"ಅವಳಿಗೆ ಏನಂತೆ ?"

"ಇನ್ನೇನಿದೆ ? ಅಣ್ಣ ಚೆನ್ನಾಗಿದ್ದಾರಾ ? ಕರಕೊಂಡು ಬರೋದಕ್ಕೆ ಬಹಳ ಜನ ಹೋಗ್ತೀರಾ ? ನಾನೂ ಬರಲಾ ?"

ಅಲ್ಲಿದ್ದವರು ಸದ್ದು ಮಾಡದೆ ಚುಟುಕಾಗಿ ನಕ್ಕರು.

ಬಟಾನೆಂದ :

"ಜೇನು ತೊಟ್ಟಿ ನೋಡಿದೆ. ಉದ್ಯಾನ ತುಂಬ್ಕೊಂಡಿದೆ."

ಸೆಬೆಕ್ನು ಬೆಳೆಸಿದ ಉದ್ಯಾನ. ಮಂದಹಾಸ ಬೀರುತ್ತ ಅವನೆಂದ :

"ಮುಚ್ಚಂಜೆ ಹೊತ್ತಿಗೆ ಊರಿನ ಜನ ಬಂದು ಮುಕುರ್ತಾರೆ."

ಬಳಿ ಮಾಡದ ಕೆಳಗೆ ಯಾರನ್ನೋ ನೋಡಿದ ಹಾಗಾಯ್ತು."

"ಮುದುಕನೆ ?" ಎಂದು ಕೇಳಿದ ಥಾನಿಸ್.

"ಹ್ಞ."

"ಶಿಲ್ಪಿ ನೆಖೆನ್, ಈ ಊರಿಗೆ ಬಂದು ತಿಂಗಳಾಯ್ತು. 'ಆಳೆತ್ತರದ ಮೂರ್ತಿ ಮಾಡ್ತೀನೆ; ಆರಾಳು ಎತ್ತರದ್ದು ಬೇಕಾದರೂ ಮಾಡ್ತೀನೆ'—ಅನ್ತಾನೆ. 'ಎಲ್ಲಿಯೋ ಹುಟ್ಟಿದೆ, ಎಲ್ಲಿಯೋ ಬೆಳೆದೆ; ಹೊಟ್ಟೆಪಾಡಿಗಾಗಿ ಯಾರು ಯಾರದೋ ರೂಪಶಿಲ್ಪ ಮಾಡ್ದೆ; ಎಪ್ಪತ್ತು ವರ್ಷ ಆಯ್ತು; ಇನ್ನೂ ಹತ್ತಿಪ್ಪತ್ತು ವರ್ಷ ಚಾಣ ಹಿಡಿದೇನು; ಐಗುಪ್ತ ದೇಶವೇ ಬೇಡ ಅಂತ ದಕ್ಷಿಣಕ್ಕೆ ಹೋಗಿದ್ದೆ; ಬಂಡಾಯದ ಸುದ್ದಿ ಬಂದಾಗ ಅದೇನು ಮಾಡಿದಾರೋ ನೋಡಿ ಬರಬೇಕು ಅನಿಸ್ತು; ಬಂದೆ; ಇದು ನನ್ನ ಕನಸಿನ ರಾಜ್ಯ. ಇಲ್ಲಿಯೇ ಇರ್ತೀನೆ'—ಅನ್ತಾನೆ. ಅಗೋ ಬಂದ."

ಎಲ್ಲರ ಕಣ್ಣುಗಳೂ ಉದ್ಯಾನದತ್ತ ಹೊರಳಿದುವು.

ನೀಳ ತೋಳುಗಳ ಎತ್ತರದ ದೇಹ, ನಡೆಯುವಾಗ ಹಾರಾಡುತ್ತಿದ್ದ ನರೆತ ತಲೆಕೂದಲು. ಉದ್ದನೆಯ ಮೂಗು. ಆಳದಿಂದ ನೇರವಾಗಿ ದಿಟ್ಟಿಸುತ್ತಿದ್ದ ಕಣ್ಣುಗಳು. ಆಳುವ ಸಂತತಿಯವನೇನೋ ಎಂದು ಭ್ರಮೆ ಹುಟ್ಟಿಸುವ ಗೋದಿ ಗೆಂಪು ಮೈ ಬಣ್ಣ.

ಆತನನ್ನು ಉದ್ದೇಶಿಸಿ ಬಟಾ ಅಂದ :

"ಬನ್ನಿ."

ಅವನ ಬಳಿ ಸಾರಿ ಕುಳಿತುಕೊಳ್ಳುತ್ತ ಆತ ಕೇಳಿದ :

"ನೀವು ಬಟಾ ಅಲ್ಲವಾ ?"

"ಹೌದು."

"ನೀವು ಬರ್ತಿದ್ದಾಗಲೇ ಊಹಿಸಿಕೊಂಡೆ. ಆಮೇಲೆ ಇಲ್ಲಿಂದ ಹೊರಟ ಕಾವಲು ಭಟನೂ ಹೇಳ್ದ: ಅವರೇ ಬಟಾ; ಮಾತಾಡೋದಿದ್ದರೆ ಈಗಲೇ ಹೋಗಿ; ಆಮೇಲೆ ಸಭೆ ಇದೆ ಅಂದ. ನೀವು ಬಂದ ಸಂಗತಿ ಮಧ್ಯಾಹ್ನವಷ್ಟೇ

ಗೊತ್ತಾಯ್ತು. ಕಲ್ಲುಕುಟಿಗ ಹಪು ವಾಸಕ್ಕೆ ಜಾಗ ಕೊಟ್ಟಿದ್ದಾನೆ. ಅವನ ಮಕ್ಕಳು ಹೇಳಿದ್ರು. ಸಂಜೆ ರಾಜಗೃಹಕ್ಕೆ ಬರ್‍ತೀರಿ ಅಂತಲೂ ತಿಳಿದು ಬಂತು."

ಸೆನು ರಾಗವೆಳೆದ :

"ಈಗ ಸಭೆ ಇದೆಯಲ್ಲ...."

"ಹಾಗಾದರೆ ರಾತ್ರೆ ಸಿಗ್ತೇನೆ. ಅಥವಾ ನಾಳೆ."

ಬಟಾನೆಂದ :

"ನಾಳೆ ಬೆಳಿಗ್ಗೆ ಹಪು ಮನೆಗೆ ನಾನೇ ಬರ್‍ತೇನೆ."

"ನೀವೆ ಬರ್‍ತೀರಾ ? ಆಗಬಹುದು. ನಾನು ಕೆತ್ತಿರೋ ಸಣ್ಣ ಶಿಲಾ ಮೂರ್ತಿಗಳು ಎರಡು ಮೂರು ಅಲ್ಲಿವೆ. ಬರ್‍ತಾ ತಂದದ್ದು. ತೋರಿಸ್ತೇನೆ. ಹಿರಿಯರೆಲ್ಲ ನೋಡಿದ್ದಾರೆ."

"ಹೌದು, ಹೌದು," ಎಂದ ಸ್ನೊಫ್ರು. "ಅದ್ಭುತ ಕೃತಿಗಳು," ಎಂದು ಮೆಚ್ಚುಗೆಯ ನುಡಿಯನ್ನೂ ಸೇರಿಸಿದ.

ಶಿಲ್ಪಿ ಸಣ್ಣನೆ ನಕ್ಕ. ಎದ್ದು, "ನಾನು ಹೊರಟೆ. ಸಭೆಗೆ ಅಡ್ಡಿ ಯಾಗೋದಿಲ್ಲ," ಎಂದು ಬಟಾನ ಕಡೆ ನೋಡಿ ನುಡಿದು, ಒಳಬಂದಾಗಿನ ಗಾಂಭೀರ್ಯದ ನಡಿಗೆಯಿಂದಲೇ ಉದ್ಯಾನದತ್ತ ಸಾಗಿದ.

ಸ್ನೊಫ್ರುವೆಂದ :

"ಬಹಳ ದೊಡ್ಡ ಮನುಷ್ಯ. ಇವನು ಮುಟ್ಟಿದ ಕಲ್ಲು ಮೆದುವಾಗ್ತದೆ. ಚಾಣ ತಗಲಿದಾಗ ಸೊಬಗಿನ ಮೂರ್ತಿಯಾಗ್ತದೆ. ಈಗ ಒಂದು ಮೊಳ ಎತ್ತರದ ನೀರಾನೆ ಮಾಡ್ತಿದ್ದಾನೆ."

ಬಟಾಸಿಗೆ ಕಚಗುಳಿ ಅನುಭವ.

"ಮಾವ ! ಮಾವ ! ರಾಜಧಾನೀಲಿ ನಿಮ್ಮ ದೇವತಾ ಮೂರ್ತಿಗಳಿಗೆ ಭಾರೀ ಬೇಡಿಕೆ. ಒಬ್ಬ ಅಂಗಡಿಕಾರ ಅಪ್ಪೋಫಿಸ್ ಮತ್ತು ಅರಮನೆ ದೇವ ಮಂದಿರದ ಅರ್ಚಕ ಇನೇನಿ—ಇಬ್ಬರೂ ಕೇಳಿದ್ದಾರೆ. ದೋಣಿ ತುಂಬ ದೇವ ಶಿಲ್ಪ ಸ್ನೊಫ್ರು ಮಾಡಿದ ಮೂರ್ತಿಗಳನ್ನು ತರಬೇಕಂತೆ !"

"ಕೆಫ್ಟು ಅಲ್ಲಿ ಕೊಟ್ಟು ಹೋಗಿರ್ಬೇಕು," ಎಂದ ಸ್ನೊಫ್ರು.

"ಅವನೇ. ಒಮ್ಮೆ ಏನಾಯ್ತು ಗೊತ್ತಾ ?"

ಸೆಮ ಅಂದ :

"ಬಟಾ ಚೂರುಪಾರು ಬೇಡ. ಇಲ್ಲಿಂದ ಹೊರಟಾಗಿನಿಂದ ನೀನು ರಾಜ ಧಾನಿ ಬಿಟ್ಟು ಬರೋವರೆಗೆ ಏನೇನಾಯ್ತೂಂತ ಕ್ರಮ ಕ್ರಮವಾಗಿ, ವಿವರ ವಾಗಿ ಹೇಳಪ್ಪ."

"ಹೌದು, ಹೌದು," ಎಂದ ಹೆರ್ಮ್ಟಿ.

ಇಪ್ಯುವರ್ ಆಗಲೇ ಬಾಯಿ ತೆರೆದು ಕುಳಿತಿದ್ದ, ಬಟಾ ಆಡಿದ ಪ್ರತಿ ಯೊಂದು ಪದವನ್ನೂ ನುಂಗಲು.

ಬಟಾ ಆವನನ್ನು ನೋಡಿ ನಗೆಯಾಡಿದ :

"ಏನು ಲಿಪಿಕಾರಯ್ಯ, ಬರಕೊಳ್ಳೋದಿಲ್ವೊ ?"

ಇಪ್ಯುವರ್ ತಬ್ಬಿಬ್ಬಾಗಿ ಹಿರಿಯರೆಡೆಗೆ ನೋಡಿದ.

ಬಟಾನೆಂದ :

"ತಮಾಷೆಗೆ ಹೇಳ್ದೆ ಕಣಪ್ಪ. ಇದು ರಹಸ್ಯ ಸಮಾಲೋಚನೆ. ಬರಕೋ ಬೇಕಾಗಿಲ್ಲ."

ನಾಯಕರಿಗೆ ದೊರೆತ ಸ್ವಾಗತ; ಅಮಾತ್ಯ ಭೇಟಿ; ಪೆರೋ ಸಂದರ್ಶನ; ಹುಚ್ಚ ಮೆನ್ನ; ನಾಯಕನ ಕನಸು ('ಹೊಡೆತ ತಿಂದ ಮುದುಕ ಹೆರ್ಮ್ಟಿಯ ಹಾಗಿದ್ದ ಅಂತ ನಾನು ಹೇಳಬಾರದು'); ಸೆಡ್ ಉತ್ಸವ ವಿಲಂಬವಾದುದರ ನಿಜ ಕಾರಣ; ಐಗುಪ್ತದ ಚಾಕಮಣೆ ಆಟ; ಸರು ಸಭೆ ("ಸರು ಸದಸ್ಯರು ನಮ್ಮಲ್ಲಿನ ಹಿರಿಯರ ಹಾಗೆ.") ಪೆರೋ ಔತಣ; "ಹೆಖ್ವೆಟ್ ಅಂತ ಹಿರಿಯ ಸದಸ್ಯ—ಘಾಟೀ ಮುದುಕ—ಆನ್‌ನಗರಿಗೆ ಹೋದ ಮಹಾ ಅರ್ಚಕನನ್ನು ಕರಕೊಂಡು ಬರೋಕೆ. ಅದೇ ಬೆಳಗ್ಗೆ ನಾನು ಈ ಕಡೆ ಹೊರಟೆ."

ಸ್ವಾರಸ್ಯದ ಸಂಗತಿಗಳು ಹೇರಳವಾಗಿದ್ದುವು : ನಾಯಕ ಅಮಾತ್ಯರ ಜತೆ ಇದ್ದಾಗ ನುಟ್‌ನೋಸ್ ಒಳಹೋಗಲು ಬಯಸಿ ಬೈಗಳು ತಿಂದದ್ದು; ನಗರೋದ್ಯಾನ ನೋಡೋದಕ್ಕೆ ಇವರು ಹೋದಾಗ ಅರಮನೆಯ ಕಾವಲು ಪಡೆಗೆ ಆದ ಫಜೀತಿ. ಬೆಕ್ ಔಟರ ನೆಗಡಿಗೆ ನಡೆದ ಚಿಕಿತ್ಸೆ; ತಾನು ಕೊಳಲು ಬಾರಿಸಿ ಅರಮನೆಯ ಕೆಲಸಗಾರರೆಲ್ಲರ ಮೆಚ್ಚುಗೆ ಗಳಿಸಿದ್ದು....

ತಮ್ಮ ನಾಯಕನನ್ನು ರಾಜಧಾನಿಯಲ್ಲಿ ಗೌರವದಿಂದ ಕಂಡರು ಎಂದು ಬಟಾನ ಮಾತು ಕೇಳುತ್ತಿದ್ದವರಿಗೆ ಸಮಾಧಾನ. ಆದರೂ ರಾಜಧಾನಿಯಿಂದ

ಮರಳುವುದು ತಡವಾಗಿದೆಯಲ್ಲ ಎಂದು ಕಾತರ.

"ನಾನು ಹೊರಡೋದಕ್ಕೆ ಮುಂಚೆ ಅಣ್ಣ ಒಂದು ಮಾತು ಅಂದ: ವೈಯಕ್ತಿಕವಾಗಿ ನನಗೆ ಏನು ಆಗ್ತದೆ ಅನ್ನೋದು ಮಹತ್ವದ್ದಲ್ಲ, ಬಟಾ. ನೀರಾನೆ ಪ್ರಾಂತದ ಜನ ನೆಮ್ಮದಿಯಿಂದ ಬದುಕೋದು ಸಾಧ್ಯವಾಗ್ಬೇಕು. ರಾಜಧಾನಿ ಇದಕ್ಕೆ ಆಸ್ಪದ ಇತ್ತರೆ ಎಲ್ಲರಿಗೂ ಹಿತವಾದೀತು. ಅದಕ್ಕಾಗಿ ಇಲ್ಲಿದ್ದು ನಾನು ಪ್ರಯತ್ನಿಸ್ತೇನೆ. ಊರಲ್ಲಿ ಅದನ್ನು ಎಲ್ಲರಿಗೂ ವಿವರಿಸಿ ಹೇಳು."

ಮೆನೆಪ್‌ಟಾನ ಮಾತುಗಳು. ಬಟಾನ ಧ್ವನಿ.

ಖ್ನೆಮ್‌ಹೊಟೆಪ್ ಗುಡುಗಿದ:

"ವೈಯಕ್ತಿಕವಾಗಿ ನನಗೆ ಏನು ಆಗ್ತದೆ ಅನ್ನೋದು ಮಹತ್ವದ್ದಲ್ಲ— ಅಂದರೆ ಏನರ್ಥ ? ಅಣ್ಣನಿಗೇನಾದರೂ ಆದರೆ, ನೀಲನದಿಯೇ ಹತ್ತಿಕೊಂಡು ಉರಿದೀತು !"

ಎಲ್ಲರ ಒಳಗಿನ ಸಂಕಟವನ್ನು ಖ್ನೆಮ್‌ಹೊಟೆಪ್ ಮಾತಿನಲ್ಲಿ ಒಡ ಮೂಡಿಸಿದ್ದ.

ಸೆಮ ನಿಧಾನವಾಗಿ ನುಡಿದ:

"ಮೆನೆಪ್‌ಟಾ ನಮ್ಮನ್ನು ಬಿಟ್ಟುಹೋಗಿ ಹತ್ತಿರ ಹತ್ತಿರ ಮೂರು ತಿಂಗಳಾಗ್ತಾ ಬಂತು. ಕುಯಿಲಿನ ವೇಳೆಯಲ್ಲಿ ನಾಯಕ ಇರಲೇಬೇಕು. ಇನ್ನು ಹೆಚ್ಚುದಿನ ಇಲ್ಲ. ಸೆಡ್ ಉತ್ಸವ ನಡೀಲಿ, ನಡೀದೆ ಇರಲಿ, ನಾಯಕನನ್ನು ನಾವು ವಾಪಸು ಕರಕೊಂಡ್ಬರಬೇಕು."

"ಇದು ಹಿರಿಯರ ಸಮಿತಿಯ ತೀರ್ಮಾನ ಅಂತ ತಿಳಿದರೆ ಮೆನೆಪ್‌ಟಾ ಒಪ್ತಾರೆ," ಎಂದ ಹೆಮೊನ್.

ಖ್ನೆಮ್‌ಹೊಟೆಪ್ ಅಂದ:

"ನಮ್ಮ ಯೋಧ ದಳದ ಐವತ್ತು ಜನರ ಜತೆ ನಾನು ಹೋಗಿ ಬರ್ತೇನೆ."

ಹೆಮ್‌ಟ ಅಭಿಪ್ರಾಯ ವ್ಯಕ್ತಪಡಿಸಿದ:

"ರಾಜಧಾನಿಗೆ ಕದನಕ್ಕೆ ಹೋಗೋದಾದರೆ ಐವತ್ತು ಜನ, ನೂರು ಜನ

ಸಾಲದು. ಸೈನ್ಯ ಗಡಿಯಿಂದ ಅವರ ದಳ ವಾಪಸು ಬಂದರೊ ? ಅಲ್ದೆ ನಮ್ಮಲ್ಲಿ ಆಯುಧಗಳೂ ಇಲ್ಲವಲ್ಲ...."

"ಆ ಕೆಪ್ಟು ಬರಲೇ ಇಲ್ಲ"—ಎಂದ ಖ್ನೆಮ್‌ಹೊಟೆಪ್. ಈಗಿನ ಅಸಹಾಯತೆಯ ಭಾವನೆಗೆ ಆ ವರ್ತಕನೇ ಹೊಣೆ ಎನ್ನುವಂತೆ.

ಥಾನಿಸ್ ಕೇಳಿದ :

"ನೀನು ಏನು ಹೇಳ್ತೀಯಪ್ಪ ಬಟಾ ?"

"ಅಣ್ಣ ರಾಜಧಾನಿಗೆ ಹೊರಟು ನಿಂತಾಗ ಹೋದ ವರ್ಷ ಅಬ್ಟು ಯಾತ್ರೆಗೆ ಬಂದಿದ್ದವರೆಲ್ಲ 'ನಾವೂ ಬರ್ತೀವೆ' ಅಂತ ಹೇಳಿದ್ದು, ಬೇಡ ಅಂದಾಗ....'ಕರಕೊಂಡ್ಬರೋದಂತೂ ನಾವೇ' ಅಂತ ತಿಳಿಸಿದ್ದು—ನಿಮಗೆ ನೆನಪಿರಬಹುದು. ಅವರು ರಾಜಧಾನಿಗೆ ಬಂದರೆ ಅಣ್ಣನಿಗೆ ಇಷ್ಟವಾಗ್ತದೆ."

ತಕ್ಷಣ ಯಾರೂ ಮಾತನಾಡಲಿಲ್ಲ.

ಬಟಾನೇ ಮುಂದುವರಿಸಿದ :

"ಔಟ ಬೆಕ್ ಅಣ್ಣನನ್ನು ಕಾಯ್ತಾರೆ. ನಾವು ಹೋಗಿ ಸಮಿತಿಯ ತೀರ್ಮಾನ ತಿಳಿಸಿ, ಮನ ಒಲಿಸಿ ಉಪಾಯವಾಗಿ ಕರಕೊಂಡ್ಬರ್ತೀವೆ."

ಎಲ್ಲರ ಮುಖಗಳನ್ನೂ ನೋಡುತ್ತ ಸೆಮು ಕೇಳಿದ :

"ಆದೀತು, ಅಲ್ಲವೆ ?"

ಹೂಂ–ಹೂಂ ಧ್ವನಿಗಳ ಉತ್ತರ.

"ಹಾಗಾದರೆ ನಾಳೆ ಬೆಳಿಗ್ಗೆ ಡಂಗುರ ಹೊಡಿಸೋಣ. ಒಳನಾಡಿಗೆ ದೂತರನ್ನು ಅಟ್ಟೋಣ. ಯಾತ್ರಿಕರೆಲ್ಲ ಬಂದು ಸೇರೋದಕ್ಕೆ ಎರಡು ಮೂರು ದಿನ ಬೇಕು."

ಬಟಾ ಖ್ನೆಮ್‌ಹೊಟೆಪನ ಭುಜದ ಮೇಲೆ ಕೈ ಇರಿಸಿದ. ಕಾವಲು ಪಡೆಯ ದಳಪತಿ ಆ ಸ್ಪರ್ಶಕ್ಕೆ ತುಸು ಕರಗಿದ.

ಹೆಮ್‌ಟೆ ಏಳುತ್ತ, "ಉದ್ಯಾನದಲ್ಲಿ ಜನರ ಸದ್ದಿಲ್ಲವಲ್ಲ ಇವತ್ತು," ಎಂದ.

ಒಂದು ನಗೆಯ ಅಲೆ ಕಿವಿಗೆ ಅಪ್ಪಳಿಸಿದಂತೆ ಇಪ್ಯುವರ್‌ಗೆ ಅನಿಸಿತು. ಉದ್ಯಾನದತ್ತ ಸಾಗಿ, ಬೇಗನೆ ಮರಳಿದ. ಸಭೆ ಮುಗಿಸಿ ಎದ್ದವರಿಗೆ ಅವನು ತಿಳಿಸಿದ :

"ಉದ್ಯಾನದ ಮೂಲೆಯಲ್ಲಿ ಜನ ಗುಂಪುಕಟ್ಟಿ ಕೂತಿದ್ದಾರೆ. ಬಟಾ ಅಣ್ಣನ ಅಂಬಿಗರು ಅವರಿಗೆ ರಾಜಧಾನಿಯ ಕತೆ ಹೇಳ್ತಿದ್ದಾರೆ."

"ಸರಿ, ಸರಿ," ಎಂದ ಹೆಮೊನ್.

ಬಟಾ—ಸಭಾಂಗಣದಲ್ಲಿದ್ದ ಸಿಂಹದ ಮೈದಡವಿ, ಖ್ನೆಮ್‌ಹೊಟೆಪ್ ನೆಡೆ ನೋಡಿ, ಅಂದ:

"ಮೆನೆಪ್‌ಟಾ ಅಣ್ಣನಿಗೆ ಹಾಗೆ ಬಾರಿಸ್ದೆ ಹೀಗೆ ಬಾರಿಸ್ದೆ, ಅಂತ ಬಕಿಲ ರಾಜಧಾನೀಲಿ ಕಥೆ ಹೇಳ್ತಿದ್ನಂತೆ. ನಾಪತ್ತೆ. ಅಲ್ಲಿ ಸಿಗಲೇ ಇಲ್ಲ. ಟೆಹುಟಿ ಜತೆ ಎಲ್ಲೊ ಉತ್ತರಕ್ಕೆ ಹೋಗಿದ್ದಾನಂತೆ. ಮಹಾ ಅರ್ಚಕ ಸೋತರೆ ಟೆಹುಟಿಯ ರೆಕ್ಕೆ ಕತ್ತರಿಸ್ತಾರೆ. ಬಕಿಲನ ಆರ್ಭಟ ಮುಕ್ತಾಯವಾಗ್ತದೆ."

ಹಿರಿಯರು ಎದ್ದುದು ಉದ್ಯಾನವನದಲ್ಲಿದ್ದವರ ಕಣ್ಣಿಗೆ ಬಿತ್ತು. ಕಥನ ಒಬ್ಬನಿಂದ. ಪೂರಕ ವಿಷಯಗಳು ಉಳಿದ ಮೂವರಿಂದ.

ಅವರೆಂದರು :

—"ಇವತ್ತಿಗೆ ಸಾಕು";—"ಎದ್ಬಿಡಿ";—"ಬಟಾ ಅಣ್ಣ ಬಯ್ತಾನು"; "ದೋಣಿ ಕಟ್ಟೆಯ ಜಂಭದ ಕೋಳಿ ವಿಷಯ ನಾಳೆ ಹೇಳ್ತೇನೆ."

* * * *

ಬೆಳಿಗ್ಗೆ ಬಟಾ ಹೊರಬಿದ್ದು ಮೆನೆಪ್‌ಟಾನ ಮನೆಗೆ ಹೋಗಿ, ಹಿರಿಯರ ಸಭೆಯಲ್ಲಿ ನಡೆದುದನ್ನು—ನಾಯಕನನ್ನು ಕರೆತರುವ ತೀರ್ಮಾನವನ್ನು—ನೆಫಿಸ್‌ಗೆ ತಿಳಿಸಿದ.

ಆಕೆ ಕೇಳಿದಳು :

"ಅಬ್ಬು ಯಾತ್ರಿಕರು ಅಂದ್ಮೇಲೆ ನಾನೂ ಇರ್ತೇನೆ. ಅಲ್ಲವಾ ?"

"ನನ್ನ ಹೆಂಡತಿ ಲೆಕ್ಕ ಮಾಡಿ ತಿಳಿಸಿದ್ದಾಳೆ. ಒಂಭತ್ತನೇ ತಿಂಗಳಂತೆ. ಪ್ರಯಾಣ ಸಲ್ಲದಂತೆ."

"ನಾನೂ ಬರಲಾ ?" ಎಂದ ರಾಮೆರಿಪ್‌ಟಾ.

ಬಟಾ ನೆಫಿಸಳ ಮುಖ ನೋಡಿದ.

ಅವಳೆಂದಳು :

"ಬೇಕಾದರೆ ಹೋಗಿ ಬಾ, ರಾಮೆರಿ."

ರಾಮೆರಿಪ್‌ಟಾ ಕಣ್ಣಾಲಿಗಳನ್ನು ಛಾವಣಿಯತ್ತ ಹೊರಳಿಸಿದ, ಕೆಳಕ್ಕೆ ನೋಡಿದ :

"ಊಹೂಂ. ಅಮ್ಮನನ್ನು ನೋಡ್ಕೊ ಅಂತ ಅಪ್ಪ ಹೇಳಿದ್ದಾನೆ. ನಾನು ಇಲ್ಲೇ ಇರ್ತೇನೆ." ಧ್ವನಿಯಲ್ಲಿ ಬೇಸರದ ಛಾಯೆ ಇತ್ತು.

ರಾಜಧಾನಿಯಿಂದ ತಾನು ಹೊರಡುವ ರಾತ್ರಿ ನಡೆದ ಸಂಭಾಷಣೆ. ರೊಟ್ಟಿ ತಟ್ಟೋದು ಶ್ರೇಷ್ಠ ವಿದ್ಯೆ. ತನ್ನ ಒಬ್ಬಳು ಮಗಳು ಈ ಲಿಪಿಸುರುಳಿ ವಿದ್ವಾಂಸನ ಪತ್ನಿಯಾದರೆ? ಮೆನೆಪ್‌ಟಾ ಬೇಡ ಎಂದಿರಲಿಲ್ಲ. ತಮಾಷೆಗೆ ಆಡಿದ್ದು. ನೆಫಿಸ್‌ಗೂ ತಿಳಿಸೋಣ ಎಂದು ಬಟಾ ಬಾಯಿ ತೆರೆದ. ಈಗ ಹೇಳುವುದು ಸರಿಯಲ್ಲ ಎನಿಸಿತು. ಬಾಯಿಯನ್ನು ಮುಚ್ಚುವುದರೊಳಗೆ ನೆಫಿಸ್ ಹೇಳಿದಳು :

"ಏನೋ ಹೇಳ್ಬೇಕೂಂತಿದೀಯಲ್ಲ ಬಟಾ ಅಣ್ಣ ?"

ಬಟಾ ತಲೆ ಕೊಡವಿದ. "ಏನಿಲ್ಲ, ಏನಿಲ್ಲ. ತಂದೆಯ ಹಾಗೆಯೇ ಈ ಮಗ. ಅಷ್ಟೇ ಗಂಭೀರ," ಎಂದ.

ನೆಫಿಸ್ ಒಲವು ತುಂಬಿದ ನೋಟದಿಂದ ಮಗನನ್ನು ನೋಡಿದಳು.

"ರಾಮೆರೀ" ಎಂದು ಹುಡುಗರ ಗಂಟಲು ಕೇಳಿಸಲು, "ಬಂದೆ" ಎನ್ನುತ್ತ ರಾಮೆರಿಪ್‌ಟಾ ಓಡಿದ.

ತಾಯಿ ಅಂದಳು :

"ಲಿಪಿ ಸುರುಳೀಲಿ ಹೀಗಿದೆ ಅಂತ ಏನೇನೋ ಹೇಳ್ತಾ ಇರ್ತಾನೆ. ಎಲ್ಲಿ ಓದ್ತಾನೋ ಯಾವಾಗ ಗಟ್ಟಿ ಮಾಡಿಕೊಳ್ತಾನೋ ಒಂದೂ ಗೊತ್ತಾಗೋದಿಲ್ಲ. ಇಲ್ಲಿ ನೋಡಿದರೆ ಮೂರು ಹೊತ್ತೂ ಆಟ."

ಜ್ಞಾಪಕ ಶಕ್ತಿ. ಒಮ್ಮೆ ಕೇಳಿದರೆ ಸಾಕು. ರಾಮೆರಿಗೆ ಮರೆತು ಹೋಗೋದಿಲ್ಲ."

"ಅದು ಅವನ ತಂದೆಗೂ ಹಾಗೆಯೇ...."

"ನಾನು ಹೊರಡ್ಲಾ ಅತ್ತಿಗೆ ?"

"ಇರು. ಎಲ್ಲಿಗೆ ?"

"ನೆಖೆನ್ ಅಂತ ಒಬ್ಬ ಶಿಲ್ಪಿ ಬಂದಿದ್ದಾನಲ್ಲ ?"

"ಹೌದು. ಅವನು ಈ ರಸ್ತೇಲಿ ಹೋಗ್ತಾ ಇದ್ದಾಗ ರಾಮೆರಿ ತೋರಿಸ್ದ."

"ನಿನ್ನೆ ಸಿಕ್ಕಿದ್ದ. ಇವತ್ತು ಬಂದು ನೋಡ್ತೇನೆ ಅಂದಿದ್ದೆ."

"ಕಲ್ಲಿನ ಮೂರ್ತಿಗಳನ್ನು ಮಾಡ್ತಾನಂತೆ. ಪೆಪ್ಯೆರಸ್ ದೋಣಿ ಕಟ್ಟಿದವರು ಅವತ್ತು ಬಂದ್ರು. ಈಗ ಶಿಲ್ಪಿ ಬಂದಿದ್ದಾನೆ. ಎಲ್ಲರಿಗೂ ನೀರಾನೆ ಪ್ರಾಂತಕ್ಕೆ ಬರೋ ಬಯಕೆ."

"ಹೌದು, ಅತ್ತಿಗೆ. ನಾಳೆ ಗೋರಿಚಿತ್ರಕಾರರು ಬರ್ತಾರೆ; ಬಂಗಾರದ ಆಭರಣ ಮಾಡೋ ನುರಿತ ಅಕ್ಕಸಾಲಿಗರು ಬಂದು ಇಲ್ಲಿ ಬೀಡುಬಿಡ್ತಾರೆ."

"ಇದೆಲ್ಲ ಸುಂದರ ಕನಸಿನ ಹಾಗಿದೆ, ಅಲ್ಲವಾ ?....ಆಗಲಿ, ಶಿಲ್ಪೀನ ನೋಡ್ಕೊಂಡು ಬಾ. ನೀನೂ ಮನೆಯವರೂ ರಾತ್ರಿ ಇಲ್ಲಿಗೇ ಊಟಕ್ಬನ್ನಿ.... ರೊಟ್ಟಿ ತಟ್ಟೋಕೆ ನೆಜಮುಟ್‌ನ ಕರೀತೇನೆ. ರಾಜಧಾನಿಯಲ್ಲಿ ನಿನ್ನ ನಾಯಕರು ಏನೇನು ಮಾಡಿದರೂಂತ ವಿವರವಾಗಿ ಹೇಳುವೆಯಂತೆ."

"ಆಗಲಿ, ಅತ್ತಿಗೆ."

* * * *

"ನೆಖೆನ್‌ನನ್ನು ನೋಡೋದಕ್ಕೇಂತಾದರೂ ನನ್ನ ಗುಡಿಸಲಿಗೆ ಬಂದಿಯಲ್ಲ, ಬಾ," ಎಂದು ಹಪು ಗಾಂಭೀರ್ಯ ಪರಿಹಾಸ್ಯ ಎರಡನ್ನೂ ಬೆರೆಸಿ ಬಟಾನನ್ನು ಇದಿರ್ಗೊಂಡ.

ನೆಖೆನ್ ಮಾಡಿದ್ದ ಮೂರ್ತಿಗಳನ್ನು ಬಟಾ ದಿಟ್ಟಿಸುತ್ತ ಮೌನ ತಳೆದೊಡನೆ ಹಪು, "ದೋಣಿಕಟ್ಟೆ ಗೋಡೇನ ಎತ್ತರಿಸಿ ಭದ್ರಗೊಳಿಸೋದಕ್ಕೆ ಎಷ್ಟು ಕಲ್ಲು ಬೇಕು ಏನೂಂತ ಹಿರಿಯರ ಸಮಿತಿಯವರು ಕೇಳಿದ್ದಾರೆ. ನಾಯಕರು ಬರೋದರೊಳಗೆ ಅಂದಾಜು ಸಿದ್ಧವಾಗ್ಬೇಕಂತೆ. ಇಪ್ಯುವರ್‌ನನ್ನು ಕರಕೊಂಡು ನದೀದಂಡೆಗೆ ಹೋಗ್ತೇನೆ." ಎಂದು ಹೇಳಿ, ಹೊರಟು ಹೋದ.

ಮಣ್ಣಿನ ಮಲಗು ದಿನ್ನೆಯ ಮಗ್ಗುಲಲ್ಲಿ ಮೂರು ಮೂರ್ತಿಗಳಿದ್ದುವು : ಒಂದು, ಕುಯಿಲು ಕಾರ್ಯದಲ್ಲಿ ನಿರತನಾಗಿದ್ದ ರೈತ. ಇನ್ನೊಂದು ಎರಗಲು ಜಿಗಿದು ನಿಂತ ಚಿರತೆಯ ಎದೆಗೆ ಈಟಿ ನೆಟ್ಟ ಬೇಟೆಗಾರ. ಮೂರನೆಯದು, ಪಿಶಾಚಿಗಳನ್ನು ಓಡಿಸುವ ಸಿಂಹತಲೆಯ ಕುಳ್ಳ ಆಕಾರದ ಬೆಸ್ ದೇವತೆ.

ಮೆಚ್ಚುಗೆ ಸೂಚಿಸುತ್ತ ಆ ಮಗ್ಗುಲಿನಿಂದ ಈ ಮಗ್ಗುಲಿನಿಂದ ಶಿಲ್ಪಗಳನ್ನು ನೋಡಿ, ಬಟಾ ಅಂದ :

"ನೀವು ನಮ್ಮ ಪ್ರಾಂತಕ್ಕೆ ಬಂದದ್ದು ಒಳ್ಳೇದಾಯ್ತು ನೆಖೆನ್ ಅಣ್ಣ. ಈ ರೈತ, ಬೇಟೆಗಾರ, ಬೆಸ್‌ಮೂರ್ತಿ—ಇವನ್ನೆಲ್ಲ ನಾಯಕರು ತುಂಬಾ ಇಷ್ಟ ಪಡ್ತಾರೆ. ಸ್ನೊಫ್ರು ಮಾವನಿಗಂತೂ ನಿಮ್ಮನ್ನು ಕಂಡರೆ ಗೌರವ."

ಶಿಲ್ಪಿಯ ಮುಖದ ಸ್ನಾಯುಗಳು ಮಿಸುಕಿದುವು. ಕಂಠ ಉಮ್ಮಳಿಸಿತು. ನಿಧಾನವಾಗಿ ಆತನೆಂದ :

"ನನ್ನವರನ್ನು ಹುಡುಕಿಕೊಂಡು ಅದೆಷ್ಟು ದೇಶ ಅಲೆದೆನೊ. ಈ ಊರಿಗೆ ಬಂದಾಗ, ಇವರನ್ನೇ ಅಲ್ಲವಾ ಇಷ್ಟು ವರ್ಷ ಹುಡುಕಿದ್ದು ಅನಿಸ್ತು.... ಮನುಷ್ಯರಲ್ಲಿ ಇಂಥ ಸೋದರ ಭಾವ ಸಾಧ್ಯವಾಗಿದೆಯಲ್ಲ—ಅದು ದೊಡ್ಡ ಸಂಗತಿ...."

"ನೀರಾನೆ ಮೂರ್ತಿ ಮಾಡ್ತಿದ್ದೀರಂತಲ್ಲ...."

ನೆರಳಿಗಾಗಿ ತಾಳೆಯ ಸೋಗೆಗಳಿಂದ ಛಾವಣಿಯ ಒಂದು ಮೂಲೆಯನ್ನು ವಿಸ್ತರಿಸಿದ್ದರು. ಅದರ ಕೆಳಗೆ ಕೊಳಕು ಬಟ್ಟೆಯಿಂದ ಏನನ್ನೋ ಮುಚ್ಚಿತ್ತು. ಬಟಾನ ದೃಷ್ಟಿ ಅತ್ತಿತ್ತ ಅಲೆದು ಅದರ ಮೇಲೆ ನೆಲೆಸಿದಾಗ ನೆಖೆನ್ ಅಂದ :

"ಪೂರ್ತಿಯಾಗಿಲ್ಲ. ಈಗ ಚೆನ್ನಾಗಿ ಕಾಣಿಸೋದಿಲ್ಲ."

"ದೋಣಿ ತಯಾರಿಕೆಯ ಮೊದಲ ಹಂತದಲ್ಲಿ ಚೌಕಟ್ಟಿಗೆ ಹಲಗೆಗಳನ್ನೊ ಪೆಪೈರಸ್ ದಂಟುಗಳನ್ನೊ ಬಿಗಿಯುವಾಗ ಹ್ಯಾಗಿರ್ತದೆ ಅಂದ್ಕೊಂಡ್ರಿ ?"

ನೆಖೆನ್ ನಕ್ಕು, ಆ ಬಟ್ಟೆಯನ್ನೆಳೆದ. ಅಲ್ಲಿದ್ದುದು, ಬಾಣದ ಏಟಿಗೆ ಮಣಿಯತೊಡಗಿದ್ದ ಅಂಡಾಕಾರದ ಕರಿಗಲ್ಲು. ಅದರಲ್ಲಿ ನೀರಾನೆಯ ಅವಯವಗಳು ಸ್ಥೂಲವಾಗಿ ಮೂಡತೊಡಗಿದ್ದುವು.

"ಇನ್ನು ಎರಡು ವಾರಗಳ ಕೆಲಸ. ದೋಣಿಕಟ್ಟೇಲಿ ಎತ್ತರದಲ್ಲಿ ಇದನ್ನಿಡಬೇಕು."

"ಹೌದು. ಹೌದು."

"ಬಟಾ ಅಣ್ಣ. ನಾನು ನಿಮ್ಮನ್ನ ಕೇಳ್ತೇನೆ. ಅತಿಥಿ ಅಂತ ಪರಿಗಣಿಸಿ

ರಾಜಗೃಹದಿಂದ ನನಗೆ ಆಹಾರ ಧಾನ್ಯ ಇತ್ಯಾದಿ ಕೊಡ್ತಾರೆ. ಅತಿಥಿ ಎನ್ನಿಸಿ ಕೊಳ್ಳೋದು ನನಗೆ ಇಷ್ಟವಿಲ್ಲ. ನಮ್ಮವರೇನೇ ಅಂತ ನೀವು ನನ್ನನ್ನು ಸ್ವೀಕರಿಸೋದು ಯಾವತ್ತು?"

ಬಟಾನ ನೋಟ ನೆಖೆನ್‌ನನ್ನು ಮುದ್ದಿಸಿತು.

"ನಾಯಕರು ವಾಪಸಾಗೋ ತನಕ ನೀವು ಅತಿಥಿ. ಆಮೇಲೆ ನೀವು ನನ್ನನ್ನು ಅಣ್ಣ ಅಂತ ಕರೆಯೋ ಹಾಗಿಲ್ಲ. ಮಗ ಅನ್ಬೇಕು, ತಮ್ಮ ಅನ್ಬೇಕು."

"ಆಗಲಿ. ನನ್ನ ಆಸೆ ಇದು; ಉದ್ಯಾನದ ಸ್ಮಾರಕ ಕಂಬಕ್ಕೆ ಒಂದು ಶಿಲಾಪೀಠ; ದೇವಮಂದಿರದ ಅಂಗಣದಲ್ಲಿ ನಾಯಕರ ಒಂದು ಶಿಲಾಪ್ರತಿಮೆ —ಎತ್ತರದ್ದು."

"ಪ್ರತಿಮೆಗೆ ಮೆನೆಪ್‌ಟಾ ಅಣ್ಣ ಒಪ್ಪಲಾರ. ಬಹಳ ಅಂದರೆ ಅವನು ಏನು ಹೇಳಬಹುದು ಗೊತ್ತಾ?"

"ಏನು?"

"ಜನರು ಅಧಿಕಾರ ವಶಪಡಿಸಿಕೊಂಡ ದಿನ ವೈರಿಬಾಣಕ್ಕೆ ಬಲಿಯಾದವನು ನೇಕಾರ ಅನ್ಪು; ಆ ಅನ್ಪುವಿನ ಪ್ರತಿಮೆ ರಚನೆಯಾಗಲಿ—ಅಂತ."

"ಅನ್ಪು. ಅವನ ವಿಷಯ ಕೇಳಿದ್ದೇನೆ. ಆಗಬಹುದು."

"ಆದರೆ ಆತ ಇಲ್ಲ."

"ಮಕ್ಕಳಿದ್ದಾರೆ."

"ಹ್ಞ. ದೊಡ್ಡ ಹುಡುಗನದು ತಂದೆಯದೇ ರೂಪ."

"ಮೊದಲು ಅರಿವೆಯ ಮೇಲೆ ಅನ್ಪುವಿನ ಪ್ರತಿರೂಪ ಬಿಡಿಸ್ತೇನೆ."

"ಆಗಲಿ. ಆಗಲಿ."

"ಅನ್ಪು ವೀರನ್ದು ಆದ್ಮೇಲೆ ನಾಯಕರದು ಒಂದು ನಿರ್ಮಿಸ್ಬೇಕು. ಫೆರೋನ ಮೂರ್ತಿಗೆ ಎಷ್ಟು ಮಹತ್ವವೋ ಜನನಾಯಕನಿಗೂ ಅಷ್ಟೇ ಮಹತ್ವ."

ಬಟಾ ನಕ್ಕು ನುಡಿದ:

"ಆ ವಿಷಯದ ಪ್ರಸ್ತಾಪ ಈಗ ಬೇಡ."

"ಅವಸರವಿಲ್ಲ, ಅವಸರವಿಲ್ಲ. ಇಷ್ಟೆ. ರಕ್ತದ ಬಿಸಿ ಆರೋದಕ್ಮುಂಚೆ,

ತೋಳಿನ ಬಲ ಕುಂದೋದಕ್ಕುಂಚೆ ಆ ಕೆಲಸ ನಾನು ಮಾಡ್ಬೇಕು."

"ದೇವಮಂದಿರಕ್ಕೊಂದು ಮುಖ ಮಂಟಪ ಕಟ್ಟಿಸಿ, ತಬ್ಬೋದಕ್ಕೆ ಇಬ್ಬರು ಬೇಕಾಗುವಂಥ ಕಂಬಗಳಲ್ಲಿ ನಮ್ಮ ಪ್ರಾಂತದ ಜನರ ಹೋರಾಟದ ಕಥೇನ ಕೆತ್ತಿದರೆ?"

"ಒಪ್ಪಿದೆ! ಶ್ರೇಷ್ಠ ವಿಚಾರ, ಭವ್ಯ ಸೃಷ್ಟಿ!"

"ಏನೊ ತೋಚ್ತು. ಹೇಳ್ದೆ. ತೀರ್ಮಾನ ಏನಿದ್ದರೂ ಮೆನೆಪ್‌ಟಾ ಅಣ್ಣ ಬಂದ್ಮೇಲೆ........"

"ಓಹೋ ಆಗಬಹುದು."

* * * *

ಡಂಗುರದವನು ಊರಲ್ಲಿ ಸುತ್ತಾಡಿದ. ದೂತರು ಒಳನಾಡಿಗೆ ಹೋದರು.

ನೆಫರುರಾ ಅಂದಳು:

"ಅಬ್ಟು ಯಾತ್ರಿಕರೇ ಅದೃಷ್ಟವಂತರು. ನೋಡೋಣ. ಯಾವತ್ತಾದರೊಂದು ದಿನ ಅಣ್ಣನ ಜತೆ ನಾನು ಪ್ರಯಾಣ ಬೆಳೆಸೇನು."

ರಾತ್ರಿಯ ಊಟಕ್ಕೆ ಬಟಾನ ಕುಟುಂಬವನ್ನು ಮಾತ್ರವಲ್ಲ, ಸ್ನೊಫ್ರು–ಸೆಬೆಕ್ಖುರ ಸಂಸಾರಗಳನ್ನೂ ನೆಫಿಸ್ ಕರೆದಳು. ಖ್ನೆಮ್‌ಹೊಟೆಪನೂ ಹೆಂಡತಿಯೊಡನೆ ಬಂದ.

ಅಡುಗೆಯ ಆತಿಥ್ಯದ ಎಲ್ಲ ಹೊಣೆಯನ್ನೂ ನೆಜಮುಟ್ ಹೊತ್ತಳು ತಬಬುವಾ ಆವಳಿಗೆ ನೆರವಾದಳು.

ರಾಜಧಾನಿಯ ರಂಜಕ ಕಥೆಗಳನ್ನು ಎಷ್ಟು ಸಲ ಹೇಳಿದರೂ ಬಟಾಗೆ ದಣಿವಿಲ್ಲ. ಅವನ್ನು ಎಷ್ಟು ಸಲ ಆಲಿಸಿದರೂ ಶ್ರೋತೃಗಳಿಗೆ ಬೇಸರವಿಲ್ಲ.

ಧ್ವನಿ ಎತ್ತರಿಸಿ ನೆಜಮುಟ್ ಅಂದಳು:

"ಅಣ್ಣನನ್ನು ಕರಕೊಂಡು ಬರೋದಕ್ಕೆ ಅಬ್ಟು ಯಾತ್ರಿಕರು ಮಾತ್ರ ಹೋಗೋದು ಅಂತ ತೀರ್ಮಾನಿಸಿದ್ದೀರಿ. ಹಾಗೇ ಆಗಲಿ. ಆದರೆ ರಾಮೆರಿಪ್ ಟಾನನ್ನು ಬಿಟ್ಟು ಹೋಗೋದು ಖಂಡಿತ ಸರಿಯಲ್ಲ. ಅವನು ಅಬ್ಟುಗೆ ಹೋಗಿರ್ಲಿಲ್ಲವಾ ? ಬೇರೆ ಸಮಯವಾಗಿದ್ದರೆ ನೆಫಿಸ್‌ಳೂ ಬರ್ತಿದ್ಲು."

ಮೂಲೆಯಲ್ಲಿ ನಿಂತಿದ್ದ ರಾಮೆರಿಪ್‌ಟಾ ಗಾಂಭೀರ್ಯ ನಟಿಸಿದ. ದೊಡ್ಡವರು ತನ್ನ ಬಗೆಗೆ ಮಾತನಾಡುತ್ತಿರುವರೆಂದು ಕಿರಿಯನಿಗೆ ಹೆಮ್ಮೆ.

"ಅಮ್ಮನನ್ನು ನೋಡ್ಕೋ ಅಂತ ರಾಮೆರಿಗೆ ಅವನ ತಂದೆ ಹೇಳಿದ್ದಾನಂತೆ," ಎಂದ ಬಟಾ, ನಗುತ್ತ.

ನೆಜಮುಟ್‌ನ ಮಾತು ಕೇಳಿ, ತಂದೆಯನ್ನು ನೋಡಲು ಹೋಗುವ ಆಸೆ ರಾಮೆರಿಪ್‌ಟಾನಲ್ಲಿ ಮತ್ತೆ ಗರಿಗೆದರಿತ್ತು. ಆದರೆ ಬಟಾ ಮಾವನ ಪರಿಹಾಸ್ಯದ ಧ್ವನಿಯಿಂದ ಅವನು ಕೆರಳಿದ.

"ಹೌದು, ಹೌದು. ತಂದೆ ಹೇಳಿದ್ದಾರೆ," ಎಂದ ಗಟ್ಟಿಯಾಗಿ.

ಸ್ನೊಫ್ರು ಅಂದ :

"ಸಿಟ್ಟು ಬೇರೆ! ಇಲ್ಲಿ ಕೇಳು, ರಾಮೆರಿ. ಅಮ್ಮನನ್ನು ನಾವು ನೋಡ್ಕೊಳ್ತೀವೆ. ನೀನು ಹೋಗಿ ಅಪ್ಪನನ್ನು ಕರಕೊಂಡ್ಬಾ."

"ಹೌದು ಮಗ," ಎಂದಳು ನೆಫಿಸ್.

ಸಂತಸದ ನೋವು ರಾಮೆರಿಪ್‌ಟಾನನ್ನು ಹಿಂಡಿತು. ಒಸರಬಯಸಿದ ಹರ್ಷಾಶ್ರುವನ್ನು ಹತ್ತಿಕ್ಕಿ ಆತ ಮುಗುಳುನಗೆ ಬೀರಿದ.

* * * *

ಇನ್ನೂ ಒಂದಿಷ್ಟು ಬೆಳೆದಿದ್ದ ಮಗಳನ್ನೆತ್ತಿಕೊಂಡು ಅಹೂರಾ ತನ್ನ ಗಂಡನನ್ನೂ ಭಾವನನ್ನೂ ಕರೆದುಕೊಂಡು ಬಂದಳು. ಈ ಸಲವೂ ಇತ್ತು ಖಿವವದ ಚೀಲ. ಬೇರೆಡೆಗಳಿಂದಲೂ ಅಬ್ಬು ಯಾತ್ರಿಕರು ಆಗಮಿಸಿದರು. ಅದೇ ಊರಿನಲ್ಲಿದ್ದವರೂ ಅಣಿಯಾದರು. ಸುಮಾರು ನಾಲ್ವತ್ತು ಜನರಿಗೆ ಎಂಟು ಹತ್ತು ದಿನಗಳಿಗೆ ಸಾಲುವಷ್ಟು ಬುತ್ತಿ ಕಟ್ಟಿದರು.

ಮಾರನೆಯ ಸಂಜೆ ರಾಜಧಾನಿಗೆ ಪ್ರಯಾಣ ಎಂದು ತೀರ್ಮಾನವಾಯಿತು.

ಬಟಾ ತನ್ನ ಮನೆಯಲ್ಲಿ ಕಿರಿಯ ಮಗಳ ಜತೆ ಮೊಸಳೆ ಆಟ ಆಡುತ್ತಿದ್ದಾಗ ಶಿಲ್ಪಿ ನೆಖೆನ್ ಬಂದ.

"ನಾಳೆ ಸಾಯಂಕಾಲ ಪ್ರಯಾಣವಂತೆ."

"ಹ್ಞ."

"ನೀವು ಹೋಗೋಕ್ಮುಂಚೆ ಇವನ್ನಿಷ್ಟು ತೋರಿಸ್ಬಿಡೋಣ ಅಂತ ಬಂದೆ."

ಅವನ ಕಂಕುಳಲ್ಲಿ ಕಡ್ಡಿಗೆ ಸುತ್ತಿದ್ದ ಬಟ್ಟೆ ಸುರುಳಿ ಇತ್ತು. ಅದನ್ನು ಅವನು ತೆಗೆದು ಬಿಚ್ಚಿದ. ಒಂದು ಬಟ್ಟೆ ಚಿಕ್ಕದು. ಇನ್ನೊಂದು ನೀಳವಾದದ್ದು. ಚಿಕ್ಕದನ್ನು ಬಿಡಿಸಿ ಗೋಡೆಯಿಂದ ಇಳಿಬಿಟ್ಟು ನೆಖೆನ್ ನಿಂತ.

ಲಿಪಿಸುರುಳಿ ಬರೆಯುವ ಮಸಿಯಲ್ಲಿ ಬಿಡಿಸಿದ ಒಂದು ಚಿತ್ರ. ಕೃಶಾಂಗ ಯುವಕ. ಮುಖದ ಮೇಲೆ ಕೆಚ್ಚು. ಬಲಪಾದವನ್ನು ಮುಂದಿರಿಸಿದ್ದಾನೆ. ಏನನ್ನೋ ಬದಿಗೆ ಸರಿಸುವವನಂತೆ ಬಲ ಅಂಗೈಯನ್ನು ಬೀಸಿದ್ದಾನೆ.

"ಅನ್ಪು !" ಎಂದು ಬಟಾ ಉದ್ಗರಿಸಿದ.

ನೆಖೆನ್ ನಸುನಕ್ಕು ಆ ಚಿತ್ರವನ್ನು ಸುರುಳಿ ಸುತ್ತಿ, ಇನ್ನೊಂದನ್ನು ಬಿಡಿಸಿದ. ಅವನಿಗಿಂತಲೂ ಒಂದು ಮೊಳ ಎತ್ತರವಿತ್ತು ಆ ಸುರುಳಿ. ಮೊದಲು ನೋಡಿದ ಚಿತ್ರದ ದೊಡ್ಡರೂಪ.

ಬಟಾನನ್ನು ಉದ್ವಿಗ್ನತೆ ಬಾಧಿಸಿತು. ಅವನು ಉಗುಳು ನುಂಗಿದ. ಕಣ್ಣೆವೆ ಮುಚ್ಚದೆ ಚಿತ್ರವನ್ನು ದಿಟ್ಟಿಸಿದ.

"ಅನ್ಪು ಸತ್ತಿಲ್ಲ. ಇಲ್ಲೇ ಇದ್ದಾನೆ. ನಮ್ಮೆಲ್ಲರಿಗಿಂತಲೂ ದೊಡ್ಡವನಾಗಿ ಬೆಳೆದಿದ್ದಾನೆ. ಆಶ್ಚರ್ಯ ! ಆಶ್ಚರ್ಯ !" ಎಂದ.

ಬಟಾನ ಹೆಂಡತಿ ನೋಡಿದಳು. ಮಕ್ಕಳು ನೋಡಿದರು. ಸತ್ತವರನ್ನು ಬದುಕಿಸುವ ಕೌಶಲ ! ನೆಖೆನ್ ಅವರಿಗೆ ಪವಾಡಪುರುಷನಂತೆ ಕಂಡ.

ವಿನಮ್ರನಾಗಿ ಬಟಾ ಹೇಳಿದ :

"ಇದು ಅಪೂರ್ವ ಸಾಧನೆ. ಮೆನೆಪ್‌ಟಾ ಅಣ್ಣನಿಗೆ ತಿಳಿಸ್ತೇನೆ."

ಕೃತಜ್ಞತೆಯ ಭಾವದಿಂದ ಬಟಾನನ್ನು ನೋಡುತ್ತ ನೆಖೆನ್ ಅಂದ :

"ನೀವು ರಾಜಧಾನಿಯಿಂದ ಮರಳಿ ಬಂದ್ಮೇಲೆ ಹತ್ತು ಮೊಳ ಉದ್ದ, ಎರಡು ಮೊಳ ಅಗಲ, ಎರಡು ಮೊಳ ದಪ್ಪದ ಕರಿಶಿಲೆ ತರಿಸ್ಕೊಡಿ. ಸೈನೆ ಹತ್ತಿರ ಹೇರಳವಾಗಿ ಸಿಗ್ತವೆ. ಸಹಾಯಕರಿದ್ದರೆ ಕೆಲಸ ಬೇಗನೆ ಆಗ್ತದೆ. ಹಪುವಿನ ಮಕ್ಕಳಿಗೆ ಶಿಲ್ಪಕಲೆ ಹೇಳ್ಕೊಡ್ತೇನೆ. ಕಲಿಯೋದಕ್ಕೆ ಇಷ್ಟಪಡೋ ಬೇರೆ ಯುವಕರಿದ್ದರೆ ಅವರೂ ಬರಲಿ."

"ಹೂಂ. ಹೂಂ. ನೀವು ರಾಜಗೃಹಕ್ಕೆ ಹೋಗಿ ಹಿರಿಯರಿಗೆ ಅನ್ಪುವಿನ ಚಿತ್ರ ತೋರಿಸ್ತೀರಾ ?"

"ಚಿತ್ರ ಸರಿಯಾಗಿದೆ ಅಂತ ಅನ್ಪುವಿನ ಹೆಂಡತಿ ಹೇಳ್ಬೇಕಲ್ಲ! ಆ ತಾಯಿಗೆ ತೋರಿಸಿ, ಅಲ್ಲಿಂದ ರಾಜಗೃಹಕ್ಕೆ ಹೋಗ್ತೇನೆ."

"ಆಗಲಿ ನೆಖೆನ್ ಮಾವ. ಮಾವ ಅಂತ ಕರೀಬಹುದು ತಾನೆ ?"

"ಮಗ ಮಗಳು ಯಾರೂ ಇಲ್ಲ. ಅಳಿಯಂದಿರಾದರೂ ಇರಲಿ ! ಯಾಕೆ ಬೇಡ ?"

ಹಾಗೆ ಹೇಳುತ್ತ ನೆಖೆನ್ ಚಿತ್ರವನ್ನು ಸುರುಳಿ ಸುತ್ತಿದ.

....ಆ ಸಂಜೆ ರಾಜಗೃಹದಲ್ಲಿ ಅಬ್ಬು ಯಾತ್ರಿಕರೊಡನೆ ಸ್ವಲ್ಪ ಹೊತ್ತು ಕಳೆದು ಬಟಾ ಮನೆಗೆ ಮರಳಿದ.

ಬುಡ್ಡಿ ದೀಪದ ಬೆಳಕಿನಲ್ಲಿ ಕೈ ಬೆರಳುಗಳನ್ನು ಚಮತ್ಕಾರವಾಗಿ ಮಡಚಿ ಬೇರೆ ಬೇರೆ ಪ್ರಾಣಿಗಳ ಛಾಯಾ ಆಕೃತಿಗಳನ್ನು ಗೋಡೆಯ ಮೇಲೆ ಮೂಡಿ ಸುತ್ತ ಬಟಾ ಮಕ್ಕಳ ಜತೆ ಕುಳಿತಿದ್ದ.

"ಅಗೋ ನೀರಾನೆ !"

"ಅಗೋ ಮೊಸಳೆ !"

"ಜಿಂಕೆ !"

ಧಪಧಪನೆ ತಟಿಕೆ ಬಾಗಿಲನ್ನು ಬಡೆದ ಸದ್ದು. ಜತೆಯಲ್ಲೇ "ಅಣ್ಣಾ ! ಅಣ್ಣಾ!" ಎಂಬ ಕರೆ. ದೋಣಿಕಟ್ಟೆಯ ಹುಡುಗನ ಸ್ವರ.

ಬಟಾ ಥಟ್ಟನೆ ಎದ್ದು, ಬಾಗಿಲಿನ ಅಗಣಿ ತೆಗೆದು, ದೋಣಿಕಟ್ಟೆಯ ಕಿರಿಯನನ್ನು ಒಳಕ್ಕೆ ಬಿಟ್ಟ. ಓಡಿಕೊಂಡು ಬಂದಿದ್ದ ಅವನು ಏದುಸಿರು ಬಿಡುತ್ತ ವರದಿ ಮಾಡಿದ :

"ಹೇರುನಾವೆ—ವರ್ತಕ ಕೆಫ್ಟುದು—ಕಟ್ಟೆಗೆ ಬಂದಿದೆ........ಬಟಾ ಇದ್ದಾರಾ ? ಅಂತ ಕೇಳಿದ್ರು. ಇದ್ದಾರೆ ಅಂದೆ—ಓಡಿ ಹೋಗಿ ತಕ್ಷಣ—ಕರಕೊಂಡ್ಬಾ ಅಂದ್ರು....ಬನ್ನಿ...."

ಏಕಕಾಲದಲ್ಲೇ ಒಡಮೂಡಲು ಬಯಸಿದ ವಿವಿಧ ಭಾವನೆಗಳನ್ನು ನಿಯಂತ್ರಿಸುತ್ತ ಬಟಾ ಅಂದ :

"ನೀನು ಹೋಗು—ಬಂದ್ಬಿಟ್ಟೆ."

ಒಲೆಯ ಮುಂದೆ ಕುಳಿತಿದ್ದ ಬಟಾನ ಹೆಂಡತಿಗೆ ಮಾತು ಕೇಳಿಸಿತ್ತು. ಆಕೆ ಕತ್ತು ತಿರುಗಿಸಿ "ಊಟ ಮಾಡ್ಕೊಂಡು ಹೋಗು," ಎಂದಳು ಗಂಡನಿಗೆ.

"ಬೇಡ. ಬೇಗ ಬಂದ್ಬಿಡ್ತೇನೆ. ಮಕ್ಕಳಿಗೆ ಬಡಿಸು," ಎಂದು ಹೇಳಿ, ಛಾವಣಿಗೆ ಸಿಕ್ಕಿಸಿದ್ದ ಜೊಂಡಿನ ಪಾದರಕ್ಷೆಯನ್ನು ಎಳೆದುಕೊಂಡು, ಅದನ್ನು ಮೆಟ್ಟಿಕೊಂಡು ಬಟಾ ಬೀದಿಗಿಳಿದ.

ಅಂದು ನಡುವಿರುಳಿನ ಸುಮಾರಿಗೆ ಚಂದ್ರದರ್ಶನ. ಆದರೆ ಶುಭ್ರ ಆಕಾಶ ದಲ್ಲಿ ಅಸಂಖ್ಯ ನಕ್ಷತ್ರಗಳ ಮಿನುಗು ಬೆಳಕಿತ್ತು. ಕತ್ತಲೆಯ ಕಠೋರತೆಯನ್ನು ಅದು ಕಡಿಮೆ ಮಾಡಿತ್ತು.

ದೋಣಿಕಟ್ಟೆಯ ವೇದಿಕೆಯ ಮೇಲೆ ಕೆಫ್ಟು ಕುಳಿತಿದ್ದ. ಅಂಬಿಗರು ದೋಣಿಯಿಂದ ಇಳಿಸಿದ ಮುಗ್ಗಾಲುಪೀಠ ಅವನ ದೇಹದ ಭಾರವನ್ನು ಹೊತ್ತಿತು.ಬಟಾ ಆ ಸ್ಥಳವನ್ನು ಸಮೀಪಿಸಿದೊಡನೆ ದೋಣಿಕಟ್ಟೆಯ ಹುಡುಗ ಗಟ್ಟಿಯಾಗಿ ನುಡಿದ :

"ನೀರಾನೆ ಪ್ರಾಂತದ ಸಾರಿಗೆ ಮುಖ್ಯಸ್ಥ ಬಟಾ ಅಣ್ಣ ಬಂದ್ರು".

ಕೆಫ್ಟು ಎದ್ದ. ತನ್ನೆದುರು ನಿಂತ ಬಟಾನ ಕೈಯನ್ನು ಮೃದುವಾಗಿ ಹಿಡಿದು "ಬನ್ನಿ," ಎಂದು ಹೇಳಿ, ಬಟಾನ ಜತೆ ದಂಡೆಯುದ್ದಕ್ಕೂ ದಕ್ಷಿಣಕ್ಕೆ ಹತ್ತು ಹೆಜ್ಜೆ ನಡೆದ.

ಬಟಾನಿಗೆ ತಳಮಳ. ಈ ಕೆಫ್ಟುವಿನಿಂದ ಕೆಡುಕಾಗುವುದು ಸಾಧ್ಯವೆ? ಎಂಥ ಸುದ್ದಿ ತಂದಿದ್ದಾನೆ ಈತ ? ಯಾಕೆ ಈ ರಹಸ್ಯ ?

ಪ್ರಯತ್ನಪೂರ್ವಕವಾಗಿ ಧ್ವನಿಯಲ್ಲಿ ಮಾರ್ದವತೆ ತುಂಬುತ್ತ ಕೆಫ್ಟು ಮಾತನಾಡಿದ :

"ನೀವು ರಾಜಧಾನಿ ಬಿಟ್ಟ ಐದನೇ ದಿನ ನಾನು ಅಲ್ಲಿಗೆ ತಲಪಿದೆ. ನಿಮಗೊಂದು ಗೋಪ್ಯದ ಸುದ್ದಿ ಕಳಿಸೋದಕ್ಕೆ ಯಾರಾದರೂ ಸಿಗ್ತಾರೇನೋಂತ ಕಾಯ್ತಾ ಹುಚ್ಚ ಮೆನ್ನ ಕಟ್ಟೆಯ ಮೇಲೆ ನಿಂತಿದ್ದ. ಗಂಭೀರ ಸುದ್ದಿ. ನಾನೇ ಅದರ ವಾಹಕನಾಗೋದು ಸರಿ ಅಂತ, ಅವಸರ ಅವಸರವಾಗಿ ರಾಜಧಾನಿಯ ಕೆಲಸ ಮುಗಿಸಿ ಅಲ್ಲಿಂದ ಹೊರಟೆ."

ಬಟಾನ ಎದೆತುಡಿತ ಬಲಗೊಂಡಿತು.

"ಮೆನೆಪ್‌ಟಾ ಅಣ್ಣನನ್ನು ಕಂಡಿರಾ ?

"ಇಲ್ಲ. ಅಮಾತ್ಯ ಆಸ್ಪದ ಕೊಡಲಿಲ್ಲ."

"ಅಮಾತ್ಯ ಆಸ್ಪದ ಕೊಡಲಿಲ್ಲ ! ಹಾಗಾದರೆ ಅರಮನೆಯ ಅಥಿತಿಗೃಹ ದಲ್ಲಿ ಅಣ್ಣ ಇಲ್ಲವಾ ?"

"ಇದ್ದಾರೆ. ಶಾಂತವಾಗಿ ಕೇಳಿ. ನೀವು ರಾಜಧಾನಿ ಬಿಟ್ಮೇಲೆ ಮಹಾ ಅರ್ಚಕ ಆನ್‌ನಗರಿಯಿಂದ ಬಂದ್ರು. ಅರಮನೆಯಲ್ಲಿ ಮಾತುಕತೆ ನಡೆದು ರಾಜಿಯಾಯ್ತು."

"ಆಯ್ತೆ ? ಸೆಡ್ ಉತ್ಸವಕ್ಕೆ ದಿನ ಗೊತ್ತಾಯ್ತೆ ?"

"ಹೌದು"

ಕೆಪ್ಟ ತೋರು ಬೆರಳನ್ನು ಮೇಲಕ್ಕೆತ್ತಿ ಯೋಚಿಸಿದ. ಎಡ ಅಂಗೈ ಯನ್ನು ಬಲಗೈ ಬೆರಳುಗಳಿಂದ ಒಂದೊಂದಾಗಿ ಮುಟ್ಟುತ್ತ ಎಣಿಕೆ ಹಾಕಿ, ಅಂದ :

"ಇವತ್ತು ರಾತ್ರೆ ಕಳೆದು ಬೆಳಗಾಗ್ತದಲ್ಲ, ಅಲ್ಲಿಂದ ಐದನೇ ಬೆಳಿಗ್ಗೆ."

"ಓ! ಪ್ರಯಾಣಕ್ಕೆ ಸಮಯ ಸಾಲದು. ನಾನು ತಕ್ಷಣ ಹೊರಡ್ಬೇಕು."

"ಸೈನೆ ಗಡಿಯಿಂದ ಸೈನ್ಯದ ಒಂದು ಭಾಗ ರಾಜಧಾನಿಗೆ ಬರ್ತದೆ. ಇಷ್ಟು ಹೊತ್ತಿಗೆ ಬಂದು ತಲಪಿರಬಹುದು. ಐಗುಪ್ತದ ಎಲ್ಲ ಪ್ರಾಂತಪಾಲರೂ ಅಲ್ಲೇ ಇದ್ದಾರೆ. ಸಮಯ ಸಾಲದೂಂತ ಐಗುಪ್ತದ ಮೂಲೆಮೂಲೆಗೆ ಸುದ್ದಿ ಕಳಿಸಿ ಜನರನ್ನು ಅವರು ಕರೆಸ್ತಾ ಇಲ್ಲ. ಈಗಾಗಲೇ ತಡವಾಗಿದೆ."

"ನಮ್ಮ ನಾಯಕರು ಅತಿಥಿಗೃಹದಲ್ಲೇ ಇದ್ದಾರೆ ಅಂದ್ಮೇಲೆ ಸೆಡ್ ಉತ್ಸವ ಆದ ತಕ್ಷಣ ನಾವೆಲ್ಲ ಅಲ್ಲಿಂದ ಹೊರಡಬಹುದು."

"ಅದು ಸಾಧ್ಯವಾಗಲೀಂತ ಆ ಸರ್ವಶಕ್ತ ಸೃಷ್ಟಿಕರ್ತನನ್ನು ನಾನು ಪ್ರಾರ್ಥಿಸ್ತೇನೆ."

"ನಮ್ಮದು ಋಜುಮಾರ್ಗ. ನಮ್ಮ ಮಾಟ್ ನಮ್ಮನ್ನು ಕಾಯ್ತದೆ."

"ನೀವು ತಕ್ಷಣ ಹೊರಟು ಬರ್ಬೇಕು ಅಂತ ಮೆನ್ನ ಹೇಳಿದ್ದಾನೆ."

"ನಾಳೆ ಸಂಜೆ ಪ್ರಯಾಣ ಅಂತ ತೀರ್ಮಾನವಾಗಿತ್ತು. ಬದಲು ಈಗಲೇ ಹೊರಡ್ತೇವೆ."

"ನಿಮ್ಮ ದಳಪತಿ ಖ್ನೆಮ್‌ಹೊಟೆಪ್...."

"ಕೆಫ್ಟ ಮಹಾಶಯ ಬರಲಿಲ್ಲ; ಶಸ್ತ್ರಾಸ್ತ್ರ ಸಿಗಲಿಲ್ಲ—ಅಂತ ಕೂಗಾಡ್ತಿದ್ದಾನೆ."

"ನಿಮ್ಮ ನೂರು ಜನರ ದಂಡಿಗೆ ಸಾಲುವಷ್ಟು ಆಯುಧಗಳನ್ನು ತಂದಿದ್ದೇನೆ. ನೀವು ಬೇಕು ಅಂದಿದ್ದ ಬೇರೆ ಸಾಮಗ್ರಿಗಳೂ ಇವೆ."

"ಹಿರಿಯರಿಗೆ ತಿಳಿಸ್ತೇನೆ. ನೀವು ರಾಜಗೃಹಕ್ಕೆ ಬರಬಹುದಲ್ಲ ?"

"ಈ ಸಲ ಬೇಡ. ಇಲ್ಲಿಯೇ ಕಾದಿರ್ತೇನೆ. ಪಂಜುಗಳನ್ನು ಉರಿಸಿ ಬೆಳಕು ಮಾಡೋಣ, ವ್ಯವಹಾರ ಮುಗಿಸಿ ನಾನು ರಾತ್ರಿಯೇ ಇಲ್ಲಿಂದ ಮುಂದಕ್ಕೆ ಹೊರಡ್ಬೇಕು."

"ವರ್ತಕ ಕೆಫ್ಟಗೂ ಅಂಜಿಕೆಯೆ ?"

ಕೆಫ್ಟ ಸಣ್ಣನೆ ನಕ್ಕ. ಉಗುಳು ನುಂಗಿದ.

"ಅಂಜಿಕೆ ಅಲ್ಲ. ಯುಕ್ತಾಯುಕ್ತ ವಿವೇಚನೆಯ ಪ್ರಶ್ನೆ. ನಾಯಕರು ಪ್ರಾಂತಕ್ಕೆ ಮರಳಿ ಪರಿಸ್ಥಿತಿ ಸುಧಾರಿಸಿದ ಮೇಲೆ ವಾಣಿಜ್ಯ ವ್ಯವಹಾರಗಳನ್ನು ಸುಗಮಗೊಳಿಸೋಣ."

ಬಟಾನಿಗೆ ಏನೋ ಕುಟುಕಿದಂತಾಯಿತು. ಅವನೆಂದ :

"ನಾವಾಗಿ ಪೆರೋನಿಂದ ಆಮಂತ್ರಣ ಬಯಸಲಿಲ್ಲ. ಅದು ಹ್ಯಾಗೆ ಬಂತು ಅನ್ನೋದು ನಿಮಗೆ ಗೊತ್ತಿದೆ."

ಇಂಥ ಪ್ರತಿಕ್ರಿಯೆಯನ್ನು ಕೆಫ್ಟ ನಿರೀಕ್ಷಿಸಿದ್ದ. ಅವನು ತಬ್ಬಿಬ್ಬಾಗಲಿಲ್ಲ.

"ಸೆಡ್ ಉತ್ಸವಕ್ಕೆ ಅಲ್ಲವಾದರೆ ವಸಂತ ಉತ್ಸವಕ್ಕೆ ನಿಮ್ಮ ನಾಯಕರಿಗೆ ಕರೆ ಬಂದೇಬರ್ತಿತ್ತು. ಸಿಡಿದು ಹೋದ ಪ್ರಾಂತವನ್ನು ಸದಾಕಾಲವೂ ಹಾಗೆಯೇ ಬಿಡ್ತಿದ್ದರಾ ? ಇವತ್ತಲ್ಲ ನಾಳೆ ಇತ್ಯರ್ಥವಾಗಲೇಬೇಕಾದ ಸಮಸ್ಯೆ. ನಿಮ್ಮ ಪ್ರಾಂತದ ವಿಷಯದಲ್ಲಿ ರಾಜಧಾನಿಯಲ್ಲಿ ಸದಭಿಪ್ರಾಯ ಮೂಡೋ ಹಾಗೆ ನಾನು ಮಾಡ್ದೆ. ಇನ್ನು ಮುಂದೆಯೂ ನಾನು ನಿಮ್ಮ ಸ್ನೇಹಿತ...."

ವರ್ತಕ ಹೇಳಿದುದು ಸರಿ ಎನಿಸಿ, ಸುಮ್ಮನೆ ಕಹಿ ಮಾತು ಆಡಿದೆನಲ್ಲ— ಎಂದು ಬಟಾ ಪರಿತಪಿಸಿದ. ಬಟಾನ ಮೌನ ಕೆಫ್ಟಗೆ ಅರ್ಥವಾಗಲಿಲ್ಲ; ಮುಖಭಾವವೂ ಕಾಣಿಸಲಿಲ್ಲ. ಅವನೆಂದ :

"ಈಗ ತಾನೆ ಹೇಳಿದಿರಲ್ಲ ನಮ್ಮದು ಋಜುಮಾರ್ಗ, ನಮ್ಮ ಮಾತ್

ನಮ್ಮನ್ನು ಕಾಯ್ತದೆ ಅಂತ ? ಅದು ಬಹಳ ಬೆಲೆಯ ಮಾತು. ರಾಜಧಾನಿಯಲ್ಲಿ ದುಡುಕಿ ಏನನ್ನೂ ಮಾಡಬೇಡಿ. ಉಪಾಯವಾಗಿ ತೊಡಕನ್ನು ಬಗೆಹರಿಸಿಕೊಳ್ಳಿ."

ಮೌನ ತಳೆದಿದ್ದ ಕ್ಷಣಗಳಲ್ಲಿ ಅಬ್ಟು ಯಾತ್ರಿಕರ ಬದಲು ಪ್ನೆನಿಪ್ ಹೊಟೆಪ್‌ನ ಯೋಧರನ್ನು ಕರೆದೊಯ್ದರೆ ಆಗದೆ?—ಎನಿಸಿತು ಬಟಾನಿಗೆ. ಯೋಧರ ಜತೆ ಹೋಗಿ ಅಲ್ಲಿ ಮಾಡುವುದೇನು ? ಹೋರಾಟ ? ಅರಮನೆ ಕಾವಲು ಪಡೆಗಿದುರು ? ಸೈನ್ಯಕ್ಕಿದುರು ? (ಮುಂದೆ ಕೆಫ್ಟನ ಮಾತು: 'ದುಡುಕಿ ಏನನ್ನೂ ಮಾಡಬೇಡಿ.') ಇದು ವಿವೇಕದ ನುಡಿ. ಮೆನೆಪ್‌ಟಾ ಇನ್ನೂ ಆತಿಥ್ಯಗೃಹದಲ್ಲಿದ್ದಾನೆ ಎಂದ ಮೇಲೆ ಅಲ್ಲಿಂದ ಪಾರು ಮಾಡಿಸಿ ಕರೆತರುವುದು ಕಷ್ಟವಾಗದು.

ಮತ್ತೆ ಕೆಫ್ಟ :

"ಏನು ಬಟಾ. ಸುಮ್ಮನಿದ್ದೀರಲ್ಲ ?"

"ಏನಿಲ್ಲ. ಯೋಚಿಸ್ತಿದ್ದೆ. ನೀವು ಹೇಳಿದ್ದು ಒಪ್ಪಿಗೆ. ನಾವು ದುಡುಕೋದಿಲ್ಲ."

"ಇನ್ನು ಸ್ವಲ್ಪ ಹೊತ್ತಿನಲ್ಲಿ ರಾತ್ರೆಯ ಊಟ ಮುಗಿಸ್ಬಿಡ್ತೇವೆ. ಆಮೇಲೆ ನಮ್ಮ ಅಂಬಿಗರು ಹೇರು ಇಳಿಸೋದಕ್ಕೂ ಸ್ವೀಕರಿಸೋದಕ್ಕೂ ಸಿದ್ಧ. ನೀವು—"

"ಹಿರಿಯರಿಗೆ ವಿಷಯ ತಿಳಿಸಿ ರಾಜಧಾನಿಗೆ ಹೊರಡ್ತೇವೆ. ಅವರೆಲ್ಲ ಇಲ್ಲಿಗೆ ಬಂದು ಪಡೆಯುವ, ಕೊಡುವ ಕೆಲಸ ಮಾಡ್ತಾರೆ."

ತೀರಾ ಆತ್ಮೀಯವಾಗಿ ಕೆಫ್ಟುವಿನ ಧ್ವನಿ ಕೇಳಿಸಿತು :

"ದೋಣಿಕಟ್ಟೇಲಿ ಕೆಫ್ಟ ಹಿರಿಯರ ದಾರಿ ನೋಡ್ತಾನೆ ಅಂತ ಅವರಿಗೆ ತಿಳಿಸಿ. ಬಟಾ."

"ತಿಳಿಸ್ತೇನೆ."

* * * *

ಕೆಫ್ಟು ಬಂದನೆಂದು ಶಸ್ತ್ರಾಸ್ತ್ರಗಳನ್ನು ತಂದನೆಂದು ಹರ್ಷ. ರಾಜಧಾನಿಯ ಸುದ್ದಿ ಕೇಳಿ ಕಾತರ.

"ಕೆಪ್ಟು ಈಗಲಾದರೂ ಬಂದನಲ್ಲ, ಸುದ್ದಿ ತಂದನಲ್ಲ—ಇದು ದೊಡ್ಡ ಉಪಕಾರವೇ ಸರಿ. ದೂತರು ಹೋಗಿ ಆಬ್ಟು ಯಾತ್ರಿಕರನ್ನು ಹೊರಡಿಸಲಿ. ನಾವೂ ಬರ್ತೇವೆ ದೋಣಿಕಟ್ಟೆಗೆ. ವ್ಯಾಪಾರ ಮುಗಿದು ಹೋಗಲಿ," ಎಂದ ಸೆನು.

ಹೆಮೂನ್ ಅಂದ :

"ನಮ್ಮ ಜತೆ ವ್ಯವಹಾರ ಗೋಪ್ಯವಾಗಿರಲೀಂತ ಕೆಪ್ಟು ಕತ್ತಲಾದ್ಮೇಲೆ ಬಂದಿದ್ದಾನೆ. ಈಗಲೇ ಹೊರಟು ಹೋಗ್ತಾನೆ."

ಖ್ನೆಮ್ ಹೊಟೆಪ್‌ಗೆ ದುಗುಡ, ಸಂಭ್ರಮ ಎರಡೂ.

"ಮೌಲ್ಯದ ವಿನಿಮಯದ ಜವಾಬ್ದಾರಿಯೆಲ್ಲ ಸ್ನೊಫ್ರು ಮಾವನ್ದು, ಸೆಬೆಕ್ಹು ಮಾವನ್ದು. ಕೊಂಡ ಸಾಮಗ್ರಿಗಳನ್ನು ರಾಜಗೃಹಕ್ಕೆ ತರೋದಕ್ಕೆ ನಮ್ಮ ಯೋಧರನ್ನು ನೇಮಿಸ್ತೇನೆ. ರಾಜಧಾನಿಗೆ ನಾನು ಹೋಗಬೇಕೆ ಏನು ಎನ್ನುವ ವಿಷಯ ಇನ್ನೊಮ್ಮೆ ಯೋಚನೆ ಮಾಡಿ," ಎಂದು ಹೇಳಿ ಆತ ಅಲ್ಲಿಂದ ಎದ್ದು ಹೋದ.

ಹೆಮ್‌ಟ ನಿಧಾನವಾಗಿ ನುಡಿದ :

"ಇಡೀ ಪ್ರಾಂತದ ರಕ್ಷಣೆ ಕಾವಲು ಪಡೆಯ ಹೊಣೆ. ಯುದ್ಧ ಎಂದಾದರೆ ಆ ಮಾತು ಬೇರೆ. ಅಲ್ದೆ, ನಮ್ಮದು ಆತ್ಮರಕ್ಷಣೆಯ ದಂಡು, ಆಕ್ರಮಣದ್ದಲ್ಲ...."

ಸೆಬೆಕ್ಹು ಖಚಿತ ಧ್ವನಿಯಲ್ಲಿ ಅಂದ :

"ಮೆಂಫಿಸಿನ ದೋಣಿಕಟ್ಟೆಯಲ್ಲೇ ನಮ್ಮ ದಂಡನ್ನು ಸುತು ವರಿದು ಶಸ್ತ್ರಗಳನ್ನು ಕಸಕೊಂಡ್ಬಿಡ್ತಾರೆ. ತೋಳ್ಬಲ ತೋರಿಸ್ತೇವೇಂತ ಹೋಗೋದು ಹುಚ್ಚು ಕೆಲಸ...."

ತನ್ನ ಹಣೆಯ ಮೇಲೆ ಬೆವರು ಹನಿಗಳು ಸಾಲುಗಟ್ಟಿದ್ದನ್ನು ಕಂಡು ಬಟಾಗೆ ಆಶ್ಚರ್ಯವಾಯಿತು. ಅಂಗೈಯಿಂದ ಬೆವರನ್ನು ತೊಡೆದು, ಕೂದಲ ಮೇಲೆ ಬೆರಳುಗಳನ್ನೋಡಿಸಿ, ಆತ ಎದ್ದ.

"ಕೆಪ್ಟು ದೋಣಿ ಕಟ್ಟೇಲಿ ಹಿರಿಯರ ದಾರಿ ನೋಡ್ತಿದ್ದಾನೆ. ನೆಫಿಸ್ ಅಚ್ಚನಿಗೆ ಹೇಳಿ, ನಾನೂ ಅಲ್ಲಿಗೆ ಬರ್ತೇನೆ," ಎಂದ, ಅಲ್ಲಿಂದ ಹೊರಬೀಳುತ್ತ.

ಅಬ್ಬು ಯಾತ್ರಿಕರೊಡನೆ ಬಟಾ ಆ ರಾತ್ರಿಯೇ ಮೆಂಫಿಸಿಗೆ ಮರಳುವ ನೆಂಬ ಸುದ್ದಿ ಕಿವಿಯಿಂದ ಕಿವಿಗೆ ಆಗಲೇ ಹಬ್ಬಿತ್ತು. ವಿಷಯ ಏನೆಂದು ತಿಳಿಯಲು ನೆಫರುರಾ ಓಡಿ ಬಂದಳು, ನೆಫಿಸ್‌ಳಲ್ಲಿಗೆ. ಅಹೂರಾ ತನ್ನ ಮಗಳ ನ್ನೆತ್ತಿಕೊಂಡು ಹೊರಟು ನಿಂತಳು.

ಬಟಾ ಒಳಬಂದು ಲವಲವಿಕೆ ನಟಿಸುತ್ತ, "ಅತ್ತಿಗೆ, ಸೆಡ್ ಉತ್ಸವದ ದಿನ ಗೊತ್ತಾಗಿದೆಯಂತೆ. ನಾಳೆಯಲ್ಲ, ಇವತ್ತೇ ಹೊರಡ್ತೇವೆ," ಎಂದ.

"ಇವತ್ತೇ ಅಂದರೆ ಈಗಲೇ," ಎಂದು ಮಾತು ಕೂಡಿಸಿದಳು ಅಹೂರಾ.

ನೆಫಿಸ್ ಅಂದಳು :

"ಕೆಲಸ ಸಲಭವಾಯ್ತು ಅಲ್ಲವಾ ? ಸೆಡ್ ಉತ್ಸವ ಮುಗಿಸ್ಕೊಂಡೇ ನಿಮ್ಮ ನಾಯಕನನ್ನು ಕರಕೊಂಡ್ಬರ್ತೀರಿ."

"ಹೌದು, ಅತ್ತಿಗೆ,"

"ರಾಮೆರಿಪ್‌ಟಾ ತಪ್ಪಿಸ್ಕೊಂಡಾನು. ಸ್ವಲ್ಪ ನೋಡ್ಕೊ, ಬಟಾ ಅಣ್ಣ."

"ನಾವಿದ್ದೇವೆ. ನೆಫಿಸ್ ಅಕ್ಕ," ಎಂದು ಅಹೂರಾ, "ನಾಯಕ ಪುತ್ರ ನನ್ನು ನೋಡ್ಕೊಳ್ಳದೆ ಇರ್ತೇವಾ ?" ಎಂದು ಬಟಾ, ಒಟ್ಟಿಗೆ ಅಂದರು.

"ನಾನೇನು ಚಿಕ್ಕ ಮಗು ಅಲ್ಲ," ಎಂದು ರಾಮೆರಿಪ್‌ಟಾ ಪ್ರತಿಭಟಿಸಿದ.

"ನೆಜಮುಟ್ ಬಂದಳು.

"ನೀನು ದೋಣಿಕಟ್ಟೆಗೆ ಬರೋದು ಬೇಡ ನೆಫಿಸ್. ನಾವೆಲ್ಲ ಹೋಗಿ ಇವರನ್ನು ಕಳಿಸ್ಕೊಟ್ಟು ಬರ್ತೇವೆ."

"ನಾನು ದೋಣಿಕಟ್ಟೇಲಿ ಸಿಗ್ತೇನೆ....ಹೋಗಲಾ ಅತ್ತಿಗೆ ?"

"ಏನಾದರೂ ವಿಶೇಷ ತಿನಿಸು ತಯಾರಿಸಿ ರಾಮೆರಿಪ್‌ಟಾ ಕೈಲಿ ಕೊಟ್ಟು ಕಳಿಸ್ಬೇಕೂಂತಿದ್ದೆ. ಹೊರಡೋದು ನಾಳೆ, ನಾಳೆಯೇ ಮಾಡಿದರಾಯ್ತು ಅಂದುಕೊಂಡಿದ್ದೆ....ಈಗ ನೋಡಿದರೆ...."

"ಪರವಾಗಿಲ್ಲ ಬಿಡು ಅತ್ತಿಗೆ. ನೀನು ತಟ್ಟಿದ ರೊಟ್ಟಿ, ಮೀನಿನ ಉಪ್ಪೇರಿ. ಇದ್ದರಾಯ್ತು. ಅಣ್ಣನಿಗೆ ಇನ್ನೇನೂ ಬೇಡ."

"ಅದನ್ನಂತೂ ಕಟ್ಟಿ ಕೊಡ್ತೇನೆ."

ನೆಫರುರಾ ಆಗಲೇ ಹೊರಕ್ಕೆ ನುಸುಳಿ, ಗೋಡೆಯ ನೆರಳಿನಲ್ಲಿ ಮರೆಯಲ್ಲಿ ನಿಂತಿದ್ದಳು.

ಬಟಾನ ಕೈಹಿಡಿದು ಆಕೆ ಪಿಸುದನಿಯಲ್ಲಿ ಕೇಳಿದಳು:

"ಏನೂ ಅಪಾಯ ಇಲ್ಲವಾ?"

ತನ್ನೊಳಗಿನ ಸಂಕಟವನ್ನು ಅವಳಿಗೆ ತಿಳಿಸಬೇಕು ಎನಿಸಿತು ಬಟಾಗೆ. ಹತ್ತಿರಕ್ಕೆ ಅವಳನ್ನು ಬರಸೆಳೆದ. (ಧಿಮಿಗುಡುತ್ತಿದ್ದ ಮೆದುಳು ತೀರ್ಮಾನಿಸಿತು: 'ಸುದ್ದಿ ಹಬ್ಬೀತು. ಇವಳಿಗೆ ಏನನ್ನೂ ಹೇಳಬಾರದು.')

ನೆಫರುರಾ ಪುನಃ ಕೇಳಿದಳು:

"ಅಪಾಯವೇನೂ ಇಲ್ಲ, ಅಲ್ಲವಾ ?"

ಇಲ್ಲ ಎನ್ನುವಂತೆ ತಲೆಯಲ್ಲಾಡಿಸಿದ ಬಟಾ.

ಎರಡೂ ಕೈಗಳಿಂದ ಬಟಾನ ತಲೆಯನ್ನು ತನ್ನೆಡೆಗೆ ಎಳೆದು ಅವನ ತುಟಿಗಳಿಗೆ ನೆಫರುರಾ ಮುತ್ತು ಕೊಟ್ಟಳು.

"ಇದು ನಾಯಕರಿಗೆ," ಎಂದಳು.

ಮತ್ತೊಂದು ಮುತ್ತು ನೀಡಿ "ಇದು ನನ್ನ ಬಟಾ ಅಣ್ಣನಿಗೆ," ಎಂದಳು.

ಅವಳ ಈ ಅನಿರೀಕ್ಷಿತ ವರ್ತನೆಯಿಂದ ಬಟಾನ ಗಂಟಲು ಕಟ್ಟಿತು. ಮುತ್ತಿನ ಜತೆಗೆ ಮುಖಕ್ಕೆ ನೀರಿನ ಸ್ಪರ್ಶವೂ ಆಯಿತಲ್ಲ ಎಂದು, ಬಟಾ ತನ್ನ ಬೆರಳುಗಳಿಂದ ನೆಫರುರಾಳ ಕಪೋಲಗಳನ್ನು ಮುಟ್ಟಿದ. ತೋಯ್ದಿದ್ದುವು. ಆ ಕಂಬನಿಯನ್ನು ಒರೆಸಿದ.

ಬೀದಿಯ ತಿರುವಿನಿಂದ ಮಾತಿನ ಧ್ವನಿ ಕೇಳಿಸಿತು. ನೆಫರುರಾ ನಿಟ್ಟುಸಿರು ಬಿಟ್ಟು, ಬಟಾನಿಂದ ದೂರ ಸರಿದಳು.

"ಬರ್ತೀನೆ ನೆಫರು," ಎಂದು ಹೇಳಿ, ಬಟಾ ಇರುಳಲ್ಲಿ ಕರಗಿದ.

....ಆತ ಮಡದಿಯೊಡನೆ ಕಳೆಯಬೇಕಾಗಿದ್ದ ರಾತ್ರಿ. ಯಾವುದೇ ಪಯಣಕ್ಕೆ ಮುಂಚೆ ನೀಡುವ ಪಡೆಯುವ ಒಲವಿನ ಉಡುಗೊರೆ. ಈ ಸಲ ಅದಿಲ್ಲ. ಬಟಾ ದೋಣಿಕಟ್ಟೆಯತ್ತ ಧಾವಿಸಿದಾಗಲೇ, ಎಲ್ಲಿಯೋ ಏನೋ ಹೆಚ್ಚು ಕಡಿಮೆಯಾಗಿದೆ ಎನಿಸಿತ್ತು ಅವನ ಹೆಂಡತಿಗೆ. ಮುಂದೆ ಸ್ವಲ್ಪ ಹೊತ್ತಿನಲ್ಲಿ ದೋಣಿ ಆ ಕ್ಷಣವೇ ಹೊರಡುತ್ತದೆ ಎಂಬ ಸುದ್ದಿ ಬಂತು. ಮುಂಜಾವ ಹೊರಟಿದ್ದರೆ ಆಗುತ್ತಿರಲಿಲ್ಲವೇನೋ ಎಂದುಕೊಂಡಳು. ನಿರಾಸೆ. ಒಂದು ಚೂರು ಸಿಡುಕು ಕೂಡಾ.

ಮಕ್ಕಳು ಮಲಗಿದ್ದುವು. ಅವಳು ಬಾಗಿಲಲ್ಲಿ ನಿಂತಿದ್ದಳು. ಬಟಾ ಬಿರುಗಾಳಿಯಂತೆ ಅವಳನ್ನು ತಳ್ಳಿಕೊಂಡು ಒಳಕ್ಕೆ ನುಗ್ಗಿದ. ಅವಳ ನಡುವನ್ನು ಬಳಸಿ ಹೇರಳವಾಗಿ ಮುತ್ತುಕೊಟ್ಟ.

"ಈ ಸುಗಂಧ ಎಲ್ಲೀದು ?" ಎಂದು ಆಕೆ ಕೇಳಿದಳು.

ಮರಳ ದಿಬ್ಬವನ್ನು ಒರೆಸಿತಲ್ಲ ನಾವೆ ?

"ಕೆಪ್ಟು ತಂದದ್ದು," ಎಂದ. ('ನೆಫರುರಾ ಹೆಸರನ್ನೆತ್ತಿ ಮಡದಿಯ ಅರ್ಥವಿಲ್ಲದ ಕೊರಗಿಗೆ ಯಾಕೆ ಕಾರಣನಾಗಲಿ ?')

"ಈಗಲೇ ಹೋಗ್ಬೇಕೆ ?"

"ಹ್ಞ. ಈ ಸಲ ದೂರವಿರೋದು ಹತ್ತೇ ದಿನ."

"ಊಟಕ್ಕಿಡ್ತೇನೆ."

"ಬೇಡ. ನಿಂತುಕೊಂಡೇ ತಿನ್ತೇನೆ. ಒಂದು ರೊಟ್ಟಿ ಕೊಡು."

"ನಿನ್ನೆ ತಂದ ಖಿವವ ಮಿಕ್ಕಿದ್ದು ಸ್ವಲ್ಪ ಇದೆ."

"ನಿನಗಿರಲಿ."

"ಊಹೂಂ. ನೀನು ತಗೋ."

ಒಂದೆರಡು ತುಣುಕು ರೊಟ್ಟಿ ತಿಂದು ಬಟಾ, "ಸಾಕು. ಹಸಿವಿಲ್ಲ," ಎಂದುಬಿಟ್ಟ. ಅರ್ಧ ಬಟ್ಟಲು ಖಿವವನ್ನು ಗಟಗಟನೆ ಕುಡಿದ. ಉಳಿದರ್ಧವನ್ನು ಅದರಲ್ಲೇ ಬಿಟ್ಟು, "ನಿನಗೆ," ಎಂದ.

ಅವನ ಹೆಂಡತಿ ತಾನು ಒಗೆದು ಒಣಗಿಸಿ ಮಡಚಿ ಇಟ್ಟಿದ್ದ ಗಂಡನ ನಡುವಸ್ತ್ರವನ್ನೂ ಕೊಳಲನ್ನು ತಂದುಕೊಟ್ಟಳು.

ನಡುವಸ್ತ್ರವನ್ನು ಭುಜದ ಮೇಲಿರಿಸಿ, ಕೊಳಲನ್ನು ತುಟಿಗಳಿಗೆ ತಗಲಿಸಿ ಮಡದಿಯ ಮುಖದತ್ತ ತಿರುಗಿಸಿ "ಫೀ" ಎಂದ. ಮಕ್ಕಳ ಕಡೆಗೊಮ್ಮೆ ನೋಡಿದ. ಕೊಳಲಿನಿಂದ ಪತ್ನಿಯ ತಲೆಯನ್ನು ಮೆಲ್ಲನೆ ತಟ್ಟಿದ.

"ಹುಟ್ಟು ಹಾಕ್ತೇನೆ ಇನ್ನು," ಎಂದು ಹೇಳಿ ಬೀದಿಗಿಳಿದ.

ಬಿರಬಿರನೆ ನಡೆಯುತ್ತಿದ್ದ ಗಂಡನ ಆಕೃತಿ ಬೇಗನೆ ಮುಸಕಾಯಿತು. ಏನೂ ಕಾಣಿಸದೆ ಇದ್ದರೂ ಗಂಡ ಹೋದ ದಿಕ್ಕನ್ನೇ ಅವನ ಹೆಂಡತಿ ನೋಡುತ್ತ ಬಾಗಿಲಲ್ಲಿ ಬಹಳ ಹೊತ್ತು ನಿಂತಳು.

* * * *

ದೋಣಿಕಟ್ಟೆಯ ಬಳಿಯ ವಿಸ್ತಾರ ಸ್ಥಳವನ್ನು ಕೆಫ್ಟುವಿನ ಅಂಬಿಗರೂ ಖ್ನೆಮ್‌ಹೊಟೆಪ್‌ನ ಯೋಧರೂ ಹಚ್ಚಿದ ಪಂಜುಗಳು ಜಾತ್ರಾಸ್ಥಳವಾಗಿ ಮಾರ್ಪಡಿಸಿದ್ದುವು. "ಅಬ್ಟು ಯಾತ್ರೆಯಲ್ಲೂ ಹೀಗೆಯೇ ಇತ್ತು, ಅಲ್ಲವಾ ?" ಎನ್ನುತ್ತ ಆ ಯಾತ್ರಿಕರು ತುಸು ಹಳಗೆ ಬಂಡೆಗೆ ಕಟ್ಟಿದ್ದ ಬಟಾನ ದೋಣಿಯನ್ನು ಏರತೊಡಗಿದರು. ಹಿರಿಯರು ಕಟ್ಟೆಯ ವೇದಿಕೆಯ ಮೇಲೆ ಕುಳಿತರು. ಕೆಫ್ಟು 'ನಿಮ್ಮ ಜತೆ ನನಗೂ ನೆಲವೇ ಸಾಕು'—ಎಂದ.

ವೇದಿಕೆಯ ಬಳಿ ಬಂದು ದೀಪದ ಕೆಳಗೆ ಇಪ್ಯುವರ್ ನಿಂತುಕೊಂಡ, ತೆರೆದ ಲಿಪಿಸುರುಳಿಯನ್ನು ಕೈಯಲ್ಲಿ ಹಿಡಿದು.

"ಯಾವು ಯಾವುದಕ್ಕೆ ಎಷ್ಟೆಷ್ಟು ಮೌಲ್ಯ ಅಂತ ನಾನು ಹಿಂದೆ ಹೇಳಿದ್ದನ್ನು ನಿಮ್ಮ ಲಿಪಿಕಾರ ಬರಕೊಂಡಿದ್ದಾರೆ, ಅಲ್ಲವಾ ?" ಎಂದ ಕೆಫ್ಟು.

ಅರಳು ನಗೆ ತೋರಿ ಇಪ್ಯುವರ್‌ನೇ ಆ ಪ್ರಶ್ನೆಗೆ ಉತ್ತರವಿತ್ತ :

"ಬರಕೊಂಡಿದ್ದೇನೆ. ಇಲ್ಲಿದೆ....ನಮ್ಮಿಂದ ಕೊಳ್ಳೋ ಸಾಮಗ್ರಿಗಳ ಮೌಲ್ಯವಷ್ಟೇ ಬರೆದಿದೆ."

"ಈ ಸಲ ನಾನು ಕೊಡೋ ವಸ್ತುಗಳ ಮೌಲ್ಯ ಎಷ್ಟು ಅಂತಲೂ ಗೊತ್ತಾಗ್ತದೆ. ಬರಕೊಂಡ್ಬಿಡಿ."

ಹಾಳೆ, ಹಲಗೆ, ಮಸಿಪಾತ್ರೆ, ಲೆಕ್ಕಣಿಕೆ ವೇದಿಕೆಯ ಬುಡದಲ್ಲಿ ಕತ್ತಲಲ್ಲಿದ್ದುವು.

ಇವು ಕೆಫ್ಟುಗೆ ಕಾಣಿಸಿರಬೇಕು, ಆದಕ್ಕೇ ಹೀಗೆ ಹೇಳ್ತಾನೆ—ಎಂದುಕೊಂಡ ಇಪ್ಯುವರ್. ಬಟಾನನ್ನು ಕಾಣಲು ಅವನಿಗೆ ತವಕ. ಅರ್ಚಕ ಅಪೆಟ್ ಸ್ವಲ್ಪ ಹೊತ್ತಿಗೆ ಮುಂಚೆ ತನ್ನ ಮಗನನ್ನು ಒಂದು ಸಂದೇಶದೊಡನೆ ಕಳಿಸಿದ್ದ. ಆ ಸಂದೇಶವನ್ನು ಬಟಾನಿಗೆ ತಲಪಿಸಬೇಕು. ಅಲ್ಲದೆ....

ಕೆಳಗೆ ದೋಣಿಯ ಬಳಿ ಬಟಾ ಮತ್ತು ಖ್ನೆಮ್‌ಹೊಟೆಪ್‌ರ ಸ್ವರ ಕೇಳಿಸಿದೊಡನೆ ಇಪ್ಯುವರ್ ಅಲ್ಲಿಗೆ ಧಾವಿಸಿದ.

"ಬಟಾ, ಪ್ರಯಾಣ ಹೊರಡೋದಕ್ಮುಂಚೆ ಮಂದಿರಕ್ಕೆ ಬಂದು ಪ್ರಸಾದ ಸ್ವೀಕರಿಸಬೇಕೊಂತ ಅಪೆಟ್ ಹೇಳಿ ಕಳಿಸಿದ್ದಾರೆ...."

"ಇಷ್ಟು ಹೊತ್ನಲ್ಲಿ ದೇವರು—ಅಪೆಟ್ ಇಬ್ಬರೂ ಮಲಗಿರ್ತಾರೆ. ನಾಳೆ ಅರ್ಚಕ ಏನೇನು ವ್ಯಾಪಾರವಾಯ್ತೂಂತ ಕೇಳೋದಕ್ಕೆ ಬರ್ತಾರೆ. ಆಗ

ತಿಳಿಸ್ಬಿಡಿ: ಪ್ರಸಾದ ಜೋಪಾನವಾಗಿಡ್ಬೇಕಂತೆ, ರಾಜಧಾನಿಯಿಂದ ವಾಪ ಸಾದ್ಮೇಲೆ ಇಸಕೋತೇನಂತೆ—ಅಂತ."

"ಇನ್ನೊಂದು ವಿಷಯ ಬಟಾ. ಅಲ್ಲಿ ಖರ್ಚಿಗೆ ಬೇಕಾದೀತೇನೋ.... ರಾಜಗೃಹದಿಂದ ಒಂದಿಷ್ಟು ವಿನಿಮಯ ಸಾಮಗ್ರಿಗಳನ್ನು ತಂದಿದ್ದೇನೆ. ಮೂಟೆ ಅಲ್ಲಿದೆ—ದಂಡೆ ಮೇಲೆ."

"ಇದಕ್ಕೇ ದೂರದೃಷ್ಟಿ ಅನ್ನೋದು. ಒಳ್ಳೇ ಕೆಲಸ ಮಾಡಿದಿರಿ. ಗೇಬುವಿನ ಪೆಟಾರಿಗಳನ್ನೂ ತಂದಿಲ್ಲ ತಾನೆ?"

"ತರಬೇಕಾಗಿತ್ತಾ? ದೋಣಿ ತುಂಬಿರ್ತದೆ ಅಂತ—"

"ನಿಜ. ಅಣ್ಣ ನಮ್ಮ ರಾಜಧಾನಿಗೆ ವಾಪಸಾದ್ಮೇಲೆ ನೀವು ಆ ಪೆಟಾರಿ ಗಳನ್ನು ತಗೊಂಡು ಲಿಷ್ಟ್‌ಗೆ ಹೋಗಿ ಗೇಬುಗೆ ತಲಪಿಸ್ಬೇಕು ಹಾಗೆಯೇ ಮೆಂಫಿಸಿಗೂ ಹೋಗಿ ಅಲ್ಲಿನ ಲಿಪಿಕಾರಯ್ಯಾದಿಗಳಿಗೆ ನಿಮ್ಮ ಹಸ್ತಾಕ್ಷರ ತೋರಿಸ್ಬೇಕು."

"ತಮಾಷೆ ಮಾತಾ?"

"ಛೆ! ಛೆ!"

"ನಾನೊಬ್ಬನೇ!"

"ಹೆದರ್ಕೇನಾ? ದಳಪತಿ ಮತ್ತು ನಾನು ಜತೆಗಿರ್ತೇವೆ."

ಖ್ನೆಮ್‌ಹೋಟೆಪ್‌ನ ಧ್ವನಿ ಕೇಳಿಸಿತು:

"ಎಲ್ಲರೂ ಹತ್ತಿದಿರಾ?....ಸರಿ...."

ಇಪ್ಯುವರ್‌ನನ್ನು ಬಟಾ ಕೇಳಿದ:

"ನುಬಿಯದಿಂದ ವಾಪಸು ಬರುವಾಗ ಸಿದ್ಧ ಸಾಮಗ್ರಿಗಳನ್ನು ತಗೊಂಡು ಹೋಗ್ತೇವೆ—ಅಂತ ಕೆಫ್ಟು ಹಿಂದೆ ಹೇಳಿದ್ದ."

"ಇಲ್ಲ, ಹಿರಿಯರು ಬಂದ ತಕ್ಷಣ ಅದು ಇತ್ಯರ್ಥವಾಯಿತು. ಈಗಲೇ ಬೇಕಂತೆ."

ಕೈಯಲಿದ್ದ ಕೊಳಲನ್ನೂ ಮಡಚಿದ ನಡುವಸ್ತ್ರವನ್ನೂ ತನ್ನ ಅಂಬಿಗರ ವಶ ಕೊಟ್ಟು ಬಟಾ ಅಂದ:

"ನಿಮ್ಮ ಮೂಟೇನ ದೋಣೀಲಿ ಇಡಿಸಿ."

"ಹೂಂ ಹೂಂ," ಎಂದು ಇಪ್ಯುವರ್ ಸಂಜು ಕಂಬಗಳೆಡೆಯಿಂದ ಹತ್ತಾರು ಮಾರುಗಳಾಚೆ ಸಾಗಿದ.

ವೇದಿಕೆಯತ್ತ ಹೋಗಲು ಬಟಾ ಬಯಸಲಿಲ್ಲ. ಕೆಫ್ಟುವಿನ ನವುರು ಮಾತು ಸಹಿಸುವುದು ಇನ್ನು ತನ್ನಿಂದಾಗದು ಎನಿಸಿತು.

ಕೆಫ್ಟು, ವಿದಾಯದ ವಂದನೆಗೆ ಬಟಾ ಬರಬಹುದು ಎಂದು, ಚಿಕ್ಕ ದೋಣಿಯಿಂದ ಕೇಳಿಸುತ್ತಿದ್ದ ಕಲರವದತ್ತ ಕತ್ತು ಚಾಚಿ ಕುಳಿತಿದ್ದ. ಅವನು ಬರದೇ ಇದ್ದಾಗ, ಹಿರಿಯರನ್ನು ವೇದಿಕೆಯ ಮೇಲೆಯೇ ಬಿಟ್ಟು ಬಟಾನ ಆಕೃತಿ ದೂರದಿಂದ ಕಣ್ಣಿಗೆ ಬಿದ್ದ ಕಡೆಗೆ ತಾನು ನಡೆದ.

ಇದನ್ನು ಕಂಡ ಬಟಾ "ಬಂದ ಸೆತ್" ಎಂದು ಗೊಣಗಿ, ತಾನೂ ಕೆಫ್ಟು ನತ್ತ ಹೊರಟು ನಡುದಾರಿಯಲ್ಲಿ ಅವನನ್ನು ಸಂಧಿಸಿದ.

ಕೆಫ್ಟು ಕೇಳಿದ:

"ನನ್ನ ಮೇಲೆ ಕೋಪವಾ ?"

" ಇಲ್ಲವಪ್ಪ."

" ಮೆಂಫಿಸಿನ ದೋಣಿಕಟ್ಟೆಗೆ ನೇರವಾಗಿ ಹೋಗ್ಬೇಡಿ. ನಿಮ್ಮ ದೋಣಿಯ ಪರಿಚಯ—ನಿಮ್ಮ ಪರಿಚಯ—ಕಟ್ಟೆಯವರಿಗಿದೆ. ಅರಮನೆ ಕಾವಲು ಭಟರೂ ಆಳುಗಳೂ ನಿಮ್ಮನ್ನು ಬಲ್ಲರು. ಬಕಿಲ ಬೇರೆ ಅಲ್ಲಿ ಓಡಾಡ್ತಿ ರ್ತಾನೆ. ಸೆಡ್ ಉತ್ಸವದ ಮುನ್ನಾ ದಿನದಿಂದಲೇ ಮೆನ್ನ ನಿಮ್ಮ ದಾರಿ ನೋಡ್ತಾನೆ. ರಾಜಧಾನಿ ಹತ್ತಿರ ಬಂದ ಹಾಗೆ ಎಡದಂಡೆ ಕಡೆ ದೃಷ್ಟಿ ಇಡಿ."

" ಹೂಂ. "

" ಕಠಾರಿಗಿಂತಲೂ ಚಿಕ್ಕದು ಬಾಕು ತಂದಿದ್ದೇನೆ. ಸುಲಭವಾಗಿ ನಡು ವಸ್ತ್ರದಲ್ಲಿ ಮುಚ್ಚಿಟ್ಕೋಬೌದು. ಆತ್ಮರಕ್ಷಣೆಗೆ ಆಗ್ತದೆ. ಒಂದು ಹತ್ತು ಕೊಟ್ಟಿರ್ತ್ಲಾ ? ಇದಕ್ಕೆ ಪ್ರತಿಯಾಗಿ ನೀವೇನೂ ಕೊಡೋದು ಬೇಡ."

" ಕೃತಜ್ಞ."

" ಪ್ರಯಾಣಕ್ಕೆ ಇನ್ನೇನಾದರೂ ಬೇಕಾದರೆ ಹೇಳಿ."

" ಏನೂ ಬೇಡ."

ಕೆಫ್ಟು ತಿರುಗಿ ನೋಡಿದ. ನಾಲ್ಕು ಹೆಜ್ಜೆ ಹಿಂದೆ ನಿಂತಿದ್ದರು ಅವನ ಇಬ್ಬರು ಸೇವಕರು. ಅವರಲ್ಲೊಬ್ಬನಿಗೆ ಕೆಫ್ಟು ನಿರ್ದೇಶವಿತ್ತ:

" ಹತ್ತು ಬಾಕು ತಂದು ಇವರಿಗೆ ಕೊಡು."

ಆ ಸೇವಕ ನಿರ್ಗಮಿಸುವುದನ್ನು ನೋಡುತ್ತಿದ್ದು, ತನ್ನವರು ಹೇರು ದೋಣಿಗಳಿಂದ ಸಾಮಾನುಗಳನ್ನು ಇಳಿಸುತ್ತಿದ್ದುದರ ಕಡೆಗೊಮ್ಮೆ ದೃಷ್ಟಿ ಹಾಯಿಸಿ, ಕೆಪ್ಟು ಮತ್ತೆ ಬಟಾನತ್ತ ಹೊರಳಿದ.

" ಸಂಘಟನಾ ಕೌಶಲದಲ್ಲಿ ಐಗುಪ್ತದ ಜನರನ್ನು ಮೀರಿಸುವವರು ಬೇರೆಲ್ಲೂ ಇಲ್ಲ. ಆದರೆ ಐಗುಪ್ತದಲ್ಲಿ ನೀರಾನೆ ಪ್ರಾಂತದವರ ಸಂಘಟನಾ ಸಾಮರ್ಥ್ಯಕ್ಕೆ ಬೇರೆ ಯಾವ ಪ್ರಾಂತದ್ದೂ ಸಾಟಿಯಿಲ್ಲ."

ಬಟಾ ಏನೂ ಹೇಳಲಿಲ್ಲ. ಹೇರುನಾವೆಯಿಂದ ಇಳಿಸಿದ ಸರಕುಗಳತ್ತ ಸಾಗುತ್ತಿದ್ದ ಖ್ನೆಮ್‌ಹೊಟೆಪ್‌ನನ್ನು ಅವನ ದೃಷ್ಟಿ ಹಿಂಬಾಲಿಸಿತು. ಇಪ್ಯುವರ್ ಓಡಿಬಂದು, "ಇಟ್ಟಾಯ್ತು," ಎಂದು ಹೇಳಿ, ವೇದಿಕೆಯತ್ತ ಧಾವಿಸಿದ.

ಕೆಪ್ಟು ನಿಧಾನವಾಗಿ ಅಂದ :

" ನಿಮ್ಮ ದಳಪತಿ, ನಿಮ್ಮ ಲಿಪಿಕಾರ—ಇವರು ಸಾಮಾನ್ಯ ಮನುಷ್ಯರು ಅಲ್ಲವೇ ಅಲ್ಲ."

ಕಾಲ ಕಳೆಯಲು ಮಾತು ಎನಿಸಿತು ಬಟಾಗೆ. ಅವನು ನಕ್ಕು, " ಈ ಬಡ ಅಂಬಿಗ ?" ಎಂದು ಕೇಳಿದ.

" ಬಡ ಅಂಬಿಗ ಬಟಾ ಸದಾ ಕಾಲವೂ ಹೀಗೆ ನಗುನಗ್ತಾ ಇರಲಿ ಅನ್ನೋದೇ ನನ್ನ ಪ್ರಾರ್ಥನೆ....ಅಗೋ ಬಾಕುಗಳು. ನಿಮಗೆ ಒಳ್ಳೇದಾಗಲಿ."

ಅಷ್ಟು ಹೇಳಿ ಕೆಪ್ಟು, ಸರಕ್ಕನೆ ತಿರುಗಿ, ಕಟ್ಟೆಯ ವೇದಿಕೆಯತ್ತ ಹೊರಟು ಹೋದ. ಸೆಣಬಿನ ಬಟ್ಟೆ ಸುತ್ತಿದ್ದ ಬಾಕುಗಳ ಪುಟ್ಟ ಕಟ್ಟನ್ನು ಸೇವಕನಿಂದ ಪಡೆದು ಬಟಾ ತನ್ನ ದೋಣಿಯತ್ತ ನಡೆದ. ದೋಣಿಯ ಬಳಿ ಕಟ್ಟನ್ನು ಸಡಿಲಿಸಿ ಒಂದು ಬಾಕುವನ್ನು ಹೊರತೆಗೆದು ಮೊನೆಯನ್ನು ಪರೀಕ್ಷಿಸಿ "ಚೂಪಾಗಿದೆ. ಹರಿತವಾಗಿದೆ" ಎಂದು ಸಮಾಧಾನ ಪಟ್ಟುಕೊಂಡ.

ದಂಡೆಯ ಮೇಲಿನಿಂದ ನೆಜಮುಟ್ ಕೀರಲು ಗಂಟಲಲ್ಲಿ ನುಡಿದಳು :

" ನಿಂತಿರೋರೆಲ್ಲ ಕೂತ್ಕೊಂಡ್ಬಿಡಿ. ದೋಣಿ ಹೊರಡ್ತದೆ. ಅಹೂರಾ, ರಾಮೆರಿನ ನೋಡ್ಕೊ. ಜೋಪಾನ, ಎಲ್ರೂ ಜೋಪಾನ."

ದಂಡೆಯ ಮೇಲೆ ಗುಂಪು ಕೂಡಿದ್ದವರನ್ನು ಸೀಳಿ ಖ್ನೆಮ್‌ಹೊಟೆಪ್ ಮುಂದೆ ಬಂದು ಸ್ವರವೇರಿಸಿ ಅಂದ :

“ಈಟಿ, ಕಠಾರಿ, ಬಿಲ್ಲುಬಾಣ—ಎಲ್ಲ ಚೆನ್ನಾಗಿವೆ. ಬಟಾ ಅಣ್ಣ, ಹೋಗಿ ಬನ್ನಿ.”

ಬಟಾ ಒಳಗೆ ಬಂದೊಡನೆ, ದೋಣಿಯನ್ನು ದಂಡೆಯಿಂದ ದೂರ ಸರಿಸಿದ್ದರು. ಅದೀಗ ಚಲಿಸತೊಡಗಿತು.

ಬಟಾ ನೆಟ್ಟಗೆ ನಿಂತು, ಬಲತೋಳನ್ನೆತ್ತಿ ದಂಡೆಯ ಕಡೆಗೆ ಚಾಚಿ ಗಟ್ಟಿಯಾಗಿ ನುಡಿದ:

“ಸ್ವರ್ಣದೇವತೆ ಹಾಥೊರ್ ನಿಮ್ಮೆಲ್ಲರ ಮೂಗುಗಳಿಗೆ ಬಲಕೊಡಲಿ! ಹಿರಿಯರಿಗೂ ಎಲ್ಲ ಬಂಧುಗಳಿಗೂ ತಿಳಿಸ್ಬಿಡಿ.” ಮೆನೆಪ್‌ಟಾ ಅಣ್ಣನನ್ನು ಕರಕೊಂಡು ಬೇಗನೆ ವಾಪಸು ಬರ್ತೇವೆ.”

ದಡದಲ್ಲಿದ್ದ ಕೆಲವರು ತಮ್ಮ ಮೂಗುಗಳನ್ನು ಮುಟ್ಟಿ ನೋಡಿ ನಕ್ಕರು. ಖ್ನೆಮ್ ಹೊಟೆಪ್ ಘೋಷ ಆರಂಭಿಸಿದ. ಅವನ ಎಡಬಲಗಳಲ್ಲೂ ಹಿಂಬದಿಯಲ್ಲೂ ನಿಂತಿದ್ದವರೆಲ್ಲ ಅಂದರು:

“ಓ ಮೆನೆಪ್‌ಟಾ! ಓ ಮೆನೆಪ್‌ಟಾ!”

ರಾಮೆರಿಪ್‌ಟಾನನ್ನು ಒಳಗೊಂಡು ದೋಣಿಯಲ್ಲಿದ್ದವರೆಲ್ಲ ಮಾರ್ನುಡಿದರು:

“ಓ ಮೆನೆಪ್‌ಟಾ! ಓ ಮೆನೆಪ್‌ಟಾ!”....

....ನೀರಾನೆ ಪ್ರಾಂತದವರು ಕೇಳಿದ್ದೆಲ್ಲವನ್ನೂ ಕೆಫ್ರು ತಂದಿದ್ದ. ನಾರಗಸೆ ಎಣ್ಣೆ ತೊಗಲಿನ ನಾಲ್ವತ್ತು ಚೀಲಗಳಲ್ಲಿ, ಹುದುಗುಪುಡಿ ಒರಟು ಸೆಣಬಿನ ಐವತ್ತು ಮೂಟೆಗಳಲ್ಲಿ, ಉತ್ತಮ ಪೀಠೋಪಕರಣಗಳ ತಯಾರಿಕೆಗೆ ಬಳಸಲು ಅರವತ್ತು ಮೋಪಾದ ಹಲಗೆಗಳು, ನೂರು ಜನರ ಪಡೆಗೆ ಸಾಲುವಷ್ಟು ಶಸ್ತ್ರಾಸ್ತ್ರಗಳು. ಒಂದು ರಂಧ್ರಗಡಿಯಾರವೂ ಇತ್ತು. ಆತ ಬಯಸಿದ್ದನ್ನು ನೀರಾನೆ ಪ್ರಾಂತದವರು ಸಿದ್ಧಗೊಳಿಸಿದ್ದರು. ಇಪ್ಪತ್ತು ಮರದ ಗಡಿಯಾರಗಳು, ನೂರಾರು ಕೈಗೋಲು, ಊರುಗೋಲು, ನೇಗಿಲುಗಳು, ಐನೂರು ದೇವತಾ ಮೂರ್ತಿಗಳು, ಇಪ್ಪತ್ತು ತೊಗಲಿನ ಚೀಲಗಳಲ್ಲಿ ಜೇನು....ಉಚಿತ ಕಾಣಿಕೆ ಒಂದು ಚೀಲ ಖಿವವ. ಮೌಲ್ಯಮಾಪ ಸಮನಾಗಲಿಲ್ಲ.

“ನೂರುಬಳ್ಳ ಯವೆ ಅಥವಾ ಅರವತ್ತು ಬಳ್ಳ ಗೋಧಿ ಕೊಡಿ,” ಎಂದ ಕೆಫ್ರು.

ಜನ ಸಾಲುಗಟ್ಟಿ ರಾಜಗೃಹಕ್ಕೆ ತೆರಳಿ ಕಣಜದಿಂದ ಅಷ್ಟನ್ನು ತಂದರು. ಇಪ್ಯುವರ್ ನಡೆದ ವ್ಯವಹಾರವನ್ನು ಲಿಪಿಸುರುಳಿಯಲ್ಲಿ ದಾಖಲು ಮಾಡಿದ.

ಸ್ನೊಫ್ರುವೆಂದ :

" ಮುಂದಿನ ಸಲ ಶಸ್ತ್ರಾಸ್ತ್ರಗಳು ಬೇಡ. ಮರದ ದಿಮ್ಮಿಗಳೂ ಹಲಗೆ ಗಳೂ ಬೇಕು. ಎಣ್ಣೆ ಇತ್ಯಾದಿಗಳು ಈ ಸಲದ ಹಾಗೆಯೇ. ಹಾಲುಗಲ್ಲು ನುಣುಪು ಕರಿಶಿಲೆ ಸಿಕ್ಕಿದರೆ ತನ್ನಿ."

" ಕಲ್ಲು ? ಶಿಲೆ ? ಶಿಲ್ಪಿ ಇರುವನಾ ನಿಮ್ಮಲ್ಲಿ ?" ಎಂದು ಕೇಳಿದ ಕೆಫ್ಟು.

" ಹ್ಞ. ಶ್ರೇಷ್ಠ ಶಿಲ್ಪಿ. ಇಲ್ಲಿಗೆ ಹೊಸಬ. ಸೊಬಗನ್ನು ಸೃಷ್ಟಿಸುವ ಮಾಯಾವಿ."

" ಮುಂದಿನ ಸಲ ಬಂದಾಗ ಆತನನ್ನು ಕಾಣ್ಬೇಕು ; ಆತ ಸೃಷ್ಟಿಸಿರುವು ದನ್ನು ನೋಡ್ಬೇಕು. ಕಲ್ಲಿನ ಸಣ್ಣ ತುಂಡುಗಳನ್ನು ತರುವುದು ಸುಲಭ. ಆಳೆತ್ತರದ ಪ್ರತಿಮೆ ಮಾಡೋದಕ್ಕಾದರೆ ಅಂಥ ಕಲ್ಲಿನ ಸಾಗಣೆಗೆ ಪ್ರತ್ಯೇಕ ದೋಣಿ ಬೇಕಾಗ್ತದೆ. ನೋಡೋಣ."

ಸೆನು ಕೆಫ್ಟುವನ್ನು ಕೇಳಿದ :

" ನಿಮಗೆ ಮುಂದಿನ ಬಾರಿ ಏನೇನು ಬೇಕು ?"

" ರಂಧ್ರ ಗಡಿಯಾರ ಮಾಡೋದು ಸಾಧ್ಯವಾದರೆ ಒಂದು ಹತ್ತಿಪ್ಪತ್ತು ಇರಲಿ. ಉಳಿದದ್ದೆಲ್ಲ ಇವತ್ತು ಕೊಟ್ಟಷ್ಟು ಮುಂದಿನ ಸಲವೂ ಬೇಕು. ನೀವು ಹೊಸತು ಏನು ಸೃಷ್ಟಿ ಮಾಡಿದರೂ ಮಾದರಿಗಾಗಿ ಒಂದೊಂದು ನನಗೆ...."

ಮಾತು. ಲೆಕ್ಕಗಳ ವಿವರ. ಎಣ್ಣೆ ತೀರಿದ ಪಂಜುಗಳು ಕೆಲವು ಆರಿದುವು. ('ಹೇಗೂ ಕೆಲಸ ಮುಗಿಯಿತಲ್ಲ.') ನೀಲನದಿಯ ಪೂರ್ವ ದಂಡೆಯ ಆಚೆಗಿಂದ ಚಂದ್ರಬಿಂಬ ಕಾಣಿಸಿತು. ತಕ್ಕಮಟ್ಟಿಗೆ ಪ್ರಕಾಶಮಾನವಾದ ಬೆಳದಿಂಗಳು ಆ ಪ್ರದೇಶವನ್ನು ವ್ಯಾಪಿಸಿತು.

ಖ್ನೆಮ್‌ಹೊಟೆಪ್‌ನ ನಾಯಕತ್ವದಲ್ಲಿ ಕೊಂಡ ಸಾಮಗ್ರಿಗಳೆಲ್ಲ ರಾಜ ಗೃಹ ತಲಪಿದುವು.

ಹಿರಿಯರಿಗೆ ಕೆಫ್ಟು ಅಂದ :

" ನಿಮ್ಮ ಪ್ರಾಂತಕ್ಕೆ ನನ್ನಿಂದ ಒಂದಿಷ್ಟಾದರೂ ಸೇವೆ ಸಲ್ತಿದೆಯಲ್ಲ ಅಂತ ಸಮಾಧಾನ....ದೇವರು ನಿಮಗೆ ಒಳ್ಳೇದು ಮಾಡ್ತಾನೆ....ನನಗೆ ಅಪ್ಪಣೆ ಕೊಡ್ತೀರಾ ? ಅಂಬಿಗರು ಸಿದ್ಧವಾದ ಕೂಡಲೇ ನಾವು ಹೊರಡ್ತೇವೆ."

" ಹ್ಞ ಹ್ಞ," ಎಂದರು ಸೆಮ ಮತ್ತಿತರರು, ಏಳುತ್ತ.

ಕೆಫ್ಟು ಹೇರುನಾವೆಯನ್ನೇರಿ ತನ್ನ ಕೊಠಡಿಯನ್ನು ಸೇರಿದ. ಮನಸ್ಸಿನಲ್ಲೇ ಅಂದಿನ ವ್ಯಾಪಾರದಲ್ಲಿ ಲಾಭ ಎಷ್ಟಾಯಿತೆಂದು ಎಣಿಕೆ ಹಾಕಿದ. ಮೆಂಫಿಸಿನಲ್ಲಿ ಮಹಾರಾಣಿಯ ಎದುರು ಕೇಶಕವಚವನ್ನು ಎತ್ತಿ ಹಿಡಿದು ತಾನು ನಿಂತ ಚಿತ್ರ ಕಣ್ಣಿಗೆ ಕಟ್ಟಿತು.

ಕುಳಿತಲ್ಲಿಯೇ ತೂಕಡಿಕೆ. ಯಾರೋ ರೋದಿಸುವ ಸ್ವರದಲ್ಲಿ " ಓ ಕೆಫ್ಟು ! ಓ ಕೆಫ್ಟು!" ಎಂದಂತಾಯಿತು. ಬೆಚ್ಚಿಬಿದ್ದು ಎಚ್ಚರಗೊಂಡು ಕಿಂಡಿಯಿಂದ ಹೊರ ನೋಡಿದ ಯಾರೂ ಇರಲಿಲ್ಲ. ನಿಶ್ಶಬ್ದಮಿಸುತ್ತಿದ್ದ ಹಿರಿಯರು ಮತ್ತಿತರರ ಮಾತಿನ ಧ್ವನಿ ಕ್ಷೀಣವಾಗಿ ಕೇಳಿಸಿತು.

ಬಿಚ್ಚಿದ ಹಾಯಿಗಳ ಮಡಿಲಲ್ಲಿ ಗಾಳಿ ತುಂಬಿಕೊಂಡಿತು. ಕಟ್ಟೆಯ ಗೂಟಗಳಿಗೆ ಕಟ್ಟಿದ್ದ ದಾರ ಬಿಚ್ಚಿ ನಾವೆಯನ್ನು ಅಂಬಿಗರು ನದಿಯ ಮಧ್ಯಕ್ಕೆ ಸಾಗಿಸಿದರು.

* * * *

ಮೊಸಳೆಪ್ರಾಂತವನ್ನು ದಾಟುತ್ತಿದ್ದಂತೆ ಬಟಾ ತನ್ನ ಅಂಬಿಗರನ್ನು ಕೇಳಿದ :

" ಕೆಫ್ಟು ಈಗ ಹೊರಟಿರಬಹುದು ಅಲ್ಲವಾ ?"

" ಹೊರಟಿರ್‍ಬೇಕು," ಎಂದ ಒಬ್ಬ.

" ಆಗಾಗ್ಗೆ ಹುಟ್ಟು ಕೂಡಾ ಹಾಕ್ತಿರಿ. ಆದಷ್ಟು ಬೇಗನೆ ರಾಜಧಾನಿ ತಲಪೋಣ."

೧೧

ಸೆಡ್ ಉತ್ಸವದ ಹಿಂದಿನ ರಾತ್ರೆ ಅರಮನೆಯ ಸೇವಕ ಗಣಕ್ಕೆ ಅರ್ಧ ನಿದ್ದೆ. ಮುಂಜಾವದಲ್ಲಿ ಪೆರೋ ಪರಿವಾರ ಮಹಾಮಂದಿರಕ್ಕೆ ಹೋಗಬೇಕು, ಧಾರ್ಮಿಕ ವಿಧಿಗಳಿಗಾಗಿ. ಪೂಜಾ ಪರಿಕರಗಳನ್ನು ಜತೆಯಲ್ಲಿ ಒಯ್ಯಬೇಕು. ಪಲ್ಲಕಿಗಳಿಗೆ ಅಲಂಕಾರ. (ಈ ಕೆಲಸದಲ್ಲಿ ನೂರಾರು ಜನ ನಿರತರು.) ಬಳಿಕ ಮೆರವಣಿಗೆ. ಉತ್ಸವದ ಮಧ್ಯಾಹ್ನ ಮಹಾ ಅರ್ಚಕರಿಗೂ ಅಮಾತ್ಯ ಮತ್ತಿತರ ಪ್ರಮುಖ ಆಡಳಿತಗಾರರಿಗೂ ಐಗುಪ್ತದ ನಾನಾ ಕಡೆಗಳಿಂದ ಆಗಮಿಸಿದ್ದ ಪ್ರಾಂತಪಾಲರಿಗೂ ಪ್ರತಿಷ್ಠಿತ ವಣಿಕರೇ ಮೊದಲಾದವರಿಗೂ ಭೂರಿ ಭೋಜನ. (ಅದಕ್ಕಾಗಿ ಸಹಸ್ರಾರು ಜನರ ದುಡಿಮೆ.) ಸಂಜೆ ಅರಮನೆಗೆ ದೀಪಾಲಂಕಾರ. ರಾತ್ರೆ ಅರಮನೆಯ ಆಟದ ಬಯಲಲ್ಲಿ ಕ್ರೀಡೆಗಳು. ಬಳಿಕ ತೆಪ್ಪೋತ್ಸವ. (ಇದಕ್ಕಾಗಿ ಬೇರೆ ಸಾವಿರಾರು ಜನರ ಪರಿಶ್ರಮ....)

ಆ ಗದ್ದಲದ ನಡುವೆ ನಿದ್ದೆ ಎಲ್ಲಿಯದು ? ಬೆಕ್ ಔಟರ ಜತೆ ಮೆನೆಪ್‌ಟಾ ಎಚ್ಚರವಿದ್ದ.

ಮುಂದಿನ ಒಂದು ಹಗಲು ಕಳೆದರಾಯಿತು. ಸೆಡ್ ಉತ್ಸವ ಮುಗಿಯುತ್ತದೆ. ಆ ರಾತ್ರೆಯೇ ಊರಿಗೆ ಹೊರಡಬಹುದು ತಾನು. ಬಟಾ ಇನ್ನೂ ಬರಲಿಲ್ಲವಲ್ಲ. ಅಗತ್ಯಬಿದ್ದರೆ ಆರು ದಿನಗಳ ದೂರವನ್ನು ನಾಲ್ಕೇ ದಿನಗಳಲ್ಲೂ ಆತ ಕ್ರಮಿಸಬಲ್ಲ. ದೋಣಿ ತುಂಬ ಜನರಿದ್ದಾಗ ಮಾತ್ರ ಸ್ವಲ್ಪ ನಿಧಾನವಾಗಬಹುದು. ಅಥವಾ ಈ ಕೆಫ್ಟುವೇ ಸುದ್ದಿ ತಿಳಿಸುವುದನ್ನು ತಡಮಾಡಿದನೊ ? ಹೊಸ ಗಿರಾಕಿ ಕುದುರಿದರೆ ದಾರಿಯಲ್ಲಿ ಅವನು ಒಂದರ್ಧ ದಿನ ನಿಂತರೂ ನಿಂತನೇ. ತನಗೆ ತಿಳಿಸಲೆಂದು ಮೆನ್ನನೊಡನೆ ಕೆಫ್ಟು ಕಳುಹಿಸಿದ ಸಂದೇಶ ಎಷ್ಟರ ಮಟ್ಟಿಗೆ ಪ್ರಾಮಾಣಿಕವಾದದ್ದು? 'ಒಂದು ನಿಮಿಷ ಕೂಡ ಪುರಸೊತ್ತು ಸಿಗಲಿಲ್ಲ. ನಾಯಕರನ್ನು ನೋಡೋದಕ್ಕೆ ಆಗಲಿಲ್ಲ. ಅವರು ನನ್ನನ್ನು ಕ್ಷಮಿಸ್ಬೇಕು....ಈಗಿಂದೀಗ ನೀರಾನೆ ಪ್ರಾಂತಕ್ಕೆ ಹೊರಡ್ತೇವೆ....ಸೆಡ್ ಉತ್ಸವದ ಮುನ್ನಾ ದಿನವೇ ಅವರ ಸಂಗಡಿಗರೆಲ್ಲ ಇಲ್ಲಿಗೆ ಬರೋ ಹಾಗೆ

ಮಾಡ್ತೀವೆ.' ಸಂಗಡಿಗರು ಬಂದು ತಲಪಿಲ್ಲ ಎಂದು, ಅವನ ಮಾತಿನ ಬಗೆಗೆ ಈಗ ಶಂಕೆ. ಬೆಳಗಾಗುವುದರೊಳಗೆ ಬಟಾ ಬಂದೇ ಬಿಟ್ಟರೆ ?....'ನಾಯಕರು ನಿಶ್ಚಿಂತೆಯಾಗಿರ್ರಿ ಎಲ್ಲ ಸರಿಹೋಗ್ತದೆ,' ಎಂದೂ ಹೇಳಿದ್ದ ಕೆಫ್ಟ. ಸಂತೈಸುವ ನುಡಿ ? ಭೇಟಿಯಾಗದೆ ಇರಲು ಬೇರೇನಾದರೂ ಕಾರಣ ?

ತನ್ನ ಮೇಲಿನ ಕಾವಲು ಬಿಗಿಯಾದುದನ್ನು ಅರಿತಾಗ ಮೆನೆಸ್ ಟಾ, ಬಾಹ್ಯವಾಗಿ ತೋರ್ಪಡಿಸದೆ ಇದ್ದರೂ, ಒಳಗೆ ತುಸು ಕಾತರಗೊಂಡಿದ್ದ. ಆದರೆ ಸ್ವಲ್ಪ ಹೊತ್ತಿನಲ್ಲೇ ದುಗುಡವನ್ನು ಬದಿಗೆ ತಳ್ಳಿ, ಋಜುಮಾರ್ಗ ಅವಲಂಬಿಗಳಿಗೆ ಯಾತರ ಭಯ ?—ಎಂದು ತನ್ನನ್ನು ತಾನೇ ಸಂತೈಸಿದ.

ಔಟ ಮತ್ತು ಬೆಕ್ ತಲೆವಾಗಿಲಲ್ಲಿ ನಿಂತು, ಕಲರವಕ್ಕೆ ಕಿವಿಗೊಡುತ್ತ, ಜನರ ಓಡಾಟವನ್ನು ದಿಟ್ಟಿಸುತ್ತಲಿದ್ದರು. ಹೊರಗಿನಿಂದ ಒಬ್ಬ ಇತ್ತ ಬರು ತ್ತಿದ್ದಾನೆ. ಯಾರು ? ಸೆನೆಬ್ ? ಈ ಹೊತ್ತಿನಲ್ಲಿ ಮರಳುಗಾಡಿನ ಏಕಾಕಿ ಗಳಿಗೆ ಸೆತ್ ಸಾನ್ನಿಧ್ಯವೂ ಅಪೇಕ್ಷಣೀಯ....

ಒಳಬಂದು ನಿತ್ಯದ ನಗೆ ಬೀರಿ ಸೆನೆಬ್ ಅಂದ :

' ಇಲ್ಲಿ ಬೆಳಕು ನೋಡ್ದೆ. ಬಂದೆ. ನಾಯಕರಿನ್ನೂ ನಿದ್ರಿಸಿಲ್ಲ........'

ಏನಾದರೂ ಹೇಳಬೇಕು ಮೆನೆಸ್ ಟಾ.

" ಸೆಡ್ ಉತ್ಸವದ ತಯಾರಿಯ ಸಂಭ್ರಮ. ಮಹಾಪ್ರಭುವೂ ಎಚ್ಚರ ವಾಗಿಯೇ ಇದ್ದಾರೆ ಅಂತ ತೋರ್ತದೆ."

" ಇಲ್ಲ. ಮಲಗಿ ಸ್ವಲ್ಪ ಹೊತ್ತಾಯ್ತು. ಅವರು ಮುಂಜಾವ ಬೇಗನೆ ಏಳಬೇಕಲ್ಲ....ರಾ ಉದಿಸುವುದಕ್ಕೆ ಮುಂಚೆ ಇಲ್ಲಿಂದ ಹೊರಟು ಬಿಸಿಲೇರುವ ಹೊತ್ತಿಗೆ ಮರಳಿ ಬರ್ತಾರೆ."

" ಈಗ ಮಧ್ಯರಾತ್ರಿ ಇರಬಹುದು, ಅಲ್ಲವಾ ?"

" ಮಧ್ಯರಾತ್ರಿ ದಾಟಿದೆ. ಸೆಡ್ ಉತ್ಸವದ ಸ್ಮರಣಾರ್ಥ ಬಂದಿಗಳನ್ನು ಬಿಡ್ತಾರೆ. ಅದಕ್ಕೋಂತ ಕಾರಾಗೃಹದ ಅಧಿಕಾರಿ ಆಚೆಗೆ ಹೋದ. ನಾನು ಈಚೆಗೆ ಬಂದೆ. ಅಗೋ ಬಂದ್ರು ! "

ಇದ್ದಕ್ಕಿದ್ದಂತೆ ಗದ್ದಲ ಕೇಕೆ ನಗು. ನಡುಬಟ್ಟೆಯ ಹೊರತು ಬರಿಮೈ. ಕಿರಿಯರು ಯುವಕರು ಮಧ್ಯವಯಸ್ಕರು ವೃದ್ಧರು. ನೀಳ ಗಡ್ಡ ಕೇಶ ಕೆಲವರಿಗೆ. ಬಡಕಲು ಜೀವಗಳು. ಕೆಲವರು " ನಾವು ಹೋಗೋದಿಲ್ಲ. ಇಲ್ಲಿಯೇ

ಇರ್ತೀವೆ," ಎನ್ನುತ್ತಿದ್ದರು. ಕಾವಲು ಭಟರ ಈಟಿಗಳು ಅಂಥವರನ್ನು ತಿವಿದು ಮುಂದಕ್ಕೆ ಅಟ್ಟುತ್ತಿದ್ದುವು. ಅರಮನೆಯ ಸೇವಕರು ಕೈಯಲ್ಲಿದ್ದ ಕೆಲಸವನ್ನು ಬಿಟ್ಟು, ವಿಮುಕ್ತ ಸೆರೆಯಾಳುಗಳನ್ನು ಹೊರಕ್ಕೆ ಕಳುಹುವ ಕಾರ್ಯಾಚರಣೆಗೆ ಪ್ರೇಕ್ಷಕರಾಗಿದ್ದರು. ಬಂದಿಗಳ ನಡುವೆ ಒಬ್ಬ ದೈತ್ಯಕಾಯನಿದ್ದ. ಸಂಜು ಬೆಳಕನ್ನು ಸಮಿಾಪಿಸಿದಾಗ ಆವನ ಮುಖ ಭೀಕರವಾಗಿ ಕಂಡಿತು.

ಸೆನೆಬ್ ನುಡಿದ :

" ಜಜ್‌ಮಂಖ್. ಗೋರಿ ದರೋಡೆಗಾರ. ಐದು ವರ್ಷ ಹಿಂದೆ, ನಮ್ಮ ಮಹಾಪ್ರಭುವಿನ ತಾತನ ಗೋರಿಯನ್ನು ಲೂಟಿ ಮಾಡ್ತಿದ್ದಾಗ ಸಿಕ್ಕಿ ಬಿದ್ದವನು. ಮರಣ ದಂಡನೆಗೆ ಗುರಿಯಾಗಬೇಕಿತ್ತು. ಅದೃಷ್ಟಶಾಲಿ. ಕಾರಾಗೃಹಕ್ಕೆ ಬಂದ. ಭಲೇ ಅದೃಷ್ಟಶಾಲಿ. ತನ್ನ ಕಸುಬಿಗೆ ಈಗ ವಾಪಸಾಗ್ತಿದ್ದಾನೆ."

" ಸೆಡ್ ಉತ್ಸವ ಹಿಂದಿನ ಪದ್ಧತಿಯಂತೆ ಮೂವತ್ತುವರ್ಷಕ್ಕೊಮ್ಮೆಯೇ ನಡೀತಿದ್ರೆ ಜಜ್‌ಮಂಖ್ ಇನ್ನೂ ಹತ್ತು ವರ್ಷ ಕಾಯಬೇಕಾಗ್ತಿತ್ತು."

" ಹಹ್ಹ! ನೀರಾನೆ ಪ್ರಾಂತದ ನಾಯಕರು—ನೀವು—ಸೆಡ್‌ಉತ್ಸವಕ್ಕೇಂತ ರಾಜಧಾನಿಗೆ ಈಗ ಬರ್ತಲೂ ಇರಲಿಲ್ಲ !"

ಜನ "ಜಜ್‌ಮಂಖ್ ! ಜಜ್‌ಮಂಖ್ !" ಎಂದು ಕೂಗುತ್ತಿದ್ದರು. "ಮಾತನಾಡು" ಎನ್ನುತ್ತಿದ್ದರು.

ಆತ ಸಿಟ್ಟಾಗಿ ಸಿಂಹದಂತೆ ಗರ್ಜಿಸುತ್ತಿದ್ದ. ತನ್ನನ್ನು ಮುಟ್ಟಲು ಬಂದವರನ್ನು ತೋಳುಬೀಸಿ ಚೆದರಿಸುತ್ತಿದ್ದ. " ಹೊಹ್ಹೊಹ್ಹೊ" ಎಂದು ಜನ ಬಿದ್ದು ಬಿದ್ದು ನಗುತ್ತಿದ್ದರು.

ಇದ್ದಕ್ಕಿದ್ದಂತೆ ಸದ್ದಡಗಿತು. ಛಟಲ್ ಛಟಲೆಂದುವು ಭಟರ ಚಾವಟಿಗಳು. "ಅಯ್ಯೋ ! ಅಯ್ಯೋ !" ಎಂದರು ಏಟು ತಗಲಿದವರು. ಅರಮನೆ ಕಾವಲುಗಾರರ ದಳಪತಿ ಎತ್ತರದ ಧ್ವನಿಯಲ್ಲಿ ಗದರಿದ :

" ಇದೇನು ಸಂತೆ ಅಂದ್ಕೊಂಡ್ರಾ ? ಪೆರೋ ಮಲಗಿದ್ದಾರೆ. ಬುದ್ಧಿ ಇಲ್ಲ ನಿಮಗೆ ? ಹೊರಡಿ ಇಲ್ಲಿಂದ ! ನಡೀರಿ ಕೆಲಸಕ್ಕೆ ! "

ಮತ್ತೆ ಏಟುಗಳು—ಅರಮನೆ ಸೇವಕರಿಗೆ, ವಿಮುಕ್ತ ಕೈದಿಗಳಿಗೆ. ಚುರುಕು ಮುಟ್ಟಿಸಿಕೊಂಡವರು ಬಾಯಿಗಳಿಗೆ ಅಂಗೈ ಅಡ್ಡ ಹಿಡಿದರು, ಚೀತ್ಕಾರ

ಕೇಳಿಸಬಾರದೆಂದು. ಸೇವಕರ ಗುಂಪು ಹಿಮ್ಮೆಟ್ಟಿತು. ಬಿಡುಗಡೆ ಹೊಂದಿದವರು ಪ್ರಾಕಾರದ ಮಗ್ಗಲು ಬಾಗಿಲಿನೆಡೆಯಿಂದ ಬೀದಿಗೆ ಇಳಿದರು.

ಮೆನೆಪ್‌ಟಾ, ಸೆನೆಬ್ ಇಬ್ಬರೂ ಮಾತಿಲ್ಲದೆ ಕೆಲವು ಕ್ಷಣ ಕಳೆದರು.

ಬಳಿಕ ಅಮಾತ್ಯರ ಹಿರಿಯ ಲಿಪಿಕಾರ ಅಂದ :

"ಸೆಡ್ ಉತ್ಸವ ಅಂದರೆ ಖೊನ್ಸುಗೆ ತಲೆನೋವು."

"ಖೊನ್ಸು ? ಪ್ರವಾಸಿಗಳ ಅಧಿಕಾರಿ ?"

"ಹೌದು. ನೀವು ಮರೆತಿಲ್ಲ ! ಅವನಿಗೂ ಅಷ್ಟೆ, ಸಾರಿಗೆ ಅಧಿಕಾರಿಗೂ ಅಷ್ಟೆ. ನೀವು ಇಲ್ಲೇ ಇದ್ದೀರಿ. ನಿಮಗೆ ತಿಳೀತಾ ಇಲ್ಲ. ಹೊರಗೆ ಗದ್ದಲವೋ ಗದ್ದಲ. ಮಹಾ ಅರ್ಚಕರು ಬಂದು ಸೆಡ್ ಉತ್ಸವಕ್ಕೆ ದಿನ ಗೊತ್ತು ಮಾಡಿದ್ದೇ ತಡ, ದಂಡೆ ಪ್ರಾಂತಗಳಿಗೂ ಒಳನಾಡಿಗೂ ಬಾಣದ ವೇಗದಲ್ಲಿ ಸುದ್ದಿ ಹಬ್ಬಿ, ಹಿಂಡುಗಟ್ಟಲೆ ಜನ ಬಂದೇ ಬಿಟ್ಟಿದ್ದಾರೆ. ನದಿ ತುಂಬ ದೋಣಿಗಳು, ಬೀದಿ ತುಂಬ ಕತ್ತೆಗಳು. ನಿಮ್ಮೂರಿನಂಥ ದೂರ ಸ್ಥಳಗಳಿಗೆ ಮಾತ್ರ ಸುದ್ದಿ ತಡವಾಗಿ ಮುಟ್ಟಿದೆ...."

"ಇಷ್ಟು ದಿನ ಕಾದದ್ದು ವ್ಯರ್ಥವಾಗಲಿಲ್ಲ. ಸೆಡ್‌ಉತ್ಸವ ನೋಡೋ ಅವಕಾಶ ಸಿಗ್ತು."

"ನಿಮ್ಮ ದೋಣಿಕಾರ ಬಟಾ ನತದೃಷ್ಟ."

ಮೆನೆಪ್‌ಟಾ ಸುಮ್ಮನಿದ್ದ. ಹೊರಡುವುದಕ್ಕೆ ಮುನ್ನ ಸೆನೆಬ್ ಮಾತಿನ ಎಳೆಯನ್ನು ಮತ್ತಷ್ಟು ಜಗ್ಗಿದ.

"ನೀವು ಎಷ್ಟು ಹೊತ್ತಿಗೆ ಸಿದ್ಧರಾಗಬೇಕು ಏನು ಅಂತ ಅಮಾತ್ಯರು ನನಗೆ ಹೇಳಿಲ್ಲ. ಪಲ್ಲಕಿ ಏರ್ಪಾಟಿಗೂ ಆಜ್ಞೆ ನೀಡಿಲ್ಲ. ಸ್ವಲ್ಪ ತಡವಾಗಿ ಕರೆದುಕೊಂಡು ಹೋಗ್ತಾರೇಂತ ತೋರ್‍ತದೆ. ನೀವಿನ್ನು ನಿದ್ದೆ ಮಾಡಿ. ನಾನು ಈ ರಾತ್ರೆ ಇಲ್ಲಿಯೇ ಇರಬೇಕಾಗ್ತದೆ. ಉಗ್ರಾಣದ ಪಡಸಾಲೆಯಲ್ಲಿ ಸ್ವಲ್ಪ ಹೊತ್ತು ಮಲಕೊಳ್ತೇನೆ."

"ಆಗಲಿ," ಎಂದ ಮೆನೆಪ್‌ಟಾ.

ಸೆನೆಬ್ ನಿರ್ಗಮಿಸಿದ. "ನೀವು ಮಲಕೊಳ್ಳಿ. ನಾವು ಎಚ್ಚರವಿರ್‍ತೇವೆ," ಎಂದ ಔಟ.

"ಅಂಥದ್ದೇನು ? ಸರದಿಯಲ್ಲಿ ಒಂದಿಷ್ಟು ನಿದ್ದೆ ಮಾಡೋಣ," ಎಂದ ನಾಯಕ.

ತಾನು ಪವಡಿಸಿದ. ನಿದ್ದೆ ಮಾತ್ರ ಬರಲಿಲ್ಲ. ಯೋಚನೆಗಳು ಮೇಳೈಸಿ ಲಗ್ಗೆ ಇಟ್ಟುವು. ಔಟ ತಲೆವಾಗಿಲಿನ ಪಂಜಿಗೆ ಎಣ್ಣೆ ಎರೆದು ಹೊಸ್ತಿಲ ಬಳಿ ಕುಳಿತ. ಬೆಕ್ ತೋಳದಿಂಬಿಗೆ ತಲೆ ಸೋಂಕಿಸಿ ನಿದ್ರಾವಶನಾದ.

ಪ್ರಶ್ನಾವಳಿಯನ್ನು ಇದಿರಿಸಿದಂತೆ ಮೆನೆಪ್‌ಟಾನ ಮೆದುಳು ತಪ್ತವಾಯಿತು. ಪೆರೋ ಧಾರ್ಮಿಕ ವಿಧಿಗಳಿಗಾಗಿ ಮಹಾ ಮಂದಿರಕ್ಕೆ ಹೊರಟಾಗ ತಾನು ? ಪ್ರಾಂತಪಾಲರೆಲ್ಲ ಅಲ್ಲಿಗೆ ಹೋಗುವುದು ಖಂಡಿತ. ಪ್ರಾಂತಪಾಲನಲ್ಲದ ತಾನು ? ಬಂಡಾಯಗಾರನಾದರೂ ಅತಿಥಿ ಅಲ್ಲವೆ ? ಉತ್ಸವದಲ್ಲಿ ತನ್ನ ಸ್ಥಾನ ಯಾವುದು ? ಉಸಿರು ಕಟ್ಟುತ್ತಿದೆಯಲ್ಲ.... ಜಜ್‌ಮಂಖ್ ಮುಕ್ತನಾದ; ತನ್ನ ಮುಕ್ತಿ ? ತನ್ನ ಜನರನ್ನು ಬಿಟ್ಟು ಇಲ್ಲಿಗೆ ಹೀಗೆ ಬರಬಾರದಾಗಿತ್ತು....ಈಗ....ಈಗ....ಬೆಕ್ ಮೂಲಕ ಮೆನ್ನ ಹೇಳಿ ಕಳುಹಿದ್ದ : 'ಊರ ಹೊರಗೆ ದಂಡೆಯ ಮೇಲಿರ್‍ತೀನೆ, ಬಟಾನ ದಾರಿ ನೋಡ್ತೇನೆ.' ಈ ಗದ್ದಲದಲ್ಲಿ ಮೆನ್ನ ಅದೃಶ್ಯನಾದರೂ ದೇವಮಂದಿರದವರು ತಲೆಕೆಡಿಸಿಕೊಳ್ಳಲಾರರು. ಆದರೆ ಬಟಾ ಅವನಿಗೆ ಸಿಗದೆ ಹೋದರೆ ? ಬಟಾ ಬಾರದೆ ಹೋದರೆ? ಏನಾದರೂ ಅಪಘಾತ ? ಓ ಆಮನ್ ! ಹಾಗಾಗುವುದು ಸಾಧ್ಯವೆ ? ಸಾಧ್ಯವೆ ?....

ಮೆನೆಪ್‌ಟಾ ನರಳಿದ; ಮಗ್ಗುಲು ಹೊರಳಿದ. ಮತ್ತೆ ಅನೇ ಯೋಚಗಳು. ಅವೇ.

ನೀಲನದಿಯ ಹಾಗೆ ಕಾಲ. ಹೀಗೆಯೇ ಇರುತ್ತದೆ. ಸದಾ ಹೀಗೆಯೇ.

ಎಲ್ಲಿಯೋ ಒಂದು ದೋಣಿಕಟ್ಟೆ. ಆಗ ಒಂದಷ್ಟು ಕಲರವ.

"ಔಟ, ಇನ್ನು ನೀನು ಮಲಕೋ."

ಅದು ಬೆಕ್‌ನ ಧ್ವನಿ. ಔಟ ಹೇಳುತ್ತಿದ್ದಾನೆ :

"ಹೂಂ. ಅರಮನೆ ಆವರಣದಲ್ಲೂ ಶಬ್ದ ಕಡಿಮೆಯಾಗಿದೆ. ಮಲಗಿದ್ದಾರೇಂತ ತೋರ್‍ತದೆ."

ತಾನು ಏಳಬೇಕೆ? ಈ ಬಂಧುಗಳೊಡನೆ ಮಾತನಾಡಬೇಕೆ? ತಮ್ಮ ನಾಯಕ ನಿದ್ದೆಹೋಗಿದ್ದಾನೇಂತ ಇವರು ಭಾವಿಸಿದ್ದಾರೆ....

"ಅಮುನ್. ಅಮುನ್."

ಔಟ ದೇವರನ್ನು ಸ್ಮರಿಸುತ್ತಿದ್ದಾನೆ....

ಈ ರಾತ್ರಿ ಗಾಳಿ ನಿಶ್ಚಲವಾಗಿದೆ.

....ಊಹೂಂ. ಬೇಗೆಯ ನಡುವೆ ತಣುಪಿನ ಸುಖಕರ ಅನುಭವ. ಮಲಗಿದ್ದವರ ಎಚ್ಚತ್ತವರ ಎಡೆಯಿಂದ ನುಸುಳಿ ಗಾಳಿ ಒಳಕ್ಕೆ ಬಂದಿದೆ. ಕಣ್ಣೆವೆಗಳನ್ನು ಮುದ್ದಿಡುತ್ತಿದೆ. ಅಹಾ! ಇದು ನೆಫಿಸ್ ಸ್ಪರ್ಶ. ಈ ಆಲಿಂಗನದಲ್ಲೇ ನಿದ್ರೆ........ಅಂಗಾಂಗಗಳನ್ನು ವ್ಯಾಪಿಸುವ ಚೇತೋಹಾರಿ ನಿದ್ರೆ........

........................

...."ಯಾರು ಅದು? ಯಾರು? ನಿಲ್ಲಿ!"

ಗದರಿ ನುಡಿದವನು ಬೆಕ್. ಕಾತರ. ರೋಷ.

ಔಟ ಗಡಬಡಿಸಿ ಎದ್ದ, "ಯಾರು? ಯಾರು?" ಎಂದು ಕೂಗುತ್ತ.

ತೆರೆದ ಕಣ್ಣೆವೆಗಳು, ಮೆನೆಪ್‌ಟಾ ತಟಕ್ಕನೆ ಎದ್ದು ಕುಳಿತ, ನಿಂತ, "ಏನು? ಏನು?" ಎನ್ನುತ್ತ.

ಉತ್ತರದ ಮಾತಿಲ್ಲ. ಪಂಜು ಬೆಳಕಿನಲ್ಲಿ ಈಟಿಗಳು ಹೊಳೆದುವು.

ಭಟರು ಬೆಕ್‌ನನ್ನು ಸುತ್ತುವರಿದರು. ಆತ ಕೂಗಾಡಿದ: "ಎಚ್ಚರ! ಮುಟ್ಬೇಡಿ!"

"ನಿಲ್ಲಿ, ನಿಲ್ಲಿ!" ಎನ್ನುತ್ತ ಮುನ್ನುಗ್ಗಿದ ಔಟನನ್ನು, ಯೋಧರು ಹಲವರು ಹಿಡಿದರು

ಮೆನೆಪ್‌ಟಾನ ಗುಂಡಿಗೆ ಬಡಿತ ತೀವ್ರಗೊಂಡಿತು. ('ಬಂತೆ, ಬರಲಾರದು ಎಂದು ತಾನು ಭಾವಿಸಿದ್ದ ಆ ಕ್ಷಣ?') ಆದರೂ ನಿರ್ವಿಕಾರ ಸ್ವರದಲ್ಲಿ ಅವನೆಂದ:

"ಯಾರು ನೀವು? ನಿಮಗೇನು ಬೇಕು?"

"ಹಿಡೀರಿ!"

ಆಜ್ಞೆ. ಅವನು ಅರಮನೆ ಕಾವಲು ಪಡೆಯ ದಳಪತಿ. ಯೋಧರು

ಅವನತ್ತ ಸರಿದಾಗ ಔಟ ಬೆಕ್ ಬಿಡಿಸಿಕೊಳ್ಳಲು ಚಡಪಡಿಸುತ್ತಿದ್ದರು. "ಮುಟ್ಬೇಡಿ! ಮುಟ್ಬೇಡಿ!" ಎಂದು ಕೂಗಾಡಿದರು. ಅವರ ಕೈಗಳನ್ನು ಬೆನ್ನ ಹಿಂದೆ ಹಗ್ಗದಿಂದ ಬಿಗಿದು, ಈಟಿ ಮೊನೆಗಳಿಂದ ಬೆನ್ನು ತೋಳುಗಳನ್ನು ಚುಚ್ಚಿದರು ಭಟರು.

ಔಟ, ಬೆಕ್ ಕೂಗು ನಿಲ್ಲಿಸಲಿಲ್ಲ.

"ಜೋಕೆ! ನಾಯಕರ ಮೈ ಮುಟ್ಟಿದರೆ ಜೋಕೆ!"

ಮೆನೆಪ್‌ಟಾ ತನ್ನವರನ್ನು ಉದ್ದೇಶಿಸಿ ಅಂದ:

"ಔಟ, ಬೆಕ್, ಸುಮ್ನಿರಿ."

ಭಟರು ನಾಯಕನನ್ನು ಸುತ್ತುವರಿದು ನಿಂತರು.

"ಏನಿದು? ಬಂಧನವೇ?"

ದಳಪತಿ ಕರ್ಕಶ ಗಂಟಲಲ್ಲಿ ಗದರಿದ:

"ಹ್ಞ! ರಾಜಾಜ್ಞೆ!"

"ಸಿದ್ಧವಾಗಿದ್ದೇನೆ. ಕರಕೊಂಡು ಹೋಗಬಹುದು."

"ಹೊರಡಿ!"

ಭಟರು ಔಟ ಬೆಕ್‌ರನ್ನು ತಳ್ಳುತ್ತ ಅಂಗಳಕ್ಕಿಳಿದು, ಅಲ್ಲಿದ್ದ ಯೋಧರ ದೊಡ್ಡಗುಂಪನ್ನು ಸೇರಿದರು. ದಳಪತಿಯನ್ನು ಹಿಂಬಾಲಿಸಿ ಬಂದರು, ಮೆನೆಪ್‌ಟಾ ಮತ್ತು ಅವನನ್ನು ಸುತ್ತುವರಿದಿದ್ದವರು.

"ತಪ್ಪಿಸ್ಕೊಂಡಾರು, ಎಚ್ಚರ!" ಎಂದ ದಳಪತಿ, ಗಟ್ಟಿಯಾಗಿ.

ಅದು ಸಾಲದೆಂದು, "ತಪ್ಪಿಸಿಕೊಂಡರೆ ನಮ್ಮನ್ನು ಹಿಡಿದು ಹಾಕ್ತಾರೆ!" ಎಂದೂ ಗದರಿದ.

ತನ್ನ ಧ್ವನಿಗೆ ತಾನೇ ಮೆಚ್ಚಿ, ಹೆಚ್ಚು ಹೆಚ್ಚು ಧೈರ್ಯ ತಳೆಯುತ್ತ, ಆತ ಆಜ್ಞಾಪಿಸಿದ:

"ನಡೀರಿ ಕಾರಾಗೃಹಕ್ಕೆ!"

ಬಟಾ ಹಿಂದೆ ಅಂದಿದ್ದ: 'ಅತಿಥಿ ಗೃಹದ ಹತ್ತಿರದಲ್ಲೇ ಇದೆ ಕಾರಾಗೃಹ.' ಮೆನೆಪ್‌ಟಾಗೆ ಆ ದಿಕ್ಕು ಗೊತ್ತಿತ್ತು. ಈಗ ಅದರಲ್ಲಿ ವಾಸಿಸುವ ಅವಕಾಶ.

ಚಂದ್ರನ ಮಂದಪ್ರಕಾಶ ಪಂಜುಗಳೊಡನೆ ಸೆಣಸತೊಡಗಿತ್ತು. ಕಟ್ಟಡ ಗಳ ನೀಳ ನೆರಳುಗಳಿಂದ ಆವೃತ್ತವಾಗಿತ್ತು ಪರಿಸರ. ಕಾರಾಗೃಹದ ಅಧಿಕಾರಿ ಅಲ್ಲಿ ನಿಂತಿದ್ದ. ಇಬ್ಬರು ಭಟರು ಪಂಜುಗಳನ್ನು ತಂದರು. ಅವರಲ್ಲಿ ಒಬ್ಬ ನನ್ನು, ಔಟ ಬೆಕ್‌ರನ್ನು ಹಿಡಿದುಕೊಂಡಿದ್ದವರು ಹಿಂಬಾಲಿಸಿದರು. (ಮೆನೆಪ್ ಟಾನಿಗೆ ಅನಿಸಿತು: 'ನಮ್ಮನ್ನು ಬೇರ್ಪಡಿಸುತ್ತಿದ್ದಾರೆ. ಅಲ್ಲಿರುವ ಕಲ್ಲಿನ ಕಟ್ಟಡದೊಳಕ್ಕೆ ಔಟ-ಬೆಕ್‌ರನ್ನು ತಳ್ಳುತ್ತಾರೆ.') ಇನ್ನೊಂದು ಪಂಜು ದಳ ಪತಿಗೂ ನಾಯಕನನ್ನು ಸುತ್ತುವರಿದಿದ್ದ ಯೋಧರ ಗುಂಪಿಗೂ ದಾರಿ ತೋರಿತು. ಆ ಕಟ್ಟಡದ ಇನ್ನೊಂದು ಪಾರ್ಶ್ವದಲ್ಲೊಂದು ಬಾಗಿಲು. ('ಕಾವಲುಗಾರರಿಲ್ಲ ವಲ್ಲ ?....ಎಲ್ಲ ಬಂದಿಗಳೂ ಮುಕ್ತರಾಗಿರುವ ರಾತ್ರಿ. ಇದು ಬರಿದಾದ ಸೆರೆ ಮನೆ........') ಒಂದು ಮೊಳ ದಪ್ಪ. ನಾಲ್ಕಾರು ಜನ ಬಲ ಪ್ರಯೋಗಿಸಿ ದರು. ಬಾಗಿಲು ಒಬ್ಬನನ್ನು ಒಳಕ್ಕೆ ಬಿಡುವಷ್ಟು ತೆರೆದುಕೊಂಡಿತು. ಮುಂದೆ ಹೋದ ಪಂಜಿನ ಬೆಳಕು ಮೆಟ್ಟಲುಗಳನ್ನು ತೋರಿಸಿತು. ಕೆಳಕ್ಕೆ ('ಇದು ಗೋರಿಯಂತಿದೆ........ಶಾಶ್ವತ ಮನೆಗೂ ಸೆರೆಮನೆಗೂ ಏನು ವ್ಯತ್ಯಾಸ ?') ಇಳಿಯತೊಡಗಿದರು. ಪಂಜು ಮುಂದೆ ಹೋದಷ್ಟೂ ಮೆಟ್ಟಲು ಗಳು. ಎಡಕ್ಕೆ-ಬಲಕ್ಕೆ, ನಿಂತರು. ಮತ್ತೊಂದು ಬಾಗಿಲು. ಪುನಃ ಅವ ರೋಹಣ. ಮತ್ತೂ ಒಂದು ಬಾಗಿಲು.

ಅದು ತುಸು ತೆರೆದುಕೊಂಡಾಗ ದಳಪತಿ ಬದಿಗೆ ಸರಿದ. ಯಾರೋ ಮೆನೆಪ್‌ಟಾನನ್ನು ಹಿಂದಿನಿಂದ ತಳ್ಳಿದರು. ಅವನು ಮುಂದಕ್ಕೆ ಮುಗ್ಗರಿಸಿದ. ಬಾಗಿಲು ಮುಚ್ಚಿದ ಸದ್ದು. ಕತ್ತಲು. ಮೆಟ್ಟಲುಗಳನ್ನೇರಿ ನಿರ್ಗಮಿಸಿದ ಪದ ಹತಿಯ ಸಪ್ಪಳ ಕ್ಷೀಣವಾಯಿತು. ('ಬಾಗಿಲು ಮುಚ್ಚಿದಂತಾಯಿತಲ್ಲ ? ಮೇಲ್ಗಡೆ ಇನ್ನೂ ಒಂದಿದೆ. ಅದಾದ ಮೇಲೆ ಒಂದಿಷ್ಟು ಬೆಳದಿಂಗಳು....')

ಮೆನೆಪ್‌ಟಾ ಹಿಂದಕ್ಕೆ ಹೊರಳಿ ಬಾಗಿಲನ್ನು ಮುಟ್ಟಿದ. ಪಕ್ಕಕ್ಕೆ ಸರಿದು ಕೈ ಚಾಚಿದಾಗ ಕಲ್ಲಿನ ತಣುಪು ಸ್ಪರ್ಶ.

ಬಹಳ ಹೊತ್ತು ನಾಯಕ ನಿಂತಲ್ಲಿಯೇ ನಿಂತ. ನಿಶ್ಶಬ್ದ. ಬಲುಮಟ್ಟಿಗೆ ಸ್ತಬ್ಧ ಗಾಳಿ. ('ಒಂದೆರಡು ತೂತು ಎಲ್ಲಾದರೂ ಇವೆಯೇನೋ') ಇಷ್ಟವಲ್ಲದ ವಾಸನೆ. ತನ್ನ ಧ್ವನಿ ತನಗೆ ಹೇಗೆ ಕೇಳಿಸುವುದೊ ಇಲ್ಲಿ ? ("ಬಟಾ") ಗುಂಯ್‌ಗುಡುವ ಪ್ರತಿಧ್ವನಿ, ("ನೆಫಿಸ್" "ರಾಮೆರಿ") ಗುಂಯ್ ಗುಂಯ್....

ಮೆನೆಪ್‌ಟಾ ಗೋಡೆಗೆ ಒರಗಿದ. ಹಾಗೆಯೇ ಕೆಳಕ್ಕೆ ಜಾರಿದ ; ಒರಗಿ ಕುಳಿತ.

ಮುಗುಳುನಗೆ. ಧ್ವನಿಸಡೆಯದ ಮಾತಿಗೆ ಮುನ್ನ. 'ಯಾವುದು ಆಗ ಲಾರದು. ಅಂದ್ಕೊಂಡಿದ್ದೆವೊ ಅದು ಆಗಿಯೇ ಬಿಟ್ತು, ಬಟಾ....'

ಯೋಚನೆ. ಔಟ ಬೆಕ್ ತನ್ನ ರಕ್ಷಣೆಗೆಂದು ನಿಯೋಜಿತರಾದವರು. ಕೆಲಸ ತಮ್ಮಿಂದ ಆಗಲಿಲ್ಲ ಎಂದು ಅವರು ವ್ಯಥಿತರಾಗಿರಬಹುದು. ಸಮಾಧಾನ ಹೇಳಬೇಕು. ಪಕ್ಕದ ಕೊಠಡಿಯಾಗಿದ್ದರೆ ಮಾತು ಕೇಳಿಸುತ್ತಿತ್ತೇನೋ. ಹೆಸರು ಹಿಡಿದು ಕೂಗಲೆ ಗಟ್ಟಿಯಾಗಿ ? "ಔಟ ! ಬೆಕ್ !" ಗುಂಯ್‌ಗುಡುವ ಪ್ರತಿಧ್ವನಿ. ಕೇಳಿಸಿದರೆ ಅವರಿಂದ ಮಾರ್ನುಡಿ ಬರಬೇಕು. ಊಹೂಂ. ಇದು ನೆಲಮಾಳಿಗೆ ಕೊಠಡಿ. ಸದ್ದು ಹೊರಹೋಗುವುದಿಲ್ಲ. ಅಲ್ಲಿಂದ ಸದ್ದು ಒಳ ಬರುವುದಿಲ್ಲ.

* * * *

ಔಟ ಬೆಕ್‌ರನ್ನು ಪೆಟಾರಿಯಾಕಾರದ ವಿಶಾಲ ಕಟ್ಟಡದೊಳಕ್ಕೆ ತಳ್ಳಿದ್ದರು. ವಿಮುಕ್ತರಾದ ನೂರ ಎಂಬತ್ತೆಂಟು ಜನ ಅಲ್ಲಿ ಇದ್ದವರು, ಒಟ್ಟಿಗೆ. ಛಾವಣಿಯೂ ಕಲ್ಲಿನದೇ. ಅದರಲ್ಲಿ ಅನೇಕ ಸಣ್ಣ ರಂಧ್ರಗಳಿದ್ದುವು. ಚಂದ್ರನ ಮಬ್ಬು ಬೆಳಕು ಆ ತೂತುಗಳ ಎಡೆಯಿಂದ ಒಳಕ್ಕೆ ಇಳಿದಿತ್ತು. ಜಾಗದ ಒಂದು ಬದಿಯುದ್ದಕ್ಕೂ ಅರ್ಧ ಮೊಳ ಎತ್ತರದ ಮರಳ ದಿನ್ನೆ. ಅದರ ಉಪಯೋಗ ಏನೆಂಬುದನ್ನು ಅಲ್ಲಿಂದ ಬರುತ್ತಿದ್ದ ದುರ್ಗಂಧ ಸಾರುತ್ತಿತ್ತು. ಮೂಲೆಯಲ್ಲಿ ನೆಲವನ್ನು ತೋಡಿ ಮಾಡಿದ್ದೊಂದು ನೀರಿನ ತೊಟ್ಟಿ.

ತನ್ನ ಯಾತನೆಯ ನಡುವೆಯೂ ಔಟ ಇದನ್ನು ಗಮನಿಸಿದ. ಆದರೆ ಬೆಕ್ ಗಟ್ಟಿಯಾಗಿ ರೋದಿಸಿದ. ತಾನು ಕಾವಲು ಕುಳಿತಿದ್ದೂ ಹೀಗಾಯಿತಲ್ಲ ಎಂದು ಅಳಲು ಐವತ್ತರ ಮುಖ್ಯಸ್ಥನಾದೆ ; ಖ್ನೆಮ್ ದಳಪತಿಯ ವಿಶ್ವಾಸಕ್ಕೆ ಪಾತ್ರನಾದೆ ; ನಾಯಕರ, ಅಂಗರಕ್ಷಣೆಯ ಹಿರಿಯ ಹೊಣೆಯಲ್ಲಿ ಪಾಲುಗಾರ ನಾದೆ....ಆದರೆ ಏನಾಗಿ ಹೋಯಿತು ?....

ಔಟ ಗೋಡೆಗಳನ್ನು ತಡಕಾಡಿದ. ತಪ್ಪಿಸಿಕೊಳ್ಳುವ ಸಾಧ್ಯತೆ ? ಬಾಗಿಲಿನ ಒಳಮೈಯನ್ನು ಮುಟ್ಟಿ ನೋಡಿದ. ಎದೆ ಮಟ್ಟದಲ್ಲಿ ಚೌಕಾಕಾರ ದಲ್ಲಿ ಸಂದಿಕೂಡಿಸಿದ್ದರು. ಮುಷ್ಟಿ ತುರುಕಲು ಸಾಲುವಷ್ಟು ವಿಸ್ತಾರ. ಹೊರಗಿ

ನಿಂದ ತೆರೆಯುವ ವ್ಯವಸ್ಥೆ. ಬಾಗಿಲಿಗೆ ಕಿವಿಗೊಟ್ಟು ಆಲಿಸಿದ. ಅಸ್ಪಷ್ಟ ಸ್ವರಗಳು. ಹೊರಗೆ ಜನರಿದ್ದಾರೆ ಅನಿಸಿತು. ಕಾವಲುಭಟರಿರಬಹುದು, ಅರಮನೆಯ ಸೇವಕರಿರಬಹುದು....ನಾಯಕರನ್ನು ಸಮೀಪದಲ್ಲಿಯೆ ಎಲ್ಲೋ ಇಟ್ಟಿದ್ದಾರೆ. ಎಲ್ಲಿ? ನೆಲಮಾಳಿಗೆಯಲ್ಲಿ? ಸೆಡ್ ಉತ್ಸವ ಮುಗಿಸಿ ಇನ್ನು ತಮ್ಮೂರಿಗೆ ಪಯಣ ಎನ್ನುವಾಗಲೇ ಹೀಗಾಯಿತು. ಪೆರೋಗೆ ಯೌವನ ಪ್ರಾಪ್ತವಾಗುವ ಹರ್ಷದ ನೆನಪಿಗೆ ಗೋರಿದರೋಡೆಗಾರನನ್ನೂ ಕಳ್ಳಕಾಕರನ್ನೂ ಕೊಲೆಪಾತಕಿಗಳನ್ನೂ ಕಾರಾಗೃಹದಿಂದ ಹೊರಗೆ ಬಿಟ್ಟರು. ಅತಿಥಿಗಳಾದ ನಮ್ಮನ್ನು ಒಳಕ್ಕೆ ನೂಕಿದರು.

ಔಟ ಕಟಕಟನೆ ಹಲ್ಲು ಕಡಿದ. ಒಳಗಿನಿಂದ ಒಂದಿಷ್ಟು ನೋವನ್ನು ನರಳಾಟವಾಗಿ ಮಾರ್ಪಡಿಸಿ ಹೊರಕ್ಕೆ ಹರಿಸಿದ.

ಬೆಕ್ ತನ್ನ ಅಳು ನಿಲ್ಲಿಸಿ ಅಂದ:

" ಹೀಗಾಯ್ತಲ್ಲಣ್ಣ....!"

ಔಟ ಉತ್ತರಿಸಿದ :

" ಧೈರ್ಯಗೆಡಬಾರದ್ದು."

ಔಟ ಹಾಗೆ ಹೇಳಿದನೆಂದು ಬೆಕ್‌ಗೆಷ್ಟೋ ಸಮಾಧಾನ.

" ಬಟಾ ಅಣ್ಣ ಬರ್ತಾರೆ, ಅಲ್ಲವಾ ? "

" ಹೂಂ. ಹೂಂ."

" ನಾವು ಇಲ್ಲಿರೋದು ಹ್ಯಾಗೆ ಗೊತ್ತಾಗ್ತದೆ ?"

" ಒಳ್ಳೆಯವರು ಯಾರಾದರೂ ಹೇಳಾರು,"

ಬೆಕ್ ಯೋಚಿಸಿದ ; "ಒಳ್ಳೆಯವರು ಯಾರು ? ಮೆನ್ನ ಒಬ್ಬನೇ.... ಆದರೆ ತಾವು ಇಲ್ಲಿರುವುದು ಮೆನ್ನನಿಗೆ ತಿಳಿಯುವ ಬಗೆ ? ಆ ಸಿಕ್ಕುಗಂಟನ್ನು ಬಿಡಿಸಲಾಗದೆ, ಬೆಕ್ ಸಪ್ಪೆಮೋರೆ ಹಾಕಿಕೊಂಡು ಕುಳಿತ.

* * * *

ಸೂರ್ಯೋದಯವಿನ್ನೂ ದೂರವಿದ್ದಾಗಲೇ ಮಹಾಪ್ರಭುವನ್ನೂ ಮಹಾರಾಣಿಯನ್ನೂ ಎಬ್ಬಿಸಿದರು. ನೆಫರ್‌ಟೇಮ್ ಅದೆಷ್ಟು ಸಮಯದಿಂದ ಇದಿರು ನೋಡಿದ್ದಳು ಆ ದಿನವನ್ನು! ಸಾಮಾನ್ಯವಾಗಿ ಪೆರೋ ಬೆಳಿಗ್ಗೆ ಅರಮನೆಯ ದೇವಮಂದಿರಕ್ಕೆ ಹೋದ ಬಳಿಕ ಹಾಸಿಗೆ ಬಿಟ್ಟೇಳುತ್ತಿದ್ದವಳು ಇಂದು ನಿದ್ರಾ

ಭಂಗವಾಯಿತೆಂದು ಸಿಡುಕದೆ, ಬೇಗನೆದ್ದು, ಲವಲವಿಕೆಯಿಂದ ದಾಸಿಯರಿಗೆ ಅನುಜ್ಞೆಗಳನ್ನು ನೀಡಿದಳು.

ನಾಪಿತರು, ಉಗುರು ಕತ್ತರಿಸುವವರು, ಅಭ್ಯಂಜನ ಮಾಡಿಸುವವರು, ಹೊಸ ದುಕೂಲ ತೊಡಿಸುವವರು, ಪಾದರಕ್ಷೆಯವರು, ಸುಗಂಧ ಪೂಸುವವರು, ಕಿರೀಟದವರು—ಹೀಗೆ ವಿವಿಧ ಕರ್ಮಚಾರಿಗಳೂ ಅಧಿಕಾರಿಗಳೂ ಕಾದು ನಿಂತಿದ್ದರು. ಸೂರ್ಯ ಬೆಳಕಿಲ್ಲದ ಕೊರತೆಯನ್ನು ತೈಲದೀಪಗಳು ನೀಗಿದುವು.

ಅರಮನೆಯ ಸಂಗೀತ ವಿದುಷಿಯರಿಬ್ಬರು ಅಂತಃಪುರದ ಮೊಗಸಾಲೆಯಲ್ಲಿ ಕುಳಿತು ತಂತೀವಾದ್ಯಗಳನ್ನು ಮಿಾಟಿದರು.

ಹಿರಿಯ ಕ್ಷೌರಿಕನಿಗೂ ಅವನ ಸಹಾಯಕನಿಗೂ ಈ ದಿನ ವಿಶೇಷ ಹೊಣೆ. ಅರಸ ಅರಸಿ ಇಬ್ಬರಿಗೂ ಕೇಶಮುಂಡನವಾಗಬೇಕು. ಕೇಶಕವಚ ಧಾರಣೆಗೆ ಪೂರ್ವಭಾವಿಯಾಗಿ ಆ ಕ್ರಿಯೆ. ಈ ಅಪೂರ್ವ ಸಮಾರಂಭದಲ್ಲಿ ಬಳಸಲೆಂದು ರತ್ನಖಚಿತ ಬಂಗಾರದ ಕತ್ತರಿಯನ್ನು ಅರಮನೆಯ ಅಕ್ಕಸಾಲಿಗ ಒಂದು ತಿಂಗಳ ಹಿಂದೆಯೇ ನಿರ್ಮಿಸಿದ್ದ.

ಅವಸರದಲ್ಲಿ ಪ್ರಾತರ್ವಿಧಿ ಮುಗಿಸಿ ಬಂದ ಪೆರೋ ನಾಪಿತನ ಮುಂದೆ ಮುಗ್ಗಾಲು ಪೀಠದ ಮೇಲೆ ಕುಳಿತ. ಅರಮನೆಯ ಆಭರಣಗಳ ಅಧಿಕಾರಿ ಬಂಗಾರದ ತಟ್ಟೆಯಲ್ಲಿ ಬಂಗಾರದ ಕತ್ತರಿಯನ್ನಿಟ್ಟು ತಂದ.

ಒಬ್ಬಳು ದಾಸಿ ಹೊರಗಿನಿಂದ ಧಾವಿಸಿ ಬಂದು, "ಅಮಾತ್ಯರು ಆಗಮಿಸಿದ್ದಾರೆ," ಎಂದು ಮಹಾಪ್ರಭುವಿನ ಕಿವಿಯಲ್ಲಿ ಉಸುರಿದಳು.

"ಬರಲಿ," ಎಂದ ಪೆರೋ.

ಕ್ಷೌರಿಕ ಹಿಂದಕ್ಕೆ ಸರಿದು ನಿಂತ.

"ಪೆರೋನ ಆಯುರಾರೋಗ್ಯ ವರ್ಧಿಸಲಿ!" ಎಂದ ಅಮಾತ್ಯ, ಒಳಗೆ ಬಂದು. ಕ್ಷಣ ಮೌನದ ಬಳಿಕ ಆತ ಮುಂದುವರಿದ: "ಪ್ರಜೆಗಳೆಲ್ಲ ಎಚ್ಚತ್ತಿದ್ದಾರೆ. ಮಹಾಪ್ರಭು ಮಹಾಮಂದಿರಕ್ಕೆ ಮೆರವಣಿಗೆ ಹೋಗುವುದನ್ನು ನೋಡಲು ದಾರಿಯ ಇಕ್ಕೆಲಗಳಲ್ಲೂ ಕಿಕ್ಕಿರಿದು ನಿಂತಿದ್ದಾರೆ. ಕ್ರೂರ ಮೃಗವನ್ನು ಬಂಧನದಲ್ಲಿಟ್ಟಿದ್ದೇವೆ. ಅಲಂಕೃತ ಮಹಾ ಮಂದಿರ ಪೆರೋನ ಸ್ವಾಗತಕ್ಕೆ ಸಿದ್ಧವಾಗಿದೆ. ಮಹಾ ಅರ್ಚಕರು ಎದ್ದು ಪವಿತ್ರಕೊಳದಲ್ಲಿ ಸ್ನಾನ ಮಾಡ್ತಿದ್ದಾರೆ."

ಅರಸನೆಂದ :

"ಸಂತೋಷ. ಈ ಸೆಡ್ ಉತ್ಸವದ ವಿಶೇಷ ಕ್ರಿಯೆಗೆ ಅಮಾತ್ಯರು ಸಾಕ್ಷಿಯಾಗಲಿ."

"ನಿಂತಿರ್ತೇನೆ."

ಪೆರೋ ಸಂಜ್ಞೆ ಮಾಡಿದೊಡನೆ ಕ್ಷೌರಿಕನ ಕತ್ತರಿ ಕೆಲಸ ಮಾಡಲು ಆರಂಭಿಸಿತು. ಬಂಗಾರದ ತಟ್ಟೆಯೊಡನೆ ಸಿದ್ಧಳಾಗಿದ್ದ ದಾಸಿ ಹಿಡಿಹಿಡಿಯಾಗಿ ಕೆಳಗೆ ಬೀಳತೊಡಗಿದ ಅರಸನ ನೀಳಕೂದಲನ್ನು ತನ್ನ ತಟ್ಟೆಯಲ್ಲಿ ಹಿಡಿದಳು. ಪರಿಣತ ನಾಪಿತನ ಕರಕೌಶಲದಿಂದ ಸ್ವಲ್ಪ ಹೊತ್ತಿನಲ್ಲೇ ಪೆರೋನ ತಲೆ ನುಣ್ಣಗಾಯಿತು. ಕತ್ತರಿಯನ್ನು ಕೆಳಗಿರಿಸಿ ನಾಪಿತ ಕ್ಷೌರಕತ್ತಿಯನ್ನು ಕೈಗೆತ್ತಿಕೊಂಡ. ಸ್ವರೂಪದರ್ಶಕದಲ್ಲಿ ತನ್ನ ಮುಖ ನೋಡಿದ ಪೆರೋಗೆ 'ನನ್ನ ತಲೆ ಎಷ್ಟು ಚಿಕ್ಕದು,' ಎನಿಸಿ ಕಸಿವಿಸಿಯಾಯಿತು. ಸ್ವರೂಪದರ್ಶಕವನ್ನು ಪಕ್ಕಕ್ಕೆ ಸರಿಸುವಂತೆ ಆತ ಅಂಗೈ ಆಡಿಸಿದ....

ಅರಸನನ್ನು ದಾಸಿಯರು ಸ್ನಾನದ ಮನೆಗೆ ಕರೆದೊಯ್ದೊಡನೆ, ಅಲಂಕೃತ ಪಲ್ಲಕಿಗಳನ್ನು ನೋಡಲು ಅಮಾತ್ಯ ಹೊರಹೋದ.

ರಾಜಕುಮಾರನನ್ನೂ ರಾಜಕುವರಿಯರನ್ನೂ ಎಚ್ಚರಿಸಿದರು.

ಮಹಾರಾಣಿಯ ಸಮ್ಮುಖದಲ್ಲಿ ನಾಪಿತ ಒಂದು ಕ್ಷಣ ವಿವಂಚನೆಗೆ ಗುರಿಯಾದ. ಸಾಕಷ್ಟು ಸೊಂಪಾಗಿದ್ದ ತಲೆಗೂದಲನ್ನು ಕತ್ತರಿಸಬೇಕಲ್ಲ....ಆದರೆ ಉದುರುವ ಕೂದಲು, ನೆರೆಗೂದಲು ಹಾವಳಿ ನಡೆಸಿದ್ದುವು. ಕೇಶಮುಂಡನಕ್ಕೆ ಇದೂ ಒಂದು ಕಾರಣವಿರಬಹುದು ಎನಿಸಿತು ಆತನಿಗೆ.

ನೆಫರ್‌ಟೀಮ್ ಒಬ್ಬಳು ದಾಸಿಗೆ ಅಂದಳು :

"ಅಸ್ಸೀರಿಯದಿಂದ ತರಿಸಿದ ಕೇಶಕವಚ ತಗೊಂಡು ಬಾ."

ನಾಪಿತನಿಗೆ ತೋರಿಸಲು. ನೋಡಿ ಆತ ಅಪ್ರತಿಭನಾದ. ಅಷ್ಟು ಕೂದಲು ಒಂದೇ ಹೆಣ್ಣಿನದಲ್ಲ. ಇಬ್ಬರು ಮೂವರ ತಲೆಗಳನ್ನಾದರೂ ಬೋಳಿಸಿ ಅದನ್ನು ಮಾಡಿರಬೇಕು—ಅನಿಸಿತು ಅವನಿಗೆ. ಆದರೆ ತನ್ನ ಶಂಕೆಯನ್ನು ಆತ ವ್ಯಕ್ತಪಡಿಸಲಿಲ್ಲ.

"ಹ್ಯಾಗಿದೆ ?" ಎಂದು ಕೇಳಿದಳು ಅರಸಿ.

"ಸುಂದರವಾಗಿದೆ, ಮಹಾರಾಣಿ."

ತನ್ನ ಹೆರಳಿನ ಮೇಲೊಮ್ಮೆ ಪ್ರೀತಿಯಿಂದ ಕೈ ಆಡಿಸಿ ಅವಳೆಂದಳು :

"ಧಾರ್ಮಿಕ ವಿಧಿ. ಆಗಲೇಬೇಕಲ್ಲ. ನಿನ್ನ ಕೆಲಸ ಶುರುಮಾಡು."

ಬೇರೊಂದು ದಾಸಿ. ಮತ್ತೊಂದು ಬಂಗಾರದ ತಟ್ಟೆ. ಸುರುಳಿ ಸುರುಳಿಯಾಗಿ ಕೂದಲ ಹಿಡಿಗಳು ಬಿದ್ದುವು. ಮಹಾರಾಣಿ ಒಂದೆರಡು ಬಾರಿ ಸದ್ದು ಮಾಡುತ್ತಲೇ ನಿಟ್ಟುಸಿರು ಬಿಟ್ಟಳು. ಒಮ್ಮೆ ಸ್ವರೂಪದರ್ಶಕದಲ್ಲಿ ತನ್ನ ಪ್ರತಿಬಿಂಬ ನೋಡುವುದು; ಕೇಶಕವಚದತ್ತ ದೃಷ್ಟಿ ಹರಿಸುವುದು ; ದಾಸಿ ತನ್ನ ಪಕ್ಕಕ್ಕೆ ಬಂದಾಗ ತಟ್ಟೆಯ ಕಡೆಗೊಮ್ಮೆ ನೋಟ ಬೀರುವುದು....

ತನ್ನ ಕೆಲಸ ಮುಗಿಸಿ ನಾಪಿತ ತಲೆಬಾಗಿ ನಮಿಸಿದ

ಸ್ನಾನವಾದ ಮೇಲೆ ಮಹಾಪ್ರಭು ಮಹಾರಾಣಿ ಇಬ್ಬರ ತಲೆಗಳಿಗೂ ತೆಳ್ಳಗಿನ ಶ್ವೇತವಸ್ತ್ರ ಸುತ್ತಿ ಅಲಂಕರಿಸಿದರು, ಶುಭ್ರ ದುಕೂಲಗಳನ್ನು ಉಡಿಸಿದರು. ಆಭರಣಗಳನ್ನು ತೊಡಿಸಿದರು.

ಬೆಂಟ್‌ರಷ್ಟ್ ಬಂದು ಮಹಾರಾಣಿಗೆ ಅರಿಕೆ ಮಾಡಿದಳು :

"ರಾಜಕುಮಾರನೂ ರಾಜಕುಮಾರಿಯೂ ಹೊರಟು ನಿಂತಿದ್ದಾರೆ."

"ಒಳ್ಳೇದು. ಮಹಾಪ್ರಭು ಸಿದ್ಧವಾಗಿದ್ದಾರೋ ಏನೆಂದು ವಿಚಾರಿಸಿ, ಮೆರವಣಿಗೆ ಅಧಿಕಾರಿಗೆ ತಿಳಿಸು."

....ಪಲ್ಲಕಿಗಳತ್ತ ಸಾಗುತ್ತಿದ್ದಾಗ ಮಹಾರಾಣಿಯತ್ತ ಪೆರೋ ನೋಡಿದ. ಆಕೆಯೂ ಆತನತ್ತ ಮುಚ್ಚುಮರೆಯ ನೋಟ ಬೀರಿದಳು. ಪರಸ್ಪರ ನುಣುಪು ತಲೆಯ ಮೇಲಣ ಶಿರೋವಸ್ತ್ರದ ಅಲಂಕಾರ ಹೇಗೆ ಕಾಣಿಸುತ್ತದೆಂದು ತಿಳಿಯುವ ಅಪೇಕ್ಷೆ ಅವರಿಗೆ. ('ಮಹಾ ಅರ್ಚಕ ಕಠೋರನಾಗದೆ ಇದ್ದಿದ್ದರೆ ಕೇಶಕವಚಧಾರಣೆಯನ್ನಾದರೂ ಅರಮನೆಯ ದೇವಮಂದಿರದಲ್ಲಿ ಮಾಡಬಹುದಿತ್ತು.')

ಪಂಜುಗಳು, ಭೇರಿಯವರು—ಹಾಡುವವರು—ಕುಣಿತದವರು, ಮೆರವಣಿಗೆಯುದ್ದಕ್ಕೂ. ಎಡಬಲಗಳಲ್ಲಿ ನೂರು ಜನ ಕಾವಲು ಭಟರು, ಮೊದಲ ಪಲ್ಲಕಿಯಲ್ಲಿ ಅಮಾತ್ಯ, ಅವನ ಹಿಂದೆಯೇ ಪೆರೋ, ಹಿಂಬಾಲಿಸಿದ್ದು ಒಂದು ಪೆಟಾರಿ ಇದ್ದ ಪಲ್ಲಕಿ (ಪೆಟಾರಿಯಲ್ಲಿ ಅರಸನ ಕೇಶಕವಚ, ಕಿರೀಟ, ಕೊಂಡಿಕೋಲು, ಅಡಕತ್ತರಿ, ಹಿಂದಿನ ಪಲ್ಲಕಿಯಲ್ಲಿ ಮಹಾರಾಣಿ, ಆಕೆಯನ್ನು

ಹಿಂಬಾಲಿಸಿ ಕೇಶಕವಚ, ಕಿರೀಟಗಳಿದ್ದ ಪೆಟಾರಿಯನ್ನು ಒಯ್ಯುವ ಪಲ್ಲಕಿ, ಹಿಂದಿನ ಪಲ್ಲಕಿಯಲ್ಲಿ ರಾಜಕುಮಾರ, ಅದರ ಹಿಂದಿನದರಲ್ಲಿ ರಾಜಕುಮರಿಯರು, ಕಾಲ್ನಡಿಗೆಯ ಸೇವಕರು, ಪಂಜುಗಳು. ತೆರೆದ ಮಹಾದ್ವಾರವನ್ನು ಹಾದು ಮೆರವಣಿಗೆ ಬೀದಿಗಿಳಿಯಿತು. ನಗರದ ಹೊರಕ್ಕೆ ಮಹಾಮಂದಿರದತ್ತ ಸಾಗಿತು.

ಕರಗತೊಡಗಿದ್ದ ಇರುಳು. ಅದು ಪೂರ್ತಿಯಾಗಿ ಇಲ್ಲವಾಗುವುದಕ್ಕೆ ಮುನ್ನ ದೀವಟಿಗೆಗಳ ಪ್ರಭೆಯಲ್ಲಿ ಮೆರವಣಿಗೆ. ಉದ್ದಕ್ಕೂ ನೆಳಲು–ಬೆಳಕು ಆಟ. ಹೊಳೆಯುವ ಈಟಿಮೊನೆ, ಪಲ್ಲಕಿಗಳ ಕೆತ್ತನೆ ಕೆಲಸ. ಮೆರವಣಿಗೆ ಯಲ್ಲಿದ್ದವರ ಹಾರೈಕೆ : "ಓ ಪೆರೋ! ಓ ಪೆರೋ!" "ದೀರ್ಘಾಯು ಪೆರೋ ! ದೀರ್ಘಾಯ ಪೆರೋ!" ಬೀದಿಯ ಇಕ್ಕೆಲಗಳಲ್ಲಿ ಜನಸಮ್ಮರ್ದ. ನಗರವಾಸಿ ಗಳು, ಹೊರಗಿನಿಂದ ಬಂದವರು ಗಂಡಸರು–ಹೆಂಗಸರು....ಮಹಾಪ್ರಭುವಿನ ಮಹಾರಾಣಿಯ ಪಲ್ಲಕಿಗಳು ಸಮೀಪಿಸಿದಾಗ ಬಾಗಿ ನಮಿಸಿದರು. ಮೆರವಣಿಗೆ ಯಿಂದ ಕೇಳಿಸಿದ ಘೋಷದೊಡನೆ ತಮ್ಮ ಧ್ವನಿಯನ್ನೂ ಕೂಡಿಸಿದರು.

ಹಗಲಾದರೆ ಚಲಿಸದ ಮುಖ ಮುದ್ರೆ ಇರಬೇಕು. ನಸುಗತ್ತಲೆಯಲ್ಲಿ ಅತ್ತಿತ್ತ ನೋಡುವ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯ ಪೆರೋಗೆ. ಇವರಲ್ಲವೆ ತನ್ನ ಪ್ರಜೆಗಳು ? ಅಂತೂ ಅನಗತ್ಯ ಘರ್ಷಣೆಯನ್ನು ತಪ್ಪಿಸಿದ ಹಾಗಾಯಿತು. ಇದರಲ್ಲಿ ಆಮೆರಬ್‌ನ ಕೌಶಲ ಹೆಚ್ಚಿನದೊ ? ಹೆಪ್ಸೆಟ್‌ನದೊ ? ಸೆಡ್ ಉತ್ಸವ ನಡೆಯುತ್ತಿರುವುದು ತನ್ನ ವಿಜಯ. ನೀರಾನೆ ಪ್ರಾಂತದ ಪ್ರಶ್ನೆ ಬಗೆ ಹರಿಯುತ್ತಿರುವುದು ತನ್ನ ಅಬಾಧಿತ ಪ್ರಾಬಲ್ಯಕ್ಕೆ ನಿದರ್ಶನ. ಸೆಡ್ ಉತ್ಸವಕ್ಕೆ ಸಂಬಂಧಿಸಿ ಮಹಾ ಮಂದಿರಕ್ಕೆ ತಾನು ಕಾಣಿಕೆಗಳನ್ನು ನೀಡಬೇಕು. ಎಂಥ ಕಾಣಿಕೆ, ಎಷ್ಟು ಮೌಲ್ಯದ್ದು ಎಂಬುದನ್ನು ಆಮೆರಬ್‌ನೊಡನೆ ತಾನು ಚರ್ಚಿಸಬೇಕಾಗಿತ್ತು....

ತಲೆಯ ಮೇಲೆ ಕೇಶರಾಶಿ ಇಲ್ಲದೆ, ಕಿರೀಟವಿಲ್ಲದೆ ಮಹಾರಾಣಿ ಹೊರಗೆ ಕಾಣಿಸಿಕೊಳ್ಳುತ್ತಿರುವುದು ಇದೇ ಮೊದಲು. ಓರಣವಾಗಿ ಕಟ್ಟಿದ್ದ ಶಿರೋ ವಸ್ತ್ರವಿದ್ದರೂ ತಾನು ನಗ್ನಳಾಗಿಯೇ ಪಲ್ಲಕಿಯಲ್ಲಿ ಕುಳಿತಿರುವೆ ಎನ್ನುವ ಭಾವನೆ ನೆಫರ್‌ಟೀಮ್‌ಗೆ....ಈ ಪ್ರಜೆಗಳು ತನ್ನನ್ನು ನೋಡಿ ಹರ್ಷಪುಲಕಿತ ರಾಗುತ್ತಿದ್ದಾರೆ. ಅರಸನನ್ನು ಕಂಡು ಭಯಪಡಬಹುದು. ಆದರೆ ಅರಸಿಯ ವಿಷಯದಲ್ಲಿ ಭಯ, ಭಕ್ತಿ, ಪ್ರೇಮ–ಎಲ್ಲವೂ. ಈ ಸೆಡ್ ಉತ್ಸವ ನಡೆ

ಯುತ್ತಿರುವುದು ತನ್ನಿಂದಾಗಿಯೇ ಅಲ್ಲವೆ? ನವಯೌವನ ದೊರಕಿಸುವ ಈ ನಾಟಕ....ಪೆರೋ ಬಲಾಢ್ಯನೆಂದು ಜನರ ಮನಸ್ಸಿನ ಮೇಲೆ ಬಿಂಬಿಸುವುದ ಕ್ಕೋ.್ಕರ ಅಲ್ಲವೆ ಇದು ? ಮಹಾ ಅರ್ಚಕ ತನ್ನ ಪರ ಎಂಬುದು ಸ್ಪಷ್ಟ. ತಾನು ಅವನ ಪೂರ್ಣ ವಿಶ್ವಾಸ, ಬೆಂಬಲ ಗಳಿಸಬೇಕು. ರಾಜಕುಮಾರ ಆದಷ್ಟು ಬೇಗನೆ ಪಟ್ಟವೇರುವುದು ಅಗತ್ಯ. ಮೆರವಣಿಗೆ ವೈಭವಪೂರ್ಣ ವಾಗುವುದು ಮಹಾಮಂದಿರದಿಂದ ಮರಳುವಾಗಲೇ. ಅತ್ಯಂತ ಎತ್ತರದ ಕೇಶಕವಚ. ಅದರ ಮೇಲೆ ಝಗಝಗಿಸುವ ಕಿರೀಟ. ಪ್ರಾಂತಪಾಲರೆಲ್ಲ ಈ ಮೆರವಣಿಗೆಯಲ್ಲಿ ನಡೆದು ಬರುವಂತೆ ಮಾಡಿದ್ದರೆ ಏನಾಗುತ್ತಿತ್ತು? ಸೆಡ್ ಉತ್ಸವದ ದಿನವನ್ನು ಇನ್ನೂ ಮೊದಲು ನಿರ್ಧರಿಸಿದ್ದರೆ ಪ್ರಾಂತಪಾಲರ ಪತ್ನಿ ಯರೂ ಬರುತ್ತಿದ್ದರು. ನೆಹನವೇಯ್ಟ್, ಅಮಾತ್ಯಪತ್ನಿ, ಮಹಾದಂಡ ನಾಯಕನ ಮಡದಿ ಇವರಿಷ್ಟೇ ಜನ ಇವತ್ತು. ಔತಣಕ್ಕೆ ಸರುಸದಸ್ಯರ ಹೆಂಗಸರನ್ನೂ ಕರೆಯಬೇಕು.

ಏರು ಮಾರ್ಗ, ತಿರುವು, ಬಳಿಕ ಮಹಾಮಂದಿರ.

ಅಲ್ಲಿಯೂ ಜನ ಸಂದಣಿ. ಮಂದಿರದ ಒಳಕ್ಕೆ ಆ ದಿನ ಬರಲು ಜನ ಸಾಮಾನ್ಯರಿಗೆ ಅವಕಾಶವಿಲ್ಲ. ಕಟಕಟೆಯ ಹೊರಗೆ ನಿಂತು, ಎಷ್ಟು ಕಾಣಿ ಸಿತೋ ಅಷ್ಟರಿಂದಲೇ ಅವರು ತೃಪ್ತರಾಗಬೇಕು. ಜನರು ಶಿಸ್ತು ಪಾಲಿಸು ವಂತೆ ಮಾಡಲು ಅಲ್ಲಿ ನಿಂತಿತ್ತು ಯೋಧಬಲ.

ಮಹಾಮಂದಿರದಿಂದ ತುಸು ದೂರದಲ್ಲಿ ಪಲ್ಲಕಿಯಿಂದಿಳಿದ ಪೆರೋನಿಗೆ ಜಗತ್ತು ಶಾಂತವಾಗಿ ಕಂಡಿತು. ನಿಶ್ಶಬ್ದವಾಗಿದ್ದ ಜನರು. ಸೂರ್ಯನ ಮೊದಲ ಕಿರಣಗಳು ಭೂಮಿಯನ್ನು ಮುದ್ದಿಡತೊಡಗಿದುವು. ಎಲ್ಲವನ್ನೂ ಆವರಿಸಿದ್ದ ತೆಳ್ಳಗಿನ ಅವಕುಂಠನವನ್ನು ಕಾಣದ ಕೈಗಳು ಸರಿಸಿದುವು. ಇರುಳಿನ ಸೆತ್‌ಗೆ ಸೋಲು. ಮಂದಿರದ ಸ್ವರ್ಣಲೇಪಿತ ಗೋಪುರದ ನಸುಹಳದಿ ಕಣ್ಣಿಗೆ ಹಬ್ಬ ವಾಯಿತು.

ಪವಿತ್ರ ಕೊಳದ ಪಕ್ಕದ ದಿಬ್ಬದ ಬುಡದಲ್ಲಿ ಚಿರತೆಯ ಚರ್ಮದಿಂದ ಮೈ ಮುಚ್ಚಿಕೊಂಡಿದ್ದ ಮಹಾ ಅರ್ಚಕನೂ ಪರಿವಾರವೂ ಪೂರ್ವ ದಿಕ್ಕಿನತ್ತ ನೋಡುತ್ತ ನಿಂತಿದ್ದರು. ಮಂದಿರದ ಮಹಾದ್ವಾರದ ಹೊರಗೆ ಐಗುಪ್ತದ ಪ್ರಾಂತಪಾಲರೇ ಮತ್ತಿತರ ಪ್ರತಿಷ್ಠಿತರ ಅಸ್ಪಷ್ಟ ಆಕೃತಿಗಳು ಕಾಣಿಸಿದುವು.

ಪೆರೋ, ಮಹಾರಾಣಿ, ರಾಜಕುಮಾರ ಮತ್ತು ರಾಜಕುವರಿಯರನ್ನು ಕರೆದು ಕೊಂಡು, ಅಮಾತ್ಯ ಪವಿತ್ರ ಕೊಳದತ್ತ ನಡೆದ. ಕಿರಿಯ ದೇವಸೇವಕರ ತಂಡ ವೊಂದು ಬಾಗಿ ಬಾಗಿ ನಮಿಸುತ್ತ ಅವರನ್ನು ಸ್ವಾಗತಿಸಿತು. ರಾಜ ಪರಿವಾರ ದವರು ಪಾದಗಳನ್ನೂ ಅಂಗೈಗಳನ್ನೂ ತೋಯಿಸಿ ಮುಖದ ಮೇಲೂ ಶರೀರದ ಮೇಲೂ ಪವಿತ್ರ ಜಲವನ್ನು ಸಿಂಪಡಿಸಿಕೊಂಡರು.

ಮೂಡಲು ಹೆಚ್ಚು ಹೆಚ್ಚು ಶುಭ್ರ ವಾದಂತೆ ಪೆರೋ ಬಳಗ ದಿಬ್ಬವನ್ನು ಸಮಿೂಪಿಸಿತು. ಪೆರೋ ಗಂಭೀರವಾಗಿ ದಿಬ್ಬದ ಮೆಟ್ಟಲುಗಳನ್ನೇರಿದ. ಆತ ವೇದಿಕೆಗೆ ಬಂದೊಡನೆ ಹೇಪಾಟ್ ಉಚ್ಚ ಕಂಠದಲ್ಲಿ ನುಡಿದ :

" ನಾವು ಹೆಮ್ಮೆ ಪಡುವಂಥ ಓ ದೇವರೂಪನೇ, ಪ್ರಶಂಸನೀಯ ಸಾರ್ವಭೌಮನೇ ನಿನಗೆ ನಮನ. ಓ ದೀರ್ಘಾಯು ದೊರೆಯೇ, ಸ್ವರ್ಣ ದೇವತೆ ಹಾಥೊರ್ ನಿನ್ನ ಮೂಗಿಗೆ ಬಲಕೊಡಲಿ ! "

ಮಹಾ ಅರ್ಚಕನ ಪರಿವಾರದವರು ಘೋಷಿಸಿದರು :

" ಓ ದೇವರೂಪ ! ಓ ದೇವರೂಪ ! "

ಪೂರ್ವ ದಿಗಂತದಲ್ಲಿ ಕೆಂಪು ಗೋಲದ ದರ್ಶನವಾಯಿತು. ಆ ಗೋಲ ಉರಿಚೆಲ್ಲಿತು. ಬೆಳ್ಳಂಬೆಳಗಾಯಿತು.

ಪೆರೋ ಬಲ ಅಂಗೈಯನ್ನು ಎಡಭುಜದ ಮೇಲಿರಿಸಿ ತಲೆಯನ್ನು ಬಗ್ಗಿಸಿ ರಾನಿಗೆ ನಮಿಸಿದ. ಆತನೆಂದ :

" ಓ ದೇವ ! ದಿಗಂತದಲ್ಲಿ ನೀನು ಉದಿಸಿ, ದಕ್ಷಿಣ ಉತ್ತರ ಐಗುಪ್ತ ಗಳೆರಡನ್ನೂ ನಿನ್ನ ಕಿರಣಗಳಿಂದ ಬೆಳಗುವ ಈ ನೋಟ ಸುಂದರ ! ನೇತ್ರಾ ನಂದಕರ ! "

ಮಹಾ ಅರ್ಚಕನ ಅರೆಮುಚ್ಚಿದ ಕಣ್ಣುಗಳು ದಿಬ್ಬದ ಮೆಟ್ಟಲುಗಳ ಬುಡದಲ್ಲಿ ತಲೆತಗ್ಗಿಸಿ ನಿಂತಿದ್ದ ಅಮಾತ್ಯನನ್ನು ಕಂಡುವು, ಮಹಾರಾಣಿಯನ್ನೂ ಪರಿವಾರವನ್ನೂ ದಿಟ್ಟಿಸಿದುವು, ದಿಬ್ಬದ ಮೇಲಿದ್ದ ಪೆರೋನ ಮೇಲೆ ನೆಟ್ಟುವು. (ಮಹಾರಾಣಿಯ ಮೆಚ್ಚುಗೆಯ ನೋಟ ಚಿರತೆ ವಸನದ ಮೇಲೆ ಅಲೆದಾಡಿತು.)

ದೇವಸೇವಕ ಗಣ ಕೂಗಿತು :

" ಓ ದೇವರೂಪ ! ಓ ದೇವರೂಪ ! "

ದೇವರೂಪ ಪೆರೋ ಕಣ್ಣು ಕಿರಿದುಗೊಳಿಸಿ ಸೂರ್ಯ ಬಿಂಬವನ್ನು ನೋಡುತ್ತ ಏರುದನಿಯಲ್ಲಿ ಪ್ರಾರ್ಥಿಸಿದ :

" ಓ ದೇವ ! ಇದು ಹರ್ಷದ, ಪರಮ ಹರ್ಷದ ದಿನ ! ಬುವಿಯ ಮೇಲೂ ಸಗ್ಗದಲ್ಲೂ ಇಂದು ಅಪಾರ ಹಿಗ್ಗು ! ಐಗುಪ್ತದ ಒಡೆಯನಾದ ನೀನು ಮೊಗದೋರಿದ್ದೀಯೆ ಮನೆಬಿಟ್ಟು ಹೋದವರೀಗ ತಮ್ಮ ವಸತಿಗಳಿಗೆ ಹಿಂದಿರುಗಬಹುದು. ಅವಿತುಕೊಂಡವರು ಹೊರಗೆ ಬರಬಹುದು. ಉಪವಾಸದಿಂದ ನರಳಿದವರು ಹೆಮ್ಮೆಯಿಂದ ಉಣ್ಣಬಹುದು. ಬಾಯಾರಿದವರಿಗೆ ಇದೋ ಪಾನೀಯ. ನಗ್ನರೂ ಮಲಿನರೂ ಪರಿಶುದ್ಧರಾಗಿ ಬಿಳಿಯ ವಸನಗಳನ್ನು ಧರಿಸಿದ್ದಾರೆ. ಬಂದಿಗಳೆಲ್ಲ ಸಂಕೋಲೆಗಳನ್ನು ಸಂತಸದಿಂದ ಕಳಚಿ ಬಂಧ ಮುಕ್ತರಾಗಿದ್ದಾರೆ. ಈ ತನಕ ಹೊಡೆದಾಡುತ್ತಿದ್ದ ಸೋದರರೀಗ ಮತ್ತೆ ಒಂದುಗೂಡಿದ್ದಾರೆ. ನಿನ್ನ ಮೂಲದಿಂದಲೇ ಬರುವ ನದಿ ಎಲ್ಲ ಹೃದಯಗಳಿಗೂ ಸಂತೋಷವನ್ನೂ ಮುದವನ್ನೂ ನೀಡುತ್ತದೆ. ರೋದಿಸುವ ವಿಧವೆಯರು ಮತ್ತೆ ತಮ್ಮ ಮನೆಬಾಗಿಲನ್ನು ತೆರೆಯುತ್ತಿದ್ದಾರೆ. ಕನ್ಯೆಯರು ಮತ್ತೊಮ್ಮೆ ಪ್ರೇಮ ಗೀತೆಗಳನ್ನು ಹಾಡುತ್ತಿದ್ದಾರೆ....ಓ ದೇವಾ ! ಇದು ಹರ್ಷದ ಪರಮ ಹರ್ಷದ ದಿನ ! ಬುವಿಯ ಮೇಲೂ ಸಗ್ಗದಲ್ಲೂ ಇಂದುಅಪಾರ ಹಿಗ್ಗು ! "

ಪೆರೋ ಸಂತೃಪ್ತ. ಕೆಲ ತಿಂಗಳಿಂದ ಏಕಾಂತದಲ್ಲಿ ಪ್ರಾರ್ಥನೆಗಳ ಲಿಪಿ ಸುರುಳಿಯನ್ನು ಆಗಾಗ್ಗೆ ನೋಡುತ್ತಿದ್ದುದಕ್ಕೆ ಇದು ಪ್ರತಿಫಲ. ತಡವರಿಸದೆ ಪ್ರಾರ್ಥನೆ ಸಲ್ಲಿಸಿದ್ದ. ('ಮಹಾ ಅರ್ಚಕನಿಗೆ ವಿಸ್ಮಯವಾಗಿರ್ಬೇಕು.')

ವಿಸ್ಮಯವಷ್ಟೇ ಅಲ್ಲ, ಆಶ್ಚರ್ಯಕೂಡಾ. (ಇನೇನಿಯ ಮೇಲೆ ಶಂಕೆ. 'ಹಿಂದಿನ ಸಾಲಿನಲ್ಲಿ ನಿಂತಿದ್ದಾನೆ.' ಒಂದೇ ಕ್ಷಣ. ಆಮೇಲೆ ಅನಿಸಿತು : 'ಇರಲಾರದು. ಇನೇನಿ ನನ್ನ ನಂಬುಗೆಯ ಬಂಟ. ಪ್ರಾರ್ಥನಾ ರೀತಿ ಬಲ್ಲ ಲಿಪಿಕಾರರಿಗೆ ಅರಮನೆಯಲ್ಲೇನು ಕೊರತೆ ? ಇಲ್ಲವೆ, ಸಾಕ್ಷರನಾದ ಪೆರೋ ತಾನೇ ಓದಿ ಪಾಂಡಿತ್ಯ ಗಳಿಸಿರಲೂಬಹುದು. ಮುಂದಿನ ಸಾಲುಗಳು ಇನ್ನು. ಓ ಮಹಾದೇವನೇ........')

ತನ್ನ ಧ್ವನಿಯ ಅಲೆಗಳಿಂದ ಉತ್ತೇಜಿತನಾದ ಪೆರೋ ಮತ್ತಷ್ಟು ಉತ್ಸಾಹದಿಂದ ಮುಂದುವರಿಸಿದ :

" ಓ ಮಹಾದೇವನೇ, ಓ ನನ್ನ ಒಡೆಯನೇ....ನೀನು ಅಖಿಲ ಲೋಕದ

ಅಂಬಿಗ. ಭೂಮಿ ನಿನ್ನ ಅನುಜ್ಞೆಗೆ ಅನುಸಾರವಾಗಿ ತೇಲುತ್ತಿದೆ. ಬಯಲು ಗಳನ್ನು ಹಸನು ಗೊಳಿಸುವ, ಬೆಂಗಾಡುಗಳನ್ನು ವಾಸಯೋಗ್ಯವಾಗಿ ಮಾಡುವ ನೀಲನದಿಯೂ ನೀನೇ. ನೀನು ಸ್ವರ್ಗಲೋಕದ ಉಳುಮೆದಾರ. ಭೂಮಿಯ ಸನ್ನೆಕೋಲು ನೀನು. ಆದರ ಲಂಬಸೂತ್ರ. ಉಳುಮೆಗಾರ, ಬಾಯಾರದಿರು! ಸನ್ನೆಕೋಲೆ, ವಾಲದಿರು! ಲಂಬಸೂತ್ರವೆ, ಅಲ್ಲಾಡದಿರು....ಓ ಜಗದೊಡೆಯಾ, ಓ ಮಹಾ ಅಂಬಿಗ. ನೀನು ನನ್ನನ್ನು ಮುನ್ನಡೆಸು...."

ಪೆರೋ ಮೌನವಾದಂತೆ ಅರ್ಚಕ ಪರಿವಾರವೆಂದಿತು :

—"ಓ ಪೆರೋ ! ಓ ಪೆರೋ ! "

—"ಓ ದೇವರೂಪ ! ಓ ದೇವರೂಪ !"

ಪ್ರಾರ್ಥನೆ ಮುಗಿಸಿದ ಪೆರೋ ದಿಬ್ಬದಿಂದ ಕೆಳಕ್ಕಿಳಿದ. ಅವನನ್ನು ಇದಿರ್ಗೊಂಡು ಹೇಪಾಟ್ ಹೇಳಿದ :

"ಪ್ರಶಂಸನೀಯ ಸಾರ್ವಭೌಮ! ಇನ್ನು ಮಹಾಮಂದಿರಕ್ಕೆ ಹೋಗೋಣ."

ಮೊದಲು ಮಹಾ ಅರ್ಚಕ ತನ್ನ ನೀಳ ಅಧಿಕಾರ ದಂಡದೊಡನೆ, ಬಳಿಕ ಪೆರೋ, ಮಹಾರಾಣಿ, ಮಕ್ಕಳು, ಸುತ್ತುವರಿದ ಅಂಗರಕ್ಷಕರು ಏಳು ಜನ. ಹಿಂದಿನಿಂದ ಅಮಾತ್ಯ. ಇವರನ್ನು ಹಿಂಬಾಲಿಸಿ ದೇವಸೇವಕ ಗಣ. ಪೆಟಾರಿ ಗಳನ್ನು ಹೊತ್ತ ಸೇವಕರು, ಕೆಲ ಸಶಸ್ತ್ರ ಯೋಧರು.

ಈ ಸಾಲು ಮಂದಿರದ ಮಹಾದ್ವಾರವನ್ನು ತಲಪಿದಂತೆ ಜನಸ್ತೋಮ ಜಯಕಾರ ಮಾಡಿತು.

"ಓ ಪೆರೋ! ಓ ಪೆರೋ !"

ಮಹಾದ್ವಾರದ ಬಳಿಯಲ್ಲಿದ್ದ ದಂಡನಾಯಕ ಅಮೆನೆಮೊಪೆಟ್, ಹೆಜ್ಬೆಟ್ ಮತ್ತಿತರ ಸರುಸಭಸ್ಯರು, ಹಿರಿಯ ತೆರಿಗೆ ಅಧಿಕಾರಿಗಳು (ಟೆಹುಟಿ ಕೂಡಾ), ಪ್ರಾಂತಪಾಲರು, ಇನ್ನೊಂದು ಪಕ್ಕದಲ್ಲಿ ಕೆಲ ಪ್ರತಿಷ್ಠಿತ ಮಹಿಳೆ ಯರು ಬಾಗಿ ವಂದಿಸಿ ಸ್ವಾಗತ ಬಯಸಿದರು.

ಹೇಪಾಟ್ ಹೆಬ್ಬಾಗಿಲನ್ನು ಒಳಕ್ಕೆ ನೂಕುವವನಂತೆ ಅಂಗೈಯನ್ನು ಮುಂದಕ್ಕೆ ಚಲಿಸಿದ. ಕಿರಿಯ ದೇವಸೇವಕರು ನಾಲ್ಕು ಜನ ಧಾವಿಸಿ ಬಂದು ಬಾಗಿಲನ್ನು ತಳ್ಳಿದರು. ಮೊಳದಪ್ಪನೆಯ ಕದ ತೆರೆದುಕೊಂಡಿತು. ಪ್ರಾಂಗಣ.

ಅದನ್ನು ದಾಟದೊಡನೆ ಗರ್ಭಗುಡಿ. ತೆರೆದೇ ಇದ್ದ ಪಾರ್ಶ್ವದ್ವಾರಗಳ ಮೂಲಕ ಬರುತ್ತ ಹೋಗುತ್ತ ಕಿರಿಯ ದೇವಸೇವಕರು ಕಾರ್ಯೋನ್ಮುಖರಾಗಿದ್ದರು.

ಗರ್ಭಗುಡಿಯ ಪಾರ್ಶ್ವದಿಂದ ತಂತೀವಾದ್ಯ ಸಂಗೀತ ಬಲಗೊಂಡಿತು. ಒಳಗುಡಿಯ ಬಾಗಿಲವರೆಗೂ ಪೆರೋನನ್ನು ಕರೆದೊಯ್ದು ಮಹಾ ಅರ್ಚಕ ತಾನು ಬದಿಗೆ ಸರಿದು, ಎದುರು ದಿಕ್ಕಿಗೆ ಸಂಜ್ಞೆ ಮಾಡಿದ. ಗಿಡುಗನ ಮುಖವಾಡ ಧರಿಸಿದ ಹೋರಸ್‌ರೂಪಿ ದೇವ ಸೇವಕನೊಬ್ಬ, ವಾನರ ಮುಖವಾಡ ಧರಿಸಿದ ವಿದ್ಯಾದೇವತೆ ಥೂಥ್‌ರೂಪಿ ದೇವಸೇವಕ ಮತ್ತೊಬ್ಬ—ಹೀಗೆ ಇಬ್ಬರ ಬಂದು ಪೆರೋನ ಎಡಬಲಗಳಲ್ಲಿ ನಿಂತರು.

ಭೇರಿ ಸದ್ದು ತಂತೀವಾದ್ಯಗಳಿಗೆ ವಿರಾಮ ನೀಡಿ ಉತ್ಕಟಗೊಂಡಿತು.

ರಾ ಪುತ್ರ ಪೆರೋ ಗರ್ಭಗುಡಿಯ ಬಾಗಿಲಿಗೆ ತಗಲಿಸಿದ್ದ ಅವೆಮಣ್ಣಿನ ಮುದ್ರೆಯನ್ನು ಮುಟ್ಟಿದ. ಹೋರಸ್ ಮತ್ತು ಥೊಥ್ ವೇಷಧಾರಿಗಳು ಅದನ್ನು ಒಡೆದರು, ಬಾಗಿಲು ತೆರೆದರು. ಎದೆಯೆತ್ತರದ ಪ್‌ಟಾ ಮೂರ್ತಿಗೆ ರಾನ ಹೊಂಗಿರಣಗಳ ಸ್ಪರ್ಶ. ಸೂರ್ಯ ಪ್ರಭೆಯಲ್ಲಿ ಗರ್ಭಗುಡಿಯ ಒಳಭಾಗ ದೂರದಲ್ಲಿದ್ದವರಿಗೂ ಕಾಣಿಸಿತು. ದೇವರ ವಸನವನ್ನು ಬಿಚ್ಚಿದರು. ಪೆರೋ ಆ ಮೂರ್ತಿಗೆ ಪವಿತ್ರ ಜಲ ಸೇಚನ ಮಾಡಿದ. ಸುಗಂಧ ಧೂಪ ಗರ್ಭಗುಡಿಯನ್ನು ಆವರಿಸಿದಂತೆ ದೇವತಾಮೂರ್ತಿಗೆ ಹೊಸ ವಸನ ಉಡಿಸಿದರು. ಗರ್ಭಗುಡಿಯ ಒಳಬಾಗಿಲಿನ ಮೂಲಕ ದೇವಕಿರೀಟವಿದ್ದ ಪೆಟಾರಿ ಬಂತು. ಮಹಾ ಅರ್ಚಕ ಒಳಕ್ಕೆ ಕಾಲಿರಿಸಿ, ಪ್‌ಟಾ ಸ್ತೋತ್ರವನ್ನು ಪಠಿಸುತ್ತ, ("ಜಗದ್ರಕ್ಷಕ ಪ್‌ಟಾ, ಸರ್ವಜನ ಪೂಜಿತ ಪ್‌ಟಾ"), ಕಿರೀಟವನ್ನೆತ್ತಿ ಪೆರೋನ ಕೈಗಿತ್ತ. ಪೆರೋ ತಾನೂ ಪ್‌ಟಾ ನಾಮ ಪಠಿಸುತ್ತ ದೇವತಾ ಮೂರ್ತಿಯ ಶಿರಸ್ಸಿನ ಮೇಲೆ ಆ ಕಿರೀಟವನ್ನಿರಿಸಿದ. ಪಾದಗಳಿಗೆ ಹೂ ಹಣ್ಣುಗಳನ್ನು ಅರ್ಪಿಸಿದ. ತಾನು ದೇವರ ಮುಂದೆ ಮಂಡಿಯೂರಿ, ನೆಲಕ್ಕೆ ತಲೆ ಮುಟ್ಟಿಸಿದ. ಪ್ರಾಂಗಣದಲ್ಲಿದ್ದ ಮಹಾರಾಣಿಯೂ ಮಕ್ಕಳೂ ಅದೇ ರೀತಿ ದೇವರಿಗೆ ನಮಿಸಿದರು. (ಭೇರಿ ಸದ್ದು ನಿಂತು, ತಂತೀವಾದ್ಯಗಳು ಗುಂಯ್ ಗುಟ್ಟಿದುವು.)

ಹೇಪಾಟ್ ಉಚ್ಚ ಕಂಠದಲ್ಲಿ ನುಡಿದ :

"ರಾಜಧಾನಿ ಮೆಂಫಿಸಿನ ಸಂರಕ್ಷಕ ಪ್‌ಟಾ ಸಂಪ್ರೀತನಾಗಿದ್ದಾನೆ. ಜನತೆಯ ಪ್ರೀತಿ ಪಾತ್ರ ಕುರುಬನೂ ಮಹಾರಾಣಿಯೂ ರಾಜಕುಮಾರನೂ

ರಾಜಕುವರಿಯರೂ ಏಳಬಹುದಿನ್ನು...."

ಪೆರೋ ಎದ್ದು ನಿಂತ ಮೇಲೆ ಮಹಾ ಅರ್ಚಕ ಸೂಚನೆ ಇತ್ತ :

" ಅರಸ ! ವಿಶಿಷ್ಟ ನೈವೇದ್ಯ ಸಮರ್ಪಣೆಗೆ ಮುನ್ನ ಇನ್ನು ಪ್ರಾರ್ಥನೆ !"

ಸಾಕಷ್ಟು ನಿದ್ದೆ ಇಲ್ಲದೆ ದಣಿವು ಪೆರೋಗೆ. ('ನವಯೌವನ ಪ್ರಾಪ್ತಿಗಾಗಿ ಪೂಜೆ. ಆದರೆ ನನಗೋ ಬಳಲಿಕೆ.')

ಮುಖ ಬಾಡಿದ್ದರೂ ಪೆರೋ ಲವಲವಿಕೆ ನಟಿಸುತ್ತ, ತಲೆ ಬಗ್ಗಿಸಿ, ಬಿರಿದ ಧ್ವನಿಯಲ್ಲಿ ಪ್ರಾರ್ಥಿಸಿದ :

" ಓ ದೇವಾ ! ಐಗುಪ್ತದ ಮಹಾಧಿಪತಿ ! ಆಯುಸ್ಸಿನ ಭಿಕ್ಷೆ ಪಡೆಯಲೆಂದು ಸೆಡ್ ಉತ್ಸವದ ಪೂಜಾವಿಧಿಗಳನ್ನು ಕೈಗೊಂಡಿದ್ದೇನೆ. ಓ ಸರ್ವಶಕ್ತ! ಹಿರಿಯ ಹರೆಯವನ್ನು ನನಗೆ ದಯಪಾಲಿಸು. ನನ್ನ ರಾಜ್ಯಭಾರ ದೀರ್ಘವಾಗಲಿ ; ಚಿರಯೌವನ ನನ್ನದಾಗಲಿ. ನನ್ನ ಅವಯವಗಳಿಗೆ ಎಂದೂ ಕುಗ್ಗದ ಶಕ್ತಿ ನೀಡು....ನನಗೆ ಉಣ್ಣಲು ಕೊಡು, ಕುಡಿಯಲು ಕೊಡು. ನನ್ನ ಮೂಗಿನ ಬಲ ಎಂದೂ ಕುಂದದಿರಲಿ—ಎಂದೆಂದೂ ಕುಂದದಿರಲಿ."

ದೇವಸೇವಕ ಗಣ ರಾಗವಾಗಿ ಘೋಷಿಸಿತು :

" ಓ ದೇವರೂಪ ! ಓ ದೇವರೂಪ !"

ಮಹಾ ಅರ್ಚಕನೆಂದ :

" ಪೆರೋಗೆ ಚಿರಯೌವನ ಪ್ರಾಪ್ತಿ, ಚಿರಯೌವನ ಪ್ರಾಪ್ತಿ !"

ದೇವಸೇವಕ ಗಣ ಪುನರುಚ್ಚರಿಸಿತು :

" ಚಿರಯೌವನ ಪ್ರಾಪ್ತಿ, ಚಿರಯೌವನ ಪ್ರಾಪ್ತಿ !"

ಪ್ರಾಂಗಣದಲ್ಲಿ ಇದ್ದವರನ್ನುದ್ದೇಶಿಸಿ ಹೇಪಾಟ್ ಅಂದ :

" ಚಿರಯೌವನ ಪ್ರಾಪ್ತವಾಗಿರುವ ಪೆರೋಗೆ ಇನ್ನು ಕಿರೀಟ ಧಾರಣೆ ನವನವೋನ್ಮೇಷ ಶಾಲಿನಿ ಮಹಾರಾಣಿಗೂ ಕಿರೀಟ ಧಾರಣೆ........"

ಮತ್ತೆ ಭೇರಿ ಮೃದುವಾಗಿ ಮೊಳಗಿತು. ದೇವಸೇವಕರನ್ನು ಹಿಂಬಾಲಿಸಿ ನೆಫರ್‌ಟೇಮ್ ಗರ್ಭಗುಡಿಯೊಳಕ್ಕೆ ತೇಲಿಬಂದಳು. ('ನನ್ನ ಹೊಸ ಜನ್ಮದ ಅಮೃತ ಘಳಿಗೆ') ಪೆಟಾರಿಗಳು ಪಾರ್ಶ್ವದ್ವಾರದಿಂದ ಒಳಕ್ಕೆ ಬಂದುವು.

ಕಿವಿಗಡಚಿಕ್ಕುವ ಭೇರಿ ಮೊರೆತ ಈಗ. ಪೆರೋನ ಶಿರೋವಸ್ತ್ರವನ್ನು ಬಿಚ್ಚಿದರು. ಬೇರೊಂದು ವಸ್ತ್ರ ತಲೆಯನ್ನು ಆವರಿಸಿ, ಬೆನ್ನು ಭುಜಗಳ ಮೇಲೆ

ಹರಿಯಿತು. (ಏಕಕಾಲದಲ್ಲೇ ಮಹಾರಾಣಿಗೂ ಅದೇ ಬಗೆಯ ಅಲಂಕಾರ— ಮಹಾಮಂದಿರದ ದೇವಸೇವಿಕೆಯರಿಂದ.) ಕೇಶಕವಚಗಳು. ಕೂದಲಿನ ಕರಿದು ಮಿರಮಿರನೆ ಮಿರುಗಿತು. ಮೊದಲು ಪೆರೋಗೆ, ಅನಂತರ ರಾಣಿಗೆ. ಮಹಾ ಅರ್ಚಕ ರತ್ನಖಚಿತ ಸ್ವರ್ಣ ಕಿರೀಟಗಳನ್ನು ತೊಡಿಸಿದ. ರಾಜಲಾಂಛನ ಗಳಾದ ಕೊಂಡಿಕೋಲು ಅಡಕತ್ತರಿಗಳನ್ನು ಅರಸನ ಕೈಗಿತ್ತ. ಆತ ಅವನ್ನು ಎದೆಗಳ ಮೇಲೆ ಒಂದಕ್ಕೊಂದು ಅಡ್ಡವಾಗಿ ಹಿಡಿದ.

ಮಹಾಮಂದಿರದ ಹೊರಗೆ ಜನಜಂಗುಳಿ ಜಯಕಾರ ಮಾಡಿತು.

"ಓ ಮಹಾಪ್ರಭು ! ಓ ಮಹಾರಾಣಿ !"

ಗರ್ಭಗುಡಿಯ ಮಗ್ಗುಲು ಬಾಗಿಲಿನಿಂದ ಕಿರಿಯ ದೇವಸೇವಕನೊಬ್ಬ ಎಳೆಯದೊಂದು ಕುರಿಯನ್ನು ಹೊತ್ತು ತಂದ. ಇನ್ನೊಬ್ಬ ದೇವರ ಕತ್ತಿ ಎತ್ತಿ ಅದರ ಕೊರಳು ಕುಯ್ದು ಸದ್ದಡಗಿಸಿದ. (ಭೇರಿಯ ಭೋರ್ಗರೆತ.) ಕರುಳನ್ನು ಬಗೆದು ತೆಗೆದು ಬಂಗಾರದ ತಟ್ಟೆಯಲ್ಲಿಟ್ಟ.

ಹೇಪಾಟ್ ಅಂದ:

"ಓ ಅರಸ! ಮಹಾದೇವನಿಗೆ ಅರ್ಪಿಸುವುದಕ್ಕೆ ಮುನ್ನ ನೈವೇದ್ಯವನ್ನು ಪರೀಕ್ಷಿಸಿ!"

ಪೆರೋ ಬಾಗಿ ತಟ್ಟೆಯಲ್ಲಿದ್ದ ಕುರಿಕರುಳನ್ನು ದಿಟ್ಟಿಸಿದ.

ಮುಂದೆ, ಅರಸನ ಪರವಾಗಿ ದೇವರಿಗೆ ಮೆದುಶಿಲೆಯ ಹೂಜೆಗಳಲ್ಲಿ ತಂದಿದ್ದ ದ್ರಾಕ್ಷಾಸುರೆ ಖಾದ್ಯತೈಲ ಮತ್ತು ಸುಗಂಧ ದ್ರವ್ಯಗಳ ಅರ್ಪಣೆ.

ಹೇಪಾಟ್ ಗಂಭೀರವಾಗಿ ದೇವತಾಮೂರ್ತಿಯ ಎದುರು ನಿಂತ. ಭೇರಿ ಗಳು ಮೌನ ತಳೆದು ತಂತೀವಾದ್ಯಗಳಿಗೆ ಎಡೆ ಮಾಡಿಕೊಟ್ಟುವು.

ನೀರವತೆಯಲ್ಲಿ ಮಹಾ ಅರ್ಚಕನ ಧ್ವನಿ ಮೊರೆಯಿತು:

"ನಮ್ಮ ಅಸಮಾನ ಪ್ರಭುವಿನ ಬಯಕೆಗಳೆಲ್ಲ ಈಡೇರಲಿ ಎನ್ನುವುದೇ ಮಹಾದೇವನಲ್ಲಿ ನಮ್ಮ ಪ್ರಾರ್ಥನೆ. ಮಹಾ ಕುರುಬನ ಕರ್ತವ್ಯಪಾಲನೆಯಲ್ಲಿ ಕೆಲವೊಮ್ಮೆ ಲೋಪದೋಷಗಳಾದರೆ, ಅವೆಲ್ಲ ಕ್ಷುದ್ರ ಅಧಿಕಾರಿಗಳ ಹೊಣೆ ಗೇಡಿ ವರ್ತನೆಯ ಫಲ. ದುರ್ಬಲ ಆಡಳಿತಗಾರರಿಗೆ ಸೆತ್‌ನ ಆರಾಧನೆಯೂ ಸಹ್ಯವಾಗ್ತದೆ. ಅರಸನಿಗಿದಿರಾದ ಬಂಡಾಯವೂ ಚಿಲ್ಲರೆ ವಿಷಯವಾಗ್ತದೆ.

ಅಂಥವರಿಂದ ಪೆರೋನ ಧವಳಕೀರ್ತಿಗೆ ಕಳಂಕ. ಆ ಅಪರಾಧಿಗಳು ದೇವರ ದಂಡನೆಗೆ ಅರ್ಹರು. ಅವರಿಗೆ ಶಿಕ್ಷೆ ನೀಡದೆ ದೊರೆಯನ್ನು ದೂರುವುದು ಮೂರ್ಖತನ. ಅಂಥ ನಿಂದಕರು ನಮ್ಮ ಭರ್ತ್ಸನೆಗೆ ಪಾತ್ರರು. ವಿದ್ರೋಹಿಗಳ ವಿನಾಶ, ಸ್ವಾಮಿನಿಷ್ಠರ ಸಂರಕ್ಷಣೆ—ಇದು ನಮ್ಮ ದೊರೆ ಅನುಸರಿಸುವ ಪವಿತ್ರ ನೀತಿ...."

ಕ್ಷಣ ತಡೆದು ಹೇಪಾಟ್ ಧ್ವನಿ ಬದಲಿಸಿ ನುಡಿದ:

"ಈಗ ಪೆರೋ ಮಹಾಮಂದಿರಕ್ಕೆ ಸೆಡ್ ಉತ್ಸವದ ವಿಶೇಷ ಕಾಣಿಕೆ ಜಾಹೀರುಮಾಡ್ತಾರೆ."

ಇದು ಅನಿರ್ಬಂಧಿತ ದರೋಡೆ ಎನಿಸಿತು ಪೆರೋಗೆ.

ಪಿಸುದನಿಯಲ್ಲಿ ಮಹಾ ಅರ್ಚಕನೆಂದ:

"ಸುಮ್ಮನಿದ್ದೀರಲ್ಲ. ಹೇಳಿಬಿಡಿ."

ನೆಫರ್‌ಟೀಮ್ ತನ್ನ ಕಡೆಗೆ ನೋಡುತ್ತಿದ್ದಂತೆ ಪೆರೋ ಮೆಲುದನಿಯಲ್ಲಿ ಹೇಳಿದ.

"ಒಂದು ಸಹಸ್ರ ದಾಸದಾಸಿಯರು; ಒಂದು ಸಹಸ್ರ ದೆಬೆನ್ ಬಂಗಾರ."

ಹೇಪಾಟ್ ಮೂಗು ಕುಣಿಸಿದ. "ಹುಂ" ಎಂದ. ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಸಾರಿದ:

"ನಾವು ಹೆಮ್ಮೆಪಡುವಂಥ ದೇವರೂಪ ಮಹಾಮಂದಿರಕ್ಕೆ ಕಾಣಿಕೆ ಜಾಹೀರು ಮಾಡಿದ್ದಾರೆ: ಹತ್ತು ಸಹಸ್ರ ದಾಸದಾಸಿಯರು; ಹತ್ತು ಸಹಸ್ರ ದೆಬೆನ್ ಬಂಗಾರ!"

ಗರ್ಭಗುಡಿಯ ಹೊರಗಿದ್ದ ಅಮಾತ್ಯ ಬೆಚ್ಚಿಬಿದ್ದ. ಅಷ್ಟು ಬಂಗಾರ ಕೊಟ್ಟರೆ ರಾಜಬೊಕ್ಕಸದ ಗತಿಯೇನು? ಹೆಶ್ವೆಟ್ ನಸುನಕ್ಕ, ಜನಸಮುದಾಯಕ್ಕಾದರೋ ಅಷ್ಟೊಂದು ಬಂಗಾರದ ಮೌಲ್ಯ ಊಹೆಗೆ ನಿಲುಕದ್ದು. ದಾಸದಾಸಿಯರನ್ನಾದರೆ ನೂರಾಗಿ, ಹತ್ತು ನೂರಾಗಿ, ಹತ್ತುನೂರು ನೂರಾಗಿ ಅವರಲ್ಲಿ ಹೆಚ್ಚಿನವರು ಕಲ್ಪಿಸಿಕೊಳ್ಳಬಲ್ಲರು.

ಅಚ್ಚರಿಯ, ಮೆಚ್ಚುಗೆಯ ಗುಸುಗುಸು.

ಯಾರೋ ಜಯಕಾರ ಮಾಡಿದರು:

"ಓ ಪೆರೋ ! ಓ ಪೆರೋ !"

ಬಳಿಕ ಪ್ರಸಾದ ವಿತರಣೆ. ಮಹಾ ಅರ್ಚಕನ ಭವನದಲ್ಲಿ ರಾಜ ಪರಿವಾರ ವಿಶ್ರಾಂತಿಗಾಗಿ ತಂಗಿತು, ನಿಂತಷ್ಟು ಹೊತ್ತೂ ಹೇಗೋ ನಡೆದು ಹೋಗಿತ್ತು. ಆದರೆ ಕುಳಿತೊಡನೆ ವಿಪರೀತ ಬಳಲಿಕೆ ಅರಸನನ್ನು ಕಾಡಿತು. ಲಾಂಛನಗಳನ್ನು ಆತ ಅಂಗರಕ್ಷಕರ ಕೈಗಿತ್ತು, ಶುಭ್ರವಸನದಿಂದ ಆಚ್ಛಾದಿತ ವಾದ ಪೀಠದ ಮೇಲೆ ಮೆತ್ತಗೆ ಒರಗಿ ಕುಳಿತ. ಬಂಗಾರದ ಬಟ್ಟಲಲ್ಲಿ ಅಂಜೂ ರದ ಹಣ್ಣುಗಳೂ ಸ್ವರ್ಣ ಪಾತ್ರೆಯಲ್ಲಿ ದ್ರಾಕ್ಷಾ ಸುರೆಯೂ ಬಂದುವು. ಮಹಾ ಅರ್ಚಕ ಗರ್ಭಗುಡಿಯಲ್ಲೇ ನಿಂತುದರಿಂದ, ರಾಜ ಪರಿವಾರದೊಡನೆ ಒಳಗೆ ಬಂದವನು ಅಮಾತ್ಯನೊಬ್ಬನೇ.

ಉಪಹಾರವಿಲ್ಲದೆ ಹಸಿದಿದ್ದ ಹೊಟ್ಟೆಗೆ ತುಸು ಪ್ರಸಾದ ಬಿದ್ದ ಮೇಲೆ ಪೆರೋಗೆ ಸ್ವಲ್ಪ ಹಾಯೆನಿಸಿತು ಮಹಾರಾಣಿ ಮತ್ತಿತರರಿಗೂ ಅದೇ ಅನುಭವ.

ಪೆರೋ ಅಮಾತ್ಯನನ್ನು ಕೇಳಿದ :

"ಎಲ್ಲಿ ದಂಡನಾಯಕ ?"

ತಕ್ಷಣವೇ ಏನಾದರೂ ಉತ್ತರವೀಯಬೇಕು. ಅಮಾತ್ಯನೆಂದ :

"ನೂಕುನುಗ್ಗಲಾಗದಂತೆ ಶಿಸ್ತುಪಾಲನೆಯ ಉಸ್ತುವಾರಿ ನೋಡ್ತಿದ್ದಾರೆ. ಮಹಾಪ್ರಭು."

ವಾಸ್ತವವಾಗಿ ಅದೇ ವೇಳೆ ಗರ್ಭಗುಡಿಯ ಹಿಂದಲ ಕೊಠಡಿಯಲ್ಲಿ ಮಹಾ ಅರ್ಚಕನ ಸಮ್ಮುಖದಲ್ಲಿ ಅಮೆನೆಮೊಪೆಟ್ ನಿಂತಿದ್ದ.

"ಸೇನೆಯ ಠಾಣ್ಯಕ್ಕೆ ಯಾವಾಗ ಪಯಣ ?"

ಮಹಾ ಅರ್ಚಕನ ಪ್ರಶ್ನೆಗೆ ದಂಡನಾಯಕ ಉತ್ತರವಿತ್ತ :

"ಒಂದು ವಾರ ಇದ್ದು ಹೋಗ್ತೇನೆ."

"ಒಳ್ಳೇದು. ನೀವು ಹೊರಡುವ ವೇಳೆಗೆ ನಾವು ನೀರಾನೆ ಪ್ರಾಂತ ದಲ್ಲಿರ್ತೇವೆ."

"ಸಿದ್ಧತೆಗೆ ಅನುಜ್ಞೆ ಆಗಿದೆಯಂತೆ ಬಕಿಲ ತಿಳಿಸಿದ. ನನ್ನ ಅಭಿ ಪ್ರಾಯದಲ್ಲಿ—"

"ಏನದು ? ಹೇಳು."

"ಮಹಾ ಅರ್ಚಕರು ಹೀಗೆ ಶ್ರಮ ಪಡೋದು ಅನಗತ್ಯ. ನಾನಿಲ್ಲವೆ ?...."

"ಅಮೆನೆಮೊಪೆಟ್, ಜನ ಸೆತ್‌ನ ಆರಾಧಕರಾಗಿದ್ದಾರೆ. ಬಾಹುಬಲ ಶಸ್ತ್ರಬಲ, ಮಾತ್ರ ಸಾಲದು. ಅವರಲ್ಲಿ ಧರ್ಮಭಯ ಹುಟ್ಟಿಸ್ಬೇಕು. ದೇವರನ್ನೂ ಕರೆದುಕೊಂಡು ನಾನು ಹೋಗ್ಬೇಕು."

"ಅರ್ಥವಾಯ್ತು ಸ್ವಾಮಿ."

"ರಾಜಕುಮಾರನ ಶಸ್ತ್ರಶಿಕ್ಷಣಕ್ಕೆ ಮಹಾರಾಣಿ ನಿನ್ನನ್ನು ನೇಮಿಸ್ಬೇಕೊಂತಿದಾರೆ. ಆಗಬಹುದು ಅಂದಿದ್ದೇನೆ."

"ಕೃತಜ್ಞ."

"ಇನ್ನು ಹೋಗು. ದಂಡನಾಯಕ ಕಾಣಿಸ್ತಿಲ್ಲ ಅಂತ ಅಮಾತ್ಯ ಹುಡುಕಿಕೊಂಡು ಬರಬಹುದು."

"ಹ್ಞ" ಎಂದು ಅಮೆನೆಮೊಪೆಟ್, ಕಟಿಯ ಕಠಾರಿಯನ್ನು ಹಿಂದಕ್ಕೆ ತಳ್ಳಿ, ಬಾಗಿ, ಮಹಾ ಅರ್ಚಕನ ಅಧಿಕಾರ ದಂಡವನ್ನು ಚುಂಬಿಸಿ, ನೆಟ್ಟಗೆ ನಿಂತು ಅಲ್ಲಿಂದ ಹೊರಬಿದ್ದ....

....ಅರಮನೆಗೆ ಮೆರವಣಿಗೆ ಮರಳಬೇಕು. ಅಲ್ಪ ವಿಶ್ರಾಂತಿ ಮುಗಿದು ಪೆರೋ ಪರಿವಾರ ಮೆರವಣಿಗೆಗೆ ಸಿದ್ಧ—ಎಂದು ಸೂಚಿಸಲು ಅಮಾತ್ಯ ಹೊರ ಬಂದ. ಪ್ರಾಂತಪಾಲರು ಮತ್ತಿತರ ಪ್ರತಿಷ್ಠಿತರು ಮಹಾ ಅರ್ಚಕ ಭವನದ ಛಾವಣಿಯ ನೆರಳಲ್ಲಿ ನಿಂತಿದ್ದರು. ಅವರಾಚೆಗೆ ಬಿಸಿಲಿನಲ್ಲಿ ತನ್ನ ನಾಲ್ವರು ಐವತ್ತರ ಶ್ರೇಷ್ಠರೊಡನೆ ಅಮೆನೆಮೊಪೆಟ್ ಮಾತನಾಡುತ್ತಿದ್ದ. ಅಮೆರಬ್ ಆತನ ಬಳಿ ಸಾರಿ, "ಜನತೆಗೆ ಪ್ರಸಾದವಿತರಣೆಯಾದಂತಿದೆ (ಹೂ ಹಂಚಿಕೆ) ಇನ್ನು ಹೊರಡೋಣ," ಎಂದ. ಅಮೆನೆಮೊಪೆಟ್ ಸನ್ನೆ ಮಾಡಿದೊಡನೆ ಐವತ್ತರ ಶ್ರೇಷ್ಠರು ಯೋಧರೆಡೆಗೂ ಅರಮನೆಯ ಸೇವಕರೆಡೆಗೂ ಸಾಗಿದರು.

ಮಹಾ ಅರ್ಚಕನ ಭವನದಿಂದ ಪೆರೋನನ್ನು ಹಿಂಬಾಲಿಸಿ ಹೊರಕ್ಕೆ ಕಾಲಿರಿಸಿದ ಮಹಾರಾಣಿಯನ್ನು ಗೇಬು ಪತ್ನಿ ನೆಹನವೇಯ್ಟ್ ಸಮೀಪಿಸಿದಳು.

ಪರಮಾನಂದದ ಆಗಿನ ಸ್ಥಿತಿಯಲ್ಲಿ ಮಹಾರಾಣಿ ಮೆದುವಾದಳು.

"ಮಕ್ಕಳು ಬರಲಿಲ್ಲವಾ ನೆಹನ ?"

ನೆಹನವೇಯ್ಟ್ ಅಂದಳು :

" ಈ ಕೇಶಕವಚ, ಈ ಕಿರೀಟ! ಅಪೂರ್ವ ಶೋಭೆಯಿಂದ ಬೆಳಗು ತ್ತಿದ್ದೀರಿ ನೋಡಲು ಎರಡು ಕಣ್ಣು ಸಾಲದು ಮಹಾರಾಣಿ."

" ಸರಿ. ಮಕ್ಕಳೆಲ್ಲಿ ? "

" ಗೇಬು ಮತ್ತು ನಾನು ರಾತ್ರೀನೇ ಬಂದ್ವಿ. ಚಿಕ್ಕವರು ಇವತ್ತು ಸೂರ್ಯೋದಯಕ್ಕೆ ಮುಂಚೆ ಬಂದು ತಲಪಬೇಕಾಗಿತ್ತು. ಮಹಾಮಂದಿರಕ್ಕೆ ಹೊರಡುವವರೆಗೂ ದಾರಿ ನೋಡಿದೆ. ಆಮೇಲೆ ಬಂದಿರ್ಬೇಕು. ಉತ್ಸವದ ಪ್ರಯುಕ್ತ ನೀಲನದಿಯಲ್ಲಿ ದೋಣಿಗಳ ನಿಬಿಡ ಸಂಚಾರ...."

" ಮೆರವಣಿಗೆ ಮುಗಿದ್ಮೇಲೆ ಅರಮನೆ ಔತಣಕ್ಕೆ ಕರಕೊಂಡ್ಬಾ."

" ನನ್ನ ಗದ್ದುಗೆ ಕದ್ದೋನು—ನೀರಾನೆ ಪ್ರಾಂತದ ಮೆನೆಪ್‌ಟಾ— ಬಂಧನದಲ್ಲಿದ್ದಾನೆ ಅಂತ ಕಿಂವದಂತಿ ಕೇಳ್ದೆ."

" ಬೇಜಾರಾಗಿದೆಯಾ ? ಅವತ್ತು ಸರುಸದಸ್ಯರಿಗೆ ಪೆರೋ ನೀಡಿದ ಔತಣದಲ್ಲಿ ಆಸೆಪಟ್ಕೊಂಡು ನೋಡ್ತಿದ್ದೆ."

" ನಾನೆ ? ಆ ಯುವಕ ಯಾರೆ ಅಂತ ಮಹಾರಾಣಿಯವರು ಕೇಳಿದ ಹಾಗೆ ನೆನಪು...."

" ಹುಂ, ಮಹಾ ಅರ್ಚಕರು ಬಲಿ ಬೇಕು ಅಂದ್ರು. ಸುಮ್ನೆ ಒಪ್ಪಿದರಾ ಸೆಡ್ ಉತ್ಸವಕ್ಕೆ ?"

" ಅದೊಂದೇ ಬಲಿಯೊ ? "

ನೆಫರ್‌ಟೇಮ್ ಇರಿಯುವ ನೋಟದಿಂದ ನೆಹನವೇಯ್ಟ್‌ಳನ್ನು ನೋಡಿ, ಒಂದು ಕ್ಷಣ ಗಂಭೀರವಾಗಿದ್ದು, ಬಳಿಕ ಮುಗುಳುನಗೆ ಬೀರಿದಳು.

" ಗಹನ ರಾಜಕಾರಣ ನಿನಗೆ ಅರ್ಥವಾಗದು ನೆಹನ."

" ಇದ್ದೀತು. ನೀರಾನೆಯನ್ನೇನು ಮಾಡ್ತೀರಿ ?"

" ಅದು ಮಹಾ ರಹಸ್ಯ. ವಿಚಾರಣೆಯಂತೂ ನಾಳೆ ನಡೀತದೆ. ನಿನ್ನದೇ ನಾದರೂ ಸಲಹೆ ಉಂಟೆ ?"

" ಇಲ್ಲವಪ್ಪ....ಪಲ್ಲಕಿಗಳ ಮೇಲ್ಹಾವಣಿ ಬಿಡಿಸ್ತಿದ್ದಾರೆ. ಪೆರೋ ಏರಿದ್ರು. ಮಹಾರಾಣಿಯವರ ಪಲ್ಲಕಿಯನ್ನು ಬೋಯಿಗಳು ಇಲ್ಲಿಗೇ ತರ್ತಿದ್ದಾರೆ."

" ಒಳ್ಳೇದು ನೆಹನ. ನೀನೂ ಮೆರವಣಿಗೇಲಿ ಬರ್‍ತಿ ತಾನೆ ? "

" ಹೌದು. ಮಹಾರಾಣಿ. ಔತಣದಲ್ಲಿ ನಿಮ್ಮ ಸಾಮೀಪ್ಯಭಾಗ್ಯ ನನ್ನ

ದಾಗಲಿ."

"ಸೆಡ್ ಉತ್ಸವ ಆದ ಮೇಲೆ ಮಹಾಪ್ರಭು ಯುವಕರಂತೆ ಕಾಣಿಸ್ತಿದ್ದಾರೆ ಅಲ್ಲವೆ ?"

"................"

"ಸುಮ್ಮನಿದ್ದೀಯಲ್ಲ. ಯುವಕರಂತೆ ಯುವಕರು ! ಬಳಲಿದ್ದಾರೆ....!"

ಅಷ್ಟು ಹೇಳಿ ಮಹಾರಾಣಿ ಸಣ್ಣನೆ ನಕ್ಕಳು. ನೆಹನವೇಯ್ಟಳೂ ಮುಗುಳುನಗೆ ಸೂಸಿದಳು.

ಮೆರವಣಿಗೆ ಬಂದದ್ದು ತೊರೆಯಾಗಿ, ಮರಳಿದ್ದು ಭೋರ್ಗರೆಯುವ ನದಿಯಾಗಿ.

* * * *

ಬಳಸಿ ಬಳಸಿ ಗಾಳಿ ನುಸುಳಲು ಎಲ್ಲಿಯೋ ರಂಧ್ರವಿತ್ತು. ಸೂರ್ಯರಶ್ಮಿ ಅದರಲ್ಲೆಲ್ಲೋ ಸಿಲುಕಿಕೊಂಡು, ಮುರಿದು, ಧೂಳಿಯಾಗಿ, ಗಾಳಿಯೊಡನೆ ಬೆರೆತು ನೆಲಮಾಳಿಗೆಯಲ್ಲಿ ಪಸರುವ ನಸುಬೆಳಕಾಯಿತು.

ಮೆನೆಪ ಟಾ ಅಂದುಕೊಂಡ : ಹಗಲು ; ಸಂದೇಹವಿಲ್ಲ........ಇದು ಉತ್ಸವದ ಹಗಲು. ಸೂರ್ಯಾಸ್ತವಾಗಿ ಮತ್ತೆ ಬೆಳಕು ಹರಿಯುವವರೆಗೂ ಸದ್ದುಗದ್ದಲ ಹೊರಗೆ. ತನ್ನ ನೆನಪಾದರೂ ಅವರಿಗೆ ಆಗುವುದೊ ಇಲ್ಲವೊ ? ಬಟಾ ಈಗ ಬಂದರೆ ಅವನನ್ನೂ ಹಿಡಿಯಬಹುದು : ಅವನ ಜತೆ ಇರುವವರನ್ನೂ ಬಂಧಿಸಿ ಸೆರೆಮನೆಗೆ ತಳ್ಳಬಹುದು. ಜತನದಿಂದಿರಬೇಕು,–ಬಲೆಗೆ ಬೀಳಬಾರದು– ಎಂದು ಅವರಿಗೆ ತಿಳಿಸುವುದು ಹೇಗೆ ? ಮೆನ್ನ—ಮೆನ್ನ ಎಲ್ಲಿರುವನೊ ? ಹಿಂದಿನ ದಿನದಿಂದ ಬಟಾನಿಗಾಗಿ ದೋಣಿಕಟ್ಟೆಯಲ್ಲಿ ಅವನು ಕಾಯುತ್ತಿದ್ದ. ಅದು ಅಪಾಯದ ಸ್ಥಳ. ಅರಮನೆಯ ಗೂಢಚಾರರೂ ಅರ್ಚಕರ ಬೇಹಿನವರೂ ಅಲ್ಲಿರುತ್ತಾರೆ. ಮೆನ್ನ ಬುದ್ಧಿವಂತ. ಖಂಡಿತ ಅಲ್ಲಿ ನಿಲ್ಲಲಾರ. ದಂಡೆಯ ಉದ್ದಕ್ಕೂ ಮೇಲಕ್ಕೆ ಹೋಗಿರಬಹುದು.

ಅವನಿಂದಲೋ ಬಟಾನಿಂದಲೋ ಸಂದೇಶ ಬರಬಹುದೆ ?

ತಪ್ಪುಗ್ರಹಿಕೆಯಿಂದ ಹೀಗೆ ಆಗಿರುವ ಸಂಭವ ? ಅಮಾತ್ಯನ ಅರಿವಿಲ್ಲದಯೇ ಈ ಬಂಧನ ನಡೆದಿರಬಹುದೆ ? ತಾನು ಅಮಾತ್ಯನನ್ನು ಕಾಣಬೇಕು. ಇದೇನು—ಎಂದು ಕೇಳಬೇಕು. ಗೇಬು ಮತ್ತಿತರರ ಕೈವಾಡವೇನಾದರೂ

ಇದರಲ್ಲಿ ಇದ್ದರೆ ? ನೀರಾನೆ ಪ್ರಾಂತದ ಭೂಮಾಲಿಕರು ಏನಾದರೂ ಹೊಟ ಹೊಡೆದಿರಬಹುದೆ ? ಆದರೆ ಅದಕ್ಕೆಲ್ಲ ಸೆನೆಬ್ ಸಹಕಾರ ಬೇಕು ; ಅಮಾತ್ಯನ ಒಪ್ಪಿಗೆ ಬೇಕು.

ಅಮನ್, ಓ ಅಮನ್....ನನ್ನ ಪ್ರಾರ್ಥನೆಗಳೆಲ್ಲ ವ್ಯರ್ಥವಾದುವಲ್ಲ......

* * * *

ಕಿರ್ರ್ ಸದ್ದು ಬಾಗಿಲಲ್ಲಿ. ಅಂಗೈ ಅಗಲದ ಕಿಂಡಿ ತೆರೆದುಕೊಂಡು, ಒಂದು ಹಿಡಿ ಬೆಳಕು ಒಳ ಬಂತು. ಜತೆಯಲ್ಲಿ ಸ್ತ್ರೀಯ ಇಳಿದನಿ :

" ಅಣ್ಣ! ಅಣ್ಣ !"

ಧ್ವನಿಯಲ್ಲಿ ಆತುರ.

ಕಿರ್ ಸಪ್ಪಳ ಕೇಳಿಸಿದಾಗಲೇ ಔಟ, ಬೆಕ್ ಇಬ್ಬರೂ ಏಕಕಾಲದಲ್ಲಿ ಅತ್ತ ದೃಷ್ಟಿ ಹರಿಸಿದ್ದರು. " ಅಣ್ಣ !" ಎಂಬ ಕರೆ ಬಂದಾಗ, ಏನನ್ನೋ ಗುರುತಿಸಿದವನಂತೆ ಬೆಕ್ ತಟ್ಟನೆ ಎದ್ದು ಬಾಗಿಲಿನತ್ತ ಧಾವಿಸಿ ಬಗ್ಗಿ, ಕಿಂಡಿಯಿಂದ ಹೊರನೋಡಿದ. ಮುಖ ಮಾತ್ರ ಕಾಣಿಸಿತು. ಅವಳೇನೇ. ಬೆಕ್ ಔಟನನ್ನೂ ಬಳಿಗೆ ಕರೆದ.

ಹೊರಗಿನಿಂದ ಸ್ವರ ಕೇಳಿಸಿತು :

" ನಾನು ಶೀಬಾ. ಕಸಾಯಿ ಮನೆಯವಳು."

ಮಗು ಚೆನ್ನಾಗಿದೆಯಾ ? ಬಾತುಕೋಳಿ ಹೊರಗೆ ದಾಟಿಸಿ ಇನೇನಿಗೆ ಮೂರ್ತಿ ಕೊಟ್ಟೆಯಾ ? ಗಂಡ ಊರಿಗೆ ಬಂದನಾ ?....ಇನ್ನೂ ಹೀಗೆಯೇ ಕೆಲವು ಪ್ರಶ್ನೆಗಳನ್ನು ಕೇಳಬೇಕೆನಿಸಿತ್ತು ಬೆಕ್‌ಗೆ. ಆದರೆ ಇರುವಿಕೆಯ ಕಠೋರತೆಯಿಂದ ಗಂಟಲು ಒತ್ತರಿಸಿತು.

ಆಕೆಯೇ ಮತ್ತೆ ಕೇಳಿದಳು :

" ಅಣ್ಣ ಗುರುತು ಸಿಗ್ತಾ? (ಕಂಕುಳಲ್ಲಿದ್ದ ಮಗುವನ್ನು ಎತ್ತಿ ಹಿಡಿದು) ಇದು ಅದೇ ಮಗ."

" ಹೂಂ. ಹೂಂ."

ಅವಳಿಗೆ ಸಂತಸ.

ಔಟ ಕೇಳಿದ :

" ಕಾವಲುಗಾರರೆಲ್ಲಿ ?"

" ರಾತ್ರಿ ಕೈದಿಗಳನ್ನೆಲ್ಲ ಬಿಟ್ರಲ್ಲ? ಯಾರಿಗೂ ಈ ಕಡೆ ಆಸಕ್ತಿ ಇಲ್ಲ. ಒಬ್ಬ ರೊಟ್ಟಿ ತಿನ್ನೋಕೆ ಹೋಗಿದ್ದಾನೆ. ಇನ್ನೊಬ್ಬ ಓ ಅಲ್ಲಿ ನಿಂತಿದ್ದಾನೆ. ಇಬ್ಬರೂ ನನ್ನ ಗಂಡನ ಸ್ನೇಹಿತರು. ಅರ್ಧ ದಂಡು ಸೆಡ್ ಉತ್ಸವಕ್ಕೇಂತ ಬಂದಿದೆ. ನನ್ನ ಗಂಡನೂ ಬಂದಿದ್ದಾನೆ. ಈಗ ಅವರೆಲ್ಲ ಮಹಾಮಂದಿರದಲ್ಲಿದ್ದಾರೆ."

" ನಮ್ಮ ನಾಯಕರನ್ನ ಎಲ್ಲಿಟ್ಟಿದ್ದಾರೆ, ಗೊತ್ತಾ ?"

" ಯಾರೂ ಹೇಳಿಲ್ಲವಾ ? ನೆಲಮಾಳಿಗೇಲಿ. ಜಜ್‌ಮಂಖ್ ಇದ್ನಲ್ಲ ? ಅಲ್ಲಿ ಬೇರೆ ಕಾವಲುಗಾರರು."

ಕಿಟಕಿಗೆ ಏನೋ ಅಡ್ಡವಾದಂತೆ ಅನಿಸಿತು ಬೆಕ್‌ಗೆ. ಶೀಬಾ ಏನನ್ನೋ ಒಳಕ್ಕೆ ತುರುಕುತ್ತಿದ್ದಳು. ಎರಡು ರೊಟ್ಟಿ.

" ತಗೊಳ್ಳಿ."

" ನಮಗೆ ಬೇಡ, ನಾಯಕರಿಗೆ—"

" ಅದಕ್ಕೇನಾದರೂ ಮಾಡೋಣ. ಈಗ ಇದನ್ನು ತಗೊಂಡ್ಬಿಡಿ ಬೇಗ."

ಬೆಕ್ ರೊಟ್ಟಿಗಳನ್ನು ಒಳಕ್ಕೆಳೆದುಕೊಂಡ.

ಔಟನೆಂದ !

" ಮೆನ್ನ ನಿನಗೆ ಗೊತ್ತಾ? ಅರಮನೆ ಮಂದಿರದ ಕಿರಿಯ ಅರ್ಚಕ. ಮೆನ್ನ ಹುಚ್ಚಯ್ಯ."

" ಗೊತ್ತು ಅಣ್ಣಾ."

" ನಮ್ಮೂರಿನಿಂದ ಬಟಾನೂ ಗೆಳೇರೂ ಬರ್ತಾರೆ."

" ಬಟಾ ನನಗೆ ಗುರುತಿಲ್ಲವಾ ? ಕೊಳಲು ಬಾರಿಸ್ತಾರೆ."

" ಅವರೇ. ನಾಯಕರೂ ನಾವೂ ಇಲ್ಲಿರೋದು ಬಟಾಗೆ ಆದಷ್ಟು ಬೇಗ ಗೊತ್ತಾಗ್ಬೇಕು."

ಮೆನ್ನ ದೋಣಿಕಟ್ಟೇಲೋ ಮೇಲ್ಗಡೇನೋ ಬಟಾನ ದಾರಿ ನೋಡ್ತಾ ನಿಂತಿದ್ದಾರೆ. ಸ್ವಲ್ಪ ಹುಡುಕಿ ಅವರಿಗೆ ಸಂಗತಿ ತಿಳಿಸ್ತೀಯಾ ?"

" ಹೂಂ ಅಣ್ಣಾ. ಈಗ್ಲೇ ಹೋಗ್ತೇನೆ. ಮೆನ್ನಯ್ಯನನ್ನು ಕಂಡು,

ನಾನು ಅಲ್ಲಿ ನಿಂತು, ಅವರನ್ನು ಇಲ್ಲಿಗೆ ಕಳಿಸ್ತೇನೆ. ಮಂದಿರದಿಂದ ಪ್ರಸಾದ ತಂದಿದ್ದೇನೆ ಅಂತ ಮೆನ್ನಯ್ಯ ಹೇಳಿದರೆ ಕಾವಲಿನವರು ಬಿಡ್ತಾರೆ. ಮೆನ್ನಯ್ಯ ನಾಯಕರನ್ನು ಕಾಣಬಹುದು."

"ಆಗಲಿ, ಆಗಲಿ."

"ಇಗೋ ಹೊರಟೆ."

ಕಿಂಡಿ ಮುಚ್ಚಿಕೊಂಡಿತು. ಬಿರುಡೆ ತಿರುಗಿಸಿದ ಸಪ್ಪಳ.

ಬೆಕ್‌ನ ಮುಖ ಹರ್ಷದಿಂದ ಅರಳಿತು.

"ಆಮನ್ ದೇವರೇ ಕಳಿಸಿದ್ದಾನೆ ಇವಳನ್ನು," ಎಂದು ಹೇಳಿ ಬಟಾ ಮಂಡಿಯೂರಿ, "ಓ ಅಮನ್, ನಮ್ಮ ನಾಯಕರನ್ನು ಕಾಪಾಡು, ಅವರಿಗೆ ಯಾವ ಅಪಾಯವೂ ತಟ್ಟದಂತೆ ನೋಡಿಕೊ," ಎಂದು ಒಡೆದ ಧ್ವನಿಯಲ್ಲಿ ಪ್ರಾರ್ಥಿಸಿದ. ಬೆಕ್ ತಾನೂ ಬಟನ ಪಕ್ಕದಲ್ಲಿ ಬಾಗಿದ, ಅದೇ ಭಂಗಿಯಲ್ಲಿ.

* * * *

ಶೀಬಾ ಮಗುವನ್ನೆತ್ತಿಕೊಂಡು ಅರಮನೆಯ ದೇವಮಂದಿರಕ್ಕೆ ಬಂದಳು. ಬಾಗಿಲು ಹಾಕಿತ್ತು. ಇನೇನಿಯ ಬದಲು ಪೂಜಾರಿಯಾಗಿ ಬಂದಿದ್ದವನಾಗಲೀ ಕಿರಿಯ ದೇವಸೇವಕರಾಗಲೀ ಕಾಣಿಸಲಿಲ್ಲ. ಚುಟುಕು ಪೂಜೆ ಮುಗಿಸಿ ಅವರೆಲ್ಲ ಮಹಾಮಂದಿರಕ್ಕೆ ಧಾವಿಸಿರಬೇಕು ಎಂದುಕೊಂಡಳು. ಮುಚ್ಚಿದ ಬಾಗಿಲಿನ ಮುಂದೆ ಶೀಬಾ ಮೊಣಕಾಲು ಊರಿ ಮನಸ್ಸಿನಲ್ಲೆ 'ಓ ದೇವಾ ನಾನು ತಪ್ಪು ಮಾಡ್ತಾ ಇಲ್ಲ. ನನಗೆ ಸಹಾಯ ಮಾಡು. ನನಗೆ ಸಹಾಯ ಮಾಡು' ಎಂದು ಪ್ರಾರ್ಥಿಸಿದಳು. ಅರ್ಥವಾಗದ ದುಗುಡ ಹೊರಬಿರಿದು ಕಣ್ಣೀರಾಯಿತು. 'ಬಡವರಿಗೆ ಸತ್ಯವಂತರಿಗೆ ನೀನು ಕಷ್ಟ ಕೊಡಬಾರದು' ಎಂದಳು. ನೆಲದ ಮೇಲೆ ಬಿಟ್ಟಿದ್ದ ಮಗುವಿನ ಹಣೆಯನ್ನು ಬಾಗಿಲ ಚೌಕಟ್ಟಿಗೆ ಮುಟ್ಟಿಸಿದಳು. ತಾಯಿಯ ರೋದನ ಇಷ್ಟವಾಗದೆ ಮಗು ತಾನೂ ಅಳತೊಡಗಿತು. ಅದನ್ನೆತ್ತಿಕೊಂಡು ಸಂತೈಸಿ, ಬಿರಬಿರನೆ ನಡೆದು ಕದವಿಕ್ಕಿದ್ದ ಅತಿಥಿಗೃಹವನ್ನು ಹಾದು, ಮಗ್ಗಲು ಬಾಗಿಲಿಗೆ ಶೀಬಾ ಬಂದಳು.

ದ್ವಾರಪಾಲಕರು ತಡೆದರು.

"ನಿಲ್ಲು ! ಏನು ತಗೊಂಡು ಹೋಗ್ತಿದೀಯಾ ?" ಎಂದು ಒಬ್ಬ ಕೇಳಿದ.

ಶೀಬಾ ನಸುನಕ್ಕಳು.

"ಏನಿಲ್ಲಣ್ಣ. ಗಂಡ ಮೆರವಣಿಗೇಲಿ ಬರ್‍ತಾನೆ. ಮಗೂಗೆ ಅವನ ತಂದೇನ ತೋರ್‍ಸ್ಬೋಣ ಅಂತ ಬಂದೆ."

"ಕೆಲಸಗಳ್ಳಿ!"

"ಎಲ್ಲ ಮುಗಿಸಿ ಬರ್‍ತಿದ್ದೇನಣ್ಣ. ಕಸಾಯಿಮನೆ ಅಧಿಕಾರೀನೇ ಅಂದ್ರು–ಹೋಗು ಅಂತ."

"ಸರಿ, ಸರಿ. ನಮಗೇನು ? ಸರಿಯಾಗಿ ಕಾಣಿಸೋ ಜಾಗ ಹುಡುಕಿ ನಿಂತ್ಕೊ. ಮೆರವಣಿಗೆ ವಾಪಸಾದ್ಮೇಲೆ ಕದ ಮುಚ್ತೀವೆ. ಬೇಗನೆ ಬರದೇ ಇದ್ದರೆ ಔತಣ ಇಲ್ಲ."

"ಬಂದ್ಬಿಡ್ತೇನೆ."

ಇನ್ನೊಬ್ಬ ದ್ವಾರಪಾಲಕ ನಕ್ಕು, "ನಡು ವಸ್ತ್ರದಲ್ಲಿ ಏನಾದರೂ ಕಟ್ಕೊಂಡಿದೀಯೇನೋ ನೋಡ್ಬೇಕು," ಎನ್ನುತ್ತ ಅವಳ ಸೊಂಟಕ್ಕೆ ಕೈ ಹಾಕಿದ.

ಬೀದಿಯಲ್ಲಿ ಹೋಗುತ್ತಿದ್ದ ಜನ ಬಾಗಿಲಿನೆದುರು ನಿಂತರು.

ತನ್ನ ಕೋಪವನ್ನು ಹತ್ತಿಕ್ಕಿ ಶೀಬಾ "ನಾಚ್ಕೆ ಇಲ್ಲಣ್ಣ ನಿನಗೆ," ಎಂದು ಹೇಳಿ, ಹೊಸ್ತಿಲು ದಾಟಿದಳು.

ಮೊದಲು ದೋಣಿಕಟ್ಟೆಗೆ, ಅಲ್ಲಿಂದ ದಕ್ಷಿಣಾಭಿಮುಖವಾಗಿ ದಂಡೆ ಯುದ್ದಕ್ಕೂ. ವಿಪರೀತ ನೂಕುನುಗ್ಗಲು. ತಾವು ಪ್ರಯಾಣ ಬೆಳೆಸಿ ಬಂದ ಪೆಪ್ಪೈರಸ್ ದೋಣಿಗಳನ್ನು ದಂಡೆಗೆಳೆದು ಮಗುಚಿ ಹಾಕಿ, ಮಹಾಮಂದಿರಕ್ಕೆ ಹೋಗುವ ಬೀದಿಗುಂಟ ಜನ ಧಾವಿಸುತ್ತಿದ್ದರು. ದೊಡ್ಡ ದೋಣಿಗಳನ್ನು ತುಸು ಮಾತ್ರವೇ ದಂಡೆಯ ಮೇಲಕ್ಕೆ ಎಳೆದು ನಿಲ್ಲಿಸಿದ್ದರು. ಅವರೆಲ್ಲ ಒಂದು ಕಡೆಗೆ. ಇದಿರು ದಿಕ್ಕಿಗೆ, ಅತ್ತಿತ್ತ ನೋಡುತ್ತ, ಹೋಗುತ್ತಿದ್ದವಳು ಶೀಬಾ ಒಬ್ಬಳೇ. ಮಗನೋ ಗಂಡನೋ ತಪ್ಪಿಸಿಕೊಂಡಿರ ಬೇಕು, ಹುಡುಕುತ್ತಿದ್ದಾಳೆ—ಎಂದು ಭಾವಿಸುವವರೇ ಎಲ್ಲರೂ. (ಕೆಲವರು

ಮಾತ್ರ ತರಾತುರಿಯ ನಡುವೆಯೂ ನಾಲಿಗೆಯಿಂದ ತಮ್ಮ ತುಟಿಗಳನ್ನು ಸವರಿದರು ; "ಬರ್ತೀಯಾ ?" ಎಂದರು.) ಶೀಬಾ ದಾರಿ ಮಾಡಿಕೊಂಡು ನೇರವಾಗಿ ನಡೆದಳು. ಜನದಟ್ಟಣೆ ಮುಗಿದೊಡನೆ ಮೆನ್ನ ಸಿಗಬಹುದು ಎಂಬ ತರ್ಕ ಅವಳದು.

ತರ್ಕ ಸರಿಯಾಗಿತ್ತು. ದೂರದಲ್ಲಿ ಒಂದು ಅಂಜೂರ ವೃಕ್ಷದ ಕೆಳಗೆ ಒಬ್ಬ ಬಡಕಲು ಯುವಕ ಕುಳಿತಿದ್ದುದು ಕಾಣಿಸಿತು. ಆತ ತಲೆಗೆ ಒಂದು ಬಟ್ಟೆ ಸುತ್ತಿದ್ದ. (ಶೀಬಾ ಅಂದುಕೊಂಡಳು : 'ರಾತ್ರಿ ಹೊದ್ದುಕೊಂಡಿದ್ದ ಬಟ್ಟೆ ಇರಬೇಕು ; ತನ್ನ ಗುರುತು ಸಿಗದಿರಲಿ ಅಂತ ತನ್ನ ಬೋಳು ತಲೆಯೋ ಕುಚ್ಚು ಕೂದಲೋ ಕಾಣಿಸದ ಹಾಗೆ ಸುತ್ತಿಕೊಂಡಿದ್ದಾನೆ.')

ನಿಜವಾದ ಊಹೆಯೇ.

ಯಾರೋ ಒಬ್ಬಳು ತಾನಿರುವ ಕಡೆಗೆ ಬರುತ್ತಿದ್ದುದನ್ನು ಕಂಡು ಮೆನ್ನ ಯೋಚನೆಗೀಡಾದ. ಈಕೆ ಅರಮನೆಯ ಪರಿಚಾರಿಕೆ ಎಂಬ ಶಂಕೆ ಹುಟ್ಟಿತು. ತಾಯಿ, ಮಗು ಹತ್ತಿರ ಬಂದಂತೆ ಶಂಕೆ ಬಲವಾಯಿತು. ('ಇವರನ್ನು ಈ ಮೊದಲು ನೋಡಿದ್ದೇನೆ. ನನ್ನನ್ನು ಹುಡುಕುತ್ತಿದ್ದಾಳೆ. ಇವಳನ್ನು ಬದಲಿ ಅರ್ಚಕ ಕಳಿಸಿರಬಹುದು.') ಮೆನ್ನ ಎದ್ದು ಪಶ್ಚಿಮಕ್ಕೆ ಮುಖ ಮಾಡಿ ಸರ ಸರನೆ ನಡೆಯತೊಡಗಿದ.

ಈ ಅಯ್ಯ ಓಡುತ್ತಿರುವರಲ್ಲ, ಹ್ಯಾಗೆ ನಿಲ್ಲಿಸಲಿ ?—ಎಂದು ಶೀಬಾ ವಿವಂಚನೆಗೆ ಗುರಿಯಾದಳು. "ಅಯ್ಯ ! ಅಯ್ಯ !" ಎಂದು ಗಟ್ಟಿಯಾಗಿ ಕೂಗುತ್ತ ತಾನೂ ಓಡತೊಡಗಿದಳು.

ಮೆನ್ನನಿಗೆ ಅನಿಸಿತು : ರಾತ್ರಿ ತನ್ನ ಗಮನಕ್ಕೆ ಬರದೆಯೇ ಬಟಾ ದೋಣಿ ಕಟ್ಟಿ ತಲಪಿದ್ದರೆ ? ಆತನೇನಾದರೂ ಸಂದೇಶ ಕೊಟ್ಟು ಈಕೆಯನ್ನು ಕಳುಹಿದ್ದರೆ ?

ಆತ ಇದ್ದಕ್ಕಿದ್ದಂತೆ ಓಡುವುದನ್ನು ನಿಲ್ಲಿಸಿ, ಹೊರಳಿ, ವೇಗವಾಗಿ ನಡೆದು, ಅವಳನ್ನು ಇದಿರ್ಗೊಂಡ.

ಮೆನ್ನ ಓಡಿ ಬಂದಾಗ ಶೀಬಾ ಎರಡು ಕ್ಷಣ ಏದುಸಿರು ಬಿಡುತ್ತ ನಿಂತಳು.

ನಿಧಾನವಾಗಿ ಅವಳೆಂದಳು :

"ಅಯ್ಯ, ನಾನು ಶೀಬಾ. ಪೆರೋನ ಕಸಾಯಿ ಮನೆಯವಳು. ಅತಿಥಿಗೃಹದ ನಾಯಕರ ಅಂಗರಕ್ಷಕರು ನನ್ನನ್ನು ಕಳಿಸಿದ್ದಾರೆ. ನಿಮಗೆ ಗೊತ್ತಿಲ್ಲಾಂತ ತೋರ್‍ತದೆ. ಇವತ್ತು ಬೆಳಿಗ್ಗೆ ರಾ ಹುಟ್ಟೋದಕ್ಮುಂಚೆ ನಾಯಕರನ್ನೂ ಅವರ ಅಂಗರಕ್ಷಕರನ್ನೂ ಹಿಡಿದು ಸೆರೆಮನೆಗೆ—"

"ಅ್ಹ ! ಓ !" ಎಂದ ಮೆನ್ನ.

ಉಸಿರು ಕಟ್ಟಿದ ಯಾತನೆ. ಪಾದಗಳನ್ನು ಪ್ರಯತ್ನಪೂರ್ವಕವಾಗಿ ಕಿತ್ತು ಅಂಜೂರ ವೃಕ್ಷದ ನೆರಳಿಗೆ ಆತ ನಡೆದ. ಶೀಬಾ ಹಿಂಬಾಲಿಸಿದಳು.

ಅಲ್ಲಿ ಮಾತಿಲ್ಲದೆ ಕುಳಿತ, ಮೆನ್ನ. ನೋಟ ಮಾತ್ರ ನದಿಯ ಕಡೆಗೆ,— ಇನ್ನೂ ಒಂದೊಂದಾಗ ಬರುತ್ತಿದ್ದ ದೋಣಿಗಳತ್ತ. ಅವನೆಂದ :

"ಹೇಳು. ಹೇಳು...."

ಮೊದಲು ಪ್ರಯಾಸ ಪಡುತ್ತ, ಬಳಿಕ ಬೇಗ ಬೇಗನೆ, ಅವಳೆಂದಳು :

"ಸೆಡ್ ಉತ್ಸವದ ಜ್ಞಾಪಕಕ್ಕೇಂತ, ಕಳೆದ ಮಧ್ಯರಾತ್ರಿಯಲ್ಲಿ ದರೋಡೆಗಾರರು ಪಾತಕಿಗಳು ಎಲ್ಲರನ್ನೂ ಬಿಟ್ರು. ನೀವು ಆಗ ಇಲ್ಲೇ ಇದ್ದಿರೀಂತ ತೋರ್‍ತದೆ. (ಮೆನ್ನ ತಲೆ ಆಡಿಸಿದ.) ಸೆರೆಮನೆ ಸ್ವಚ್ಛಕೂಡಾ ಮಾಡಿರ್‍ಲಿಲ್ಲ. ಜಜ್‌ಮುಂಖನ ಕೋಣೆಗೆ ನಾಯರಕನ್ನು ತಳ್ಳಿದ್ರು. ದೊಡ್ಡಿ ಮನೆಗೆ ಅವರ ಅಂಗರಕ್ಷಕರನ್ನು ನೂಕಿದ್ರು. ಬೆಕ್ ಮತ್ತು ಔಟ ನೀರಾನೆ ಪ್ರಾಂತ ದೋರು. ತುಂಬ ಗೌರವಸ್ಥ ಜನ. ಈ ಮಗೂಗೆ ಕಾಹಿಲೆ ಆಗಿದ್ದಾಗ ಅರಮನೆ ಮಂದಿರದ ಅರ್ಚಕನಲ್ಲಿಗೆ ಔಷಧಿಗಾಗಿ ಹೋಗಿದ್ದೆ. ಅವರಿಬ್ರೂ ಅಲ್ಲಿಗೆ ಬಂದಿದ್ರು. ಕಳ್ಳರನ್ನೂ ಪುಂಡರನ್ನೂ ಹೊರಗೆ ಬಿಟ್ಟು ಸಜ್ಜನರನ್ನೂ ಸಾತ್ವಿಕರನ್ನೂ ಸೆರೆಯಲ್ಲಿಡೋದು ಯಾವ ನ್ಯಾಯ ? ನಿನ್ನೆ ರಾತ್ರಿಯಿಡೀ ಕಸಾಯಿ ಮನೆಯಲ್ಲಿ ದುಡಿಮೆ. ದಂಡಿನ ಠಾಣ್ಯದಿಂದ ಗಂಡ ಊರಿಗೆ ಬಂದಿದ್ದಾನೇಂತ ಕೆಲಸ ತಪ್ಪಿಸೋಕಾಗ್ತದಾ ? ನಸುಕಿನಲ್ಲಿ ಪೆರೋ ಎದ್ದ ತಕ್ಷಣ ನಾನು ಮನೆಗೆ ಹೋದೆ—ಮಗೂಗೆ ಹಾಲು ಕುಡಿಸೋದಕ್ಕೇಂತ. ನಾಯಕರ ವಿಷಯ ಕೇಳಿ ನನ್ನ ಗಂಡನಿಗೂ ಬೇಜಾರಾಯ್ತು. ಇವತ್ತು ಅವನಿಗೆ ಅರಮನೆ ಕೆಲಸ. ಕಳಿಸ್ಕೊಟ್ಟೆ. ದೊಡ್ಡಿಮನೆ ಬಾಗಿಲು ಕಾವಲಿನವರು ನನ್ನ ಗಂಡನ ಸ್ನೇಹಿತರು. ಬೆಕ್ ಔಟರಿಗೆ ರೊಟ್ಟಿ ಕೊಟ್ಟು ಬಂದೆ. ಅವರಿಗೆ ನಾಯಕ

ರದೇ ಯೋಚನೆ. ತಮಗೆ ಏನಾಯ್ತು ಅನ್ನೋದು ಗೊತ್ತಿಲ್ದೆ ಬಟಾ ಅಣ್ಣ ಬಂದು ನೋಸ ಹೋದಾರೂಂತ ಅವರಿಗೆ ದಿಗಿಲು. ನಿಮಗೆ ತಿಳಿಸ್ಬೇಕು ಅಂದ್ರು. ಆ ಕೆಲಸ ನಾನು ಮಾಡ್ತೇನೆ ಅಂದೆ. ಅಯ್ಯ, ನಾನು ಇಲ್ಲಿ ಕಾಯ್ತಾ ಇರ್ತೇನೆ. ಯಾರಿಗೂ ಗುಮಾನಿ ಬರೋದಿಲ್ಲ. ಅರಮನೇಲಿ ಮಧ್ಯಾಹ್ನದ ಔತಣದ ಗಲಾಟೆ. ಮಂದಿರದ ಪ್ರಸಾದ ಅಂತ ನೀವು ಏನಾದರೂ ತಗೊಂಡು ಹೋದ್ರೆ ಕಾವಲಿನವರು ನಿಮ್ಮನ್ನು ಜಜ್ಮುಂಜನ ಕೋಣೆಗೂ ಬಿಡ್ತಾರೆ...."

ಶೀಬಾ ಮಾತು ನಿಲ್ಲಿಸಿದಳು. ಮೆನ್ನ ಉಗುಳು ನುಂಗಿದ. ಒಂದಕ್ಕೊಂದು ಅಂಟಿಕೊಂಡು ಒಣಗಿ ಹೋಗಿದ್ದ ತುಟಿಗಳನ್ನು ಬೇರ್ಪಡಿಸಿದ. ನಾಲ್ಕು ನಿಮಿಷ ಬಾಯಿಯಲ್ಲೇ ಉಸಿರಾಡಿ ಬಳಿಕ ಅವನೆಂದ :

"ಊಟ ಮುಖ್ಯ ಅಲ್ಲ ತಾಯಿ. ನಾಯಕರು ದಿನಗಟ್ಟಲೆ ಉಪವಾಸ ವಿದ್ದು ಬೆಳೆದವರು...."

"ಆದರೂ—"

"ಉಹುಂ. ಈಗ ಅವರನ್ನು ಅಲ್ಲಿಂದ ಪಾರು ಮಾಡ್ಬೇಕು...."

"ಹಾಗಾದರೆ ನೀವು ಈಗ ಅಲ್ಲಿಗೆ ಬರೋದಿಲ್ಲವಾ ?"

"ತಾಯಿ, ಸಂಜೆವರೆಗೆ ಬಟಾನ ದಾರಿ ನೋಡ್ತೇನೆ. ಅಷ್ಟರೊಳಗೆ ಆತ ಬರದಿದ್ದರೆ ಹೊರಟು ಬಂದ್ಬಿಡ್ತೇನೆ....ತಾಯಿ, ನಿನ್ನ ಗಂಡ ಏನಾದರೂ ಸಹಾಯ ಮಾಡಿಯಾನ ?"

"ನನಗೋಸ್ಕರ ಈ ಮಗೂಗೋಸ್ಕರ ನನ ಗಂಡ ಏನುಬೇಕಾದರೂ ಮಾಡಿಯಾನು."

"ಬಟಾ ಬಂದರೆ ಸಹಾಯ ಬೇಕಾಗೋದಿಲ್ಲ. ಬರದಿದ್ದರೆ ಮಾತ್ರ—ಸ್ವಲ್ಪ—"

"ಆಗಲಿ ಅಯ್ಯ."

"ಇನ್ನು ನೀನು ಹೊರಡು. ನನ್ನನ್ನು ಇಲ್ಲಿ ಕಂಡ ವಿಷಯ—"

" ಯಾರಿಗೂ ಹೇಳೋದಿಲ್ಲ. ನಿನ್ನೆಯಿಂದ ನೀವು ಏನೂ ತಗೊಂಡಿಲ್ಲ. ಏನಾದರೂ ತಂದ್ಕೊಡ್ಲಾ?"

" ಬೇಡ ತಾಯಿ, ರಾತ್ರೆ ನಾಯಕರಿಗೆ ಪ್ರಸಾದ ಕೊಟ್ಮೇಲೆ ನಾನು ತಗೋತೇನೆ."

ಶೀಬಾ ಮಗುವನ್ನೆತ್ತಿಕೊಂಡು ಎದ್ದಳು. ಮೆನ್ನ ನದಿಯ ಮೇಲಿನ ದೃಷ್ಟಿಯನ್ನು ಕದಲಿಸಲಿಲ್ಲ.

* * * *

ರಾ ನೆತ್ತಿಯ ಮೇಲೆ ಬರುವ ಹೊತ್ತಿಗೆ ಮೆರವಣಿಗೆ ಅರಮನೆಗೆ ಮರಳಿತು. ಬಳಲಿದ ಪೆರೋ ಸ್ವಲ್ಪ ವಿಶ್ರಾಂತಿಗಾಗಿ ಶಯ್ಯಾಗೃಹವನ್ನು ಸೇರಿದ. ಮಹಾ ಅರ್ಚಕ, ಅಮಾತ್ಯ, ಹೆಪ್ಪಟ್ ಮತ್ತಿತರ ಸರು ಸದಸ್ಯರು, ಮಹಾ ದಂಡನಾಯಕ, ತೆರಿಗೆ ಅಧಿಕಾರಿಗಳು, ಪ್ರಾಂತಪಾಲರು—ಹೀಗೆ ಪ್ರತಿಷ್ಠಿತರೂ ಅವರಲ್ಲಿ ಕೆಲವರು ಮಹಿಳೆಯರೂ ಔತಣ ಭವನಕ್ಕೆ ನಡೆದರು.

(ಇದು ಬಗೆಬಗೆಯ ಮದಿರೆ ಭಕ್ಷ್ಯ ಭೋಜ್ಯಗಳ ಭೋಜನ, ತಂತೀ ವಾದ್ಯ ಸಂಗೀತದ ಹಿನ್ನೆಲೆಯಲ್ಲಿ. ರಾ ಅಸ್ತಮಿಸಿದೊಡನೆ ದೀಪಾಲಂಕಾರ. ಆ ಭವ್ಯ ಬೆಳಕಿನಲ್ಲಿ ಅರಮನೆಯ ಬಯಲಿನಲ್ಲಿ ನರ್ತನ, ಗಾಯನ ಮತ್ತಿತರ ವಿನೋದಗಳು. ಆಗಲೇ ಅರಮನೆಯ ಮುಂದುಗಡೆ ನೆರೆದ ಸಹಸ್ರ ಸಹಸ್ರ ಜನರಿಗೆ ಭಕ್ಷ್ಯಗಳ ವಿತರಣೆ.)

ಔತಣಕ್ಕೆ ಮಹಾರಾಣಿಯೊಂದಿಗೆ ಪೆರೋ ಆಗಮಿಸಿದೊಡನೆ ಮಹಾ ಅರ್ಚಕನೆಂದ :

" ರಾಜಧಾನಿಯ ಪ್ರತಿಷ್ಠಿತರು ಐಗುಪ್ತದ ಮಹಾಪ್ರಭುವಿಗೆ ಸ್ವಾಗತ ಬಯಸುತ್ತಿದ್ದಾರೆ. ನವಯೌವನ ಪ್ರಾಪ್ತವಾಗಿರುವ ಪೆರೋ, ನಿನ್ನ ಆಳ್ವಿಕೆ ಸುದೀರ್ಘವಾಗಲಿ! ದೀರ್ಘಾಯುಷ್ಯ ನಿನಗಿರಲಿ!"

ಪ್ರತಿಷ್ಠಿತರೆಲ್ಲ ತಲೆಬಾಗಿ ನಮಿಸುತ್ತಿದ್ದಂತೆ ಹೇಪಾಟ್ ಒಂದು ಮಾತು ಸೇರಿಸಿದ :

" ತಮ್ಮ ಮೆಚ್ಚಿನ ಮಹಾರಾಣಿಗೂ ರಾಜಧಾನಿಯ ಪ್ರತಿಷ್ಠಿತರು ಸ್ವಾಗತ ಬಯಸುತ್ತಿದ್ದಾರೆ."

ಪೆರೋ ಆಸೀನನಾಗುತ್ತಿದ್ದಂತೆ ನೆಫರ್‌ಟೀಮ್ ಮಂದಹಾಸ ಬೀರಿದಳು; ಪೆರೋನ ಸಮೀಪದಲ್ಲಿ ತಾನೂ ಆಸೀನಳಾದಳು.

ವಾದ್ಯ ಸಂಗೀತ ಧ್ವನಿ ತೀವ್ರಗೊಂಡಿತು.

ಈ ದಿನವೂ ಮಹಾಪ್ರಭು ಉಂಡುದು ಹಿತಮಿತವಾಗಿಯೇ.

* * * *

ಅರಮನೆಯ ದೇವಮಂದಿರದಲ್ಲಿ ಇತರ ಹಲವರ ಜತೆ ಕುಳಿತು ಉಂಡು ಎದ್ದ ಹಿರಿಯ ಲಿಪಿಕಾರ ಸೆನೆಬ್ ಮೂರನೆಯ ದಿನದ ಯೋಚನೆಯಿಂದ ಉತ್ತೇಜಿತನಾದ. ನಸುಕಿನಲ್ಲಿ ಅರಮನೆ ಯೋಧರ ದಳಪತಿ ನಡೆಸಿದ ಕಾರ್ಯಾಚರಣೆಯ ರಹಸ್ಯ ಸ್ವರೂಪ ಮಾತ್ರ ಅವನನ್ನು ವಿಸ್ಮಿತಗೊಳಿಸಿತ್ತು. ಅವನು ದಳಪತಿಯನ್ನು ಕೇಳಿದ :

" ನೀನೂ ಕಾರಾಗೃಹದ ಅಧಿಕಾರಿಯೂ ನನಗೆ ತಿಳಿಸದೆ ಕೆಲಸ ಮಾಡಿದಿರಲ್ಲಪ್ಪ...."

" ನಿಮಗೆ ಗೊತ್ತಿರ್ತದೆ ಅಂದ್ಕೊಂಡಿದ್ದೆ. ಬಹಳ ಕಟ್ಟುನಿಟ್ಟಿನ ಆಜ್ಞೆ."

ಸುಳ್ಳಾಡುವುದು ತಪ್ಪಲ್ಲ—ಎಂದುಕೊಂಡು, ಸೆನೆಬ್ ರಾಗವೆಳೆದ :

"ಗೊತ್ತಿತ್ತು. ಆದರೆ, ನೀನು ಹೇಳಲಿಲ್ಲ ನೋಡು."

" ಲಿಪಿಕಾರಯ್ಯನವರು ತಪ್ಪು ತಿಳಕೋಬಾರದು."

" ಇರಲಿ ಬಿಡು. ಕಟ್ಟುನಿಟ್ಟಿನ ಆಜ್ಞೆ ಇನ್ನೇನಾದರೂ ಆಗಿದೆಯೊ ?"

" ಇವತ್ತು ಮತ್ತು ನಾಳೆ ಕಳೆದರೆ ನನ್ನ ಜವಾಬ್ದಾರಿ ಮುಗೀತು. ಆ ಮೇಲಿಂದೆಲ್ಲಾ ಗಡಿಯಿಂದ ಬಂದಿರೋ ಸೈನಿಕರಿದ್ದಾರಲ್ಲ ಅವರು ನೋಡ್ಕೊಳ್ತಾರಂತೆ."

" ನೋಡ್ಕೊಳ್ಳೋದು ಏನನ್ನು ?"

" ಅದನ್ನು ಮಾತ್ರ ಯಾರೂ ಹೇಳಿಲ್ಲ."

" ಅಯ್ಯೋ ! ನೀನೊಬ್ಬ."

ಸೆನೆಬ್ ಮಂದಬುದ್ಧಿಯ ದಳಪತಿಯನ್ನು ಅವನ ಪಾಡಿಗೆ ಬಿಟ್ಟು, ಮಹಾಮಂದಿರಕ್ಕೆ ಮೆರವಣಿಗೆ ಹೊರಟಾಗ, ಟೆಹುಟಿಯ ಬಳಿ ಸಾರಿದ. ಬಕಿಲನನ್ನು ಮಾತನಾಡಿಸಿದ. ಇನೇನಿಯನ್ನು ಭೇಟಿ ಮಾಡಿದ. ಎಲ್ಲ ವಿಷಯಗಳನ್ನೂ

ತಿಳಿದ ಮೇಲೆ ಅಮಾತ್ಯನ ಕಣ್ಣಿಗೆ ಬಿದ್ದ.

ಆಮೆರಬ್ ಅವನನ್ನು ಕೇಳಿದ:

" ಎಲ್ಲ ಗೊತ್ತಾಯ್ತಾ?"

ಸೆನೆಬ್ ನಸುನಕ್ಕ ಗಂಭೀರ ಧ್ವನಿಯಲ್ಲಿ ಅಮಾತ್ಯನೆಂದ:

" ನಾಳೆ ಬೆಳಿಗ್ಗೆ ಅವನ ವಿಚಾರಣೆ. ಅಮಾತ್ಯ ಭವನವನ್ನು ಸಿದ್ಧಗೊಳಿಸಬೇಕು."

" ಅಪ್ಪಣೆ."

" ಊರಿಗೆ ಹೋಗಿದ್ದನಲ್ಲ ಅವನ ಅಂಬಿಗ ? ಮರಳಿ ಬಂದನಾ ?"

" ಇನ್ನೂ ಇಲ್ಲ."

" ಸ್ವಲ್ಪ ಹುಷಾರಾಗಿರ್ಬೇಕೂಂತ ದಳಪತಿಗೆ ಹೇಳು."

ಸೆನೆಬ್ ಉಬ್ಬಿದ. ದಳಪತಿಯನ್ನು ಕಂಡು, "ಸ್ವಲ್ಪ ಹುಷಾರಾಗಿರ್ಬೇಕೂಂತ ನಿನಗೆ ಹೇಳು ಅಂದ್ರು—ಅಮಾತ್ಯರು. ಕಟ್ಟುನಿಟ್ಟಿನ ಆಜ್ಞೆ," ಎಂದ.

" ನನ್ನ ವಿರುದ್ಧ ದೂರು ಹೇಳಿದಿರಾ ಲಿಪಿಕಾರಯ್ಯ? "

" ಇಲ್ಲವಪ್ಪ. ದಳಪತಿ ಬಹಳ ಶ್ರದ್ಧೆಯಿಟ್ಟು ಕೆಲಸ ಮಾಡ್ತಿದಾನೇಂತ ಹೇಳ್ದೆ."

" ನೀವು ಒಳ್ಳೆಯವರು."

" ಭಾರೀ ಬಹುಮಾನಗಳು ಸಿಕ್ಕಾಗ ನನ್ನ ಒಳ್ಳೆತನ ನೆನಪಿಟ್ಕೊ."

ಔತಣಕ್ಕೆ ಬಂದವರೆಲ್ಲ ವಿರಮಿಸಲೆಂದು ಪಲ್ಲಕಿಗಳನ್ನೇರಿ ಹೊರಟು ಹೋದ ಮೇಲೆ ಸೆನೆಬ್ ಅತಿಥಿ ಗೃಹದತ್ತ ಹೋದ.

" ಇನ್ನು ಬೇರೆ ಅತಿಥಿಗಳು, ಅಲ್ಲವಾ ?" ಎಂದು ಬಾಗಿಲಿನಲ್ಲಿದ್ದ ಅತಿಥಿ ಗೃಹದ ಅಧಿಕಾರಿ ಕೇಳಿದಾಗ, "ಹೂಂ" ಎಂದ ಸೆನೆಬ್, ಉದ್ಯಾನದಲ್ಲಿ ಕುಳಿತು ಕೊಳ್ಳುತ್ತ.

ಸೆನೆಬ್‌ಗೆ ತಾನೊಬ್ಬ ದಡ್ಡ ಎನಿಸಿತು. 'ಬಹಳ ಬುದ್ಧಿವಂತ ನಾನು ಅಂದ್ಕೊಂಡಿದ್ದೆ. ಯಾವತ್ತಾದರೂ ಭಾರೀ ಉಡುಗೊರೆ ಸಿಕ್ಕೀತು ಅನ್ನೋ ಆಸೆಯಿಂದ. ಎಲ್ಲ ವ್ಯರ್ಥವಾಯ್ತು.' ಎಂದು ಹಲುಬಿದ. ಯಾರು ಗೆದ್ದರು ? ಯಾರು ಸೋತರು ? ಮಹಾ ಅರ್ಚಕ, ಭೂಮಾಲಿಕರು, ಅಮಾತ್ಯ, ಪೆರೋ, ಎಲ್ಲರೂ ಗೆದ್ದರು. 'ಮೆನೆಪ್‌ಟಾ ಸೋತ ಎನ್ನೋಣವೆ? ಈಗಲೇ ಹೇಳುವುದು

ಹೇಗೆ? ಈ ಕತ್ತಲು ಬೆಳಗಾಗುವುದರೊಳಗೆ ಬೆಳಗಾದದ್ದು ಕತ್ತಲಾಗುವುದರೊಳಗೆ ಮತ್ತೆ ಏನೇನು ಆಗುವುದೊ ?''

ಏನೇ ಇರಲಿ, ಈ ಅತಿಥಿಗೃಹದಲ್ಲಿ ಇದ್ದವನಿಂದ ತನಗೆ ನ್ಯಾಯವಾಗಿ ಸಲ್ಲಬೇಕಾದ್ದನ್ನು ಪಡೆಯಲು ಮತ್ತೊಮ್ಮೆ ತಾನು ಯತ್ನಿಸಬೇಕು.

....ಬಿಸಿಲು ಬಾಡಿದೊಡನೆ ಸೆನೆಬ್ ಕಾರಾಗೃಹದತ್ತ ಹೋದ. ಅರಮನೆಯ ಆವರಣದಲ್ಲಿ ಎಲ್ಲ ಕಡೆಗಳಲ್ಲೂ ದಿನವೂ ಕಾಣಿಸಿಕೊಳ್ಳುವ ಮುಖ ಅವನದು. ಸಾಮಾನ್ಯ ಸೇವಕರೂ ಸಣ್ಣಪುಟ್ಟ ಅಧಿಕಾರಿಗಳೂ ಈತನಿಗೆ ನಮಿಸಬೇಕು.

ನೆಲಮಾಳಿಗೆಯ ದ್ವಾರದ ಬಳಿ ಸೆನೆಬ್ ನಿಂತಾಗ ಕಾವಲುಗಾರರಿಬ್ಬರೂ ವಂದಿಸಿದರು. "ಅಮಾತ್ಯರು ಕಳಿಸಿದ್ದಾರೆ," ಎಂದು ಹೇಳಿ ಬಾಗಿಲು ತೆರೆಯುವಂತೆ ಸೆನೆಬ್ ಸನ್ನೆ ಮಾಡಿದ. ಕಾರಾಗೃಹದ ಮುಖ್ಯಸ್ಥನಿಗಿಂತ ಅರಮನೆಯ ದಳಪತಿಗಿಂತ ದೊಡ್ಡ ಅಧಿಕಾರಿ, ಈ ಹಿರಿಯ ಲಿಪಿಕಾರಯ್ಯ. ಆದೇಶವನ್ನು ಪಾಲಿಸಲೇಬೇಕಲ್ಲ? ಬಾಗಿಲು ಸದ್ದು ಮಾಡಿತು. ಒಬ್ಬ ಕಾವಲುಗಾರನ ಜತೆ ಕೆಳಕ್ಕೆ ನಡಿಗೆ. ಮತ್ತೊಂದು ಬಾಗಿಲು. ಬೆಳಕು ನಸುಬೆಳಕಾಯಿತು, ನಸುಗತ್ತಲೆಯಾಯಿತು.

"ನೀನು ಇಲ್ಲೇ ನಿಂತಿರು," ಎಂದು ಆ ಕಾವಲುಗಾರನಿಗೆ ಹೇಳಿ ಸೆನೆಬ್ ಒಬ್ಬನೇ ಮೂರನೆಯ ಬಾಗಿಲಿನತ್ತ ಸಾಗಿ, ಅದನ್ನು ತೆರೆದ.

ಮುಚ್ಚಂಜೆಯೋ ಮುಂಜಾವವೋ ಎಂದು ತಿಳಿಯದಂತಹ ಸ್ಥಿರ ಮಂದ ಪ್ರಕಾಶ.

ಧ್ವನಿಯಲ್ಲಿ (ಧೂರ್ತ)ವಿನಯ ತೋರುತ್ತ, "ಮೆನೆಪ್‌ಟಾ ಅಣ್ಣ," ಎಂದ ಸೆನೆಬ್.

ಬೆಳಕು ಹರಿದ ಮೇಲೆ ಅದೆಷ್ಟೋ ಹೊತ್ತು ಗೋಡೆಗೊರಗಿ ಕುಳಿತ ಬಳಿಕ ಮೆನೆಪ್‌ಟಾ ನೆಲದ ಮೇಲೆ ಮೈ ಚಾಚಿದ್ದ. ನಿದ್ದೆ ಹತ್ತಿತ್ತು. ಕೊಂಡಾಗಿ ಮಲಗಿದ್ದ.

ಸೆನೆಬ್ ಮತ್ತೊಮ್ಮೆ ಕರೆದ :

"ಮೆನೆಪ್‌ಟಾ ಅಣ್ಣ."

ನಾಯಕ ಗಡಬಡಿಸಿ ಎದ್ದ. ಬಟಾ ಬಂದನೆ?

" ಯಾರು ? "

" ನಾನು ಸೆನೆಬ್,"

ಈತ. ಈತ....ಇಲ್ಲಿಯೂ....ಈಗಲೂ....

" ಹ್ಞ. ಏನು ? ಅಮಾತ್ಯರಿಂದ ಏನಾದರೂ ಸಂದೇಶ ತಂದಿದ್ದೀರಾ ?"

" ನಾಯಕರೇ, ಬಡಲಿಪಿಕಾರನ ಮೇಲೆ ವ್ಯಗ್ರರಾಗಬಾರದು. ರಾತ್ರೆ ನಿಮ್ಮನ್ನು ಕಂಡು ಹೋದ ಸ್ವಲ್ಪ ಹೊತ್ತಿನಲ್ಲಿ ಹೀಗಾಯಿತಂತೆ. ನನಗೂ ತಿಳಿಯದ ಹಾಗೆ ರಹಸ್ಯವಾಗಿ ಮಾಡಿದ್ರು. ಮಹತ್ವದ ಆ ಸುದ್ದಿಯನ್ನು ಮೊದಲೇ ನಿಮಗೆ ಕೊಡುವುದು ನನ್ನಿಂದಾಗಲಿಲ್ಲ."

" ನನ್ನಿಂದ ನಿಮಗೂ ಏನೂ ಪ್ರಯೋಜನವಾಗಿಲ್ಲ ಲಿಪಿಕಾರರೇ."

"ನನ್ನ ಸೇವೆಗೆ ಪ್ರತಿಫಲ ಇವತ್ತಲ್ಲ ನಾಳೆ ಸಿಗ್ತದೆ. ನೀವು ಒಂದು ಸೂಚನೆ ಕೊಟ್ಟರೆ ಸಾಕು. ನಿಮ್ಮ ಹಿಂಬಾಲಕರು ವ್ಯವಸ್ಥೆ ಮಾಡ್ತಾರೆ."

ಯಾಕೆ ಬಂದ ಈತ ? ತೊಲಗಬಾರದೆ ಇಲ್ಲಿಂದ ? ಎನಿಸಿತು, ಮೆನೆಪ್ ಟಾಗೆ. ಆದರೂ ತಾಳ್ಮೆ ವಹಿಸಿ ಕೇಳಿದ :

" ಸೆಡ್ ಉತ್ಸವ ಆಯಿತೆ ?"

" ಧಾರ್ಮಿಕ ಕ್ರಿಯೆಗಳೆಲ್ಲ ಮುಗಿದುವು ನಾಯಕರೆ. ಇನ್ನು ಬರೇ ಮನರಂಜನೆ ಕಾರ್ಯಕ್ರಮ."

" ಸಂತೋಷ."

" ದಿನವೆಲ್ಲ ಅಮಾತ್ಯರ ಪಕ್ಕದಲ್ಲೇ ಇದ್ದರೂ ನನಗೆ ನಿಮ್ಮದೇ ಯೋಚನೆ. ಸೆಡ್ ಉತ್ಸವಕ್ಕೇಂತ ಅಷ್ಟು ದೂರದಿಂದ ಬಂದ ನೀವು ಪೆರೋ ಎದುರು ಇರಲಿಲ್ಲ ಅಂತ ಕೊರಗು."

" ಆ ಗೃಹದಿಂದ ನನ್ನನ್ನು ಈ ಗೃಹಕ್ಕೆ ಕಳಿಸೋದಕ್ಕೆ ಇದ್ದಕ್ಕಿದ್ದಂತೆ ತೀರ್ಮಾನಿಸಿರ್ಬೇಕು. ಅಲ್ಲವೆ ? "

" ಹ್ಞ. ಹಾಗೆಯೇ ಇದ್ದಕ್ಕಿದ್ದಂತೆ ಇನ್ನೂ ಒಂದು ತೀರ್ಮಾನ ಮಾಡಿದ್ದಾರೆ. ಮಹತ್ವದ್ದು. ಅದನ್ನು ತಿಳಿಸೋಣ ಅಂತಲೇ ನಿಮ್ಮ ಭೇಟಿಗೆ ಬಂದೆ."

" ಏನದು ?"

" ನಾಳೆ ನಿಮ್ಮ ವಿಚಾರಣೆ."

"ನಾಳೆ ನನ್ನ ವಿಚಾರಣೆ!" ಎಂದು ಉದ್ಗರಿಸಿದ ಮೆನೆಪ್‌ಟಾ.

"ಒಂದು ರೀತೀಲಿ ಇದು ಒಳ್ಳೇದು ನಾಯಕರೇ. ನಿಮ್ಮ ನಿರಪರಾಧಿತ್ವ ರುಜುವಾಗ್ತದೆ. ನಿಮ್ಮನ್ನು ಗೌರವದಿಂದ ನೀರಾನೆ ಪ್ರಾಂತಕ್ಕೆ ಕಳಿಸಿಸ್ಕೊಡ್ತಾರೆ."

"ಸೆನೆಬ್ ನೀವು ನಿಜವಾಗಿಯೂ ಹರ್ಷದಾಯಕ ಸುದ್ದಿ ತಂದಿದ್ದೀರಿ. ನಿಮಗೆ ಏನು ಉಡುಗೊರೆ ಕೊಟ್ಟರೂ ಸಾಲದು. ನನ್ನ ಕವಡೆದಾರ, ಪೆರೋ ಕೊಟ್ಟ ಮಣಿಕಟ್ಟು ಎಲ್ಲ ಅತಿಥಿಗೃಹದಲ್ಲೇ ಇವೆ."

ಮನಸ್ಸಿನಲ್ಲೇ 'ಎಲಾ !' ಎಂದು ಉದ್ಗರಿಸಿ ಸೆನೆಬ್ ನುಡಿದ :

"ಅವು ಸುರಕ್ಷಿತವಾಗಿರ್ತವೆ. ನಾನು ಅತಿಥಿಗೃಹದ ಅಧಿಕಾರಿಗೆ ತಿಳಿಸ್ತೇನೆ. ನಿಮ್ಮ ಅನುಚರರು ಬರಬೇಕಾಗಿತ್ತು, ಅಲ್ಲವಾ ?"

"ಹೌದು....ಪಾಪ ಏನಾಯಿತೊ ?"

"ನನ್ನದೊಂದು ಪ್ರಾರ್ಥನೆ. ನಡೆಸಿಕೊಡಬೇಕು."

"ಏನು ಸೆನೆಬ್ ?"

"ನಿಮ್ಮ ಪ್ರಾಂತದಿಂದ ಯಾರಾದರೂ ಬಂದ ತಕ್ಷಣ, ನಾನು ಸಲ್ಲಿಸಿರೋ ಸೇವೆಯ ವಿಷಯ ಅವರಿಗೆ ಒಂದು ಮಾತು ಹೇಳ್ಬೇಕು."

"ಆಗಲಿ. ಇದು ಅಂತಿಮ ಸೇವೆ ಅಂತೀರಾ ?"

"ಛೆ! ಛೆ! ಇಂಥ ಸೇವೆ ಮುಂದೆಯೂ ಸಲ್ಲಿಸೋ ಅವಕಾಶ ನನಗೆ ದೊರೀಲಿ."

"ಇನ್ನು ಹೋಗಬಹುದಲ್ಲ ಸೆನೆಬ್ ?"

"ನಿಮಗೆ ಶ್ರಮವಾಯಿತು. ಕ್ಷಮಿಸಿ. ನಾಳೆ ನಿಮ್ಮನ್ನು ಪುನಃ ನೋಡ್ತೇನೆ."

ಮೆನೆಪ್‌ಟಾ ಮೌನವಾಗಿದ್ದು, ಸೆನೆಬ್ ಬಾಗಿಲೆಳೆದುಕೊಂಡು ಮೆಟ್ಟಲುಗಳನ್ನೇರಿ ಹೋದ ಸದ್ದಿಗೆ ಕಿವಿಗೊಟ್ಟ.

ಮತ್ತೊಂದು ಬಾಗಿಲು; ಮೇಲೆ ಮತ್ತೂ ಒಂದು.

ಮೆನೆಪ್‌ಟಾಗೆ ನಗು ಬಂತು. ಮನಸ್ಸಿಗೆ ಸಮಾಧಾನವೆನಿಸಿತು. ಈ ಕತ್ತಲು ಮನೆಯ ಹಿಂಸೆ ನಾಳೆಯವರೆಗೆ ಮಾತ್ರ. ನಾಳೆ ವಿಚಾರಣೆ—ವಿಚಾರಣೆ.

"ಬಟಾ, ನೀನಿಲ್ಲದೆ ವಿಚಾರಣೆ ನಡೆಯಬೇಕೆ? ಸ್ನೊಫ್ರು, ಸೆಬೆಕ್ಸು ನೀವು ಬೇಡವೆ ಜತೆಗೆ ? ನನ್ನ ಮಗ ರಾಮೆರಿ—ಆತ ನೋಡಬೇಡವೆ ಇದನ್ನು ?"

(ಯೋಜನೆಗಳ ತಿರುಗಣೆ ಮಿದುಳಿನಲ್ಲಿ ಮೆನೆಪ್‌ಟಾ ಸುತ್ತು ಬರುತ್ತಿದ್ದಂತೆ ಸೆನೆಬ್ ಅತಿಥಿಗೃಹಕ್ಕೆ ಹೋಗಿ ಅಲ್ಲಿನ ಅಧಿಕಾರಿಗೆ, "ನಾಯಕನಿಗೆ ಪೆರೋ ಉಡುಗೊರೆ ಕೊಟ್ಟ ಮಣಿಕಟ್ಟು ಇಲ್ಲಿ ಕೊಡು," ಎಂದ.

"ನಾನು ಕಾಣೆ, ಇಲ್ಲಿ ನೀಲಿ ಕವಡೆಸರ ಒಂದಿದೆ," ಎಂದು ಅಧಿಕಾರಿ ಉತ್ತರಿಸಿದ. "ಆ ಬಟಾ ಊರಿಗೆ ತಗೊಂಡು ಹೋಗಿರಬಹುದು," ಎಂದೂ ಮಾತೂ ಸೇರಿಸಿದ.

"ಇಲ್ಲಿ ಕೇಳು. ಎಲ್ಲಿದೆಯೋ ಹುಡುಕಿ ಸಾಯಂಕಾಲದೊಳಗೆ ತಂದು ಒಪ್ಪಿಸು. ಇಲ್ಲವಾದರೆ ಅಮಾತ್ಯರಿಗೆ ತಿಳಿಸ್ತೇನೆ."

"ಈ ಆಳುಗಳನ್ನು ನಂಬೋದು ಕಷ್ಟ, ವಿಚಾರಿಸ್ತೇನೆ," ಎಂದ ಅತಿಥಿ ಗೃಹದ ಅಧಿಕಾರಿ, ರಾಗ ಬದಲಿಸಿ.

ಆತ ನಡೆಸಿದ ಶೋಧೆ ಮುಂದೆ ಸ್ವಲ್ಪ ಹೊತ್ತಿನಲ್ಲೇ ಸಫಲವಾಗಿ, ಆಭರಣ ಹಿರಿಯ ಲಿಪಿಕಾರನ ಕೈ ಸೇರಿತು.

"ಇದನ್ನು ಏನು ಮಾಡ್ತೀರಿ ?" ಎಂದು ಅತಿಥಿಗೃಹದ ಅಧಿಕಾರಿ ಕೇಳಲಿಲ್ಲ.)

* * * *

ರಾನ ಕಿರಣಗಳ ಪ್ರಖರತೆ ಹೆಚ್ಚಿದಾಗ ರಾಜಧಾನಿ ಮೆಂಫಿಸಿಗೆ—ಇಡಿಯ ಐಗುಪ್ತಕ್ಕೆ—ಸ್ವಲ್ಪ ಹೊತ್ತು ತೂಕಡಿಕೆ. ರಾ ಎಷ್ಟು ಶಕ್ತಿಶಾಲಿ ಎಂಬುದನ್ನು ಸೂಚಿಸುವ ಉರಿತಿವಿತ ಅದು. ತಮ್ಮವನೇ ರಾ. ತಲೆಬಾಗಿಸುತ್ತಿದ್ದರು, ನಿಂದಿಸುತ್ತಿರಲಿಲ್ಲ.

ಕಿರಣಗಳು ನೀಲನದಿಯ ನೀರನ್ನು ಚುಚ್ಚಿ ಆರುತ್ತಿದ್ದವು. ಆ ಬಿಸಿಗೆ ಒಂದಿಷ್ಟು ನೀರು ಕುದಿದು ಆವಿಯಾಗುತ್ತಿತ್ತು. ಕಣ್ಣುಗಳನ್ನು ಕಿರಿದುಗೊಳಿಸಿ ಮೆನ್ನ ಆ ನೋಟಕ್ಕೆ ಪ್ರೇಕ್ಷಕನಾದ. ತಾನು ಕುಳಿತಲ್ಲಿಂದ ನದಿಮಧ್ಯದವರೆಗೂ ಐಗುಪ್ತದ ಎರಡು ಸಹಸ್ರ ದೇವತೆಗಳು ಸಾಲುಗಟ್ಟಿ ಕುಣಿಯುತ್ತಿದ್ದಂತೆ ಅವನಿಗೆ ಕಂಡಿತು. ಮಹಾಮಂದಿರದ ಮುಂದುಗಡೆ ಹರ್ಮ್ಯಾಕಿಸ್‌ನ ಅಂಗಡಿ

ಯಲ್ಲಿ ದೊರೆಯುತ್ತಿದ್ದ ಕಪ್ಪು, ಬಿಳಿ, ಕಂದು ಮರಗಳ ವಿಕೃತ ಮೂರ್ತಿಗಳು. ('ಇವತ್ತು ಎಡೆಬಿಡದ ವ್ಯಾಪಾರ ಮಗನಿಗೆ.') ಅರ್ಚಕ ಇನ್ನೇನಿ ಅಂದಿದ್ದ : 'ನೀರಾನೆ ಪ್ರಾಂತದಲ್ಲಿ ಒಳ್ಳೇ ದೇವತಾ ಮೂರ್ತಿಗಳನ್ನು ಮಾಡ್ತಾರೆ.' ದಿವ್ಯಮೂರ್ತಿಗಳು. ಭವ್ಯಮೂರ್ತಿಗಳು. 'ಓ ಮೆನೆಪ್ ಟಾ, ಓ ಮೆನೆಪ್ ಟಾ.' ನಿನ್ನೆಯ ದೊಡ್ಡ ಮನುಷ್ಯ ಇವತ್ತಿನ ದೇವರು. ಇವತ್ತಿನ ಧೀರೋದಾತ್ತ ವ್ಯಕ್ತಿ ನಾಳೆಯ ದೇವರು. ಈತ ಕತ್ತಲಿನಿಂದ ಬೆಳಕಿಗೆ ಆಗಮಿಸಬೇಕು. ಕತ್ತಲು ಮನೆಯಿಂದ ನೀಲ ನದಿಯ ಸ್ವಚ್ಛಂದ ಯಾನಕ್ಕೆ, ನೀರಾನೆ ಪ್ರಾಂತದ ವಿಮುಕ್ತ ಬದುಕಿಗೆ ಈತ ಸಾಗಬೇಕು.' ಹಸಿವು ಬಿಸಿಲು ಎರಡೂ ಸೇರಿ ಜೀವ ದಹಿಸಲು ಎಷ್ಟು ಕಾಲ ಬೇಕು ? ಮೆನ್ನ, ಓ ಮೆನ್ನ........

ನಿದ್ದೆ ಆವರಿಸಿದ ಅನುಭವ. ನದಿಯಲ್ಲಿ ಸದ್ದು. ನಾವೆಗಳ ಥಿಕ್ಕಿ ?

ಮೆನ್ನ ಹೌಹಾರಿ ಎದ್ದ. ಕಣ್ಣು ಹೊಸಕಿಕೊಂಡು ನದಿಯತ್ತ ನೋಡಿದ. ಯಾವ ನಾವೆಗಳೂ ಥಿಕ್ಕಿ ಹೊಡೆದಿರಲಿಲ್ಲ. ಅವನಿದ್ದ ಸ್ಥಳ ದಿಂದ ಕೆಳಕ್ಕೆ ನಾಲ್ಕು ಬೆರಳೂ ಸ್ಥಳವಿಲ್ಲದಂತೆ ದೋಣಿಗಳು ನೀರ ಮೈಯನ್ನು ಆವರಿಸಿದ್ದುವು. ಆಗ ತಾನೆ ಬಂದಿದ್ದೊಂದು ದೋಣಿ, ದಾರಿ ಇಲ್ಲವಲ್ಲ ಮುಂದೇನು ಎಂದು ಚಿಂತಿಸುತ್ತ, ವೃತ್ತಗಳನ್ನು ರಚಿಸತೊಡಗಿತ್ತು. ಚುಕ್ಕಾಣಿಯ ಬಳಿ ನಿಂತಿದ್ದ ದೋಣಿಕಾರ ನದಿಯ ಪಶ್ಚಿಮ ದಂಡೆಯತ್ತ ಬೊಟ್ಟು ಮಾಡಿದ ಮೇಲೆ, ಅಂಬಿಗರು ಆ ದಿಕ್ಕಿಗೆ ಹುಟ್ಟು ಹಾಕತೊಡಗಿದರು.

ನಿಂತಿದ್ದ ದೋಣಿಕಾರನ ಭಂಗಿ.

"ಬಟಾ !" ಎಂದು ಮೆನ್ನ ಅರಚಿದ. ಮರುಕ್ಷಣ ತಾನು ಕರೆದುದು ದಂಡೆಯ ಮೇಲಿನ ಯಾರಿಗಾದರೂ ಕೇಳಿಸಿತೇನೋ ಎಂದು ಕಾತರನಾಗಿ ಅತ್ತಿತ್ತ ನೋಡಿದ. ಎಲ್ಲೋ ಅಲ್ಲೊಂದು ಇಲ್ಲೊಂದು ಕರಿಯ ಚುಕ್ಕೆಗಳಿದ್ದುವು, ಅಷ್ಟೆ. ಮೆನ್ನ ತನ್ನ ತಲೆಯ ಬಟ್ಟೆಯನ್ನೆಳೆದು ಮೇಲಕ್ಕೆಸೆದ. ಅದು ತುಸು ಹರಡಿ ಹಾಯಿಯಾಯಿತು. ಮೆಲ್ಲನೆ ಕೆಳಗೆ ಬಂತು. ಅದನ್ನು ಹಿಡಿದು ಕೊಂಡು ನಿಶಾನೆಯಂತೆ ಬೀಸಿದ. "ಆ ! ಆ ! ಆ !" ಎನ್ನುತ್ತ ಕುಣಿದ.

ಸಾಕಷ್ಟು ವೇಗವಾಗಿ ಬಟಾನ ದೋಣಿ ಬಂದಿತ್ತು. ಎಷ್ಟೋ ನಾವೆಗಳನ್ನು ಅದು ಹಿಂದಿಕ್ಕಿತು. ಆದರೆ, ಇನ್ನು ಒಂದು ದಿನದ ಪಯಣ ಎನ್ನುವಾಗ ನದಿಯಲ್ಲಿ ದೋಣಿಗಳ ದಟ್ಟಣೆ ಹೆಚ್ಚಿತು ದೋಣಿಯ ಮೂಲೆಯಲ್ಲಿದ್ದ ಅಮನ್ ದೇವರಿಗೆ ಅವನೆಷ್ಟೋ ಪ್ರಾರ್ಥನೆ ಸಲ್ಲಿಸಿದ. ನಿಧಾನವಾಗಿ ಸಾಗುತ್ತಿದ್ದ ದೋಣಿಗಳು ಹಲವು. ಬಟಾನ ಅವಸರ ಕಂಡು ಅವರಲ್ಲಿ ಎಷ್ಟೋ ಜನ ಅಂದರು :

"ನೀವು ಎಷ್ಟೇ ಬೇಗ ಹೋದರೂ ಮೆರವಣಿಗೆ ನೋಡಲಾರಿರಿ. ನಿಧಾನ ಮಾಡಿ. ದೀಪಾಲಂಕಾರದ ಹೊತ್ತಿಗೆ ಹೋಗ್ತೀರಿ. ಅದು ಮೆರವಣಿಗೆಗಿಂತಲೂ ಚೆನ್ನಾಗಿರ್ತದೆ."

ನಿಧಾನ ಹೋಗುವ ದೋಣಿಗಳನ್ನು ಒರೆಸಿಕೊಂಡು ಹೋಗಬೇಕು· ಎಷ್ಟು ಕೂಗಿ ಹೇಳಿದರೂ ದಾರಿ ಬಿಡದವರನ್ನು ಹಿಡಿದು ಥಳಿಸಬೇಕು—ಎನ್ನುವಷ್ಟು ಸಿಟ್ಟು ಬಟಾನಿಗೆ. ಆದರೆ ಒಳಗಿನ ವಿವೇಕ ಎಚ್ಚರಿಕೆ ನೀಡಿತು : ತಾಳ್ಮೆ ತಪ್ಪಿ ಜಗಳಕ್ಕೆ ಇಳಿದೆಯೆಂದರೆ ಮತ್ತೂ ತಡವಾಗ್ತದೆ. 'ನಾನು ಮೆಂಫಿಸ್ ಬಿಡುವವರೆಗೂ ಎಲ್ಲ ಚೆನ್ನಾಗಿತ್ತು. ಅಲ್ಲಿಂದ ಹೊರಟೊಡನೆ ಸೆತ್ ತನ್ನ ಆಟ ಆರಂಭಿಸಿದ' ಎಂದು ಭಾವಿಸುತ್ತ ಬಟಾ ಮನಸ್ಸಿನಲ್ಲೇ ಗೋಳಾಡಿದ.

ಕೆಪ್ಪು ಅಂದಿದ್ದ : 'ಸೆಡ್ ಉತ್ಸವದ ಮುನ್ನಾ ದಿನದಿಂದಲೇ ಮೆನ್ನ ನಿಮ್ಮ ದಾರಿ ನೋಡ್ತಾನೆ. ದೋಣಿಕಟ್ಟೆಯಲ್ಲಿ ಅಲ್ಲ. ಎಡ ದಂಡೆಯ ಮೇಲೆ.'

ಆ ಮುನ್ನಾದಿನ ಕಳೆದು ಇರುಳಾಯಿತು. ಸೆಡ್ ಉತ್ಸವದ ಬೆಳಕು ಹರಿಯಿತು. ಬಿಸಿಲೇರಿತು. ಅಪರಾಹ್ನವಾಯಿತು. 'ದಾರಿ ನೋಡಿ ಬೇಸತ್ತು ಮೆನ್ನ ಹೊರಟು ಹೋಗಿರಬಹುದು....ಕತ್ತಲಾದ್ಮೇಲೆ ಜತನದಿಂದ ಅರಮನೆಯ ಹತ್ತಿರಕ್ಕೆ ಹೋಗಿ ಅವನನ್ನು ಹುಡುಕಬೇಕು. ಎಲ್ಲ ಸರಿ ಹೋಯಿತೆಂದರೆ, ಮೆನೆಪ್‌ಟಾ ಅಣ್ಣನನ್ನು ಕರೆದುಕೊಂಡು ಇವತ್ತು ರಾತ್ರಿಯೇ ಊರಿಗೆ ಹೊರಟು ಬಿಡಬೇಕು.'

ಬಟ್ಟೆಯನ್ನು ಮೇಲಕ್ಕೆ ಹಾರಿಸಿ ಕುಣಿಯುತ್ತಿರುವ ಆತ ! ಯಾಕೆ ಸಂದೇಹ ? ಮೆನ್ನನೇ, ಮೆನ್ನನೇ.

"ನೋಡಿ ನಮ್ಮ ಮೆನ್ನಣ್ಣ ! ಅಲ್ಲವಾ ?"

ಹೌದೆಂದರು ಅಂಬಿಗರು. ಆತನ ವಿಷಯ ಆಗಲೇ ಕೇಳಿ ತಿಳಿದಿದ್ದ ಅಬ್ಟು ಯಾತ್ರಿಕರೂ ಆತನ ಕಡೆಗೆ ದೃಷ್ಟಿ ಹರಿಸಿದರು.

ದೋಣಿಯಲ್ಲಿದ್ದ ಕೆಲವರು ಖ್ನೆಮು ದೇವನ ಸ್ತೋತ್ರ ಪಠಿಸಿದರು. ದೋಣಿ ದಂಡೆ ಮುಟ್ಟಿತು. ಮೆನ್ನ ಒದ್ದೆ ಮರಳಿನ ಮೇಲೆ ಮಂಡಿಯೂರಿ ದೋಣಿಯನ್ನು ಮುಟ್ಟಿ 'ಇಷ್ಟು ಹೊತ್ತು ತಡೆ ಹಿಡಿದದ್ದೇ ಹೆಚ್ಚು' ಎನ್ನುವಂತೆ ಗೊಳೋ ಎಂದು ಅತ್ತ ಬಟಾ ಕೆಳಕ್ಕೆ ಧುಮುಕಿ ಮೆನ್ನನ ಮಗ್ಗಲು ಸೇರಿದ. ಒಬ್ಬರನ್ನೊಬ್ಬರು ತಬ್ಬಿಕೊಂಡರು. ಆಧಾರತಪ್ಪಿ, ಕೆಳಕ್ಕುರುಳಿ, ಮರಳಲ್ಲಿ ಹೊರಳಾಡಿದರು. ಮೆನ್ನ ನಗುತ್ತ ಎದ್ದು ನಿಂತ. ಸುತ್ತಲಿದ್ದವರನ್ನೆಲ್ಲ ದಿಟ್ಟಿಸಿ ದಾಗ ಅವನ ಮುಖ ಗಂಭೀರವಾಯಿತು. ಬಟಾ ಎದ್ದು ತನ್ನನ್ನು ಸಮೀಪಿಸಿ ದೊಡನೆ ಅವನ ಕೈ ಹಿಡಿದು ಎಳೆದುಕೊಂಡು ಹೋದ. ದೋಣಿಯಲ್ಲಿದ್ದವರು ಕೆಳಕ್ಕಿಳಿದು ನಿಂತರು

"ಹೇಳಿ ಮೆನ್ನ ಹೇಳಿ ಮೆನ್ನ...."

"ನನ್ನ ಅಗೋಚರ ಕಾ ನಮ್ಮ ನಾಯಕರನ್ನು ಕಾಯ್ತದೆ ಅಂತ ಅಂದಿದ್ದೆ ಆಗಲಿಲ್ಲ, ಬಟಾ ಅಣ್ಣ, ನನ್ನಿಂದಾಗಲಿಲ್ಲ. ಕಾ ಅನ್ನೋದು ಬರಿಯ ನಂಬಿಕೆ, ಬಟಾ ಅಣ್ಣ, ಬರಿಯ ನಂಬಿಕೆ."

"ಯಾವಾಗ ಹಿಡಿದರು ?"

"ನಸುಕಿನಲ್ಲಿ. ನಾನು ಇಲ್ಲೇ ಇದ್ದೆ. ಇವತ್ತು ಹೊತ್ತೇರಿದ ಮೇಲೆ ಶೀಬಾ—ಕಸಾಯಿಯವಳು—ಬೆಕ ಔಟರಿಗೆ ಗೊತ್ತಂತಲ್ಲ—"

"ಹ್ಞ. ಹ್ಞ."

"—ಅವಳು ಬಂದು ಹೇಳಿದ್ಲು. ನಾಯಕರನ್ನು ಗೋರಿದರೋಡೆಗಾರ ಜಜ್‌ಮಂಖ್ ಇದ್ದ ನೆಲಮಾಳಿಗೇಲಿ ಇಟ್ಟಿದ್ದಾರೆ."

"ಬಿಡಿಸಿ ಕರಕೊಂಡು ಹೋಗೋದಕ್ಕೆ ದಾರಿ ?"

"ಶೀಬಾಳ ಸೈನಿಕ ಗಂಡ ಗಡಿಠಾಣ್ಯದಿಂದ ಬಂದಿದ್ದಾನೆ. ಸ್ವಲ್ಪ ಸಹಾಯ ಮಾಡಬಹುದು. ನೆಲಮಾಳಿಗೆ ಕಾವಲುಗಾರರು ಇಬ್ಬರು. ದೀಪೋ ತ್ಸವದ ಗಲಾಟೇಲಿ ನಿಮ್ಮ ಕೆಲಸ ಸುಲಭವಾಗ್ತದೆ."

"ನಮ್ಮವರಲ್ಲೇ ಎಂಟು ಹತ್ತು ಜನರನ್ನು ಆರಿಸ್ತೇನೆ. ನಾವು ಕಾರ್ಯ

ಮಗ್ನರಾದಾಗ ಬೆನ್ನುಗಾವಲು ಕೊಟ್ಟರೆ ಸಾಕು. ಅಣ್ಣನಿಗೆ ತಿಳಿಸೋದು ಹೇಗೆ ?"

"ನಾಯಕರಿಗೇಂತ ನಾನು ಅರಮನೆ ದೇವಮಂದಿರದಿಂದ ಪ್ರಸಾದ ತೆಗೆದುಕೊಂಡು ಹೋಗ್ತೇನೆ. ಭೇಟಿ ಸಾಧ್ಯವಾಗ್ತದೆ."

"ಮಾತನಾಡೋದಕ್ಕೆ ನಾನೂ ಬರಬೌದಾ ?"

"ಹೇಗೆ ಸಾಧ್ಯ ಬಟಾ ಅಣ್ಣ ?

"ಹೌದು ಏನೋ ಆಸೆ. ಹೇಳ್ದೆ. ನೀವು ತಿಳಿಸೋದೂ ಒಂದೇ ನಾನು ತಿಳಿಸೋದೂ ಒಂದೇ."

ಆ ಕ್ಷಣ, ಮೆನೆಪ್‌ಟಾ ಒಪ್ಪದಿರಬಹುದು ಎಂಬ ಶಂಕೆ ಬಟಾನಲ್ಲಿ ಮೂಡಿತು. ಆಗಿನ ಅಸಹಾಯತೆಗಾಗಿ ತನ್ನ ಮೇಲೆಯೇ ಸಿಟ್ಟುಗೊಂಡು ಅವನೆಂದ :

"ಕರಕೊಂಡು ಹೋಗೋದಕ್ಕೆ ಅಬ್ಟು ಯಾತ್ರಿಕರೆಲ್ಲ ಬಂದಿದ್ದಾರೇಂತ ಅಣ್ಣನಿಗೆ ತಿಳಿಸಿ. ನಾವು ನೀರಾನೆ ಪ್ರಾಂತ ತಲಪಿದೊಡನೆ ಕುಯಿಲಿನ ಹಬ್ಬ. ನಾಯಕರಿಗಾಗಿ ಜನ ಕಾಯ್ತಿದ್ದಾರೆ. ಅನವಶ್ಯವಾಗಿ ಒಂದು ಕ್ಷಣವೂ ನಾವು ಇಲ್ಲಿ ನಿಲ್ಲಬಾರದು. ಅವನ ಮಗ ರಾಮೆರಿ ಬಂದಿದ್ದಾನೆ ಅನ್ನಿ. ಅಹೂರಾ ಬಂದಿರೋದನ್ನೂ ಹೇಳಿ. ಅಬ್ಟು ಯಾತ್ರೆ ಎಷ್ಟು ಪವಿತ್ರವಾಗಿತ್ತೋ ಇದೂ ಅಷ್ಟೇ ಪವಿತ್ರ....ಅವನು ಒಪ್ಪಬೇಕು."

ಗುಂಪಿನ ಮಧ್ಯದಿಂದ ಆಗಾಗ್ಗೆ ತಮ್ಮೆಡೆಗೆ ದೃಷ್ಟಿ ಬೀರುತ್ತಿದ್ದ ಹುಡುಗ ನನ್ನು ನೋಡುತ್ತ ಮೆನ್ನ ಅಂದ :

"ನಿಮ್ಮ ಜತೆ ನಾನೂ ಬರ್ತಾ ಇದ್ದೇನೆ—ಅನ್ನಲಾ ?"

"ಹೂಂ ಮೆನ್ನ, ಹೂಂ."

"ನೆಲಮಾಳಿಗೆಯಿಂದ ಅವರು ಹೊರಬಂದ ಮೇಲೆ ನನ್ನ ಜವಾಬ್ದಾರಿ. ನೇರ ನದಿ ಸೇರುವ ಕಳ್ಳದಾರಿ ಇದೆ."

"ಔಟ—ಬೆಕ್ ?"

"ಶೀಬಾ ನೋಡ್ಕೊಳ್ತಾಳೆ. ನಡುರಾತ್ರಿಗೆ ಮುಂಚೆ ದೀಪೋತ್ಸವದ ಸಡಗರ ಪರಾಕಾಷ್ಠೆಗೆ ಮುಟ್ಟಿದಾಗ ಈ ಕೆಲಸ ಆಗ್ಬೇಕು."

"ನಾನು ಇನ್ನು ಸ್ವಲ್ಪಹೊತ್ತಿನಲ್ಲಿ ಹೊರಡ್ತೇನೆ. ನಾಯಕರನ್ನು

ಭೇಟಿ ಮಾಡಿದ್ಮೇಲೆ ಇಲ್ಲಿಗೆ ವಾಪಸಾಗ್ತೇನೆ. ಅಷ್ಟರವರೆಗೆ ನೀವೆಲ್ಲ ಇಲ್ಲಿಯೇ ಇರಿ."

ಅಂಬಿಗರಿಗೆ ಕಾತರ. ಅಬ್ಬು ತಂಡದವರಿಗೂ. ಏನರ್ಥ ಇವರ ಮಾತು ಕತೆಗೆ? ರಾಜಧಾನಿಯ ವ್ಯವಹಾರ ನೀತಿಗಳನ್ನು ಈಗ ಸಾಕಷ್ಟು ಬಲ್ಲ ಅಂಬಿಗರಿಗೆ ಅನಿಸಿತು—ಆಗಬಾರದ್ದು ಏನೋ ಆಗಿದೆ....

ಮೆನ್ನನೊಂದಿಗೆ ಬಟಾ ಅವರ ಬಳಿ ಸಾರಿದ. ಎಲ್ಲರೂ ಮರಳಿನ ಮೇಲೆ ಕುಳಿತರು. ತಾನೂ ಕುಳಿತು, ಬಾಧಿಸತೊಡಗಿದ ನಡುಕವನ್ನು ಓಡಿಸ ಲೆಂದು ಅವುಡುಗಚ್ಚಿ, ಕಡಿಕಡಿದು ಬಂದ ಪದಗಳಲ್ಲಿ ಬಟಾ ನುಡಿದ :

"ನಮ್ಮ—ನಾಯಕರನ್ನ—ಔಟ—ಬೆಕ್‌ರನ್ನೂ— ಹಿಡಿದಿಟ್ಟಿದ್ದಾರೆ."

ಬಟಾ ಬಂದು ಹತ್ತಿರ ಬಂದಾಗ ನೆಲೆಸಿತ್ತು ಮೌನ. ಆತ ಮಾತ ನಾಡಿದ ಮೇಲೆ, ಅದು ಗಾಢವಾಯಿತು. ಎಲ್ಲರೂ ಬಟಾನ ಕಡೆ ನೋಡಿ ದರು. ಮಾತೇನಾದರೂ ಇದ್ದರೆ ಅದು ಅವನಿಂದ ಬರಬೇಕು. ತಾಯಿ ಕೊಟ್ಟಿದ್ದ ರೊಟ್ಟಿ ತುಣುಕನ್ನು ಮೆಲ್ಲುತ್ತ ಮರಳಿನ ಮೇಲೆ ಕುಳಿತಿದ್ದ ಅಹೂ ರಾಳ ಮಗು ಇದೇನು ಮೌನ ಎಂದು ದೊಡ್ಡವರನ್ನೆಲ್ಲ ಒಮ್ಮೆ ನೋಡಿತು. ಬಳಿಕ ಹೆತ್ತವಳತ್ತ ತಿರುಗಿ, "ಅಮ್ಮಾ, ಅಮ್ಮಾ," ಎಂದಿತು ಬರಿಯ ಅಂಗೈ ಗಳನ್ನು ತೋರಿಸುತ್ತ.

ತಾಯಿ ಮಗಳನ್ನೆತ್ತಿಕೊಂಡಳು; "ಸುಮ್ನಿರು" ಎಂದಳು, ಮೆಲ್ಲನೆ.

ಮೇಲಕ್ಕೆ ದೂರದಲ್ಲಿ ದೋಣಿ ಚುಕ್ಕೆಗಳು ಕಾಣಿಸಿದುವು.

ಮೆನ್ನ ಇಳಿದನಿಯ ಎಚ್ಚರಿಕೆ ನೀಡಿದ :

"ಜನ ಇನ್ನೂ ಬರ್‍ತಿದ್ದಾರೆ."

"ನಾವು ಹಿಂದಿಕ್ಕಿ ಬಂದವರೇ. ಆದರೂ ನಾವು ಇಲ್ಲಿಂದ ಹೊರಟು, ಬೇರೆಯೇ ಇರೋದು ಮೇಲು," ಎಂದ ಬಟಾ.

ಅಹೂರಾ ಅಂದಳು :

"ಹೇಳು, ಅಣ್ಣ, ಏನು ಮಾಡೋಣ ಈಗ ?"

ಬಂಧಿತರನ್ನು ಮುಕ್ತಗೊಳಿಸಿ ರಾತ್ರಿಯೇ ಊರಿಗೆ ಮರಳಬೇಕು—ರಹಸ್ಯವಾಗಿ. ಅಂಬಿಗರು ನಾಲ್ವರೂ ದೋಣಿಯನ್ನು ಕಾಯುತ್ತ ಇಲ್ಲಿರಲಿ ಒಂದೈದು ಜನ ನನ್ನ ಜತೆ ಬರಬೇಕು. ಯಾರು ? ಪ್ರಾಣ ತೆರಬೇಕಾದೀತು.

ಯಾರು ? ಎಲ್ಲರೂ ? ಬೇಡ. ಐವರು ಸಾಕು. ('ನೀನೇ ಹೇಳು ಬಟಾ.' 'ಹ್ಞ. ನೀನು, ನೀನು, ನೀನು....')

ಪಿಸುದನಿ. ಗಾಳಿಯ ಮೇಲೆ ಪದಗಳು ಸವಾರಿ ಮಾಡಬಾರದು.

"ನಮ್ಮ ಈ ಮೆನ್ನಯ್ಯ ಹೋಗಿ ನಾಯಕರನ್ನು ಹೇಗಾದರೂ ಮಾಡಿ ಕಂಡು, ಏರ್ಪಾಟು ಮಾಡ್ತಾರೆ. ರಾಮೆರಿ, ನೀನು ಅಹೂರಾ ಅತ್ತೆ ಒಟ್ಟಿಗೆ ಇರ್ಬೇಕು. ನೀವೆಲ್ಲ ಸಣ್ಣ ಸಣ್ಣ ಗುಂಪುಗಳಾಗಿ ಹತ್ತಿರ ಹತ್ತಿರವೇ ಇರಿ. ದೂರದಿಂದ ಅರಮನೆಯ ದೀಪಾಲಂಕಾರ, ದಂಡೆಯ ಮೇಲಿಂದ ತೆಪ್ಪೋತ್ಸವ ನೋಡ್ಬಹುದು. ಪೆರೋ ಅರಮನೆಗೆ ಹೊರಟ ತಕ್ಷಣ ನೀವು ಇಲ್ಲಿಗೆ ಬನ್ನಿ. ನೆನಪಿಟ್ಕೊಳ್ಳಿ. ಯಾರು ಕೇಳಿದರೂ ನೀವು ನೀರಾನೆ ಪ್ರಾಂತದವರಲ್ಲ. ಟಗರು ಪ್ರಾಂತದವರು. ಯಾರ ಗುರುತೂ ನಿಮಗಿಲ್ಲ. ನೀವು ಬಡ ಪರದೇಶಿಗಳು. ಅರ್ಥವಾಯ್ತಾ ?"

ಅರ್ಥವಾಗಿತ್ತು.

ಬಾಕುಗಳು. ನಾಲ್ಕು ಅಂಬಿಗರಿಗೆ. ಉಳಿದವು ಬಟಾ ಮತ್ತು ಐವರಿಗೆ.

"ಆ ದೋಣಿಗಳು ಈ ಕಡೆಗೆ ಬರ್‍ತಿವೆ. ಸೆಡ್ ಉತ್ಸವದ ಯಾತ್ರಿಕರು ಹೊರಡಿ. ಇನ್ನೇನು ಸ್ವಲ್ಪ ಹೊತ್ತಿನಲ್ಲಿ ರಾ ಮುಳುಗಿಯೇ ಬಿಡ್ತಾನೆ.... ಮೆನ್ನಯ್ಯ ನೀವೂ ಹೊರಡಿ. ಯಶಸ್ವೀ ರಾಯಭಾರ ಮುಗಿಸಿಬನ್ನಿ. ಇಲ್ಲಿಯೇ ಹತ್ತಿರ ಕಾಯ್ತಿರ್‍ತೇವೆ."

ಕುಳಿತವರು ಏಳುತ್ತಿದ್ದಂತೆ, ಮೆನ್ನ ತಲೆತಗ್ಗಿಸಿದ. ಹಾಗೆಯೇ ನೆಲ ನೋಡುತ್ತ ಅರಮನೆಯ ಕಡೆಗೆ ಬೀಸುವ ಗಾಳಿಯಾದ.

* * * *

ಸಹಸ್ರ ಸಹಸ್ರ ದೀಪಗಳ ರಾಜ್ಯದಲ್ಲೂ ಅಲ್ಲಿ ಇಲ್ಲಿ ಕತ್ತಲೆಯ ಕಣ್ಣು ಮುಚ್ಚಾಲೆಯಾಟ. ನದಿದಂಡೆಯ ಪ್ರಾಕಾರ ದ್ವಾರದತ್ತ ಮೆನ್ನ ಸಾಗಿದ. ಎರಡು ರಾಜನಾವೆಗಳನ್ನು ಪುಷ್ಪಗಳಿಂದ ಅಲಂಕರಿಸಿ ತೆಪ್ಪೋತ್ಸವಕ್ಕೆ ಅಣಿಗೊಳಿಸುತ್ತಿದ್ದರು.

ಬಾಗಿಲಿನ ಕಾವಲು ಭಟರಲ್ಲೊಬ್ಬ, "ಬಂದ್ರುಪ್ಪ ಪುಜ್ಯಯ್ಯನವರು," ಎಂದ. ದಾಸಿಯರ ಸಂದಣಿಯ ಮೇಲೆ ದೃಷ್ಟಿ ನೆಟ್ಟಿದ್ದ ಇನ್ನೊಬ್ಬ ಭಟ ಯಾವ ಪ್ರತಿಕ್ರಿಯೆಯನ್ನೂ ತೋರಲಿಲ್ಲ. ಮೆನ್ನ ಒಳಕ್ಕೆ ನಡೆದು, ನೇರವಾಗಿ ಪವಿತ್ರ ಕೊಳಕ್ಕೆ ಹೋದ. ಮಿಂದ. ಒದ್ದೆಯುಟ್ಟುಕೊಂಡ. ಮಂದಿರದಲ್ಲಿ ದೀಪಗಳು ಥಾಳಾಗಿ ಉರಿಯುತ್ತಿದ್ದುವು. ದೇವಸೇವಕರು ಯಾರೂ ಇರಲಿಲ್ಲ. ಮುದ್ರೆಯೊತ್ತಿದ್ದ ಗರ್ಭಗುಡಿಯ ಬಾಗಿಲಿನೆದುರು, ಹೂ ಹಣ್ಣುಗಳು ಹೇರಳ ವಾಗಿ ಬಿದ್ದಿದ್ದುವು. ಬದಿಗೆ ಸಾಗಿ ಮಂದಿರದ ಚಿಲ್ಲರೆ ಸಾಮಾನುಗಳ ಉಗ್ರಾಣ ದಿಂದ ಜೊಂಡಿನ ಹೆಣೆದ ತಟ್ಟೆಯನ್ನು ತಂದು ಅದರಲ್ಲಿ ಬೇರೆ ಬೇರೆ ಹೂವು ಗಳನ್ನೂ ಅಂಜೂರ ಖರ್ಜೂರಗಳನ್ನೂ ಓರಣವಾಗಿ ಜೋಡಿಸಿದ. ತಟ್ಟೆಯ ನ್ನೆತ್ತಿಕೊಂಡು ಬಳಸು ದಾರಿ ಹಿಡಿದು ಕಾರಾಗೃಹದತ್ತ ನಡೆದ.

ಸಂದಿಯಲ್ಲೆಲ್ಲಿಂದಲೋ "ಅಯ್ಯ" ಎಂಬ ಪಿಸುದನಿ ಕೇಳಿಸಿತು. ಶೀಬಾ. ಮೆನ್ನ ನಿಂತ. ಶೀಬಾ ಸರಸರನೆ ಬಂದು, "ಅವರು ಬಂದರಾ ?" ಎಂದು ಕೇಳಿದಳು. "ಹೂಂ" ಎಂದ ಮೆನ್ನ. ಆತನ ತಟ್ಟೆಯಲ್ಲಿದ್ದ ಹೂಗಳನ್ನು ಸರಿಸಿ, ತನ್ನ ನಡುವಸ್ತ್ರದ ಮಡಿಯಲ್ಲಿದ್ದ ಎರಡು ರೊಟ್ಟಿ ತೆಗೆದು ಅದರ ನಡುವಿ ನಲ್ಲಿಟ್ಟಳು. ಅವನ್ನು ಹೂ ಹಣ್ಣುಗಳಿಂದ ಮುಚ್ಚಿ, "ಮತ್ತೆ ಸಿಗ್ತೇನೆ," ಎಂದು ಹೇಳಿ ಕತ್ತಲಲ್ಲಿ ಕರಗಿ ಹೋದಳು.

ಮೆನ್ನ ಉಲ್ಲಸಿತನಾದ. "ಜಗದ್ರಕ್ಷಕ ಪ್‌ಟಾ, ಸರ್ವಜನಪೂಜಿತ ಪ್‌ಟಾ," ಎಂದು ಸ್ತೋತ್ರ ಪಠಿಸುತ್ತ ಮುಂದುವರಿದ. ಕತ್ತಲಲ್ಲಿ ಆ ಕಡೆ ಈ ಕಡೆ ಇದ್ದ ಅರಮನೆ ಪರಿಚಾರಕರು ದೇವಸೇವಕರು ಬಂದರೆಂದು ದಾರಿ ಬಿಟ್ಟರು.

ಮೆನ್ನ ಯಾವ ಅಳುಕೂ ಇಲ್ಲದೆ ನೆಲಮಾಳಿಗೆಯ ಹೊರಬಾಗಿಲನ್ನು ಸಮೀಪಿಸಿದ. ಸ್ತೋತ್ರ ತಮ್ಮೆಡೆಗೆ ಬಂತೆಂದು ಕಾವಲು ಯೋಧರಿಗೆ ಅಚ್ಚರಿ.

ಅವರೆದುರು ನಿಂತು ಮೆನ್ನ ಅಂದ :

"ಪೆರೋನ ಆಯುರಾರೋಗ್ಯ ವರ್ಧಿಸಲಿ ! ಮಹಾ ಅರ್ಚಕರು ಕೈದಿಗೆ ಮಂದಿರದ ಪ್ರಸಾದ ಕಳಿಸಿದ್ದಾರೆ."

ಕುಳಿತುಕೊಂಡ. "ನಾಳೆ ವಿಚಾರಣೆ" ಎಂದ, ತಗ್ಗಿದ ಧ್ವನಿಯಲ್ಲಿ.

ಆ ಎರಡು ಪದಗಳು ಬಟಾನಿಗೆ ಇನ್ನೆಷ್ಟನ್ನೋ ತಿಳಿಸಿದುವು.

"ಒಪ್ಪಲಿಲ್ಲ ಅಲ್ಲವಾ ?"

"ಊಹೂಂ. ಅದು ಇಡಿಯ ನೀರಾನೆ ಪ್ರಾಂತದ ಪ್ರಜೆಗಳ ವಿಚಾರಣೆಯಂತೆ. ಸಿಂಹದಂತೆ ಬಂದೆ, ನರಿಯಂತೆ ಓಡಿಹೋಗಲೆ ?—ಅಂತ ಕೇಳಿದ್ರು. ನಮ್ಮ ನ್ಯಾಯ ನಿಲುವನ್ನು ಅವರಿಗೆಲ್ಲ ಮುಂದಿಟ್ಟು ಮಾಡಿಕೊಟ್ಟು, ಅವರ ಎದುರಲ್ಲೇ ಹೊರಟು ಬರ್ತೇನೆ—ಅಂದ್ರು....ಔಟ, ಬೆಕ್‌ರನ್ನು ದೊಡ್ಡಿ ಮನೇಲಿಟ್ಟಿದ್ದಾರೆ. ಅವರಿಗೆ ಊಟ ಸಿಕ್ಕಿತೋ ಇಲ್ಲವೋ ಅಂತ ಚಿಂತೆ ನಾಯಕರಿಗೆ."

"ಕಷ್ಟ," ಎಂದ ಬಟಾ, ಯಾವುದು ಎಂಬುದನ್ನು ವಿವರಿಸುವ ಗೋಜಿಗೆ ಹೋಗದೆ.

ಬಹಳ ಹೊತ್ತಿನ ಮೂಕ ಯಾತನೆಯ ಬಳಿಕ ಅವನು ಕೇಳಿದ :

"ವಿಚಾರಣೆ ನಡೆಯೋದು ಅಮಾತ್ಯ ಭವನದಲ್ಲಿ ಅಲ್ಲವಾ ?"

"ಹೌದು."

"ಹೊರಗಿನವರನ್ನು ಬಿಡ್ತಾರಾ ?"

"ಜಜ್‌ಮುಂಖ್‌ನ ವಿಚಾರಣೆ ಆದಾಗ ನಾನು ಹೋಗಿದ್ದೆ. ಸಾಮಾನ್ಯ ಜನ ದೊಡ್ಡ ನ್ಯಾಯಾಲಯದ ವೈಖರಿ ನೋಡೋದು ಬೇಡವಾ ? ಇವತ್ತು ಇಂಥಿಂಥವರ ವಿಚಾರಣೆ ಅಂತ ಡಂಗುರ ಸಾರ್ತಾರೆ. ನೂರಿನ್ನೂರು ಜನರನ್ನು ಒಳಗೆ ಬಿಡ್ತಾರೆ...."

"ನಾವು—"

"ಗೊತ್ತಾಯ್ತು ಪ್ರಶ್ನೆ ಯಾಕೆ ಕೇಳಿದ್ದು ಅಂತ. ಗುರುತು ಹಿಡಿದು ನಿಮ್ಮನ್ನೆಲ್ಲ ದೊಡ್ಡಿ ಮನೆಗೆ ಸೇರಿಸ್ತಾರೆ."

"........"

"ನಿಮ್ಮ ಮೇಲೆ ಗದೆ, ಬಾಣ ಪ್ರಯೋಗಿಸಿದವರು, ಬಕಿಲ, ಟೆಹುಟಿ, ಗೇಬು, ನಿಮ್ಮ ಪ್ರಾಂತಕ್ಕೆ ಬಂದಿದ್ದ ರಾಜದೂತ, ಸಾಲದ್ದಕ್ಕೆ ನಿಮ್ಮಲ್ಲಿನ ಭೂಮಾಲಿಕರು !....ಇಂಥ ದುಸ್ಸಾಹಸಕ್ಕೆ ಕೈಹಾಕುವಂತಿಲ್ಲ."

"ವಿಚಾರಣೆಯ ಕಾಲದಲ್ಲಿ ನಮ್ಮವರು ಯಾರೂ ಇರೋದಿಲ್ಲ ಅಂತ ಬೇಸರ."

"ನಾನು ಅಲ್ಲಿರ್ತೇನೆ."

"ಹೂಂ ಮೆನ್ನಯ್ಯ. ನನಗೆ ಬುದ್ಧಿ ಇಲ್ಲ. ನೀವುಬೇರೆನಾ ? ನಾವು ಬೇರೆನಾ ?"

"ಹತ್ತಿರದಲ್ಲೇ ನೀವು ಬಚ್ಚಿಟ್ಕೊಂಡಿರಬೇಕು ನೀವು. ಕತ್ತಲಾದ ತಕ್ಷಣ ಏನಾದರೂ ಸಾಧ್ಯವಾದರೆ—"

"ಸರಿ."

....ಆ ರಾತ್ರಿ ಇನ್ನುಳಿದ ಅಬ್ಬು ಯಾತ್ರಿಕರು ಅರಮನೆಯ ದೀಪಾಲಂಕಾರ ನೋಡಿದರು. (ಸಹಸ್ರಾರು ಪಂಜುಗಳು, ಹಲವು ಸಹಸ್ರ ಹಣತೆಗಳು.) ಅರಮನೆಯ ಬಯಲಲ್ಲಿ ನಡೆದ ಹಾಡು, ಕುಣಿತ, ಕುಸ್ತಿಗಳಿಗೆ ಅವರು ಪ್ರೇಕ್ಷಕರಾದರು. ಮಹಾಪ್ರಭು, ಮಹಾರಾಣಿ ಮತ್ತು ಅರಸು ಸಂತತಿಯನ್ನು ಹೊತ್ತ ರಾಜನಾವೆಗಳು ಬೆಳಕಿನ ಹಂಸಗಳಾಗಿ ಸಂಗೀತದ ಅಲೆಗಳ ಮೇಲೆ ತೇಲಿದುದನ್ನು, ದಂಡೆಯ ಮೇಲೆ ನಿಂತು ಕಂಡರು. ಇವರು ಸಣ್ಣ ಸಣ್ಣ ಗುಂಪುಗಳಾಗಿ, ಹರ್ಷವಿಲ್ಲದೆ, ನಗೆ ಮಾತಿಲ್ಲದೆ, ಪಿಳಿಪಿಳಿ ಕಣ್ಣು ಬಿಡುತ್ತಿದ್ದ ಮೂವತ್ತಮೂರು ಬಡಜನರು.

ಅರಮನೆಯ ಮಹಾದ್ವಾರದ ಹೊರಗೆ ಬಡವರಿಗೆ ಭಕ್ಷ್ಯಗಳ ವಿತರಣೆ ಯಾಯಿತು. ಈ ಜನ ಅತ್ತ ಹೋಗಲಿಲ್ಲ.

ಮಾನಸಿಕ ಸಂಕಟದ ಭಾರದಿಂದ ಕುಗ್ಗಿ, ಬಳಲಿದ ಪಾದಗಳನ್ನು ಎಳೆದು ನಡೆಯುತ್ತ, ಗೊತ್ತಾಗಿದ್ದ ವೇಳೆಗಿಂತಲೂ ಮೊದಲೇ ದೋಣಿಯ ಬಳಿಗೆ ಬಂದು ತಲಪಿದರು....

"ನಾಳೆ ವಿಚಾರಣೆ" ಎಂಬ ಪದಗಳು ಅವರ ಯೋಚನೆಗಳನ್ನು ಒಂದಾಗಿ ಬೆಸೆದುವು.

ಅಹೂರಾ ಊಟದ ಉಸ್ತುವಾರಿ ನೋಡಿದಳು. ಮೆನ್ನನೂ ಪ್ರಯಾಸ ಪಟ್ಟು ಒಂದೆರಡು ತುತ್ತು ನುಂಗಿದ.

ಆ ಇರುಳನ್ನು ಅಲ್ಲಿ ಕಳೆಯಬೇಕು.

'ನಾಳೆ ವಿಚಾರಣೆ.'

ಬಟಾ ಅಂದ :

"ನಮ್ಮೂರಿಗೆ ಇವತ್ತು ಪ್ರಯಾಣವಿಲ್ಲ. ನಾಳೆ. ನಾಳೆ ರಾತ್ರೆ."

೧೨

ರಾಜಧಾನಿಯ ಆಯಕಟ್ಟಿನ ಸ್ಥಳಗಳಲ್ಲಿ ನಿಂತು ಡಂಗುರದವನು ಸಾರಿದ :

"ಕೇಳಿರಿ ! ಕೇಳಿರಿ ! ದುಷ್ಟ ನಿಗ್ರಹ ಶಿಷ್ಟ ರಕ್ಷಕ ಪೆರೋ ಮಹಾ ಪ್ರಭುವಿನ ದೈವಿಕ ರಾಜ್ಯಭಾರದ ವಿರುದ್ಧ ಬಂಡಾಯವೆದ್ದ ನೀರಾನೆ ಪ್ರಾಂತದ ನಾಯಕನ ವಿಚಾರಣೆ ಈ ದಿನ ನ್ಯಾಯಮೂರ್ತಿ ಅಮಾತ್ಯರ ಸಮ್ಮುಖದಲ್ಲಿ ನಡೀತದೆ. ಕೇಳಿರಿ ! ಕೇಳಿರಿ !"

ಸೆಡ್ ಉತ್ಸವದ ನಿದ್ದೆ ಇಲ್ಲದ ಇರುಳಿನ ಬಳಿಕ ರಾಜಧಾನಿಯ ನಾಗರಿಕರು ನಿಧಾನವಾಗಿ ಏಳುತ್ತಲಿದ್ದರು. ನಗರ ತುಂಬ ಇನ್ನೂ ಹಬ್ಬದ ವಾತಾವರಣವೇ. ನಿತ್ಯದ ದುಡಿಮೆಯಲ್ಲಿ ನಿರತರಾಗಲು ಯಾರಿಗೂ ಮನಸ್ಸಿಲ್ಲ. ನದಿಯಲ್ಲಿ ತೆಪ್ಪೋತ್ಸವ ನಡೆಯುತ್ತಿದ್ದಾಗ ರಾಜಧಾನಿಯ ಹಲವು ಮನೆಗಳಲ್ಲಿ ಕಳ್ಳತನ ವಾಗಿತ್ತು. "ನಮ್ಮ ಸರ್ವಸ್ವವೂ ಹೋಯಿತು," ಎಂದು ಆ ಮನೆಗಳಲ್ಲಿ ರೋದನ. ಸೆಡ್ ಸಮಾರಂಭದ ನಿಮಿತ್ತ ಪೆರೋ ಬಿಡುಗಡೆ ಮಾಡಿದರಲ್ಲ— ಆ ಕಳ್ಳರದೇ ಕಾಯಕ ಎಂದು ಕೆಲವರು ಇಳಿದನಿಯಲ್ಲಿ ಕೂಗಾಡಿದರು. ಬೇರೆ ಕೆಲವರು ಅಂದರು : "ಕಷ್ಟ ನಿಮಗೆ ಮಾತ್ರವಾ ? ಜಜ್‌ಮುಂಖನನ್ನೂ ಬಿಟ್ಟಿದ್ದಾರೆ. ಸತ್ತ ಶ್ರೀಮಂತರಿಗೆ, ರಾಜ ಬಂಧುಗಳಿಗೆ ಗೋರಿಗಳಲ್ಲಿ ಇನ್ನು ನಿದ್ದೆಯೇ ಇಲ್ಲ."

ಈಗ ಈ ಡಂಗುರ....ದೈವಿಕ ರಾಜ್ಯಭಾರದ ವಿರುದ್ಧ ಬಂಡಾಯ.... ಮನೆಮುರುಕರು ! ನಿದ್ದೆಗೇಡಿಗಳು !

ನಿನ್ನೆಯಿಂದ ಇವತ್ತಿಗೆ, ಇವತ್ತಿನಿಂದ ನಾಳೆಗೆ ಬಾಳು. ಅಷ್ಟಷ್ಟಕ್ಕೇ ನೆನಪಿನ ತುಣುಕುಗಳು. (ಮರಣಾನಂತರ ಮಾತ್ರ ಮೂರು ಸಾವಿರ ವರ್ಷಗಳ ಬದುಕು.) ಆದರೂ ಕೆಲವರಿದ್ದರು. ನೀರಾನೆ ಪ್ರಾಂತ ಎಂದಾಗ ಯೋಚನೆ ಗಳ ಪೆಟ್ಟಿಗೆಯನ್ನು ತಟ್ಟಿದಂತಾಯಿತು. ಒಂದು ವರ್ಷದ ಹಿಂದೆ ಅಲ್ಲಿ ಅದೇನೋ ಆಯಿತಲ್ಲ ? ವಿಚಾರಣೆ ಆ ಬಂಡಾಯ ನಾಯಕನದೇ ಏನು ?

ಯಾಕಿಷ್ಟು ತಡ ? ಇಲ್ಲಿಗೆ ಕರೆಸಿದರಂತಲ್ಲ ? ಅತಿಥಿಗೃಹದಲ್ಲೋ ಕಾರಾಗೃಹದಲ್ಲೋ ಇಟ್ಟರಂತಲ್ಲ ? ಯಾರೋ ಅಂದಿದ್ದರು : "ಅವನು ಸಜ್ಜನ." ಹಾಗಾದರೆ ಸಜ್ಜನನ ವಿಚಾರಣೆ....

ಇನ್ನೂ ಕೆಲವರೆಂದರು "ನಾವು ಇವತ್ತು ದುಡಿಯದಿದ್ದರೂ ಅಮಾತ್ಯರು ದುಡೀತಾರೆ. ಅಧಿಕಾರಿಗಳೂ ಕೂಡ. ಆಳುವವರಿಗೆ ವಿಶ್ರಾಂತಿಯೆ" ಇಲ್ಲ."

ಅರಮನೆಯ ಆವರಣದಲ್ಲಿ ಡಂಗುರದ ಸದ್ದಿಲ್ಲ. ಆದರೆ ಸೇವಕ ಸೇವಕಿಯರೆಲ್ಲ ಬಲ್ಲರು. ಅವರಿಗೆ ಮೆನೆಪ್‌ಟಾ "ಬಡಜನರ ದೊಡ್ಡ ನಾಯಕ." ನ್ಯಾಯಸ್ಥಾನದಲ್ಲಿ ಪ್ರೇಕ್ಷಕರಾಗುವ ಸ್ವಾತಂತ್ರ್ಯ ಅವರಿಗಿದೆ. ಜಜ್‌ಮುಂಖನ ವಿಚಾರಣೆಯಾದಾಗ ಸರದಿಯಲ್ಲಿ ತಂಡ ತಂಡಗಳಾಗಿ ಹೋಗಿ ನೋಡಿದ್ದರು. ಈ ದಿನವೂ ಹೋಗಬಹುದು. ಆದರೆ ಉತ್ಸವದ ಮಾರನೆಯ ದಿನ ಕೆಲಸವೇನು ಕಡಮೆಯೆ ? ತಿಕ್ಕುವ, ತೊಳೆಯುವ, ದುಡಿಮೆ. ಸಹಸ್ರಾರು ಜನ ಇದ್ದರೂ ಸಾಲದು. ಸಾಧ್ಯವಾದರೆ ಅಪರಾಹ್ನ ಇಣಿಕಿ ನೋಡಿ ಬರಬೇಕು.

ನ್ಯಾಯಸ್ಥಾನದ ಏರ್ಪಾಟಿನ ಉಸ್ತುವಾರಿ ಹಿರಿಯ ಲಿಪಿಕಾರ ಸೆನೆಬ್‌ನದು. ಅಮಾತ್ಯ ನಿತ್ಯದ ಕಾರ್ಯ ನಿರ್ವಹಿಸುವ ಸಭಾಭವನ ನ್ಯಾಯದ ಆಸ್ಥಾನವಾಗಿ ಮಾರ್ಪಟ್ಟಿತು. ಈ ದಿನ ಆಮೆರಬ್‌ನದು ನ್ಯಾಯಮೂರ್ತಿಯ ಪಾತ್ರ. ಮಹಾ ಅರ್ಚಕ ನ್ಯಾಯಸ್ಥಾನಕ್ಕೆ ಬಂದು ಕುಳಿತುಕೊಳ್ಳುವರೆಂದು ಕೇಳಿ ಸೆನೆಬ್‌ಗೆ ಪರಮಾಶ್ಚರ್ಯ. ಅಂಥದು ಹಿಂದೆಂದೂ ನಡೆದಿರಲಿಲ್ಲ. ಅಮಾತ್ಯರಿಂದ ತುಸು ದೂರದಲ್ಲಿದ್ದ ಅವರಿಗೆ ವಿಶೇಷ ಪೀಠವ್ಯವಸ್ಥೆ. ಚಿರತೆಯ ತುಣುಕು ಚರ್ಮ ಅದಕ್ಕೆ. ....ಜಜ್‌ಮುಂಖ್‌ನ ವಿಚಾರಣೆಯಂದು ಪೆರೋ ಪರಿವಾರ ಬಂದಿತ್ತು. ಅವರು ದೂರದ ವೇದಿಕೆಯ ಮೇಲಿನಿಂದ ಪ್ರೇಕ್ಷಕರು. ಇವತ್ತೂ ಬಂದಾರು. ಪರದೆ ಇಳಿಬಿಡಲು ಸೆನೆಬ್ ಆಜ್ಞಾಪಿಸಿದ. ಪಾರದರ್ಶಕ. ಸಭಾಭವನದಲ್ಲಿ ಕುಳಿತಿದ್ದರೂ ಅವರು ಬೇರೆಯೇ ಎನ್ನುವ ಭಾವನೆ. ಔತಣದಲ್ಲಿ ಮೆನೆಪ್‌ಟಾಗೆ ಕೊಟ್ಟ ಉಡುಗೊರೆಯ ನೆನಪಾಗುತ್ತಿದೆ ಸೆನೆಬ್‌ಗೆ. ('ಛೆ ! ಛೆ ! ಈ ನೆನಪು ಸರಿಯಲ್ಲ. ನನಗೂ ಅದಕ್ಕೂ ಯಾವ ಸಂಬಂಧವೂ ಇಲ್ಲ.') "ಕಟಾಂಜನ ತಂದಿಡಿರೋ ಮರದ ಕಟಾಂಜನ, ಮೂಲೆಯಲ್ಲಿ. ಅಪರಾಧಿಗಾಗಿ. ಅಲ್ಲ, ಆರೋಪಿಗಾಗಿ."

ಕಾವಲುಗಾರರು ತಬ್ಬಿಬ್ಬಾದರು. ಯೋಚನಾಪರನಾಗಿ ಒಬ್ಬ ತೊದಲಿದ :

"ಅಮಾತ್ಯರು—ಅಮಾತ್ಯರು—"

ಮೆನ್ನ ಏರುದನಿಯಲ್ಲಿ ಅಂದ :

"ನಿಮಗೆ ಏನೂ ತಿಳಿದು. ಇವತ್ತಿನಿಂದ ಮಹಾಪ್ರಭು, ಮಹಾ ಅರ್ಚಕರು, ಮಹಾಅಮಾತ್ಯರು ಎಲ್ಲ ಒಂದೇ....ಸೆಡ್ ಉತ್ಸವದ ದಿನ ಪಾಪಿ ಗಳಿಗೂ ಪ್ರಸಾದ ತಿನ್ನಿಸ್ಬೇಕು. ಇಲ್ಲದಿದ್ದರೆ ಪೆರೋಗೆ ಅಪಾಯ."

ಏನು ಮಾಡಬೇಕೆಂದು ಕಾವಲಿನವರಿಗೆ ತೋಚಲಿಲ್ಲ.

ಮೆನ್ನ ಸ್ತೋತ್ರದ ಒಂದೆರಡು ಸಾಲುಗಳನ್ನು ಪಠಿಸಿ, "ನಾನು ವಾಪಸು ಹೋಗಲಾ? ದೇವರ ಪ್ರಸಾದದ ವಿತರಣೆಗೆ ನೀವು ಅಡ್ಡಿ ಮಾಡ್ತಿದೀರಿ ಅಂತ ತಿಳಿಸಲಾ ?" ಎಂದ.

ಕಾವಲುಗಾರರಿಬ್ಬರೂ ಏಕಕಾಲದಲ್ಲೇ ನಡುಬಾಗಿಸಿ ವಂದಿಸಿದರು. ಬಾಗಿಲನ್ನು ಮುಂದಕ್ಕೆ ತಳ್ಳಿ ದಾರಿ ಬಿಟ್ಟರು.

"ದೀಪ ತರಲಾ ?" ಎಂದ ಒಬ್ಬ.

"ಬೇಡ. ಪ್ರಸಾದದ ತಟ್ಟೆ ಇರುವಾಗ ದೇವಸೇವಕರಿಗೆ ಕತ್ತಲಲ್ಲೂ ಕಣ್ಣು ಕಾಣಿಸ್ತದೆ."

ಮೆನ್ನ ಕ್ರಮಬದ್ಧವಾಗಿ ಹೆಜ್ಜೆ ಇಡುತ್ತ ಇಳಿದ. ಜತೆಗೆ ಬಂದ ಯೋಧ, "ನನಗೆ ಭಯ ಆಯ್ಯ. ಇಲ್ಲೇ ಇರಿ. ದೀವಟಿಗೆ ತಂದ್ಬಿಡ್ತೇನೆ" ಎಂದು ಹೇಳಿ ಮೇಲಕ್ಕೆ ಓಡಿದ. ದೀಪ ಬಂತು. ಮುಂದುವರಿಯುವುದು ಸುಲಭವಾಯಿತು.

ಕೊನೆಯ ದ್ವಾರವನ್ನು ತಳ್ಳಿದ ಮೇಲೆ ಮೆನ್ನ, "ನೀನು ದೀವಟಿಗೆ ಹಿಡ ಕೊಂಡು ನಡುಬಾಗಿಲಿನಾಚೆಗೆ ಇರು. ಪಾಪಿಗೆ ಪ್ರಸಾದ ತಿನ್ನಿಸಿ ಬರ್ತೇನೆ," ಎಂದು ಹೇಳಿ, ಗಟ್ಟಿಯಾಗಿ ಪ್ಟಾ ಸ್ತೋತ್ರ ಪಠಿಸುತ್ತ, ನೆಲಮಾಳಿಗೆಯ ಕೊಠಡಿ ಯನ್ನು ಪ್ರವೇಶಿಸಿದ.

ಸಾಕಷ್ಟು ಉಸಿರು ಆಡದ ನೆಲಮಾಳಿಗೆಯಲ್ಲಿ ಸುಡು ಯೋಚನೆಗಳ ಜತೆ (ಒಂದೆರಡು ಬಾರಿ ಹೊಂಡದ ಕೊಳಕು ನೀರನ್ನು ಕೈಬೊಗಸೆಯಿಂದ ಎತ್ತಿ ಕುಡಿದು) ಇಡೀ ದಿನವನ್ನು ಮೆನೆಪ್ಟಾ ಕಳೆದಿದ್ದ. ಪರಿಚಿತ ಧ್ವನಿ. ಮೆನ್ನನೇ.

"ಅಣ್ಣಾ !" "ಮೆನ್ನ!"

—ಏಕಕಾಲದಲ್ಲೇ ಅಂದರು ಇಬ್ಬರೂ.

ತಟ್ಟೆಯನ್ನು ಕೆಳಗಿರಿಸಿ ಮೆನ್ನ ಅಂದ:

"ನನ್ನ ದೇವರಿಗೆ ನೈವೇದ್ಯ ಇಟ್ಟಿದ್ದೇನೆ."

ಆತ ಕತ್ತಲಲ್ಲಿ ತಡವುತ್ತ ಮೆನೆಪ್‌ಟಾನನ್ನು ಸಮೀಪಿಸಿದ. ಮೈ ಸೋಂಕಿದೊಡನೆ, ತನ್ನ ಎರಡೂ ಕೈಗಳ ಬೆರಳುಗಳಿಂದ ಮೆನೆಪ್‌ಟಾನ ಭುಜತೋಳುಗಳನ್ನು ಸವರಿದ.

ಪುಲಕ—ಅವನಿಗೂ ಇವನಿಗೂ.

"ಅಣ್ಣಾ, ಬಟಾ ಬಂದಿದ್ದಾನೆ. ಜತೇಲಿ ಅಬ್ಬು ಯಾತ್ರಿಕರಿದ್ದಾರೆ. ಅಹೂರಾ—ರಾಮೆರಿ....ಸಾಯಂಕಾಲ ಬಂದು ತಲಪಿದ್ರು. (ಧ್ವನಿ ತಗ್ಗಿಸಿ) ನಡುರಾತ್ರಿಗೆ ನಿಮ್ಮ ಬಿಡುಗಡೆಯಾಗ್ತದೆ."

ಮಾಧುರ್ಯ ಕಳೆದುಕೊಂಡಿದ್ದ ಮೆನೆಪ್‌ಟಾನ ಗಂಟಲಿನಿಂದ ಮಾತುಗಳು ಹೊರಟುವು :

"ಬಿಡುಗಡೆ ! ನನ್ನನ್ನು ಬಿಡುತಾರಾ ? ಯಾಕೆ ? ನಾಳೆ ವಿಚಾರಣೆ ಅಂತ ಸೆನೆಬ್ ಬಂದು ಹೇಳಿದನಲ್ಲ....ನನ್ನನ್ನು ಬಿಡಿಸೋ ಯೋಜನೆ ಬಟಾನದು—ನಿಮ್ಮದ್ದು, ಅಲ್ಲ ?

ವಿಚಾರಣೆ ಮೆನ್ನನಿಗೆ ಹೊಸ ವಿಷಯ. ಆದರೂ ಅವನೆಂದ :

"ನೀರಾನೆ ಪ್ರಾಂತದಲ್ಲಿ ಕುಯಿಲಿನ ಹಬ್ಬಕ್ಕಾಗಿ ಜನ ನಿಮ್ಮ ದಾರಿ ನೋಡ್ತಿದಾರೆ. ನೀವು ಇವತ್ತೇ ಹೊರಡ್ಬೇಕು...."

"ಇಷ್ಟು ದಿವಸ ಕಾದದ್ದಾಯ್ತು. ಸೆಡ್ ಉತ್ಸವವೂ ಮುಗೀತು. ನನಗೆ ತಡವಾಗಬಾರದು ಅಂತ ನಾಳೆಗೇ ವಿಚಾರಣೆ ಇಟ್ಟಿದ್ದಾರೆ."

"ವಿಚಾರಣೆ. ಇದೇನೋ ಮೋಸ ಅಣ್ಣ."

"ಮೆನ್ನ. ನಮ್ಮೂರಿನ ರಾಜಗೃಹದ ಕಂಬಕ್ಕೆ ನನ್ನನ್ನು ಬಿಗಿದಾಗಲೇ ಸಾವು ಸನ್ನಿಹಿತವಾಗಿತ್ತು. ಆದರೆ ನಾನು ಸಾಯಲಿಲ್ಲ. ಅಮಾತ್ಯರಿಂದ ಆಮಂತ್ರಿತನಾಗಿ ರಾಜಧಾನಿಗೆ ಬಂದಿದ್ದೇನೆ. ಈಗ ಇದೊಂದು ವಿಚಾರಣೆಗೆ ಅಂಜಲೆ ?"

ತನಗೆ ಸೋಲಾಗುತ್ತಿದೆ ಎಂದು ಮೆನ್ನನಿಗೆ ಸಂಕಟ. ಆತ ಯಾಚಕನಾದ :

"ಹೊರಗೆ ದೀಪೋತ್ಸವ ನಡೆದಿದೆ. ಇನ್ನು ತೆಪ್ಪೋತ್ಸವ. ಈ ಗದ್ದಲದಲ್ಲಿ ಇಲ್ಲಿಂದ ಪಾರಾಗೋದು ಸುಲಭ. ಇವತ್ತು ಇದು ಸಾಧ್ಯ ನಾಳೆ—"

"ನಾಳೆ ವಿಚಾರಣೆ, ಮೆನ್ನ—ಋಜುಮಾರ್ಗಾವಲಂಬಿಗಳಾಗಿ ಮುಂದೆ ಸಾಗಿರುವ ನೀರಾನೆ ಪ್ರಾಂತದ ಪ್ರಜೆಗಳ ವಿಚಾರಣೆ. ನಾಯಕ ಎಂದು ಕರೆಸಿಕೊಂಡವನು ಇದಕ್ಕೆ ಹೆದರಲೆ ? ಸಿಂಹವಾಗಿ ಬಂದವನು ನರಿಯಾಗಿ ಓಡಿ ಹೋಗಲೆ ? ಮಗ ರಾಮೆರಿಗೆ ಇದೇ ಏನು ಅವನ ತಂದೆ ಹಾಕಿಕೊಡುವ ಮೇಲ್ಪಂಕ್ತಿ ? ಕಂಬಕ್ಕೆ ಕಟ್ಟಿದ್ದ ನನ್ನನ್ನು ಅವತ್ತು ಬಿಡಿಸಿಕೊಂಡು ಹೋದರು ನನ್ನ ಜನ. ಅವರ ಪ್ರೀತಿ ಗಳಿಸಿ, ವಿಶ್ವಾಸ ಪಡೆದು, ನಾನು ನಾಯಕ ಎನಿಸಿಕೊಂಡಿದ್ದೇನೆ. ವಿಚಾರಣೆ ಇದಿರಿಸುವುದು ನನಗೆ ಕಷ್ಟವೆ ? ನೀರಾನೆ ಪ್ರಾಂತದ ನ್ಯಾಯನಿಲುವನ್ನು ಅವರಿಗೆಲ್ಲ ಮಂದಟ್ಟು ಮಾಡಿಕೊಟ್ಟು, ಅವರೆಲ್ಲರ ಎದುರಲ್ಲೇ ಹೊರಟು ಬರ್ತೇನೆ. ನನ್ನ ಬಂಧುಗಳಿಗೆ ನೀವಿದನ್ನು ತಿಳಿಯಹೇಳ್ಬೇಕು."

"ಅಣ್ಣ, ಅಣ್ಣ...."

"ಔಟ ಬೆಕ್‌ರಿಗೆ ಪ್ರಸಾದ ಕೊಟ್ಟಿರಾ ಮೆನ್ನ ?"

ಕಸಾಯಿ ಮನೆಯ ಶೀಬಾ ಅವರನ್ನು ನೋಡೆಳ್ಕೊಳ್ತಿದ್ದಾ.

"ಹ್ಞಾ. ಶೀಬಾ.... ತಿಳೀತು...."

"ಈ ನೈವೇದ್ಯದಲ್ಲಿ ಅವಳು ಕೊಟ್ಟಿರುವ ರೊಟ್ಟಿಯೂ ಇದೆ."

"ಆ ಮಹಾತಾಯಿಗೆ ನನ್ನ ಪ್ರಣಾಮ. ಮೆನ್ನ....ನೀವು ಹೊರಡಿ. ಕಾವಲುಗಾರರಿಗೆ ಸಂದೇಹ ಬಂದೀತು."

"ಹ್ಞ—ಹ್ಞ...."

ಮೆನ್ನ ಕಣ್ಣೊರಸಿಕೊಂಡು, ಸ್ತೋತ್ರ ಪಠನ ಆರಂಭಿಸುತ್ತ ಹೊರಕ್ಕೆ ಕಾಲಿರಿಸಿದ.

"ಜಗದ್ರಕ್ಷಕ ಪ್‌ಟಾ
ಸರ್ವಜನ ಪೂಜಿತ ಪ್‌ಟಾ...."

ಬಾಗಿಲನ್ನು ಮೆನೆಪ್‌ಟಾ ಮುಚ್ಚಿದ.

ಮಧ್ಯದ್ವಾರದ ಆಚೆಗೆ ನಿಂತಿದ್ದ ಕಾವಲುಗಾರ ಕೇಳಿದ :

"ಪ್ರಸಾದ ಕೊಟ್ಟರಾ, ಅಯ್ಯ ?"

"ಪಾಪಿ ದೇವರ ಪ್ರಸಾದ ಬೇಡ, ಅಂದ. ನಾನು ಬಿಡಲಿಲ್ಲ. ಬಲಾತ್ಕಾರ ವಾಗಿ ತಿನ್ನಿಸಿದೆ. ಜಗದ್ರಕ್ಷಕ ಪ್‌ಟಾ...."

....ಸ್ವಲ್ಪ ಆಚೆ ಕತ್ತಲ ಮರೆಯಲ್ಲಿ ಶೀಬಾ ಇದ್ದಳು.

"ಕಂಡಿರಾ ?"

"ನೈವೇದ್ಯ ಅರ್ಪಿಸಿ ಬಂದೆ. ಮಹಾತಾಯಿಗೆ ನನ್ನ ಪ್ರಣಾಮ— ಅಂದ್ರು,"

"ಯಾರು ಮಹಾತಾಯಿ ?"

"ನೀನು. ಇವತ್ತು ನಿನ್ನ ಗಂಡನ ಸಹಾಯ ಬೇಕಾಗೋದಿಲ್ಲ. ನಾಳೆ ನಾಯಕರ ವಿಚಾರಣೆ."

"ಓ. ನಾಳೇನೂ ಪ್ರಸಾದ—ನೈವೇದ್ಯ—ಕೊಡ್ತೀರಾ ?"

"ಗೊತ್ತಿಲ್ಲ. ನನ್ನ ತಲೆ ಸಿಡೀತಿದೆ."

ಅಷ್ಟು ಹೇಳಿ ಮೆನ್ನ ಹೊರಟುಬಿಟ್ಟ.

ತಲೆ ಜೋರಾಗಿ ಸಿಡಿಯುತ್ತಿತ್ತು. ಮಂದಿರಕ್ಕೆ ದೇವಸೇವಕರು ಮರಳಿ ದ್ದರು. ಅವರ ಕಣ್ಣಿಗೆ ಬೀಳದಂತೆ, ಮೆನ್ನ ತನ್ನ ಮೇಲುದವನ್ನೆತ್ತಿಕೊಂಡು, ಮತ್ತೆ ನದೀತಟದ ಪ್ರಾಕಾರ ದ್ವಾರಕ್ಕೆ ಬಂದ. ಅದನ್ನು ಅವನು ದಾಟಿ ದಂಡೆಯ ಕಡೆಗೆ ಹೋಗುತ್ತಿದ್ದಾಗ ಕಾವಲುಗಾರನೆಂದ :

"ಅಯ್ಯ, ನಿಮ್ಮ ಹಾಡು ಗೀಡು ಶುರು ಮಾಡ್ಬೇಡಿ ಇವತ್ತು."

ಪದಗಳು ಸಾಲುಗಳಾದುವು; ಮೌನವಾಗಿ ಹೊರಕ್ಕೆ ಧುಮುಕಿದುವು.

'ಯಾರೊಡನೆ ನಾ ಮಾತಾಡಲೀ....'

ಮೆನ್ನ ದಂಡೆಯುದ್ದಕ್ಕೂ ಸಾಗಿ, ಕಟ್ಟೆಯನ್ನು ಹಾದು, ಅಂಕು ಡೊಂಕು ದಾರಿಗಳನ್ನು ಹಿಡಿದು, ಬಟಾನ ದೋಣಿಯತ್ತ ನಡೆದ. ಅದರ ಪಕ್ಕ ದಲ್ಲಿ ಅಂಬಿಗರು ಕುಳಿತಿದ್ದರು. ಅವರ ಆಚೆಗೆ ಮತ್ತೂ ಹಲವು ದೋಣಿಗಳು ಬಂದು ತಂಗಿದ್ದುವು. ಬಲಗಡೆ ಸ್ವಲ್ಪ ದೂರದಲ್ಲಿ ಮರಳಿನ ಮೇಲೆ ಬಟಾನೂ ಐವರೂ ಕುಳಿತಿದ್ದರು. ಮೆನ್ನ ಸದ್ದು ಮಾಡದೆ ಅವರ ಬಳಿ ಸಾರಿ ತಾನೂ

ಇಲ್ಲಿ ಪ್ರೇಕ್ಷಕರು. ಇವತ್ತು ಇವರಿಗೆ ದುಡಿಮೆ ಇಲ್ಲವೇನೋ. ಕುತೂಹಲ ? ಕನಿಕರ ? ಆ ಮೂಲೆಯಲ್ಲಿ ಯಾರೊ ಬಚ್ಚಿಟ್ಟು ಕೊಂಡಿರುವನಲ್ಲ ? ತಲೆಗೆ ಸುತ್ತಿದ ಬಟ್ಟೆ. ತನ್ನನ್ನು ಕದ್ದು ನೋಡುತ್ತಿರುವಂತಿದೆ....ಆ್ಹ—ಮೆನ್ನ—ದಿವ್ಯ ಜೀವ....ಯಾರೂ ಗುರುತು ಹಿಡಿಯಬಾರದೆಂದು ಎಚ್ಚರ ವಹಿಸುತ್ತಿದ್ದಾನೆ.... ಅವನ ಪಾಲಿನ ಹದ್ದು ಈ ಕಡೆಗಿದೆ. ಸೆನೆಬ್. (ಬಟಾ ಹೇಳಿದ್ದ : 'ಐಗುಪ್ತದ ಆಡಳಿತ ಭಾರವೆಲ್ಲ ಇವನ ಮೇಲೆಯೇ ಇದೆ ಅಂದ್ಕೋಬೇಕು ಯಾರಾದರೂ.') ಪಾರ್ಶ್ವ ದ್ವಾರದಿಂದ ಸೆನೆಬ್ ಓಡಿ ಬಂದು ಅಮಾತ್ಯನ ಕಿವಿಯಲ್ಲಿ ಏನನ್ನೋ ಉಸುರಿದ. ಅಮಾತ್ಯ ತಲೆಯಾಡಿಸಿದ. ಹಿಂಬದಿಯ ಬಾಗಿಲಿನಿಂದ ಪೆರೋ ಬರುತ್ತಿದ್ದಾರೆ ಎಂದೆ ? ಬರುವುದು ತಡವಾಗುತ್ತದೆ ಎಂದೆ ?

ತಡವಾಗಲಿಲ್ಲ. ಪಾರದರ್ಶಕ ಪರದೆಯೊಳಗಿಂದ ಕಿರೀಟಗಳ ಪ್ರಭೆ ಕಾಣಿಸಿತು. ಪೆರೋ, ಮಹಾರಾಣಿ, ರಾಜಕುಮಾರ ಮತ್ತು ಗೇಬುವಿನ ಪತ್ನಿ ನೆಹನವೇಯ್ಟ್.

ಸಭಾಭವನದಲ್ಲಿ ಕುಳಿತಿದ್ದವರೆಲ್ಲ ಎದ್ದರು. ಅಮಾತ್ಯ ಹಿಂದಕ್ಕೆ ಹೊರಳಿ ನಮಿಸಿದ :

" ದೇವಸಮಾನ ಪೆರೋನ ಆಯುರಾರೋಗ್ಯ ವರ್ಧಿಸಲಿ !"

ಎದ್ದವರು ಮತ್ತೆ ಕುಳಿತರು. ('ನಾನು ಹೀಗೆ ಮಾಡಬೇಕಾಗಿಲ್ಲ. ನಿಂತೇ ಇರಬಹುದು. ಸುಲಭ.')

ಪರದೆಯೊಳಗಿನ ವೇದಿಕೆಯ ಮೇಲೆ ಸೇವಕರ ದರ್ಶನ. ದೊರೆಗೆ ಚಾಮರ ಸೇವೆ. ನವಯುವಕ ಪೆರೋಗೆ ಬಿಸಿಲೇರುವುದಕ್ಕೆ ಮೊದಲೇ ಸೆಖೆಯಾಗ್ತಿರ ಬೇಕು.

ಅರಸ ತನ್ನ ಬಳಿಯ ಮುಗ್ಗಾಲು ಪೀಠದ ಮೇಲಿನ ಹೊಳೆಯುವ ತಟ್ಟೆ ಯಲ್ಲಿ ಏನನ್ನೋ ಇರಿಸಿದ. ('ಏನಿರಬಹುದು ? ಆಂಖ್ ಲಾಂಛನ....')

ಯಾರ ದಾರಿ ನೋಡುತ್ತಿದ್ದಾರೆ ? ಆರಂಭಿಸುತ್ತಿಲ್ಲವಲ್ಲ. ಇನೇನಿ ಬಂದ. ವಿನಯಪೂರ್ವಕವಾಗಿ ಎರಡು ಹೆಜ್ಜೆ ಇರಿಸಿ. ಓಡಿ ಬಂದ ಸೆನೆಬ್‌ಗೆ ಏನನ್ನೋ ಹೇಳಿ, ಪುನಃ ಉದ್ಯಾನಕ್ಕಿಳಿದ. ಸೆನೆಬ್ ನ್ಯಾಯಮೂರ್ತಿಯಲ್ಲಿಗೆ. ಅಲ್ಲಿಂದ ಪೆರೋ—ಮಹಾರಾಣಿಯರ ಸಮ್ಮುಖಕ್ಕೆ, ಮರಳಿ ನ್ಯಾಯಮೂರ್ತಿಯಲ್ಲಿಗೆ, ಆಡಿದ ತಲೆಗಳು.

ಆ ಪೀಠದ ಮೇಲಿನ ಚಿರತೆ ಚರ್ಮ....ಮಹಾ ಅರ್ಚಕರು ಬರುವರೇನು ?

ಐಗುಪ್ತದ ರಾಜಕೀಯ ಚದುರಂಗದಾಟದ ಪ್ರಧಾನ ಆಟಗಾರ. ಮಹಾ ಅರ್ಚಕರಿಂದ ಸಣ್ಣ ಮನುಷ್ಯನೊಬ್ಬನ ವಿಚಾರಣೆಯ ವೀಕ್ಷಣೆ ? ಆಶ್ಚರ್ಯ ! ಹಾಗಾದರೆ ಆ ಬರಿದು ಪೀಠಗಳು ಮಹಾ ಅರ್ಚಕರ ಪರಿವಾರದವರಿಗೆ ?

ಪ್ರತಿಮೆಗಳು ಕುಳಿತಲ್ಲೇ ಮಿಸುಕುತ್ತಿವೆ. ಅಲ್ಲಲ್ಲಿ ತಲೆಗಳು ಪರಸ್ಪರ ಹತ್ತಿರಕ್ಕೆ ಬಂದು ಪಿಸುನುಡಿಯುತ್ತಿವೆ.

ಹೊರಗೆ ಕಲರವ. ಬಂದರೇನೋ ?

ತಲೆಬಾಗಿಲ ಕಣ್ಣು ಹಾಯಿಸಿದ ದಳಪತಿ ನಿಂತಲ್ಲೆ ಕಂಬವಾದ.

ಮುಂದೆ ಸ್ಥೂಲಕಾಯ ಇನೇನಿ. ಹಿಂದಿನಿಂದ ಭವ್ಯತೆಯ ಸಾಕಾರ ಮೂರ್ತಿ ಮಹಾ ಅರ್ಚಕ ಹೇಪಾಟ್. ('ಅಬ್ಬ, ಯಾತ್ರಿಕನಾಗಿ ಐಗುಪ್ತದ ಧರ್ಮಗುರುವಿಗೆ ನಮಿಸಿದ್ದೆ. ದೈವಿಕವಾದದ್ದು ಏನಿದೆ ಈ ವ್ಯಕ್ತಿಯಲ್ಲಿ. ಈತನೂ ಪ್ರತಿಷ್ಠೆ ಅಧಿಕಾರಗಳ ಘನರೂಪವಲ್ಲವೆ ?')

ಅಮಾತ್ಯ ಮತ್ತಿತರ ಕೆಲವರಿಗೆ ಮಹಾ ಅರ್ಚಕನ ಹಿಂದಿನ ಇಬ್ಬರು ಮೂವರ ಪರಿಚಯವಿತ್ತು. ಒಬ್ಬ ಮೆಂಫಿಸಿನ ಪ್‌ಟಾ ಮಂದಿರದ ಮುಖ್ಯ ಅರ್ಚಕ. ಇನ್ನೊಬ್ಬ ಉತ್ತರದ ಆನ್ ನಗರಿಯ ರಾ ಮಂದಿರದ ಮುಖ್ಯ ಅರ್ಚಕ. ಮೂರನೆಯವನು ದಕ್ಷಿಣದ ವೆಸಿನಗರಿಯ ಅಮನ್ ಮಂದಿರದ ಮುಖ್ಯ ಅರ್ಚಕ. ಅವರ ಹಿಂದೆ ನಾಲ್ವರು ದೇವಸೇವಕರು. ('ಪೆರೋನ ಪರಿಚಾರಕರಿಗೆ ಸಮ ನಲ್ಲವೆ ಇವರು ?')

ಅನೆರೆಬ್ ಮತ್ತಿತರರು ನಮಿಸಲು ಏಳುತ್ತಿದ್ದಂತೆ ಮಹಾ ಅರ್ಚಕ ನ್ಯಾಯಮೂರ್ತಿಯ ವೇದಿಕೆಯ ಮೆಟ್ಟಲುಗಳನ್ನೇರಿ, ತನ್ನ ದೃಷ್ಟಿಯಿಂದ ತೆಳು ಪರದೆಯನ್ನಿರಿದು ನೋಡುತ್ತ, "ಪೆರೋನ ಆಯುರಾರೋಗ್ಯ ವರ್ಧಿಸಲಿ !" ಎಂದ.

ಪರದೆಗೆ ಬೆನ್ನು ಹಾಕಿ ಅಲ್ಲಿದ್ದವರನ್ನು ದಿಟ್ಟಿಸಿ, ಕಟಾಂಜನದ ಹಿಂದಿದ್ದ ಮೆನೆಪ್‌ಟಾನನ್ನು ನೋಡಿ. ತನ್ನ ಪೀಠದಲ್ಲಿ ಮಹಾ ಅರ್ಚಕ ಆಸೀನನಾದ. ಮುಖ್ಯ ಅರ್ಚಕರು ಮೂವರು ಕೆಳಗೆ ಸಾಲಾಗಿದ್ದ ಪೀಠಗಳಲ್ಲಿ ಕುಳಿತರು. ಇನೇನಿ ಮಹಾ ಅರ್ಚಕನ ಹಿಂದೆ ತುಸು ದೂರದಲ್ಲಿ ನಿಂತ. ನ್ಯಾಯ ಮೂರ್ತಿಯ ಹಿಂದೆ ಸೆನೆಬ್. ಮುಖ್ಯ ಅರ್ಚಕರ ಹಿಂದೆ, ಉಳಿದ ದೇವಸೇವಕರು ನಿಂತುಕೊಂಡರು.

(' ಇವರೆಲ್ಲರ ಚೌಕಮಣೆ ಆಟದಲ್ಲಿ ನೀರಾನೆ ಪ್ರಾಂತ ಒಂದು ಕಾಯಿ ಅಲ್ಲವೆ ? ನಾನೇ ಆ ಕಾಯಿ. ಆದರೆ ಉಸಿರಾಡುವ ಕಾಯಿ, ಮಾತನಾಡುವ ಕಾಯಿ. ನಾವೆಲ್ಲ ಗೆದ್ದೆವು ಎನ್ನುತ್ತಿರುವ ಆಟಗಾರರಿಗೆ ಈ ದಿನ ಕಾಯಿ ಸವಾಲು ಹಾಕ್ತದೆ.')

ಆಮೆರಬ್ ಹೇಪಾಟ್‌ನನ್ನು ಕೇಳುತ್ತಿದ್ದಾನೆ :

" ಇನ್ನು ಶುರು ಮಾಡೋಣ, ಅಲ್ಲವೆ ?"

ಸ್ನೇಹ, ವಿನಯ ಬೆರೆತ ಧ್ವನಿ :

ತಲೆಯಲುಗಿಸಿ ಒಪ್ಪಿಗೆ ಸೂಚನೆ.

ಎಲ್ಲರ ದೃಷ್ಟಿಗಳೂ ತನ್ನ ಮೇಲೆ ನೆಟ್ಟಿರುವುದನ್ನು ನ್ಯಾಯಮೂರ್ತಿ ಆಮೆರಬ್ ಗಮನಿಸಿದ. ಆತ್ಮವಿಶ್ವಾಸ. ತಣುಪು ನೋಟ. ('ನಿಮ್ಮ ಸ್ಪರ್ಶ ದಿಂದ ಅವನು ಮಣ್ಣಾಗ್ತಾನೋ ಬಂಗಾರವಾಗ್ತಾನೋ ನೋಡೋಣ.' ಪೆರೋ ಆಡಿದ್ದ ಈ ಮಾತು ಅಮಾತ್ಯನಿಗೆ ನೆನಪಾಯಿತು. ಐಗುಪ್ತದ ಪ್ರಜೆಗಳ ಬದುಕನ್ನು ನಿಯಂತ್ರಿಸುವ ರೂಪಿಸುವ ವರಿಷ್ಠಾಧಿಕಾರಿ ತಾನು. ಎಲ್ಲರೂ ತನ್ನನ್ನೇ ನೋಡುತ್ತಿದ್ದಾರೆ. ಇನ್ನು ವಿಳಂಬ ಸರಿಯಲ್ಲ.)

" ದೇವಸಮಾನರಾದ ಪೆರೋ ಪೇಪಿಯುವರ ದೈವಿಕ ಅಧಿಕಾರದ ವಿರುದ್ಧ ಬಂಡಾಯವೆದ್ದ ನೀರಾನೆ ಪ್ರಾಂತದ ನಾಯಕ ಮೆನೆಪ್‌ಟಾನ ವಿಚಾರಣೆಗಾಗಿ, ಹಿರಿಯ ನ್ಯಾಯಸ್ಥಾನದ ವಿಶೇಷ ಅಧಿವೇಶನ ಇಲ್ಲಿ ಸೇರಿದೆ. ಮಹಾಪ್ರಭು ಮತ್ತು ಮಹಾರಾಣಿ ವಿಚಾರಣೆಯ ವೀಕ್ಷಣೆಗಾಗಿ ಇಲ್ಲಿಯ ತನಕ ಪಾದ ಬೆಳೆಸಿ ದ್ದಾರೆ. ಮಹಾ ಅರ್ಚಕ ಹೇಪಾಟ್ ಧಾರ್ಮಿಕ ಮಹತ್ವವಿರುವ ಈ ವಿಚಾರಣೆ ಯಲ್ಲಿ ಆಸ್ಥೆವಹಿಸಿ ಇಲ್ಲಿಗೆ ಆಗಮಿಸಿದ್ದಾರೆ."

ಕಿರಿಯ ಲಿಪಿಕಾರರ ಕಡೆಗೊಮ್ಮೆ ದೃಷ್ಟಿ ಬೀರಿ ಅವರು ಬರೆದುಕೊಳ್ಳು ತ್ತಿರುವುದನ್ನು ಗಮನಿಸಿ, ತೃಪ್ತನಾಗಿ, ಆಮೆರಬ್ ಮುಂದುವರಿದ :

" ಗುರುತರವಾದ ಆರೋಪ. ಆದರೆ ಅದನ್ನು ರುಜುವಾತುಪಡಿಸುವ ಪುರಾವೆಗಳು ಅಸಂಖ್ಯ. ಈ ಮನುಷ್ಯನ ವಿರುದ್ಧ ದೂರು ಇತ್ತಿರುವವರು ಪ್ರತಿಷ್ಠಿತರು. ಹಿರಿಯ ಕಂದಾಯ ಅಧಿಕಾರಿ ಟೆಹುಟ, ಪ್ರಾಂತಪಾಲ ಗೇಬು, ಹೆಸರಾಂತ ಭೂಮಾಲಿಕರಾದ ನುಟ್‌ಮೋಸ್, ಸೆತೆಕ್‌ನಖ್ತ್, ಸೆನ್‌ಉಸರ್ಟ್... ಎಸಗಿರುವ ಅಪರಾಧಕ್ಕಾಗಿ ವಿಚಾರಣೆ ಇಲ್ಲದೆಯೇ ಶಿಕ್ಷೆ ವಿಧಿಸಬಹುದು. ಅದು

ಅಷ್ಟು ಘೋರವಾದದ್ದು. ಆದರೆ ನಮ್ಮದು ಧರ್ಮಪರಿಪಾಲನಾ ಸಮಾಜ. ಥೊಥ್ ದೇವತೆಯ ನ್ಯಾಯ ನಿಯಮಾವಳಿಯನ್ನು ಆಧರಿಸಿ ಏಗುಪ್ತ ನಿಂತಿದೆ. ಗೋರಿ ಅತಿಕ್ರಮಣ, ಕೊಲೆ, ಬಂಡಾಯ ಏನಿದ್ದರೂ ನಾವು ವಿಚಾರಣೆ ನಡೆಸ್ತೇವೆ. ತಪ್ಪು ಒಪ್ಪಿಕೊಳ್ಳುವುದಕ್ಕೆ ಅಥವಾ ಅಲ್ಲಗಳೆಯುವುದಕ್ಕೆ ಅಪ ರಾಧಿಗೆ ಅರ್ಥಾತ್ ಆರೋಪಿ ಅವಕಾಶ ಕೊಡ್ತೇವೆ...."

(ಪೆರೋ ಕುಳಿತಲ್ಲೇ ಪೀಠಕ್ಕೊರಗಿ ವಿಶ್ರಾಂತಿ ಪಡೆದ.)

ಮಹಾ ಅರ್ಚಕ ಕಡೆಗಣ್ಣಿನಿಂದ ಅಮಾತ್ಯನನ್ನು ದಿಟ್ಟಿಸಿದ. ಟೆಹುಟಿ ನ್ಯಾಯಸ್ಥಾನದಲ್ಲಿ ತಾನೇ ಪ್ರಧಾನ ವ್ಯಕ್ತಿ ಎನ್ನುವಂತೆ ಎತ್ತಲೂ ನೋಡಿದ. ಗೇಬು ಎಡಕ್ಕೊಮ್ಮೆ ಬಲಕ್ಕೊಮ್ಮೆ ವಾಲಿದ. ಅಮಾತ್ಯ ಹೆಸರುಗಳನ್ನು ಹೇಳಿ ದಾಗ ನುಟ್‌ಮೋಸ್ ಹಲ್ಲು ಕಿರಿದು ತಲೆ ಬಾಗಿಸಿದ; ಸೆತೆಕ್‌ನಖ್ತ ಗಲ್ಲ ತುರಿಸಿದ ; ಸೆನ್‌ಉಸರ್‍ಟ್ ತಲೆಯ ಮೇಲಿನ ಕೆಲವೇ ಕೂದಲನ್ನು ಅಂಗೈಯಿಂದ ಸವರಿದ.

ಮೆನೆಪ್‌ಟಾಗೆ ಅಮಾತ್ಯನ ಮಾತುಗಳು ನೀರಸವಾಗಿ ಕಂಡು, ಹಿಂದೆ ಎಲ್ಲೋ ಇದನ್ನು ತಾನು ಕೇಳಿರುವೆನಲ್ಲ, ಈ ದೃಶ್ಯ ಹಿಂದೆ ಎಂದೋ ನಡೆದು ದರ ಪುನರಾವರ್ತನೆಯಂತಿದೆಯಲ್ಲ—ಎನಿಸಿತು.

ಸಾಮಾನ್ಯ ಜನ ನ್ಯಾಯಮೂರ್ತಿ ಹೇಳುತ್ತಿದ್ದುದನ್ನು ಅರ್ಥ ಮಾಡಿ ಕೊಳ್ಳಲು ಯತ್ನಿಸುತ್ತ, ಮೆನೆಪ್‌ಟಾನನ್ನು ನೋಡುತ್ತ ನಿಂತರು.

(ಹೊರಗೆ ಜನರ ಸದ್ದನ್ನು ನಿಲ್ಲಿಸಲು ಯೋಧರು ಶ್ರಮಿಸಬೇಕಾಯಿತು. ಮಗ್ಗುಲು ಬಾಗಿಲು—ಹೊರಕ್ಕೆ ಮತ್ತು ಒಳಕ್ಕೆ ದಾರಿ. ಅದನ್ನು ತೆರೆದರು. ಹೊರಹೋದಷ್ಟು ಜನ ಒಳಕ್ಕೆ ಬರಲು ಅವಕಾಶ.)

ಕ್ಷಣ ಮೌನದ ಬಳಿಕ ನ್ಯಾಯಮೂರ್ತಿ ಅಮಾತ್ಯನೆಂದ :

"ಟೆಹುಟಿ, ಗೇಬು ಮತ್ತು ಭೂಮಾಲಿಕರು ನ್ಯಾಯಸ್ಥಾನದ ತಿಳಿವಳಿಕೆ ಗಾಗಿ ಈಗ ದೂರು ಸಲ್ಲಿಸ್ತಾರೆ."

ತನ್ನ ಪೀಠದಿಂದ ಎದ್ದು ನಿಂತು, "ಪೆರೋನ ಆಯುರಾರೋಗ್ಯ ವರ್ಧಿಸಲಿ!" ಎಂದು ವಂದನೆ ಸಲ್ಲಿಸಿದ ಟೆಹುಟಿಯನ್ನು ಮೆನೆಪ್‌ಟಾ ದಿಟ್ಟಿಸಿದ. ತನ್ನೂರಿನ ರಾಜಗೃಹದಲ್ಲಿ ತಾನು ಈತನನ್ನು ಕಂಡಾಗ ಇನ್ನಷ್ಟು ದೃಢಕಾಯನಾಗಿದ್ದ ನೇನೋ. ಎದೆಯ ಮೇಲಿನ ಆಭರಣಗಳು ದಾರಿದ್ರ್ಯದ ದ್ಯೋತಕವಲ್ಲ. ಆದರೂ

ಕಿರಿಯ ಲಿಪಿಕಾರರು ಬಂದರು. ಲಿಪಿಸುರುಳಿಗಳು, ಲೆಕ್ಕಣಿಕೆ—ಮಸಿ ಪಾತ್ರೆಗಳು ಸಿದ್ಧವಾದುವು. ಎರಡು ಪೆಟಾರಿ ತುಂಬ ನ್ಯಾಯಸಂಬಂಧದ ಥೊಥ್‌ನ ಆದೇಶಗಳು.

ಒಂದು ಬದಿಯಿಂದ ಇನ್ನೊಂದು ಬದಿಯವರೆಗೂ ಹಗ್ಗ ಕಟ್ಟಿದರು. ಅದರಾಚೆಗೆ ಸಾಮಾನ್ಯ ಪ್ರೇಕ್ಷಕರು. ಕಟಾಂಜನದ ಬಳಿಯಲ್ಲೂ ಇಲ್ಲೂ ಸಶಸ್ತ್ರ ಭಟರು. ಅಮಾತ್ಯರ ಒಂದು ಪಕ್ಕದಲ್ಲಿ ಸಾಲಾಗಿ ಸರುಸದಸ್ಯರು, ದಂಡನಾಯಕ, ಕಂದಾಯ ಅಧಿಕಾರಿಗಳು, ಅವರ ಹಿಂದೆ ಪ್ರಾಂತಪಾಲರು. (ಉತ್ಸವಕ್ಕೆಂದು ಬಂದ ಪ್ರಾಂತಪಾಲರೆಲ್ಲ ರಾಜಧಾನಿಯಲ್ಲೇ ಇದ್ದಾರೆ. ಯಾವುದೇ ಒಂದು ವಿಚಾರಣೆಯಲ್ಲಿ ಎಲ್ಲ ಪ್ರಾಂತಪಾಲರು ಭಾಗವಹಿಸುವುದು ಕೂಡಾ ಅಪೂರ್ವ.) ಟೆಹುಟಿಗೆ ಪ್ರತ್ಯೇಕ ಸ್ಥಾನ. ನೀರಾನೆ ಪ್ರಾಂತದ ಭೂ ಮಾಲಿಕರಿಗೆ ಪೀಠಗಳು. ('ಈ ಪೀಠಗಳಿಗಾಗಿ ನುಟ್‌ನೋಸಾದಿಗಳಿಂದ ದೊಡ್ಡ ಕಾಣಿಕೆ ಕೀಳಬೇಕು; ಇವರೆಲ್ಲ ನೀರಾನೆ ಪ್ರಾಂತಕ್ಕೆ ಹೊರಟ ಮೇಲೆ ನನ್ನ ಒಂದು ಆದಾಯಮೂಲ ಬತ್ತುತ್ತದಲ್ಲ' ಎಂದುಕೊಂಡ ಸೆನೆಬ್. 'ಆ ಬಟಾ ಬರಲೇ ಇಲ್ಲ. ಆಶ್ಚರ್ಯ. ಅವರಿಂದ ಇನ್ನು ನನಗೇನಾದರೂ ಸಿಗುತ್ತದೆ. ಎನ್ನುವುದು ಸುಳ್ಳು. ಆ ಉಡುಗೊರೆ—')

ಅಮಾತ್ಯರ ಇನ್ನೊಂದು ಮಗ್ಗುಲಲ್ಲಿ ಮಹಾ ಅರ್ಚಕರ ಪರಿವಾರ. ('ಇನೇನಿ ಬರುತ್ತಾನೆ ಹೊಟ್ಟೆ ಆಡಿಸಿಕೊಂಡು.')

ಅರಮನೆ ಕಾವಲು ಭಟರ ದಳಪತಿ ಆಗಮಿಸಿದ.

"ಲಿಪಿಕಾರಯ್ಯ, ನನ್ನಿಂದ ಆಗಬೇಕಾದ ಕೆಲಸ ಅಪ್ಪಣೆಯಾಗಲಿ."

"ಜಾಗಟೆ ಸದ್ದಾದ ತಕ್ಷಣ ನೀರಾನೆ ಕ್ರಿಮಿಯನ್ನು ಕರಕೊಂಡ್ಬಾ. ನಿನ್ನ ಯೋಧರ ಮೇಲ್ವಿಚಾರಣೆ ವಹಿಸ್ಕೊ. ಕಠಾರಿ ಫಳಫಳ ಅನ್ತಿದೆ. ಅಧಿಕಾರ ದಂಡವನ್ನೂ ಬೆಳಗಿದೀಯಾ...."

ಪರಿಹಾಸ್ಯದ ಆ ಮಾತು ಇಷ್ಟವೆನಿಸಿದರೂ ದಳಪತಿ ಅಂದ:

"ನಿಮಗೆ ನನ್ನನ್ನು ಕಂಡರೆ ಯಾವಾಗಲೂ ತಾತ್ಸಾರ."

ಹನಿಹನಿಯಾಗಿ ಜನ ಬರತೊಡಗಿ ಅಮಾತ್ಯ ಭವನದ ಹೊರಗಿನ ಉದ್ಯಾನ ಬೇಗನೆ ಕೆರೆಯಾಯಿತು.

ದಳಪತಿಯ ಕಡೆ ನೋಡಿ ಸೆನೆಬ್ ಅಂದ:

"ಒಂದು ಸಲಕ್ಕೆ ನೂರೇ ಜನ ಒಳಗ್ಬರ್ಲಿ. ಅವರು ನೋಡಿ ಆದ ಮೇಲೆ ಮತ್ತೆ ನೂರು ಜನ."

ದಳಪತಿ ತನ್ನ ಕೆಳಗಿನವರನ್ನು ಕರೆದು ಆದೇಶವಿತ್ತ:

"ಒಂದು ಸಲಕ್ಕೆ ನೂರೇ ಜನ ಒಳಗ್ಬರ್ಲಿ. ಅವರು ನೋಡಿ ಆದ ಮೇಲೆ ಮತ್ತೆ ನೂರು ಜನ."

ಹೊರಗೆ ಗದರುವ ಧ್ವನಿ ಕೇಳಿಸಿತು:

"ಅಮಾತ್ಯರು! ದಾರಿ ಬಿಡಿ! ದಾರಿ ಬಿಡಿ!"

ಪಲ್ಲಕಿಯಿಂದಿಳಿದ ನೀಳ ದೇಹದ ಅಮಾತ್ಯ ಕೈಯಲ್ಲಿ ಅಧಿಕಾರದ ಕೋಲನ್ನು ಹಿಡಿದುಕೊಂಡು ದೃಢ ಹೆಜ್ಜೆಗಳನ್ನಿಡುತ್ತ ಒಳಕ್ಕೆ ಬಂದ. ಅರ್ಧ ನರೆತ ತಲೆಗೂದಲನ್ನು ಈ ದಿನ ಹೆಚ್ಚು ಎಚ್ಚರದಿಂದ ಎಡಕ್ಕೂ ಬಲಕ್ಕೂ ಬಾಚಿದಂತಿತ್ತು. ಎದೆಪಟ್ಟಿಕೆ, ಹಾರಗಳು ಅಲಂಕರಿಸಿದ್ದ ವಕ್ಷಸ್ಥಲ. ಗರಿಗರಿಯಾದ ನಡುಪಟ್ಟಿ. ಮೃದು ತೊಗಲಿನ ಪಾದರಕ್ಷೆ. ಛಾವಣಿಯ ಬೆಳಕಿಂಡಿಯ ಕೆಳಗಿಂದ ಹಾದು ಅಮಾತ್ಯ ತನ್ನ ವೇದಿಕೆಯತ್ತ ನಡೆದಾಗ ಗೋದಿಗೆಂಪು ಮೈ ಹೊಳೆಯಿತು.

ನ್ಯಾಯಮೂರ್ತಿ ಆಸೀನನಾದೊಡನೆ ಕಂಚಿನ ಜಾಗಟೆ ಬಾರಿಸಿದರು. ಆ ಸದ್ದು ಅಲೆಯಾಗುತ್ತಿದ್ದಂತೆ ಅರಮನೆಯ ಆವರಣದಲ್ಲಿ ಆಗಲೇ ಸೇರತೊಡಗಿದ್ದ ಸರು ಸದಸ್ಯರು, ಹಿರಿಯ ಅಧಿಕಾರಿಗಳು, ಪ್ರಾಂತಪಾಲರೆಲ್ಲ ಒಳಗೆ ಬಂದು ನ್ಯಾಯಮೂರ್ತಿಗೆ ನಮಿಸಿ ತಮ್ಮ ಪೀಠಗಳ ಮೇಲೆ ಕುಳಿತರು. ಟಿಹುಟಿಯ ಹಿಂದೆ ಬಕಿಲ ನಿಂತ.

ಅಮಾತ್ಯ ಪಲ್ಲಕಿಯಿಂದ ಇಳಿದೊಡನೆ ದಳಪತಿ ಕಾರಾಗೃಹದತ್ತ ಧಾವಿಸಿದ್ದ.

( ಹಿಂದಿನ ರಾತ್ರಿ ನಿರಾಕರಣೆಯ ಉತ್ತರದೊಡನೆ ಮೆನ್ನನನ್ನು ಕಳುಹಿದ ಮೇಲೆ ಮೆನೆಪ್‌ಟಾ ಒಂದರ್ಧ ರೊಟ್ಟಿಯನ್ನೂ ನಾಲ್ಕಾರು ಅಂಜೂರ ಹಣ್ಣುಗಳನ್ನೂ ಸೇವಿಸಿದ. ಮನಸ್ಸಿಗಂತೂ ನೆಮ್ಮದಿ. ನಿದ್ದೆ ಬಂತು. ಕಣ್ಣು ತೆರೆದಾಗ ಹೊರಗೆ ಬೆಳಕು ಹರಿಯುತ್ತಿರಬೇಕು ಎನಿಸಿತು. ಮಂದಪ್ರಭೆ ತನ್ನ ಕೊಠಡಿಯಲ್ಲಿ ಪಸರಲು ಆರಂಭಿಸಿದೊಡನೆ ಮೆನೆಪ್‌ಟಾ ಎದ್ದ. ಯಾವ ತಾಕಲಾಟವೂ ಇಲ್ಲದೆ, ಮನಸ್ಸು ಶಾಂತವಾಗಿತ್ತು. ಮರಳಿನ, ನೀರಿನ ನೆರವಿನಿಂದ

ದೇಹಬಾಧೆ ತೀರಿಸಿಕೊಂಡ ಇನ್ನೂ ಒಂದಷ್ಟು ಕಾಲ ನೆಲಮಾಳಿಗೆಯಲ್ಲಿದ್ದರೆ ತಾನೂ ಬಂಧನದ ರಾತ್ರಿ ಕಂಡ ಜಜ್‌ಮುಂಖನಂತೆ ಆಗುವುದು ಖಂಡಿತ–ಎನಿಸಿತು. ಗಾದೆ ನೆನಪಾಯಿತು– 'ಸಂಜೆ ಕೊಲ್ಲುವ ಹಕ್ಕಿಗೆ ಬೆಳಿಗ್ಗೆ ಯಾರು ನೀರುಣಿಸುತ್ತಾರೆ?' ತಾನು ಒಂದು ರೀತಿಯ ಹಕ್ಕಿಯೇ. ಹಾರಲು ನಿರಾಕರಿಸಿದ ಹಕ್ಕಿ. ಆ ದಿನ ಅಮಾತ್ಯನನ್ನು ಕಂಡೆ, ಅತಿಥಿಯಾಗಿ; ಈ ದಿನ ನ್ಯಾಯಮೂರ್ತಿಯನ್ನು ಕಾಣುತ್ತೇನೆ ಬಂದಿಯಾಗಿ. ಆತನದು ದ್ವಿಪಾತ್ರ. ನನ್ನದು ಕೂಡಾ. ಕಟ್ಟಡಕ್ಕೂ ದ್ವಿಪಾತ್ರವೇ. ಅಂದಿನದು ಅಮಾತ್ಯನ ಸಭಾಭವನ; ಇಂದು ಅದು ನ್ಯಾಯಸ್ಥಾನ. ಕರೆದೊಯ್ಯಲು ಎಷ್ಟು ಹೊತ್ತಿಗೆ ಬರುವರೊ? 'ಈ ಹಣ್ಣುಗಳನ್ನು ತಿನ್ತೇನೆ. ನೀರಡಿಕೆಯ ತೊಂದರೆ ಇರೋದಿಲ್ಲ,....'ಬಟಾಗೆ ನನ್ನ ಉತ್ತರದಿಂದ ಬೇಸರವಾಗಿದ್ದೀತು. ಆದರೆ ಮನವರಿಕೆಯಾದಾಗ, ಸಮಾಧಾನವೂ ಆಗಿರಬಹುದು. ಅವರು ಯಾರೂ ನ್ಯಾಯಸ್ಥಾನಕ್ಕೆ ಬರಬಾರದು; ಬರಲಾರರು. ರಾಮೆರಿ,' ಪುಟ್ಟ ರಾಮೆರಿ....ಇಲ್ಲ. ಗೊತ್ತಿದ್ದೂ ಗೊತ್ತಿದ್ದೂ ; ಗಂಡಾಂತರಕ್ಕೆ ತಲೆ ಒಡ್ಡುವುದು ಸರಿಯಲ್ಲ. ನನ್ನಬಂಧುಗಳು ದುಡುಕಿ ಏನನ್ನೂ ಮಾಡರು...')

ಬಾಗಿಲ ಸದ್ದು. ದಳಪತಿಯ ಸ್ವರ:

" ಅಪರಾಧಿ ! ಹೊರಗೆ ಬಾ ! "

('ಓಹೋ....ನಾನು ಅಪರಾಧಿ ಎನ್ನುವುದು ತೀರ್ಮಾನವಾಗಿಯೇ ಬಿಟ್ಟಿದೆ !') ಹೊರಬಾಗಿಲ ಬಳಿ ಎಂಟು ಹತ್ತು ಜನ ಯೋಧರು. ಇಬ್ಬರ ಕೈಗಳಲ್ಲಿ ಸೆಣಬಿನ ಹುರಿಹಗ್ಗಗಳು. ಮೆನೆಪ್‌ಟಾನ ತೋಳುಗಳಿಗೆ.

('ಇದು ಅನಗತ್ಯ —ಎನ್ನಲೆ ? ಊಹೂಂ ಅವರಿಗಿಷ್ಟ ಬಂದಂತೆ ಮಾಡಲಿ.' )

"ನಡೀರಿ ಆಚೆಗೆ !"

('ಇದು ನಾಯಕರಿಗೆ ದಾರಿಬಿಡಿ, ಅಲ್ಲ. ಇವರು ನನ್ನ ಪರಿಚಿತರು. ಮಾತನಾಡಿಸುವ ಬಯಕೆ ಅವರಿಗೆ— ಆದರೆ ಈ ದಿನ ಮೂಕರು. ನಾನು ಮುಗಳು ನಗುಬೇಕು....')

ಎಲ್ಲ ಕೆಲಸಗಳನ್ನೂ ಬಿಟ್ಟು ಬಂದಿದ್ದರು. ಅರಮನೆಯ ಸೇವಕ ಸೇವಿಕೆಯರು.

('ಅವರಲ್ಲೊಬ್ಬಳು ಮಹಾತಾಯಿ ಶೀಬಾ.')

ಅವಳೂ ಇದ್ದಳು. ಆಕೆಯ ಗಂಡನೂ ಇದ್ದ.

('ಮೆರವಣಿಗೆ.')

ಅಮಾತ್ಯ ಭವನ ಕಾಣಿಸಿದೊಡನೆ ಛಟಿಲ್ ಛಟಿಲ್ ಎಂದವು ಯೋಧರ ಚಾವಟಿಗಳು.

"ನಡೀರಿ ನಿಮ್ಮ ನಿಮ್ಮ ಕೆಲಸಕ್ಕೆ!"

('ಏಟು ಅವರಿಗೆ, ನೋವು ನನಗೆ.')

ಪರಿಚಿತ ಮೆಟ್ಟಿಲುಗಳು. ಬರಿಗಾಲು. ('ಇದೇ ಸುಖ.') ('ಓ! ಕಟಾಂಜನ. ಇಲ್ಲಿ ನಾನು ಆರೋಪಿ.')

ಕಟಾಂಜನದ ಹಿಂದೆ ಶಾಂತಮೂರ್ತಿ ಮೆನೆಪ್‌ಟಾ ನಿಂತ ಎಡಬಲಗಳಲ್ಲಿ, ತೋಳುಗಳಿಗೆ ಬಿಗಿದ ಹಗ್ಗಗಳನ್ನು ಹಿಡಿದ ಯೋಧರು. ಮೆನೆಪ್‌ಟಾನ ದೃಷ್ಟಿ ಆಮೆರಬ್‌ನನ್ನು ಅರಸಿ ಅವನ ಮೇಲೆ ಒರಗಿತು. ('ಇವರೆಲ್ಲ ಪ್ರತಿಮೆಗಳು. ಉಸಿರಾಟವೂ ನಿಂತಿದೆಯೇನೋ.')

ಒಮ್ಮೆಲೆ ಸುಸ್ಪಷ್ಟ ಸ್ವರದಲ್ಲಿ ಆತನೆಂದ:

"ನ್ಯಾಯಸ್ಥಾನಕ್ಕೆ ನಮಿಸ್ತೇನೆ."

ಇದ್ದಕ್ಕಿದ್ದಂತೆ ಬಂದ ಆ ಧ್ವನಿ ಕೇಳಿ ಎಲ್ಲರೂ ಚಕಿತರಾದರು.

ನ್ಯಾಯಮೂರ್ತಿಯ ಹಿಂಬದಿಯಲ್ಲಿ ಎತ್ತರದ ವೇದಿಕೆಯನ್ನು ಬಿಳಿಯ ಪರದೆ ಮರೆ ಮಾಡಿತ್ತು. ಅಲ್ಲಿ ಯಾರೂ ಇರಲಿಲ್ಲ. ಆಮೆರಬ್‌ನ ಎಡ ಪಾರ್ಶ್ವದ ಪೀಠವೂ ಹಲವು ಪೀಠಗಳೂ ಬರಿದಾಗಿದ್ದುವು. ಬಲಗಡೆಯಲ್ಲಿ ಭಾರೀ ಗುಂಪು. ನಿರ್ವಿಕಾರ ಭಾವದಿಂದ ಅವರಲ್ಲಿ ಕೆಲವರನ್ನು ಮೆನೆಪ್‌ಟಾ ಗುರುತಿಸಿದ. ಹೆಖ್ಟೆಟ್ ('ಹೇಳು ಮಗು, ನಿಮ್ಮ ಬಂಡಾಯ ಇತ್ಯಾದಿ ಹೇಗೆ ಮಾಡಿದಿರಿ ಹೇಳು.') ಗೇಬು. ('ಯಾವನಯ್ಯ ನೀನು? ಏನು ಮಾತಾಡ್ದೆ! ಏನು ಮಾತಾಡ್ದೆ! ಅಬ್ಟುಗೆ ಹೋದವನು ಬುದ್ಧೀನ ಕಾಣಿಕೆ ಕೊಟ್ಟು ಬಂದೆಯಾ?) ಅವನ ಪಕ್ಕದಲ್ಲಿರುವಾತ ಯಾರೋ ತಿಳಿಯದು. ಅಮೆನೆಮೊಪೆಟ್. ಮೆನೆಪ್‌ಟಾಗೆ ಅಪರಿಚಿತ. ದಂಡನಾಯಕನ ಠೀವಿ ಇದೆ') ಟೆಹುಟಿ. ('ಚುಟುಕು! ಚುಟುಕು! ಬಾಯಿಯಿಂದ ಹೊರಬಿದ್ದ ಮಾತು ಪಂಜರ ಬಿಟ್ಟ ಕುರುಡು ಹಕ್ಕಿಯ ಹಾಗೆ; ಯಾವುದಕ್ಕಾದರೂ ಬಡಿದು ರೆಕ್ಕೆ ಮುರಿದೀತು. ಎಚ್ಚರ!') ಬಕಿಲ—ಆಹಾ! ಬಕಿಲ....ಅತ್ತ ನಿಂತಿರುವ ಜನರೆಲ್ಲ

ಮುಖಭಂಗವಾಯಿತು ಪಾಪ ! ಸುಮಾರು ಒಂದು ವರ್ಷದ ಅಜ್ಞಾತವಾಸ. ಬಹಳ ತಾಪದಾಯಕವಾಗಿರಬೇಕು. ಈಗೇನು ಹೇಳುವನೊ ? ಮತ್ತೆ ಅಂದಿನ ಮಾತುಗಳು ? ಅದೇ ಕೂಗಾಟ ?

"ಈ ದುರುಳನ ಅಕೃತ್ಯ ಇಡೀ ಐಗುಪ್ತಕ್ಕೇ ಗೊತ್ತಿದೆ. ಆದರೂ ನ್ಯಾಯ ಸ್ಥಾನಕ್ಕೆ ಮನವರಿಕೆಯಾಗಲೆಂದು ಮತ್ತೊನ್ಸಾರಿ ಹೇಳ್ತೀನೆ. ಕಳೆದ ವರ್ಷ ಅಬ್ಟು ಉತ್ಸವದ ಮಾರನೆಯ ದಿನ ಕಂದಾಯ ವಸೂಲಿಯ ಕರ್ತವ್ಯಪಾಲನೆಗಾಗಿ ನಾನು ನೀರಾನೆ ಪ್ರಾಂತ್ಯದ ಮುಖ್ಯ ಪಟ್ಟಣಕ್ಕೆ ಹೋದೆ. ಆ ರಾತ್ರಿ ಈ ಅಪ ರಾಧಿಯೂ ಸಂಗಡಿಗರೂ ಅಬ್ಟುವಿನಿಂದ ವಾಪಸಾದರು. ಕಂದಾಯಸಂಗ್ರಹವನ್ನು ಇದಿರಿಸ್ಬೇಕು, ನನ್ನನ್ನು ಸಾಯಿಸಿ ನೀಲ ನದಿಗೆ ಎಸೀಬೇಕು ಅಂತ ಪಿತೂರಿ ನಡೆಸಿದ್ರು. ಬೆಳಗಾಗೋ ಹೊತ್ತಿಗೆ ಇಡೀ ಊರನ್ನೇ ನನ್ನ ವಿರುದ್ಧ ಎತ್ತಿ ಕಟ್ಟಿದ್ರು. ರಾಜಗೃಹದಲ್ಲಿ ನಾನು ಊರಿನ ಪ್ರಮುಖರ ಸಭೆ ಕರೆದಾಗ, ಮನವಿ ಸಲ್ಲಿಸೋ ನೆಪದಲ್ಲಿ ಈತ ರೈತರನ್ನೂ ಕುಶಲಕರ್ಮಿಗಳನ್ನೂ ಕರೆದುಕೊಂಡು ಆ ಸಭೆಗೆ ನುಗ್ಗಿದ. ಮಹಾ ಪ್ರಭು, ಮಹಾ ಅರ್ಚಕ ಮತ್ತು ಅಮಾತ್ಯವರ್ಯ ರನ್ನು ಧಿಕ್ಕರಿಸಿ ಮಾತನಾಡಿದ. ನನ್ನ ಮೇಲೆ ಕೈ ಮಾಡಿದ. ನನ್ನ ಭಟರ ಮುಖ್ಯಸ್ಥನ ಕಣ್ಣು ಕಿತ್ತ. ಶಾಂತಿ ಸ್ಥಾಪನೆಗಾಗಿ ನಾನು ಮಾಡಿದ ಪ್ರಯತ್ನ ವೆಲ್ಲ ವಿಫಲವಾಯ್ತು. ಪ್ರಯಾಸಪಟ್ಟು ಪ್ರಾಣ ಉಳಿಸಿಕೊಂಡೆ. ಪ್ರಾಂತಪಾಲ ನನ್ನೂ ಉಳಿಸಿದೆ. ಸೃಷ್ಟಿಕರ್ತ ರಾನ ಆಳ್ವಿಕೆಯಲ್ಲಿ ಕೆಲವು ಜನ ಸೆತ್‌ನ ಆರಾ ಧಕರಾದದ್ದು, ರಾ ಅವರನ್ನು ದಂಡಿಸಿದ್ದು ನಮಗೆ ಗೊತ್ತಿದೆ. ಆದರೆ ಇಡಿಯ ಸಮಾಜದ, ದೇಶದ ವಿರುದ್ಧ ಬಂಡಾಯ ನಡೆದಿರುವುದು ಐಗುಪ್ತದ ಸಾವಿರಾರು ವರ್ಷಗಳ ಇತಿಹಾಸದಲ್ಲಿ ಇದೇ ಮೊದಲು. ಐಗುಪ್ತದ ನಾಲ್ವತ್ತು ನೂರು ಸಹಸ್ರ ಜನಸಂಖ್ಯೆಯಲ್ಲಿ ನೂರರಲ್ಲಿ ಒಂದು ಭಾಗ ಜನ ಮಾತ್ರ ಬಂಡಾಯ ವೆದ್ದಿದ್ದಾರೇಂತ ಸುಮ್ಮನಿರೋಣವೆ ? ಮರಳುಗಾಡಿನ ಈ ಕಿಡಿಯನ್ನು ಕಡೆ ಗಣಿಸಿದರೆ ನಾಳೆ ನೀಲನದಿಗೇ ಜ್ವಾಲೆ ಅಂಟೀತು; ಐಗುಪ್ತದ ನಾಗರಿಕತೆ ನಾಶವಾದೀತು ; ಭೂಮಿಯ ಮೇಲೆ ರಾನ ಪ್ರಭುತ್ವ ಮುಕ್ತಾಯವಾದೀತು. ಇಷ್ಟೇ ನನ್ನ ದೂರು. ಇಷ್ಟೇ."

ಮಹಾ ಅರ್ಚಕ ಟೆಹುಟಿಯತ್ತ ನೋಡಿ ಕಂಡೂ ಕಾಣಿಸದಂತೆ ಮಂದ ಹಾಸ ಬೀರಿದ. ಟೆಹುಟಿ ಸಂತೃಪ್ತ. 'ಹೆಚ್ಚು ಎಚ್ಚರ ವಹಿಸದಿದ್ದರೆ ಟೆಹುಟಿಯೇ

ನದಿಗೆ ಉರಿ ಹಚ್ತಾನೆ' ಎಂದುಕೊಂಡ ಅಮಾತ್ಯ. (ಪೆರೋಗೆ ನಿದ್ದೆ. ಮಹಾ ರಾಣಿ ಯೋಚಿಸಿದಳು : 'ಸದ್ದಿಲ್ಲದ ನಿದ್ದೆಯೇ ಆದರೆ ಎಬ್ಬಿಸೋದು ಬೇಡ.' ಪಕ್ಕಕ್ಕೆ ಹೊರಳಿ ಅವಳೆಂದಳು : 'ನೆಹನ, ಒಂದು ದಿವಸ ಈ ಟೆಹುಟಿ ಅಮಾತ್ಯನಾಗ್ತಾನೆ ಅಲ್ಲವಾ ?' ಉತ್ತರ ನಿರೀಕ್ಷಿಸದೆ ಅವಳೇ ಮುಂದುವರಿ ದಳು : 'ಇನ್ನು ನಿನ್ನ ಸೊಗಸುಗಾರ ಗಂಡ ಮಾತಾಡ್ತಾನೊ ?')

ಮೆನೆಪ್‌ಟಾಗೆ ಗಟ್ಟಿಯಾಗಿ ನಗಬೇಕೆನಿಸಿತು. ಇದಲ್ಲವೆ ವಿಚಾರಣೆ ? ಜನ ಹೊರಹೋಗುತ್ತಿದ್ದಾರೆ; ಹೊಸಬರು ಬರುತ್ತಿದ್ದಾರೆ. ಮೂಲೆಯಲ್ಲಿ ಸ್ಥೂಲಕಾಯನೊಬ್ಬನ ಮರೆಯಿಂದ ಎರಡು ಕಣ್ಣುಗಳು ತನ್ನೆಡೆಗೆ ನೋಡು ತ್ತಿವೆ. ಮೆನ್ನ....

ನ್ಯಾಯಮೂರ್ತಿಯ ದೃಷ್ಟಿ ತನ್ನೆಡೆಗೆ ಹರಿಯಿತೆಂದು ಗೇಬು ಗಡಬಡಿಸಿ ಎದ್ದ. ಬಡಬಡನೆ ಆತನೆಂದ :

"ಪೆರೋನ ಆಯುರಾರೋಗ್ಯ ವರ್ಧಿಸಲಿ ! ಸಂಪೂರ್ಣ ಸತ್ಯ, ಟೆಹುಟಿ ಹೇಳಿದ್ದು. ಆ ದಿವಸ ಅನಾಗರಿಕ ಮೃಗ ಬಲದ ಮುಂದೆ ದೇಶದ ಹಿರಿಯ ಕಂದಾಯ ಅಧಿಕಾರಿ ಟೆಹುಟಿಯೂ ಪ್ರಾಂತಪಾಲನಾದ ನಾನೂ ಹಿಮ್ಮೆಟ್ಟ ಬೇಕಾಯ್ತು. ನಮ್ಮ ಸಜೀವ ದಹನ ಈ ದಂಗೆಕೋರರ ಉದ್ದೇಶವಾಗಿತ್ತು. ನನ್ನ ಪತ್ನಿ ನೆಹನವೇಯ್ಟ್ ಅವತ್ತು ಅಲ್ಲಿರಲಿಲ್ಲ. ಪತ್ನಿಯ ಮತ್ತು ಮಕ್ಕಳ ಆಭರಣಗಳನ್ನು ಲೂಟಿ ಮಾಡಿದ್ರು. ಅವರೂ ಇದ್ದಿದ್ದರೆ ಇಡೀ ಗೇಬು ಕುಟುಂಬವೇ ನಿರ್ನಾಮವಾಗ್ತಿತ್ತು....ಮಾಡಿದ ತಪ್ಪನ್ನು ಮಕ್ಕಳು ತಿದ್ದಿ ಕೊಳ್ಳಲೀಂತ ದಯಾಮಯ ಪೆರೋ ಕಾಲಾವಕಾಶ ಕೊಟ್ರು. ಏನೂ ಪ್ರಯೋಜನವಾಗಲಿಲ್ಲ. ಪೆರೋಗೆ ಕಾಣಿಕೆ ಅರ್ಪಿಸೋ ನೆಪದಲ್ಲಿ ಈ ಧೂರ್ತ ನಾಯಕ ಮೆಂಫಿಸಿಗೂ ಬಂದ. ಅರಮನೆಗೆ ಪ್ರವೇಶ ದೊರಕಿಸಿಕೊಂಡ. ಸರುಸದಸ್ಯರಿಗೆ ಮಹಾಪ್ರಭು ನೀಡಿದ ಔತಣಕ್ಕೆ ತಾನೂ ನುಸುಳಿಬಂದ. ಅರಮನೆಯ ಪರಿಚಾರಕರನ್ನು ದೇವರೂಪನ ವಿರುದ್ಧ ಎತ್ತಿಕಟ್ಟೋದಕ್ಕೆ ಯತ್ನಿ ಸಿದ. ಸುರೆ ಕುಡಿದ ಮಂಗನಂತೆ ಕುಣಿದ. ಇಂಥ ವ್ಯಕ್ತಿಗೆ ಎಂಥ ಕಠಿನ ಶಿಕ್ಷೆ ವಿಧಿಸಿದರೂ ಸಾಲದು."

ಇಷ್ಟನ್ನು ಹೇಳಿ, ಮಹತ್ಕಾರ್ಯ ಸಾಧಿಸಿದವನಂತೆ, ಗೇಬು ಅತ್ತಿತ್ತ ನೋಡುತ್ತ ಕುಳಿತ.

ಮೆನೆಪ್‌ಟಾಗೆ ವಿಚಿತ್ರ ಅನುಭವ. ಅನ್ಯಾಯದ ದಾರದಲ್ಲಿ ಅಸತ್ಯ ಗಳನ್ನು ಪೋಣಿಸಿ ಮಾಡಿದ ಮಾಲೆ. ನ್ಯಾಯಮೂರ್ತಿಗೆ ಅರ್ಪಣೆ. ನೆಲ ಮಾಳಿಗೆಗೆ ತನ್ನನ್ನು ತಳ್ಳಿದೊಡನೆಯೇ ಈ ಹೊಸ ನಾಟಕದ ರೂಪುರೇಷೆಗಳನ್ನು ನಿರ್ಧರಿಸಿರಬೇಕು. ತಾವು ಆಡಬೇಕಾದ ಮಾತುಗಳನ್ನು ಎಷ್ಟು ಚೆನ್ನಾಗಿ ಕಲಿತಿದ್ದಾರೆ!

....ಜನರ ನೂಕು ನುಗ್ಗಲು. ಅರಮನೆ ಕಾವಲು ಭಟರ ದಳಪತಿಗೆ ಇನಿತ್ತು ಬೆವರಿಳಿಯುತ್ತದೆ. ಪಾರ್ಶ್ವದ್ವಾರದಿಂದ ಜನ ಹೊರಗೆ ಹೋಗು ತ್ತಿದ್ದಾರೆ; ಒಳಗೆ ಬರುತ್ತಿದ್ದಾರೆ. ಇನ್ನು ಯಾರ ಸರದಿ? ಯಾರು ನಟರು, ನರ್ತಕರು? ನ್ಯಾಯಸ್ಥಾನದ ಪ್ರತಿಷ್ಠಿತರ ಮುಖಗಳ ಮೇಲೆಲ್ಲ ಒಂದೇ ಭಾವ ಬಿಂಬಿತವಾಗಿದೆಯಲ್ಲ? ವಿಜಯದ ಉನ್ಮಾದದಿಂದ ಇವರ ಕಣ್ಣುಗಳು ಬೆಳಗುತ್ತಿವೆ. ತಾವು ಘಾಸಿಗೊಳಿಸಿದ ಮಿಕದ ಸುತ್ತಲೂ ನೆರೆದಿರುವ ಬೇಟೆ ಗಾರರು ಇವರು.

ನುಟ್‌ಮೋಸ್. ಪೆರೋನ ಪಲ್ಲಕಿ ಹೊತ್ತ ಈ ಅದೃಷ್ಟಶಾಲಿ ಪ್ರತಿಷ್ಠೆಯ ಕಳೆಯಿಂದ ಬೆಳಗುತ್ತಿದ್ದಾನೆ. ಹೊಲಗಳನ್ನು ಕಳೆದುಕೊಂಡ ಭೂಮಾಲಿಕನಲ್ಲ. ರಾಜಧಾನಿಯ ನಾಗರಿಕತೆಯ ಲೇಪನದಿಂದ ಹೊಸ ಮನುಷ್ಯನಾದವನು. ಸೆತೆಕ್‌ನಖ್ತ್ ಸೆನ್‌ಉಸರ್ಟರೂ ಏಳುತ್ತಿದ್ದಾರೆ. ಮೂರು ಕಂಠಗಳಿಂದ ಒಂದೇ ಹಾಡು? ಒಟ್ಟಿಗೆ ಹಾಡು?

(ಹರಿಯುತ್ತಿದ್ದ ಮಾತು ನಿಂತಿದೆ ಎಂದು ಪೆರೋಗೆ ಎಚ್ಚರ. ಈ ಆಸನ ಇಕ್ಕಟ್ಟು. ಮೈ ಕೈ ನೋವು. ಸುಪ್ಪತ್ತಿಗೆಯ ಮೇಲೆ ಮಲಗ ಬೇಕು....)"

ಬಾಗಿ ಬಾಗಿ ನ್ಯಾಯಸ್ಥಾನಕ್ಕೆ ಪುನಃ ಪುನಃ ವಂದಿಸಿ ನುಟ್‌ಮೋಸ್ ಆರಂಭಿಸಿದ :

"ಪೆರೋನ ಆಯುರಾರೋಗ್ಯ ವರ್ಧಿಸಲಿ! ಇಲ್ಲಿ ನಿಂತಿರುವ ನಾವು ಶೋಷಣೆಗೆ ಒಳಗಾದವರು; ಅನ್ಯಾಯಕ್ಕೆ ಬಲಿಯಾದವರು. ನಮ್ಮೆಲ್ಲರ ಪರವಾಗಿ ನಾನು ಈ ದೂರು ಸಲ್ಲಿಸುತ್ತಿದ್ದೇನೆ. ನ್ಯಾಯಮೂರ್ತಿಯವರು ಪರಾಮರ್ಶಿಸಬೇಕೆಂತ ಪ್ರಾರ್ಥನೆ."

(ಪೆರೋನನ್ನು ಮತ್ತೆ ನಿದ್ರೆ ಆವರಿಸಿತು.)

ಗಂಟಲು ಸರಿಪಡಿಸಿಕೊಂಡು ನುಟ್‌ಮೋಸ್ ಮುಂದುವರಿಸಿದ :

"ನಾನು ನುಟ್‌ಮೋಸ್. ಮಹಾಪ್ರಭುವಿನ ಪಲ್ಲಕಿ ಹೊತ್ತಿರುವ ಪುಣ್ಯಶಾಲಿ. ನೀರಾನೆ ಪ್ರಾಂತದ ಬಂಡಾಯಕ್ಕೆ ಮುಂಚೆ ಅಲ್ಲಿನ ಅತಿ ದೊಡ್ಡ ಭೂಮಾಲಿಕನಾಗಿದ್ದವನು. ಪ್ರಾಂತಪಾಲರ ನೇಮಕಕ್ಕೆ ಮೊದಲು ಮಹಾಪ್ರಭುವಿನ ಪ್ರತಿನಿಧಿಯಾಗಿದ್ದವನು. ಈತ ಸೆತೆಕ್‌ನಖ್ತ್, ಆತ ಸೆನ್ ಉಸರ್ಟ್—ಎಲ್ಲವನ್ನೂ ಕಳೆದುಕೊಂಡು ನನ್ನ ಹಾಗೆಯೇ ದೊರೆಯ ಕೃಪಾಶ್ರಯ ಪಡೆದವರು. ಮಹಾ ಅರ್ಚಕರ ಕರುಣೆ, ಅಮಾತ್ಯರ ಸಹಾನುಭೂತಿ ನಮ್ಮನ್ನು ಉಳಿಸಿವೆ. ಈ ದುಷ್ಟನ ಕೈಯಲ್ಲಿ ನಾವು ಪಟ್ಟ ಕಷ್ಟವನ್ನು ಏನೆಂತ ನಿವೇದಿಸಲಿ ? ಒಬ್ಬ ಸಾಮಾನ್ಯ ಮನುಷ್ಯ ಜನರನ್ನು ಮರುಳು ಮಾಡಿ, ಅವರನ್ನು ಸಾಧನವಾಗಿ ಬಳಸಿ ಸಮಾಜವನ್ನು ಬುಡಮೇಲು ಮಾಡಬಹುದೆಂತ ಯಾರು ಭಾವಿಸಿದ್ದರು ? ಬಂಡಾಯ ನಡೆದ ದಿವಸ ಮಹಾಪ್ರಭುವಿನ ಜತೆ, ಅಬ್ಟು ಯಾತ್ರೆ ಮುಗಿಸಿ ರಾಜಧಾನಿಗೆ ಪ್ರಯಾಣ ಬೆಳಸ್ತಾ ಇದ್ದೆ....ಆಮೇಲೆ ನನಗೆ ತಿಳಿದು ಬಂದ ಪ್ರಕಾರ ಈತನೂ ಇವನ ಸಂಗಡಿಗರೂ ರಾಜಗೃಹದ ಪ್ರಾಕಾರವನ್ನು ಪುಡಿ ಮಾಡಿದ್ರು. ಎಲ್ಲ ಭೂಮಾಲಿಕರ ಹೊಲ ಕಸಕೊಂಡ್ರು. ರಾಸುಗಳನ್ನು ವಶಕ್ಕೆ ತಗೊಂಡ್ರು. ತಮಗೆ ಬೇಕಾದವರಿಗೆಲ್ಲ ಹಂಚಿದ್ರು. ಹೊಡೆದ್ರು ಬಡೆದ್ರು, ಹಿಂಸಾಚರಣೆ ಮಾಡಿದ್ರು. ಹೆಂಗಸರ ಮಾನಭಂಗ; ಅತ್ಯಾಚಾರ. ಅಯ್ಯೋ, ಅಯ್ಯೋ ! ಏನು ಹೇಳ್ಲಿ ? ಪರಂಪರಾಗತವಾಗಿ ನಮ್ಮ ಜತೆ ಸುಖವಾಗಿದ್ದ ದಾಸದಾಸಿಯರನ್ನು ಬಿಡುಗಡೆ ಮಾಡಿದ್ರು. ಅವರು ಅನಾಥರಾದ್ರು. ತಮ್ಮ ಬಾಲಬಡುಕ ಬಡವರ ಮಕ್ಕಳಿಗೆ ಶಾಲೆ ! ಲಿಪಿ ಸುರುಳಿ ಪಾಠ ! ನಮ್ಮ ಮಕ್ಕಳಿಗೆ ಜೀತ ! ರಾಜಗೃಹದ ಪ್ರಾಕಾರ ದ್ವಾರವನ್ನು ಮುರಿದ ಮರದ ದಿಮ್ಮಿ ಇವರ ಸ್ಮಾರಕ ಕಂಬ. ಅದಕ್ಕೆ ಅಲಂಕಾರ. ತಾನೇ ಮಹಾರಾಣಿ ಅನ್ನುವ ಹಾಗೆ ಈತನ ಹೆಂಡತಿಯೇ ಮೆರೀತಿದ್ದಾಳೆ. ಇನ್ನೂ ಸ್ವಲ್ಪ ಸಮಯ ಹೀಗೆಯೇ ಬಿಟ್ಟರೆ ಸಮಾಜದ ಬೆನ್ನೆಲುಬಾದ ಭೂಮಾಲಿಕ ಸಮುದಾಯವೇ ನಾಶವಾಗ್ತದೆ. ಒಂದು ಸಿಂಹವನ್ನು ಕೊಂದು ಅದರ ಒಂದು ಕಣ್ಣು ಕುಕ್ಕಿ ತೆಗೆದು, ಹೊಟ್ಟು ತುಂಬಿಸಿ ಹೊಲಿದು, ಅದಕ್ಕೆ ಬಕಿಲ ಅಂತ ಹೆಸರಿಟ್ಟು, ನಮ್ಮ ಮಾನ್ಯ ಆ ಕಂದಾಯ ಅಧಿಕಾರಿ

ಟೆಹುಟೆಯವರ ಯೋಧರ ಮುಖ್ಯಸ್ಥನನ್ನು ಈ ಜನ ಅವಮಾನಿಸಿದ್ದಾರೆ ಅಂತ ಕೇಳಿದ್ದೇನೆ. ಅಲ್ಲಿ ನಡೆದಿರುವ ಎಲ್ಲ ದೌರ್ಜನ್ಯಕ್ಕೂ ಈತನೇ ಮೂಲ. ಹೆಚ್ಚೇನು ಹೇಳಲಿ ? ನ್ಯಾಯಮೂರ್ತಿಯವರಿಗೆ ಎಲ್ಲ ವಿಷಯ ತಿಳಿದೇ ಇದೆ."

ಮಾತು ಮುಗಿಯುತ್ತ ಬಂದಂತೆ ನುಟ್‍ನೋಸನ ಕಂಠ ಗದ್ಗದವಾಯಿತು. ಕಣ್ಣುಗಳಲ್ಲಿ ಹನಿ ಆಡಿತು. ಆತ ಅಂಗೈಗಳಿಂದ ಮುಖ ಮುಚ್ಚಿಕೊಂಡು ಅತ್ತ. ಸೆತೆಕ್‍ನೆಖ್ತ್, ಸೆನ್‍ಉಸರ್ಟರೂ ಬೆರಳುಗಳಿಂದ ಕಣ್ಣೊರೆಸಿಕೊಂಡರು.

ಮೆನೆಪ್‍ಟಾನಿಗೆ ಮುಗುಳು ನಗೆಯನ್ನು ಹತ್ತಿಕ್ಕಲು ಆಗಲಿಲ್ಲ.

ಕುಳಿತುಕೊಳ್ಳುವಂತೆ ಭೂಮಾಲಿಕರಿಗೆ ಸನ್ನೆ ಮಾಡಿ, ಅಮಾತ್ಯ ಮಹಾ ಅರ್ಚಕನ ಹತ್ತಿರ ವೇದಿಕೆಗೆ ಒತ್ತಿಕೊಂಡು ನಿಂತಿದ್ದ ಇನೇನಿಯತ್ತ ನೋಡಿದ. ಬಳಿಕ, ತನ್ನ ಆಸನಕ್ಕೊರಗಿ ವಿರಮಿಸುತ್ತಿದ್ದ ಅಧಿಕಾರ ಕೋಲಿನ ಬುಡವನ್ನೇ ದಿಟ್ಟಿಸುತ್ತ ನುಡಿದ :

"ಈ ವ್ಯಕ್ತಿಯ ವಿರುದ್ಧ ದೂರು ಕೊಟ್ಟಿರುವ ಇನ್ನೊಬ್ಬ ಪ್ರತಿಷ್ಠಿತ ಮನುಷ್ಯ—ನೀರಾನೆ ಪ್ರಾಂತದ ದೇವಮಂದಿರದ ಅರ್ಚಕ ಅಪೆಟ್. ಮೂಲತಃ ಈ ದೂರು ಸಲ್ಲಿಸಿರೋದು ಮಹಾ ಅರ್ಚಕರ ಸನ್ನಿಧಿಗೆ. ಅದರ ಸಾರಾಂಶವನ್ನು ಅರಮನೆ ಮಂದಿರದ ಅರ್ಚಕ ಇನೇನಿ ಈಗ ನ್ಯಾಯಸ್ಥಾನಕ್ಕೆ ತಿಳಿಸ್ತಾರೆ.

ಮೆನೆಪ್‍ಟಾ ಕಣ್ಣುಗಳನ್ನು ಕಿರಿದುಗೊಳಿಸಿದ. ಸುಳ್ಳಿನಲ್ಲೂ ವಿಶಿಷ್ಟ ಸುಳ್ಳು. ಅಪೆಟ್‍ಗೆ ಆಗಿರುವ ಅನ್ಯಾಯವೇನು ? ಆತ ಮಹಾ ಅರ್ಚಕನಿಗೆ ದೂರು ಕಳುಹಿಸಿದ್ದು ಯಾವಾಗ ? ಯಾರ ಮೂಲಕ ?

ಮಹಾ ಅರ್ಚಕ ಕಣ್ಣೆವೆಗಳನ್ನು ಮುಚ್ಚಿ ಕುಳಿತ. ಇನೇನಿಯ ಗಂಟಲಿನಿಂದ "ಪೆರೋನ ಆಯುರಾರೋಗ್ಯ ವರ್ಧಿಸಲಿ" ಎಂಬ ಘೋಷ ಹೊರಬಿದ್ದೊಡನೆ, ಎವೆಗಳನ್ನು ತುಸು ತೆರೆದು, ಇನೇನಿ—ಮೆನೆಪ್‍ಟಾ—ಅಮಾತ್ಯರೆಲ್ಲರ ಮೇಲೆ ದೃಷ್ಟಿ ಹರಿಸಿದ.

ಪರದೆಯಾಚೆ ಪೆರೋ ತನ್ನ ಪೀಠದಲ್ಲಿ ಮೈ ಸಡಿಲ ಬಿಟ್ಟು ಒರಗಿದ್ದುದು ಮೆನೆಪ್‍ಟಾಗೆ ಕಾಣಿಸಿತು. ಮಹಾ ಅರ್ಚಕನಿಗೂ ನಿದ್ದೆ ?

ಇನೇನಿಯ ಏರುದನಿ ನ್ಯಾಯಸ್ಥಾನದ ಗೋಡೆಗೆ ಅಪ್ಪಳಿಸಿತು :

" ಇದು ಕೇಳುವ ಕಿವಿಗಳು ಕಿವುಡಾಗುವಷ್ಟು ಕೆಟ್ಟ ಸುದ್ದಿ ; ಮಾಡಿದ ಕೈಗಳು ತಾವೇ ಕಡಿದು ಬೀಳುವಷ್ಟು ದುಷ್ಟ ಕೆಲಸ. ಬಂಡಾಯ ಹೂಡಿದ ಮೂರನೆಯ ದಿನವೇ ಈತ ತನ್ನ ಸಂಗಡಿಗರೊಡನೆ ದೇವಮಂದಿರಕ್ಕೆ ನುಗ್ಗಿ ದುಂಡಾವೃತ್ತಿ ನಡೆಸಿದ. ನೆರೆದ ಜನರ ಎದುರಲ್ಲಿ ಅರ್ಚಕ ಅಪೆಟ್‌ನನ್ನು ಥಳಿಸಿದ. ಇಲ್ಲಿರುವ ಮಾನ್ಯ ಭೂಮಾಲಿಕರು ಸೆತೆಕ್‌ನಖ್ತ್ ಮತ್ತು ಸೆನ್ ಉಸರ್ಟ್ ಇದಕ್ಕೆ ಸಾಕ್ಷಿ. ಮಂದಿರದ ಮೂರ್ತಿ ದೇವರಲ್ಲ, ನಾನೇ ದೇವರು. ನನಗೇ ಪೂಜೆ ಸಲ್ಲಿಸಿ....ಎಂದ. ದೇವಮಂದಿರದ ಉಗ್ರಾಣವನ್ನು ಹೊಕ್ಕು ಭಕ್ತಾದಿಗಳು ನೀಡಿದ ದವಸಧಾನ್ಯ ಮತ್ತಿತರ ಕಾಣಿಕೆಗಳನ್ನು ವಶಪಡಿಸಿಕೊಂಡ. ಬಂಗಾರದ ತಟ್ಟೆಗಳನ್ನು ದೋಚಿದ. ಶಿರಚ್ಛೇದನ ಮಾಡಿ ಸ್ಮಾರಕ ಕಂಬಕ್ಕೆ ತೂಗುಹಾಕ್ತೇನೆ—ಅಂತ ಅಪೆಟ್‌ನನ್ನು ಹೆದರಿಸಿದ. ಮಹಾಪ್ರಭು—ಮಹಾ ಅರ್ಚಕರು—ಭೂಮಾಲಿಕರು ಒಟ್ಟಾಗಿ ಐಗುಪ್ತವನ್ನು ಹರಿದು ತಿನ್ತಿದ್ದಾರೆ—ಅಂತ ಕೂಗಾಡಿದ. ಇವನು ಮಾಡಿರುವುದು ದೈವದ್ರೋಹ. ಈತ ಮನುಷ್ಯ ನಲ್ಲ—ಸಾರಿ ಸಾರಿ ಹೇಳ್ತೇನೆ ಇವನು ಸೆತ್ ! ಇವನು ಸೆತ್ ! "

ಮಹಾ ಅರ್ಚಕ ಮೆಚ್ಚುಗೆ ಸೂಚಿಸುವನೇನೋ ಎಂದು ಇನೇನಿ ಅತ್ತ ನೋಡಿದ. ಹೇಪಾಟ್‌ನ ತುಟಿಗಳು ಕಿರುನಗೆ ಬೀರಿದಂತೆ ಕಂಡಿತು.

(ಪೆರೋಗೆ ಪೂರ್ತಿ ಎಚ್ಚರ. ದಾಸಿಯರ ಚಾಮರ ಸೇವೆಗೆ ಆತ ಎದೆಯೊಡ್ಡಿದ.)

ಹೊರಗೆ ಬಿಸಿಲು. ಗದ್ದಲ. ಇವತ್ತು ಅರಮನೆಯ ಮಹಾದ್ವಾರವನ್ನೂ ಪ್ರಾಕಾರದ ಪಾರ್ಶ್ವದ್ವಾರಗಳನ್ನೂ ತೆರೆಯ ಬಾರದಿತ್ತುಎನಿಸಿತು ಅಮಾತ್ಯನಿಗೆ. ಇಷ್ಟು ಹೊತ್ತಿನಿಂದ ಕೇಳುತ್ತ ನಿಂತಿದ್ದಾನೆ. ತುಟಿ ಪಿಟ್ಟೆಂದಿಲ್ಲವಲ್ಲ. ಮುಖದ ಮೇಲೆ ಯಾವ ಭಾವನೆಯೂ ಇಲ್ಲ. ತನ್ನೊಡನೆ ಭೇಟಿ, ಪೆರೋದರ್ಶನ, ಬಳಿಕ ಔತಣ—ಆಗ ಹೇಗಿದ್ದನೋ ಈಗಲೂ ಹಾಗೆಯೇ ಇರುವನಲ್ಲ. ವಿಚಿತ್ರ ಪ್ರಾಣಿ. ಅಥವಾ, ಇನ್ನು ಉಳಿಗಾಲವಿಲ್ಲ ಎಂದು ಮನವರಿಕೆಯಾಗಿ ತಣ್ಣಗಾಗಿ ರುವನೊ ? ಇವನನ್ನೊಮ್ಮೆ ಪ್ರಶ್ನಿಸಿ ತೀರ್ಪು ಕೊಟ್ಟುಬಿಡಬಹುದು. ಆದರೆ ಒಂದು ವಾಕ್ಯದಲ್ಲಿ ಅದನ್ನು ಮುಗಿಸುವಂತಿಲ್ಲವಲ್ಲ....ಅದು ದೀರ್ಘವಾಗಿರಬೇಕು. ತೂಕದ ಪದಗಳಿಂದ ಕೂಡಿರಬೇಕು. ಗೋರಿ ದರೋಡೆಗಾರ ಜಜ್‌ಮುಂಖನ

ಬಗೆಗೆ ತೀರ್ಪನ್ನು ಪೆರೋನ ಎದುರಲ್ಲಿ ಹಿಂದೆ ನೀಡಿದ್ದೆ. ಈ ಸಲ ಮಹಾ ಅರ್ಚಕನೂ ಇದ್ದಾನೆ. ತನ್ನ ಸಾಮರ್ಥ್ಯಕ್ಕೆ ಆಹ್ವಾನವಾಗಿ ಬಂದಿರುವ ಘಟನೆ ಇದು. ಆಮೆರಬ್ ಇಂದು ನೀಡುವ ತೀರ್ಪು ಥೊಥ್‌ನ ಕಟ್ಟಳೆಯ ಹಾಗೆ ಶಾಶ್ವತವಾಗಬೇಕು. ಭೋಜನಕ್ಕಾಗಿ ವಿಶ್ರಾಂತಿಗಾಗಿ ಈಗ ಕೆಲಸ ನಿಲ್ಲಿಸಿ ಬಿಸಿಲು ಬಾಡಿದ ಮೇಲೆ ಮತ್ತೆ ಸೇರುವುದು ವಿಹಿತ. ಇವರು ಏನೆನ್ನುವರೊ ? ಅಮಾತ್ಯ ಸೆನೆಬ್‌ನನ್ನು ಕರೆದು "ವಿಚಾರಣೆ ಸಂಜೆಯವರೆಗೂ ನಡೆಯಬಹುದು. ವಿಶ್ರಾಂತಿಯ ಅನಂತರ ಸೇರುವುದು ಮೇಲು ಅಂತ ತೋರ್ತದೆ. ಅನುಮತಿ ಬೇಕು ಅಂತ ಪೆರೋಗೆ ಬಿನ್ನವಿಸಿ ಬಾ," ಎಂದ. ಮಹಾ ಅರ್ಚಕನಿಗೆ ತಾನೇ ಆ ವಿಷಯವನ್ನು ತಿಳಿಸಿದ.

"ಸರಿ, ಸರಿ. ಅಪೂರ್ವ ವಿಚಾರಣೆ, ಅಪೂರ್ವ ತೀರ್ಪು," ಎಂದ ಹೇಪಾಟ್. ಪರಿಹಾಸ್ಯದ ನುಡಿ, ಚುಚ್ಚಿದರೂ ನೋವಾಗಿಲ್ಲ ಎನ್ನುವಂತೆ ಆಮೆರಬ್ ನಟಿಸಿದ.

(ಸೆನೆಬ್ ತಂದ ಬಿನ್ನಹವನ್ನು ಆಲಿಸಿದೊಡನೆ ಆಂಖ್ ಲಾಂಛನವನ್ನೆತ್ತಿ ಕೊಂಡು ಪೆರೋ ಎದ್ದ. ಪರಿವಾರವೂ ಎದ್ದಿತು. ಹೊರಡುತ್ತ ಮಹಾರಾಣಿ ಅಂದಳು : "ಆ ಮೆನೆಪ್‌ಟಾ ಪ್ರಚಂಡ ಮಾತುಗಾರನಂತೆ. ಈ ನೆಹನ ಹೇಳ್ತಾಳೆ. ತೀರ್ಪಿಗೆ ಮುಂಚೆ ಅವನಿಗೆ ಅವಕಾಶ ಕೊಡಬೇಕೂಂತ ಅಮಾತ್ಯ ರಿಗೆ ತಿಳಿಸು."

"ಅಪ್ಪಣೆ" ಎಂದು ಹೇಳಿ ಸೆನೆಬ್ ನೆಲದ ವರೆಗೂ ಬಗ್ಗಿ ನಮಿಸಿದ.)

ಪೆರೋ ನಿರ್ಗಮಿಸಿದೊಡನೆ ಹೇಪಾಟ್ ಎದ್ದ, ತನ್ನ ಪರಿವಾರದೊಡನೆ ಮಹಾಮಂದಿರಕ್ಕೆ ತೆರಳಲೆಂದು ಹೊರಬಿದ್ದ. ಮಹಾರಾಣಿಯಿಂದ ತಂದ ಸಂದೇಶವನ್ನು ಕೇಳಿ. "ಅದಕ್ಕೇನು ? ಅಗತ್ಯವಾಗಿ ಅವಕಾಶ ಕೊಡೋಣ," ಎಂದು ನುಡಿದು, "ಬಿಸಿಲು ಬಾಡಿದ ಮೇಲೆ ನ್ಯಾಯಸ್ಥಾನ ಮತ್ತೆ ಸೇರ್ತದೆ," ಎಂದು ಘೋಷಿಸಿ, ತನ್ನ ನಿವಾಸಕ್ಕೆ ಹೊರಟ.

ಮೆನೆಪ್‌ಟಾ ನೋಡುತ್ತಲಿದ್ದಂತೆ ನ್ಯಾಯಸ್ಥಾನದಲ್ಲಿದ್ದ ಆಸಕ್ತ ಪ್ರತಿಷ್ಠಿ ತರೂ ಬರಿಯ ಪ್ರೇಕ್ಷಕರೂ ಚೆದರಿದರು. ('ಪೆನ್ನ ಇಲ್ಲ, ಯಾರ ಕಣ್ಣಿಗೂ ಬೀಳದಂತೆ ಹೊರಟಿರಬೇಕು. ಅವನು ಹೋಗಿ ಬಟಾನನ್ನು ಕಾಣ್ತಾನೆ. ಎಲ್ಲ ಬಂಧುಗಳಿಗೂ ಈವರೆಗೆ ನಡೆದ ವಿಚಾರಣೆಯ ಕಥೆ ಹೇಳ್ತಾನೆ. ಅವರು

ಬಿದ್ದು ಬಿದ್ದು ನಗ್ತಾರೆ. ಅಥವಾ ವಿಸ್ಮಿತರಾಗ್ತಾರೆ. ಅಥವಾ....')

ಅವನ ತೋಳುಗಳಿಗೆ ಬಿಗಿದಿದ್ದ ಹಗ್ಗಗಳನ್ನು ಎಡ ಬಲಗಳಲ್ಲಿ ಯೋಧರು ಹಿಡಿದೇ ಇದ್ದರು. ದಳಪತಿ "ಜತನ! ತಪ್ಪಿಸ್ಕೊಂಡಾನು!" ಎಂದು ಕೂಗುತ್ತ ಮತ್ತಷ್ಟು ಯೋಧರೊಡನೆ ಕಟಾಂಜನದ ಬಳಿಗೆ ಬಂದು ಆ ಯೋಧರು ಕಟಾಂಜನವನ್ನು ಸುತ್ತುವರಿದು ನಿಂತರು. "ಸೈನ್ಯ ಗಡಿಯಿಂದ ಬಂದವರು ನಾಳೆ ದಂಡಯಾತ್ರೆಗೆ ಹೊರಡ್ತಾರಂತೆ. ಅದಕ್ಕೆ ಇವತ್ತು ವಿಶ್ರಾಂತಿಯಂತೆ— ನಾನೇನೋ ಹೇಳಿಬಿಟ್ಟೆ : ಸಾಯಂಕಾಲವೂ ಹೀಗೆಯೇ ಗದ್ದಲ ಇದ್ದರೆ ದೊಡ್ಡ ದಂಡು ಬರಲೇಬೇಕು" ಅಂತ ಎಂದು ದಳಪತಿ ಗೊಣಗಿದ. ಹೊರಗಿದ್ದವರು ಮೆನೆಪ್‌ಟಾನನ್ನು ನೋಡಿ ಹೋಗಲೆಂದು ಒಳಗೆ ಬರತೊಡಗಿದ್ದರು. "ಇದೇನು ಕುಣಿತದ ಬಯಲು ಕೆಟ್ಕೊಂಯ್ತಾ ? ನಡೀರಿ !" ಎಂದು ದಳಪತಿ ಗದರಿದ, ಸಭಾಭವನದ ಎಲ್ಲ ಬಾಗಿಲುಗಳನ್ನೂ ಮುಚ್ಚಿಸಿದ.

ಯೋಧರು ಒಬ್ಬೊಬ್ಬರಾಗಿ ಊಟಕ್ಕೆ ಹೊರಟರು. ಅವರ ಸ್ಥಾನದಲ್ಲಿ ಹೊಸಬರು ಬಂದು ನಿಂತರು.

ಮೆನೆಪ್‌ಟಾಗೆ ಅನಿಸಿತು : 'ಈ ವಿರಾಮ ಇಲ್ಲದೆ ಒಮ್ಮೆಗೇ ಮುಗಿದಿದ್ದರೆ ಚೆನ್ನಾಗಿರ್ತಿತ್ತು........ಸಹನೆಯ ಪರೀಕ್ಷೆ.....'

ಅವನು ಗೋಡೆಗೊರಗಿದ.

ಒಬ್ಬ ಭಟ ಮೆಲುದನಿಯಲ್ಲಿ "ಕೂತ್ಕೊಳ್ಳಿ ಬೇಕಾದರೆ" ಎಂದ. ಮೆನೆಪ್‌ಟಾ ನೆಲದ ಮೇಲೆ ಕುಳಿತುಕೊಂಡ. ವಿವಿಧ ಭಂಗಿಗಳಲ್ಲಿ ಭಟರೂ ಅವನ ಬಳಿ ಕುಳಿತರು.

ನಾಯಕ ಅಂದುಕೊಂಡ : 'ಇವರೆಲ್ಲ ಬಡವರು. ನನ್ನ ಮೇಲೆ ಇವರಿಗೆ ದ್ವೇಷವಿಲ್ಲ. ಹೊಟ್ಟೆಪಾಡಿಗಾಗಿ ಈ ಉದ್ಯೋಗ ಹಿಡಿದಿದ್ದಾರೆ.'

ಭಟರು ಹಿಂದಿನ ದಿನದ ಉತ್ಸವವನ್ನು ಕುರಿತು (ಆಟದ ಬಯಲಿನಲ್ಲಿ ನಡೆದ ವಿವಿಧ ವಿನೋದಾವಳಿ, ದೀಪಾಲಂಕಾರ, ಪೆರೋ ಪರಿವಾರದ ನೌಕಾ ವಿಹಾರ) ಮಾತು ಆರಂಭಿಸಿದರು. ಆ ಮಾತುಗಳಿಗೆ ಮೆನೆಪ್‌ಟಾ ಕಿವಿಗೊಟ್ಟ. 'ನಾನು ನೋಡದೇ ಇದ್ದ ಸೆಡ್ ಉತ್ಸವ.' ಈ ಹೊತ್ತಿನಲ್ಲಿ ಅವರಿಗೆಲ್ಲ ಅದು ನ್ಯಾಯಸ್ಥಾನವಲ್ಲ, ಹರಟೆಯ ಸ್ಥಳ. ಗೋಡೆಯ ತುಂಬ ಒಸ್ಸೈರಿಸನ ನ್ಯಾಯಸ್ಥಾನದ ಚಿತ್ರಗಳು. ಸಾಲಾಗಿ ನಿಂತ ವಿದೇಶೀಯ ಕೈದಿಗಳು. ('ಇವತ್ತಿನ

ನ್ಯಾಯಮೂರ್ತಿ ಒಸ್ಸೈರಿಸನಲ್ಲ, ಆಮೆರಬ್. ನಾನು ವಿದೇಶೀಯನಲ್ಲ—ಇದೇ ಮಣ್ಣಿನ ಸಂತಾನ') ಪೆರೋ ಒಬ್ಬನ ಶಿರಚ್ಛೇದನ ಮಾಡುತ್ತಿದ್ದಾನೆ. ನಡು ಹಗಲಿನಲ್ಲಿ ಈ ಬಣ್ಣಗಳು ಜೀವ ತಳೆದಿವೆ. ಕರಗಿ ಹರಿಯುವಂತೆ ಕಾಣುತ್ತಿದೆ ಯಲ್ಲ ಆ ಕೆಂಪು ? ಇಷ್ಟಿದ್ದರೂ ಈ ನ್ಯಾಯಸ್ಥಾನವೀಗ ಬರಿಯ ಪೀಠಗಳ, ನೆಲಹಾಸುಗಳ, ಪರದೆಯ ಸಭಾಭವನ.

ಊಟ ಮುಗಿಸಿ ಬಂದ ಒಬ್ಬ ಕಾವಲುಭಟನೆಂದ :

" ದಳಪತಿಗೆ ಭಯ. ಪ್ರಾಕಾರ ದ್ವಾರಗಳನ್ನೆಲ್ಲ ಈಗಲೇ ಮುಚ್ಚಿಸಿಬಿಟ್ರು. ಮಹಾದ್ವಾರಕ್ಕೆ ವಿಶೇಷ ಕಾವಲು ಹಾಕಿದ್ದಾರೆ !"

ಇನ್ನೊಬ್ಬ ಪಿಸುದನಿಯಲ್ಲಿ ಅಂದ :

" ಇವರು ತಪ್ಪಿಸ್ಕೊಂಡು ಹೋಗ್ಬಾದು ಅಂತಲಾ ?"

" ಹೂಂ."

ಒಂದು ಮಗ್ಗುಲು ಬಾಗಿಲು ತುಸು ತೆರೆದುಕೊಂಡಿತು. ಅರಮನೆಯ ಪರಿಚಾರಿಕೆ ಶೀಬಾ ಒಳಬಂದಳು. ('ಪರಿಚಿತ ಮುಖ.')

" ಏನಕ್ಕ ? " ಎಂದು ಕೇಳಿದ ಅವಳ ಪರಿಚಯವಿದ್ದ ಒಬ್ಬ ಯೋಧ.

ಅವಳು ಮಂದಹಾಸ ಬೀರಿದಳು.

" ನಿಮ್ಮದ್ದೆಲ್ಲ ಊಟ ಆಯ್ತಾ ?"

" ಓಹೋ. "

ಹತ್ತಿರ ಬಂದು ಮೆಲ್ಲನೆ ಕೇಳಿದಳು :

" ಇವರಿಗೇನಾದರೂ ಕೊಟ್ಟಿರಾ ?"

ಆ ಯೋಚನೆ ಒಬ್ಬಿಬ್ಬರಿಗೆ ಬಂದಿತ್ತು. ಆದರೆ ? ಆದರೆ ? ಒಬ್ಬ ನುಡಿದ :

" ಹ್ಯಾಗಕ್ಕ ಕೊಡೋದು ? "

" ಹೀಗೆ," ಎಂದಳು ಶೀಬಾ, ತನ್ನ ನಡುವಸ್ತ್ರ ಮಡಚಿದ್ದಲ್ಲಿಂದ ಬಾಡಿದ ಹಸುರು ಪೆಪ್ಪೈರಸ್ ಎಲೆಗಳಲ್ಲಿ ಸುತ್ತಿದ್ದೊಂದು ಸುರುಳಿಯನ್ನು ಹೊರತೆಗೆದು. " ಒಂದೇ ರೊಟ್ಟಿ, ತಿಂದ್ಬಿಡಿ ಅಣ್ಣ. ನನ್ನ ಗುರುತು ಸಿಗಲಿಲ್ಲವಾ, ನಾನು ಮಹಾತಾಯಿ, ಅಣ್ಣ," ಎಂದು ಹೇಳಿ, " ಆ ಮೇಲೆ ಆಎಲೆಗಳನ್ನು ಹೊರಕ್ಕೆ ಎಸೆದ್ಬಿಡು," ಎಂದೊಬ್ಬ ಯೋಧನಿಗೆ ನಿರ್ದೇಶವಿತ್ತು, ಅವಳು ಹೊರಟು

ಹೋದಳು.

'ಮಹಾತಾಯಿ!' ಮೆನೆಪ್‌ಟಾಗೆ ಭಾವೋದ್ವೇಗ. ಈ ಜೀವಗಳಿಗೆ ತಾನು ಆಜೀವ ಋಣಿ. ಈ ಹಸುರೆಲೆ—ಓ! (ಈಗ ವಿಪರೀತ ಭಾವೋದ್ವೇಗ.) ಆಕೆ ನಿಜವಾಗಿಯೂ ನನ್ನ ಸಂಬಂಧಿಯೇ. ಈ ರೊಟ್ಟಿ ಬಟಾ ತಂದುದು. ನಮ್ಮೂರಿನ ಎಲೆಯಲ್ಲವೆ? 'ನಾನು ಅಸಹಾಯನಾದರೂ ಈ ಬಾಂಧವರು ಚಟುವಟಿಕೆಯಿಂದಿದ್ದಾರೆ."

ಒಬ್ಬ ಯೋಧ ಗಟ್ಟಿಯಾಗಿ ಅಂದ :

"ಶೀಬಾ ಬಹಳ ಧೈರ್ಯವಂತೆ."

ಇನ್ನೊಬ್ಬನೆಂದ :

"ಗಂಡ ಬಂದಿದ್ದಾನೆ. ಒಳ್ಳೆಯದವನು."

"ಹೂಂ."

ಮೆನೆಪ್‌ಟಾನ ಬಲತೋಳಿನ ಹಗ್ಗವನ್ನು ಸಡಿಲಬಿಟ್ಟು ಆ ಯೋಧ ಹೇಳಿದ :

"ಬೇಗ ತಿಂದ್ಬಿಡಿ. ಆ ದಳಪತಿ ಬಂದು ಸುಮ್ಸುಮ್ನೆ ಗಲಾಟೆ ಮಾಡಾರು."

ಗಂಟಲು ಒತ್ತರಿಸಿದ ಅನುಭವ. ತನಗೆ ಹಸಿವಿಲ್ಲ. ಆದರೂ, ಬಟಾ ಕಳುಹಿಸಿರುವನೆಂದು, ಮಹಾತಾಯಿ ತಂದುಕೊಟ್ಟಳೆಂದು ತಾನು ತಿನ್ನಬೇಕು. ಸ್ಪರ್ಶ. 'ಓ!' ರುಚಿ. 'ಓ! ಓ!' ಕಣ್ಣಂಚಿನಲ್ಲಿ ನೀರು. ನೆಫಿಸ್ ತಟ್ಟಿದ ರೊಟ್ಟಿ. ಎರಡು ತುಣುಕು ಮೀನಿನ ಉಪ್ಪೇರಿ. ಇದು ಪರಮ ಸುಖ. 'ಓ ನೆಫಿಸ್! ಓ ನೆಫಿಸ್!' ನನಗೆ ಹಸಿವಾಗಿದೆ. (ತಿನ್ನತೊಡಗಿದ ಮೆನೆಪ್‌ಟಾ ತಲೆಬಾಗಿಲಿನಿಂದ ಒಳಬಂದವರಿಗೆ ಕಾಣಿಸದಿರಲೆಂದು, ಕಾವಲು ಭಟರು ಎದ್ದುನಿಂತು, ಸಾಲುಗಟ್ಟಿ ಅವನಿಗೆ ಅಡ್ಡವಾದರು.)

(ನಗರದ ಉದ್ಯಾನದಲ್ಲೋ ನದೀತಟದಲ್ಲೋ ಬಟಾ ಮತ್ತು ಸಂಗಡಿಗರು ಅವಿತಿಟ್ಟುಕೊಂಡು ಉಣ್ಣುತ್ತಿರಬೇಕು. ಅವರ ಮಧ್ಯೆ ರಾಮೆರಿಪ್‌ಟಾ. 'ಅವನನ್ನು ಇನ್ನು ನಾನು ನೋಡೋದು ಯಾವಾಗ? ಸ್ವತಂತ್ರನಾಗಿ ನ್ಯಾಯ ಸ್ಥಾನದಿಂದ ಹೊರಹೋಗೋದಕ್ಕೆ ನನ್ನನ್ನು ಇವರು ಬಿಡುತ್ತಾರಾ? ನೆಫಿಸ್ ಲೆಕ್ಕ ಹಾಕಿ ಹೇಳಿದ್ದಳು. ಕುಯಿಲಿಗೆ ಸರಿಯಾಗಿ ಹೆರಿಗೆ. ನಾನು ಹತ್ತಿರ ಇಲ್ಲ ಎಂದು ಮನಸ್ಸು ಮುದುಡಿರಬೇಕು. ನಾನಿಲ್ಲದಿದ್ದರೂ ಏನು? ಇಷ್ಟೊಂದು

ಬಂಧುಗಳ ಸನಿಸಾನ್ನಿಧ್ಯ ಇಲ್ಲವೆ ?....)

ಒಬ್ಬ ಯೋಧ ಬಂದು ಪೆಪ್ಪೈರಸ್ ಎಲೆಗಳನ್ನು ಬಾಚಿ, ಅಂಗೈಯಲ್ಲಿ ಮುದುಡಿ ಹಿಡಿದು, ಎಸೆಯಲೆಂದು ಹೊರಹೋದ.

ಹಗ್ಗ ಹಿಡಿದುಕೊಂಡಿದ್ದ ಒಬ್ಬ ಪಿಸುದನಿಯಲ್ಲಿ ಕೇಳಿದ :

" ಜಲಬಾಧೆ ? "

('ಸಂಜೆಯ ವರೆಗೂ ಹೀಗೆಯೇ ಇರಬೇಕಿನ್ನು. ಹೋಗಿ ಬರೋದು ಮೇಲು.')

ಇನ್ನೊಬ್ಬನೆಂದ :

" ಬನ್ನಿ, ಅಮಾತ್ಯರಿಗೋಸ್ಕರ ಕಟ್ಟಿಸಿರೋದು ವೇದಿಕೆಯ ಆ ಬದಿಗಿದೆ."

ಮೂವರೂ ಎದ್ದರು. ಆ ಕೊಠಡಿಗೆ ಒಬ್ಬನನ್ನೇ ಬಿಟ್ಟು ಭಟರು ಬಾಗಿಲಲ್ಲಿ ನಿಂತರು. ಹರಿಯುವ ನೀರು. ಕೈಬಾಯಿ ಮುಖ ತೊಳೆದುಕೊಂಡ. ತಲೆಗೂದಲಿಗೂ ನೀರು ಹನಿಸಿ ಬೆರಳುಗಳಿಂದ ಹಿಂದಕ್ಕೆ ಬಾಚಿದ. ಮುಂಡವನ್ನು ತಣ್ಣೀರಿನಿಂದ ಒರೆಸಿದ. ಮಾಲಿನ್ಯ ಕಳೆದು, ಶುಚಿ ಎನಿಸಿದಾಗ, ಬೊಗಸೆ ನೀರು ಕುಡಿದಾಗ, ನೀಲನದಿಯಲ್ಲಿ ಈಸಿ ಮುಳುಗಿ ಎದ್ದು ಬಂದಷ್ಟು ಸಮಾಧಾನವಾಯಿತು.

ಮೆನೆಪ್‌ಟಾ ಜಲಬಾಧೆಗೆಂದು ಎದ್ದೊಡನೆ ಇಬ್ಬರು ಯೋಧರು ತಲೆವಾಗಿಲಿನತ್ತ ಧಾವಿಸಿದ್ದರು. ಅದನ್ನು ತುಸು ತೆರೆದು ಹೊರನೋಡುತ್ತ ನಿಂತಿದ್ದರು. ಅದು ಇದ್ದಕ್ಕಿದ್ದಂತೆ ದಳಪತಿ ಬಂದು ಬಿಡದಂತೆ ಮುನ್ನೆಚ್ಚರಿಕೆ. ಮೆನೆಪ್‌ಟಾ ಕಟಾಂಜನದತ್ತ ಮರಳಿದೊಡನೆ ಆ ಯೋಧರೂ ಹಿಂತಿರುಗಿದರು.

ಎಲ್ಲ ಸದ್ದುಗಳೂ ಸ್ವಲ್ಪ ಕಾಲ ಕುಗ್ಗುವಂತೆ ಮಾಡುವ ಪ್ರಖರತೆ ರಾನದು. ಆತ ಪಶ್ಚಿಮದತ್ತ ವಾಲಿದ ಮೇಲೆಯೇ ಬದುಕಿನ ಹತ್ತು ಸಪ್ಪಳ.

ರಾ ನಡು ನೆತ್ತಿಯ ಮೇಲೆಯೇ ನಿಂತನೇನೋ, ಇವತ್ತು ಹೊತ್ತು, ಕ್ರಮಿಸುತ್ತಿಲ್ಲವೇನೋ—ಎನಿಸಿತು ಮೆನೆಪ್‌ಟಾಗೆ. ಹೊರಗಿನಿಂದ ಆ ಶಬ್ದ ಕೇಳಿ ಮತ್ತೂ ಸ್ವಲ್ಪ ಹೊತ್ತಾದ ಮೇಲೆ, ದಳಪತಿ ದಪ್ಪ ಹೆಜ್ಜೆಗಳನ್ನಿಡುತ್ತ ಬಂದ.

ಅವನೆಂದ :

" ಕೈದೀನ ಯಾಕೆ ಕೂತ್ಕೊಳ್ಳೋದಕ್ಕೆ ಬಿಟ್ಟರಿ ? ಹಿಡಿದು ನಿಲ್ಲಿಸಿ. ಎಲ್ಲಿ ಇದ್ದೀರಿ ಎನ್ನುವ ಕಲ್ಪನೆ ಇಲ್ಲವಾ ನಿಮಗೆ ? ಬುದ್ಧಿ ಇಲ್ಲದ ಕತ್ತೆಗಳು.

ತಲೆ ಹೋದಾತು, ತಲೆ!"

ಹಾಗೆ ಹೇಳುತ್ತ ತನ್ನ ಎಡ ಅಂಗೈಯನ್ನು ಕೊರಳಿಗೆ ಅಡ್ಡವಾಗಿ ರಭಸದಿಂದ ತಂದು, 'ಕ್ಲಕ್' ಎಂಬ ಸಪ್ಪಳವನ್ನೂ ಆತ ಮಾಡಿದ.

ಏರುದನಿಯಲ್ಲಿ ಅವನು ಮುಂದುವರಿದ:

"ಜನರಿಗೂ ಬುದ್ಧಿ ಇಲ್ಲ. ಕುರಿಗಳ ಹಾಗೆ ನುಗ್ತಾರೆ. ಕಟ್ಟುನಿಟ್ಟಾಗಿ ನೂರು ಜನರನ್ನು ಮಾತ್ರ ಒಳಗ್ಬಿಡಿ. ನೂರೇ ಜನ. ಉಳಿದವರೆಲ್ಲ ನ್ಯಾಯಮೂರ್ತಿ ತೀರ್ಪು ಕೊಟ್ಬಾದ ಮೇಲೆ ಬಂದು ನೋಡಿ ಹೋಗ್ಲಿ."

ಯೋಧನೊಬ್ಬ ಒಳಕ್ಕೆ ಧಾವಿಸಿ, "ಅಮಾತ್ಯರ ಪಲ್ಲಕಿ," ಎಂದು ತಿಳಿಸಿದ. ದಳಪತಿ ಅತ್ತ ಓಡಿದ.

ಅಮಾತ್ಯ ತನ್ನ ನಿವಾಸದಿಂದ ಹೊರಟ ಸುದ್ದಿಯಾಗಲೇ ದೇವಮಂದಿರಕ್ಕೂ ತಲಪಿತ್ತು. ನ್ಯಾಯಸ್ಥಾನ ಮತ್ತೆ ಸೇರುತ್ತದೆ ಎಂಬುದನ್ನು ಅರಮನೆಯ ವಿಸ್ತರಣಕ್ಕೆ ಕಂಚಿನ ಜಾಗಟೆ ಸಾರಿತು. ಪೆರೋಗೆ ಆಯುರಾರೋಗ್ಯ ಕೋರಿ ನ್ಯಾಯಮೂರ್ತಿ ಆಸೀನನಾದೊಡನೆಯೇ, ಪ್ರತಿಷ್ಠಿತರು ಅವಸರ ಅವಸರವಾಗಿ, ಒಬ್ಬರ ಹಿಂದೊಬ್ಬರು, ಒಳಕ್ಕೆ ಬಂದರು.

ಆಮೆರಬ್ ಅಪ್ಪಿತಪ್ಪಿಯೂ ಕಟಾಂಜನದತ್ತ ದೃಷ್ಟಿ ಹರಿಸಲಿಲ್ಲ. ಮೆನೆಪ್‌ಟಾ ಮಾತ್ರ ಎದೆ ಅಗಲಿಸಿ ನಿಂತು ಅಮಾತ್ಯನನ್ನೇ ದಿಟ್ಟಿಸಿದ. ಅವನಿಗೆ 'ನಿಮ್ಮ ಕಷ್ಟ ನೋಡಲಾರೆ ಅಮಾತ್ಯವರ್ಯ' ಎಂದು ಗಟ್ಟಿಯಾಗಿ ಕೂಗಿ ಹೇಳಬೇಕೆನಿಸಿತು. ಮರು ಕ್ಷಣವೆ, ಅಂಥ ವಿಚಾರ ಮೂಡಿತಲ್ಲ—ಎಂದು ನಗು ಬಂತು.

ಎಲ್ಲ ಪೂರ್ವಾಹ್ನದಂತೆಯೇ ಅಲ್ಲಿ ಅವರು. ಇಲ್ಲಿ ಇವರು. ಪ್ರತಿಯೊಂದೂ....ಊಹೂಂ. ಹಾಗೆ ಖಚಿತವಾಗಿ ಹೇಳುವಂತಿಲ್ಲ. ಒಂದು ಸಣ್ಣ ವ್ಯತ್ಯಾಸ. ಸಣ್ಣದೊ? ದೊಡ್ಡದೊ? ಏನು ಅಂದರೆ—

ಮೊದಲು ಮಹಾ ಅರ್ಚಕ ಮತ್ತು ಪರಿವಾರದ ಆಗಮನ. ಬಳಿಕ ಪೆರೋ ಮತ್ತು ಬಳಗ.

ಮೊದಲಾದರೇನು? ಅನಂತರವಾದರೇನು? ಈಗ ಇವರೆಲ್ಲ ಒಂದೇ. ಏಕ ಧ್ಯೇಯದಿಂದ ಪ್ರೇರಿತರು; ಸಮಾನಧರ್ಮದಿಂದ ಬಂಧಿತರು, ('ಅವರು ಆಟಗಾರರು, ಕುಳಿತಿದ್ದಾರೆ. ಇನ್ನು ಕಾಯಿಯ ಸರದಿ')

ನ್ಯಾಯಮೂರ್ತಿಯ ಧ್ವನಿ :

" ಘೋರ ಆರೋಪಗಳಿಗೆ ಗುರಿಯಾಗಿರುವ ಅಪರಾಧಿ ಮೆನೆಪ್‌ಟಾ ! ನೀನು ಹೇಳುವಂಥದು ಏನಾದರೂ ಇದೆಯೊ ? ಇದ್ದರೆ, ನ್ಯಾಯವನ್ನು ಆಧರಿಸಿರುವ ಈ ಆಸ್ಥಾನ ಅವಕಾಶ ನೀಡ್ತದೆ."

ಮುಗುಳುನಗೆ ಸೂಸಿ ಮೆನೆಪ್‌ಟಾ ಅಂದ :

" ಇದೆ ಸ್ವಾಮಿ, ಹೇಳಬೇಕಾದ್ದು ಬಹಳ ಇದೆ."

" ರಾ ಅಸ್ತಮಿಸುವ ಹೊತ್ತಿಗೆ ನ್ಯಾಯಸ್ಥಾನ ತನ್ನ ಕೆಲಸ ಮುಗಿಸ್ಬೇಕು ಅನ್ನೋದು ಗಮನದಲ್ಲಿರಲಿ, ಮುಖ್ಯಾಂಶಗಳನ್ನಷ್ಟೇ ಹೇಳು."

ಮೆನೆಪ್‌ಟಾ ಅಮಾತ್ಯನ ಹಾಗೂ ಮಹಾ ಅರ್ಚಕನ ಶೀತಲ ದೃಷ್ಟಿಗಳನ್ನು ಇದಿರಿಸಿದ. ಪರದೆಯೊಳಗಿದ್ದವರನ್ನೂ ನೋಡಿದ. ಉಚ್ಚ ಕಂಠದಲ್ಲಿ, ಸುಸ್ಪಷ್ಟವಾಗಿ ಅವನೆಂದ :

" ಕೈದಿಗೆ ಮಾತನಾಡುವ ಸ್ವಾತಂತ್ರ್ಯ ನೀಡಲಿಲ್ಲ ಅನ್ನೋ ಅಪವಾದಕ್ಕೆ ಗುರಿಯಾಗ್ತೀರಲ್ಲ ಸ್ವಾಮಿ. ಇದು ನ್ಯಾಯವನ್ನು ಆಧರಿಸಿರುವ ಅಸ್ಥಾನ !"

ಟಿಹುಟಿಗೆ ತೃಪ್ತಿ. ಹೀಗೆ ಮಾತನಾಡಿದವನನ್ನು ತಾನು ದಂಡಿಸಿದ್ದು ತಪ್ಪು ಎಂದು ಯಾರು ಹೇಳುತ್ತಾರೆ ಈಗ ?

(ಪೆರೋ ಚಾಮರ ಬೀಸುತ್ತಿದ್ದ ದಾಸಿಯರಿಗೆ 'ಸಾಕು' ಎಂದು ಸನ್ನೆ ಮಾಡಿದ. ಅವನ ಕಿವಿ ಚುರುಕಾಯಿತು.)

ಸಿಟ್ಟನ್ನು ಅದುಮಿ ಹಿಡಿದು ಆಮೆರಬ್ ಅಂದ :

'ಇದು ನೀರಾನೆ ಪ್ರಾಂತದ ರೈತರ ಸಭೆಯಲ್ಲ. ಹುಷಾರಾಗಿ ಮಾತನಾಡು."

" ನಯ ನಾಜೂಕು ನನಗೆ ತಿಳೀದು. ಉತ್ತನೆ ಬಿತ್ತನೆ ಗೊತ್ತು. ಮಹಾಪೂರದ ಸಮಯದಲ್ಲಿ ಕಲ್ಲು ಸೀಳಿದ್ದೇನೆ, ಕಟ್ಟಿದ್ದೇನೆ; ಮಂದಿರದ ಗೋಡೆ ಕಟ್ಟಿದ್ದೇನೆ. ಎರಡರ್ಥದ ನವುರು ಮಾತು ಕಲೀಲಿಲ್ಲ. ಕಂಡದ್ದನ್ನು ಕಂಡ ಹಾಗೆ ಹೇಳೋದೇ ಅಭ್ಯಾಸ. ಅಮಾತ್ಯವರ್ಯರೆ, ನಿಮ್ಮನ್ನು ಒಂದು ಮಾತು ಕೇಳಲೆ ?"

" ಏನದು ? "

"ಕೋಪಿಸ್ಕೋಬೇಡಿ. ಶಿಷ್ಟಾಚಾರಕ್ಕೆ ಸಂಬಂಧಿಸಿದ್ದು. ಎಪ್ಪತ್ತು ದಿನಗಳಿಗೆ ಹಿಂದೆ ನಿಮ್ಮನ್ನು ನಾನು ಭೇಟಿಯಾದಾಗ, ಅತಿಥಿಗೃಹದಲ್ಲಿ ಎಲ್ಲ ಅನುಕೂಲವಾಗಿದೆಯಾ ?—ಅಂತ ಕೇಳಿದ್ದಿರಿ. ಕಾರಾಗೃಹದಲ್ಲಿ ಎಲ್ಲ ಅನುಕೂಲವಾಗಿದೆಯಾ ?—ಅಂತ ಇವತ್ತು ಕೇಳಲಿಲ್ಲವಲ್ಲ...."

"ಮುಂದುವರಿಸು !"

"ಸೆಡ್ ಉತ್ಸವಕ್ಕೆ ಹತ್ತು ದಿನ ಮುಂಚಿತವಾಗಿಯೇ ಬರಬೇಕೂಂತ ಎಲ್ಲ ಪ್ರಾಂತಪಾಲರಿಗೂ ಕರೆ ಕಳಿಸಿದೆ ; ನೀರಾನೆ ಪ್ರಾಂತದ ನಾಯಕ ಕೂಡ ಈ ಉತ್ಸವದಲ್ಲಿ ಭಾಗವಹಿಸಬೇಕು—ಇದು ಮಹಾಪ್ರಭು ನನಗೆ ನೀಡಿದ ಆದೇಶ. ಅಮಾತ್ಯರ ಮೂಲಕ. ಓ ಅಲ್ಲಿ ನಿಂತಿರೋ ರಾಜದೂತ ತಂದ್ಕೊಟ್ಟ. ಹೊರಟು ಬಂದೆ. ಹತ್ತು ದಿವಸ ಅಲ್ಲ, ಎಪ್ಪತ್ತು ದಿವಸ ಕಾದೆ. ಉತ್ಸವ ಮುಗೀತು. ಇವತ್ತು ನಾನು ಊರಿಗೆ ಹೊರಡಬೇಕಾದ, ನೀರಾನೆ ಪ್ರಾಂತದ ನಾಯಕನಿಗೆ ನೀವು ವಿದಾಯ ನುಡಿಯಬೇಕಾದ, ದಿವಸ. ಯಾವ ಕಸಿ ವಿಸಿಯೂ ಇಲ್ಲದೆ ಬರಲಿ ಅಂತ ಅಮಾತ್ಯರಾಗಿ ತಿಳಿಸಿದ್ದಿರಿ. ಯಾವ ಕಸಿ ವಿಸಿಯೂ ಇಲ್ಲದೆ ಈ ಆಸ್ಥಾನದಲ್ಲಿ ನಾನೀಗ ನಿಂತಿದ್ದೇನೆ.

"ನಮ್ಮ ಮಾಟ್ ನಮ್ಮನ್ನು ಕಾಯ್ತದೆ ಅನ್ನೋ ನಂಬಿಕೆಯಿಂದ ನಾವು ಋಜುಮಾರ್ಗ ಹಿಡಿದೆವು. ನಮ್ಮ ಪ್ರಾಚೀನ ಕಟ್ಟಳೆ ಏನು ಹೇಳ್ತದೆ? 'ಬಡವರು ಮತ್ತು ದೊಡ್ಡ ಮನುಷ್ಯರು ಇಬ್ಬರಿಗೂ ಹಕ್ಕು ಇರಲೆಂದೇ ಮಹಾ ಪ್ರವಾಹವನ್ನು ನಾನು ಸೃಷ್ಟಿಸಿದೆ' ಅಂತ ದೇವರು ಸಾರಿದ ಎಂದಲ್ಲವಾ ? ಲಿಪಿ ಸುರುಳಿ ಏನು ಬೋಧಿಸ್ತದೆ ? 'ಒಂದು ಮೊಳ ಬುವಿಗಾಗಿ ಆಸೆಬುರುಕನಾಗದಿರು; ವಿಧವೆಯ ಹೊಲಕೆ ಅತಿಕ್ರಮಿಸಿ ನುಗ್ಗದಿರು. ಅತಿಕ್ರಮಣದಿಂದ ಗಳಿಸುವ ಐದುನೂರು ಬಳ್ಳಕ್ಕಿಂತ ದೇವರು ನಿನಗೀವ ಒಂದು ಬಳ್ಳವೇ ಮೇಲು,' ಹೀಗಲ್ಲವಾ ? [ಮಹಾ ಅರ್ಚಕ ಇನೇನಿಯತ್ತ ನೋಡಿದ. ಆತ ಭಯ ಭಕ್ತಿಯಿಂದ ಹತ್ತಿರಕ್ಕೆ ಬಾಗಿದಾಗ, ಏನನ್ನೋ ಉಸುರಿದ.] ಎಲ್ಲ ಕಡೆ ಬೋಧನೆಗೆ ಮಾತ್ರ ಮೀಸಲಾಗಿರುವ ಈ ತತ್ವಗಳನ್ನು ನೀರಾನೆ ಪ್ರಾಂತದಲ್ಲಿ ಅನುಷ್ಠಾನಕ್ಕೆ ತಂದಿದ್ದೇವೆ. ಅದು ತಪ್ಪೆ ಸ್ವಾಮಿ ?"

ಇನೇನಿ ಗಟ್ಟಿಯಾಗಿ ಅಂದ :

"ಮಹಾ ಅರ್ಚಕರು ಅಪ್ಪಣೆ ಕೊಡಿಸಿದ್ದಾರೆ : ತೀರಾ ಕೆಳಮಟ್ಟದ ಈ

ಮನುಷ್ಯನಿಗೆ ಪವಿತ್ರ ಕಟ್ಟಳೆಗಳನ್ನು ಉಚ್ಚರಿಸುವ ಹಕ್ಕಿಲ್ಲ!"

"ಮಹಾಪರಾಧವಾಯಿತಲ್ಲವಾ ನನ್ನಿಂದ? ತಿಳೀದೆ, ಅದಕ್ಕಿಂತಲೂ ದೊಡ್ಡ ಒಂದು ತಪ್ಪು ಮಾಡಿದ್ದೇನೆ. ನಮ್ಮ ನೇಕಾರ ಅನ್ಪು ಟೆಹುಟೆಯ ಯೋಧರ ಬಾಣಕ್ಕೆ ಬಲಿಯಾದ. ಅವನನ್ನು ಮಣ್ಣು ಮಾಡೋದಕ್ಕೆ ಮುಂಚೆ ನಮ್ಮೂರಿನ ಅರ್ಚಕ ಅಪೆಟ್ ಕೈಲಿ 'ಬೆಳಕಿಗೆ ಆಗಮನ' ಗ್ರಂಥ ಓದಿಸಿದ್ದೇನೆ."

"ಬಡ ನೇಕಾರನ ಶವಸಂಸ್ಕಾರಕ್ಕೆ 'ಬೆಳಕಿಗೆ ಆಗಮನ' ಗ್ರಂಥ ವಾಚನ! ಇದು ದೈವದ್ರೋಹದ ಪರಮಾವಧಿ!"

"ದೊಡ್ಡವರೆಲ್ಲ ಸತ್ತ ಮೇಲೆ ಕತ್ತಲೆಯಿಂದ ಬೆಳಕಿಗೆ ಬರ್ತಾರೆ. ಹುತಾತ್ಮನಾದ ಬಡ ಅನ್ಪುವಿಗೂ ಆ ಭಾಗ್ಯ ಇರೋದು ನ್ಯಾಯಸಮ್ಮತ ಅಲ್ಲವಾ?"

"ಇದು ತಲೆಹರಟೆ!"

"ಈಗಲೇ ಕೇಳೋದು ಮೇಲು. ಅಯ್ಯ, ನಮ್ಮ ಅರ್ಚಕ ಅಪೆಟ್ ಸಲ್ಲಿಸಿದ ದೂರು ಅಂತ ಅದೇನೋ ಹೇಳಿದಿರಲ್ಲ? ಅದನ್ನು ಯಾರು ತಂದು ಕೊಟ್ರು?"

"ಅದಕ್ಕೆಲ್ಲ ನಮ್ಮದೇ ವ್ಯವಸ್ಥೆ ಇದೆ."

"ಬಲ್ಲೆ. ಐಗುಪ್ತದಲ್ಲಿ ಗೂಢಚರ್ಯೆ ಅರ್ಚಕ ವೃತ್ತಿಯ ವೈಶಿಷ್ಟ್ಯ."

"ಅಪರಾಧಿಯ ಅಂಜೋಣವೇನು? ಈ ದೂರು ಸೃಷ್ಟನೆ ಅಂತಲೊ?"

"ಹೀಗೆಯೇ ಹೇಳು ಅಂತ ಮಹಾ ಅರ್ಚಕರು ಆಜ್ಞಾಪಿಸಿದರೆ ಅದನ್ನು ಪಾಲಿಸುವ ಮನುಷ್ಯನೇ ಅಪೆಟ್. ಅದರಲ್ಲಿ ಸಂದೇಹವಿಲ್ಲ. ಆದರೆ ತಾವಾಗಿ ಅವರು ಆ ದೂರು ಕಳಿಸಿದ್ರು ಅನ್ನೋದನ್ನು ನಂಬಲಾರೆ. ಹೇಳಿ, ಈ ದೂರು ಯಾವಾಗ ಬಂತು?"

ಇನೇನಿಯ ಧ್ವನಿ ಮತ್ತಷ್ಟು ಏರಿತು :

"ನೀರಾನೆ ಪ್ರಾಂತಕ್ಕೆ ಹೋಗಿದ್ದ ರಾಜದೂತ ತಂದುಕೊಟ್ಟ."

ಮೆನೆಪ್‌ಟಾ ಸರಕ್ಕನೆ ಪ್ರತಿಷ್ಠಿತರ ಸಾಲಿನ ಹಿಂದೆ ನಿಂತಿದ್ದ ರಾಜದೂತನತ್ತ ನೋಡಿ ಕೇಳಿದ :

"ರಾಜದೂತರೆ, ತಂದುಕೊಟ್ಟದ್ದು ನಿಜವಾ?"

ರಾಜದೂತ ತಬ್ಬಿಬ್ಬಾದರೂ ತಕ್ಷಣವೇ ಸುಧಾರಿಸಿಕೊಂಡು, ಕಣ್ಣು

ಗಳನ್ನು ಮುಚ್ಚಿ ಗಟ್ಟಿಯಾಗಿ ಅಂದ :

"ಹೌದು."

"ಏನಪ್ಪ ಎಲ್ಲರೂ ಸುಳ್ಳು ಹೇಳ್ತಾರೆ ಅಂತ ನೀವು ಕೂಡಾ—? ಅವತ್ತು ನಮ್ಮ ದಳಪತಿ ಖ್ನೆಮ್‌ಹೊಟೆಪ್‌ನ ಮನೇಲಿ ಊಟ ಮಾಡಿದಿರಿ, ವಿಶ್ರಾಂತಿ ಪಡೆದಿರಿ, ಸಾಯಂಕಾಲ ದೋಣಿ ಹತ್ತಿ ಮರುಪ್ರಯಾಣ ಬೆಳೆಸಿದಿರಿ. ಅರ್ಚಕ ನಿಮ್ಮನ್ನು ಕಾಣಲಿಲ್ಲ. ಯಾವ ದೂರನ್ನೂ ಒಪ್ಪಿಸಲಿಲ್ಲ. ನಿಜವಾ ?"

ರಾಜದೂತನ ಮುಖ ಕಪ್ಪಿಟ್ಟಿತು. ನ್ಯಾಯಮೂರ್ತಿ ಗದರಿದ :

"ಹೀಗೆಲ್ಲ ಪ್ರಶ್ನೆ ಕೇಳೋದಕ್ಕೆ ಅನುಮತಿ ಕೊಡೋದಿಲ್ಲ! ಮುಂದುವರಿಸು!"

"ನ್ಯಾಯಮೂರ್ತಿಗಳೆ, ನೀವು ಅಮಾತ್ಯ ಪಾತ್ರದಲ್ಲಿದ್ದಾಗ, ನೀರಾನೆ ಪ್ರಾಂತದಿಂದ ಬಂದ ನನ್ನನ್ನು ಭೇಟಿಗೆ ಕರೆದಿದ್ದಿರಿ. ಮಹಾ ಅರ್ಚ್ಚಕರು ರಾಜ್ಯದ ಆಡಳಿತದಲ್ಲಿ ಹಸ್ತಕ್ಷೇಪ ಮಾಡ್ತಿದಾರೆ ಅಂತ ಸೂಚ್ಯವಾಗಿ ನನಗೆ ತಿಳಿಸಿದಿರಿ. ಆಗ ನಾನು 'ನಮ್ಮೂರಿನ ಅರ್ಚಕ ಅಪೆಟ್ ತನ್ನ ಕೆಲಸ ಎಷ್ಟೋ ಅಷ್ಟು ಮಾಡ್ಕೊಂಡು ಹೋಗ್ತಾರೆ. ಮಂದಿರದ ಖರ್ಚು ವೆಚ್ಚ ನಾವು ನೋಡ್ಕೊಳ್ತೀವೆ' ಅಂದೆ. ನೀವು, 'ಅಷ್ಟೇ ಸುಲಭವಾಗಿ ದೇಶದ ವ್ಯಾಪ್ತಿಯಲ್ಲೂ ಆ ಸಮಸ್ಯೇನ ಬಗೆಹರಿಸೋದು ಸಾಧ್ಯವಿದ್ದರೆ!' ಅಂತ ಉದ್ಗಾರ ತೆಗೆದಿರಿ. ಹೌದೆ ?"

ಮಹಾ ಅರ್ಚಕ ಸುಟ್ಟುಬಿಡುವವನಂತೆ ಅಮಾತ್ಯನನ್ನು ದಿಟ್ಟಿಸಿದ. ಆಮೆರಬ್ ಹೇಪಾಟ್‌ನ ನೋಟವನ್ನು ಇದಿರಿಸಲು ಹೋಗಲಿಲ್ಲ. ಸಿಟ್ಟಾಗಿ ನುಡಿದ :

"ಏನು ನೀನು ಹೇಳ್ತಿರೋದು ? ಕಲ್ಪನೆಯ ನಾವೆಯಲ್ಲಿ ವಿಹಾರ ಮಾಡ್ತಿದ್ದೀಯಾ ?"

"ನಿಜವಾದ ದೋಣಿಯಲ್ಲಿ ಐದು ಹಗಲು ಐದು ಇರುಳು ಪ್ರವಾಸ ಮಾಡಿ ಇಲ್ಲಿಗೆ ಬಂದೆ. ಇದಿರ್ಗೊಳ್ಳೋದಕ್ಕೆ ದೋಣಿಕಟ್ಟೆಗೆ, ನೀರಾನೆ ಪ್ರಾಂತದಿಂದ ಓಡಿ ಬಂದಿದ್ದ ಪ್ರಾಂತಪಾಲರನ್ನು ಅಮಾತ್ಯರು ಕಳಿಸಿದ್ರು. ರಾಜದ್ರೋಹಿಗೆ, ದೈವದ್ರೋಹಿಗೆ ಎಂಥ ಸ್ವಾಗತ! ಅವರು ನನ್ನ ಎರಡೂ

ಕೈ ಹಿಡಿದು ತೊಟ್ಟಿಲಾಡಿಸಿದ್ರು. 'ನಾನು ನಿಮ್ಮ ಬಂಧು. ನನ್ನ ಹೆಸರು ಹಿಡಿದು ಗೇಬು ಅಂತ ಕರೀರಿ' ಅಂದ್ರು. 'ನಮ್ಮೂರು ಲಿಷ್ಟ್‌ಸಂಥ ಸುಂದರ ಪಟ್ಟಣ ಐಗುಪ್ತದಲ್ಲೇ ಬೇರೆ ಇಲ್ಲ. ಹುಣ್ಣಿಮೆ ರಾತ್ರೀಲಿ ನದೀಲಿದ್ಕೊಂಡು ಅದರ ಸೊಬಗು ನೋಡ್ಬೇಕು. ಮುಂದಿನ ಹುಣ್ಣಿಮೆಗೆ ಹೋಗ್ಬರೋಣ' ಅಂದ್ರು. (ಗೇಬುವಿನತ್ತ ಹೊರಳಿ) ಗೇಬು ! ನಿಮ್ಮ ಸಂಸಾರದ ಎಲ್ಲ ಸಾಮಾನು ಗಳನ್ನೂ ಎರಡು ದೊಡ್ಡ ಪೆಟಾರಿಗಳಲ್ಲಿ ಹಾಕಿ ಮುದ್ರೆ ಒತ್ತಿ, ಸುರಕ್ಷಿತವಾಗಿ ಇಟ್ಟಿದ್ದೇವೆ—ಅಂತ ನಾನು ಹೇಳಿದ್ದು ನೆನಪಿದೆಯಾ ?"

ಅಮಾತ್ಯ : "ಇಂಥ ಅಡ್ಡ ಪ್ರಶ್ನೆಗಳಿಗೆ ಯಾರೂ ಉತ್ತರ ಕೊಡ ಬೇಕಾಗಿಲ್ಲ."

ಮೆನೆಪ್‌ಟಾ : "ಏನು ಉತ್ತರ ಕೊಟ್ಟಾರು ಪಾಪ ! 'ಅಮಾತ್ಯರಿಗೆ ವಯಸ್ಸಾಯ್ತು, ಆಡಳಿತದ ಮೇಲಿನ ಬಿಗಿ ಸಡಿಲವಾಗಿದೆ ಅಂತ ಟೆಹುಟಿಯ ದೂರು; ಆಮೆರಬ್‌ರನ್ನು ಮನೆಗೆ ಕಳುಹಿಸಿ ತಾನೇ ಅಮಾತ್ಯನಾಗಬೇಕು ಅನ್ನೋಆಸೆ ಅವನಿಗೆ; ಆಗಲೇ ಗುಟ್ಟಾಗಿ ಮಹಾ ಅರ್ಚಕರ ಪಕ್ಷ ವಹಿಸಿ ದ್ದಾನೆ'—ಅಂತಲೂ ಹೇಳಿದ್ರು ನಮ್ಮ ಗೇಬು !.... [ತುಸು ತಡೆದು] ಅಮಾತ್ಯರು ಮಾಡಿದ ಏರ್ಪಾಟಿನಂತೆ ಮಹಾಪ್ರಭುವನ್ನೂ ನಾನು ಕಂಡೆ."

ಅಮಾತ್ಯ : "ದೇವಸ್ವರೂಪನ ವಿಷಯ ನ್ಯಾಯಸ್ಥಾನದಲ್ಲಿ ಪ್ರಸ್ತಾಪಿಸ ಬಾರದು."

ಮೆನೆಪ್‌ಟಾ : "ಪೆರೋನ ಆಯುರಾರೋಗ್ಯ ವರ್ಧಿಸಲಿ ! ರಾ ಪುತ್ರ ಅಪ್ಪಣೆ ಕೊಡಿಸಿದ್ರು : 'ತನ್ನ ಮಂದೆಯ ಸುಖದುಃಖ ಮಹಾಕುರುಬ ಚೆನ್ನಾಗಿ ಬಲ್ಲ. ದೊಡ್ಡ ಕುಟುಂಬ. ಸಣ್ಣಪುಟ್ಟ ವಿರಸ ಸ್ವಾಭಾವಿಕ. ಎಲ್ಲರ ತಂದೆಯ ಒಲವಿನ ಹೊನಲಿನಲ್ಲಿ ತಾಪಗಳು ಮಾಯವಾಗ್ತವೆ, ಗಾಯಗಳು ಮಾಯುತ್ತವೆ,' ಅಂತ. ಇನ್ನೂ ಒಂದು ಮಾತು ಅವರು ಹೇಳಿದ್ರು : 'ಜನ ರೊಡನೆ ಹೊಣೆಗೆಟ್ಟು ವರ್ತಿಸಿದವನು ದಂಡನೆಗೆ ಅರ್ಹ.' ಆ ವ್ಯಕ್ತಿ ಟೆಹುಟಿ ಅಂತ ನಾನು ತಿಳಕೊಂಡೆ."

ಅಮಾತ್ಯ : "ನಿಲ್ಲಿಸು ! ಪೆರೋ ಆಡಿದ ಮಾತುಗಳ ಬಗ್ಗೆ ನ್ಯಾಯ ಸ್ಥಾನದಲ್ಲಿ ಚರ್ಚೆ, ಟೀಕೆ ನಿಷಿದ್ಧ...."

ಮೆನೆಪ್‌ಟಾ : "ಸರು ಸದಸ್ಯರಿಗೆ ಔತಣ ಕೊಟ್ಟರಿ. ನನ್ನನ್ನೂ ಕರೆ ದಿರಿ. ನಿಮ್ಮ ಹಿರಿಯ ಸದಸ್ಯ ಹೆಪ್ನೆಟ್ 'ಬಿರುಕು ಬಿರುಕೇ. ಸಕಾಲದಲ್ಲಿ

ಮುಚ್ಕೋದು ಜಾಣತನ. ಶಾಂತಿ ಮುಖ್ಯ, ಶಾಂತಿ' ಅಂದ್ರು. ಒಂದು ಪಕ್ಕದಲ್ಲಿ ಹೆಪ್ಪೆಟ್, ಇನ್ನೊಂದು ಪಕ್ಕದಲ್ಲಿ ಗೇಬು. ಆಗ ನಾನು ನಿಮಗೆ ಬಹಳ ಸಮೀಪವಾಗಿದ್ದೆ. ಭಾರಿ ಔತಣ. ಸುರೆಯ ವಿಷಯದಲ್ಲಿ ಗೇಬು ಹೇಳಿದ್ರು : 'ಪೆರೋಗೆ ಅತ್ಯಂತ ಹಳೆಯ ಸುರೆಯೇ ಬೇಕು. ಪೂರ್ವಜರ ಕಾಲದ್ದು. ರಾ ಐಗುಪ್ತವನ್ನು ಆಳುತ್ತಿದ್ದಾಗಲೇ ಮಾಡಿದ ಸುರೆ! ಯಾವು ದಕ್ಕೂ ಒಂದು ಮಿತಿ ಬೇಡವೆ ?'...."

ಅಮಾತ್ಯ : "ಇಲ್ಲ, ಇಲ್ಲ ! ವೈಯಕ್ತಿಕವಾದದ್ದೇನೂ ಇಲ್ಲಿ ಮಾತಾ ಡಬಾರದು."

ಮೆನೆಪ್‌ಟಾ : "ನನ್ನ ಬಂಧು ಬಟಾನಿಗೆ ನಾನು ಹೇಳ್ದೆ : 'ವೈಯ ಕ್ತಿಕವಾಗಿ ನನಗೆ ಏನು ಆಗ್ತದೆ ಅನ್ನೋದು ಮಹತ್ವದ್ದಲ್ಲ. ನೀರಾನೆ ಪ್ರಾಂತದ ಜನ ನೆಮ್ಮದಿಯಿಂದ ಬದುಕೋದು ಸಾಧ್ಯವಾಗ್ಬೇಕು. ಇದಕ್ಕೆ ರಾಜಧಾನಿ ಆಸ್ಪದ ಇತ್ತರೆ ಎಲ್ಲರಿಗೂ ಹಿತ'...."

ಅಮಾತ್ಯ : "ಇದು ಬೆದರಿಕೆಯ ಮಾತು ! ನಿಮಗಿಷ್ಟ ಬಂದಂತೆ ಬಾಳೋದಕ್ಕೆ ಆಸ್ಪದವೀಯದಿದ್ದರೆ ಅನಾಹುತವಾದೀತು ಅಂತಲೊ ?"

ಮೆನೆಪ್‌ಟಾ : "ಸರಳವಾದ ಎರಡು ಪದಗಳಿಗೆ ನ್ಯಾಯಮೂರ್ತಿ ಯವರು ವಿಪರೀತಾರ್ಥ ಕಲ್ಪಿಸಿದ್ದಾರೆ."

ಅಮಾತ್ಯ : "ನ್ಯಾಯಸ್ಥಾನವನ್ನು ನಿಂದಿಸುವ ಎದೆಗಾರಿಕೆ ! ಮೆನೆಪ್ ಟಾ ! ನಿನ್ನದು ವಿಪರೀತ ಬುದ್ಧಿ. ಪಶ್ಚಾತ್ತಾಪ ಪಡಬೇಕಾದೀತು. ಜೋಕೆ !"

ಮೆನೆಪ್‌ಟಾ : "ಜೀವ ತೇದು ದುಡಿಯುವ ಜನರಿಗೆ ಅರೆಹೊಟ್ಟೆ, ಚಾಟಿ ಏಟು ; ಕೊಬ್ಬಿದ ಭೂಮಾಲಿಕರಿಗೆ ಅರಮನೆ ಪಲ್ಲಕಿ ! ದರಿದ್ರರ ಶವಗಳ ಮೇಲೆ ತುಣುಕು ಬಟ್ಟೆಯೂ ಇಲ್ಲ; ಆದರೆ ಮಂದಿರದ ಸೋಮಾರಿ ಬೆಕ್ಕು ಸತ್ತಾಗ ಅದಕ್ಕೆ ಶವಲೇಪನ ! ಅರ್ಚಕ ವರ್ಗದ ಕಾಮ ತೃಷೆಗೆ ದೇವ ಸೇವಿಕೆಯರ ಬಲಿ; ಮುದ್ದು ಮಕ್ಕಳ ತಾಯಂದಿರಾಗಬೇಕಾದ . ಹೆಂಗೆಳೆಯರಿಗೆ ಮಂದಿರದ ಪವಿತ್ರ ಗೂಳಿ ಪವಿತ್ರ ಟಗರುಗಳ ಜತೆ ಕಡ್ಡಾಯ ಸಂಭೋಗ !"

ಅಮಾತ್ಯ : "ಅಶ್ಲೀಲ ಪದಗಳನ್ನು ಆಡ್ತೀಯಲ್ಲ. ತಲೆ ಕೆಟ್ಟದೆಯಾ?"

ಮೆನೆಪ್‌ಟಾ : "ಕಂಡುದನ್ನು ಕಂಡಂತೆ ಹೇಳೋದು ತಪ್ಪೆ ?"

ಅಮಾತ್ಯ : "ಇದು ಖಂಡಿತವಾಗಿಯೂ ಹುಚ್ಚು ಚ್ಚಾರ...."

ಮೆನೆಪ್‌ಟಾ : "ನಿಮಗೆ ಬೇಡದವರಿಗೆ ಹುಚ್ಚ ಅನ್ನೋ ಬಿರುದು ಕೊಡ್ತೀರಿ !"

ಬೆಳಕು ಕಡಿಮೆಯಾಗಿತ್ತು. ಇನ್ನು ಮುಚ್ಚಂಜೆ. ಅದಾದ ಮೇಲೆ ಇರುಳು.

ಆಮೆರಬ್‌ಗೆ ಚಿಂತೆ, ಸಿಡುಕು. ಈತ ನಿಲ್ಲಿಸುವ ಲಕ್ಷಣಗಳೇ ಕಾಣಿಸು ತ್ತಿಲ್ಲವಲ್ಲ....

ಅಮಾತ್ಯ : "ಆಯಿತೊ, ಮಾತನಾಡಿ ? ಮಹಾ ಅರ್ಚಕರಿಗೆ ಸಂಧ್ಯಾ ಪೂಜೆಗೆ ತಡವಾಗ್ತದೆ."

ಮೆನೆಪ್‌ಟಾ : "ಪೂಜೆಗೆ ಅಡ್ಡಿಯಾಗಲಾರೆ. ಅವರು ಹೋಗಿ ಬರಲಿ."

ಅಮಾತ್ಯ : "ನಿನ್ನಿಂದಾಗಿ ಮಹಾಪ್ರಭು ಮಹಾರಾಣಿ ಎಲ್ಲರಿಗೂ ತೊಂದರೆ."

ನ್ಯಾಯಸ್ಥಾನದಲ್ಲಿ ಗುಜುಗುಜು. ಸಾಮಾನ್ಯ ಪ್ರೇಕ್ಷಕರೂ ಜೀವ ತಳೆದು ತಮ್ಮೊಳಗೆ ಮಾತನಾಡತೊಡಗಿದರು. ಇಳಿದನಿಯಲ್ಲಿ ಆಮೆರಬ್–ಹೇಪಾಟ್ ವಿಚಾರ ವಿನಿಮಯ....ಸೆನೆಬ್ ಆಜ್ಞಪ್ತನಾಗಿ ಅತ್ತಿತ್ತ ಓಡಿದ.

ಧ್ವನಿ ಏರಿಸಿ ಆಮೆರಬ್ ಅಂದ :

"ಸದ್ದು ! ಸದ್ದು ! ಎಲ್ಲರೂ ನ್ಯಾಯಸ್ಥಾನದ ಪಾವಿತ್ರ್ಯ ಕಾಪಾಡ್ಬೇಕು. ದೀಪಗಳನ್ನು ಬೆಳಗೋದಕ್ಕೆ ಅನುಜ್ಞೆ ನೀಡಿದ್ದೇವೆ. ಅಪರಾಧಿ ಮುಂದುವರಿಸಿ ಬೇಗನೆ ಮುಗಿಸಲಿ."

ಮೆನೆಪ್‌ಟಾ :

"ಉಪಕೃತನಾಗಿದ್ದೇನೆ. ಐಗುಪ್ತದ್ದು ಸಾಟಿ ಇಲ್ಲದ ಪ್ರಾಚೀನ ಸುಸಂಸ್ಕೃತ ನಾಗರಿಕತೆ. ನಮ್ಮ ಸಮಾಜ ವಿಸ್ತಾರ ಬುನಾದಿಯ ಮೇಲಿನ ಹತ್ತಾಳು ಎತ್ತರದ ಗೋರಿ. ಈ ಸೋಪಾನ ವ್ಯವಸ್ಥೆ ನಿಂತಿರೋದು ಸಹಸ್ರ ಸಹಸ್ರ ಶ್ರಮಜೀವಿಗಳ ಭುಜಗಳ ಮೇಲೆ. ಎತ್ತರಕ್ಕೆ ಹೋಗ್ತಾ ಅಗಲ ಕಿರಿದು. ದುಡಿಸುವ ಕಾಪೀರುಗಳು. ಭೂಮಾಲಿಕರು, ವರ್ತಕರು, ಸೈನ್ಯ,

ಆಡಳಿತಗಾರರು—ಅರ್ಚಕರು. ಸುಲಿಗೆಯ ಸೂತ್ರ ಈ ವ್ಯವಸ್ಥೆಯನ್ನು ಬಿಗಿದು ಕಟ್ಟಿದೆ."

....ಕಂಚಿನ ದೀವಟಿಗೆಗಳು ಬರತೊಡಗಿದುವು. (ಹೊರಗೆ ಮಬ್ಬು ಗತ್ತಲು.) ದೀವಟಿಗೆಗಳನ್ನು ಇರಿಸುವ ಕೆಲಸ ಪೂರ್ಣವಾಗಲೆಂದು, ಮೆನೆಪ್ಟಾ ಮಾತು ನಿಲ್ಲಿಸಿದ. ಎಷ್ಟೋ ವರ್ಷಗಳ ಹಿಂದೆ ಗಡಿಯಲ್ಲಿ ಯುದ್ಧವಾದಾಗ ದೀಪಗಳ ಬೆಳಕಿನಲ್ಲಿ ಅಮಾತ್ಯ ಕಾರ್ಯನಿರತನಾಗಿದ್ದ. ಕೆಲವರಿಗೆ ಅದರ ನೆನಪಿತ್ತು. ಆದರೆ ನ್ಯಾಯಸ್ಥಾನ ಆ ರೀತಿ ಕಾರ್ಯಕಲಾಪ ನಡೆಸಿದ್ದು ಅದೇ ಮೊದಲು.

ಆ ಬೆಳಕಿನಲ್ಲಿ ಅಲ್ಲಿದ್ದವರನ್ನು ದಿಟ್ಟಿಸಿ, ಮುಂದುವರಿಸಲು ನ್ಯಾಯಮೂರ್ತಿ ಸೂಚನೆ ನೀಡುವುದಕ್ಕೆ ಮೊದಲೇ ಮೆನೆಪ್‌ಟಾ ಮುಗುಳುನಕ್ಕು ಮಾತನಾಡಿದ:

"ಸುಲಿಗೆಯ ಸೂತ್ರ ಈ ವ್ಯವಸ್ಥೆಯನ್ನು ಬಿಗಿದು ಕಟ್ಟಿದೆ, ಅಂದೆ. ನಮ್ಮ ಪ್ರಾಚೀನರ ಮಾತಿನಂತೆ, ಮುಂಗೈ ಜೋರಿನಿಂದ ಏನನ್ನೂ ಸಾಧಿಸಲು ಆಗುವುದಿಲ್ಲ. ಆದರೆ ನಮ್ಮ ನಡವಳಿಕೆ ಆ ಮಾತನ್ನು ಸುಳ್ಳು ಮಾಡಿದೆ. ಕಂದಾಯ ವಸೂಲಿ, ಗೋರಿ ನಿರ್ಮಾಣ, ಗಣಿ ಕೆಲಸ ಇವೆಲ್ಲ ಬಲಪ್ರಯೋಗದಿಂದಲೇ ನಡೀತವೆ. ದಾಸದಾಸಿಯರ ಬಲಾತ್ಕಾರದ ದುಡಿಮೆಯಿಂದ ನಮ್ಮಲ್ಲಿ ಸಂಪತ್ತು ಉತ್ಪನ್ನವಾಗ್ತದೆ. ಇದು ಸ್ವರ್ಣಪಿಶಾಚಿಗಳ ಸಮಾಜ. ಮನುಷ್ಯ ಜೀವಕ್ಕೆ ಇಲ್ಲಿ ಬೆಲೆ ಇಲ್ಲ. ಹೋರಾಟದಲ್ಲಿ ಸೆರೆಸಿಕ್ಕಿದವರು ನಮ್ಮ ವ್ಯವಸ್ಥೆಯ ಗುಲಾಮರಾಗ್ತಾರೆ. ಅವರನ್ನು ಕೆಡವಿದಾಗ ಅವರ ಬಲಗೈಯನ್ನೋ ಯೋನಿಯನ್ನೋ ಕತ್ತರಿಸಿ ತರ್ತಾರೆ ನಮ್ಮ ವೀರಯೋಧರು—ಅರಮನೆಯ ಲೆಕ್ಕಿಗನಿಗೆ ತೋರಿಸಿ ದಾಖಲೆ ಇಡಿಸೋದಕ್ಕೆ. ಆ ಸಾಧನೆಯ ಪ್ರಮಾಣಕ್ಕೆ ಅನುಸಾರವಾಗಿ ಬಹುಮಾನ! ಇದಲ್ಲವಾ ನಾಗರಿಕತೆ?...."

ಅಮಾತ್ಯ ಸಿಟ್ಟು ಬೆಂಕಿಯಾಗಿ ಗುಡುಗಿದ:

"ಸಾಕು ಮಾಡು! ನೀನು ಹೇಳೋದಕ್ಕೂ ಈ ವಿಚಾರಣೆಗೂ ಸಂಬಂಧವಿಲ್ಲ!"

ಅದನ್ನು ಗಮನಿಸದೆ ಮೆನೆಪ್‌ಟಾ ಮುಂದುವರಿದ:

"ಅಂಥ ನಾಗರಿಕತೆಗೆ ರೋಸಿ, ಸುಲಿಗೆಗೆ ಒಪ್ಪದೆ, ನಾವು—ದಲಿತರು—ಸೆಟೆದು ನಿಂತಿದ್ದೇವೆ. ಎಲ್ಲರೂ ನೆಮ್ಮದಿಯಿಂದ ಬಾಳುವ ಹೊಸ ವ್ಯವಸ್ಥೆಯನ್ನು ರೂಪಿಸ್ತಿದ್ದೇವೆ. ಇಷ್ಟುಕಾಲ, ಕುರಿಗಳಾಗಿ ಕಟುಕನ ಕತ್ತಿಗೆ ತಲೆಯೊಡ್ಡಿದ್ದು ಸಾಲದೆ? ಆಡಳಿತದ ಒರಳಿನ ಕೆಳಕ್ಕೆ ಪುಡಿಪುಡಿಯಾದದ್ದು ಸಾಲದೆ? ದೇವರ ಹೆಸರಿನಲ್ಲಿ ಅರ್ಚಕರ ಮುಷ್ಟಿಯೊಳಗೆ ಹಿಪ್ಪೆಯಾದದ್ದು ಸಾಲದೆ?"

ನ್ಯಾಯಮೂರ್ತಿ ಅರಚಿದ:

"ನಿಲ್ಲಿಸು! ನಿಲ್ಲಿಸು! ವೇಳೆಯಾಯ್ತು!"

ನ್ಯಾಯಸ್ಥಾನದಲ್ಲಿ ಕಲರವ.

ಮತ್ತೆ ಆಮೆರಬ್ ಕೂಗಿ ನುಡಿದ:

"ಸದ್ದು! ಸದ್ದು!"

ಮೆನೆಪ್‌ಟಾ (ಸ್ವರ ತಗ್ಗಿಸಿ ನಿಧಾನವಾಗಿ): "ಆಯಿತು. ಕೊನೇ ಮಾತು. ಇಷ್ಟು ದಿನ ನಿಮ್ಮ ಚೌಕಮಣೆ ಆಟದಲ್ಲಿ ಕಾಯಿಯಾಗಿದ್ದೆ. ಈಗ ನೀವೆಲ್ಲ ಒಂದಾಗಿದ್ದೀರಿ. ಸದ್ಯಕ್ಕೆ ಆಟ ಮುಗಿದಿದೆ. ಕಾಯಿಯಾಗಿದ್ದ ನನ್ನ ಅಗತ್ಯ ನಿಮಗಿಲ್ಲ....ಸ್ನೊಫ್ರು, ಸೆಬೆಕ್ಖು, ನಮ್ಮ ಪ್ರಾಂತದ ಹಿರಿಯ ಸಮಿತಿ ಸದಸ್ಯರು, ಖ್ನೆಮ್‌ಹೊಟೆಪ್—ಎಲ್ಲರ ದೃಷ್ಟಿಯಲ್ಲಿ ನಾನೊಬ್ಬ ಶಾಂತ ಸ್ವಭಾವದ ನಾಯಕ....ಬಟಾ ಕೇಳಿದ ಒಂದು ಪ್ರಶ್ನೆ ಇದು— 'ಅಣ್ಣ, ನಿನಗೆ ಸಿಟ್ಟು ಬರೋದು ಯಾವತ್ತು?' (ಬಹಳ ಮೆಲ್ಲನೆ) ಯಾವತ್ತು? ಯಾವತ್ತು? (ಕ್ರಮೇಣ ಧ್ವನಿ ಏರಿಸುತ್ತ) ಮಹಾ ಪ್ರಭುಗಳೇ, ಮಹಾ ಅರ್ಚಕರೇ, ಅಮಾತ್ಯರೇ, ಪ್ರತಿಷ್ಠಿತರೇ! ಕಿವಿಕೊಟ್ಟು ಕೇಳಿ! ನಮಗೆ—ಜನರಿಗೆ—ಸಿಟ್ಟುಬಂದಾಗ ಅದು ಮಹಾಪೂರವಾಗ್ತದೆ. ಅದರಲ್ಲಿ ನೀವೆಲ್ಲ ಕೊಚ್ಚಿಹೋಗ್ತೀರಿ! ಮಹಾಪೂರ ಇಳಿದಾಗ ಕಂಡುಬರೋ ಜಗತ್ತು ಹೊಸದು—ಹೊಚ್ಚ ಹೊಸದು! ಆ ನೂತನ ಸೃಷ್ಟಿ ನಿರಾತಂಕವಾಗಿ ಆಗಲಿ ಅಂತ—ಇಗೋ—ರಾನನ್ನು ಪ್‌ಟಾನನ್ನು ಅಮುನ್‌ನನ್ನು ಅನನ್ಯ ಭಾವದಿಂದ ನಾನು ಪ್ರಾರ್ಥಿಸ್ತೇನೆ...."

ಮಾತು ಮುಗಿಸಿದ ಮೆನೆಪ್‌ಟಾ ಮಂಡಿಯೂರಿದ, ತಲೆ ಬಗ್ಗಿಸಿದ.

ನೀರವತೆ. ಗಾಳಿ ಆಡಲಿಲ್ಲ. ಪಂಜುಗಳು ಢಾಳಾಗಿ ಉರಿದುವು.

ದೀರ್ಘವೆನಿಸಿದ ಕ್ಷಣಗಳು. (ಪೆರೋ ಕುಳಿತಲ್ಲಿ ಹೊರಳಿದ. ಮಹಾ ಅರ್ಚಕ ತನ್ನ ಅಧಿಕಾರ ದಂಡವನ್ನು ನೆಲದಮೇಲೆ ತುಸು ಮುಂದಕ್ಕೆ ಚಲಿಸಿದ. ಮುಖಗಳು ಕಪ್ಪಿಟ್ಟಿದ್ದರೂ ಅರ್ಚಕ ಪರಿವಾರ ಅಮಾತ್ಯನತ್ತ ನೋಡಿತು. ಕಳಾಹೀನರಾಗಿದ್ದ ಪ್ರತಿಷ್ಠಿತರು ತಮ್ಮೆದುರು ನೆಲದ ಮೇಲೆ ದೃಷ್ಟಿ ನೆಟ್ಟರು. ಪ್ರೇಕ್ಷಕರ ಮುಖಗಳು ಮಾತ್ರ ಏನೋ ಅರ್ಥವಾದಂತೆ ಬೆಳಗಿದುವು.

ಆಮೆರಬ್ ತನ್ನ ಶ್ವಾಸೋಚ್ಛ್ವಾಸವನ್ನು ಕ್ರಮಬದ್ಧಗೊಳಿಸುತ್ತ, ಈಗ ಆದುದೇನು ಎಂದು ಗ್ರಹಿಸಲು ಯತ್ನಿಸಿದ. ಈ ಮೆನೆಪ್‌ಟಾನೇ ತೀರ್ಪು ಕೊಟ್ಟಂತಾಯಿತಲ್ಲ. ಸದಾ ಕಾಲವೂ ಎಲ್ಲರೂ ನೆನಪಿಡುವಂಥ ದೀರ್ಘ ತೀರ್ಪನ್ನು ತಾನು ನೀಡಬೇಕು ಎಂದುಕೊಂಡಿದ್ದೆ. ಆದರೆ—ಆದರೆ.... ಯೋಚಿಸಿದ್ದೆಲ್ಲ ನೆನಪಿನಿಂದ ಮರೆಯಾಗಿತ್ತು. (ಗಂಟಲು ಕಟ್ಟಿಕೊಂಡಿದೆ. ಮಾತು ಸರಿಯಾಗಿ ಹೊರಡದು. ಆದರೆ ಇನ್ನು ತಾನು ತಡ ಮಾಡಬಾರದು. ಮಹಾ ಅರ್ಚಕ ತನ್ನನ್ನೇ ನೋಡುತ್ತಿದ್ದಾನೆ....ಪೆರೋ....)

ಆಮೆರಬ್ ಆರಂಭಿಸಿದ :

"ಘೋರ ಅಪರಾಧಗಳನ್ನು...."

ಆಡಿದ ಪದಗಳು ಆತನಿಗೇ ಕೇಳಿಸಲಿಲ್ಲ. ತುಟಿಗಳನ್ನು ನಾಲಿಗೆಯಿಂದ ಸವರಿ, ಉಗುಳು ನುಂಗಿ ಮತ್ತೆ ಅದೇ ಪದಗಳನ್ನು ಉಚ್ಚರಿಸಿದ :

"ಘೋರ ಅಪರಾಧಗಳನ್ನು....ಮಾಡಿದವರಿಗೆ ನ್ಯಾಯಸ್ಥಾನ ವಿಧಿಸುವ ಶಿಕ್ಷೆಯ ವಿವರಗಳು ಹೀಗಿವೆ...."

ಆಮೆರಬ್ ಮತ್ತೊಮ್ಮೆ ತುಟಿಗಳನ್ನು ನಾಲಿಗೆಯಿಂದ ಸವರುತ್ತ ಸೆನೆಬ್‌ನತ್ತ ನೋಡಿದ.

ಹಿರಿಯ ಲಿಪಿಕಾರ ತೆರೆದು ಸಿದ್ಧಗೊಳಿಸಿದ್ದ ಲಿಪಿಸುರುಳಿಯನ್ನೆತ್ತಿಕೊಂಡು, ಧ್ವನಿಯ ಕಂಪನವನ್ನು ಮರೆಮಾಚಲು ಯತ್ನಿಸುತ್ತ ಓದಿದ :

"ಮೂಗು, ಕಿವಿ, ಕೈ, ನಾಲಿಗೆ ಕತ್ತರಿಸಿ ಅಂಗಛೇದನ ; ಖಡ್ಗದಿಂದ ಸೀಳುವುದು ; ಶೂಲ ಪ್ರಯೋಗ ; ಜೀವಂತ ದಹನ ; ಶಿರಚ್ಛೇದನ ; ಬದುಕಿರುವಾಗಲೇ 'ಶವಲೇಪನ' ; ಸ್ವಹಸ್ತದಿಂದ ಮರಣ...."

ಓದಿ ಮುಗಿಸಿ ಸೆನೆಬ್ ತುಸು ಹಿಂದಕ್ಕೆ ಸರಿದ.

ಆಮೆರಬ್ ಕರ್ಕಶವಾಗಿ ನುಡಿದ :

" ಅಪರಾಧಿ ಎದ್ದು ನಿಲ್ಲಲಿ !"

ಆ ಸ್ಥಾನದಿಂದ ಎಲ್ಲಿಂದಲೋ ಒಂದು ಧ್ವನಿ ಕೇಳಿಸಿತು :

" ಹೇಗೂ ಮಂಡಿಯೂರಿದ್ದಾನಲ್ಲ. ಹಾಗೆಯೇ ದಂಡನೆ ವಿಧಿಸಿ."

ಅಮಾತ್ಯನಿಗೆ ವಿಸ್ಮಯ ಏನದು, ಸಮರ್ಥನೆಯೊ, ವಿಡಂಬನೆಯೊ ?

ಮೆನೆಪ್‌ಟಾ ಬಳಲಿದ್ದ. ಮೆದುಳು, ಮೈ ಎಲ್ಲವೂ ಭಾರ ಎಂಬ ಅನಿಸಿಕೆ. ಕಣ್ಣು ಮುಚ್ಚಿಯೇ ಇರೋಣ, ಹಾಗೆಯೇ ನಿದ್ದೆ ಬಂದರೆ ಚೆನ್ನು—ಎಂದು ಕೊಂಡ. ಆದರೆ, 'ಅಪರಾಧಿ ಎದ್ದು ನಿಲ್ಲಲಿ !' ಇನ್ನೊಂದು ಧ್ವನಿ ಯಾರದೋ ತಿಳಿಯದು. ಪರಿಚಿತ ಎಂಬ ಭಾವನೆ ಛೆ ! ತಾನು ಏಳಬೇಕು. ತೋಳುಗಳ ಹಗ್ಗಗಳನ್ನು ಯಾರೋ ಜಗ್ಗು ಜಗ್ಗುತ್ತಿರುವರಲ್ಲ ?

ಎದ್ದು ನಿಂತ, ಮೆನೆಪ್‌ಟಾ, ತನ್ನ ಲವಲವಿಕೆ ಕಂಡು ಅವನಿಗೇ ಅಚ್ಚರಿ. 'ಒಳ್ಳೇದು' ಎಂದುಕೊಂಡ. ಉಸಿರೆಳೆದು ಎದೆ ಹಿಗ್ಗಿಸಿದ. ತಲೆ ಎತ್ತಿ ನ್ಯಾಯ ಮೂರ್ತಿ, ಮಹಾಅರ್ಚಕ, ಪೆರೋ ಎಲ್ಲರನ್ನೂ ದಿಟ್ಟಿಸಿದ. ಮುಖದಲ್ಲಿ ಪ್ರಭೆ. ತುಟಿಗಳಲ್ಲಿ ಮಂದಹಾಸ.

ಆಮೆರಬ್ : " ತಾನುಎಸಗಿದ ಅಕೃತ್ಯವನ್ನು ಪಾಪಿ ಮನಗಾಣುವಂತೆ ಮಾಡುವುದು ಭೀಕರವಾದದ್ದು. ಆದರೆ ಅನಿವಾರ್ಯವೆಂದು, ಅಗತ್ಯವೆಂದು ನ್ಯಾಯಸ್ಥಾನ ಆ ಕೆಲಸ ಮಾಡಿದೆ. ನೀರಾನೆ ಪ್ರಾಂತದ ಈ ಸಾಮಾನ್ಯ ರೈತ—ದುಡಿಮೆಗಾರ—ಮೆನೆಪ್‌ಟಾನಿಂದಾಗಿ, ರಾ ದೇವನ ಸೃಷ್ಟಿಯಾದ ಐಗುಪ್ತಕ್ಕೆ—ಅದರ ಹಿರಿಮೆಗೆ—ಕಳಂಕ ತಟ್ಟಿದೆ. ದೇವರೂಪನಾದ ಮಹಾ ಕುರುಬ ಅಪಾರ ದುಃಖಕ್ಕೆ ಗುರಿಯಾಗಿದ್ದಾರೆ. ಈ ದೈವದ್ರೋಹವನ್ನು ಕಂಡು, ಐಗುಪ್ತದ ಧರ್ಮವ್ಯವಹಾರಗಳ ರಕ್ಷಕರಾದ ಮಹಾ ಅರ್ಚಕರು ವ್ಯಥಿತರಾಗಿ ದ್ದಾರೆ........"

ಆಮೆರಬ್ ತಡವರಿಸಿದ. ಮುಂದೇನು ಹೇಳಬೇಕು ತಾನು ? ಪದಗಳು ರೂಪುಗೊಳ್ಳುತ್ತಿಲ್ಲ. ಏನೂ ತೋಚುತ್ತಿಲ್ಲ. ಈ ಅಪರಾಧಿಯೊ ? ತನ್ನೆಡೆಗೇ ನೋಡುತ್ತಿದ್ದಾನೆ. ತನ್ನ ತೊಳಲಾಟ ಕಂಡು ನಗುತ್ತಿದ್ದಾನೆ. ಆ ಪ್ರೇಕ್ಷಕ ರಲ್ಲಿ ಗುಸುಗುಸು....ಪಂಜುಗಳ ಬೆಳಕಿನಲ್ಲಿ ಹೀಗಾಗುತ್ತಿದೆಯೇನೊ, ತಾನು ಮುಗಿಸಬೇಕು, ಬೇಗ ಮುಗಿಸಬೇಕು. ಅದೊಂದೇ ಪಾರಿ....

ಅಧಿಕಾರ ದಂಡವನ್ನು ಆತ ಬಿಗಿಯಾಗಿ ಹಿಡಿದುಕೊಂಡ. ಈಗ ತುಸು ಮೇಲು ಎನಿಸಿತು.

ಅನೆರಬ್ : "ತಟ್ಟಿದ ಕಳಂಕವನ್ನು ಈ ನ್ಯಾಯಸ್ಥಾನ ತೊಡೆದು ಹಾಕ್ತದೆ! ಈತ ಚಾಪೆಯ ಕೆಳಗಿನ ಹಾವು! ಈ ಹಾವನ್ನು ಸಾಯಿಸಬೇಕು! ನೀರಾನೆ ಪ್ರಾಂತದ ಬಂಡಾಯ ನಾಯಕ ಬಡ ರೈತ ಮೆನೆಪ್ ಟಾಗೆ, ದೇವ ರೂಪ, ಪೆರೋ ಪೇಪಿಯ ಈ ನ್ಯಾಯಸ್ಥಾನ ಶಿರಚ್ಛೇದನದ ಶಿಕ್ಷೆ ವಿಧಿಸ್ತದೆ..... ಒಡೆಯನ ವಿರುದ್ಧ ಬಂಡಾಯವೆದ್ದವನಿಗೆ ಅಂತ್ಯ ಸಂಸ್ಕಾರವಿಲ್ಲ. ಪ್ರದರ್ಶನದ ಬಳಿಕ ಶವ ಮೊಸಳೆಗಳಿಗೆ ಆಹಾರವಾಗ್ತದೆ....ಪೆರೋನ ಆಯುರಾರೋಗ್ಯ ವರ್ಧಿಸಲಿ!"

ಅಧಿಕಾರ ದಂಡದಿಂದ ವೇದಿಕೆಯ ನೆಲವನ್ನು ಕುಟ್ಟಿ ಅಮಾತ್ಯ ಎದ್ದ. ಪೆರೋ, ಪರಿವಾರ, ಮಹಾ ಅರ್ಚಕ ಹಾಗೂ ಬಳಗ, ಟಿಹುಟಿ, ಗೇಬು ಮತ್ತಿ ತರರು—ಎಲ್ಲರೂ ಎದ್ದರು.

ಪ್ರತಿಷ್ಠಿತರಿಂದ ಘೋಷ ಹೊರಟಿತು :

"ಪೆರೋನ ಆಯುರಾರೋಗ್ಯ ವರ್ಧಿಸಲಿ!"

ದಳಪತಿಯೂ ಮತ್ತಷ್ಟು ಭಟರೂ ಧಾವಿಸಿ ಬಂದರು, ಮರಣದಂಡನೆಗೆ ಗುರಿಯಾದವನನ್ನು ಸುತ್ತುವರಿಯಲು.

ಮೆನೆಪ್‌ಟಾನ ತುಟಿಗಳ ಮೇಲೆ ಮೂಡಿದ ಮಂದಹಾಸ ಕರಗಲೇ ಇಲ್ಲ. ಘೋಷ ಮೊಳಗುತ್ತಿದೆ. ಶಿರಚ್ಛೇದನದ ಶಿಕ್ಷೆ ಎಂದನಲ್ಲ ? ('ಚಾಪೆಯ ಕೆಳಗಿನ ಹಾವು—ಅಸಹ್ಯಕರ ಹೋಲಿಕೆ') ಶಿರಚ್ಛೇದನ....ಈಗಲೊ ? ಮತ್ತೆಯೊ ? ಅಂತೂ ಮುಗಿಯಿತು....ದೊಡ್ಡ ಕತೆ ಮುಗಿಯಿತು....ಅವರೆಲ್ಲ ಹೊರಟರು. ಈ ಸಾಮಾನ್ಯ ಜನ ಹೋಗುತ್ತಿಲ್ಲ....(' ಓ ಬಟಾ, ಓ ಬೆಕ್-ಔಟ, ರಾಮೆರಿ, ನೆಫಿಸ್') ಮೆನ್ನ ಆಗಲೇ ಹೊರಬಿದ್ದನೇನೋ....ಬಂಧುಗಳಿಗೆ ಆತ ಸುದ್ದಿ ತಿಳಿಸಬೇಕು....ಹಿಂದಿನ ರಾತ್ರೆ ತಪ್ಪಿಸಿಕೊಂಡು ಹೋಗಲು ಒಪ್ಪಿದ್ದರೆ—.... "ಸಿಂಹವಾಗಿ ಬಂದವನು"....ಋಜುಮಾರ್ಗ—ಕಡೆಯವರೆಗೂ ಆ ಮಾರ್ಗ ದಲ್ಲೇ ನಡೆದೆ—

ಅಮಾತ್ಯನ ಹಿಂದೆ ಹೋಗಿದ್ದ ಸೆನೆಬ್ ಮತ್ತೆ ವೇದಿಕೆಗೆ ಬಂದು ದಳಪತಿ ಯತ್ತ ನೋಡಿ ಕೂಗಿ ಹೇಳಿದ :

" ಡಂಗುರ ಸಾರಿಸ್ತೇನೆ! ಜನರೆಲ್ಲ ಅರಮನೆಯ ಆಟದ ಬಯಲಿಗೆ ಬರಲಿ! ದಂಡಿಗೆ ಕರೆ ಹೋಗಿದೆ. ವ್ಯವಸ್ಥೆ ನೋಡಿಕೊಳ್ಳೋದಕ್ಕೆ ಬಕಿಲ ನಿಯೋಜಿತನಾಗಿದ್ದಾನೆ. ಪೆರೋ, ಮಹಾ ಅರ್ಚಕರು, ಅಮಾತ್ಯರು, ದಂಡ ನಾಯಕರು, ಸರುಸದಸ್ಯರು, ಪ್ರಾಂತಪಾಲರು—ಎಲ್ಲ ಮಹಾಮನೆಯ ಉಪ್ಪ ರಿಗೆಯಲ್ಲಿ ನಿಂತು ನೋಡ್ತಾರೆ. ಸ್ವಲ್ಪ ಹೊತ್ತಿನಲ್ಲೇ ಇವನನ್ನು ವಧಸ್ಥಾನಕ್ಕೆ ಎಳಕೊಂಡು ಬಾ."

ವಧಸ್ಥಾನಕ್ಕೆ....ಸ್ವಲ್ಪ ಹೊತ್ತಿನಲ್ಲೇ........ಅವನನ್ನು....'ನಾಯಕರೆ.' ಎನ್ನುತ್ತ ಕಪಟ ವಿನಯ ತೋರಿಸುತ್ತಿತ್ತು 'ಕಾಣಿಕೆ' ಬಯಸಿದ ಆ ನರಜಂತು... ಒಂದು ರೀತಿಯಲ್ಲಿ ಇದು ಮೇಲು. ಈ ಕಾರಿರುಳಿನಲ್ಲೇ ಮುಗಿದು ಹೋಗು ತ್ತದೆ. 'ರಾಮೆರಿ, ಬಟಾ, ಔಟ, ಬೆಕ್, ಅಹೂರಾ....ನೀವೆಲ್ಲ ಸುರಕ್ಷಿತವಾಗಿ ಊರಿಗೆ ಮರಳಬೇಕು.' ಮೆನ್ನ—ಮೆನ್ನ—ಇಷ್ಟುಹೊತ್ತಿಗೆ ಸುದ್ದಿ ತಿಳಿಸಿ ರ್ತಾನೆ....

ಮೇಲ್ವಿಚಾರಣೆಗೆ ಬಕಿಲ ನಿಯೋಜಿತನಾಗಿದ್ದಾನೆಂದು ಅರಮನೆಯ ಕಾವಲು ಪಡೆಯ ಮುಖ್ಯಸ್ಥನಿಗೆ ಸಿಟ್ಟು. ಜತೆಗೆ, ಹೋಗಲಿ ಶ್ರಮ ತಪ್ಪಿತು— ಎಂದು ಸ್ವಲ್ಪ ಸಮಾಧಾನ.

ಹೊರಹೋಗಲು ನಿರಾಕರಿಸಿ, ಮೆನೆಪ್‌ಟಾನನ್ನು ನೋಡುತ್ತ ನಿಂತ ಸಾಮಾನ್ಯ ಜನರೆಡೆಗೆ ಹೊರಳಿ ದಳಪತಿ ಗದರಿದ :

" ಹಿರಿಯ ಲಿಪಿಕಾರ ಹೇಳಿದ್ದು ಕೇಳಿಸ್ಲಿಲ್ಲವಾ ನಿಮಗೆ? ಇಲ್ಲೇನು ಕೋತಿ ಕುಣಿಸ್ತಿದೀವಾ? ನಡೀರಿ ಬಯಲಿಗೆ!"

ಹೊರಗೆ ಡಂಗುರ. ಅರಮನೆಯ ಆವರಣದಿಂದಲೇ ಸ್ವರ :

" ಕೇಳಿರಿ! ಕೇಳಿರಿ! ನೀರಾನೆ ಪ್ರಾಂತದ ಬಂಡಾಯಗಾರ ನಾಯಕ ಮರಣ ದಂಡನೆಗೆ ಗುರಿಯಾಗಿದ್ದಾನೆ. ಶಿರಚ್ಛೇದನ ನೋಡಲು ಜನರೆಲ್ಲ ಅರ ಮನೆಯ ಆಟದ ಬಯಲಿನಲ್ಲಿ ಈಗಲೇ ನೆರೆಯಬೇಕೂಂತ ಆದೇಶ ನೀಡಲಾಗಿದೆ. ಕೇಳಿರಿ! ಕೇಳಿರಿ!"

* * * *

ನ್ಯಾಯಸ್ಥಾನದ ಹೊರಗೆ ನಿಂತಿದ್ದ ಶೀಬಾ ಪಾರ್ಶ್ವದ್ವಾರದಿಂದ ಮೆನ್ನ ಆಗಲೆ ಹೊರಬಿದ್ದು ಓಡಿಹೋದದನ್ನು ಕಂಡಿದ್ದಳು. ಕಪ್ಪಿಟ್ಟಿದ್ದ ಮುಖ. ಯಾಕೊ ಭಯವೆನಿಸಿತ್ತು.

ಪ್ರತಿಷ್ಠಿತರು ನ್ಯಾಯಸ್ಥಾನದಿಂದ ಹೊರಬರತೊಡಗಿದರು. (ಅಮಾತ್ಯರು ಮೊದಲಾದವರು ಇನ್ನೊಂದು ಬಾಗಿಲಿನಿಂದ ಅರಮನೆಯತ್ತ ಹೋದರು.)

ತೀರ್ಪು ಇಂಥದೇ ಇದ್ದೀತೆಂದು ಶೀಬಾ ಊಹಿಸಿಕೊಂಡಳು. ಕಣ್ಣು ಕತ್ತಲಿನ ಅನುಭವ.

ಅಷ್ಟರಲ್ಲೇ ಸುದ್ದಿಯ ಅಲೆ ರಭಸದಿಂದ ಬಂತು.

ಅವಳ 'ಅಯ್ಯೋ!' ಆರ್ತನಾದ ಗಂಟಲಲ್ಲೇ ಇಂಗಿತು. ಅವುಡುಗಚ್ಚಿ ಕಸಾಯಿ ಮನೆಯಾಚೆಗಿನ ತನ್ನ ಹಟ್ಟಿಯತ್ತ ಧಾವಿಸಿದಳು. ಹೋಗುತ್ತ ಕಾತರ ಭಾವದಿಂದ ತನ್ನೆಡೆಗೆ ನೋಡಿದ ಪರಿಚಾರಕ ಪರಿಚಾರಿಕೆಯರಿಗೆ, 'ಶಿರಚ್ಛೇದನ' ಎಂದು ಮೂಕ ಭಾಷೆಯಲ್ಲಿ ನುಡಿದಳು.

ಮಗ್ಗುಲು ಹಟ್ಟಿಯ ಹುಡುಗಿ ಎತ್ತಿಕೊಂಡಿದ್ದ ಮಗು ತಾಯಿಯನ್ನು ಕಂಡೊಡನೆ ಇತ್ತ ಜಿಗಿಯಿತು. ಕತ್ತಲಲ್ಲಿ ಮೊಲೆಯೂಡಿಸತೊಡಗಿದಳು. ಕಣ್ಣೀರಿನ ಆಣೆಕಟ್ಟು ಬಿರಿಯಿತು. ಇದೇನು?—ಎಂದು ರಂಪ ಮಾಡಿತು ಮಗು, ಮೊಲೆ ಚೀಪಲು ನಿರಾಕರಿಸಿ.

ಹೊರಗೆ ಪ್ರಾಂಗಣದ ಬೆಳಕಿನಲ್ಲಿ ಈಟಿಮೊನೆ ಚಕಚಕಿಸಿತು. ಗಂಡ.

"ಶೀಬಾ."

"ಹ್ಣ...."

"ಗೊತ್ತಾಯ್ತಾ?"

"ಹ್ಣ"

"ನಾನು ಬಯಲಿಗೆ ಹೋಗ್ತೇನೆ."

"ನಾನೂ ಅಲ್ಲಿರ್‍ತೇನೆ. ಮಗು ಹಾಲು ಕುಡೀತಾ ಇಲ್ಲ. ಕುಡಿಸಿ ಹೊರಡ್ತೇನೆ"

"ಹೂಂ...."

"ಏನಾದರೂ ಮಾಡ್ತೀಯಾ?"

"ಯಾವುದು?"

" ಅವರಿಬ್ಬರು—ಔಟ, ಬೆಕ್...."

ಕ್ಷಣಮೌನದ ಬಳಿಕ ಆತ :

" ಸೇವಕರನ್ನು ಯಾರೂ ಕೊಲ್ಲೋದಿಲ್ಲ."

" ನಿನ್ನ ಗೆಳೆಯರಿಗೆ ಹೇಳು. ಅವರಿಬ್ಬರು ದೊಡ್ಡಮನೆಗೆ ಬಂದದ್ದನ್ನು ಲೆಕ್ಕ ಇಟ್ಟಿಲ್ಲ. ಬಿಡಿಸಿ ಇಲ್ಲಿಗೆ ಕಳಿಸು. ನಾನು ಹೊರಗೆ ದಾಟಿಸ್ತೇನೆ."

" ಹ್ಞ. ಶೀಬಾ."

ಅಳು ಇಲ್ಲ, ಮಾತು ಮಾತ್ರ ಎಂದು ಮಗು ಮೊಲೆ ಚೀಪಿತು. ಹಾಲು ಬಂತು. ಕುಡಿಯಿತು....

....ಶೀಬಾಳ ಗಂಡ ಮಿತ್ರರಿಗೆ ತೀರ್ಪಿನ ಸುದ್ದಿ ತಿಳಿಸಿ, ನುಡಿದ :

" ಇವರ ಊರಿಂದ ಜನ ಬಂದಿದ್ದಾರೆ. ಹೋಗಲಿ, ಬಿಡು."

" ಪಾಪ! ಆದರೆ ನಾಳೆ ಗಲಾಟೆ, ಗಿಲಾಟೆ...."

" ಒಂದೂ ಇಲ್ಲ. ಎಲ್ಲ ಭಾರೀ ಖುಷೀಲಿದ್ದಾರೆ. ಇವರ ನೆನಪು ಯಾರಿಗಿರ್ತದೆ ? ಇವರನ್ನು ಬಿಟ್ಟುಬಿಡಬೇಕೂಂತ ತೀರ್ಪಾಯ್ತುಂತೆ, ಯಾರೋ ಹೇಳಿದ್ರು, ಅಂದರಾಯ್ತು."

" ಕರಕೊಂಡು ಹೋಗು. ಇಲ್ಲಿ ಬಾಗಿಲೆಳೆದುಕೊಂಡು ನಾವೂ ಬಯಲಿಗೆ ಬಂದ್ಬಿಡ್ತೇವೆ."

ಆ ದಿನ ವಿಚಾರಣೆ ಎಂಬುದನ್ನೂ ಬಟಾ ಬಂದುದನ್ನೂ ಪೂರ್ವಾಹ್ನವೇ ಔಟ ಮತ್ತು ಬೆಕ್ ಅರಿತಿದ್ದರು. ದ್ವಾರಪಾಲಕ ಬಾಗಿಲು ತೆರೆದು " ಇವನ ಹಿಂದೆ ಹೋಗಿ," ಎಂದಾಗ, 'ವಿಚಾರಣೆ ಮುಗಿಯಿತು ; ನಮ್ಮೆಲ್ಲರ ಬಿಡುಗಡೆಯಾಗಿದೆ,' ಎಂದುಕೊಂಡರು.

ಅಪರಿಚಿತ ಯೋಧನ ಹಿಂದೆ ನಡೆದು ಅವರು ಹೊಕ್ಕಿದ್ದು ಹಟ್ಟಿಯನ್ನು.

ಸಾಕಷ್ಟು ಹಾಲುಂಡು ತೃಪ್ತವಾಗಿದ್ದ ಮಗುವನ್ನೆತ್ತಿಕೊಂಡು ಶೀಬಾ ಅಲ್ಲಿ ನಿಂತಿದ್ದಳು. ಬೆಕ್ ಅವಳನ್ನು ನೋಡಿ ಹರ್ಷಿತನಾಗಿ "ತಂಗೀ!" ಎಂದು ಉದ್ಗರಿಸಿದ.

" ನಾನು ಹೊರಟೆ !" ಎಂದ, ಯೋಧ.

" ನನ್ನ ಗಂಡ," ಎಂದಳು, ಶೀಬಾ, ಬೆಕ್ ಔಟರ ಕುತೂಹಲದ ನೋಟಕ್ಕೆ ಉತ್ತರವಾಗಿ, (ಮನಸ್ಸಿನಲ್ಲಿ : "ಇವರಿಗೆ ಗೊತ್ತಾಗಿಲ್ಲ ಇನ್ನೂ.')

ಔಟ ತಿಳಿಯ ಬಯಸಿದ :

" ತೀರ್ಪು ಕೊಟ್ಟರಾ ? ಅಣ್ಣ ಎಲ್ಲಿ ? "

ಶೀಬಾ ಮಾತನಾಡಲಿಲ್ಲ. ಮಗ್ಗುಲು ಹಟ್ಟಿಗೆ ಹೋಗಿ ಮಗುವನ್ನು ಬಿಟ್ಟು ಬಂದಳು.

ಕಾತರದ ಧ್ವನಿಯಲ್ಲಿ ಔಟನೆಂದ :

" ತಂಗಿ, ನಿಜ ಸಂಗತಿ ತಿಳಿಸು."

ಒಳಗಿನ ಯಾತನೆಯನ್ನು ಹತ್ತಿಕ್ಕಿ ಶೀಬಾ ತಡೆತಡೆದು ಮಾತನಾಡಿದಳು:

" ಬಟಾ ಅಣ್ಣ ಇನ್ನೂ ನಾಯಕರನ್ನು ನೋಡಿಲ್ಲ....ನಾವು ಆಟದ ಬಯಲಿಗೆ ಹೋಗ್ಬೇಕು....ಅಲ್ಲಿಗೆ ಅವರನ್ನು ತರ್ರಾರೆ...."

" ನಾಯಕರನ್ನು ಬಯಲಿಗೆ ? "

" ಹ್ಞ. "

ಕಂಪಿಸುವ ಸ್ವರದಲ್ಲಿ ಬೆಕ್ ಅಂದ :

" ಅಲ್ಲಿಯೇ ಅಲ್ಲವಾ ವಧಸ್ಥಾನ ಇರೋದು ? "

ಉತ್ತರವೀಯುವ ಗೊಡವೆಗೆ ಹೋಗದೆ ಶೀಬಾ ನುಡಿದಳು :

" ಬಯಲಲ್ಲಿ ಕತ್ತಲೆ. ದೂರ ಇರೋಣ. ಮೆನ್ನಯ್ಯ ಬಟಾ ಅಣ್ಣನಿಗೆ ಸುದ್ದಿ ತಿಳಿಸೋದಕ್ಕೆ ಹೋಗಿದ್ದಾರೆ. ನೀವು ಅವರನ್ನು ಕಂಡು—"

ಔಟ ಅವಸರಪಡಿಸಿದ.

" ಹ್ಞ. ಹ್ಞ. ಹೋಗೋಣ."

" ಗುರುತು ಸಿಕ್ಕಿದರೆ ಅಪಾಯ. ನಾನು ಬಳಸುದಾರೀಲಿ ಕರಕೊಂಡು ಹೋಗ್ತೇನೆ. ನನ್ನ ಹಿಂದೆ ಹತ್ತು ಹತ್ತು ಮಾರು ದೂರದಲ್ಲಿ ಒಬ್ಬೊಬ್ಬ ರಾಗಿ ಬನ್ನಿ."

* * * *

ನಗರೋದ್ಯಾನದ ಮೂರು ಮೂಲೆಗಳಲ್ಲಿ, ಪ್ರವೇಶದ್ವಾರಗಳಿಂದ ದೂರ ವಾಗಿ, ಅಬ್ಟು ಯಾತ್ರಿಕರು ಮೂರು ಗುಂಪುಗಳಾಗಿ ಕುಳಿತಿದ್ದರು. ಬಟಾ ಇದ್ದ ತಾಣವನ್ನು ಮೆನ್ನ ಸಮೀಪಿಸಿದ ಮೇಲೆ ಉಳಿದವರೂ ಅಲ್ಲಿಗೆ ಬಂದರು. ಬಟಾ ಒಬ್ಬನನ್ನೇ ಮೆನ್ನ ಸ್ವಲ್ಪ ದೂರ ಕರೆದೊಯ್ದು ಎಂದು ಇತರರಿಗೆ

ಆತಂಕ. ಆದರೆ ಕೆಲವೇ ಕ್ಷಣಗಳಲ್ಲಿ ಅವರು ಮರಳಿದರು. ಬಟಾನ, ಮೆನ್ನನ ವಿವರ್ಣ ಮುಖಗಳನ್ನು ಕಂಡು ಆ ಜನರಿಗೆ ಗಾಬರಿ.

ಅಹೂರಾ ಕೇಳಿದಳು :

" ತೀರ್ಪು ಆಯ್ತಾ? ಅಣ್ಣನನ್ನು ಬಿಟ್ಟರಾ ?"

(ಮೆನ್ನನೆಂದ : " ನೀವು ಅಧೀರರಾಗಬಾರದು. ಅಧೀರರಾಗಬಾರದು. ಬಯಲಿಗೆ ಹೋಗೋಣ. ಏನಾದರೂ ಮಾಡೋಣ.')

ಬಟಾ ರಾಮೆರಿಪ್‌ಟಾನತ್ತ ಹೋಗಿ, ತನ್ನ ತೋಳಿನಿಂದ ಅವನನ್ನು ಬಳಸಿ, ಹೊರಹರಿಯಲೆತ್ನಿಸಿದ ದುಗುಡವನ್ನು ಬಲವಾಗಿ ತಡೆಹಿಡಿದು, ಮೆಲ್ಲ ಮೆಲ್ಲನೆ ಅಂದ :

" ಮೆನೆಪ್‌ಟಾ ಅಣ್ಣನನ್ನು ಅರಮನೆಯ ಆಟದ ಬಯಲಿಗೆ ಕರಕೊಂಡು ಹೋಗ್ತಾರೆ. ಅಲ್ಲಿ ಜನರ ಎದುರಲ್ಲಿ ಬಹಿರಂಗವಾಗಿ—"

(ರಾಮೆರಿಪ್‌ಟಾ ಕಣ್ಣರಳಿಸಿದ. ತನ್ನ ತಂದೆಯನ್ನು ಕಂಬಕ್ಕೆ ಬಿಗಿದು ಚಾಟಿಯಿಂದ ?....ಇತರ ಹಲವರಿಗೂ ನೀರಾನೆ ಪ್ರಾಂತದ ರಾಜಗೃಹದ ಘಟನೆಯ ನೆನಪು....)

ಬಟಾ ಅಂದ :

" ಮೆನ್ನಯ್ಯ ಹೇಳ್ತಾರೆ, ನಾವು ಅಧೀರರಾಗಬಾರದು. ಬಯಲಿಗೆ ಹೋಗೋಣ. ಏನಾದರೂ ಮಾಡೋಣ—ಅಂತ."

ಹಲವು ಸ್ವರಗಳು :

" ನಡೀರಿ ಮತ್ತೆ. ಯಾಕೆ ತಡ ? "

ಮೆನ್ನ ತಿಳಿಯಹೇಳಿದ :

" ಜನರ ಜತೆ ಸೇರ್ಕೊಂಡು ಅರಮನೆಯ ಮಹಾದ್ವಾರದ ಮೂಲಕವೇ ಒಳಗೆ ಹೋಗ್ಬೇಕು. ನೂಕು ನುಗ್ಗುಲಿನಲ್ಲಿ ಅದು ಸುರಕ್ಷಿತ. ಅಲ್ಲದೆ, ಇವತ್ತು ದೀಪಾಲಂಕಾರವಿಲ್ಲ. ಬಯಲಲ್ಲಿ ಕತ್ತಲು. ನಾವೆಲ್ಲ ಹಿಂದೆ ನಿಂತ್ಕೊಂಡು, ಯೋಚಿಸಿ ಏನಾದರೂ ತೀರ್ಮಾನಕ್ಕೆ ಬರೋಣ. ಏನಾದರೂ ಮಾಡೋಣ. ಬನ್ನಿ, ಬನ್ನಿ...."

* * * *

ಅರ್ಧವೃತ್ತಾಕಾರದ ಬಯಲು. ನೀರ ಅಂಚಿನ ಒಂದು ಮೂಲೆಯಲ್ಲಿ ಅರಮನೆ ಉಪ್ಪರಿಗೆಯು. ಇನ್ನೊಂದು ಮೂಲೆಯಲ್ಲಿ ವಧಸ್ಥಾನ. ನಾಲ್ಕು ಕಡೆಗಳಿಂದಲೂ ಮೆಟ್ಟಲುಗಳು ಮೇಲಕ್ಕೆ ಸಾಗಿದ್ದವು, ಅಗಲ ಕಿರಿದಾಗುತ್ತ. ಎರಡಾಳೆತ್ತರದಲ್ಲಿ ನಾಲ್ಕು ಜನ ನಿಲ್ಲುವಷ್ಟು ಸಮತಟ್ಟು ಸ್ಥಳ. ಅಲ್ಲಿ ಎರಡು ತುದಿಗಳಲ್ಲಿ ಕಲ್ಲನ್ನು ಎತ್ತರಿಸಿ ಅಡ್ಡವಾಗಿ ಮರದ ದಿಮ್ಮಿ ಇರಿಸಿದ್ದರು, ಉಪ್ಪರಿಗೆಗೆ ಮುಖಮಾಡಿ.

ವಧಸ್ಥಾನದ ಬಳಿ ನೂರಾರು ಪಂಜುಗಳು ಉರಿಯುತ್ತಿದ್ದುವು. ಉಪ್ಪರಿಗೆಯ ಬಳಿಯಲ್ಲೂ ಬೆಳಕು. ನೀರ ಅಂಚಿನುದ್ದಕ್ಕೂ ಯೋಧರ ಸಾಲು. ಹೊಳೆಯುವ ಈಟಿಗಳು. ಇವರೆಲ್ಲ ಸೈನ್ಯ ಗಡಿಯಿಂದ ಬಂದವರು. ಅರಮನೆಯ ಕಾವಲು ಭಟರೂ ಅಲ್ಲಿದ್ದರು. ಬಯಲಿನಲ್ಲಿ ಸಹಸ್ರ ಸಂಖ್ಯೆಯನ್ನೂ ಮೀರಿ ನೆರೆಯತೊಡಗಿದ್ದ ಜನರೆಡೆಗೆ ಅವರು ಕೂಗಿ ನುಡಿಯುತ್ತಿದ್ದರು :

"ಸದ್ದು ಮಾಡ್ಬೇಡಿ ! ಪೆರೋ ಬರುವ ಹೊತ್ತಾಯ್ತು !"

ವ್ಯೂಹ ರಚನೆ ಬಕಿಲನದು. ಟೊಂಕದಲ್ಲಿ ಕಠಾರಿ ತೂಗಹಾಕಿ, ಕೈಯಲ್ಲಿ ಈಟಿ ಹಿಡಿದು, ಆತ ಅತ್ತ ಇತ್ತ ನಡೆಯುತ್ತಿದ್ದ. ಅವನ ಏಕ ದೃಷ್ಟಿ ಬಯಲಿನ ಪ್ರವೇಶದ್ವಾರದ ಮೇಲೆ ನೆಟ್ಟಿತು. ಕಳೆದು ಹೋದ ಕಣ್ಣಿನ ಕೆಳಭಾಗದ ಕೆನ್ನೆ ಒಂದೇ ಸಮನೆ ಕಿವಿಚುತ್ತಿತ್ತು.

(ದಂಡಿನ ನಾಲ್ವರು 'ಐವತ್ತರ ಶ್ರೇಷ್ಠ'ರಿಗೆ ಕೋಪ—ಇದ್ದಕ್ಕಿದ್ದಂತೆ ಬಕಿಲನನ್ನು ತಮ್ಮ ಮೇಲಣ ಅಧಿಕಾರಿಯಾಗಿ ಮಾಡಿದರಲ್ಲ ಎಂದು. ಇವತ್ತಿನ ಮಟ್ಟಿಗಷ್ಟೇ ಇದ್ದೀತು ಎಂಬ ಭಾವನೆ. ಅದರಿಂದ ಒಂದಿಷ್ಟು ಸಮಾಧಾನ. 'ನೀರಾನೆ ಪ್ರಾಂತಕ್ಕೆ ಹೋಗಿ ಕಣ್ಣು ಕಳಕೊಂಡು ಬಂದವನು. ಇದೊಂದು ಗೌರವ ಅಂತ ಹೀಗೆ ಮಾಡಿದ್ದಾರೆ.' ಮೂರನೆಯ ದಿನ ದಂಡಯಾತ್ರೆ. ಇವತ್ತು ಪೂರ್ತಿ ವಿರಾಮ ದೊರೆಯಬೇಕಿತ್ತು. ಬಂಡಾಯಗಾರ ನಾಯಕನ ಶಿರಚ್ಛೇದನ ಅಂತ ಈ ಹೆಚ್ಚಿನ ಕೆಲಸ.')

ಬಯಲಿನ ವರ್ತುಲ ಅಂಚಿನಲ್ಲಿ ದೂರ ನಿಂತರು ಅಬ್ಬು ಯಾತ್ರಿಕರು. ಬಕಿಲನನ್ನು ಮೊದಲು ಗುರುತಿಸಿದವರು ರಾಮೆರಿಪ್‌ಟಾ, ಬಟಾ ಮತ್ತು ಮೆನ್ನ. ಮುಂದೆ ಉಳಿದವರೂ "ಹೌದು, ಅವನೇ," ಎಂದರು.

ರಾಮೆರಿಪ್‌ಟಾ ಅಂದುಕೊಂಡ : 'ಇಲ್ಲಿ ಕಂಬ ಇಲ್ಲ. ಎಲ್ಲಿ ನಿಲ್ಲಿಸ್ತಾರೆ ತಂದೇನ? ಆ ಕಟ್ಟೆಯ ಮೇಲೆ? ದಿಮ್ಮಿ? ವಿಚಿತ್ರವಾಗಿದೆಯಲ್ಲ?'

ಬಟಾನ ಹತ್ತಿರ ಬಂದು ಅಹೂರಾ ಕಾತರಳಾಗಿ ಅಂದಳು :

"ಅಣ್ಣ ! ಇದು ವಧಸ್ಥಾನ !"

"ಹೌದು ಅಹೂರಾ."

—ಗವಿಯಿಂದ ಬಂದ ಭಾರವಾದ ಸ್ವರ.

(ರಾಮೆರಿಪ್‌ಟಾಗೆ ಅರ್ಥವಾಯಿತು. ಒಂದು ವರ್ಷದ ಹಿಂದೆ ಈಸಲು ಹೋಗಿದ್ದಾಗ ನದಿಯ ಸುಳಿ ಅವನನ್ನು ಒಳಕ್ಕೆ ಎಳೆಯಿತು. ಈಗ ಅದೇ ಭಾವನೆ. ಅವನು ತಲೆ ಎತ್ತಿ ಬಟಾ, ಮೆನ್ನ, ಅಹೂರಾರ ಮುಖಗಳನ್ನು ನೋಡಿದ.)

ಗದ್ಗದಿತಳಾಗಿ ಅಹೂರಾ ಕೇಳಿದಳು ;

"ಅಣ್ಣ, ಏನು ಮಾಡೋಣ ಈಗ? ಏನು ಮಾಡೋಣ?"

ಚೀರುವ ಮೆದುಳು. ಬವಳಿ. ಬಟಾನ ಒಳಗಿಂದ ಪ್ರಶ್ನೆ ತುಡಿಯುತ್ತಿತ್ತು :

'ಏನು ಮಾಡ್ಲಿ ? ನಾನೇನು ಮಾಡ್ಲಿ ?'

ಅಷ್ಟರಲ್ಲೇ ಬಯಲಿನಾಚೆಗಿನ ಕತ್ತಲಿನಿಂದ ಮೂರು ನಡುವಸ್ತ್ರಗಳ ಮಸುಕು ಬಿಳಿ ಕಾಣಿಸಿತು. ಹತ್ತಿರ ಬರತೊಡಗಿದ ವ್ಯಕ್ತಿಗಳು.

ದಟ್ಟ ಕತ್ತಲೆಯಲ್ಲಿ ಒಂದೆರಡು ನಕ್ಷತ್ರ? ಅರ್ಥವಿಲ್ಲದಿದ್ದರೂ ಆಸೆ ಆಸೆಯೇ. ಮೆನ್ನ ಅಂದ :

"ಔಟ, ಬೆಕ್. ಶೀಬಾ ಪಾರುಮಾಡಿಸಿ ಇಲ್ಲಿಗೆ ಕರೆತಂದಿದ್ದಾಳೆ...."

ಬಟಾ, ಅಹೂರಾ ಮತ್ತಿತರರು ಬೆಳಕಿಗೆ ಬೆನ್ನು ಮಾಡಿ ಬಂದವರನ್ನು ಇದಿರ್ಗೊಂಡರು.

ಬಿಕ್ಕುತ್ತ ಔಟನೆಂದ :

"ನಾಯಕರ ರಕ್ಷಣೆ ನಮ್ಮಿಂದಾಗಲಿಲ್ಲ, ಬಟಾ ಅಣ್ಣ. ನಾಯಕರಿಗೆ ಏನಾದರೂ ಆದರೆ ನಾವು ನಮ್ಮ ಕೈಯಿಂದಲೇ ಪ್ರಾಣ ತಗೊಳ್ತೇವೆ."

(ಕತ್ತಲಲ್ಲಿ, ಅಹೂರಾಳ ಕಂಕುಳಲ್ಲಿದ್ದ ಮಗುವನ್ನೂ ರಾಮೆರಿಪ್‌ಟಾನನ್ನೂ ನೋಡುತ್ತ ನಿಂತಳು, ತಾಯಿ ಶೀಬಾ.)

ಬೆಕ್ ಉಮ್ಮಳವನ್ನು ಹತ್ತಿಕ್ಕುತ್ತ ಅಂದ :

"ಬಟಾ ಅಣ್ಣ, ಈಗ ನೀವೇ ಮುಖಂಡರು. ಹೇಳಿ, ಕೊಲ್ಲು ಅಂದರೆ ಕೊಲ್ತೇನೆ. ಸಾಯು ಅಂದರೆ ಸಾಯ್ತೇನೆ."

"ನಾನೆಂಥ ಮುಖಂಡ ? ಅಯ್ಯೋ....," ಎಂದ ಬಟಾ.

ಮೆನ್ನನ ಯೋಚನೆಗಳು ಧ್ವನಿಸಿಪಡೆದುವು.

"ಅವರದು ಸಂಘಟಿತ ಶಸ್ತ್ರಬಲ. ಆ ಬಲಕ್ಕಿದಿರು ನಾವು ನಾಲ್ವತ್ತು ಜನ. ಬಹುಮಟ್ಟಿಗೆ ನಿರಾಯುಧರು. ಈ ಜನಸಮೂಹದಲ್ಲಿ ನಮ್ಮ ಮಿತ್ರರೇನೋ ಕೆಲವರಿದ್ದಾರೆ. ಹೆಚ್ಚೆಂದರೆ ಅವರು ಸಹಾನುಭೂತಿ ತೋರಿಸಬಹುದು. ಉಳಿದವರಲ್ಲಿ ಕೆಲವರು ಪೆರೋ ಕಾಣಿಸಿದೊಡನೆ ಮಂಡಿಯೂರ್ತಾರೆ. ಬೇರೆ ಸ್ವಲ್ಪ ಜನ ಕ್ರೂರ ವಿನೋದ ನೋಡೋದಕ್ಕೇಂತ ಬಂದವರು; ಬೇಕಿದ್ದರೆ ನಮ್ಮನ್ನು ಹಿಡಿದು ಯೋಧರ ಕೈಗೆ ಒಪ್ಪಿಸೋದಕ್ಕೂ ಅವರು ಸಿದ್ಧ."

ಬಟಾ ಅಂದುಕೊಂಡ :

"ಖ್ನೆಮ್‌ಹೊಟೆಪ್ ಇರಬೇಕಾಗಿತ್ತು ಈಗ. ತಪ್ಪಾಯಿತು. ಎಲ್ಲ ತಪ್ಪಾಯಿತು. ಮೆನೆಪ್‌ಟಾ ಅಣ್ಣ ನಿನ್ನೆ ರಾತ್ರೆ ತಪ್ಪಿಸಿಕೊಳ್ಳಲು ಒಪ್ಪಿದ್ದರೆ...."

ಮೆನ್ನನೆಂದ :

"ವಿಚಾರಣೆಯಾದದ್ದು ನಾಯಕರದಲ್ಲ ; ಪೆರೋ–ಮಹಾಅರ್ಚಕ–ಅಮಾತ್ಯರದು. ತೀರ್ಪು ಕೊಟ್ಟದ್ದು ಮೆನೆಪ್‌ಟಾ ಅಣ್ಣ, ಅವರಲ್ಲ...."

ಬಟಾ "ಬಂದರು" ಎಂದ.

ಮೆನ್ನನ ಮಾತು ಅರ್ಧಕ್ಕೇ ನಿಂತಿತು.

ನೀರವತೆ. ಪಂಜುಗಳು ಮತ್ತು ಯೋಧರು. ನಡುವೆ ಮೆನೆಪ್‌ಟಾ ತೋಳುಗಳಿಗೆ ಬಿಗಿದ ಹಗ್ಗ ಹಾಗೆಯೇ ಇತ್ತು. ಎತ್ತಿದ ತಲೆ. ನೇರ ನೋಟ. ಶಾಂತ ಮುಖಮುದ್ರೆ. ಅವಸರವಿಲ್ಲದ ಲಯಬದ್ಧ ಹೆಜ್ಜೆಗಳು. ವಧಸ್ಥಾನದತ್ತ ನಡಿಗೆ.

"ಅಗೋ ಮಾವ," ಎಂದಳು ಅಹೂರ ತನ್ನ ಮಗುವಿಗೆ.

ಆ ಮಗುವಿಗೆ ಅವ್ಯಕ್ತ ಭೀತಿ. ಅದು ಚಿಟ್ಟನೆ ಚೀರಿತು. ಜನಸಮುದಾಯದ ಮೌನದ ಕಟ್ಟೆಯೂ ಒಡೆಯಿತು.

ರಾಮೆರಿಸ್‌ಟಾ ತುಟಿ ಎರಡು ಮಾಡದೆ, ಕಣ್ಣೀರ ನೆಗಳನ್ನು ತೋರಿಸದೆ ರೋದಿಸಿದ :

"ಅಪ್ಪಾ, ಅಪ್ಪಾ, ಅಪ್ಪಾ...."

ಬಟಾ ಕಣ್ಣುಗಳನ್ನು ಮುಚ್ಚಿಕೊಂಡು ಗಂಟಲಿನಿಂದ ಗೊಗ್ಗರ ಧ್ವನಿ ಹೊರಡಿಸಿದ.

ಬಿಕ್ಕುತ್ತ, ಎವೆ ಇಕ್ಕದೆ, ಔಟ ಮತ್ತು ಬೆಕ್ ನೋಡಿದರು. ಅವರ ತುಟಿಗಳು ಒಂದೇ ಸಮನೆ ಅದುರಿದುವು.

ಶೀಬಾ ಚಿಂತಿಸಿದಳು. ನೇರ ಗೆರೆಯಲ್ಲೇನೋ ದೂರದಲ್ಲಿ ಅವಳ ಗಂಡ ನಿದ್ದ. ಜನರನ್ನು ತಿವಿಯಲಾರ, ಕೊಲ್ಲಲಾರ. ಈ ಪರಿಸ್ಥಿತಿಯಲ್ಲಿ ಬೇರೆ ಯಾವ ನೆರವು ಅವನಿಂದ ಸಾಧ್ಯ ?

ಕಟ್ಟೆಯ ಪೂರ್ವಭಾಗದಿಂದ ಇಬ್ಬರು ದೀವಟಿಗೆಯ ಭಟರು ಮೆಟ್ಟಲು ಗಳನ್ನೇರಿದರು. ಒಂದು ಹೆಜ್ಜೆ ಕೆಳಗಿಂದ ಅವರ ನಡುವೆ, ಮೆನೆಪ್‌ಟಾ.

(ಮೆನ್ನ : 'ಉದಿಸುತ್ತಿರುವ ರಾ— ಎದುರಿಗೆ ಸೆತ್ ಆರಾಧಕರು.'

ಶೀಬಾ : 'ಇವನು ಮನುಷ್ಯನಲ್ಲ, ದೇವರು.'

ಅಹೂರಾ : 'ಒಸ್ಸೆರಿಸ್, ನಮ್ಮ ಒಸ್ಸೆರಿಸ್.')

ಮೆನೆಪ್‌ಟಾನ ಬಳಿಕ ಹಗ್ಗ ಹಿಡಿದವರು, ಎರಡು ಪಕ್ಕಗಳಲ್ಲಿ. ನಾಲ್ಕು ಕಡೆ ಪ್ರತಿಯೊಂದು ಮೆಟ್ಟಲಿನ ಮೇಲೂ ಯೋಧ ವ್ಯೂಹ.

ಸಮತಟ್ಟು ಸ್ಥಲದ ಮೇಲೆ ದೀವಟಿಗೆಗಳ ಬೆಳಕಿನಲ್ಲಿ ಮೆನೆಪ್‌ಟಾ ನಿಂತ. ಅವನ ದೃಷ್ಟಿ ಎದುರು ದಿಕ್ಕಿನತ್ತ ಹರಿಯಿತು. ಬರಿದಾದ ಉಪ್ಪರಿಗೆಯ ಮುಖ ಮಂಟಪ. ಕಿಟಕಿಗಳಲ್ಲಷ್ಟೇ ಹಲವು ಹಲವು ತಲೆಗಳು. ಕೆಳಗೆ ಹೊಳೆಯುವ ಈಟಿಮೊನೆಗಳು, ಯೋಧಗಣ, ಇತ್ತ ಜನ ಜಂಗುಳಿ.

ಮೆನೆಪ್‌ಟಾನ ದೃಷ್ಟಿ ಮಬ್ಬು ಬೆಳಕನ್ನು ದಾಟುತ್ತ, ಕತ್ತಲನ್ನು ಇರಿ ಯುತ್ತ, ಜನರ ನಡುವೆ ಅಲೆಯಿತು. ಬಕಿಲನನ್ನು ಆಗಲೇ ಆತ ಕಂಡಿದ್ದ. ಒಂದು ದನಿ ಮೆಲ್ಲನೆ ಒಳಗಿನಿಂದ ಹೇಳುತ್ತಿತ್ತು : 'ಎಚ್ಚರ! ಎಚ್ಚರ! ಬಾಂಧವರು ಯಾರು ಕಣ್ಣಿಗೆ ಬಿದ್ದರೂ ಗುರುತು ಸಿಕ್ಕಿತೆಂದು ತೋರಿಸಿಕೊಳ್ಳ ಬೇಡ! ಅವರಿಗೆ ಅಪಾಯ! ಅವರಿಗೆ ಅಪಾಯ!'

ಇರುಳು....ಬಯಲಿಗೆ ಬಂದಿರ್ತಾರೆ....ತನಗೆ ಕಾಣಿಸುತ್ತಿಲ್ಲ.

ಬಟಾನಿಗೆ ಅನಿಸಿತು—'ಅಣ್ಣ ಹುಡುಕುತ್ತಿದ್ದಾನೆ. ತುಸು ಮುಂದಕ್ಕೆ ಸರಿಯಬೇಕು ನಾವು.'

ಒಬ್ಬರಿಗೊಬ್ಬರು ತಿಳಿಸದೆಯೇ ಅಬ್ಬು ಯಾತ್ರಿಕರು ಜನರೊಡನೆ ಬೆರೆಯುತ್ತ ಯೋಧರ ಇತ್ತಣ ಸಾಲಿನತ್ತ ಒತ್ತರಿಸಿದರು.

ರಾಮೆರಿಪ್‌ಟಾಗೆ ಆತಂಕ: ತಾನು ಚಿಕ್ಕವನು. ಅಪ್ಪನಿಗೆ ಕಾಣಿಸದೇ ಹೋದರೆ ? ಆ ಕ್ಷಣವೇ ಬಟಾನಿಗೂ ಆ ವಿಷಯ ಹೊಳೆಯಿತು. ಆತ ಬಗ್ಗಿ ಕುಳಿತು, ರಾಮೆರಿಯನ್ನು ಭುಜದ ಮೇಲೆ ಕೂಡಿಸಿಕೊಂಡು ಎದ್ದು ನಿಂತ.

—'ರಾಮೆರಿ!'

ಮೆನೆಪ್‌ಟಾಗೆ ಗುಂಡಿಗೆಯ ತೀವ್ರ ಬಡಿತ. ಕರೆಯಲಾರ. ಕೂಗಿ ಕರೆಯಲಾರ.

—'ಬಟಾ, ನನ್ನ ಬಟಾ....'

—'ಓ ಔಟ! ಬೆಕ್! ಇಬ್ಬರೂ ಪಾರಾಗಿದ್ದಾರೆ."

—'ಮಹಾತಾಯಿ ಶೀಬಾ!'

—'ಸೋದರಿ ಅಹೂರಾ—ಮಗು ?....'

—'ದಿವ್ಯ ಜೀವ ಮೆನ್ನ....'

—'ಅವರು—ಅವರೆಲ್ಲ....ನನ್ನ ಬಂಧುಗಳು!'

ಜಿನುಗಿ ಕಪೋಲಗಳನ್ನು ಒದ್ದೆಗೊಳಿಸಿದ ಹರ್ಷಾಶ್ರು ಬಿಂದುಗಳು....

ಉಪ್ಪರಿಗೆಗೆ ಜನ ಬಂದರು. ಪ್ರತಿಷ್ಠಿತರು.

ಅವರ ಗಂಟಲಿನಿಂದ:

"ಪೆರೋನ ಆಯುರಾರೋಗ್ಯ ವರ್ಧಿಸಲಿ!"

ಆಗಮನ: ಮಹಾಪ್ರಭು, ಮಹಾರಾಣಿ (ಕೇಶಕವಚಗಳು, ಕಿರೀಟಗಳು,) ಮಹಾ ಅರ್ಚಕ, ಅಮಾತ್ಯ....

ಬಟಾ ಗೊಣಗಿದ:

"ಏನು ಮಾಡೋಣ? ಏನ್ಮಾಡೋಣ ಈಗ?"

ಬೆಕ್ ಬಟಾನನ್ನು ಕೇಳಿದ:

"ಕಠಾಗೆ ಇದೆಯಾ?"

ಬಟಾ ಸಡಿಲವಸ್ತ್ರವನ್ನು ಮುಟ್ಟಿ ತೋರಿಸಿದ.

" ಬಾಕು. "

ಬೆಕ್ ಅದನ್ನೆತ್ತಿಕೊಂಡ....

(ಅಲ್ಲಿ ಪೆರೋ, ಮಹಾ ಅರ್ಚಕ, ಅಮಾತ್ಯ—ಏನು ಮಾಡಬೇಕು ತಾನು ? ಎಸೆದರೆ ಆ ದೂರವನ್ನು ಸೇರದು )

ವಧಸ್ಥಾನದಲ್ಲಿ ಮೆಟ್ಟಲುಗಳ ಮೇಲಿನ ಯೋಧರು ದಾರಿ ಬಿಟ್ಟರು. ಸ್ಥೂಲ ಶರೀರದ ಹಂತಕ ಗಾತ್ರದ ತನ್ನ ಕತ್ತಿಯೊಡನೆ ಮೇಲಕ್ಕೆ ಬಂದ. ಉಪ್ಪರಿಗೆಯತ್ತ ನೋಡಿ ನಮಿಸಿದ. ( ಈ ಹಂತಕ ಅರಮನೆಯವನು. ಕಸಾಯಿ ವೃತ್ತಿಯವನು. ಪರಿಚಾರಕರು ಬಲ್ಲರು. ರಾಜಧಾನಿಯ ಜನ ಬಲ್ಲರು. ಆ ದಿನವಷ್ಟೇ ಹರಿತಗೊಳಿಸಿದ್ದ ಕತ್ತಿ.)

ಬಕಿಲನ ಗಮನ ಉಪ್ಪರಿಗೆಯತ್ತ.

ಕತ್ತಲಿನೊಡನೆ ಬೆರೆತು ಘನೀಭವಿಸಿದ ನೀರವತೆ.

ಮೆನೆಪ್‌ಟಾ ಈಗ ಮನೋವಿಹಾರಿ. ನೀರಾನೆ ಪ್ರಾಂತದ ಮುಖ್ಯ ಪಟ್ಟಣದ ತನ್ನ ಮನೆಯಲ್ಲಿ, ಮಡದಿ ನೆಫಿಸಳ ಬಳಿ ; ರಾಜಗೃಹದಲ್ಲಿ. ಹಿರಿಯರ ಸಮಿತಿ ಸಭೆಯಲ್ಲಿ.

—'ಬಟಾ ಆ ಹಾಡು ಬಾರಿಸು....

ನನ್ನ ನಲ್ಲೆಯು ಒಲವು ನಲಿದಿದೆ ನದಿಯ ತಟದಲ್ಲಿ

'ಕ್ರೂರ ; ಮೊಸಳೆಯು ಅವಿತು ಕುಳಿತಿದೆ ನೆರಳ ಮರೆಯಲ್ಲಿ'

—'ನೆಫಿಸ್ ಬೇಯಿಸಿ ಮಾಡಿದ ಮೀನಿನ ಉಪ್ಪೇರಿ ಬಹಳ ಇಷ್ಟ.'

—'ರಾಮೆರಿ, ತಾಯಿ ಹತ್ತಿರವೇ ಇರು. ಹೆತ್ತ ತಾಯಿ ನಿನಗಾಗಿ ಏನೇನು ಮಾಡಿರುವಳೆಂಬುದನ್ನು ಮರೆಯಬೇಡ.'

—'ದೋಣಿಕಟ್ಟೆಯಲ್ಲಿ ಖ್ನೆಮ್‌ಹೊಟೆಪ್ ಅಂದ : ಅಣ್ಣ ಏನಾದರೂ ಹೇಳಿ.. ನಾನೆಂದೆ : ನಾನು ಮೆಂಫಿಸಿಗೆ ಹೋಗಿ ಬರ್ತೇನೆ."

—'ಬಟಾ ನೀನು ಕೇಳ್ದೆ : ನಿನಗೆ ಸಮೀಪವಾಗಿದವನಾಗಿ ನಾನು ದೊಡ್ಡವ ಅನಿಸಿಕೊಂಡಿಲ್ವಾ?........ಇಲ್ಲ ಬಟಾ, ನೀವೆಲ್ಲ ನನಗೆ ಸಮೀಪದವರಾದ್ದರಿಂದಲೇ ನಾನು ದೊಡ್ಡವ ಅನಿಸಿಕೊಂಡೆ.'

—'ದೇಶಕ್ಕೆ ಪಾಪ ಒಡೆದಿದೆ. ನಾ ಬಾಗಿರುವೆ........ಮೆನ್ನ,

ಓ ಮೆನ್ನ....'

—'ಅಬ್ಬು ಯಾತ್ರೆಯಿಂದ ಮರಳುತ್ತ ದೋಣಿಯಲ್ಲಿ ಕಂಡ ಕನಸು : ಬಿಳಿ ಮೋಡಗಳ ಮೇಲೆ ತಾನು ಮಲಗಿದ್ದೆ. ಜೋಗುಳ ನುಡಿಯ ಆಲಾಪನೆ ಸ್ತ್ರೀಕಂಠದಿಂದ ಕೇಳಿಬರುತ್ತಿತ್ತು. ಓ ಒಸೈರಿಸ್. ಓ ಒಸೈರಿಸ್.'

" ಮಂಡಿಯೂರಿ ಕೂತ್ಕೊಳ್ಳಿ. ದಿಮ್ಮಿಯ ಮೇಲೆ ತಲೆ ಇಡಿ," ಎಂದ ಹಂತಕ, ಮೆಲ್ಲನೆ.

ಮೆನೆಪ್‌ಟಾ ಜನರತ್ತ ನೋಡಿದ. ಇನ್ನೊಮ್ಮೆ ತನ್ನವರನ್ನು ದಿಟ್ಟಿಸುವ ತವಕ. ಇಲ್ಲವಲ್ಲ ? ಏನೂ ಕಾಣಿಸುತ್ತಿಲ್ಲವಲ್ಲ ?

ಕಾಣಿಸದೆ ಏನು ? ಈ ಸಮುದಾಯದ ಬಹು ಜನ ತನ್ನವರೇ ಅಲ್ಲವೆ ? ಮೆನೆಪ್‌ಟಾ ಅವರಿಗೆ ಬಾಗಿ ವಂದಿಸಿದ.

ಉಪ್ಪರಿಗೆಯತ್ತ ಹೊರಳಿ, ಕಟ್ಟೆಯ ಮೇಲೆ ಮಂಡಿಯೂರಿ ಕತ್ತನ್ನು ದಿಮ್ಮಿಯ ಮೇಲಿರಿಸಿದ.

ಸೆತ್ ಒಸೈರಿಸನನ್ನು ಕೊಂದು ಅದೆಷ್ಟು ಹೋಳು ಮಾಡಿದ ? ಹದಿ ನಾಲ್ಕು ?

" ಒಂದು, ಎರಡು, ಮೂರು, ನಾಲ್ಕು.'

(ಬೆಕ್‌ಗೆ ಕಸಿವಿಸಿ. ಬಾಕು ಕೈಯಲ್ಲಿದೆ. ಎಲ್ಲಿಗೆ ಎಸೆಯಲಿ ? ಇನ್ನೂ ಮುಂದೆ ಹೋಗಬೇಕು—ಮುಂದೆ....)

ಉಪ್ಪರಿಗೆಯಿಂದ ಕೈ ತಟ್ಟಿದ ಸದ್ದು. " ಬಕಿಲ ! " ಟಿಹುಟಿಯ ಧ್ವನಿ, ಎತ್ತರದ ಬಂಡೆಯಿಂದ ನೀಲನದಿಯ ಆಳಕ್ಕೆ ಧುಮುಕಿದಾಗ ಉಂಟಾಗುವ ಸಪ್ಪಳದಂತೆ ಕೆಳಕ್ಕೆ ಅಪ್ಪಳಿಸಿದ ಕರೆ.

(ಬಕಿಲ ಈಟಿಯನ್ನು ಮೇಲಕ್ಕೆತ್ತಿದ. ನಿರ್ದೇಶಕ. ಬಾಕು ಧಾವಿಸಿ ಹಂತಕನ ಪಾದವನ್ನು ಮುಟ್ಟಿತು.)

" ಆಯ್ ! "

ಇನ್ನೊಮ್ಮೆ ಎಣಿಸಬೇಕು....ಒಂದು, ಎರಡು, ಮೂರು, ನಾಲ್ಕು, ಐದು....'ಆಯಿತೆ ?'

ಹಂತಕ ಎತ್ತಿದ್ದ ಕತ್ತಿ ಸರಕ್ಕನೆ ಕೆಳಕ್ಕೆ ಬಂತು.

'ಆಯಿತು'........

ರುಂಡ ಮುಂಡದಿಂದ ಬೇರ್ಪಟ್ಟಿತು.

ಮಂಜು ಕವಿದ ಸಹಸ್ರ ಕಣ್ಣುಗಳು ; ಸಿಡಿದೆದ್ದ ಸಂಕಟ....

ಜನಸಮೂಹದಿಂದ ಗಗನಕ್ಕೇರಿತು ರೋದನ.

ಘೋಷ :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

ಧ್ವನಿಸಿ, ಪ್ರತಿಧ್ವನಿಸಿತು :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

" ಹೊಡೆದಟ್ಟಿ ಹೊರಕ್ಕೆ ! " ಎಂದು ಯೋಧರಿಗೆ ಬಕಿಲ ಆರಚಿ ಹೇಳುತ್ತಿದ್ದಂತೆ, ಉಪ್ಪರಿಗೆಯಲ್ಲಿ ಪೆರೋನ ಮುಂದೆ ನಿಂತು ಆಮಾತ್ಯ ನುಡಿದ :

" ಓ ಪೆರೋ ! ವೈರಿ ಹತನಾಗಿದ್ದಾನೆ ; ನ್ಯಾಯ ನಿನ್ನೆದುರು ಸುಭದ್ರವಾಗಿ ನಿಂತಿದೆ."

ಉಪ್ಪರಿಗೆಯ ಮೇಲಿದ್ದವರು ಜಯಕಾರ ಮಾಡಿದರು :

" ಓ ಪೆರೋ ! ಓ ಪೆರೋ ! "

" ಓ ದೇವರೂಪ ! ಓ ದೇವರೂಪ !"

ಯೋಧರು ಜನರ ಮೇಲೆ ಬಿದ್ದರು.

ಬಯಲಿನಿಂದ ಘೋಷ :

" ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

(ಮೆನ್ನ ಬಟಾನಿಗೆಂದ : " ಓಡೋಣ—ಓಡೋಣ—ಉದ್ಯಾನದಲ್ಲಿ ಸೇರೋಣ.")

ಯೋಧರು ಈಟಿಗಳಿಂದ ಚುಚ್ಚಿದರೆಂದು ಎದುರು ಇದ್ದವರು ಚೀರಿದರು. ಚೀರುತ್ತ ಓಡಿದರು. ನೂಕುನುಗ್ಗಲಲ್ಲಿ ಕೆಲವರು ಬಿದ್ದರು. ಉಳಿದವರು ಅವರನ್ನು ತುಳಿದು ತಮ್ಮ ಜೀವದ ರಕ್ಷಣೆಗಾಗಿ ಪಲಾಯನ ಮಾಡಿದರು.

ಅಮಾತ್ಯನ ಅನುಜ್ಞೆಯನ್ನು ಟೆಹುಟಿ ಬಕಿಲನಿಗೆ ತಿಳಿಸಿದ.

" ಅರಮನೆಯ ಪ್ರವೇಶದ್ವಾರದ ಬಳಿ ಪ್ರಾಕಾರದ ಮೇಲಿನಿಂದ ತೂಗ ಹಾಕು."

ಮೆನೆಪ್‌ಟಾನ ದೇಹಾಂತವಾದೊಡನೆಯೇ ಮಹಾ ಅರ್ಚಕ ಉಪ್ಪರಿಗೆ

ಯಿಂದ ಕೆಳಕ್ಕಿಳಿದ. ವೈರಿ ಹತನಾಗಿ ನ್ಯಾಯ ಸುಭದ್ರವಾಗಿ ನಿಂತಿದೆ ಎಂದು ಅಮಾತ್ಯ ವಿಧ್ಯುಕ್ತನಾಗಿ ತಿಳಿಸಿದ ಮೇಲೆ ಅರಸನೂ ಅರಸಿಯೂ ಕೆಳಕ್ಕಿಳಿದರು. ಅವರನ್ನು ಅಮಾತ್ಯ ಹಿಂಬಾಲಿಸಿದ. ಅವನ ಹಿಂದಿನಿಂದ ಇತರರು ಬಂದರು.

ಆದರೆ, ಜನರನ್ನು ಚೆದರಿಸುವ ಕೆಲಸ ಇನ್ನೂ ನಡೆದಿತ್ತು. ತಮ್ಮ ತಮ್ಮ ನಿವಾಸಗಳಿಗೆ ತೆರಳಬೇಕಾಗಿದ್ದವರು, ಮಹಾದ್ವಾರದ ಮೂಲಕ ಪಲ್ಲಕ್ಕಿಗಳು ಹಾದು ಹೋಗಲು ಅವಕಾಶವಿಲ್ಲದೆ ಸ್ವಲ್ಪ ಹೊತ್ತು ಕಾಯಬೇಕಾಯಿತು.

ಹಂತಕನ ಪಾದಕ್ಕೆ ಆಗಿದ್ದುದು ಗೀರು ಗಾಯ ಮಾತ್ರ. ಟಣ್ಣನೆ ಕೆಳಕ್ಕೆ ಬಿದ್ದ ಬಾಕುವನ್ನು ಒಬ್ಬ ಯೋಧ ಎತ್ತಿಕೊಂಡು ತನ್ನ ನಡುವಸ್ತ್ರದೊಳಕ್ಕೆ ಸೇರಿಸಿದ್ದ.

ಮೆನೆಪ್‌ಟಾನ ರುಂಡ ಮುಂಡಗಳನ್ನು ಯೋಧರು ಕಟ್ಟೆಯಿಂದ ಕೆಳಕ್ಕೆ ಎಳೆದರು.

ಹಂತಕ ಇಳಿದು ಬಂದು ಬಕಿಲನೊಡನೆ ದೂರಿದ:

"ಯಾರೋ ನನ್ನ ಕಡೆಗೆ ಏನೋ ಎಸೆದರಲ್ಲ ?"

ಬಕಿಲನೆಂದ:

"ನಿನ್ನ ಕಡೆಗೆ? ಛೆ! ಛೆ! ಆ ನೀರಾನೆಗೆ ತಗಲ್ಬೇಕೂಂತ ಯಾರಾದರೂ ಏನಾದರೂ ಎಸೆದಿರಬಹುದು. ಹೋಗು ಮನೆಗೆ."

೧೩.

ಅರಮನೆಯ ಆರಾಳು ಎತ್ತರದ ಪ್ರವೇಶ ಗೋಪುರದ ಮಧ್ಯದಲ್ಲಿ, ಅಂಚುಗಳಲ್ಲ, ಮರದ ತೊಲೆ ಎಡಬಲಗಳಿಗೆ ಎರಡೆರಡು ಮೊಳ ಚಾಚಿತ್ತು. ಬಲಗಡೆ ಆ ತೊಲೆಗೆ ಹುರಿಮಾಡಿದ ಸೆಣಬಿನ ಹಗ್ಗವನ್ನು ಬಿಗಿದಿದ್ದರು. ಮಾರುದ್ದದ ಆ ಹಗ್ಗದ ಇನ್ನೊಂದು ತುದಿ ಮೆನೆಪ್‌ಟಾನ ಶಿರಸ್ಸಿಲ್ಲದ ಶವದ ಪಾದಗಳಿಗೆ ಕುಣಿಕೆಯಾಗಿತ್ತು. ತೂಗಾಡುತ್ತಿದ್ದ ಶವ. ತೋಳುಗಳು ಅಡ್ಡಾ

ದಿಡ್ಡಿಯಾಗಿ ಹರಡಿದ್ದುವು. ತೊಲೆಗೆ ಕಟ್ಟಿದ್ದ ನೀಳ ಹಗ್ಗದ ತುದಿಯಿಂದ ತುಣುಕು ಬಲೆಯಲ್ಲಿ ಸುತ್ತಿದ್ದ ರುಂಡ ತೂಗುತ್ತಿತ್ತು. ಮುಖವನ್ನು ಮರೆ ಮಾಡಿತ್ತು ಕೆದರಿದ ತಲೆಗೂದಲು.

ಅದು ಸೆಡ್ ಉತ್ಸವದ ಮಾರನೆಯ ರಾತ್ರಿ. ಪ್ರವೇಶ ಗೋಪುರಕ್ಕೆ ವಿಶೇಷ ದೀಪಾಲಂಕಾರವಿರಲಿಲ್ಲ. ಎಂದಿನ ಪಂಜುಗಳಷ್ಟೇ ಪ್ರಾಕಾರದಲ್ಲಿ ಉರಿಯುತ್ತಿದ್ದುವು. ಆ ದೀಪಗಳ ಮಬ್ಬು ಬೆಳಕಿನಲ್ಲಿ, ಜೋತಾಡುತ್ತಿದ್ದ ರುಂಡ, ಮುಂಡ, ಅವಯವಗಳು ಭೀಕರವಾಗಿ ಕಂಡುವು.

ರಾಜವೀಥಿಯಲ್ಲಿ ಜನರು ಗುಂಪುಕಟ್ಟಿ ಬಂದು, ಅರಮನೆಯ ಎಡಬಲದ ಮಾರ್ಗಗಳಲ್ಲಿ ಚೆದರಿ ಹೋಗುತ್ತಿದ್ದರು. ಹಲವರು ಛೇದಿತ ಶವವನ್ನು ನೋಡಿ ತಲೆತಗ್ಗಿಸಿ ಹೋದರು. ಕೆಲವರು "ಮೆನೆಪ್‌ಟಾ" ಎಂದು ಪರಿಹಾಸ್ಯದ ಧ್ವನಿಯಲ್ಲಿ ಹೆಸರನ್ನು ಉಚ್ಚರಿಸಿ, ಮುಂದೆ ಸಾಗಿದರು.

ಜನಸಂದಣಿ ಇದ್ದಷ್ಟೂ ಹೊತ್ತು ಯೋಧರ ತಂಡ ಪ್ರವೇಶದ್ವಾರದ ರಕ್ಷಣೆಗೆ ನಿಂತಿತು. ಬರಬರುತ್ತ ಜನರ ಓಡಾಟ ಕಡಿಮೆಯಾಯಿತು. ಯೋಧರು ಅರಮನೆಯ ಆವರಣದೊಳಕ್ಕೆ ತೆರಳಿದರು. ಉಳಿದವರು, ಸಾಮಾನ್ಯ ದಿನಗಳಲ್ಲಿ ಇರುವಂತೆ, ಇಬ್ಬರೇ. ಕಾವಲು ಭಟರು. ಬೇರೆ ದಿನವಾಗಿದ್ದರೆ—ರಾತ್ರಿಯಾಗಿದ್ದರೆ—ಪ್ರಜೆಗಳು ಅಷ್ಟು ಬೇಗನೆ ಮನೆಗಳಿಗೆ ಮರಳುತ್ತಿರಲಿಲ್ಲ. ಈ ರಾತ್ರಿ ಚಾಪೆಗಳೂ ಮಂಚಗಳೂ ಅವರನ್ನು ಕರೆಯುತ್ತಿದ್ದುವು.

ಆದರೆ ಉತ್ಸವ ನೋಡಲೆಂದು ಪರವೂರುಗಳಿಂದ ಬಂದಿದ್ದವರಲ್ಲಿ ಅರ್ಧದಷ್ಟು ಜನ ಇನ್ನೂ ರಾಜಧಾನಿಯಲ್ಲಿದ್ದರು. ಉದ್ಯಾನದಲ್ಲಿ ನದೀತಟದಲ್ಲಿ, ಬೀದಿ-ಕೇರಿಗಳಲ್ಲಿ. ನಾಗರಿಕರ ಮನೆಗಳ ಹಿತ್ತಲ ಗೋಡೆಗಳ ಮರೆಯಲ್ಲಿ. ಕಟ್ಟಿ ತಂದಿದ್ದ ಬುತ್ತಿಯನ್ನು, ಅದರಲ್ಲಿ ಉಳಿದುದನ್ನು, ಮೆದ್ದು ನಿದ್ದೆ ಹೋಗಬೇಕು. ಬೆಳಗಿನ ಜಾವವೋ ಮಾರನೆಯ ದಿನವೋ ಹೊರಡಬೇಕು—ತಮ್ಮ ದೋಣಿಗಳಲ್ಲಿ ಇಲ್ಲವೆ ಕತ್ತೆಗಳ ಮೇಲೆ ಕುಳಿತು.

ರಾಜವೀದಿಯ ಹಾಗೂ ಪಕ್ಕದ ರಸ್ತೆಗಳ ಮಗ್ಗುಲುಗಳಲ್ಲಿ ಕತ್ತಲಿನ ಮರೆಯಲ್ಲಿ ಅಂಥ ಜನರಿದ್ದರು. ನೀರಾನೆ ಪ್ರಾಂತದವರೂ ಇದ್ದರು. ಹೆಪ್ಪುಗಟ್ಟಿದ ಶೋಕದ ಭಾರದಿಂದ ಬಾಗಿದವರು. ಅಳಿಡವನ ಬಂಧುಗಳು.

ಸ್ವಲ್ಪ ವೇಳೆಗೆ ಮುಂಚೆ....

* * * *

ಅರಮನೆಯ ಆಟದ ಬಯಲು ಬರಿದಾದ ಬಳಿಕ ಕತ್ತಲೆಯ ಆಸರೆಯಲ್ಲಿ ಶೀಬಾ ಅತ್ತಳು. "ನಾನಿನ್ನು ಬರ್ತೇನೆ," ಎಂದಳು ಬೆಕ್ ಔಟರೊಡನೆ, ಬಟಾನೊಡನೆ. ಹಾಗೆ ಹೇಳಿದ ಮೇಲೆಯೂ ಹೊರಡಲು ನಿಧಾನಿಸುತ್ತ ಅವಳೆಂದಳು:

" ನಾಳೆ ದಂಡು ನಿಮ್ಮೂರಿಗೆ ಹೊರಡ್ತದೆ. ದೇವರನ್ನು ಕರಕೊಂಡು ಮಹಾ ಅರ್ಚಕರು ದಂಡಿನ ಜತೆ ಬರ್ತಾರೆ."

ಗದ್ಗದಿತ ಗಂಟಲಿನಲ್ಲಿ ಬಟಾನೆಂದ :

" ಇದು ಧರ್ಮಯಾತ್ರೆಯಲ್ಲ, ದಂಡಯಾತ್ರೆ. ಇದು ಯುದ್ಧ. ಇವರ ದಂಡಿಗಿಂತ ಮುಂಚೆ ನಾವು ಊರು ಸೇರ್ಬೇಕು. ಆದರೆ—ಆದರೆ—"

ಮೆನ್ನ ನಿರ್ವಿಕಾರವಾಗಿ ಮೆಲುದನಿಯಲ್ಲಿ ನುಡಿದ :

" ನಾಯಕರು ಸಾವಿಲ್ಲದ ಜೀವ. ಮೊಸಳೆ ಪಾಲಾಗಬಾರದು."

" ಹೌದು. ಹೌದು...."

ಶೀಬಾ ಕೇಳಿದಳು :

" ನನ್ನಿಂದೇನಾದರೂ ಸಹಾಯ ? "

ಬಟಾನೆಂದ :

" ಬೇಡ ತಂಗಿ. ನೀನು ನಮ್ಮೊಟ್ಟಿಗೆ ಇರಬಾರದು, ಅಪಾಯ. ಈ ಕೆಲಸ ನಾವು ಮಾಡ್ತೇವೆ."

" ಆಗಲಿ. ಇಲ್ಲಿಂದ ಹೊರಗೆ ನೀವು ಹುಷಾರಾಗಿ ಹೋಗ್ಬೇಕು."

" ಸುರಕ್ಷಿತವಾಗಿ ನಾನು ಕರಕೊಂಡು ಹೋಗ್ತೇನೆ," ಎಂದ ಮೆನ್ನ."

ಮತ್ತೊಮ್ಮೆ ತುಂಬಿಬಂದ ಕಣ್ಣುಗಳನ್ನು ಶೀಬಾ ಒರೆಸಿದಳು.

ಉಗುಳು ನುಂಗಿ, ಔಟ ಬೆಕ್ ಬಟಾ ಮೆನ್ನರನ್ನು ಒಬ್ಬೊಬ್ಬರನ್ನಾಗಿ ನೋಡಿ, "ಬರ್ತೇನೆ ಅಣ್ಣ, ಬರ್ತೇನೆ, ನಾನು ಬರ್ತೇನೆ, ಅಯ್ಯ ಬರ್ತೇನೆ," ಎಂದು ಹೇಳಿ, ಅವಳು ಪಾದಗಳನ್ನು ಕಿತ್ತಳು.

ಶೀಬಾ ನಿರ್ಗಮಿಸಿದ ಬಳಿಕ ನೆಲೆಸಿದ ಮೌನವನ್ನು ಔಟ ಮುರಿದ :

" ನಮ್ಮವರೆಲ್ಲ ಎಲ್ಲಿ ಹೋದರೊ ?"

ಬಟಾನೆಂದ :

" ಹೊರಗೆ ಪ್ರವೇಶದ್ವಾರದ ಹತ್ತಿರದಲ್ಲೇ ಇದ್ದಾರು. ಅಹೂರಾ ನೋಡ್ಕೊಳ್ತಾಳೆ."

ಮೆನ್ನ ಹೇಳಿದ :

" ನಾವೂ ಇಲ್ಲಿಂದ ಹೊರಟ್ಬಿಡೋಣ. ನನ್ನನ್ನು ಹಿಂಬಾಲಿಸಿ ಬನ್ನಿ."

ಒಬ್ಬರ ಹಿಂದೆ ಒಬ್ಬರು. ಇರುಳಿನ ಕೃಪಾಛತ್ರ. ತೂಬುದಾರಿಯಾಗಿ ನದೀ ತಟ್ಟಕ್ಕೆ. ಹೊರಬಿದ್ದೊಡನೆ, ಸಂಕಟವನ್ನು ಹತ್ತಿಕ್ಕುತ್ತ ಬಿಕ್ಕಿಬಿಕ್ಕಿ ಅತ್ತರು. ಎದೆ ತುಡಿತಕ್ಕೆ ಅನುಗುಣವಾಗಿ ಬಟಾನ ಪದಹತಿ. ನಡೆದುದೆಲ್ಲ ಸುಳ್ಳು, ಬರಿಯ ಕನಸು—ಎನ್ನುವುದು ಸಾಧ್ಯವಿದ್ದರೆ ? ಅಂದರೆ—ಅಂದರೆ ? ಆಗ ಎಲ್ಲರೂ ದೋಣಿ ಏರಿ ಮರು ಪ್ರಯಾಣ ಬೆಳೆಸಬಹುದಿತ್ತು.

ಅವನೆಂದುಕೊಂಡ :

" ನಾನು ಹುಚ್ಚ! ಎಲ್ಲ ಮುಗಿದೇ ಬಿಟ್ಟಿದೆ."

ಮೆನ್ನನ ಕಿರುದನಿ ಕೇಳಿಸಿತು :

" ನಿನ್ನೆ ಅವರು ಒಪ್ಪಿದ್ದರೆ ಈ ದಾರಿಯಾಗಿಯೇ ಹೊರಗೆ ಬರ್ತಿದ್ವಿ."

" ಹ್ಞ ? ಹೌದು...."

ಬಟಾನಿಗೆ ಅನಿಸಿತು : ಈ ಅಯ್ಯನನ್ನು ಹುಚ್ಚನೆಂದು ಕರೆದ ನೀಚರೂ ಇರುವರಲ್ಲ ? ಇಲ್ಲಿ ಈಗ ವಿಚಾರಶಕ್ತಿ ಇರುವ ವ್ಯಕ್ತಿ ಈತನೊಬ್ಬನೇ.

ಉತ್ತರ ದಿಕ್ಕಿಗೆ ಸಾಗಿ, ಪಶ್ಚಿಮದತ್ತ ಹೊರಳಿ, ಅರಮನೆಯ ಮಹಾ ದ್ವಾರದತ್ತ ಮುಖ ಮಾಡಿ ನಡೆಯುತ್ತ, ಸ್ವಲ್ಪ ನಿರ್ಜನವಾಗಿ ಕಂಡ ಕಡೆ ಅವರು ನಿಂತರು.

ಬಟಾನೆಂದ :

" ಅಯ್ಯ, ನೀವು ನಮ್ಮನ್ನು ಬಿಟ್ಟು ಹೋಗ್ಬೇಡಿ."

" ಇಲ್ಲ, ಬಟಾ."

" ಈಗೇನ್ಮಾಡೋಣ ಅಯ್ಯ ? "

ದೂರದಲ್ಲಿದ್ದ ಪ್ರವೇಶ ದ್ವಾರದತ್ತ ದೃಷ್ಟಿ ಹರಿಸಿ ಮೆನ್ನ ನುಡಿದ :

" ಆಪೋಫಿಸ್‌ನ ಅಂಗಡಿಯಿಂದಲೊ ಹರ‍್ಮಾಚಿಸ್‌ನ ಅಂಗಡಿಯಿಂದಲೋ ಶವಲೇಪನ ಸಾಮಗ್ರಿ ಕೇಳ್ಬೇಕು. ಅವರಿಬ್ಬರೂ ಧೂರ್ತರು. ಯಾತ

ಕ್ಯೋಕಿಸ್ಕರ ಆ ಖರೀದಿ ಅನ್ನೋದು ಅವರಿಗೆ ಗೊತ್ತಾಗಬಾರದು. (ಆದಾದ ಮೇಲೆ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ತೂಗಾಡ್ತಿರೋ ಶವವನ್ನು ವಶ ಪಡಿಸಿಕೊಂಡು ಸುರಕ್ಷಿತವಾಗಿ ದೋಣಿಗೆ ಸಾಗಿಸ್ಬೇಕು ಇದು ಸದ್ದುಗದ್ದಲ ಇಲ್ದೆ ಆಗಬೇಕಾದ ಕೆಲಸ. ಅದಾದ ತಕ್ಷಣ ಈ ರಾಜಧಾನಿ ಬಿಡ್ಬೇಕು."

"ಆಗಲಿ ಅಯ್ಯ."

"ಲೇಪನ ಸಾಮಗ್ರಿ ಕೊಳ್ಳೋದಕ್ಕೆ ವಿನಿಮಯ ಸಾಮಗ್ರಿ ಬೇಕಲ್ಲ?"

"ದೋಣೀಲಿದೆ. ಅಪೋಫಿಸ್‌ನ ಅಂಗಡಿಯೇ ಹತ್ತಿರದ್ದು. ನಾನು ನೋಡಿದ್ದೇನೆ."

"ನೀನು ಹೋಗಬಾರದು ಬಟಾ."

"ಗೊತ್ತು. ದೂರದಲ್ಲಿ ನಿಂತು ಆಹೂರಾಗೆ ಅಂಗಡಿ ತೋರಿಸ್ತೇನೆ. ಅವಳೂ ಅವಳ ಗಂಡನೂ ಖರೀದಿ ಮಾಡ್ತಾರೆ."

"ತುರ್ತು ಲೇಪನದ ಸಾಮಗ್ರಿ ಅಂತ ಕೇಳ್ಲಿ. ಜತೆಗೆ ಅನೂಬಿಸ್ ದೇವತೆಯ ಒಂದು ಮುಖವಾಡ ಬೇಕು. ಇಲ್ಲೇ ಹತ್ತಿರದ ಊರಿನವರು, ಸತ್ತಿರೋ ಅಣ್ಣನ ಶವಲೇಪನಕ್ಕೆ ಸಾಮಗ್ರಿ–ಅಂತ ಹೇಳ್ಲಿ. ನಾನು ದೋಣಿ ಹತ್ತಿರಕ್ಕೆ ಹೋಗ್ತೇನೆ."

"ನೀವು ಹೋಗ್ತಾ ಇರಿ. ನಮ್ಮವರನ್ನು ನೋಡ್ಕೊಂಡು ನಾನೂ ಬಂದ್ಬಿಟ್ಟೆ. ವಿನಿಮಯ ಸಾಮಗ್ರಿ ತರಬೇಕಲ್ಲ...."

"ಹೂಂ," ಎನ್ನುತ್ತ ಮೆನ್ನ ಹೊರಟೇ ಬಿಟ್ಟ.

* * * *

ಪ್ರವೇಶ ದ್ವಾರದ ಸಮೀಪದಲ್ಲಿ ಎದುರುಗಡೆ, ಅಲ್ಲಲ್ಲಿ, ಅವರೆಲ್ಲ ಕುಳಿತಿದ್ದರು—ಕತ್ತಲಿನ ಮರೆಯಲ್ಲಿ.

"ಬಂದಿಯಾ ಬಟಾ ಅಣ್ಣ ? ದಾರಿ ನೋಡ್ತಾ ಇದ್ದೇವೆ," ಎಂದಳು ಆಹೂರಾ.

ಬಟಾ ನಾಯಕನ ತೂಗಾಡುತ್ತಿದ್ದ ಶವವನ್ನೊಮ್ಮೆ ನೋಡಿದ. ಹೃದಯದ ಆಳದಿಂದ ಮೇಲೆದ್ದ ಆರ್ತನಾದವನ್ನು ಹತ್ತಿಕ್ಕಿದ. ಬಂಧುಗಳೆಡೆಗೆ

ನುಸುಳಿ ಕುಳಿತು ರಾಮೆರಿಪ್ ಟಾನನ್ನು ತಬ್ಬಿಕೊಂಡ. ಹುಡುಗ ಅಳುತ್ತಿರಲಿಲ್ಲ. ಕೆಂಡವಾಗಿದ್ದುವು ಅವನ ಕಣ್ಣುಗಳು.

"ರಾಮೆರಿ, ರಾಮೆರಿ...."

—ಬಟಾನ ಗಂಟಲಿನಿಂದ ತಪ್ಪಿಸಿಕೊಂಡು ಹೊರಬಿದ್ದ ಪಿಸುದನಿಯ ಎರಡು ಪದಗಳು.

ಅವರು ಆತನ ದಾರಿ ನೋಡುತ್ತ ಕುಳಿತಿದ್ದರು. ಅವರೆಲ್ಲರ ಸ್ವರ ಪಡೆಯುದ ಒಂದು ಪ್ರಶ್ನೆ ನೀರವತೆಯೊಡನೆ ಸೆಣಸುತ್ತಿತ್ತು.

ಅರಮನೆಯ ಮಹಾದ್ವಾರವನ್ನು ಮುಚ್ಚಿದ್ದರು. ತೂಗಾಡುತ್ತಿದ್ದ ಶವಕ್ಕೆ ಕಾವಲಾಗಿದ್ದರು ಇಬ್ಬರು ಭಟರು.

"ಈಗ ಎರಡು ಕೆಲಸ ಆಗಬೇಕು ಅಹೂರಾ."

"ಹೇಳು ಅಣ್ಣಾ."

ಆಗಬೇಕಾದ್ದನ್ನು ವಿವರಿಸಿದ ಬಳಿಕ ಬಟಾ ಅಂದ:

"ಶವಲೇಪನ ಸಾಮಗ್ರಿ ದೋಣಿಗೆ ತಲಪಿಸಿದ ಮೇಲೆ ನೀನು ಇಲ್ಲಿಗೆ ವಾಪಸಾಗ್ಬೇಕು. ಒಂದಿಷ್ಟು ಬುತ್ತಿ ತಗೊಂಡು, ಕಾವಲಿನ ಆ ಇಬ್ಬರನ್ನೂ ಊಟಕ್ಕೆ ಕರೀಬೇಕು. ಕೊಲ್ಲೋದು ಬೇಡ, ಔಟ ಜೆಕ್ ನೋಡ್ಕೊಳ್ತಾರೆ. ಅವರಿಗೆ ನಮ್ಮವರು ನಾಲ್ಕು ಜನ ಸಹಾಯ ಮಾಡ್ತಿ. ಬಾಯಿಗೆ ಚಿಂದಿ ತುರುಕಿ, ಕಣ್ಣುಗಳಿಗೆ ಬಟ್ಟೆ ಕಟ್ಟಿ, ಕೈಕಾಲು ಬಿಗಿದು ಕತ್ಲೇಲಿ ಎಸೆದು ಬಿಡೋದು....ಏಳು, ಗಂಡನನ್ನು ಕರಕೋ."

ನಿದ್ದೆ ಹೋಗಿದ್ದ ಮಗುವನ್ನು ಹೆಗಲ ಮೇಲೆ ಹಾಕಿಕೊಂಡು ಅಹೂರಾ ಎದ್ದಳು. ಗಂಡನಿಗೆ ಸನ್ನೆ ಮಾಡಿ ಬಟಾನನ್ನು ಹಿಂಬಾಲಿಸಿದಳು. ಜನಸಂಚಾರ ಕಡಿಮೆಯಾಗತೊಡಗಿದ್ದ ನದಿ ದಂಡೆಯ ದಾರಿ. ಒಂದೇ ದಿನ ಅವಧಿಯಲ್ಲಿ ಆ ದಾರಿ ಅಹೂರಾಗೆ ಪರಿಚಿತವಾಗಿತ್ತು.

ದೋಣಿಯನ್ನು ಕಾಯುತ್ತ ಅಂಬಿಗರು ಕುಳಿತಿದ್ದರು. ಮೆನ್ನನನ್ನು ಕಂಡೊಡನೆ, "ನಿಜವಾ ? ನಿಜವಾ ?" ಎಂದರು ಅವರು. ಸ್ವಲ್ಪ ಹೊತ್ತಿಗೆ ಮುಂಚೆ ಅಲ್ಲಿಂದ ಹೊರಟು ಹೋದ ದೋಣಿಯ ಜನ ಆ ಸುದ್ದಿ ಹೇಳಿದ್ದರು— ಆ ಅಂಬಿಗರು ಯಾರು ಎಂಬುದನ್ನು ಅರಿಯದೆ.

ಮೆನ್ನ ಮರಳಿನ ಮೇಲೆ ಕುಳಿತು. ನ್ಯಾಯಸ್ಥಾನದಲ್ಲಿ ನಡೆದುದನ್ನು ಚುಟುಕಾಗಿ ತಿಳಿಸಿದ.

ಅಂಬಿಗರ ದುಗುಡ ಕಪೋಲಗಳ ಮೇಲೆ ಹರಿಯುವ ಉಷ್ಣಪ್ರವಾಹ ವಾಯಿತು. ಮೆಲ್ಲನೆ ಅಳುತಳುತ ಒಬ್ಬನೆಂದ :

"ಮೆನೆಪ್‌ಟಾ ಅಣ್ಣ ಏನು ಹೇಳಿದ್ರು ?"

"ಮೆನೆಪ್‌ಟಾ ಅಣ್ಣ ಅಂದ್ರು : ಮಹಾಪ್ರಭುಗಳೇ, ಮಹಾ ಅರ್ಚಕರೇ, ಅಮಾತ್ಯರೇ, ಪ್ರತಿಷ್ಠಿತರೇ! ಕಿವಿಗೊಟ್ಟು ಕೇಳಿ ! ನಮಗೆ–ಜನರಿಗೆ–ಸಿಟ್ಟು ಬಂದಾಗ, ಅದು ಮಹಾಪೂರವಾಗ್ತದೆ. ಅದರಲ್ಲಿ ನೀವೆಲ್ಲ ಕೊಚ್ಚಿಹೋಗ್ತೀರಿ ! ಮಹಾಪೂರ ಇಳಿದಾಗ ಕಂಡುಬರೋ ಜಗತ್ತು ಹೊಸದು, ಆ ನೂತನ ಸೃಷ್ಟಿ ನಿರಾತಂಕವಾಗಿ ಆಗಲಿ ಅಂತ—ಇಗೋ—ರಾನನ್ನು! ಪ್‌ಟಾನನ್ನು, ಅಮುನ್‌ನನ್ನು ಅನನ್ಯ ಭಾವದಿಂದ ನಾನು ಪ್ರಾರ್ಥಿಸ್ತೇನೆ.... ಅರ್ಥವಾಯ್ತಾ ? "

"ಇಲ್ಲ........"

"ಹ್ನಾ. ಬಹಳ ಅರ್ಥವಿರೋ ಮಾತು. ಮುಂದೆ ಸಹಸ್ರ ಸಹಸ್ರ ವರ್ಷ ಅದು ಧ್ವನಿಸ್ತದೆ, ಪ್ರತಿಧ್ವನಿಸ್ತದೆ....ಕಡೆಗೆ ಒಂದು ದಿನ ಜನರಿಗೆ ಸಿಟ್ಟು ಬರ್ತದೆ...."

ತನ್ನೊಳಗಿನ ಯಾತನೆಯನ್ನು ಮರೆಸಲು ಮೆನ್ನನಿಗೆ ನೆರವಾಯಿತು ಮಾತಿನ ಆ ವೈಖರಿ.

ಅಹೂರಾಳೊಡನೆ ಬಟಾ ಬಂದು ತಲಪಿದ. ಧ್ವನಿ ತೆಗೆದು ರೋದಿಸಲು ಹೊರಟ ಅಂಬಿಗರನ್ನು "ಶ್ !" ಎಂದು ಬಟಾ ತಡೆದ.

"ಆಗಬಾರದ್ದು ಆಯ್ತು. ಇನ್ನು–ಮುಂದಿನ ಕೆಲಸ," ಎಂದ.

ಮೆನ್ನ ಎದ್ದು ಹೇಳಿದ :

"ಆ ಅಂಜೂರ ಮರದ ಕೆಳಗೆ ಕೂತಿರ್ತೇನೆ. ಎಲ್ಲ ಆದಾಗ ನನ್ನನು ಕರೀರಿ."

"ಹೂಂ. ಅಯ್ಯ."

ಸೆಣಬಿನ ದೊಡ್ಡ ಚೀಲದಲ್ಲಿ ವಿನಿಮಯ ಸಾಮಗ್ರಿಗಳಿದ್ದವು. ಅಹೂರಾಳ ಗಂಡ ಅದನ್ನು ಹೊತ್ತುಕೊಂಡ.

" ರಾಜಧಾನಿಯಲ್ಲಿ ನಾಯಕರ ತಂಡದ ಖರ್ಚಿಗೆ ಬೇಕಾದೀತು ಅಂತ ಇಪ್ಯುವರ್ ಇದನ್ನು ಕೊಟ್ಟ.....ಖಾಲಿಯಾಗುವ ಚೀಲ ಒಂದು ಬಿಟ್ಟು ಬೇರೇನೂ ಉಳಿಸಬೇಡ ಅಹೂರಾ."

" ಹೂಂ ಅಣ್ಣ."

" ಬನ್ನಿ. ಅಪೋಫಿಸ್‌ನ ಅಂಗಡಿ ತೋರಿಸ್ತೇನೆ."

....ಅದೃಷ್ಟದ ಬೀದಿಯಲ್ಲಿ ಆ ಅಂಗಡಿ....

(ಅದೃಷ್ಟದ ಬೀದಿ. 'ಎಷ್ಟು ಕೆಟ್ಟ ಅದೃಷ್ಟ ನಮ್ಮದು !')

ಎಲ್ಲೋ ಒಂದೆರಡು ಮನೆಗಳಲ್ಲಷ್ಟೇ ದೀಪಗಳಿದ್ದುವು.

ಮುಚ್ಚಿದ್ದ ಒಂದು ಕದದ ಎದುರು ನಿಂತು ಬಟಾ ಪಿಸುನುಡಿದ :

" ಇದೇ. ಅಂಗಡಿ–ಮನೆ ಎರಡೂ. ಅಪೋಫಿಸ್ ಅಯ್ಯ–ಅಂತ ಕೂಗು, ಅಹೂರಾ. ಬಾಗಿಲು ಬಡಿ. ನಾನು ಬೀದಿ ಮೂಲೇಲಿ ಕಾಯ್ತೇನೆ."

ಬಟಾ ಹೊರಟೊಡನೆ, "ಅಪೋಫಿಸ್ ಅಯ್ಯ ! ಅಪೋಫಿಸ್ ಅಯ್ಯ !" ಎಂದು ಅವಳು ಕೂಗಿ ಕರೆದಳು. ಬಾಗಿಲು ತಟ್ಟಿದಳು. ಉತ್ತರದ ದಾರಿ ನೋಡಿ ಮತ್ತೊಮ್ಮೆ ಹೆಸರು ಹಿಡಿದು ಕೂಗಿದಳು.

ಆಕೆಯ ಗಂಡನೂ ಕರೆದ :

" ಅಪೋಫಿಸ್ ಅಯ್ಯ ! "

ಸದ್ದಿಲ್ಲವಲ್ಲ; ಈ ಅಯ್ಯನನ್ನು ಎಬ್ಬಿಸುವುದು ಹೇಗೆ ?—ಎಂದು ಅಹೂರಾ ಯೋಚನೆಗೆ ಈಡಾದಳು. ಅಷ್ಟರಲ್ಲೇ ಜಾಲಂದ್ರದ ಮುಚ್ಚಳ ತೆರೆದ ಸಪ್ಪಳವಾಯಿತು.

ಅಪೋಫಿಸ್ ಜಾಲಂದ್ರದ ಮೂಲಕ ಕೇಳಿದ :

" ಯಾರು ? ಏನು ಬೇಕು ? "

ಈತ ಅಯ್ಯನಿರಬಹುದು ಎಂದುಕೊಂಡು, ಅಹೂರಾ ಉತ್ತರಿಸಿದಳು :

" ನಾವು ಪರ ಊರಿನವರು. ಒಂದಿಷ್ಟು ಸಾಮಗ್ರಿ ಬೇಕು ಅಯ್ಯ."

" ಈ ಅಪರಾತ್ರಿಯಲ್ಲಿ ? ಎಂಥ ಸಾಮಗ್ರಿ ? "

ಅಹೂರಾಳ ಗುಂಡಿಗೆ ಬಡಿತ ತೀವ್ರವಾಯಿತು. ಅಧೀರಳಾಗದೆ, ಧ್ವನಿಯ ಕಂಪನವನ್ನು ಮರೆಮಾಚಿ ಅವಳೆಂದಳು :

" ಶವಲೇಪನ ಸಾಮಗ್ರಿ ಅಯ್ಯ. "

"ಹ್ಹ ? ಯಾವ ಜನ ನೀವು ?"

"ರೈತ ಜನ ಅಯ್ಯ."

"ನಿಮ್ಮೂರಿನ ಭೂಮಾಲಿಕ ಕಳಿಸಿದಾನೊ ? ಎಪ್ಪತ್ತು ದಿವಸಗಳ ಲೇಪನದ್ದೊ? "

"ಅಲ್ಲ. ನನ್ನ ಅಣ್ಣ ತೀರ್‍ಕೊಂಡ ಅಯ್ಯ. ನಾಳೆ ಬೆಳಿಗ್ಗೆಯೇ ಲೇಪನ ಮಾಡ್ತೇವೆ."

"ಹಾಗೋ ? ನಿಮ್ಮ ಸ್ವಂತಕ್ಕೊ ? ಬೇಡ ಅನ್ನೋದಕ್ಕೆ ನಾನು ಯಾರು ? ಆದರೆ, ಇದೆಲ್ಲ ಖರ್ಚಿನ ಬಾಬು. ಐವತ್ತು ಉಟೆನ್ ಆಗ್ತದೆ. ಅಷ್ಟು ಮೌಲ್ಯಕ್ಕೆ ವಿನಿಮಯ ಸಾಮಗ್ರಿ ತಂದಿದೀರಾ ? "

"ಅನೂಬಿಸ್ ದೇವತೆಯ ಮುಖವಾಡವೂ ಬೇಕು. ಅದೂ ಸೇರಿಸ್ಲಿ ಐವತ್ತು ಮಾಡ್ಕೊಳ್ಳಿ."

"ಇಲ್ಲ. ಅರುವತ್ತಾಗ್ತದೆ."

"ದೀಪ ಹಚ್ಚಿ ಅಯ್ಯ. ಬಾಗಿಲು ತೆರೀರಿ."

ಮತ್ತೆ ಮೌನ. ಪತ್ನಿ ಎದ್ದು ಹಚ್ಚಿಕೊಟ್ಟ ಹಣತೆಯನ್ನು ಕೈಯಲ್ಲಿ ಹಿಡಿದು ಅಪೋಫಿಸ್ ಬಾಗಿಲು ತೆರೆದ. ತುಸು ಮುಂದೆ ಬಂದು, ಬೀದಿಯಲ್ಲಿ ನಿಂತಿದ್ದವರನ್ನು ಹಣತೆಯ ಬೆಳಕಿನಲ್ಲಿ ನೋಡಿದ.

"ಮೂಟೆ ಇಳಿಸಿ," ಎಂದ.

"ಮೂಟೆ ಬಿಚ್ಚಿ ಅಯ್ಯನಿಗೆ ತೋರಿಸು," ಎಂದಳು ಅಹೂರಾ. ತನ್ನ ಗಂಡನಿಗೆ.

ಆತ ಹೇರನ್ನು ಕೆಳಗಿಳಿಸಿ ಜಗಲಿಯ ಮೇಲಿಟ್ಟು, ಕಟ್ಟುಗಳನು ಬಿಚ್ಚಿದ. ಚೀಲದಲ್ಲಿದ್ದುದನ್ನು ಒಂದೊಂದಾಗಿ ಎತ್ತಿ ಹೊರಗಿಟ್ಟ.

ಅಪೋಫಿಸ್ ದೀಪ ಕೆಳಗಿರಿಸಿ ವಿನಿಮಯ ಸಾಮಗ್ರಿಗಳನ್ನು ಪರೀಕ್ಷಿಸಿದ.

"ರಾತ್ರೆ ಹೊತ್ತು ಸಾಮಾನ್ಯ ಮಟ್ಟದ ಸಾಮಾನನ್ನೂ ದಾಟಿಸ್ಬಾರದು. ಅಲ್ಲವಾ ?" ಎಂದು ವ್ಯಂಗ್ಯೋಕ್ತಿಯಾಡಿದ.

ಅಹೂರಾ ಪ್ರತಿಭಟಿಸಿದಳು :

"ಅಂಥ ಮಾತು ಹೇಳಬಾರದು, ಅಯ್ಯ. ತಾನು ಸತ್ತಾಗ ಶವಲೇಪನ ಆಗ್ಬೇಕೂಂತ ಅಣ್ಣ ಯಾವಾಗ್ಲೂ ಹೇಳ್ತಿದ್ದ. ಅವನ ಆ ಆಸೆ ಈಡೇರಿಸೋದಕ್ಕೇಂತ

ತಕ್ಷಣವೇ ಹೊರಟು ಬಂದ್ವಿ. ಇದ್ದದ್ದನ್ನೆಲ್ಲ ತೆಗೆದುಕೊಂಡು ಬಂದಿದ್ದೇವೆ. ನೂರಾರು ಉಟೆನ್ ಮೌಲ್ಯವೇ ದೊರೀಬಹುದು."

ಸೆಣಬಿನ ಬಟ್ಟೆಯ ಸೊಂಟದ ಪಟ್ಟಿಗಳು, ಜೊಂಡಿನ ಪಾದರಕ್ಷೆಗಳು, ಮರದ ಹಾವುಗೆಳು, ಕೈಗೋಲು, ಹೊಡೆಗೋಲು, ಜೇನು ತುಂಬಿದ್ದ ಜಾಡಿ ಗಳು, ಪೆಪೈರಸ್ ಹಾಳೆಗಳು, ಹಾಲುಗಲ್ಲಿನ ಮರಿಗೆ–ಪಾತ್ರೆ, ಜೊಂಡಿನಿಂದ ಹೆಣೆದ ಪುಟ್ಟ ಚಾಪೆಗಳು– ತಟ್ಟೆಗಳು.

ತನ್ನ ಸಂತಸವನ್ನು ನುಂಗುತ್ತ ಅಪೋಫಿಸ್ ಅಂದ :

" ಶವಲೇಪನ ದಿವ್ಯಜೀವನಕ್ಕೆ ಸಾಕ್ಷಿ. ನಾಳೆಯ ಬದುಕಿಗೆ ತಯಾರಿ. ನೂರಾರು ಉಟೆನ್ ಮೌಲ್ಯ ತೆತ್ತರೂ ತಪ್ಪಲ್ಲ. ಇಲ್ಲೇ ಇರಿ, ಬಂದೆ."

ಹಣತೆಯನ್ನು ಹೊಸ್ತಿಲ ಮೇಲಿರಿಸಿ ಅಪೋಫಿಸ್ ಒಳಹೋದ. ಸ್ವಲ್ಪ ಹೊತ್ತಿನಲ್ಲೇ ಸಾಮಗ್ರಿಗಳೊಡನೆ ಹೊರ ಬಂದ.

ವಿಸರ್ಜನೆ ಎಣ್ಣೆ ತುಂಬಿದ ಜಾಡಿ ; ಪೆಪೈರಸ್ ದಂಟನಿಂದ ಮಾಡಿದ ಪಿಚಕಾರಿ : ತಾಮ್ರದ ದಬ್ಬಣ, ಸೆಣಬಿನ ದಾರ ; ತೂತು ಮುಚ್ಚುವ ಬೆಣೆ ; ಸೆಣಬಿನ ಪಟ್ಟೆಯ ಸುರುಳಿ ; ರಾಳ ; ಅನೂಬಿಸ್ ಮುಖವಾಡ.

ಅವನೆಂದ :

" ನೋಡಿದಿಯಾ ತಾಯಿ ? ಬಡವರು ಶ್ರೀಮಂತರು ಅಂತ ನಾನು ವ್ಯತ್ಯಾಸ ಮಾಡೋದಿಲ್ಲ. ಎಲ್ಲ ಉತ್ತಮ ಸಾಮಗ್ರಿ. ಇದಕ್ಕೆ ವಿನಿಮಯವಾಗಿ ನೀವು ತಂದಿರೋದು ಸಾಲದು."

ಅಹೂರಾ ನಿಟ್ಟುಸಿರು ಬಿಟ್ಟಳು.

" ನಮ್ಮ ಸೆಣಬಿನ ಚೀಲ ಮಾತ್ರ ನಮಗೇ ಬೇಕು. ಅಯ್ಯ."

" ಅಷ್ಟು ದೊಡ್ಡದು ಯಾತಕ್ಕೆ ನಿಮಗೆ ? ಲೇಪನ ಸಾಮಗ್ರಿ ಒಯ್ಯೋದಕ್ಕೆ ಸಣ್ಣ ಕೈಚೀಲ ಕೊಡ್ತೇನೆ–ಉಚಿತವಾಗಿ."

" ಸಣ್ಣ ಕೈಚೀಲವಂತೂ ಕೊಡಲೇಬೇಕು ಅಯ್ಯ. ಆ ದೊಡ್ಡ ಚೀಲ ನೆರೆಮನೆಯಿಂದ ಎರವಲು ತಂದದ್ದು. ವಾಪಸು ಕೊಡ್ಬೇಕು."

" ಹಾಗಾದರೆ ಕತ್ತಿನಲ್ಲಿರೋ ಸರಗಳನ್ನು ಕೊಡು."

" ಮೂರು ಕವಡೇ ಸರ. ಎರಡು ತಾಮ್ರದ್ದು. ಒಂದು ಬೆಳ್ಳೀದು. ಎಲ್ಲಾ ಕೊಡಲಾ ?"

"ಹೂಂ. ಕಮ್ಮಿ ಮೌಲ್ಯ ಕೊಟ್ಟು ಲೇಪನ ಸಾಮಗ್ರಿ ತಗೊಂಡು ಹೋದರೆ ಸತ್ತವನಿಗೆ ಒಳ್ಳೇದಲ್ಲ."

ಆಹೂರಾ ಮಗುವನ್ನು ಗಂಡನ ಹೆಗಲಿಗೆ ವರ್ಗಾಯಿಸಿದಳು. ಸರಗಳನ್ನು ಬಿಚ್ಚಿ ಕೊಟ್ಟಳು. ಬರಿದಾದ ವಕ್ಷಸ್ಥಲವನ್ನು ಅಪೋಫಿಸ್ ಒಮ್ಮೆ ದಿಟ್ಟಿಸಿ, ವಿನಿಮಯಕ್ಕೆ ಎಂದು ದೊರೆತ ಸಾಮಗ್ರಿಗಳನ್ನು ಎರಡೂ ಕೈಗಳಲ್ಲಿ ಬಾಚಿ ಒಳಗಿರಿಸಿದ.

ಆಹೂರಾ ಕೇಳಿದಳು:

"ಸ್ವಲ್ಪ ಸುಗಂಧ ದ್ರವ್ಯ ಕೊಡಿ, ಅಯ್ಯ. ದೇವರಿಗೆ ಸಂತೋಷ ವಾಗ್ತದೆ."

ಅಪೋಫಿಸ್ ಗೊಣಗಿದ. ಪೆಪ್ಪೈರಸ್ ಎಲೆಯುಲ್ಲಿ ಕಟ್ಟಿದ ಧೂಪದ ಪುಡಿಯ ಪೊಟ್ಟಣವನ್ನು ಎತ್ತಿ ಕೊಟ್ಟ.

"ನಿನ್ನ ಅಣ್ಣ ಹ್ಯಾಗೆ ಸತ್ತ ?"

ಕಣ್ಣುಗಳನ್ನು ಭದ್ರವಾಗಿ ಮುಚ್ಚಿ ಅಹೂರಾ ಉತ್ತರವಿತ್ತಳು :

"ಮೊಸಳೆ ಕಡೀತು."

ಮೊಸಳೇನ ಕೊಂದಿರಾ ?"

"ಹ್ಞ. ಹ್ಞ."

"ಏನು ಅವನ ಹೆಸರು ?"

ಈ ಪ್ರಶ್ನೆಯನ್ನು ಅಹೂರಾ ನಿರೀಕ್ಷಿಸಿರಲಿಲ್ಲ. ಕ್ಷಣ ಅಳುಕಿದರೂ ಗಂಟಲು ಸರಿಪಡಿಸಿ ಅಂದಳು :

"ಹುಟ್ಟಿದವನಿಗೊಂದು ಹೆಸರು. ದೇವರದೇ. ಪ್ಟಾಹೊಟೆಪ್ ಅಂತ."

"ಪ್ಟಾಹೊಟೆಪ್. ಸತ್ತವನ ನಾಮೋಚ್ಚಾರ ಮಾಡಿದರೆ ಅವನು ಮತ್ತೆ ಜೀವಂತವಾಗಾನೆ. ಈ ದೇವವಾಕ್ಯ ಕೇಳಿದೀರಾ ?"

"ಇಲ್ಲ ಅಯ್ಯ."

"ಕಲಿತ್ಕೊಳ್ಳಿ."

"ಕೈಚೀಲ ಕೊಡಿ, ಅಯ್ಯ."

"ಇಲ್ಲ ! ಆಗಿರೋ ನಷ್ಟ ಸಾಲದೆ ? ನಿಮ್ಮ ಚೀಲದಲ್ಲೇ ಹಾಕ್ಕೊಳ್ಳಿ !"

ವಿನಿಮಯ ವಸ್ತುಗಳನ್ನು ಕೊಟ್ಟ ಮೇಲೆ ಬರಿದಾಗಿದ್ದ ದೊಡ್ಡ ಚೀಲ

ದಲ್ಲಿ ಲೇಪನ ಸಾಮಗ್ರಿಗಳನ್ನಿಟ್ಟು, ಅಹೂರಾ ಆ ಚೀಲವನ್ನೆತ್ತಿಕೊಂಡಳು.

"ಬರ್ತೇವೆ, ಅಯ್ಯ."

"ಹ್ಯಾಗ್ಬಂದ್ರಿ? ಕತ್ತೆಗಳ ಮೇಲೊ? ದೋಣೀಲೊ?"

ನಮ್ಮದು ಒಳನಾಡು. ಕತ್ತೆಗಳ ಮೇಲೆ ಬಂದೆವು. ಸಾರಿಗೆ ಕಟ್ಟೇಲಿ ಕಟ್ಟಿದ್ದೇವೆ."

"ನನ್ನ ಅಂಗಡಿ ಇಲ್ಲಿರೋದು ಯಾರು ಹೇಳಿದ್ರು ತಾಯಿ ನಿಮಗೆ?"

"ಅದೃಷ್ಟದ ಬೀದಿಗೆ ಹೋಗೀಂತ ಕಟ್ಟೆಯೋರು ಹೇಳಿದ್ರು."

"ಸರಿ! ಅಂತೂ ನನ್ನ ನಿದ್ದೆ ಹೋಯ್ತು. ಹೊರಡಿ ಇನ್ನು. ನೀನು ಏನೂ ಚಿಂತಿಸ್ಬೇಡ ತಾಯಿ. ನಿನ್ನಣ್ಣ ಒಸ್ಪೆರಿಸ್ ರಾಜ್ಯಕ್ಕೆ ಹೋಗ್ತಾನೆ."

ಗದ್ಗದಿತಳಾಗಿ ಅಹೂರಾ ಅಂದಳು:

"ಹೂಂ. ಅಯ್ಯ...."

[ಅಹೂರಾ ಗಂಡನೊಡನೆ ಹೊರಟಳು....

ಅಪ್ರೋಫಿಸ್ ಕದವಿಕ್ಕಿ, ವಿನಿಮಯವಾಗಿ ಪಡೆದ ವಸ್ತುಗಳನ್ನು ಮತ್ತೊಮ್ಮೆ ನೋಡಿ. ಪರಮ ಸಂತುಷ್ಟನಾಗಿ ದೀಪ ಆರಿಸಿ, ಹೆಂಡತಿ ಮಲಗಿದ್ದೆಡೆಗೆ ಸಾಗಿದ. ಅವಳಿಗೆ ಗಾಢನಿದ್ದೆ. ಈತ ಕಣ್ಣೆವೆಗಳನ್ನು ಗಟ್ಟಿಯಾಗಿ ಮುಚ್ಚಿದ. 'ಪ್ಟಾ ಹೊಟೆಪ್' ಎಂದ, ಮನಸ್ಸಿನಲ್ಲೇ....

ಇದ್ದಕ್ಕಿದ್ದಂತೆ ನೀರಾನೆ ಪ್ರಾಂತದ ದೋಣಿಕಾರನ ನೆನಪಾಯಿತು. ದೇವತಾಮೂರ್ತಿಗಳನ್ನು ಆ ಕಳ್ಳ ತರಲೇ ಇಲ್ಲ. ಅವನ ನಾಯಕನ ವಧೆಯಾಯಿತು ಇವತ್ತು. ಸತ್ತವನು ಮೊಸಳೆಗೆ ಆಹಾರವಾಗ್ತಾನೆ.

ಆತ ಪ್ಟಾಹೊಟೆಪ್ ಅಲ್ಲ—ಮೆನೆಪ್ಟಾ. ಈ ಶವಲೇಪನ ಸಾಮಗ್ರಿ? ಛೆ! ಛೆ! ಅದಕ್ಕೂ.ಇದಕ್ಕೂ ಖಂಡಿತ ಸಂಬಂಧವಿರದು....

ನಿದ್ದೆ ಬರಲೆಂದು ಮನಸ್ಸಿನಲ್ಲೇ ಆತ ಸ್ತೋತ್ರ ಆರಂಭಿಸಿದ: 'ಜಗದ್ರಕ್ಷಕ ಪ್ಟಾ ಸರ್ವಜನಪೂಜಿತ ಪ್ಟಾ.'

ಏನೇ ಇರಲಿ, ಬೆಳಿಗ್ಗೆ ಬೇಗನೆ ಮಹಾಮಂದಿರಕ್ಕೆ ಹೋಗಿ, ರಾತ್ರಿ ಯಾವಳೋ ಹೆಂಗಸು ಬಂದು ಶವಲೇಪನ ಸಾಮಗ್ರಿ ಖರೀದಿ ಮಾಡಿದಳು ಅಂತ ಮಹಾ ಅರ್ಚಕರಿಗೆ ತಿಳಿಸಬೇಕು—ಎಂದುಕೊಂಡ.]

* * * *

ಒಂದು ಕೆಲಸ ಆಯಿತು ಎಂದು ಬಟಾನಿಗೆ ಸಮಾಧಾನ. ಅವರು ದೋಣಿ ತಲಪಿದರು. ಕೊಂಡು ತಂದ ಸಾಮಗ್ರಿಗಳನ್ನು ದೋಣಿಯೊಳಗಿನ ಅಮನ್ ದೇವರ ಮೂಲೆಯಲ್ಲಿ ಇರಿಸಿದ್ದಾಯಿತು.

ಮುಂದಿನ ಕೆಲಸ ಇನ್ನು.

ಸಣ್ಣ ಬುತ್ತಿಯನ್ನೂ ಸ್ವಲ್ಪ ಖಿವವ ಉಳಿದಿದ್ದ ಚೀಲವನ್ನೂ ಅಹೂರಾ ಎತ್ತಿಕೊಂಡಳು. ದೋಣಿಯ ಹೇರುಮೂಲೆಯಲ್ಲಿ ಹಳೆಯದಾದ ಸೆಣಬಿನ ಹಾಯಿ ಹಗ್ಗವೂ ತುಂಡು ದಾರಗಳೂ ಇದ್ದುವು. ಅವನ್ನೂ ಬರಿದಾಗಿದ್ದ ಸೆಣಬಿನ ದೊಡ್ಡ ಚೀಲವನ್ನೂ ತನ್ನ ಬದಲಿ ನಡುವಸ್ತ್ರವನ್ನೂ ಬಟಾ ಕಂಕುಳಿ ಗೇರಿಸಿದ.

ತನ್ನ ಅಂಬಿಗರಲ್ಲಿ ಇಬ್ಬರನ್ನು ಕರೆದು ಅವನು ಹೇಳಿದ :

" ನಮ್ಮ ಹಿಂದೆಯೇ ಬನ್ನಿ. ಇದೋ ಒಂದು ಹಗ್ಗ. ಬೀದಿಯಿಂದ ಯಾವುದಾದರೂ ಕತ್ತೇನ ಹಿಡಕೊಂಡು ಅರಮನೆ ಹತ್ತಿರಕ್ಕೆ ತನ್ನಿ........"

ಅಹೂರಾ ಮಹಾದ್ವಾರದ ಬಳಿಗೆ ಬಂದಾಗ ಪ್ರಾಕಾರದ ದೀಪಗಳು ಎಣ್ಣೆ ತೀರಿ ಆರತೊಡಗಿದ್ದುವು, ಒಂದೊಂದಾಗಿ. ಬಳಲಿದ್ದ ಕಾವಲು ಭಟರು ಈಟಿಗಳನ್ನು ಗೋಡೆಗೆ ಆನಿಸಿ ತಾವು ಕೆಳಗೆ ಕುಳಿತಿದ್ದರು, ಗೋಡೆಗೊರಗಿ.

ಬಟಾ, ಬೆಕ್, ಔಟರ ದೃಷ್ಟಿ ತನ್ನ ಮೇಲೆಯೇ ನೆಟ್ಟಂತಿದೆ, ಇನ್ನು ತಡ ಮಾಡಕೂಡದು—ಎಂದುಕೊಂಡಳು ಅಹೂರಾ. ತುಟಿಗಳನ್ನು ಬಿಗಿದಳು; ದೇವರನ್ನು ನೆನೆದಳು. ದೃಢ ಹೆಜ್ಜೆಗಳನ್ನಿಟ್ಟು ಭಟರ ಬಳಿ ಸಾರಿದಳು.

ತೂಗಾಡುತ್ತಿದ್ದ ಶವ ಮೇಲ್ಗಡೆ. ಎದುರಿಗೆ ಸ್ತ್ರೀ. ಇಬ್ಬರು ಭಟರೂ ತೂಕಡಿಕೆಯನ್ನು ಕೊಡವಿದರು.

" ಅಣ್ಣಾ........"

(ಕಂಠಮಾಧುರ್ಯ.)

" ಅಣ್ಣ—ತಂಗಿ....ಯಾರವ್ವ ನೀನು ? ಹೆಣದ ಹೆದರಿಕೆಯೂ ಇಲ್ವ ನಿನಗೆ ?"

" ಸತ್ತೋರೇನ್ಮಾಡ್ತಾರೆ ? ಬದಿಕಿರೋವರದೇ ಭಯ ನನಗೆ."

" ಮಾಟವಾಗಿದ್ದೀ ಅಂತಲೋ ಭಯ ? ಯಾವೂರಾಯ್ತು ?"

" ಹತ್ತಿರ ಓ ಹಳ್ಳಿ. ಸೆಡ್ ಉತ್ಸವಕ್ಕೇಂತ ಬಂದೆ."

"ಉತ್ಸವ ಮುಗಿದಮೇಲೂ ಇಲ್ಲಿಯೇ ಟಳಾಯಿಸ್ತಾ ಇದೀಯಲ್ಲ. ಯಾಕೆ ?"

"ಇ ಹ್ಹಿಹ್ಹಿ !"

"ಮಕ್ಕಳಿಲ್ಲವಾ ?"

"ಎರಡಿವೆ. ನಿದ್ದೆ ಹೋಗಿದಾವೆ. ಊಟ ಆಯ್ತಾ ಅಣ್ಣ?"

ಇನ್ನೊಬ್ಬ ಭಟ ದಪ್ಪ ಗಂಟಲಲ್ಲಿ ಅಂದ :

"ಎಲ್ಲೀದು ಊಟ ? ಮಧ್ಯಾಹ್ನದಿಂದ ಇಲ್ಲಿ ಸಾಯ್ತಾ ಇದ್ದೇವೆ. ಆ ನಾಯಕ ಸತ್ತು ಬಿಡುಗಡೆ ಪಡೆದ. ನಾವು ಬದುಕಿದ್ದೇವೆ—ನಮಗೆ ಬಂಧನ."

ಅಹೂರಾ ರಾಗವೆಳೆದಳು :

"ಒಂದಿಷ್ಟು ಬುತ್ತಿ—ಚೀಲದಲ್ಲಿ ಸ್ವಲ್ಪ ಖಿವವ—ಉಳಿದಿವೆ. ಬೇಕಾ ?"

ಮೊದಲಿನ ಭಟನೆಂದ :

"ಬಿಟ್ಟಿ ಕೊಡ್ತೀಯಾ ?"

"ನಾನು ರೈತ ಹೆಂಗಸು. ತಿನ್ನೋದಕ್ಕೆ ಕುಡಿಯೋದಕ್ಕೆ ಯಾರಿಗಾದರೂ ಕೊಟ್ರೆ ವಿನಿಮಯಕ್ಕೆ ಏನೂ ತಗೊಳೋದಿಲ್ಲ—ಪಟ್ಟಣದವರ ಹಾಗೆ."

"ಓಹೋಹೋ ! ತಗೊಂಡ್ಬಾ. ಎಲ್ಲಿಟ್ಟಿದೀಯಾ ?"

"ಓ ಅಲ್ಲಿ......."

"ಕಿಸಪಿಸ ಮಾತು ಕೇಳ್ತದಲ್ಲಾ ? ಬೇರೆಯವರೂ ಯಾರೋ ಇದ್ದಂಗಿದೆ."

"ನಮ್ಮ ಪಕ್ಕದ ಹಳ್ಳೀದು ಒಂದೆರಡು ಸಂಸಾರ," ಎಂದು ನುಡಿದು ಅಹೂರಾ ಬುತ್ತಿ ತರಲು ಹೋದಳು.

ದಪ್ಪ ಗಂಟಲಿನ ಭಟನೆಂದ :

"ಏನು ಯೋಚ್ನೆ?"

"ಪಸಂದಾಗಿದ್ದಾಳೆ...."

"ಹೆಣ ಕಾಯೋದು ಬಿಟ್ಬಿಟ್ಟು........"

"ಅದೆಲ್ಲಿಗೆ ಹೋಗ್ತದೆ ? ದಳಪತಿಗೆ ಗೊತ್ತಾಗಬಾರದು, ಅಷ್ಟೆ........"

"ಸರಿ....ಊಟ ಬರ್ಲಿ ಮೊದ್ಲು."

ಅಹೂರಾ ಬಂದಳು.

ಭಟರು ಉಣ್ಣಲು ಕುಡಿಯಲು ತೊಡಗಿದರು.

ಮೊದಲ ಭಟ ಅಹೂರಾಳತ್ತ ನೋಡಿ ಅಂದ :

" ಕೂತ್ಕೊ ಈ ಖಿವವ ವೈನಾಗಿದೆ. ನಮ್ಜತೆ ನೀನೂ ತಗೋ...."

" ನೀವು ತಗೊಳ್ಳಿ. ನಮ್ಮೂರಲ್ಲಿ ಖಿವವದ ಕೊಳವೇ ಇದೆ," ಎಂದಳು ಅಹೂರಾ ಅವರೆದುರು ಕುಳಿತುಕೊಳ್ಳುತ್ತ...."

" ಆಹಾ ! ನಿಮ್ಮೂರ್ರಲ್ಲಿ ಬೇರೆ ಹೆಂಗಸ್ರೂ ನಿನ್ನ ಹಾಗೆ ಇದಾರಾ?"

" ಅದನ್ನು ನಾನು ಹ್ಯಾಗೆ ಹೇಳ್ಲಿ ? "

ಅಷ್ಟು ಹೊತ್ತಿಗೆ ಕುಡಿದವರಂತೆ ನಟಿಸುತ್ತ, ತೂರಾಡಿಕೊಂಡು, ಔಟ ಮತ್ತು ಬೆಕ್ ಅಲ್ಲಿಗೆ ಬಂದರು.

ಔಟನೆಂದ :

" ಮೆಮಜಾ ಮಾಡ್ತಾ ಇದ್ದೀರಾ ?"

ಕತ್ತಲು, ಮುಖ ಕಾಣಿಸುತ್ತಿರಲಿಲ್ಲ. ಆದರೂ ದಪ್ಪ ಗಂಟಲಿನ ಕಾವಲುಗಾರನಿಗೆ ಈ ಧ್ವನಿಯನ್ನೆಲ್ಲೋ ಕೇಳಿದ್ದೇನೆ ಎನಿಸಿತು."

ಅವನೆಂದ : "ಏಯ್ ! ತೆಪ್ಪಗೆ ಹೊರಟ್ಹೋಗ್ರಿ ! ಮೇಲೆ ನೋಡಿದ್ರೋ ಇಲ್ವೋ ?"

" ಅಯ್ಯಯ್ಯಪ್ಪ ಹೆಣ ! " ಎಂದ ಬೆಕ್ ಗಾಬರಿಯ ಧ್ವನಿಯಲ್ಲಿ. ಭಟರಿಬ್ಬರೂ " ಹೊಹ್ಹೋಹ್ಹೋ " ಎಂದು ನಕ್ಕರು.

ನಗು ಮುಗಿಯುವುದರೊಳಗೆ ಬೆಕ್ ಮತ್ತು ಔಟ ಒಬ್ಬೊಬ್ಬ ಭಟನ ಹಿಂದಿನಿಂದ ಬಂದು, ತೋಳು ಹಾಕಿ ಕತ್ತನ್ನು ಬಳಸಿ ಒತ್ತಿದರು. ಉಸಿರು ಕಟ್ಟಿದಂತೆ, ನಗೆ ಚಡಪಡಿಸುವ ಗೊಗ್ಗರ ಸಪ್ಪಳವಾಗಿ ಮಾರ್ಪಟ್ಟಿತು.

ಬಟಾ ಮತ್ತು ಒಬ್ಬ ಅಂಬಿಗ ಧಾವಿಸಿ ಬಂದರು. ಬಾಯಿಗಳಿಗೆ ಚಿಂದಿ ಬಟ್ಟೆ, ತುರುಕಿದರು. ಕಣ್ಣುಗಳು ಕಾಣಿಸದಂತೆ ಪಟ್ಟಿ ಬಿಗಿದರು. ಬೆನ್ನ ಹಿಂದೆ ಎರಡೂ ಕೈಗಳನ್ನು ಕಟ್ಟಿದರು. ಕಾಲುಗಳಿಗೂ ಹಗ್ಗ ಸಂಕೋಲೆಯಾಯಿತು.

ನೆಲದಮೇಲೆ ಬಿದ್ದಿದ್ದವರ ಕತ್ತು ಕುಯ್ಯಬಹುದು ; ಇಲ್ಲವೆ ತಿವಿದು ಕೊಲ್ಲಬಹುದು. ಆದರೆ ಅವರು ಬಡಪಾಯಿಗಳು. ಅಮಾತ್ಯನಲ್ಲ, ಮಹಾ

ಅರ್ಚಕ ಮಹಾಪ್ರಭುವಲ್ಲ. ಬಟಾ ಅಂದುಕೊಂಡ: ಎಚ್ಚರವಿರುತ್ತಿದ್ದರೆ ಮೆನೆಪ್‌ಟಾ ಅಣ್ಣ ಹೇಳುತ್ತಿದ್ದ :

" ಅವರಿಗೇನೂ ಮಾಡ್ಬೇಡಿ."

ಅಸಹಾಯರಾಗಿ ಭಟರು ನೆಲದಮೇಲಿದ್ದುದನ್ನು ನೋಡುತ್ತ "ಬೇಗ! ಬೇಗ! " ಎಂದ ಬಟಾ.

ತಂಡದವರು ಆರೆಂಟು ಜನ ರಸ್ತೆಯ ಈ ಮಗ್ಗುಲಿಗೆ ಬಂದರು. ಬಟಾನ ನಿರ್ದೇಶದಂತೆ, ಬಿದ್ದಿದ್ದವರನ್ನು ಎತ್ತಿ ತುಸು ದೂರ ಒಯ್ದು ಕತ್ತಲಲ್ಲಿ ಎಸೆದು ಮರಳಿದರು.

" ಬೇಗ! ಬೇಗ!" ಎಂದ ಬಟಾ, ಪುನಃ ಪುನಃ.

ಔಟ ಮತ್ತು ಬೆಕ್ ಆಗಲೇ ಮಹಾದ್ವಾರದ ಗೋಪುರವನ್ನೇರಿದ್ದರು. ಬೇರೆ ಕೆಲವರು ಪ್ರಾಕಾರವನ್ನು ಹತ್ತಿ ನಿಂತರು.

ಶಿರಸ್ಸು ಮೊದಲು ಕೆಳಕ್ಕಿಳಿಯಿತು. ಅಹೂರಾ ಅದನ್ನು ಎದೆಗೆ ಅವಚಿಕೊಂಡಳು.

" ಶವವ ಚೀಲದೊಳಗಿಡು," ಎಂದ ಬಟಾ.

ಮೆನಪ್‌ಟಾನ ಶವದ ಪಾದಗಳಿಗೆ ಹಾಕಿದ್ದ ಕುಣಿಕೆಯನ್ನು ತಪ್ಪಿಸಿದರು. ಇಬ್ಬರೂ ಕೆಳಕ್ಕೆ ಸರಿಸಿದ ಮುಂಡವನ್ನು ಪ್ರಾಕಾರದ ಮೇಲಿದ್ದವರು ಸ್ವೀಕರಿಸಿದರು. ಅವರ ಕೈಗಳಿಂದ ನೆಲದಲ್ಲಿದ್ದವರು ಅದನ್ನು ಪಡೆದರು. ಬಟಾ ತಂದಿದ್ದ ಸೆಣಬಿನ ಚೀಲವನ್ನು ಮುಂಡ ಸೇರಿತು.

ಇನ್ನೊಬ್ಬ ಅಂಬಿಗನಾಗಲೇ ಕತ್ತೆಯನ್ನು ಅಲ್ಲಿಗೆ ತಂದಿದ್ದ. ಅದರ ಮೇಲೆ ಎರಡೂ ಚೀಲಗಳನ್ನಿರಿಸಿ ಹಗ್ಗಗಳಿಂದ ಬಿಗಿದರು.

ಬಟಾ ನಿರ್ದೇಶವಿತ್ತ :

" ಹೊರಡಿ ! ನಿಶ್ಶಬ್ದ! "

ತಂಡದವನೊಬ್ಬ ಎರಡು ಈಟಿಗಳನ್ನೂ ಎತ್ತಿಕೊಂಡ.

ತಂಡದವರು ನದೀ ತಟದತ್ತ ಸಾಗತೊಡಗಿದ ಮೇಲೆ, ಕತ್ತೆಯ ಕತ್ತಿನ ಹಗ್ಗವನ್ನು ಹಿಡಿದು ಬಟಾ ತುಸು ಎಳೆದ, ಹೇರಿನ ಸ್ಪರ್ಶವಾದೊಡನೆಯೇ ಹೊರಡಲು ಅದು ಸಿದ್ಧವಾಗಿತ್ತು. ಈಗ ಚಲಿಸತೊಡಗಿತು.

ಮಗುವನ್ನೆತ್ತಿಕೊಂಡಿದ್ದ ಅಹೂರಾಳ ಗಂಡ. ಅತ್ತೆಯ ಕೈಹಿಡಿದು, ನೀರಿನ ಆಳದಲ್ಲಿ ಉಸಿರಾಟವಿಲ್ಲದೆ ಈಸುತ್ತಿದ್ದವನಂತೆ ನಡೆಯುತ್ತಿದ್ದ ರಾಮೆ

ರಿಸ್‌ಟಾ, ಅವರನ್ನು ಹಿಂಬಾಲಿಸಿ ಕತ್ತೆ, ಅದರ ಮಗ್ಗುಲಲ್ಲಿ ಬಟಾ. ಹಿಂಬದಿಯಲ್ಲಿ ಔಟ, ಬೆಕ್........

ನಡಿಗೆ ನಿಧಾನವಾಯಿತು ಎಂದು ಬಟಾನಿಗೆ ಕಸಿವಿಸಿ. ಹೇರನ್ನು ತಾವೇ ತಲೆಯ ಮೇಲೆ ಹೊತ್ತು ಓಡಿದರೊ ? ಆಗ ಸಜ್ಜನರ ದೃಷ್ಟಿಯಲ್ಲಿ ತಾವು ಕಳ್ಳರಾದೇವು. ಅವರೇ ತಮ್ಮನ್ನು ಹಿಡಿಯಬಹುದು. ಈ ನಿಧಾನ ನಡಿಗೆಯೇ ಸರಿ. ಒಳನಾಡಿನ ಹಾದಿ ಹಿಡಿದಿರುವ ಪ್ರವಾಸಿಗರು ತಾವು....

ತನ್ನ ಮನಸ್ಸು ಛಿದ್ರಛಿದ್ರವಾದ, ಅದು ಗರಿಮೋಡವಾದ, ಆ ಮೋಡವನ್ನು ತಾನು ಅಮುಕಿ ಅಂಗೈಯಲ್ಲಿ ಹಿಡಿದ ಅನುಭವ ಬಟಾನಿಗೆ.

ಒಂದಾನೊಂದು ಕಾಲದಲ್ಲಿ ಈ ಬೀದಿಯಲ್ಲೋ ಮಗ್ಗುಲು ಬೀದಿಯಲ್ಲೋ ತಾನು ನಡೆದು ಹೋಗಿದ್ದೆ, ಕತ್ತೆಯ ಜತೆ. ಅದರ ಮೇಲಿತ್ತು, ನೀರಾನೆ ಪ್ರಾಂತದ ಕಾಣಿಕೆಯ ಗಡಿಯಾರವಿದ್ದ ಪೆಟಾರಿ ಮತ್ತು ನಾಯಕರ ಗಂಟುಗದಡಿ. ಈಗ ಕತ್ತೆಯ ಮೇಲಿರುವುದು ತಮ್ಮ ಬುಡಕಟ್ಟಿನ ಜನರ ಸರ್ವಸ್ವ. ಅದನ್ನು ಹೊತ್ತ ಪ್ರಾಣಿಯ ಮಗ್ಗುಲಲ್ಲೊಂದು ಜಂತು, ತಾನು.

ಔಟ, ಬೆಕ್ ಏನನ್ನೂ ಯೋಚಿಸುತ್ತಿರಲಿಲ್ಲ. ಅವರೀಗ ಉಸಿರಾಡುತ್ತ ಚಲಿಸುವ ಮರದ ಮೂರ್ತಿಗಳು.

ಮುಂದೆ ಹೊರಟಿದ್ದ ತಂಡದವರು ನಡಿಗೆಯನ್ನು ನಿಧಾನಗೊಳಿಸಿದ್ದರು. ಈಟಿ ಕಣ್ಣುಗಳು ತಿರುತಿರುಗಿ ನೋಡುತ್ತಿದ್ದುವು. ಯಾರಾದರೂ ತಡೆದು ನಿಲ್ಲಿಸಿದರೆ—ತಮ್ಮ ನೆರವು ಅಗತ್ಯವಾದರೆ........

ಮಧ್ಯರಾತ್ರಿಯ ಅನಂತರದ ಗಾಢನಿದ್ದೆ ನಾಗರಿಕಗೆ. ಎಲ್ಲೋ ಕೆಲವೆಡೆ ಕುಳಿತಿದ್ದ ಕಾವಲುಭಟರಿಗೆ ಮಂಪರು.

ಆದರೂ, ದೋಣಿ ಕಟ್ಟೆಯನ್ನು ಬಳಸಿ ಸಾಗುತ್ತಿದ್ದಂತೆ ಒಬ್ಬ ಕಾವಲುಗಾರ ದೂರದಿಂದ ಕೇಳಿದ :

"ಯಾಕ್ರಪ್ಪೋ, ಶಬ್ದ ಮಾಡ್ದೆ ಹೋಗ್ತಿದೀರಾ ?"

ತಂಡವನ್ನು ಸಮೀಪಿಸಿದ್ದ ಬಟಾನೆಂದ :

"ಅಲ್ಲಿ ಸಿಕ್ದ ಕಾವಲ್ನೋರು ಒಬ್ರು ಗಲಾಟೆಮಾಡ್ದೆ ಹೋಗಿ—ಅಂದ್ರು. ನೀವು ಮಾಡು ಅಂದರೆ ಮಾಡ್ತೇವೆ."

[ ಬಟಾನಿಗೆ ಸಮಾಧಾನ. ತಾನೇ ಅಲ್ಲವೆ ಈ ಮಾತನ್ನು ಆಡಿದ್ದು? ತಾನೇ ಅಲ್ಲವೆ ?]

ಕಾವಲುಗಾರ ಗದರಿದ :

" ನಡೀರಿ ಹೀಗೇನೇ."

ಹಾಗೆಯೇ ನಡೆದು ಅವರು ದೋಣಿ ತಲಪಿದರು.

ತಣ್ಣಗಾಗಿದ್ದ ಮರಳು. ಸ್ತಬ್ಧವಾಗಿದ್ದ ನದಿ. ಜೀವ ತಳೆದ ಅಂಬಿಗರು. ಅಂಜೂರ ವೃಕ್ಷದಡಿಯಿಂದ ಮೆನ್ನ ಎದ್ದು ಬಂದ.

ಕತ್ತಿ ಬಿಡುಗಡೆ ಪಡೆದು ನಿಜವಾದ ಒಡೆಯನನ್ನು ಹುಡುಕುತ್ತ ಹೋಯಿತು. ನೀರಾನೆ ಪ್ರಾಂತದ ಸರ್ವಸ್ವ ದೋಣಿಯ ಒಡಲಿನಲ್ಲಿ ರಕ್ಷಣೆ ಪಡೆಯಿತು.

" ಬೇಗ ! ಬೇಗ ! " ಎಂದ ಬಟಾ.

ಅವರೆಲ್ಲ ನೀರಿಗೆ ತಳ್ಳಿದ ದೋಣಿ ನೋಡನೋಡುತ್ತಿದ್ದಂತೆಯೇ ತುಂಬಿದ ಪಾತ್ರೆಯಾಯಿತು. ಹೊರಮೈಯ ಅರ್ಧಕ್ಕೂ ಹೆಚ್ಚು ಭಾಗವನ್ನು ನೀರು ಮುಚ್ಚಿತು. ಅಂಬಿಗರು ಹುಟ್ಟು ಹಾಕಿದಂತೆ ದೋಣಿ ದಕ್ಷಿಣಾಭಿ ಮುಖವಾಗಿ ಚಲಿಸತೊಡಗಿತು. ತೆರೆದ ಹಾಯಿಯಲ್ಲಿ ಗಾಳಿ ತುಂಬಿಕೊಂಡು ದೋಣಿಯ ಚಲನೆಯ ಗತಿ ಹೆಚ್ಚಿತು.

ಈಗ ಬಟಾ ದೋಣಿಕಾರ. ಕಾಲದ, ದೂರದ, ವೇಗದ ಪ್ರಜ್ಞೆಯುಳ್ಳ ವನು.

ಮನಸ್ಸಿನಲ್ಲೇ ಅವನು ಪ್ರಾರ್ಥಿಸಿದ :

" ಓ ಅಮನ್ ! ಅಪೂರ್ವ ಯಾನ ಕೈಕೊಂಡಿದ್ದೇನೆ. ಲೋಕದಲ್ಲಿ ಅತ್ಯಂತ ಅಮೂಲ್ಯವಾದ ಸರಕನ್ನು ಸಾಗಿಸ್ತಿದ್ದೇನೆ. ನನ್ನ ಬಾಹುಗಳಿಗೆ ಅಧಿಕ ಬಲ ಕೊಡು. ದೋಣಿಗೆ ಬಾಣದ ವೇಗವನ್ನು ನೀಡು, ಓ ಅಮನ್ ! ನನ ಯಾನ ಸುರಕ್ಷಿತವಾಗಲಿ ! ಯಾನ ಸುರಕ್ಷಿತವಾಗಲಿ !"

೧೪

ಹಿಂದೆ ಮೆನೆಸ್‌ಟಾನ ಜತೆ ರಾಜಧಾನಿಗೆ ಹೋಗುವ ಅವಕಾಶ ದೊರೆ

ಯದೆ ಇದ್ದಾಗ, "ಅಲ್ಲಿಂದ ಕರೆಕೊಂಡು ಬರೋದಂತೂ ನಾವೇ" ಎಂದಿದ್ದರು. ಅಬ್ಟು ಯಾತ್ರಿಕರು.

ಈಗ ಅಲ್ಲಿಂದ ಕರೆದುಕೊಂಡು ಬರುತ್ತಲಿದ್ದವರು ಅವರೇ. ಆದರೆ, ಆದರೆ....

ತನ್ನೆದುರಿನ ಇರುಳನ್ನೂ ನೀರನ್ನೂ ನೋಡುತ್ತ ಹಾಯಿಕಂಬಕ್ಕೊರಗಿ ಕುಳಿತು ಅದುಮಿ ಹಿಡಿದಿದ್ದ ಸಂಕಟದ ಕಟ್ಟುಗಳನ್ನೆಲ್ಲ ಬಟಾ ಕಡಿದ. ಕಂಬನಿ ಧಾರೆಗಟ್ಟಿತು. ಅದೆಷ್ಟು ಹೊತ್ತು ಹಾಗೆ ಸದ್ದಿಲ್ಲದೆ ಅತ್ತನೋ? ಕಣ್ಣೀರಿನಿಂದ ಮಬ್ಬಾದ ದೃಷ್ಟಿಗೆ ಅಸ್ಪಷ್ಟ ಆಕೃತಿಗಳು ಕಾಣಿಸುತ್ತಿದ್ದುವು. ಸದ್ದುಗಳು ಅಯಾಚಿತವಾಗಿ ಕೇಳಿಸುತ್ತಿದ್ದುವು. ದಕ್ಷಿಣಾಭಿಮುಖವಾಗಿ ಸಾಗುತ್ತಿದ್ದ ಬೇರೆ ದೋಣಿಗಳು ನದಿಯಲ್ಲಿ. ಅವನ್ನು ಹಿಂದಿಕ್ಕಿ ತನ್ನ ದೋಣಿ ಮುಂದು ವರಿಯುತ್ತಿತ್ತು. ಎದುರು ದಿಕ್ಕಿನಿಂದ ಬರುತ್ತಿದ್ದ ದೋಣಿಗಳೂ ಆಗೊಮ್ಮೆ ಈಗೊಮ್ಮೆ ಸಿಗುತ್ತಿದ್ದವು. ಅಂಥ ಸಂದರ್ಭಗಳಲ್ಲಿ ತನ್ನ ಅಂಬಿಗರು "ಹೋ ಹೋ ಹೋ" ಎನ್ನುತ್ತಿದ್ದರು. ಢಿಕ್ಕಿಯಾಗದಂತೆ ವಹಿಸುವ ಎಚ್ಚರ. ಬಟಾನ ನಿರ್ದೇಶಗಳಿಲ್ಲದೆ ಹಾಸೋಕ್ತಿ ಚಾಟೂಕ್ತಿಗಳಿಲ್ಲದೆ ಆತನ ದೋಣಿಯಲ್ಲಿ ಯಾನ ಸಾಧ್ಯವೆಂದು ಯಾರು ನಂಬಿದ್ದರು. ಈ ಸಲ ಅವನ ಸೂಚನೆಗಳ ಸಂಜ್ಞೆಗಳ ಯಾವ ಅಗತ್ಯವೂ ಇರಲಿಲ್ಲ. ಅಂಬಿಗರ, ಯಾತ್ರಿಕರ ಜಾಗೃತ ಪ್ರಜ್ಞೆಯೇ ಆ ದೋಣಿಗೆ ದಿಕ್ಸೂಚಿಯಾಗಿತ್ತು, ನೂಕು ಬಲವಾಗಿತ್ತು. ಕಣ್ಣಿನ ಕೊಳಗಳು ಬರಿದಾದಂತೆ ಅನಿಸಿದಾಗ, ದೋಣಿಯಲ್ಲಿದ್ದ ಎಲ್ಲರ ಮುಖ ಗಳನ್ನೂ ದಿಟ್ಟಿಸಲು, ಕತ್ತಲಲ್ಲೂ ಒಬ್ಬೊಬ್ಬರಾಗಿ ಅವರನ್ನು ಗುರು ತಿಸಲು ಬಟಾ ಯತ್ನಿಸಿದ. ತನ್ನ ಅವಸ್ಥೆಯೇ ಉಳಿದೆಲ್ಲರಿಗೂ? ತಮಗೆ ಬೇಕಾದವರು ಮಡಿದಾಗ ಅಳುವುದೂ ದುಸ್ಸಾಧ್ಯವಾದ ಪರಿಸ್ಥಿತಿ ಇದೆಂಥದು? ಹಿಂದೆ ತಾನು ಹೇಳಿದ್ದೆ : 'ನನ್ನ ಸಂಕಟ ಹೇಳಲಾ ಅಣ್ಣ? ಎಷ್ಟು ದಿವಸ ಅಂತ ನನ್ನಲ್ಲೇ ಮುಚ್ಚಿಟ್ಕೊಳ್ಲಿ? ನಾನು ಹೋಗ್ತಿರೋದು ನಮ್ಮವರನ್ನು ಕರಕೊಂಡು ಬರೋದಕ್ಕೆ. ನಾವಿಷ್ಟೇ ಜನ ನಿನ್ನ ಜತೆ ಇದ್ದು ಏನಾದರೂ ಅಚಾತುರ್ಯ ಆದರೆ, ನಾನು ನಮ್ಮ ಜನರಿಗೆ ಹ್ಯಾಗೆ ಮುಖ ತೋರಿಸಲಿ? ಏನೂಂತ ಹೇಳಲಿ?' ತಮ್ಮವರನ್ನೇನೋ ಕರಕೊಂಡು ಬಂದುದಾಯಿತು. ಆದರೆ, ಆದ ಪ್ರಯೋಜನ? ಪ್ರಮಾದ ನಡೆದೇಬಿಟ್ಟಿತಲ್ಲ? ತನಗೆ ಸರಿ

ಎಂದು ಕಂಡ ದಾರಿ ಬಿಟ್ಟು, ಅಣ್ಣ ಒಂದಿಷ್ಟೂ ಚಲಿಸಲಿಲ್ಲ. ಈಗ ಊರಿನಲ್ಲಿ ತಾನು ಮುಖ ತೋರಿಸುವುದು ಹೇಗೆ? ಹೇಳುವುದು ಏನನ್ನು ?....

ಬಟಾನ ಅಲೆಯುವ ದೃಷ್ಟಿ ದಿವ್ಯಾತ್ಮ ಮೆನ್ನನನ್ನು ಹುಡುಕಿತು. ನೀಳ ವಾಗಿ ಮಲಗಿಸಿದ್ದ ಚೀಲಗಳು. ಅವುಗಳ ಪಕ್ಕದಲ್ಲಿ ಅಂಗಾತ ಬಿದ್ದಿರುವ ದೇಹ? ತನಗೆ ಕನಸು. ಚೀಲಗಳಿಂದ ಹೊರಬಿದ್ದು ಅಣ್ಣ ಜೀವ ತಳೆದಿರ ಬಹುದೆ? ಎಂಥ ಹುಚ್ಚು! ಮಲಗಿ ನಿದ್ದೆ ಹೋಗಿರುವವನು ಮೆನ್ನ, ಶವದ ಪಕ್ಕದಲ್ಲಿ. ಒಂದು ವಿಮುಕ್ತ ಜೀವ ಹೀಗೂ ಇರುವುದು ಸಾಧ್ಯವೆ?

ಇವರೆಲ್ಲ ತುಸು ತೊನೆದಾಡುವ ಪ್ರತಿಮೆಗಳಾಗಿದ್ದಾರೆ. ಪರಸ್ಪರ ಅಂಟಿ ಕೊಂಡು ಏಕಜೀವವಾಗಿದ್ದಾರೆ. ಮನ ದಣಿಯುವಷ್ಟು ಕಣ್ಣೀರು ಸ್ನಾನ. ಬಳಿಕ ಮೌನ. ತಪ್ತ ಮೆದುಳು. ಜಡ ಹೃದಯ. ಸಣ್ಣನೆ ಬೀಸುತ್ತಿರುವ ತಣ್ಣನೆಯ ಗಾಳಿಗೆ ಇವರೆಲ್ಲ ನಿದ್ದೆ ಹೋಗಬಹುದು, ನಿದ್ದೆ ಹೋಗಬೇಕು.

ರಾಮೆರಿಪ್‌ಟಾಗೆ ನಿದ್ದೆ ಬಂದಿರಬಹುದೆ? ಬಟಾ ಬಲಕ್ಕೆ ನೋಡಿದ. ಎಡಕ್ಕೆ ನೋಡಿದ. ಅಲ್ಲಿ ಮೂಲೆಯಲ್ಲಿದ್ದಳು ಅಹೂರಾ. ಅವಳ ಮಗ್ಗುಲಲ್ಲಿ ಮಗು ಮಲಗಿದೆ. ಅವಳ ತೋಳಿಗೊರಗಿ ರಾಮೆರಿಪ್‌ಟಾ ಕುಳಿತಿದ್ದ. ಈತ ಈಗ ಹುಡುಗನಲ್ಲ. ಒಂದೇ ದಿನದ ಅವಧಿಯಲ್ಲಿ ಪ್ರಬುದ್ಧನಾಗಿದ್ದಾನೆ. ತೂಕಡಿಸುತ್ತಿಲ್ಲ. ಕತ್ತಲಲ್ಲಿ ಹೊಳೆಯುವ ಕಣ್ಣುಗಳು. ಬಟಾನಿಗೆನಿಸಿತು: 'ರಾಮೆರಿ ನನ್ನನ್ನೇ ನೋಡುತ್ತಿದ್ದಾನೆ.' ರಾಮೆರಿಯನ್ನು ದಿಟ್ಟಿಸುತ್ತ, ಅವನ ತಾಯಿ ನೆಫಿಸ್‌ಳನ್ನು ನೆನೆಯುತ್ತ, ಬಟಾನ ಕಣ್ಣುಗಳಲ್ಲಿ ಮತ್ತೆ ನೀರು ಚಿಮ್ಮಿತು.

ತಾನು ಮೂರ್ಖ. ಅಣ್ಣನನ್ನು ಬಿಟ್ಟು ಊರಿಗೆ ಮರಳಿದ್ದೇ ತಪ್ಪಾ ಯಿತು. ಅವನ ಪಕ್ಕದಲ್ಲೇ ಇದ್ದಿದ್ದರೆ ಬಹುಶಃ ಹೀಗಾಗುತ್ತಿರಲಿಲ್ಲ; ಅಣ್ಣ ನನ್ನು ಗಂಡಾಂತರದಿಂದ ಪಾರು ಮಾಡುವುದು ಸಾಧ್ಯವಿರುತ್ತಿತ್ತು....ಅಥವಾ, ಅಥವಾ....ತಾನು ಇದ್ದಿದ್ದರೂ ಹೀಗೆಯೇ ಆಗುತ್ತಿತ್ತೇನೋ? ಅವನು ಹಟ ಮಾರಿ. ಕಾರಾಗೃಹದಿಂದ ತಪ್ಪಿಸಿಕೊಳ್ಳುವುದು ಶಕ್ಯವಿದ್ದಾಗಲೂ ನಿರಾ ಕರಿಸಿದನಲ್ಲ....

'ಅಣ್ಣ, ಅಣ್ಣ. ನೀನೇನು ಮಾಡಿಬಿಟ್ಟೆ?'

ಕಳೆದ ಅಬ್ಟು ಯಾತ್ರೆಯಿಂದ ಮೊದಲ್ಗೊಂಡು ಬೇರೆಯೇ ದಾರಿ ಹಿಡಿ

ಯಿತು. ತಮ್ಮೆಲ್ಲರ ಬದುಕು. ಅದು ಬಂಗಾರದ ಬಣ್ಣದಿಂದ ಹೊಳೆಯಿತು. ಈಗ ಇದ್ದಕ್ಕಿದ್ದಂತೆ—

'ಅಣ್ಣ, ಅಣ್ಣ, ರಾಜಧಾನಿಗೆ ನಾವು ಬಂದದ್ದು ತಪ್ಪಾಯಿತು.'

ಹೀಗೆ ಆಗುತ್ತದೆ ಎಂದು ಜನ್ಮನಕ್ಷತ್ರ ಫಲದಲ್ಲಿ ಹೇಳಿತ್ತೆ ?

'ನೀನು ಜನನಾಯಕನಾಗಲೆಂದೇ ಹುಟ್ಟಿದೆ; ಜನನಾಯಕನಂತೆಯೇ ಬಾಳಿದೆ....ಜನನಾಯಕನಂತೆಯೇ....ಅವಸಾನವೂ? ಯಾವಾಗಲೂ ಹೀಗೆಯೇ ಏನು ?'

....ಬಲ ದಂಡೆಯಲ್ಲಿ ಆರಿಸದೆ ಉಳಿದಿರುವ ಹತ್ತಿಪ್ಪತ್ತು ಮನೆ ದೀಪಗಳು. ಇದು ಲಿಷ್ಟ್ ಪಟ್ಟಣ.

ಕೈ ಹಿಡಿದು ತೊಟ್ಟಿಲಾಡಿಸಿದ ಗೇಬು. ಅಯ್ಯೋ ! ಎಂಥ ಮೋಸ !

....ಪಟ್ಟಣವನ್ನು ದಾಟಿ ಪಯಣ. ಅನುಕೂಲ ಪವನ ಜೋರಾಗಿ ಬೀಸುತ್ತಿದೆ. ಗಾಳಿ ಕಡಿಮೆಯಾದಾಗ ತಿರುವುಗಳಲ್ಲಿ ಹುಟ್ಟುಹಾಕುತ್ತಾರೆ. ಈ ವೇಗ ಉಳಿಸಿಕೊಂಡರೆ ಒಂದು ದಿನ ಮುಂಚಿತವಾಗಿಯೇ ಊರು ಸೇರ ಬಹುದು.

ಇದು ಮುಂಜಾವದ ತಣುಪು ಗಾಳಿ. ಅಣ್ಣನಿಗೆ ಚಳಿಯಾಗುತ್ತಿದೆ ಯೇನೋ !

'ಅಣ್ಣ ! ಅಣ್ಣ ! ಒಮ್ಮೆ ಬಟಾ ಅಂತ ಕರೀಬಾರದೆ ಅಣ್ಣ ? ಅಣ್ಣ ! ನಾನು ಮೂರ್ಖ ಅಣ್ಣ !'

ಹಿಂದಿಕ್ಕುವ ದೋಣಿಗಳ ಸಂಖ್ಯೆ ಕಡಿಮೆಯಾಗಿದೆ. ಇವರೆಲ್ಲ ತಡವಾಗಿ ಮೆಂಫಿಸಿನಿಂದ ಹೊರಟವರು. ಅಣ್ಣ ದೇಹಾಂತ ಶಿಕ್ಷೆಗೆ ಒಳಗಾದೊಡನೆ. ಅಥವಾ ನ್ಯಾಯಮೂರ್ತಿ ತೀರ್ಪು ಕೊಟ್ಟೊಡನೆ, ಇಲ್ಲವೆ ಇನ್ನೂ ಮುಂಚೆ, ಸೆಡ್ ಉತ್ಸವ ಮುಗಿಸಿ ರಾಜಧಾನಿ ಬಿಟ್ಟವರೆಲ್ಲ ತಮ್ಮ ಊರುಗಳನ್ನು ಈ ವೇಳೆಗೆ ತಲಪಿರಬಹುದು, ಇಲ್ಲವೆ ಸಮೀಪಿಸುತ್ತಿರಬಹುದು.

"ಹೋ ! ಹೋ ! ಹೋ !"

ಬರುತ್ತಿರುವ ಎದುರು ನಾವೆಯಿಂದಲೂ ಧ್ವನಿ.

ತಮ್ಮ ದೋಣಿಯೊಳಗಿಂದ ಚೀತ್ಕಾರ. ಬಟಾ ಗಾಬರಿಗೊಂಡು ಅತ್ತಿತ್ತ ನೋಡಿದ. ಮೆನ್ನ ಗಡಬಡಿಸಿ ಏಳುತ್ತಿದ್ದುದನ್ನು ಕಂಡ. 'ಚಿಟಾರನೆ

ಚೀರಿದ್ದು, ಮೆನ್ನಯ್ಯ.'

ತಕ್ಷಣ ಎದ್ದು, ಯಾರನ್ನೂ ತುಳಿಯದಂತೆ ಎಚ್ಚರ ವಹಿಸಿ, ಬಟಾ ಅತ್ತ ನಡೆದು, ಮೆನ್ನನ ಪಕ್ಕದಲ್ಲಿ ಕುಳಿತ.

"ಅಯ್ಯೆ! ಅಯ್ಯೆ!"

ಮುಖವನ್ನು ಎರಡೂ ಅಂಗೈಗಳಿಂದ ಮುಚ್ಚಿಕೊಂಡಿದ್ದ ಮೆನ್ನ ಅದುರಿದ ಗಂಟಲಲ್ಲಿ "ಹ್ಣ ?" ಎಂದ; ಅಂಗೈಗಳನ್ನು ಸರಿಸಿದ.

"ಕೂಗಿಕೊಂಡಿರಿ, ಅಯ್ಯ."

"ಹ್ಣ. ನಮ್ಮ ಅಂಬಿಗ ಹೋಹೋಹೋ ಅನ್ತಿದ್ದಹಾಗೆ ಮಹಾ ಅರ್ಚಕನ ದೋಣಿ ನಮ್ಮದಕ್ಕೆ ಗುದ್ದಿತು. ಮೂರು ದೋಣಿಗಳಲ್ಲಿ ಇನ್ನೂರು ಯೋಧರು...."

"ದುಃಸ್ವಪ್ನ."

"ಹ್ಣ. ಹೌದು. (ಮೂಡಣ ದಿಕ್ಕಿಗೆ ದೃಷ್ಟಿ ಹಾಯಿಸಿ) ಶವ ಕಾಣೆಯಾದದ್ದು ಇಷ್ಟು ಹೊತ್ತಿಗೆ ಕಾವಲುಗಾರ ಭಟರ ದಳಪತಿಗೆ ಗೊತ್ತಾಗಿರಬಹುದೂಂತ ಭಾವಿಸೋಣ. ಅದು ಅಮಾತ್ಯರಿಗೆ ವರದಿಯಾಗೋದು ನಸುಕಿನಲ್ಲಿ. ಪೆರೋಗೆ ಅಮಾತ್ಯ ವರದಿ ಮಾಡೋದು ಬೆಳಿಗ್ಗೆ. ಅಷ್ಟು ಹೊತ್ತಿಗೆ, ರಾತ್ರೆ ಯಾರೋ ಲೇಪನಸಾಮಗ್ರಿ ಕೊಂಡ್ಕೊಂಡ್ರು ಅಂತ ಅಪ್ಪೋಫಿಸ್ ಮಹಾ ಅರ್ಚಕರಿಗೆ ಹೇಳ್ತಾನೆ. ಚೌರ್ಯದ ತನಿಖೆ ರಾಜಧಾನೀಲಿ ನಡೀತದೆ. ಮಧ್ಯಾಹ್ನದ ಊಟ ಆದ ಮೇಲೆ ದಂಡಯಾತ್ರೆ ಆರಂಭ."

"ನಾಯಕರನ್ನು ನೀರಾನೆ ಪ್ರಾಂತಕ್ಕೆ ಒಯ್ದಿರಬಹುದು ಅಂತ ಯಾರಿಗಾದರೂ ಸಂದೇಹ ಹುಟ್ಟೀತು."

"ಖಂಡಿತ. ನೀರಾನೆ ಪ್ರಾಂತದವರ ದೋಣಿ ನೋಡಿದಿರಾ ಅಂತ ಎದುರು ಸಿಕ್ಕಿದವರನ್ನು ಕೇಳ್ಕೊಂಡು, ವೇಗವಾಗಿ ಬರ್ತಾರೆ."

"ಹಗಲು ಒಮ್ಮೆ, ಕತ್ತಲಾದ ಮೇಲೆ ಒಮ್ಮೆ ದಂಡೆ ಮುಟ್ಟಿದರೆ ಸಾಕು. ಅಪರ ದೋಣಿಗಳಿಗಿಂತ ಹೆಚ್ಚೆಂದರೆ ಒಂದು ದಿವಸ, ಕಮ್ಮಿ ಎಂದರೆ ಒಂದು ಹೊತ್ತು ಮುಂಚೆಯೇ ನಾವು ಊರು ಸೇರ್ತೇವೆ."

ಸಂವಾದ ಹತ್ತಿರ ಇದ್ದವರಿಗೆಲ್ಲ ಕೇಳಿಸಿತು. ತುಸು ಆಚೆ ಈಚೆ ಇದ್ದವರಿಗೂ ಅರ್ಥವಾಯಿತು.

ಮೆನ್ನ ಮತ್ತೊಮ್ಮೆ ಮೂಡಣದತ್ತ ನೋಡಿ ಕೇಳಿದ :

" ಅದು ನಸುಬೆಳಕು ಅಲ್ಲವಾ ?"

ಅಳಲು ಇನ್ನು ಉಳಿದವರ ಪಾಲಿಗೆ ಎಂದು, ಬಟಾ ವಾಸ್ತವ ಪ್ರಪಂಚಕ್ಕಿಳಿದ.

" ಹೂಂ. "

" ರಾ ಉದಿಸೋದಕ್ಕೆ ಮುಂಚೆ ಶವಕ್ಕೆ ಸ್ನಾನವಾಗ್ಬೇಕು. ದೇವಸೇವಕನಾದ ನಾನು ಸ್ನಾನ ಮಾಡ್ಬೇಕು. ಬೆಳಕು ಹರಿಯುತ್ಲೇ ಶವಲೇಪನದ ಮೊದಲ ಕ್ರಿಯೆ ಆರಂಭಿಸ್ತೇನೆ. ಸಾಯಂಕಾಲದೊಳಗೆ ಲೇಪನ ಮುಗೀತದೆ."

" ಈಗ ದೋಣಿ ನಿಲ್ಲಿಸ್ಬೇಕಾ ಅಯ್ಯ ?"

" ಹೌದು."

ಸಂಗಡಿಗರನ್ನು ಉದ್ದೇಶಿಸಿ ಬಟಾನೆಂದ :

" ಸ್ವಲ್ಪ ಹೊತ್ತು ದಡಕ್ಕಿಳಿದು ಮುಂದುವರಿಯೋಣ."

ಇರುಳು ಕಳೆಯುತ್ತ ಬಂದಂತೆ ಮರಳಿನ ಬಿಳುಪು ಹೆಚ್ಚಿತು. ದಡ ಮುಟ್ಟುವುದು ಅನುಕೂಲವಾಗಿದ್ದ ಕಡೆ ದೋಣಿ ನಿಂತಿತು.

ಮೆನ್ನ ಕೆಳಕ್ಕೆ ಧುಮುಕಿ. ಒಂದು ಮೂಲೆಯಲ್ಲಿ ಎರಡು ಕಲ್ಲುಗಳನ್ನು ಜೋಡಿಸಿ ಇಟ್ಟ. ದೋಣಿಯಲ್ಲಿದ್ದ ಸೆಣಬಿನ ಚೂರುಗಳನ್ನು ತಂದು ದಂಡೆಯ ಮೇಲೆ ದೊರೆತ ಒಣಗಿದ ಪೆಪ್ಪೈರಸ್ ದಂಟುಗಳನ್ನು ಬಳಸಿ, ಚಕಮಕಿಯ ನೆರವಿನಿಂದ ಬಟಾ ಉರಿ ಮಾಡಿದ. ಜನ ಬಹಿರ್ದೆಶೆಗಾಗಿ ದೂರ ತೆರಳಿದಾಗ ಮೆನ ಮಡಕೆಯಲ್ಲಿ ರಾಳವನ್ನಿಟ್ಟು, ನೀರು ಸುರಿದು ಒಲೆಯ ಮೇಲಿರಿಸಿ, ದ್ರಾವಣ್ಣವನ್ನು ಸಿದ್ಧಗೊಳಿಸಿದ.

ಈ ಕೆಲಸಕ್ಕೆ ಹಿನ್ನೆಲೆಯಾಯಿತು ಅವನೇ ನುಡಿಯುತ್ತಿದ್ದ ಪ್ಟಾ ಸ್ತೋತ್ರ.

ಬಟಾನೂ ಮೆನ್ನನೂ ಮೆನೆಪ್ಟಾನ ರುಂಡ ಮುಂಡ ಅವಯವಗಳಿದ್ದ ಚೀಲಗಳನ್ನು ದಂಡೆಗೆ ತಂದರು. ಮಲಗಿಸಿ, ನೀರಿನಿಂದ ಮೈಯನ್ನು ತೊಳೆದರು ರುಂಡವನ್ನು ಮುಂಡಕ್ಕೆ ಜೋಡಿಸಿ ಕಂಕುಗಳನ್ನು ಆಧರಿಸಿ ಸೆಣಬಿನ ದಾರದಿಂದ ಬಿಗಿದರು. ಸುತ್ತುಗಟ್ಟಿ ನಿಂತವರಿಗೆಲ್ಲ ಕಂಡುದು ಮೆನೆಪ್ಟಾನ ಶಾಂತ ಮುಖಮುದ್ರೆ.

ಬಿಕ್ಕಿ ಅಳತೊಡಗಿದಳು ಆಹೂರಾ, ಔಟ, ಬೆಕ್ "ಹೋ" ಎಂದು ರೋದಿಸಿದರು. "ಅಯ್ಯೋ! ಅಯ್ಯೋ!" ಎಂದು ಬಟಾ ಎದೆಗೆ ಹೊಡೆದು ಕೊಂಡ.

ಕಣ್ಣೀರು ಸುರಿಸುತ್ತ, ಮೂಗಿನಿಂದ ಹರಿಯುತ್ತಿದ್ದುದನ್ನು ಒರೆಸಿ ಎಸೆ ಯುತ್ತ ಮೆನ್ನ ಅಂದ:

"ಸತ್ತವನ ಹೆಸರು ಹೇಳ್ತಾ ಎಲ್ಲರೂ ಅತ್ಬಿಡಿ. ಅದರಿಂದ ಅವನಿಗೂ ಒಳ್ಳೇದು, ನಮಗೂ ಒಳ್ಳೇದು."

"ಓ ಮೆನೆಪ್ಟಾ, ಓ ಮೆನೆಪ್ಟಾ.", ಎಂದ ಒಬ್ಬ.

ಉಳಿದವರು ಪುನರುಚ್ಚರಿಸಿದರು.

ಮೆನ್ನ ನುಡಿದ:

"ಓ ಒಸ್ಸೆರಿಸ್ ಓ ಒಸ್ಸೆರಿಸ್...."

ಶೋಕಧ್ವನಿಯಲ್ಲಿ ಜನರೆಂದರು:

"ಓ ಒಸ್ಸೆರಿಸ್ ಓ ಒಸ್ಸೆರಿಸ್."

ಮತ್ತೆ ಮತ್ತೆ ನಾಮೋಚ್ಚಾರ.

ಆವರೆಗೆ, ಎದೆಯ ಮೇಲೆ ಭಾರದ ಅನುಭವ. ನಿರಾತಂಕವಾಗಿ ಕಂಬನಿ ಹರಿದ ಮೇಲೆ, ಎಲ್ಲರಿಗೂ ಸಮಾಧಾನ.

ರಾಮೆರಿಪ್ಟಾನ ತುಟಿಗಳು ಚಲಿಸಿದುವು....ಆದರೆ ಕಣ್ಣುಗಳು ಒದ್ದೆ ಯಾಗಲಿಲ್ಲ.

ಈ ಹುಡುಗ ಹೀಗಿರಬಾರದು, ಅಳಬೇಕು—ಅಳಬೇಕು ಎಂದು ಬಟಾನ ಮನಸ್ಸು ಗೋಳಾಡಿತು.

ಮೆನೆಪ್ಟಾನ ಶವವನ್ನೆತ್ತಿ ದೋಣಿಯಲ್ಲಿ ಮಲಗಿಸಿದರು. ಬಟಾ ಬಟ್ಟೆ ಯನ್ನು ಕತ್ತಿನವರೆಗೂ ಹೊದಿಸಿದ. ಪುಟ್ಟದೊಂದು ಮಡಕೆಯಲ್ಲಿ ಕೆಂಡ ಗಳನ್ನಿರಿಸಿ ಆಹೂರಾ ದೋಣಿಯೊಳಕ್ಕೆ ತಂದು ಅದಕ್ಕಿಷ್ಟು ಧೂಪದ ಪುಡಿ ಸುರಿದು, ಶವದ ಪಾದಗಳ ಬಳಿ ಇರಿಸಿದಳು. ಸುಗಂಧಧೂಮ ಅಲೆಅಲೆಯಾಗಿ ಮೇಲೆದ್ದಿತು. ಸಂಗಡಿಗರೆಲ್ಲ ದೋಣಿ ಹತ್ತಿದರು.

"ಖ್ನೆಮ್‌ಹೊಟೆಪ್ ಇಲ್ಲಿ ಇದ್ದಿದ್ದರೆ ಶಿಸ್ತು—ಶಿಸ್ತು—ಅನ್ತಿದ್ದ," ಎಂದ ಬಟಾ.

ಶವದ ಸುತ್ತಲೂ ಮೆನ್ನನ ಚಲನೆಗಾಗಿ ಜಾಗ ಬಿಟ್ಟು ಅಲ್ಲಿದ್ದವರು ವ್ಯವಸ್ಥಿತವಾಗಿ ಕುಳಿತರು.

ಮೂಡಣ ಕೆಂಪು ಬಲವಾಯಿತು. ದೋಣಿ ನಡುನೀರಿಗೆ ಬಂದು ಹಾದಿ ಹಿಡಿದಂತೆ ರಾ ಉದಿಸಿದ.

ಉಳಿದೆಲ್ಲರ ಜತೆ ತಾನೂ ತಲೆಬಾಗಿಸಿ, ಮೆನ್ನ ಇಂಪಾಗಿ ಹಾಡಿದ :

" ರಾ ನಮೋ ; ಒಸ್ಸೆರಿಸನ ಪಿತೃ ನಮೋ."

ದಿವ್ಯ ಪ್ರಭೆಯೆ ನಮೋ
ನಮೋ ನಿನಗೆ, ನಮೋ ನಮೋ...."

ಹಿಂದಿನ ದಿನ ಮಧ್ಯಾಹ್ನದ ಬಳಿಕ ಯಾರೂ ಉಂಡಿರಲಿಲ್ಲ. ಇಂದೂ ಆ ಯೋಚನೆಯನ್ನು ಯಾರೂ ಮಾಡಲಿಲ್ಲ. ಅಹೂರಾಳ ಮಗು ಅಳತೊಡಗಿತು, ಹಸಿವಿನಿಂದ.

ಬಟಾ ಅಂದ :

" ಅದಕ್ಕೇನಾದರೂ ಕೊಡು, ತಂಗಿ."

ಬಟಾನಿಗೆ ನೆನಪಿತ್ತು : ಅಬ್ಟು ಯಾತ್ರೆಯ ವೇಳೆ ಆ ಮಗು ಅತ್ತಾಗ ಅಹೂರಾ ಮೊಲೆಯೂಡಿಸಿದ್ದಳು. ಈಗ ಪುಟ್ಟ ಹಲ್ಲುಗಳಲ್ಲಿ ರೊಟ್ಟಿ ಕಡಿದು ಮೆಲ್ಲತೊಡಗಿತು ಅದು.

ತುಸು ಅಳುಕಿನಿಂದಲೆ ಅಹೂರಾ ರಾಮೆರಿಪ್‌ಟಾನನ್ನು ಕೇಳಿದಳು :

" ಮಗ, ಏನಾದರೂ ಬೇಕಾ ?"

ರಾಮೆರಿ ತಲೆಯಲ್ಲಾಡಿಸಿ, ಎಡೆ ಮಾಡಿಕೊಂಡು ಶವವನ್ನು ಸಮೀಪಿಸಿ, ಅದರ ಕಾಲ ಬುಡದಲ್ಲಿ ಕುಳಿತ, ತಂದೆಯ ಮುಖವನ್ನು ನೋಡುತ್ತ.

ತುಂಬಿಕೊಂಡ ಹಾಯಿ ವೇಗದ ಚಲನೆ. ಪ್ರಶಾಂತ ನದಿಗೂ ಈಗ ಜಾಗೃತಾವಸ್ಥೆ. ಹಾರುವ ಹಕ್ಕಿಗಳು. ನದಿಯ ಅಂಚುಗಳಲ್ಲಿ ಪೆಪ್ಪೈರಸ್ ಗಿಡಗಳ ನಡುವೆ ಕಲರವ, ಆರಂಭಿಸಿದ ಕಾಡು ಬಾತುಕೋಳಿಗಳು.

ಒದ್ದೆಯಾಗಿದ್ದ ಮೆನ್ನನ ಮೈ ಆರತೊಡಗಿತು. ಹನಿಗಳು ಅಲ್ಲಲ್ಲಿ ಧಾರೆಗಟ್ಟಿ ಕೆಳಕ್ಕಿಳಿದುವು.

ಗುಣಗುಣಿಸುವ ಧ್ವನಿ ಮೆನ್ನನಿಂದ ಹೊರಟಿತು. ಎಲ್ಲರ ದೃಷ್ಟಿಯೂ ಆತನ ಮೇಲೆ ನೆಟ್ಟಿತು.

ತನ್ನ ಬಾಯಿಯೊಳಗಿನ ಗುನುಗುನು ಏನೆಂಬುದು ಮೆನ್ನನಿಗೇ ತಿಳಿಯದು. ಅವು ನಿರ್ದಿಷ್ಟ ಪದಗಳಂತೂ ಅಲ್ಲ. ಯಾವುದೋ ಒಂದು ರಾಗ. ಅದನ್ನು ಕಡಿಕಡಿದು ಜಗಿಜಗಿದು ಅವನು ನುಂಗಿದ. ಚಳಿ ಮೈಗೆ ಅಡರಿದಂತೆ ಹಲ್ಲುಗಳು ಕಟಕಟ ಎಂದುವು. ಮನಸ್ಸಿನ ಯಾತನೆ ಮುರಿದ ಹಲ್ಲುಗಳ ತೂತಿನೆಡೆಯಿಂದ ಪ್ರಲಾಪ ಧ್ವನಿಯಾಗಿ ಹೊರಟಿತು.

" ಬಂಧುಗಳೇ ! ಕೇಳಿ ! "

ಬಟಾ ಬೆಚ್ಚಿಬಿದ್ದು ನೋಡಿದ, ಮೆನ್ನ. ಸುಸ್ಪಷ್ಟ ವಾಕ್ಯ.

ಎಲ್ಲರೂ ತನ್ನೆಡೆಗೆ ತಿರುಗಿದುದನ್ನು ಗಮನಿಸಿ ಮೆನ್ನ ಮುಂದುವರಿದ :

ಈಗ ಸಾಯು ಮೆನ್ನ. ಸಾಮಾನ್ಯ ದೇವಸೇವಕ ಮೆನ್ನ. ಒಂದು ಹಾಡು ಹೇಳ್ತೀನೆ. ಸಾವಿನ ಹಾಡು. ಬಹಳ ಹಳೇದು. ಕೇಳಿ ! "

ಮುಂದೆ ಮೌನ. ಮೆನ್ನ ದೋಣಿಯ ಅಂಚಿನ ಮೇಲೆ ಕುಳಿತ. ಕಣ್ಣಾಲಿಗಳು ವರ್ತುಲವಾಗಿ ನಾಲ್ಕಾರು ಬಾರಿ ಚಲಿಸಿ, ಮೆನೆಪ್‌ಟಾನ ಶವದ ಮುಖದ ಮೇಲೆ ತಂಗಿದುವು.

ಬಾಯಿ ತೆರೆದುಕೊಂಡು ಸ್ವರ ಹೊರಟಿತು :

" ಸಾವು ನನ್ನ ಮುಂದಿದೆ ಇಂದು
ಸಾಂಬ್ರಾಣಿ ಸೂಸುವ ಸುವಾಸನೆಯಂತೆ
ಬಿರುಗಾಳಿಯ ದಿನ
ಹಡಗಿನ ಹಾಯಿಯ ಕೆಳಗೆ ಕುಳಿತವನಂತೆ....

" ಸಾವು ನನ್ನ ಮುಂದಿದೆ ಇಂದು
ತಾವರೆ ಹೂಗಳ ಪರಿಮಳದಂತೆ
ಕುಡಿತದ ದಂಡೆಯ ಮೇಲೆ
ಬಹಳ ಹೊತ್ತು ಕುಳಿತವನಂತೆ....

" ಸಾವು ನನ್ನ ಮುಂದಿದೆ ಇಂದು
ಬಹು ಜನರು ತುಳಿದ ದಾರಿಯಂತೆ

ಸಮರದಿಂದ ಮನೆಗೆ
ಮರಳಿ ಬಂದವನಂತೆ...."

ನೀರು ಸೋಂಕಿ, ಬಿರುನೆಲ ತೋಯ್ದು, ಮೆದುಮಣ್ಣಿನಲ್ಲಿ ಬೀಜ ಮೊಳಕೆಯೊಡೆದ ಅನುಭವ ಆಗುವಂಥ ಹಾಡು. ಸಾವು ಭೀಕರವಲ್ಲ. ಅದರ ಮುಂದೆ ಅಧೀರರಾಗುವುದು ಅನಗತ್ಯ ಎನಿಸಿತು ಮೆನ್ನನ ಹಾಡನ್ನು ಕೇಳು ತ್ತಿದ್ದವರಿಗೆ.

ತಾನು ಸೃಷ್ಟಿಸಿದ ಅಲೆಗಳಲ್ಲಿ ತೇಲುತ್ತ ಅವನು ಮುಂದುವರಿದ :

" ಸಾವು ನನ್ನ ಮುಂದಿದೆ ಇಂದು
ಆಗಸದಿ ಮೋಡಗಳು ಚದರಿದಂತೆ
ತಾನು ಅರಿಯದ ಆದರೂ ಬಯಸುವ
ವಸ್ತುವನು ಪಡೆದವನಂತೆ....

"ಸಾವು ನನ್ನ ಮುಂದಿದೆ ಇಂದು
ಹಲವು ವರುಷಗಳ ಬಂದಿ
ಮನೆಗಾಗಿ ಹಂಬಲಿಸಿ ಕಂಬನಿ ಸುರಿಸುವಂತೆ...."

ಬಟಾ ಯೋಚಿಸಿದ: ಅಣ್ಣನ ಸಾವು ಬಿಡುಗಡೆಯಲ್ಲ. ಘೋರ ಪಾತಕ. ಆದರೂ ಸಾವಿನ ಎದುರು ಹತಾಶರಾಗಬಾರದು.

ಮುಕ್ತಾಯಗೊಳಿಸುತ್ತ, ಕ್ರಮಶಃ ಕುಗ್ಗುತ್ತ ಸಾಗಿದ ಧ್ವನಿಯಲ್ಲಿ, ಮೆನ್ನ ಹಾಡಿದ :

" ಸಾವು ನನ್ನ ಮುಂದಿದೆ ಇಂದು....ಸಾವು ನನ್ನ ಮುಂದಿದೆ ಇಂದು...."

ತಲೆತಗ್ಗಿಸಿ ತಂದೆಯ ಪಾದಗಳನ್ನೇ ನೋಡುತ್ತ ಕುಳಿತಿದ್ದ ರಾಮೆರಿಪ್‌ಟಾ ನತ್ತ ಬಟಾ ದೃಷ್ಟಿ ಹರಿಸಿದ. ಹುಡುಗನ ಕಣ್ಣುಗಳು ಎಲ್ಲೋ ಸ್ವಲ್ಪ ತೇವ ಗೊಂಡಿದ್ದಂತೆ ಕಂಡಿತು. ಮೆನ್ನನ ಹಾಡಿನ ಪ್ರಭಾವ. 'ಇದು ಸಾಲದು ಗೋಳೋ ಎಂದು ರಾಮೆರಿ ಅಳಬೇಕು'—ಎಂದುಕೊಂಡ ಬಟಾ.

ಮತ್ತೆ ಸ್ವಲ್ಪ ಹೊತ್ತು ಮೆನ್ನ ಬರಿಯ ರಾಗಗಳನ್ನು ಕುರುಕಿದ.

ದಿಗಂತದಲ್ಲಿ ಒಂದು ಮೊಳ ಮೇಲಕ್ಕೆ ಬಂದಿದ್ದ ರಾನ ಭವ್ಯ ರೂಪ. ಆ ಪ್ರಭೆಗೆ ಬೆನ್ನು ಮಾಡಿ ಕುಳಿತಿದ್ದ ಮೆನ್ನ. ಮೆಂಫಿಸನ್ನು ತಲಪಿದ ಕ್ಷಣದಿಂದ ಈ ಬೆಳಗಿನವರೆಗಿನದೆಲ್ಲ ಆ ಜನರ ಪಾಲಿಗೆ ಅತಿ ಕ್ರೂರ ಅನುಭವ. ಎಂದೂ ಮರೆಯುವಂಥದಲ್ಲ. ಆದರೆ ಮೆನ್ನ ಅವರ ಪಾಲಿಗೆ ಮರಳುಗಾಡಿನಲ್ಲಿ ದೊರೆತ ನೀರಿನ ಸೆಲೆ.

ಅವನ ಧ್ವನಿ ಕೇಳಿಸಿತು:

"ಮಹಾನ್ ಜೀವಗಳಿಗೆ ಸಾವು ಅನ್ನೋದೇ ಇಲ್ಲ. ಇಲ್ಲಿ ಉಸಿರು ನಿಂತ ಮೇಲೂ ಅವರು ಮೂರು ಸಾವಿರ ವರ್ಷ ಬಾಳ್ತಾರೆ. ಗೋರಿಯೊಳಗಿಂದ ಚೇತನ ಹೊರಗೆ ಬಂದು ಹಾರಾಡ್ತಾ ತಿರುಗಾಡ್ತಾ ಇರ್ತದೆ. ತಾನು ಕೈ ಕೊಂಡಿದ್ದ ಮಹತ್ಕಾರ್ಯವನ್ನು ಮುಂದುವರಿಸೋದಕ್ಕೋಸ್ಕರ ಅದು ಮತ್ತೂ ದುಡೀತದೆ. ನೀರಾನೆ ಪ್ರಾಂತದ ನಾಯಕ ಮೆನೆಪ್‌ಟಾ ಅಂಥ ಮಹಾನ್ ಜೀವ....ಇವರು ಮರುಹುಟ್ಟು ಪಡೀತಾರೆ,"

ಬಟಾನ ಗುಂಡಿಗೆ ಡವಡವನೆಂದಿತು. ಹೊಸ ಉಸಿರನ್ನು ಬರಮಾಡಿ ಕೊಳ್ಳುತ್ತ ಶ್ವಾಸಕೋಶಗಳು ಹಿಗ್ಗಿದುವು. ಇದಲ್ಲವೆ ಎಲ್ಲರ ಬಯಕೆ ?—ಎಲ್ಲರ ನಿರೀಕ್ಷೆ ?

"ಧೂಪ ಪಾತ್ರೆಗಿಷ್ಟು ಪುಡಿ ಹಾಕು, ರಾಮೆರಿ," ಎಂದಳು ಅಹೂರಾ, ಹೊಗೆ ಇಲ್ಲದುದನ್ನು ಗಮನಿಸಿ.

ಅಷ್ಟು ಮಾಡಿ ರಾಮೆರಿ, ಔಟ ಕೊಟ್ಟ ಒಂದು ಕಡ್ಡಿಯಿಂದ ಕೆಂಡ ವನ್ನು ಕೆದಕಿದ. ಧೂಮ ಮತ್ತೆ ಕಾದಸಿಕೊಂಡು ಪಸರತೊಡಗಿತು.

ಮೆನ್ನ ಮುಂದುವರಿದ :

"ಶವಲೇಪನ ಮರುಹುಟ್ಟಿಗೆ ಸಿದ್ಧತೆ. ಪೆರೋನೋ ಮಹಾ ಅರ್ಚ ಕರೋ ಅಮಾತ್ಯರೋ ಸತ್ತರೆ, ಮೂಗಿಗೆ ಕಬ್ಬಿಣದ ಕೊಂಡಿ ಹಾಕಿ ಮೆದುಳು ಹೊರಗೆಳೀಬೇಕು: ಕರುಳನ್ನೂ ತೆಗೆದು ರಕ್ಷಿಸ್ಬೇಕು; ಶರೀರವನ್ನು ಎಪ್ಪತ್ತು ದಿನ ರಸಾಯನ ದ್ರವದಲ್ಲಿ ಅದ್ದಬೇಕು. ಆಮೇಲೆ ಸೆಣಬಿನ ಪಟ್ಟಿಯಿಂದ ಸುತ್ತಿ ಗೋರಿಕಾಣಿಸ್ಬೇಕು. ಆದರೆ; ಅಷ್ಟೆಲ್ಲ ಜನನಾಯಕನಿಗೆ ಮಾಡೋದು ಸಾಧ್ಯವಾ ? ನಮ್ಮದು ಸುಲಭ ವಿಧಾನ, ಸರಳ ಕ್ರಮ.... ಶವಲೇಪನ ಕ್ರಿಯೆ

ಯನ್ನು ನೆರವೇರಿಸುವ ದೇವಸೇವಕನದು ಅನೂಬಿಸ್ ದೇವತೆಯ ಪಾತ್ರ. ಒಸ್ಸೈರಿಸ್ ದೇವನಿಗೆ ಶವಲೇಪನ ಮಾಡಿದ್ದು ತೋಳರೂಪಿ ಅನೂಬಿಸ್........ ನಾನಿನ್ನು ತೋಳಮುಖವಾಡ ತೊಟ್ಕೊಳ್ತೀನೆ...."

ಮೆನ್ನ ಲೇಪನ ಸಾಮಗ್ರಿಗಳಿದ್ದ ಮೂಲೆಯಿಂದ ತೋಳನ ಮುಖವಾಡ ವನ್ನೆತ್ತಿ, ತನ್ನ ಮುಖಕ್ಕೆ ಅದನ್ನಿರಿಸಿ, ಅದು ಜಾರಿ ಬೀಳದಂತೆ ತಲೆಯ ಹಿಂಬದಿಯಿಂದ ಕುಣಿಕೆ ಹಾಕಿದ. ಜನ ಕೌತುಕದಿಂದ ಮೆನ್ನನನ್ನು ನೋಡಿ ದರು. ಮುಖವಾಡದಲ್ಲಿ ಕೊರೆದಿದ್ದ ತೂತುಗಳೇ ತೋಳನ ಕಣ್ಣುಗಳು. ಅವುಗಳ ಮೂಲಕ ಸಹಪ್ರಯಾಣಿಕರನ್ನು ಆತ ದಿಟ್ಟಿಸಿದ.

('ಗಂಭೀರವಾಗಿದ್ದಾರೆ. ಸೃಷ್ಟಿಯಾಗುತ್ತಿರುವ ಅದ್ಭುತ ವಾತಾವರಣದ ಪ್ರೇಕ್ಷಕರು ಇವರು. ನಾನು—ಬೇಕಾದರೆ ಅಳಬಹುದು, ಮುಖವಾಡದ ಮರೆ ಯಲ್ಲಿ ಮನದಣಿಯೆ ಕಣ್ಣೀರು ಸುರಿಸಬಹುದು.)

ಪ್‌ಟಾ ಸ್ತೋತ್ರ ಪಠಿಸಿ ಮೆನ್ನನೆಂದ :

"ಸತ್ತವನ ನಾಮೋಚ್ಚಾರ ಮಾಡಿದರೆ ಅವನು ಮತ್ತೆ ಜೀವಂತ ವಾಗ್ತಾನೆ."

ಭಕ್ತಿಭಾವದಿಂದ ಅರೆಮುಚ್ಚಿದ ಕಣ್ಣುಗಳನ್ನು ಅಹೂರಾ ಅಗಲವಾಗಿ ತೆರೆದಳು. ಹಿಂದಿನ ರಾತ್ರಿ ಅಂಗಡಿಕಾರ ಅಯ್ಯ....ಅಪೋಫಿಸ್—ಇದೇ ಮಾತನ್ನು ಹೇಳಿದ್ದನಲ್ಲ ? ದೇವವಾಕ್ಯ, ದೇವವಾಕ್ಯ.

ಮೆನ್ನ ಮತ್ತೂ ಅಂದ :

"ಅನೂಬಿಸ್ ದೇವತೆ ಲೇಪನಕ್ರಿಯೆ ನಡೆಸುವಾಗ, ಆಗಾಗ ನೀವು ಮೃತನ ನಾಮೋಚ್ಚಾರ ಮಾಡಿ. ಮೃತನ ನಾಮ ಎಂದರೆ, ಆ ಲೋಕದ ಒಡೆಯ ಒಸ್ಸೈರಿಸನನ್ನೂ ಸ್ಮರಿಸ್ತೀವೆ."

ಶ್ರೋತೃಗಳು 'ನಾವು ಬಲ್ಲೆವು' ಎನ್ನುವಂತೆ ತಲೆಯಾಡಿಸಿದರು.

ಅನೂಬಿಸ್‌ರೂಪಿ ಮೆನ್ನನೆಂದ :

"ಓ ಒಸ್ಸೈರಿಸ್ ! ಓ ಒಸ್ಸೈರಿಸ್ !"

ಪುನರುಚ್ಚಾರ ಮುಗಿಯುತ್ತಲೇ ಬಟಾ ನುಡಿದ :

"ಓ ಮೆನೆಪ್‌ಟಾ ! ಓ ಮೆನೆಪ್‌ಟಾ !"

ಜನರು ತಾವೂ ಆ ನಾಮೋಚ್ಚಾರ ಮಾಡಿದರು.

ನಿಧಾನವಾಗಿ ಸಾಗುತ್ತಿದ್ದ ಒಂದು ದೋಣಿಯನ್ನು ಹಿಂದಿಕ್ಕುವುದು ಅನಿವಾರ್ಯವಾಯಿತು. ಆ ದೋಣಿಯಿಂದ ಆದಷ್ಟು ಅಂತರದಲ್ಲೇ ಬಟಾನ ದೋಣಿ ಮುಂದುವರಿಯಿತು. ಆಗ ಮೌನ. ಆ ವೇಳೆಯಲ್ಲಿ, ಮೆನ್ನ ಕುಳಿತು ಮೊಣಕಾಲುಗಳೆಡೆಯಲ್ಲಿ ತೋಳಮುಖವನ್ನಿರಿಸಿದ.

ಮುಂದೆ ಎದುರು ದಿಕ್ಕಿನಿಂದ ಒಂದು ದೋಣಿ ಬಂದಾಗಲು ಅಷ್ಟೆ. ಬಟಾನ ಅಂಬಿಗರು ಎಚ್ಚರ ವಹಿಸಿ ಅದರಿಂದ ದೂರವಿದ್ದರು.

ಜಾಡಿಯಲ್ಲಿದ್ದ ವಿಸರ್ಜನ ತೈಲದಲ್ಲಿ ಪಿಚಕಾರಿಯನ್ನು ಅದ್ದಿ ಮೆನ್ನ ಹೇಳಿದ:

"ಶವವನ್ನು ಸ್ವಲ್ಪ ಮಗ್ಗುಲಿಗೆ ಹೊರಳಿಸಬೇಕು. ಈ ಎಣ್ಣೆ ಗುದದ್ವಾರ ದಿಂದ ಒಳಹೋಗುತ್ತದೆ."

ಔಟ ಜೆಕ್ ನೆರವಾದರು. ತಣುಪೇರಿ ಮರವಾಗತೊಡಗಿದ್ದ ಅವಯವ ಗಳು. ದಹಿಸುವ ಕ್ಷಾರಗುಣದ ಔಷಧೀಯ ತೈಲ ಕರುಳುಗಳ ಮಾರ್ಗವಾಗಿ ಒಳಕ್ಕೆ ಸರಿಯಿತು. ಮೆನೆಪ್‌ಟಾನ ನಾಮೋಚ್ಚಾರದ ಹಿನ್ನೆಲೆಯಲ್ಲಿ ಮೆನ್ನ ಬೆಣೆ ಇರಿಸಿ, ತಾಮ್ರದ ಸೂಜಿಯನ್ನೂ ಸೆಣಬಿನ ದಾರವನ್ನೂ ಬಳಸಿ, ಗುದ ದ್ವಾರವನ್ನು ಹೊಲಿದ. ಬಾಯಿಗೂ ಹೊಲಿಗೆ ಹಾಕಿದ. ಸೆಣಬಿನ ಚಿಂದಿ ಗಳನ್ನಿರಿಸಿ ಮೂಗು ಕಿವಿಗಳನ್ನು ಮುಚ್ಚಿದ.

ತನಗೇ ಹೊಲಿಗೆ ಹಾಕಿದಷ್ಟು ವೇದನೆ ರಾಮೆರಿಪ್‌ಟಾಗೆ.

ಆತ ಕುಳಿತಲ್ಲೇ ಮುಲು ಮುಲು ನರಳಿದ; ಮೌನವಾಗಿ ಗೋಳಾಡಿದ. ಧೂಪ ಪುಡಿಯನ್ನು ಮಾತ್ರ ಆಗಾಗ್ಗೆ ಧೂಪ ಪಾತ್ರೆಗೆ ಚೆಲ್ಲಿದ.

ಬಿಸಿಲೇರಿತು. ರಾ ನೆತ್ತಿಯ ನೇರಕ್ಕೆ ಬಂದ.

"ಬಿಸಿಲು ಬಾಡಿದ ಮೇಲೆ ವಿಸರ್ಜನೆ ಕ್ರಮ. ಆ ಬಳಿಕ ಬಾಹ್ಯಲೇಪನ. ಮುಚ್ಚಂಜೆಯ ಹೊತ್ತಿಗೆ ದಂಡೆ ಮುಟ್ಟಿ ಬುತ್ತಿಯೂಟ," ಎಂದ ಮೆನ್ನ.

[ಮೆನ್ನ: 'ನನಗೂ ಹಸಿವಾಗ್ತದೆ. ನಿನ್ನೆ ಮಧ್ಯಾಹ್ನ ಈ ಬಂಧುಗಳು ನೀಡಿದ ಒಂದು ತುಣುಕು ರೊಟ್ಟಿಯನ್ನು ನಾನು ಬಾಯಿಗಿಟ್ಟದ್ದೆ ಅಲ್ಲವೆ ?'

ಸ್ವಲ್ಪ ತಡೆದು ಒಂದು ಯೋಚನೆ.

'ತೋಳ ಮುಖವಾಡ ! ಸದಾಕಾಲವೂ ಇಂಥದೊಂದು ಮುಖವಾಡ

ವನ್ನು ನಾನು ಧರಿಸುವುದು ಸಾಧ್ಯವಿದ್ದರೆ ? ಅದರೊಳಗೆ ನಾನು ನಾನಾಗಿಯೇ ಇರಬಹುದು. ಇಷ್ಟವಾದಾಗಲೆಲ್ಲ ನಗಬಹುದು, ಅಲ್ಲವೆ ಅಳಬಹುದು....']

ತೋಳಮುಖ ಪಶ್ಚಿಮದತ್ತ ವಾಲಿದ್ದ ರಾನನ್ನು ನೋಡಿತು.

ಮೆನ್ನನೆಂದುಕೊಂಡ : ಹೊತ್ತಾಯಿತು. ಇನ್ನು ವಿಸರ್ಜನ ಕ್ರಿಯೆ....

"ವಿಸರ್ಜನೆ ಹಿಡಿಯಲು ಒಂದು ದೊಡ್ಡ ಮಡಕೆ ಬೇಕು."

ದೋಣಿಯ ಸಾಮಾನುಗಳ ಮೂಲೆಯಲ್ಲಿ ಸಾಕಷ್ಟು ದೊಡ್ಡ ಮಣ್ಣಿನ ಮಡಕೆ ಇತ್ತು. ಬಟಾ ಅದನ್ನು ಎತ್ತಿ ತಂದು ಮೆನ್ನನ ಕೈಗಿತ್ತ. ಬೆಕ್ ಔಟರಿಗೆ ಮೆನ್ನ ಸನ್ನೆ ಮಾಡಿದ. ಅವರು ಶವವನ್ನು ಎತ್ತಿ ಹಿಡಿದರು. ಗುದ ದ್ವಾರದ ಕೆಳಗೆ ಮಡಕೆಯನ್ನಿರಿಸಿ, ದ್ವಾರದ ಹೊಲಿಗೆಯನ್ನು ಮೆನ್ನ ಬಿಚ್ಚಿ ಬೆಣೆಯನ್ನು ತೆಗೆದ. ಸಂಜ್ಞೆಯನ್ನು ಗಮನಿಸಿ ಜನ ಒಸೈರಿಸನ ಮೆನೆಪ್ ಟಾನ ನಾಮೋಚ್ಚಾರ ಆರಂಭಿಸಿದರು. ಗುದದ್ವಾರದ ಮೂಲಕ ಒಂದಿಷ್ಟು ಬಣ್ಣದ ನೀರು ಹೊರಬಂತು. (ರಾಮೆರಿಪ್‌ಟಾ ಧೂಪ ಪಾತ್ರೆಗೆ ಸುಗಂಧ ದ್ರವ್ಯ ಎರಚಿದ.) ಶವದ ಒಡಲಲ್ಲಿ ಗುಡುಗುಡು ಸದ್ದಾಯಿತು. ತಮ್ಮ ನಾಯಕ ಮತ್ತೆ ಜೀವಂತನಾಗುತ್ತಿದ್ದಾನೇನೊ ಎನಿಸಿತು ಬೆಕ್ ಔಟ ರಿಗೆ. ಏನೋ ಸಪ್ಪಳ ಕೇಳಿಸಿತೆಂದು ನಾಮೋಚ್ಚಾರ ಬಲಗೊಂಡಿತು. ಒಳಗಿ ನಿಂದ ಗುದದ್ವಾರಕ್ಕೆ ಅಡ್ಡಬಂದುದೇನೋ ಬದಿಗೆ ಸರಿದೊಡನೆ, ಜಠರ ಕರುಳು ಗಳು ಜೆಂದು ರೂಪುಗೊಂಡಿದ್ದ ಘನದ್ರವ ಮಿಶ್ರಣ ತೂಬುಗಟ್ಟಿ ಹೊರಕ್ಕೆ ಹರಿಯಿತು.

ಮೆನ್ನನನ್ನು ಸಮೀಪಿಸಿ ಬಟಾ ಕೇಳಿದ :

"ಇನ್ನೊಂದು ಪಾತ್ರೆ ಬೇಕಾದೀತಾ? ಇಲ್ಲವಲ್ಲ. ಏನು ಮಾಡೋಣ ?"

"ಬೇಡ. ಇದು ಸಾಕಾಗ್ತದೆ."

ಶರೀರದಿಂದ ದ್ರಾವಕ ಹೊರಬರುವುದು ನಿಂತಿತು. ತುಂಬಿದ್ದ ಪಾತ್ರೆ ಯನ್ನು ಮೆನ್ನ ನದಿಯಲ್ಲಿ ತೇಲಿ ಬಿಟ್ಟ. ಅವನೆಂದ :

"ನಮ್ಮನ್ನು ಹಿಂಬಾಲಿಸಿ ಬರೋ ದೋಣಿಗಳು ಈ ಪಾತ್ರೇನ ನೋಡ ದಿರೋದು ಮೇಲು. ಈಟಿ ನೋಡಿದೆನಲ್ಲ, ಕೊಡಿ."

ಬಟಾ ಈಟಿಯನ್ನೆತ್ತಿಕೊಟ್ಟ. ಮೆನ್ನ ಅದರ ಮೊನೆಯಿಂದ ಮಡಕೆ ಯನ್ನು ಚುಚ್ಚಿ, ಚುಚ್ಚಿ ಒಡೆದ. ಅದರೊಳಗಿದ್ದುದು ನೀರಿನ ಪಾಲಾಯಿತು.

(ನಾಮೋಚ್ಚಾರ ಒಂದು ಕ್ಷಣ ಜಯಘೋಷವಾಯಿತು. ಮರುಕ್ಷಣವೇ ಮತ್ತೆ ರೋದನವಾಗಿ ಮಾರ್ಪಟ್ಟಿತು. ರಾಮೆರಿಪ್‌ಟಾ ಮೌನವಾಗಿ ಕಂಬನಿ ಮಿಡಿದ.)

"ಖಿವವ ಬೇಕಲ್ಲ ?"

ಬಟಾನ ಹೊರತು ಉಳಿದವರಿಗೆಲ್ಲ ವಿಸ್ಮಯ. ('ಖಿವವ ಅನೂಬಿಸ್ ದೇವತೆಗೆ ಬೇಕೇನೋ ಕುಡಿಯಲು ?')

ಬುತ್ತಿಗಳನ್ನಿರಿಸಿದ್ದ ಕಡೆ ಖಿವವ ತುಂಬಿದ ಇಡಿಯ ಚೀಲವಿತ್ತು. ಅಹೂರಾ ಅದನ್ನೆತ್ತಿ ಹಿಡಿದಳು. ವಿಸರ್ಜನ ತೈಲ ಬಳಸಿದ ಮೇಲೆ ಬರಿದಾಗಿದ್ದ ಜಾಡಿಗೆ ಮೆನ್ನ ಖಿವವ ಬಗ್ಗಿಸಿಕೊಂಡ. ಪಿಚಕಾರಿ ಉಪಯೋಗಿಸಿ ಆ ಖಿವವನ್ನು ತೆರವಾಗಿದ್ದ ಒಡಲು ಪ್ರದೇಶಕ್ಕೆ ಗುದದ್ವಾರದ ಮೂಲಕ ತಳ್ಳಿದ. ಮತ್ತೊಮ್ಮೆ ಬೆಣೆ ಇರಿಸಿ ದ್ವಾರವನ್ನು ಹೊಲಿಗೆ ಹಾಕಿ ಮುಚ್ಚಿದ.

ಮುಂದೆ ಮೆನ್ನನ ಸೂಚನೆಯಂತೆ ಬಟಾ, ಬೆಕ್ ಮತ್ತು ಔಟ ಶವದ ಮೈಗೆ ರಾಳ ಬಳಿದರು. ಕಾಲುಗಳಿಗೂ ಕೈಗಳಿಗೂ ಮುಂಡ ರುಂಡಗಳಿಗೂ ಒಂದೊಂದಾಗಿ ಸೆಣಬಿನ ಪಟ್ಟಿಯನ್ನು ಮೆನ್ನ ಬಿಗಿಯಾಗಿ ಸುತ್ತಿದ. ಮುಖದ ಆಕಾರ ರೂಪ ಒಂದಷ್ಟೂ ಬದಲಾಗದಂತೆ ಪಟ್ಟಿ ಅಂಟಿಸಿದ.

ಇಷ್ಟಾದ ಮೇಲೆ ಮೆನ್ನ ಮುಖವಾಡವನ್ನು ಬಿಚ್ಚಿ ಕೆಳಗಿರಿಸಿದ.

"ನಾನೀಗ ಅನೂಬಿಸ್ ಅಲ್ಲ. ಕಿರಿಯ ದೇವಸೇವಕ ಮೆನ್ನ. ಮುಖವಾಡದ ರಕ್ಷಣೆ ಇಲ್ಲದವನು. ಇನ್ನು ಅನೂಬಿಸ್ ಪಾತ್ರ ನೀರಾನೆ ಪ್ರಾಂತ ತಲಪಿದ ಮೇಲೆ—ನಾಯಕರನ್ನು ಗೋರಿಗೆ ಕಳಿಸುವಾಗ."

ಆ ಪಯಣಿಗರಲ್ಲೊಬ್ಬ ಮೆನ್ನ. ಆದರೂ ಅವರಿಗಿಂತ ಭಿನ್ನ. ಸಾವು ಮರುಹುಟ್ಟುಗಳಿಗೆ ದೇವ ದೇವತೆಗಳಿಗೆ ಹತ್ತಿರದವನಾದ ಆ ಅಯ್ಯನ ಬಗೆಗೆ ಆ ಜನರಿಗೆಲ್ಲ ಗೌರವ.

ಮೆನ್ನ ಬಳಲಿದ್ದ. ಬಿಸಿಲು ಮಾಯವಾಗಿ, ಮುಚ್ಚಂಜೆಯ ಗಾಳಿ ತಣುಪನ್ನು ತಂದಿತು. ದೋಣಿಯ ಹೊರಗೆ ಅಂಗೈಗಳನ್ನು ಇಳಿಬಿಟ್ಟು ನದಿಯಿಂದ ನೀರನ್ನೆತ್ತಿಕೊಂಡು ತನ್ನ ಮುಖಕ್ಕೆ ರಾಚಿದ. ರಾಮೆರಿಪ್‌ಟಾನ ಬಳಿ ಕುಳಿತು ರಕ್ಷಿತ ಶವವನ್ನು ದಿಟ್ಟಿಸಿದ. [illegible]

ಬಟಾ ಮೆನ್ನನೊಡನೆ ಅಂದ :

" ಅಯ್ಯ, ದೋಣಿ ನಿಲ್ಲಿಸೋಣ ಅಂದಿರಿ, ಬುತ್ತಿಯೂಟಕ್ಕೆ."

" ಹ್ಞಾ, ಈಗ ನಿಲ್ಲಿಸಬಹುದು."

ಅಂಬಿಗರು ದೋಣಿಯನ್ನು ದಡ ಮುಟ್ಟಿಸಿದರು.

ಮೆನ್ನ ನೀರಿನಲ್ಲಿಳಿದು ಸ್ನಾನ ಮಾಡಿದ. ಕೈಕಾಲು ಆಡಿಸಿ ಅತ್ತಿತ್ತ ಓಡಾಡಿ, ದೋಣಿಯ ಬಳಿಗೆ ಮರಳಿದವರಿಗೆ ಅವನೆಂದ :

" ನಾನು ಎಷ್ಟೋ ಶವ ಕಂಡಿದ್ದೇನೆ. ಆದರೆ ಇಷ್ಟೊಂದು ಪ್ರಶಾಂತವಾದ ಮುಖಮುದ್ರೆ ನೋಡಿರೋದು ಇದೇ ಮೊದಲು. ಯಾವ ಪೆರೋ ಸಾಟಿ ಈ ಜನ ನಾಯಕರಿಗೆ ? ಈ ನಾಯಕ ಸಮಾಜ ಕಟ್ಟಲು ಹೊರಟವರು. ಪೆರೋ–ಮಹಾ ಅರ್ಚಕ–ಅಮಾತ್ಯರ ಬಗೆಗೆ, ಐಗುಪ್ತ ಸಮಾಜವನ್ನು ಕುರಿತು, ತೀರ್ಪು ಕೊಟ್ಟವರು. ಇವರನ್ನು ನೋಡಿದ್ದೇನೆ, ಇವರ ಜತೆ ಮಾತಾಡಿದ್ದೇನೆ—ಅಂತ ನನಗೆ ಹೆಮ್ಮೆ. ನೀವೋ ಅವರೊಂದಿಗೆ ದುಡಿದವರು. ಮಹಾ ಅದೃಷ್ಟವಂತರು........"

ಬುತ್ತಿ ಹಂಚುವ ಹೊಣೆ ಅಹೂರಾಳದು. ಪಯಣದ ದಿನಗಳಿಗೆ ಸಾಲುವಷ್ಟು ಕಾಯ್ದಿರಿಸಿ, ಅವಳು ಬುತ್ತಿಯ ವಿತರಣೆಗೆ ಸಿದ್ಧಳಾದಳು.

" ಗೋರಿ ತಲಪೋವರೆಗೂ ನಾಯಕರು ಉಣ್ಣೋದಿಲ್ಲ. ಅವರ ಮಗ್ಗುಲಲ್ಲಿ ಅವರಿಗೆ ಪ್ರಿಯವಾದುದನ್ನು ಇಟ್ಟರೆ ಸಾಕು. ಸಹಚರರು ಎಂದೂ ಉಪವಾಸವಿರಬಾರದು. ನಾವು ಉಣ್ಣದೆ ದೇಹ ದಂಡಿಸಿದರೆ ಅವರಿಗೆ ಅಸಮಾಧಾನವಾಗ್ತದೆ. ರಾಮೆರಿ, ನೀನೂ ಉಣ್ಬೇಕು ; ದೇವಸೇವಕನಾದ ನಾನೂ ಉಣ್ಬೇಕು."

ಬಟಾ ಗಟ್ಟಿಯಾಗಿ ಅಂದ :

" ಅಣ್ಣನಿಗೆ ಇಷ್ಟವಾದದ್ದು ರೊಟ್ಟಿ ಮತ್ತು ಒಣಗಿದ ಮೀನಿನ ಉಪ್ಪೇರಿ."

ಅದನ್ನು ಅಹೂರಾಳೂ ಬಲ್ಲಳು. ಆ ಆಹಾರವನ್ನು ಆಗಲೇ ಅವಳು ಎಲೆಯಲ್ಲಿ ಇರಿಸಿದ್ದಳು.

" ನೀನೇ ಕೊಡು ತಂಗಿ," ಎಂದ ಬಟಾ.

ತಗ್ಗಿದ ಧ್ವನಿಯಲ್ಲಿ ಅಹೂರಾ ನುಡಿದಳು :

" ನೀನೂ ಬಾ ಅಣ್ಣ."

ಅವರಿಬ್ಬರೂ ದೋಣಿಯನ್ನೇರಿ ಮೆನೆಪ್‌ಟಾನ ರಕ್ಷಿತ ಶವದ ಪಕ್ಕದಲ್ಲಿ ಆ ಆಹಾರವನ್ನಿಟ್ಟರು.

ಉಳಿದವರಿಗೆ ಅವಸರದ ಬುತ್ತಿಯೂಟ. ಎರಡೆರಡು ಗುಟುಕು ಖಿವವ ಪಾನೀಯ ಕೂಡಾ.

ಇತರರ ಜತೆ ರಾಮೆರಿಸ್‌ಟಾನೂ ಈರುಳ್ಳಿ ಕಚ್ಚಿಕೊಂಡು ಎರಡು ಮೂರು ಚೂರು ರೊಟ್ಟಿ ತಿಂದ.

* * * *

ಹಾಯಿ ಮತ್ತೆ ಹರಡಿಕೊಂಡು ದೋಣಿಯನ್ನು ನೀರಾನೆ ಪ್ರಾಂತದತ್ತ ಸೆಳೆಯಿತು. ಅಂಬಿಗರಿಗೆ ಸ್ವಲ್ಪ ಹೊತ್ತು ವಿಶ್ರಾಂತಿ. ಆ ಪಯಣಿಗರಲ್ಲಿ ಹೆಚ್ಚಿನವರು ಹುಟ್ಟು ಹಾಕುವ ಅನುಭವವಿದ್ದವರೇ. ಅವರಲ್ಲಿ ನಾಲ್ವರು ಬದಲಿ ಅಂಬಿಗರಾದರು.

ಇರುಳು. ವೇಗಕ್ಕೆ ಇದು ಅಡ್ಡಿಯಲ್ಲ. ಆದರೆ ಎಷ್ಟು ಹೊತ್ತಿಗೋ ಒಮ್ಮೆ ಎದುರುಗಡೆಯಿಂದ ಬರುವ ದೋಣಿಯ ಬಗೆಗೆ, ಕಾಣದ ಕತ್ತಲೆಯಲ್ಲಿ ಹೆಚ್ಚು ಎಚ್ಚರ ವಹಿಸಬೇಕು.

ಈಗ ಸಂವೇದನೆ ವೈಯಕ್ತಿಕವಲ್ಲ, ಸಾಮುದಾಯಿಕ. ಎಲ್ಲರ ಯೋಚನೆ ವಿಚಾರಗಳೂ ಆತಂಕ ಕಾತರಗಳೂ ಒಂದೇ. ಮರುಹುಟ್ಟು ಪಡೆಯಲಿರುವ ಮೆನೆಪ್‌ಟಾ ಅಣ್ಣನೊಡನೆ ಸುರಕ್ಷಿತವಾಗಿ, ಬೇಗನೆ, ತಾವು ಊರು ಸೇರ ಬೇಕು. ಅಲ್ಲಿ....ಅಲ್ಲಿ....

ಬಟಾ ಅಂದ :

" ಮಹಾ ಅರ್ಚಕರ ತಂಡ—ದಂಡು ಈಗ ಲಿಷ್ಟ್ ತಲಪಿರಬಹುದು."

" ಹ್ಞ. "

" ನಮ್ಮನ್ನು ಅವರು ಹಿಂದಿಕ್ಕೋದು ಸಾಧ್ಯವಿಲ್ಲ. ಆದರೂ ಹಿಂದು ಗಡೆಗೂ ನಾವು ನೋಡ್ತಿರ್ಬೇಕು. ಸರದಿಯಲ್ಲಿ ಕಾವಲು ಕೂತ್ಕೋಬೇಕು."

" ಹೌದು, ಬಟಾ ಅಣ್ಣ. ನಾನು ನಿನ್ನೆ ರಾತ್ರಿ ನಿದ್ದೆ ಮಾಡಿದೆ. ಇವತ್ತು ನಿಮ್ಮ ಸರದಿ. ನಾನು ಎಚ್ಚರವಿರ್ತೇನೆ. ಹುಟ್ಟು ಹಾಕುವವರನ್ನೂ

ನನ್ನನ್ನೂ ಬಿಟ್ಟು ಉಳಿದವರೆಲ್ಲ ನಿದ್ದೆ ಮಾಡಿ...."

"ಅಯ್ಯ, ದೋಣಿಕಾರ ನಾನು."

"ಅಲ್ಲ ಅಂದೆನೆ ? ನಾನು ಕೇವಲ ಕಾವಲುಗಾರ. ನೀರಾನೆ ಪ್ರಾಂತದ ದೋಣಿ ಬರ್ತ್ತದೇನೋ ಅಂತ ಮೆಂಫಿಸಿನಲ್ಲಿ ಹಗಲು ರಾತ್ರೆ ಕಾದಿದ್ದೆ. ಹೌದಾ ?"

"ಸೋತೆ ಮೆನ್ನಯ್ಯ. ನೀವಂದಂತೆಯೇ ಆಗಲಿ. ಈ ರಾತ್ರೆಯ ಮಟ್ಟಿಗೆ ಒಪ್ದೆ. ನಾಳೆಯಿಂದ ಕತ್ತಲಲ್ಲಿ ಕಾಯೋದು–ಹುಟ್ಟು ಹಾಕೋದು ನನ್ನ ಕೆಲಸ."

ತಂಗಾಳಿಗೆ ಇತರರ ಎವೆಗಳು ಮುಚ್ಚಿಕೊಳ್ಳುತ್ತಿದ್ದಂತೆ, ಮೆನ್ನ ಆಕಾಶ ವನ್ನು ದಿಟ್ಟಿಸಿ ನಕ್ಷತ್ರಗಳನ್ನು ಗುರುತಿಸತೊಡಗಿದ. ನಕ್ಷತ್ರಗಳ ಬಗೆಗೆ ತನಗೆ ಗೊತ್ತಿರುವುದು ಬಹಳ ಸ್ವಲ್ಪ ಎನಿಸಿತು. ಅವುಗಳ ಎಣಿಕೆ ಆರಂಭಿಸಿದ. ಅದೂ ಬೇಸರವಾಗಿ, ಹಿಂದಿನಿಂದಲೋ ಮುಂದಿನಿಂದಲೋ ದೋಣಿಗಳ ಸದ್ದಿಗೆ ಕಿವಿ ಗೊಟ್ಟ. ಮೆನೆಪ್‌ಟಾನ ಲೇಪಿತ ಶವ ನಕ್ಷತ್ರಗಳ ಬೆಳಕಿನಲ್ಲಿ ಬೆಳ್ಳಗೆ ಶುಭ್ರ ವಾಗಿ ಕಂಡಿತು. ನೀಲನದಿಯ ತಟದಲ್ಲಿ ನಾಯಕನನ್ನು ತಾನು ಮೊದಲ ಬಾರಿ ಕಂಡುದನ್ನು ನೆನೆದ. 'ಆ ರಾತ್ರೆ ಹಾಡುತ್ತ ಕುಳಿತಿದ್ದೆ. 'ಇಂದು ಯಾರೊಡನೆ ನಾ ಮಾತಾಡಲೀ....' ಮೆನೆಪ್‌ಟಾನನ್ನು ಕಂಡ ಮೇಲೆ, 'ಆ ಹಾಡು ಇನ್ನು ಬೇಡ' ಎನಿಸಿತು. ಮೆನೆಪ್‌ಟಾ ಹೋದ ಮೇಲೂ ಅದನ್ನು ಮತ್ತೆ ಹಾಡಬೇಕು ಎಂದು ತೋರುತ್ತಿಲ್ಲ. ರಾಜಧಾನಿಯಲ್ಲೇ ಉಳಿದಿದ್ದರೆ ಹಾಡುತ್ತಿದ್ದೆನೇನೋ: ಅಥವಾ ನೀಲನದಿಯ ಗರ್ಭಕ್ಕೆ ಇಳಿಯುತ್ತಿದ್ದೆನೇನೋ.... ಇನ್ನು....'ಯಾರೊಡನೆ ನಾ ಮಾತಾಡಲೀ....' ಎಂದು ಚಿಂತಿಸಬೇಕಾದುದಿಲ್ಲ: ಇವರೊಡನೆ ನಾನು ಮಾತನಾಡಬಹುದು. ನಾಯಕನ ಪ್ರಾಂತದ ಎಲ್ಲ ಜನರೊಡನೆ. ಅವರು ನನ್ನ ಹೊಸ ನಾಡಿನ ಹೊಸ ಬೀಡಿನ ಬಂಧುಗಳು....

ಅಮೆರಿಪ್‌ಟಾ ಸದ್ದಿಲ್ಲದೆ ಎದ್ದು, ಉದ್ದಕ್ಕೂ ನಡೆದು, ದೋಣಿಯ ತುದಿಯನ್ನು ಆಗಲೇ ತಲಪಿದ್ದ. ('ಎಳೆಯನಿಗೆ ನಿದ್ದೆ ಬರುತ್ತಿಲ್ಲ.') ಅಲ್ಲಿ ದೋಣಿಯ ಅಂಚಿಗೆ ಆತು ಅದೆಷ್ಟು ಹೊತ್ತು ನಿಂತನೊ....?

ಇದ್ದಕ್ಕಿದ್ದಂತೆ, ತುದಿಭಾಗದಿಂದ ಬಿಕ್ಕಿಬಿಕ್ಕಿ ಗಟ್ಟಿಯಾಗಿ ಅಳುವ ಸದ್ದು ಕೇಳಿಸಿತು ; ಅಳು ಬೇಗನೆ ನಿಲ್ಲುವ ಸೂಚನೆ ಕಾಣಿಸಲಿಲ್ಲ. ಆವರೆಗೂ ಅದುಮಿ ಹಿಡಿದಿದ್ದ ಎಳೆಯನ ದುಃಖ ಭೋರ್ಗರೆಯುವ ರೋದನವಾಯಿತು.

ಬಟಾ ಎಚ್ಚರಗೊಂಡ. ಆದರೆ ರಾಮೆರಿಪ್‌ಟಾನ ಧ್ವನಿಯನ್ನು ಗುರುತಿಸಿ, ಸಮಾಧಾನಪಟ್ಟು, ಮತ್ತೆ ನಿದ್ದೆ ಹೋದ. ಎಚ್ಚತ್ತ ಅಹೂರಾ "ಶ್...." ಎಂದು ತನ್ನ ಮಗುವಿನ ಮೈ ತಟ್ಟುತ್ತ, ಕಣ್ಣೆವೆಗಳನ್ನು ಪುನಃ ಮುಚ್ಚಿದಳು. ಆ ಅಳು ನಿಲ್ಲಿಸಲು ತಾವು ಮಾಡುವಂಥದೇನಾದರೂ ಇದೆಯೆ ಎಂದು ಕೇಳು ವವರಂತೆ ಹುಟ್ಟು ಹಾಕುತ್ತಿದ್ದವರು ಮೆನ್ನನತ್ತ ನೋಡಿದರು.

ಮೆನ್ನ ರಾಮೆರಿಪ್‌ಟಾ ಇದ್ದೆಡೆಗೆ ನಡೆದ. ರಾಮೆರಿಯನ್ನು ಬಾಹು ವಿನಿಂದ ಬಳಸಿ "ಅಳಬೇಡ" ಎಂದ. ಮಾನವಸ್ಪರ್ಶ ಹುಡುಗನಿಗೆ ಅನಿರೀಕ್ಷಿತ ವಾಗಿತ್ತು. ಬೆಚ್ಚಿದ ಆತ, ಸಂತೈಸುತ್ತಿದ್ದ ವ್ಯಕ್ತಿ ಮೆನ್ನ ಎಂದು ಅರಿತೊಡನೆ, ಪುನಃ ಧ್ವನಿ ತೆಗೆದು ಅತ್ತ.

ಅತ್ತು ಹೃದಯ ಹಗುರವಾಗಿದೆ; ಇನ್ನು ಇವನು ನಿದ್ರಿಸಲೂಬಹುದು–ಎನಿಸಿತು ಮೆನ್ನನಿಗೆ. "ಬಾ," ಎಂದ. ತಾವು ಕುಳಿತಿದ್ದ ಸ್ಥಳಕ್ಕೆ ರಾಮೆರಿಪ್‌ಟಾನನ್ನು ಮೆನ್ನ ಕರೆದೊಯ್ದ. ಅಲ್ಲಿ ತನ್ನ ತೊಡೆಯ ಮೇಲೆ ಹುಡು ಗನ ತಲೆಯನ್ನು ಮೆನ್ನ ಇರಿಸಿಕೊಂಡ. ಶೋಕದ ಮುಸಲಧಾರೆ ನಿಂತಿತ್ತು. ಕೊನೆಯ ಹನಿಗಳು. ಬಳಿಕ ಮೌನ. ನಿದ್ದೆ. ಕ್ರಮೇಣ ಗಾಢನಿದ್ರೆ.

* * * *

ಮೆನೆಪ್‌ಟಾಗೆ ಮರಣ ದಂಡನೆ ವಿಧಿಸಿದ ಮೂರನೆಯ ಬೆಳಗ್ಗೆ, ವರದಿಯ ಕಾವಲಿಗೆಂದು ಮಹಾದ್ವಾರಕ್ಕೆ ಬಂದ ಭಟರು ದಿಗ್ಭ್ರಾಂತರಾದರು. ತೂಗಾಡು ತ್ತಿದ್ದ ಶವವೂ ಇಲ್ಲ, ಕಾವಲುಗಾರರೂ ಇಲ್ಲ. ಕಾವಲು ನಿಂತವರೇ ಶವವನ್ನೆತ್ತಿ ಕೊಂಡು ಹೋದರು ಎನ್ನುವಂತಿಲ್ಲ. ಅವರಿಗೇನು ಹುಚ್ಚೆ?

ದೋಣಿಕಟ್ಟೆಗೆಂದು ಹೊರಟಿದ್ದ ನಗರವಾಸಿಗಳಿಬ್ಬರು ಅರಮನೆಯ ಪಕ್ಕದ ದಾರಿಯಲ್ಲಿ ನಡೆದು ಬಂದು ಗಾಬರಿಯ ಧ್ವನಿಯಲ್ಲಿ, "ನಿಮ್ಮವರೂಂತ ಕಾಣ್ತದೆ. ಕಟ್ಟೆ ನೆಲದ ಮೇಲೆ ಕೆಡವಿದ್ದಾರೆ. ಓ ಅಲ್ಲಿ...." ಎಂದರು.

"ಹಾ! ಸತ್ತಿದ್ದಾರಾ?"

"ಗೊತ್ತಿಲ್ಲ. ಹೆದರಿಕೆಯಾಯ್ತು. ಬಂದ್ಬಿಟ್ವಿ."

ಈ ಕಾವಲುಗಾರರು ಅಲ್ಲಿಗೆ ಓಡಿದರು. ಕಟ್ಟುಗಳನ್ನು ಬಿಚ್ಚಿ ಸುದ್ದಿ ತಿಳಿದರು. ಸುದ್ದಿ ಸಂಚರಿಸಿತು—ದಳಪತಿಯಲ್ಲಿಗೆ. ಅಲ್ಲಿಂದ ಅಮಾತ್ಯರಲ್ಲಿಗೆ,

ಅವರಲ್ಲಿಂದ ಪೆರೋ ಹಾಗೂ ಮಹಾ ಅರ್ಚಕರ ಬಳಿಗೆ.

ಮಹಾಮಂದಿರಕ್ಕೆ ಹೊರಡುವ ಮುಂಚೆ ಅಪ್ತೋಫಿಸ್ ಅರಮನೆಯ ಮಹಾದ್ವಾರಕ್ಕೆ ಬಂದ.

" ನಿನ್ನೆ ಕೊಂದ್ರಲ್ಲಾ. ಅವನನ್ನು ನದಿಗೆ ಎಸೆದು ಬಿಟ್ರಾ? " ಎಂದು ಕಾವಲಿನವರನ್ನು ಕೇಳಿದ.

" ರುಂಡವೂ ಇಲ್ಲ, ಮುಂಡವೂ ಇಲ್ಲ–ಮಾಯ !" ಎಂದ ಒಬ್ಬ ಕಾವಲುಗಾರ.

ಇನ್ನೊಬ್ಬ ಪ್ರಾಕಾರದ ಬಳಿ ಇದ್ದ ಊಟದ ಅವಶೇಷವನ್ನು ನೋಡಿ, " ದಳಪತಿಯ ಮುಂದೆ ಕಾವಲುಗಾರರ ವಿಚಾರಣೆ ಆಗ್ತಿದೆ," ಎಂದ.

ಅಪ್ತೋಫಿಸ್ ಪ್‌ಟಾ ದೇವರನ್ನು ಸ್ತುತಿಸುತ್ತ ಮಹಾಮಂದಿರಕ್ಕೆ ಓಡಿದ.

ಮಹಾ ಅರ್ಚಕ ಹೇಪಾಟ್‌ಗೆ ಅರಮನೆಯಿಂದ ಅದೇ ಆಗ ವಾರ್ತೆ ಬಂದಿತ್ತು.

ಅಪ್ತೋಫಿಸ್‌ನ ನಿವೇದನೆ ಮುಗಿದೊಡನೆ ಹೇಪಾಟ್ ಕಿರಿಚಿದ:

" ಕತ್ತೆ ! ನಿನ್ನ ತಲೆ ಕಡೀಬೇಕು ! ದುರಾಶೆ ! ಸ್ವತಃ ಸೆತ್ ಬಂದರೂ ಕಣ್ಮುಚ್ಚಿ ವ್ಯಾಪಾರ ಮಾಡ್ತೀ–ಅಲ್ಲ ? "

ಹೆದರಿದವನಂತೆ ಅಪ್ತೋಫಿಸ್ ನಟಿಸಿದ: ತಿರಸ್ಕಾರದ ದೃಷ್ಟಿ ಬೀರಿ ಮಹಾ ಅರ್ಚಕನೆಂದ:

" ಯೋಧರ ತಂಡ ಕರಕೊಂಡು ರಾಜಧಾನಿಯಲ್ಲೆಲ್ಲ ಶೋಧಿಸು. ಆ ಗಿರಾಕಿಗಳು ಸಿಗ್ತಾರೇನೋ ನೋಡು."

ಇನೇನಿಯನ್ನು ಕರೆದು ಆಜ್ಞೆ ಇತ್ತ:

" ಮಧ್ಯಾಹ್ನದ ಮೇಲಲ್ಲ. ಇನ್ನೂ ಬೇಗನೆ ದಂಡು ಹೊರಡ್ಬೇಕು. ಬಕಿಲನಿಗೆ ತಿಳಿಸು. ಪ್‌ಟಾ ದೇವರನ್ನು ಸಿದ್ಧಪಡಿಸು."

" ಮೆರವಣಿಗೆ ಬೇಡವಾ ?"

" ವಯಸ್ಸಾಗ್ತಾ ಆಗ್ತಾ ಬುದ್ಧಿ ನಿನಗೆ ಮಂದವಾಗ್ತಿದೆಯೊ ? ಮೆರವಣಿಗೆ ಬೇಕು. ಆದರೆ ನಿಧಾನವಾಗಬಾರದು. ಆ ಅಮಾತ್ಯನಿಗೆ ಹೇಳಿ ಕಳಿಸು."

ಪೆರೋನನ್ನು ಭೇಟಿಯಾದ ಬಳಿಕ ಆಮೆರಬ್ ನೇರವಾಗಿ ಮಹಾಮಂದಿರ ತಲಪಿದ.

" ಪೆರೋನ ಆಯುರಾರೋಗ್ಯ ವರ್ಧಿಸಲಿ !" ಎಂದ.

" ವರ್ಧಿಸಲಿ ! " ಎಂದು ಚುಟುಕು ವಂದನೆ ಮಾಡಿ ಹೇಪಾಟ್ ಗುಡುಗಿದ :

" ದೇಶದ ಆಡಳಿತದ ಬಿಗಿ ಶಿಥಿಲವಾಗಿದೆ ಅನ್ನೋದಕ್ಕೆ ಬೇರೆ ದೃಷ್ಟಾಂತ ಬೇಕಾ ? "

ತಾಳ್ಮೆ ಕಳೆದುಕೊಳ್ಳದೆ ಆಮೆರಬ್ ಅಂದ :

"ದೇವಸ್ವರೂಪನ ಪ್ರತಿನಿಧಿಯಾಗಿ ನೀವು ನೀರಾನೆ ಪ್ರಾಂತಕ್ಕೆ ಹೋಗ್ತೀದೀರಿ. ಮಹಾ ಅರ್ಚಕರು ದಂಡಯಾತ್ರೆಯ ಹಿರಿತನ ವಹಿಸ್ತಿರೋದು ಅಪೂರ್ವ ಸಂಭವ. ಇವತ್ತು ಕಹಿಮಾತು ಆಡಬಾರದು." .

" ಶವಲೇಪನ ಸಾಮಗ್ರಿ ಕೊಂಡಿದ್ದಾರೆ."

" ಗೊತ್ತಾಯ್ತು. ಶವಕ್ಕೆ ಉಸಿರು ತುಂಬೋದಕ್ಕಾಗ್ತದಾ ? ಹೇಗೂ ಅಲ್ಲಿಗೇ ಹೊರಟಿದ್ದೀರಿ. ಹೊರಡೋದಕ್ಕೆ ಮುಂಚೆ—"

" ಏನು ? "

" ಅರಮನೆಗೆ ಬರ್ತೀರಿ ಅಲ್ಲವಾ ?"

" ವೃಥಾ ಕಾಲವ್ಯಯ. ಮೆರವಣಿಗೆ ನೇರವಾಗಿ ದೋಣಿಕಟ್ಟೆಗೆ ಹೋಗ್ತದೆ. ಪೆರೋಗೆ ತಿಳಿಸಿಬಿಡಿ."

" ದೊಡ್ಡದಲ್ಲ. ತಡವಾಗುವ ಹಾಗಿದ್ದರೆ ದಂಡಯಾತ್ರೆಯಿಂದ ವಾಪಸಾದ್ಮೇಲೆ ಭೇಟಿಯಾಗೋಣ....ಅಂತ ಮಹಾಪ್ರಭುವೇ ಹೇಳಿದ್ದಾರೆ."

" ನಾನು ಪೂಜೆಗೆ ಹೊರಡ್ಬೇಕು."

" ನಾನೂ ಹೊರಟೆ. ಶವದ ಶೋಧೆ ನಡೆದಿದೆ. ಅಮಾತ್ಯ ಭವನ ದಲ್ಲಿರ್ತೇನೆ.....ಆಮೇಲೆ ಕಟ್ಟೇಲಿ ಕಾಣ್ತೇನೆ."

ಅರಮನೆಯ ಸೇವಕರು ಎಂದಿನಂತೆ ತಮ್ಮ ತಮ್ಮ ಕೆಲಸಗಳಲ್ಲಿ ಆ ದಿನ ನಿರತರಾಗಲಿಲ್ಲ. ಅಲ್ಲಲ್ಲಿ ಗುಂಪು ಕೂಡುತ್ತ ಹೊತ್ತು ಕಳೆದರು. ಹೊರಗೆ ತೋರಿಸದ ಸಂತಸ ಅವರದು.

ಬಾಟೆ ಬೆಕ್ ಸೆರೆಯಲ್ಲಿ ಇಲ್ಲವೆಂಬುದನ್ನು ತಿಳಿದಾಗ ಕಾರಾಗೃಹದ ಅಧಿಕಾರಿ

ಕೂಗಾಡಿದ.

"ಅವರನ್ನು ಬಿಡೋದಕ್ಕೆ ನ್ಯಾಯಸ್ಥಾನದ ಆಜ್ಞೆಯಾಗಿದೆ ಅಂತ ಯಾರೋ ಬಂದು ಹೇಳಿದ್ರು," ಎಂದರು ಕಾರಾಗೃಹದ ಕಾವಲುಗಾರರು.

ಅಮಾತ್ಯ ದಳಪತಿಯನ್ನು ಬಯ್ದಿದ್ದ. ದಳಪತಿ ಕಾವಲುಗಾರರಿಗೆ ಗುದ್ದಿದ.

ಹಿಂದಿನ ರಾತ್ರಿ ಹಟ್ಟಿಗೆ ಮರಳಿದವಳು ಶೋಕಭರಿತೆ ಶೀಬಾ. ಮಡದಿಯ ಮನಸ್ಸನ್ನು ಬಲ್ಲವನು ಅವಳ ಗಂಡ. ಆತನಿಗೂ ದುಃಖ.

ಆದರೆ ಬೆಳಿಗ್ಗೆ, ಶವ ಮಾಯವಾದ ಸುದ್ದಿ ಹಬ್ಬಿ, ಕರಿಯ ಮೋಡಗಳು ಚದರಿದುವು. ಮೆನ್ನಯ್ಯ ಕಾಣಿಸುವನೇನೋ ಎಂದು ಶೀಬಾ ಅಲ್ಲಿ ಇಲ್ಲಿ ನೋಡಿದಳು. ಯಾರ ಸುಳಿವೂ ಇಲ್ಲ. ರಾತ್ರಿಯೇ ದೋಣಿ ರಾಜಧಾನಿ ಬಿಟ್ಟಿರಬೇಕು—ಎಂಬ ತೀರ್ಮಾನಕ್ಕೆ ಬಂದಳು. ತನ್ನ ಸಂತಸವನ್ನು ಗಂಡನೊಡನೆ ಹಂಚಿಕೊಂಡಳು.

ಮಹಾ ಅರ್ಚಕ ಪ್ರಸನ್ನನಾದ, ಸೆಡ್ ಉತ್ಸವ ನಡೆಯಿತು, ತನ್ನೆದುರು ಬಾಯಿ ತೆರೆದಿದ್ದ ಗಂಡಾಂತರ ದೂರವಾಯಿತು, ಬಂಡಾಯಗಾರ ನಾಯಕನ ಕಥೆಯೂ ಮುಗಿಯಿತು—ಎಂದು ಸಮಾಧಾನ ತಳೆದಿದ್ದ ಅಮಾತ್ಯ ಆಮೆರಬ್‌ಗೆ ಶವ ಕಳವಾಯಿತೆಂದು ಸ್ವಲ್ಪ ಕಸಿವಿಸಿ. ತುಸು ಎಚ್ಚರ ವಹಿಸಿದ್ದರೆ ಹೀಗಾಗುತ್ತಿರಲಿಲ್ಲ. ಏನೇ ಇರಲಿ, ಇಲ್ಲವಾದುದ್ದು ಶವ,—ಜೀವಂತ ವ್ಯಕ್ತಿ ಅಲ್ಲವಲ್ಲ. ದಂಡಯಾತ್ರೆ ಹೊರಟಿದ್ದಾನೆ ಮಹಾನುಭಾವ! ಇಲ್ಲಿ ಇಲ್ಲವಾದರೆ ನೀರಾನೆ ಪ್ರಾಂತ ತಲುಪಿರ್ತದೆ; ಹುಡುಕಿ ಹಿಡಿದು ರಾಜಧಾನಿಗೆ ತರಲಿ!

ಪೆರೋನೂ ಮಹಾರಾಣಿಯೂ ಮೆನೆಪ್‌ಟಾನ ಶವ ಅದೃಶ್ಯವಾದುದಕ್ಕೆ ಮಹತ್ವ ನೀಡಲಿಲ್ಲ. ('ಮೊಸಳೆಗಳಿಗೆ ಆಹಾರವಾಗುವ ಬದಲು ಮಣ್ಣಿನ ಪಾಲು. ಎರಡೂ ಒಂದೇ.')

"ಈ ದಂಡಯಾತ್ರೆಯಿಂದ ಮಹಾ ಅರ್ಚಕನ ಬಲ ಹೆಚ್ಚಾಗ್ತದೆ."

ಅರಸನ ಅಭಿಪ್ರಾಯಕ್ಕೆ ಅರಸಿಯ ಪ್ರತಿಕ್ರಿಯೆ:

"ಮಹಾ ಏನು ಹೆಚ್ಚೀತು! ನೋಡ್ಕೊಳ್ಳೋಣ."

ಶವದ, ಶವವನ್ನು ಕದ್ದವರ ಶೋಧೆಗೆ ಹೋದ ತಂಡ ಬರಿಗೈಯಲ್ಲಿ ಮರಳಿತು.

....ಮೆರವಣಿಗೆ. ಜನಜಂಗುಳಿ....ಭಕ್ತಿಪ್ರದರ್ಶನ. ದಂಡಿನಿಂದ ಆವೃತ ನಾಗಿ ಪೀಠಪಲ್ಲಕಿಯಲ್ಲಿ ಕುಳಿತ ಮಹಾ ಅರ್ಚಕ. ಪ್‌ಟಾದೇವರು, ನಾಲ್ವರು ಹೊತ್ತುಕೊಂಡ ಪೀಠದ ಮೇಲೆ. ಪಕ್ಕದಲ್ಲಿ ಇನೇನಿ. ಬಲ ಪ್ರದರ್ಶನ.

ರಾ ನೆತ್ತಿಯ ಮೇಲೆ ಬರಲು ಇನ್ನೂ ಸ್ವಲ್ಪ ಹೊತ್ತಿದ್ದಾಗಲೇ ದೋಣಿ ಕಟ್ಟೆಯಲ್ಲಿ ಅಮಾತ್ಯ ಧರ್ಮಗುರುವಿಗೆ ಬಾಗಿ ನಮಿಸಿ ವಿದಾಯ ನುಡಿದ.

ಮೊದಲ ದೋಣಿಯಲ್ಲಿ ಎದೆ ಎತ್ತರದ ಪೀಠಸ್ಥ ಪ್‌ಟಾ ಮೂರ್ತಿ. ಅದರ ಪಕ್ಕದಲ್ಲಿ ಪೀಠದ ಮೇಲೆ ನಿಂತ ಮಹಾ ಅರ್ಚಕ. ಕೆಳಗೆ ಇನೇನಿ, ಬಕಿಲ, ಮಹಾ ಅರ್ಚಕನ ಸಹಾಯಕರಾದ ಕಿರಿಯ ದೇವಸೇವಕರು, ನೀರಾನೆ ಪ್ರಾಂತದ ಭೂಮಾಲಿಕ ನುಟ್‌ಮೋಸ್, ಕೆಲ ಸೈನಿಕರು. ಹೇಪಾಟ್ ವಿಶ್ರಾಂತಿ ಪಡೆಯಲು, ನಿದ್ರಿಸಲು ಮೇಲ್ಛಾವಣಿಯ ರಕ್ಷಣೆ. ಬಿಸಿ ರೊಟ್ಟಿ ತಯಾರಿಸಲು ಒಲೆ ವ್ಯವಸ್ಥೆ. ಎರಡನೆಯ ದೋಣಿ ತುಂಬ ಸೈನಿಕರು. ಮೂರನೆಯದರಲ್ಲಿ ಮಹಾ ಅರ್ಚಕನ ಪೀಠ, ಪಲ್ಲಕಿ, ಅಸ್ತ್ರಗಳು, ಬಲೆಗಳು, ಆಹಾರ ಸಾಮಗ್ರಿ, ಅಡುಗೆ ಪರಿಕರಗಳು, ದಾಸದಾಸಿಯರು ಮತ್ತು ಕೆಲ ಸೈನಿಕರು. ಅವರಲ್ಲಿ ಒಬ್ಬನಾಗಿದ್ದ, ಶೀಬಾಳ ಗಂಡ.

ಯೋಧರೇ ಅಂಬಿಗರು. ದೋಣಿಗಳು ನಡುನೀರಿಗೆ ತಲಪುತ್ತಲೆ ಹಾಯಿಗಳು ತುಂಬಿಕೊಂಡವು. ಮಹಾ ಅರ್ಚಕನ ಅನುಜ್ಞೆಯನ್ನು ಇನೇನಿ ಬಕಿಲನಿಗೆ ತಿಳಿಸಿದ. ಅವನು ಕೂಗಿ ನುಡಿದ: (ಹಿಂಬಾಲಿಸುತ್ತಿದ್ದ ದೋಣಿ ಗಳ ಮುಖ್ಯಸ್ಥರು ಆದೇಶವನ್ನು ಪುನರುಚ್ಚರಿಸಿದರು.)

"ಶವ ಕದ್ದವರ ದೋಣಿಯನ್ನು ನಾವು ಹಿಡೀಬೇಕು. ವೇಗ ಹೆಚ್ಚಿಸಿ ! ವೇಗ ಹೆಚ್ಚಿಸಿ !"

ಉದ್ದಕ್ಕೂ ಹಲವು ದೋಣಿಗಳನ್ನು ಅವರು ಹಿಂದಿಕ್ಕಿದರು. ನೀರಾನೆ ಪ್ರಾಂತದವರು ಯಾರೂ ಬಕಿಲನ ಕಣ್ಣಿಗೆ ಬೀಳಲಿಲ್ಲ.

ತಂಡದ ಮೂರನೆಯ ದೋಣಿ ಬರುವುದು ಸ್ವಲ್ಪ ನಿಧಾನವಾಯಿತು.

ಹಾಯಿಯ ಹಗ್ಗ ಬಿಚ್ಚಿಕೊಂಡಿತು. ಒಂದು ಹುಟ್ಟು ಕಳಚಿಕೊಂಡಿತು. ದೋಣಿಯ ಅಂಚಿನಲ್ಲಿ ಕುಳಿತಿದ್ದ ಒಬ್ಬ ದಾಸ ನೀರಿಗೆ ಬಿದ್ದ. ಅವನನ್ನು ಮತ್ತೆ ದೋಣಿಗೆ ಎಳೆದುಕೊಳ್ಳಲು ಸಮಯ ಹಿಡಿಯಿತು.

ದೇವತಾಮೂರ್ತಿಯ ಜತೆಗೆ ಸ್ವಲ್ಪ ಹೊತ್ತು ತಾನೂ ಪ್ರತಿಮೆಯಾಗಿ ನಿಂತ, ಮಹಾ ಅರ್ಚಕ. ಹಿಂದಿನ ಧರ್ಮಯಾತ್ರೆಗಳಲ್ಲಿ ಬೆಳಿಗ್ಗೆ ಮಧ್ಯಾಹ್ನ ಸಂಜೆ ಅವರ ದೋಣಿ ದಡ ಸೇರುತ್ತಿತ್ತು—ಧರ್ಮಗುರುವಿನ ಸ್ನಾನಕ್ಕಾಗಿ; ಆದರೆ ಈ ಸಲದ್ದು ಅವಸರದ ಯಾನ; ಏನು ಮಾಡುವರೊ ? ತುಸು ಅಳುಕುತ್ತಲೇ ಇನೇನಿ ಕೇಳಿದ:

" ಸ್ನಾನ ? "

ಮಹಾ ಅರ್ಚಕರ ಉತ್ತರ ಬಂತು :

" ಬೆಳಿಗ್ಗೆ ಒಮ್ಮೆ ದಡ ಮುಟ್ಟಿದರೆ ಸಾಕು. ಮಧ್ಯಾಹ್ನ—ಸಂಜೆ ಇಲ್ಲಿಯೇ ಮೈ ತೋಯಿಸಿಕೊಳ್ತೇನೆ. ದಂಡು ಆಗಾಗ್ಗೆ ಕೆಳಗೆ ಇಳಿದರೆ ತಡವಾಗ್ತದೆ."

ಸಂಜೆಯಾಗುತ್ತಿದ್ದಂತೆ ಕಿರಿಯ ದೇವಸೇವಕರು ಒಲೆ ಹಚ್ಚಿದರು. ಮುಳುಗುತ್ತಿದ್ದ ಸೂರ್ಯನಿಗೆ ಮಹಾ ಅರ್ಚಕ ಪ್ರಾರ್ಥನೆ ಸಲ್ಲಿಸಿದ. ಆತನಿಗಾಗಿ ಬಿಸಿರೊಟ್ಟಿಯ ಊಟ ಅಣಿಯಾದಂತೆ, ಯೋಧರು ಬುತ್ತಿಗಳನ್ನು ಬಿಚ್ಚಿದರು.

ಸರದಿಯಲ್ಲಿ ನಿದ್ದೆ, ಹುಟ್ಟು ಹಾಕುವ ಕೆಲಸ. ಬೆಳಿಗ್ಗೆ ನೆಲಸ್ಪರ್ಶ, ದಿನದ ಅಡುಗೆ. ಮಹಾ ಅರ್ಚಕನಿಂದ ಪ್ಟಾಹ್ ಪೂಜೆ.

" ಬೇಗ ! ಬೇಗ ! " ಎಂದು ಹೇಪಾಟ್‌ನ ಗುಡುಗು.

ಶೀಬಾಳ ಗಂಡ ಮನಸ್ಸಿನಲ್ಲೇ ಅಂದುಕೊಂಡ : ' ವೇಗವಾಗಿಯೇ ಹೋಗ್ತಿದ್ದೇವೆ. ನಮ್ಮಷ್ಟು ವೇಗವಾಗಿ ಅವರೂ ಹೋದರೆ ಸಾಕು ನಮಗಿಂತ ಮುಂಚೆ ತಲಪ್ತಾರೆ.'

* * * *

ನ್ಯಾಯಸ್ಥಾನದಲ್ಲಿ ನಡೆದಿದ್ದ ವಿಚಾರಣೆಯನ್ನು ಮೆನ್ನ ಆ ಹಗಲು

ಬಣ್ಣಿಸಿದ.

“ನಾನು ಮತ್ತೆ ಮತ್ತೆ ಹೇಳ್ತೀನೆ: ವಿಚಾರಣೆಯಾದದ್ದು ನಾಯಕರದಲ್ಲ. ಪೆರೋ–ಮಹಾಅರ್ಚಕ–ಅಮಾತ್ಯರದು. ತೀರ್ಪು ಕೊಟ್ಟದ್ದು ಮೆನೆಪ್‌ಟಾ ಅಣ್ಣ, ಅವರಲ್ಲ....”

ವಿಚಾರಣೆಯಲ್ಲಿ ಭಾಗವಹಿಸಿದ್ದ ಒಬ್ಬೊಬ್ಬರ ಪಾತ್ರವನ್ನೂ ಮೆನ್ನ ಅಭಿನಯಿಸಿದ. ಅವನು ನ್ಯಾಯಮೂರ್ತಿಯಾದ. ನ್ಯಾಯಮೂರ್ತಿಯತ್ತ ಬೊಟ್ಟು ಮಾಡಿ ಘೋರ ಆರೋಪ ಹೊರಿಸಿದ ಮೆನೆಪ್‌ಟಾ ಆದ.

ರಾಮೆರಿಪ್‌ಟಾ ಮೊದಲ್ಗೊಂಡು ಪ್ರತಿಯೊಬ್ಬರೂ ಮೆನ್ನ ಹೇಳಿದ ಮಾತುಗಳನ್ನು ಕಿವಿಗೊಟ್ಟು ಕೇಳಿದರು. ಅವರ ಪಾಲಿಗೆ ಮೆನೆಪ್‌ಟಾ ಮರಳಿ ಜೀವ ತಳೆದು ಬಂದ....

....ಹಾಯಿಗಂಬದ ಬಳಿ ನಿಂತಿದ್ದ ಬಟಾನ ಗುರುತು ಹಿಡಿದು, ಮೇಲಿನಿಂದ ಬರುತ್ತಿದ್ದ ದೋಣಿಯುಲ್ಲಿದ್ದ ಯಾರೋ ಕೂಗಿ ಕರೆದರು :

“ಬಟಾ ! ಬಟಾ ! ಓ ಬಟಾ !”

ಆ ದೋಣಿಯಿಂದ ದೂರ ಸರಿಯಲು ಬಟಾನ ಅಂಬಿಗರು ಮಾಡಿದ ಯತ್ನ ವಿಫಲವಾಯಿತು. ಆ ದೋಣಿಯೇ ಹತ್ತಿರ ಬರತೊಡಗಿತು.

ಬಟಾನಿಗೆ, ಇದು ಪರಿಚಿತ ಧ್ವನಿ—ಎನಿಸಿತು. ಆ ದೋಣಿಯಲ್ಲಿ ನಿಂತು ಕೈ ಬೀಸುತ್ತಿದ್ದವನನ್ನು ನೋಡಿದ. ಹಿಂದೆ ನೀರಾನೆ ಪ್ರಾಂತಕ್ಕೆ ತನ್ನ ಸಂದೇಶವನ್ನು ತಲಪಿಸಿದ್ದ ದೋಣಿಕಾರ.

ಬಟಾ ತನ್ನ ಅಂಬಿಗರಿಗೆ ಹುಟ್ಟು ಹಾಕುವುದನ್ನು ನಿಲ್ಲಿಸುವಂತೆ ಸನ್ನೆ ಮಾಡಿದ. ಆ ದೋಣಿ ಹತ್ತಿರಕ್ಕೆ ಬಂತು.

ಅದರ ದೋಣಿಕಾರ ಕೂಗಿ ಹೇಳಿದ :

“ಬಟಾ ! ಸಂದೇಶ ತಲಪಿಸಿದ್ದೇನೆ. ಋಣದ ಬಾಕಿ ಇದೆ....”

(‘ಇವನಿಗೆ ತಿಳೀದು. ಅದಾದ ಮೇಲೆ ನಾನು ಅಲ್ಲಿಗೆ ಹೋಗಿ ಬಂದೆ.’)

ಇವನು ಮೌನವಾಗಿದ್ದಾನಲ್ಲಾ, ಎಂದು ದೋಣಿಕಾರ ಮತ್ತೆ ನುಡಿದ :

“ನನ್ನ ಗುರುತು ಸಿಕ್ತಾ ? ನಿಮ್ಮ ನಾಯಕರು ವಾಪಸ್ಸು ಬಂದರಾ ?”

ಬಟಾ ಈಗಲೂ ಸುಮ್ಮನಿದ್ದ. ಆದರೆ, ಮುಖ ಕೆಳಕ್ಕೆ ನೋಡಿತು. ಆ ದೋಣಿಕಾರನ ನೋಟ ಬಟಾನ ದೃಷ್ಟಿಯನ್ನು ಹಿಂಬಾಲಿಸಿತು. ರಕ್ಷಿತ ಶವ.

ವನ್ನು ಕಂಡು ಆತ "ಆ!" ಎಂದ.

ಮುಖ ವಿವರ್ಣವಾಯಿತು. ಅದು ನಾಯಕನ ಶವವಿರಬೇಕು ಎಂದು ಊಹಿಸಿ ತಬ್ಬಿಬ್ಬಾದ. ಮುಂದೆ ಸಾಗುವಂತೆ ತನ್ನ ಅಂಬಿಗರಿಗೆ ಸೂಚಿಸಿದ.

ಮೆನ್ನನಿಗೆ ಕಳವಳ. ಬಟಾ ಇನ್ನೂ ಸುಮ್ಮನಿದ್ದುದನ್ನು ಗಮನಿಸಿ, ಆ ದೋಣಿಕಾರನತ್ತ ನೋಡಿ. "ಅಪ್ಪಾ, ನಮ್ಮನ್ನು ನೀವು ನೋಡೇ ಇಲ್ಲ. ಯಾರಾದರೂ ಕೇಳಿದರೆ....ನಮ್ಮನ್ನು ನೋಡೇ ಇಲ್ಲ ನೀವು...." ಎಂದ.

ಆ ದೋಣಿಕಾರ ಏನು ಹೇಳಲೂ ತೋಚದೆ, ತಲೆ ಬಾಗಿಸಿ, ತನ್ನ ಹಾಯಿ ಕಂಬಕ್ಕೆ ಆತು ನಿಂತ....

* * * *

ಆ ನಸುಕಿನಲ್ಲಿ ಮೆನ್ನ ಕಣ್ಣು ತೆರೆದಾಗ ನೀಲ ನದಿಯನ್ನು ಮುಸುಕಿತ್ತು, ಮಂಜು. ಪ್ರತಿ ವರ್ಷವೂ ಕುಯಿಲಿಗೆ ಮುನ್ನ ಹೀಗಾಗುವುದಿತ್ತು.

ಊರಿನಲ್ಲಿ ಎಲ್ಲ ಸಿದ್ಧತೆಯೂ ಮುಗಿದಿರಬಹುದು. ನಾಯಕ ಬಂದೊಡನೆಯೇ ಸಂಭ್ರಮದ ಕುಯಿಲು. ಎಲ್ಲಿಯ ಸಂಭ್ರಮ ಇನ್ನು ?

ಮಂಜು ಕರಗಲು ಸ್ವಲ್ಪ ಹೊತ್ತು ಬೇಕು. ಈಗ ವೇಗವಾಗಿ ಮುಂದುವರಿಯುವುದು ಅಪಾಯಕರ. ಅಂಬಿಗರು ಹಣತೆ ಹಚ್ಚಿದರು. ಮುಂದೆ ಸಾಗುವುದರ ಬದಲು ದಡ ಮುಟ್ಟಿ ಬೆಳಗಿನ ಕ್ರಿಯೆಗಳನ್ನು ಮುಗಿಸುವುದು ಮೇಲು.

ಹಾಗೆ ಮಾಡಲು ಬಟಾ ನಿರ್ದೇಶವಿತ್ತ.

ಪುನಃ ಪಯಣ ಮುಂದುವರಿಸಲು ಅವರೆಲ್ಲ ಸಿದ್ಧರಾಗುವ ಹೊತ್ತಿಗೆ ಮಂಜಿನ ಪರದೆ ಸರಿಯಿತು. ಕೊಳದಲ್ಲಿ ಮಿಂದು ಎದ್ದವನಂತೆ ರಾ ಬೆಳಗಿದ.

ಇಬ್ಬನಿ ಸುರಿದು ಮೆನೆಪ್‌ಟಾ ಮೈ ತೋಯ್ದಿತ್ತು. ಮೆನ್ನ ಬಟ್ಟೆಯಿಂದ ರಕ್ಷಿತ ಶವದ ಮೈ ಒರೆಸಿದ.

"ಸ್ನಾನವಾದಂತಾಯ್ತು ನಾಯಕರಿಗೆ," ಎಂದ.

ಬಟಾನ ಕಡೆ ನೋಡಿ, "ಕೊಳಲಿನಲ್ಲಿ ಯಾವ ಭಾವ ಬೇಕಾದರೂ ನುಡಿಸಬಹುದು, ಅಲ್ಲವಾ ?" ಎಂದು ಮೆನ್ನ ಕೇಳಿದ.

"ಮೆನ್ನಯ್ಯ ಮೆಂಫಿಸಿನಲ್ಲಿ ನೀವು 'ಇನ್ನು ಯಾರೊಡನೆ ನಾ ಮಾತಾ

ಡಲಿ ?' ಹಾಡಿದ್ದು ಕೇಳಿದ ಮೇಲೆ ಕೊಳಲಲ್ಲಿ ಆ ಹಾಡು ಬಾರಿಸಬೇಕೂಂತ ನನಗೆ ಅನಿಸಿತ್ತು.? "

"ಸಾವು ನನ್ನ ಮುಂದಿದೆ ಇಂದು'—ಅಷ್ಟೊಂದು ಶೋಕ ಪೂರ್ಣ ಅಲ್ಲ.... "

ಬಟಾ ದೋಣಿಯ ಅಮನ್ ದೇವರ ಮೂಲೆಯಲ್ಲಿರಿಸಿದ್ದ ತನ್ನ ಕೊಳಲ ನ್ನೆತ್ತಿಕೊಂಡ.

" ನೀವು ಒಂದೊಂದೇ ಸಾಲು ಅನ್ನಾ ಹೋಗಿ. ಬಾರಿಸ್ತೇನೆ."

ಉತ್ಸಾಹದ ಧ್ವನಿಯಲ್ಲ. ಪ್ರಲಾಪವೇ. ಆದರೂ ಆ ದುಃಖವನ್ನು ತುಸು ಶಮನಗೊಳಿಸಲು ಸಹಕಾರಿ.

" ಸಾವು ನನ್ನ ಮುಂದಿದೆ ಇಂದು...."

ಬಟಾ ಕೊಳಲಿನ ತೂತುಗಳ ಮೇಲೆ ಬೆರಳುಗಳನ್ನು ಓಡಿಸಿದ.

" ಸಾಂಬ್ರಾಣಿ ಸೂಸುವ ಸುವಾಸನೆಯಂತೆ...."

ಕೊಳಲಿನಿಂದಲೂ ಅದೇ ಪದಗಳು.

" ಬಿರುಗಾಳಿಯ ದಿನ—ಊಹೂಂ—
ಮಂಜು ಮುಸುಕಿದ ದಿನ
ಹಡಗಿನ ಹಾಯಿಯ ಕೆಳಗೆ ಕುಳಿತವನಂತೆ."

ಒಂದೊಂದು ಪದ್ಯದ ಸಾಲುಗಳು ಮುಗಿದ ಮೇಲೆ ಬಟಾ ಆ ಪದಗಳನ್ನು ಪೂರ್ತಿಯಾಗಿ ತಾನೇ ಕೊಳಲಿನ ಮೇಲೆ ನುಡಿಸಿದ.

ಹಾಡಿನ ಕೊನೆಯ ಪದ್ಯವನ್ನೂ ಬಟಾ ಬಾರಿಸಿ ಆದ ಬಳಿಕ ಮೆನ ನೆಂದ :

" ದಿನ ಕಳೆದಂತೆ ಶೋಕಭಾರ ಕಮ್ಮಿಯಾಗಬೇಕು ; ಗಾಯ ಮಾಯ ಬೇಕು."

* * * *

ಮಂಜು ಕವಿದ ಬೆಳಿಗ್ಗೆ ದಂಡು ಹೊತ್ತ ದೋಣಿಗಳ ವೇಗ ಕಡಿಮೆ ಯಾಯಿತು. ಮಹಾ ಅರ್ಚಕನ ಸ್ನಾನಕ್ಕಾಗಿ, ಆಡುಗೆಗಾಗಿ, ದಡ ಸೇರಿದಾಗ ಬಕಿಲ ಹೇರು ದೋಣಿಯವರನ್ನು ಹೀಗಳೆದ. ಆ ದೋಣಿಯಲ್ಲಿದ್ದ ದಾಸದಾಸಿ ಯರಿಗೆ—ಯೋಧರಿಗೆ ಕೂಡಾ—ತನ್ನ ಚಾವಟಿಯ ರುಚಿ ತೋರಿಸಿದ ಇದಿ

ರಾಡಬೇಕು ಎನಿಸಿತು ಶೀಬಾಳ ಗಂಡನಿಗೆ. ಯೋಚಿಸಿ, 'ಅದು ದುಡುಕು ವರ್ತನೆಯಾಗ್ತದೆ, ಪ್ರಯೋಜನವಿಲ್ಲ' ಎಂಬ ತೀರ್ಮಾನಕ್ಕೆ ಬಂದ.

ಮಹಾ ಅರ್ಚಕ ತನ್ನ ಪೀಠದ ಮೇಲೆ ಕುಳಿತು ಉಪಾಹಾರ ಸ್ವೀಕರಿಸ ತೊಡಗಿದಂತೆ ಎದುರು ದಿಕ್ಕಿನಿಂದ ಹೇರು ದೋಣಿಯೊಂದು ಬರುತ್ತಿದ್ದುದು ಕಾಣಿಸಿತು. ಹೇಪಾಟ್‌ನ ಸೂಚನೆಯಂತೆ ಬಕಿಲ "ನಿಲ್ಲು, ಹತ್ತಿರ ಬಾ" ಎಂದು ಆ ದೋಣಿಕಾರನಿಗೆ ಕೂಗಿ ಹೇಳಿದ, ಸನ್ನೆ ಮಾಡಿದ.

ದೋಣಿ ಹತ್ತಿರ ಬಂತು. ದೋಣಿಕಾರನೂ ಅವನನ್ನು ಅನುಸರಿಸಿ ಅಂಬಿಗರೂ ಇದ್ದಲ್ಲೇ ಮಂಡಿಯೂರಿದರು. ದೇವತಾಮೂರ್ತಿಗೆ, ಧರ್ಮಗುರು ವಿಗೆ ಭಕ್ತಿಪೂರ್ವಕ ವಂದನೆ.

ಕೈ ಬಾಯಿಗಳ ಕೆಲಸ ಮುಂದುವರಿಸುತ್ತ ಹೇಪಾಟ್ ಅಂದ:

"ಕೇಳು."

ಬಕಿಲ ಕೇಳಿದ:

"ಏಯ್! ಶವ ತಗೊಂಡು ಹೋಗ್ತಿದ್ದ ಒಂದು ದೋಣಿ ದಾರೀಲಿ ಸಿಕ್ತಾ?"

ದಂಡನ್ನೂ ಬಕಿಲನನ್ನೂ ನೋಡುತ್ತ ದೋಣಿಕಾರನೆಂದ:

"ಇಲ್ಲ ದಂಡನಾಯಕರೇ, ಈ ಮಂಜಿನಲ್ಲಿ ಶವವನ್ನೂ ಕಾಣೆ ಜೀವಂತ ಮನುಷ್ಯರನ್ನೂ ಕಾಣೆ."

"ಏಯ್! ಹುಷಾರ್! ನಿನ್ನೆ ಹಗಲು ಯಾರೂ ಸಿಗಲಿಲ್ಲ?"

"ಇಲ್ಲ ದಂಡನಾಯಕರೇ," ಎಂದ ದೋಣಿಕಾರ, ತಾನು ಕಂಡಿದ್ದ ಬಟಾ ಬಳಗದ ಹಾಗೂ ನಾಯಕನ ರಕ್ಷಿತ ಶವದ ನೆನಪನ್ನು ಬದಿಗೆ ಸರಿಸುತ್ತ.

ಹೇಪಾಟ್ "ತೊಲಗು!" ಎನ್ನುವಂತೆ ಕೈಸನ್ನೆ ಮಾಡಿದ.

ಬಕಿಲ "ಹೊರಡು!" ಎಂದ.

ದೋಣಿಕಾರನೂ ಅಂಬಿಗರೂ ಎದ್ದು ನಿಂತು ಮತ್ತೊಮ್ಮೆ ತಲೆಬಾಗಿ ನಮಿಸಿದರು.

ದೋಣಿಕಾರ ಚುಕ್ಕಾಣಿ ಕೈಗೆತ್ತಿಕೊಂಡ. ಅಂಬಿಗರು ಹುಟ್ಟು ಹಾಕಿದರು.

0 0 0 0

ಬಟಾ ಅಬ್ಟು ಯಾತ್ರಿಕರೊಡನೆ ಮೆಂಫಿಸಿಗೆ ಹೋದಾಗಿನ ವೇಗವೇ.

ಈಗಲೂ. ಅಲ್ಲ, ಅದಕ್ಕಿಂತಲೂ ಸ್ವಲ್ಪ ಹೆಚ್ಚು.

ದಂಡಯಾತ್ರೆಯ ದೋಣಿಗಳು ತಮಗಿಂತ ಒಂದು ದಿನದ ಮಟ್ಟಿಗಾದರೂ ಹಿಂದಿರುತ್ತವೆ ಎಂದು ಬಟಾನ ತರ್ಕ. ಆದರೆ ಲೆಕ್ಕ ತಪ್ಪಿತ್ತು. ಮಹಾ ಅರ್ಚಕನ ದೋಣಿಯ ಸೆಳೆತ ಸಾಮರ್ಥ್ಯದ ಪರಿಚಯ ಅವನಿಗಿರಲಿಲ್ಲ; ಮೆನ್ನನಿಗೂ ಇರಲಿಲ್ಲ.

ಮೂರು ದೋಣಿಗಳಲ್ಲೂ ಅಂಬಿಗರನ್ನು ಆಗಾಗ್ಗೆ ಬದಲಾಯಿಸುತ್ತಿದ್ದುದರಿಂದ—ಕೊನೆಯ ದೋಣಿಯಲ್ಲಿದ್ದ ಶೀಬಾಳ ಗಂಡ ಸಣ್ಣ ಪುಟ್ಟ ಪ್ರಯತ್ನಗಳನ್ನೆಷ್ಟೇ ಮಾಡಿದರೂ—ವೇಗ ಬಹಳವೇನೂ ಕುಂಠಿತವಾಗಲಿಲ್ಲ.

ಆರಂಭದಲ್ಲಿ ಬಟಾನ ದೋಣಿಗೂ ದಂಡಿಗೂ ಮಧ್ಯೆ ಅರ್ಧ ಇರುಳು ಅರ್ಧ ಹಗಲಿನ ಅಂತರವಿದ್ದುದು ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತ ಬಂತು.

ಆ ರಾತ್ರೆ ಮಹಾ ಅರ್ಚಕನಿಗೆ ಬಕಿಲ ಅರಿಕೆ ಮಾಡಿದ :

"ನಾಳೆ ಕತ್ತಲಾಗೋ ಹೊತ್ತಿಗೆ ನಾವು ಸುಲಭವಾಗಿ ನೀರಾನೆ ಪ್ರಾಂತ ಮುಟ್ಟೇವು. ಆದರೆ ಸ್ವಲ್ಪ ಬೇಗನೆ—ಮಧ್ಯಾಹ್ನದ ಹೊತ್ತಿಗೇ—ಅಲ್ಲಿದ್ದರೆ, ಆಕ್ರಮಣ ಸುಲಭವಾಗ್ತದೆ."

"ಸರಿ. ಬೆಳಿಗ್ಗೆ ದಂಡು ಊಟಕ್ಕೆ ಕೂತಾಗ ನಾನು ಮಾತಾಡ್ತೇನೆ," ಎಂದ ಮಹಾ ಅರ್ಚಕ.

....ಕೆಳಗೆ ಆ ಸಂವಾದ ನಡೆಯುತ್ತಿದ್ದ ವೇಳೆಗೆ ಬಟಾನ ದೋಣಿ ಮೊಸಳೆ ಪ್ರಾಂತದ ಹತ್ತಿರಕ್ಕೆ ಬಂದಿತ್ತು. ಅದನ್ನು ದಾಟಿದರೆ ಅವರ ನಾಡು ಆರಂಭ. ಆ ನಾಲ್ಕು ದಿನಗಳಲ್ಲಿ, ಮರುಹುಟ್ಟಿನೆಡೆಗೆ ಸಾಗಿದ್ದ ನಾಯಕನ ರಕ್ಷಿತಶವವನ್ನು ಎದುರು ಇರಿಸಿಕೊಂಡು ಬಾಳಲು ಅವರು ಕಲಿತಿದ್ದರು. ರೂಢಿಯಾಗಿದ್ದ ಆ ಬದುಕಿನಿಂದ ಭಿನ್ನವಾದದ್ದು ಇನ್ನು.

"ರಾ ಉದಿಸೋದರೊಳಗೆ ಊರು ಸೇರ್ತೇವೆ."

ಪ್ರಯಾಸಪಟ್ಟು ಬಟಾ ಆ ಮಾತುಗಳನ್ನು ಆಡಿದ್ದ. ಬರಿದ ಗಂಟಲು, ಇನ್ನು ಯಾರಿಗೂ ನಿದ್ದೆ ಇಲ್ಲ.

ಮಗು ಆದಷ್ಟು ಹೊತ್ತು ಮಲಗಲಿ ಎಂದು ಅಹೂರಾ 'ಶ್' ಎನ್ನುತ್ತ ಅದರ ಬೆನ್ನು ತಟ್ಟಿದಳು.

ಊರು ಹತ್ತಿರ ಬರುತ್ತಿದೆ ಎಂಬ ಅರಿವು ಎಲ್ಲರ ಎದೆಗಳನ್ನು ಒತ್ತಿತು.

ರಾಮೆರಿಪ್‌ಟಾ ಚಡಪಡಿಸಿದ. ತಾಯಿಗೆ ತಾನು ಏನನ್ನು ಹೇಳಬೇಕು?— ಏನನ್ನು?

ಬಟಾ ಹಾಯಿಕಂಬಕ್ಕೆ ಆತು ತನ್ನ ಹಣೆಯನ್ನು ಅದಕ್ಕೆ ಒತ್ತಿ ಹಿಡಿದ. ['ನಮ್ಮ ಜನರಿಗೆ ಹ್ಯಾಗೆ ಮುಖ ತೋರಿಸಲಿ ?']

ಔಟ, ಬೆಕ್ ಅಳಲು ಸಿದ್ಧರಾದರು.

ಅಹೂರಾ ಮೆನೆಸ್‌ಟಾನ ಮುಖ ದಿಟ್ಟಿಸಿದಳು.

ಉಳಿದೆಲ್ಲರಿಗೆ ಮೌನವೇದನೆ.

ಮೆನ್ನನೂ ಆ ನೋವನ್ನು ಸಹಿಸಿದ.

ಚುಮು ಚುಮು ನಸುಕಿನಲ್ಲಿ ದೋಣಿ ನೀರಾನೆ ಪ್ರಾಂತದ ಮುಖ್ಯ ಪಟ್ಟಣದ ದೋಣಿಕಟ್ಟೆಯನ್ನು ಸಮೀಪಿಸಿತು.

ಕಲ್ಲುಗಳಿಂದ ಕಟ್ಟಿದ್ದ ಆಳೆತ್ತರದ ಪೀಠ. ಥಾಳಾಗಿ ಎಡಬಲಗಳಲ್ಲಿ ಉರಿಯುತ್ತಿದ್ದ ಪಂಜುಗಳು. ಆ ಪೀಠದ ಮೇಲೆ ಶಿಲ್ಪಿ ನೆಖೆನ್ ಪೂರ್ತಿಗೊಳಿಸಿದ್ದ ನೀರಾನೆಯ ಶಿಲಾಪ್ರತಿಮೆ. ಇದು ತಮ್ಮೂರು ಹೌದೋ ಅಲ್ಲವೋ ಎಂಬ ಸಂದೇಹ ಹಲವರಿಗೆ, ಒಂದು ಕ್ಷಣ.

ಬಟಾ ಬಿಟ್ಟುಹೋಗಿದ್ದ ಕಾವಲಿನ ಹುಡುಗ ಬಟ್ಟೆ ಹೊದೆದುಕೊಂಡು ಮರದ ಕೆಳಗೆ ಮಲಗಿದ್ದ.

ಜನ ಆಗಲೇ ಎದ್ದಿದ್ದರು. ಹಲವು ಮನೆದೀಪಗಳು ಕಾಣಿಸುತ್ತಿದ್ದುವು.

ಬಟಾ ನಿಟ್ಟುಸಿರು ಬಿಟ್ಟ.

ದೋಣಿ ಮೆಲ್ಲನೆ ಕಟ್ಟೆಯನ್ನು ಮುಟ್ಟಿತು.

## ೧೫

ದೋಣಿ ಕಟ್ಟೆಯನ್ನೇನೋ ಮುಟ್ಟಿತು. ಆದರೆ ಯಾರೂ ಇಳಿಯುತ್ತಿಲ್ಲ.

ಮೆನ್ನನಿಗೆ ಅನಿಸಿತು :

'ಸುರಕ್ಷಿತವಾಗಿ ಊರು ಸೇರಿದ್ದಾರೆ, ದುರ್ಘಟನೆಯ ಘೋರ

ಸ್ವರೂಪ ಅವರನ್ನೀಗ ಅಣಕಿಸ್ತಿದೆ. ಮಂಕು ಕವಿದಂತೆ ಮೌನವಾಗಿದ್ದಾರೆ. ಆದರೆ ಬೆನ್ನ ಹಿಂದೆಯೇ ಇದೆಯಲ್ಲ ಅಪಾಯ? ನೀರನ್ನು ಸೀಳಿಕೊಂಡು ಅದು ಧಾವಿಸಿ ಬರುತ್ತಿದೆಯಲ್ಲ? ನಿಧಾನ ಸಲ್ಲ, ನಿಧಾನ ಸಲ್ಲ........'

ತನ್ನೆಡೆಗೆ ನೋಡುತ್ತಿದ್ದ ಬಟ್ಟಾನಿಗೆ ಮೆನ್ನನೆಂದ:

"ಅಣ್ಣ, ತಡ ಮಾಡಬಾರದು, ತಡಮಾಡಬಾರದು."

ಬಟಾನ ಮೆದುಳಿನಲ್ಲಿ ಧುಮುಧುಮಿಸುತ್ತಿದ್ದುದೂ ಅದೇ ವಿಚಾರ.

'ತಡ ಮಾಡಿದರೆ ತೊಂದರೆ—ತೊಂದರೆ.'

ತನ್ನ ಜನರಿಗೆ ಅವನೆಂದ:

'ಇಳಿಯಿರಿ....ಬೇಗ....'

ಮೆನೆಪ್‌ಟಾನ ರಕ್ಷಿತ ಶವ, ರಾಮೆರಿಪ್‌ಟಾ, ಮೆನ್ನ, ಬಟಾ—ಇವರನ್ನುಳಿದು ಇತರರೆಲ್ಲ ಇಳಿದರು.

ಇವರ ಪಾದಗಳೆಲ್ಲ ಕಟ್ಟೆಯ ಕಲ್ಲುಗಳಿಗೆ ಅಂಟಿಕೊಂಡುವಲ್ಲ? ಜೋಲು ಮೋರೆ ಹಾಕಿ ಮೆನೆಪ್‌ಟಾ ಅಣ್ಣನನ್ನೆ ನೋಡುತ್ತಿರುವರಲ್ಲ? ಮೆನ್ನ ಅಂದುಕೊಂಡ:

'ಇವರೀಗ ಅಳ್ತಾರೆ, ಧ್ವನಿ ತೆಗೆದು ಗಟ್ಟಿಯಾಗಿ ಅಳ್ತಾರೆ.'

ಪಯಣದುದ್ದಕ್ಕೂ ಘಾಸಿಗೊಂಡು ಮುದುಡಿ ಬಿದ್ದಿದ್ದ ದುಃಖದ ಹಕ್ಕಿ ಕಟ್ಟೆಯ ಮೇಲೆ ಚಡಪಡಿಸಿತು. ಅದರಿಂದ ಆಕ್ರಂದನ ಹೊರಟಿತು. ಅಹೂರಾ ಮೊದಲಬಾರಿಗೆ ತಲೆಗೂದಲನ್ನು ಹಿಡಿದೆಳೆಯುತ್ತ, ಎದೆಗೆ ಹೊಡೆದುಕೊಳ್ಳುತ್ತ, ರೋದಿಸಿದಳು:

"ಅಣ್ಣಾ! ಅಣ್ಣಾ! ಅಯ್ಯೋ! ಅಯ್ಯೋ!"

ಅನುಚರರಾಗಿದ್ದ ಯಾತ್ರಿಕರು.

ತಂಡದ ಯಾತನೆ ಶೋಕಧ್ವನಿಯಾಗಿ ಮಾರ್ಪಟ್ಟಿತು.

ಮೆನ್ನ ಎದ್ದು ನಿಂತು ಪುನಃ ಪುನಃ ಗಟ್ಟಿಯಾಗಿ ಅಂದ:

"ಹೀಗೆ ರೋದಿಸಿ ಫಲವಿಲ್ಲ. ನಾಯಕರು ಮತ್ತೆ ಜೀವಂತರಾಗೋದಕ್ಕೆ ಅವರ ನಾಮೋಚ್ಚಾರವೊಂದೇ ಮಾರ್ಗ."

ತಾನು ಹೇಳಿದುದು ಅವರಿಗೆ ಕೇಳಿಸಿತೆಂದು ಖಚಿತವಾದಾಗ ಮೆನ್ನನೆಂದ:

"ಓ ಒಸ್ಸೆರಿಸ್....ಓ ಒಸ್ಸೆರಿಸ್...."

ಅವರು ಅಳುತ್ತಳುತ್ತ ಉಚ್ಚರಿಸಿದರು.

"ಓ ಒಸ್ಸೈರಿಸ್....ಓ ಒಸ್ಸೈರಿಸ್...."

"ಓ ಮೆನೆಪ್‌ಟಾ.... ಓ ಮೆನೆಪ್‌ಟಾ...."

"ಓ ಮೆನೆಪ್‌ಟಾ.... ಓ ಮೆನೆಪ್‌ಟಾ...."

ರಾಮೆರಿಪ್‌ಟಾ ಹಿಂಗೈಯಿಂದ ಕಣ್ಣುಗಳನ್ನೊರೆಸಿಕೊಂಡ. ತುಂಬಿದ್ದ ಕಂಬನಿಯನ್ನು ತಲೆಯಲುಗಿಸಿ ಬಟಾ ಝಾಡಿಸಿದ.

ಮರದ ಕೆಳಗೆ ಮಲಗಿದ್ದ ಕಟ್ಟೆ ಕಾವಲಿನ ಹುಡುಗನಿಗೆ ಎಚ್ಚರವಾಯಿತು.

ಗಡಬಡಿಸಿ ಎದ್ದು ಅವನು ಓಡಿ ಬಂದ. ಅವನಿಗೆ ಅರ್ಥವಾದುದೊಂದೇ : 'ನಮ್ಮವರು ಬಂದಿದ್ದಾರೆ. ಬಂದ ದೋಣಿಗಾಗಿ ಲಿಪಿಹಾಳೆಯಲ್ಲಿ ಒಂದು ಗೆರೆ ಹಾಕಬೇಕು.'

ಆತನ ಮುಖ ಕಾಣುತ್ತಲೇ ಬಟಾನೆಂದ :

"ಓಡಪ್ಪ, ಓಡು. ದಳಪತಿಯವರನ್ನು ಕರಕೊಂಡ್ಬಾ."

ಇವರೆಲ್ಲ ಅಳುತ್ತಿದ್ದಾರೆ ; ಅಯ್ಯೋ ಏನಾಗಿದೆಯೋ ? ಹುಡುಗನಿಗೆ ಗಾಬರಿ. ಅವನು ತಕ್ಷಣವೆ ಹೊರಟ. ನಾಲ್ಕು ಹೆಜ್ಜೆಗಳನ್ನು ಬಿರಬಿರನೆ ಇಟ್ಟು ಬಳಿಕ ಓಡಿದ.

ವಾಸ್ತವವಾಗಿ ಖ್ನೆಮ್‌ಹೊಟೆಪ್ ಹಿಂದಿನ ಎರಡು ಮೂರು ರಾತ್ರಿಗಳಂತೆ ಆ ರಾತ್ರಿಯೂ ನಡುವಿರುಳಿನವರೆಗೆ ಕಟ್ಟೆಯಲ್ಲೇ ಇದ್ದ. ಯಾವನಾದರೂ ದೋಣಿಕಾರ ಮೆಂಫಿಸಿನಿಂದ ಏನಾದರೂ ಸುದ್ದಿ ತಂದಾನು ಎಂಬ ಬಯಕೆ. ಪಹರೆಯವರು ಸ್ವಲ್ಪ ಹೊತ್ತಿಗೆ ಮುಂಚೆಯಷ್ಟೇ ದಂಡೆಯವರೆಗೆ ಬಂದು ಮರಳಿದ್ದರು.

ಮೆನ್ನ ಹುಡುಗನತ್ತ ನೋಡಿ. "ನಾವಿನ್ನು ಇಳೀಬೇಕು ರಾಮೆರಿ," ಎಂದ. ಬಟಾನ ಕಡೆ ತಿರುಗಿ, "ದಳಪತಿಯವರು ಬರೋದರೊಳಗಾಗಿ ನಾಯಕರನ್ನು ಎತ್ತಿ ಕಟ್ಟೆಯ ಮೇಲಿಡೋಣ," ಎಂದು ನುಡಿದ. ಔಟ, ಬೆಕ್‌ರನು "ಬನ್ನಿ" ಎಂದು ಕರೆದ :

ಬಟಾನ ಬಟ್ಟೆಯನ್ನು ಕಟ್ಟೆಯ ಮೇಲೆ ನೀರಾನೆಯ ಶಿಲಾಮೂರ್ತಿಯನ್ನು ಹೊತ್ತ ಪೀಠದ ಬುಡದಲ್ಲಿ ಹಾಸಿ, ಅದರ ಮೇಲೆ ಮೆನೆಪ್‌ಟಾನ ಶವನ್ನವನ್ನು ಇರಿಸಿದರು.

ಹರಿಯುತ್ತಿದ್ದ ಬೆಳಕಿನೆದುರು ಕ್ಷೀಣವಾಗುತ್ತಿದ್ದ ನಕ್ಷತ್ರಗಳನ್ನು

ನೋಡುತ್ತ ಅಂಗಾತ ಮಲಗಿದ ನಾಯಕ. ಲೇಪನದ ಪ್ರಭೆ ಅಳಲಿನ ಕೊಡಗಳನ್ನು ಕುಕ್ಕಿತು. ಮತ್ತೆ ರೋದನ ಆಕಾಶ ಮುಟ್ಟಿತು. ಅದರ ಅಲೆ ದುರ್ಬಲವಾದೊಡನೆ, ಬಟಾ ನಾಮೋಚ್ಚಾರ ಆರಂಭಿಸಿ ಮಾರ್ದನಿ ಪಡೆದ.

ಖ್ನೆಮ್‌ಹೊಟೆಪ್ ಓಡುತ್ತ ಬಂದ. ಅವನ ಹಿಂದೆ ಊರಿನ ಹಿರಿಯರು; ಅವರ ಹಿಂದೆ ನೂರಾರು ಜನ; ಅವರ ಹಿಂದೆ ಬೇರೆ ನೂರಾರು ಜನ; ಅವರ ಹಿಂದೆಯೂ ನೂರಾರು ಜನ. ಹೀಗೆಯೇ. ಅಲೆಯ ಬೆನ್ನಲ್ಲಿ ಅಲೆ. ದೋಣಿಕಟ್ಟೆಯಿಂದ ಹೊರಟ ಶೋಕಧ್ವನಿ ನೀರಾನೆ ಪ್ರಾಂತದ ಮುಖ್ಯಪಟ್ಟಣದ ಸಹಸ್ರಾರು ಮನೆಗಳ ಕದಗಳನ್ನು ತಟ್ಟಿತ್ತು, ಕಿವಿಗಳನ್ನು ಮುಟ್ಟಿತ್ತು.

ತನ್ನನ್ನು ದಳಪತಿಯಾಗಿ ಮಾಡಿದ್ದ ನಾಯಕನ ಲೇಪಿತ ಶವದೆದುರು ನಿಂತು. "ಹೋ!" ಎಂದು ಎರಡೂ ತೋಳುಗಳನ್ನು ಮುಂದಕ್ಕೆ ಚಾಚುತ್ತ, ಕರ್ಣಭೇದಕವಾಗಿ ಖ್ನೆಮ್ ಆರ್ತನಾದ ಮಾಡಿದ. ಕುಸಿಕುಳಿತು, ಶವದ ಎದೆಯ ಮೇಲೆ ಕೈಗಳನ್ನು ಚಾಚಿ, ತಲೆಯನ್ನಿರಿಸಿದ, "ಓ—ಓ—ಓ" ಎಂದು ರೋದನ ಮುಂದುವರಿಸಿದ.

ರಾಮೆರಿಪ್‌ಟಾಗೆ ತಾಯಿಯದೇ ಯೋಚನೆ. "ಅಮ್ಮನ ಹತ್ತಿರ ಇರು." ಎಂದಿದ್ದ ತಂದೆ—ಅವನು ನಾಯಕನಾದ ಆ ದಿನ. ಅಮ್ಮನ ಜತೆಯಲ್ಲೇ ಇದ್ದವನು ತಂದೆಯನ್ನು ಕರೆತರಲೆಂದು ಮೆಂಫಿಸಿಗೆ ಹೋದ-ರಾಜರಾಣಿಯರ ಆವಾಸಸ್ಥಾನಕ್ಕೆ—ಪಾಪನಗರಿಗೆ. ಮರಳಿ ಬಂದುದಾಯಿತು. ಇಲ್ಲಿ ಎಲ್ಲರೂ ಇದ್ದಾರೆ. ತಂದೆಯ ಹತ್ತಿರ ಎಲ್ಲರೂ ಇದ್ದಾರೆ. ಅಲ್ಲಿ ತಾಯಿ ಒಬ್ಬಳೇ. ಇಲ್ಲಿಗೆ ಬರುವುದು ಅವಳಿಗೆ ಕಷ್ಟವಾಗಬಹುದು. ತಾನು ಹೋಗಬೇಕು. ಅವಳ ಬಳಿ ಇರಬೇಕು.

ಹುಡುಗ ಹೆಜ್ಜೆ ಮುಂದಿಟ್ಟುದನ್ನು ಅಹೂರಾ ಕಂಡಳು. ಮಗುವನ್ನೆತ್ತಿಕೊಂಡು ಅವನ ಹಿಂದೆ ತಾನೂ ನಡೆದಳು. ಮೈಮರೆತಿದ್ದ ಆ ಸ್ಥಿತಿಯಲ್ಲೂ ಗುಂಪು, ಇಬ್ಭಾಗವಾಗಿ ರಾಮೆರಿಪ್‌ಟಾನಿಗೂ ಅವನನ್ನು ಹಿಂಬಾಲಿಸಿ ಹೊರಟವಳಿಗೂ ದಾರಿ ಮಾಡಿಕೊಟ್ಟಿತು.

(ಸ್ನೊಫ್ರು ಆಗಲೇ ನೆಜಮುಟಳಿಗೆ ಹೇಳಿದ್ದ:

"ಕೆಟ್ಟದ್ದೇನೋ ಸಂಭವಿಸಿದ ಹಾಗಿದೆ. ದೋಣಿಕಟ್ಟೆಗೆ ಹೋಗಿ ಬರ್ತೇನೆ. ನೀನು ನೆಫಿಸ್‌ಳನ್ನು ನೋಡ್ಕೊ."

ಅವಳೆಂದಿದ್ದಳು :

"ಹೂಂ. ನೀನು ಹೋಗು. ಬೇಗ ಹೋಗು.")

ಎದುರು ದಂಡೆಯೊಳಗಿನ ದಿಗಂತದಿಂದ ರಾ ಆಗಲೇ ಇಣಿಕಿ ನೋಡಿದ್ದ. ನೆಗೆನೆಗೆದು ಒಂದು ಮೊಳ ಎತ್ತರಕ್ಕೆ ಏರಿದ್ದ. ಆದರೆ ಉರಿಯುವ ಕೆಂಪು ಗೋಲದ ಭವ್ಯತೆಯತ್ತ ದುಃಖಾರ್ತರ ಲಕ್ಷ್ಯ ಹರಿದಿರಲಿಲ್ಲ.

ಪಟ್ಟಣದಿಂದ ನದೀತಟದತ್ತ ಜನರ ಅಲೆಗಳು ಮತ್ತೂ ಬಂದುವು.

ಸ್ನೊಫ್ರು ದೋಣಿಕಟ್ಟೆಯನ್ನು ತಲಪಿ, ಮೌನವಾಗಿ ಕಂಬನಿಗರೆಯುತ್ತ, ಮೆನೆಪ್‌ಟಾನ ಕಳೇಬರವನ್ನು ದಿಟ್ಟಿಸುತ್ತ ಸ್ವಲ್ಪ ಹೊತ್ತು ನಿಂತ. ಬಳಿಕ ನಿಟ್ಟುಸಿರು ಬಿಟ್ಟು, ಖ್ನೆಮ್‌ಹೊಟೆಪ್‌ನ ಮೈಮುಟ್ಟಿ, "ಖ್ನೆಮು, ಏಳು," ಎಂದ.

ಖ್ನೆಮ್‌ಹೊಟೆಪ್ ಎದ್ದು, ತಲೆಗೂದಲನ್ನು ಹಿಂದಕ್ಕೆ ತಳ್ಳಿ, ಸರಕ್ಕನೆ, ತಿರುಗಿ, ನೆರೆದಿದ್ದ ಜನಸ್ತೋಮವನ್ನು ಅತ್ತು ಕೆಂಪಗಾಗಿದ್ದ ಕಣ್ಣುಗಳಿಂದ ನೋಡಿ ದಿಗ್ಮೂಢನಾಗಿ ನಿಂತ. ತಮ್ಮ ಸಂಕಟದ ಮಧ್ಯೆಯೂ ಕೆಲವರೆಂದು ಕೊಂಡರು : ದಳಪತಿ ಈಗ 'ಶಿಸ್ತು! ಶಿಸ್ತು!' ಎಂದು ಗದರಿಸಬಹುದು.

ಹಾಗೆ ಆತ ಹೇಳದೆಯೇ ಜನ ಅರ್ಧವೃತ್ತ ರಚಿಸಿದರು. ಸಾಲುಗಟ್ಟಿ ದರು. ಒಬ್ಬರನ್ನೊಬ್ಬರು ಮೊಣಕೈಗಳಿಂದ ತಿವಿಯಲಿಲ್ಲ, ನೂಕಲಿಲ್ಲ—ನುಗ್ಗಲಿಲ್ಲ. ಹೊಸದಾಗಿ ಬಂದವರು ಮೃತನ ಬಳಿ ಸಾರಲು ಇತರರು ಅವಕಾಶವಿತ್ತರು.

ಇಪ್ಯುವರ್, ಅವನ ತಾಯಿ, ಹೆಂಡತಿ, ತಂಗಿ, ಮಗಳು—ರಾಜಗೃಹದ ನಿವಾಸಿಗಳು—ಮೆನೆಪ್‌ಟಾನೆದುರು ಕುಳಿತು ಕಣ್ಣೀರಿನ ಬೊಗಸೆ ಕಾಣಿಕೆ ನೀಡಿದರು.

ನೆಫರುರಾ ಕಾಣಿಸಿಕೊಂಡು "ಅಣ್ಣಾ! ಅಣ್ಣಾ!" ಎಂದು ಚೀರುತ್ತ ಅತ್ತು, ಅಲ್ಲಿಂದ ನಿರ್ಗಮಿಸಿ ನೆಫಿಸಳ ಮನೆಯತ್ತ ಧಾವಿಸಿದಳು.

ರೈತರು, ಮೋಚಿಗಳು, ನೇಕಾರರು, ಬಡಗಿಗಳು ಮತ್ತಿತರ ಕುಶಲ ಕೆಲಸಗಾರರು, ಕಲ್ಲುಕುಟಿಗರು, ವಿಮುಕ್ತದಾಸದಾಸಿಯರು ಬಂದರು.

ಸಮುದಾಯದ ಯಾತನೆಯಾಗಿತ್ತು ವೈಯಕ್ತಿಕ ದುಃಖ.

ನೀಳ ಹೆಜ್ಜೆಗಳನ್ನಿಡುತ್ತ ಶಿಲ್ಪಿ ನೆಖೆನ್ ಬಂದ. ಪ್ರತೀಕ ಪೀಠದ ಬಳಿ ತಲೆಬಾಗಿಸಿ, ಮೆನೆಪ್‌ಟಾನನ್ನು ಅಡಿಯಿಂದ ಮುಡಿಯ ತನಕ ನೆಟ್ಟ ನೋಟ ದಿಂದ ನೋಡುತ್ತ ನಿಂತ.

ಕಪ್ಪಿಟ್ಟ ಮುಖಗಳ ಸ್ನೊಫ್ರು, ಸೆಬೆಕ್ಖು, ಹಿರಿಯರ ಸಮಿತಿಯ ಸೆಮು, ಹೆಪೊನ್, ಥಾನಿಸ್, ಹೆಮ್‌ಟಿ ದೋಣಿಕಟ್ಟೆಯ ಬದಿಗೆ ಸರಿದರು. ತಮ್ಮ ಬಳಿಗೆ ಬರಲು ಬಟಾನಿಗೆ ಸನ್ನೆ ಮಾಡಿದರು. "ಕ್ನೆಮು, ಬಾ," ಎಂದ ಸ್ನೊಫ್ರು.

ಸೆಮು ಕೇಳಿದ :

"ಆ ಅಯ್ಯ ಯಾರು ?"

ಬಟಾನೆಂದ :

"ನಮ್ಮವರು. (ಶವದತ್ತ ಬೊಟ್ಟು ಮಾಡಿ) ಲೇಪನ ಅವರೇ ಮಾಡಿದ್ದು."

"ಇಲ್ಲಿಗೆ ಬನ್ನಿ ಅನ್ನು."

ಬಟಾ ಮೆನ್ನನನ್ನು ಕರೆದುಕೊಂಡು ಬಂದ.

ಸೆಮು ಪ್ರಶ್ನಿಸಿದ :

"ಹ್ಯಾಗಾಯ್ತು, ಬಟಾ ?"

ಉತ್ತರವನ್ನು ಮೆನ್ನ ನೀಡಿದ :

"ಸೆಡ್ ಉತ್ಸವದ ಮುನ್ನಾ ರಾತ್ರಿಯೇ ನಾಯಕರನ್ನು ಕಾರಾಗೃಹಕ್ಕೆ ಸಾಗಿಸಿದ್ರು. ತಪ್ಪಿಸಿಕೊಂಡು ಬರೋದಕ್ಕೆ ಅಣ್ಣ ಒಪ್ಪಲಿಲ್ಲ. ಉತ್ಸವದ ಮೂರನೇ ದಿನ ವಿಚಾರಣೆ. ತೀರ್ಪು—ಮರಣದಂಡನೆ."

ಹೆಮ್‌ಟಿ ಬಟಾನತ್ತ ನೋಡಿ ಕೇಳಿದ :

"ಶವವನ್ನು ಕಸಕೊಂಡು ಪಾರಾಗಿ ಬಂದಿರಾ ?"

ಬಟಾ ತಲೆ ಆಡಿಸಿದ.

ಹೆಮ್‌ಟಿಯ ಕಣ್ಣುಗಳು ಮಿನುಗಿದುವು.

"ನಮ್ಮ ಜನ ಅಸಾಮಾನ್ಯರು. ಅಸಾಧಾರಣವಾದದ್ದನ್ನೇ ಮಾಡಿದ್ದಾರೆ."

ಅಷ್ಟು ಹೇಳಿದೊಡನೆ ಕಣ್ಣಿನ ಹೊಳಪು ಮಾಯವಾಗಿ ಧ್ವನಿ ಕುಗ್ಗಿತು.

"ನಾಯಕರು ಜೀವಂತವಾಗಿ ಪಾರಾಗಿ ಬಂದಿದ್ದರೆ ಎಷ್ಟೋ ಚೆನ್ನಾಗಿರ್ತಿತ್ತು...."

ಮುಂದುವರಿದ ಹೆಮ್‌ಟೆಯ ಧ್ವನಿಯಲ್ಲಿ ಕುತೂಹಲ ಬೆರೆಯಿತು :

"ಹ್ಞ. ಅವರು ಅಟ್ಟಸಿಕೊಂಡು ಬರಲಿಲ್ಲವಾ ?"

[ಹೆಮ್‌ಟೆಯ ಮಾತು ಕೇಳುತ್ತ ಬಟಾನಿಗೆ ಸೈರಣೆ ತಪ್ಪಿತು. ಸಿಟ್ಟಾಗಿ ತಾನು ಏನನ್ನೂ ಹೇಳಬಾರದೆಂದು, ಕಂಪಿಸುತ್ತಿದ್ದ ತುಟಿಗಳನ್ನು ಅವನು ಪರಸ್ಪರ ಬಿಗಿಯಾಗಿ ಒತ್ತಿದ. ಮೆಂಫಿಸಿನಲ್ಲಿ ನಾಯಕನಿಗೆ ಬಿದ್ದಿದ್ದ ಕನಸಿನ ನೆನಪಾಯಿತು. "ಪಾಪಿಗಳಾ ! ಹೋಯ್ತು ! ಕಸದ ಜತೆ ರಸವೂ ಹೋಯ್ತು" ಕಾಪೀರು ಕೋಲಿನಿಂದ ಹೊಡೆಯುತ್ತಿದ್ದ ಆ ವೃದ್ಧ ಹೆಮ್‌ಟೆ ಯೆಂತಿದ್ದ.]

ಮೆನ್ನನಿಗೆ ಹೆಮ್‌ಟೆ ವಿಚಿತ್ರ ವ್ಯಕ್ತಿಯಂತೆ—ಆದರೆ ಸಮರ್ಥನಂತೆ—ಕಂಡ. 'ಅಟ್ಟಸಿಕೊಂಡು ಬರಲಿಲ್ಲವಾ ?' ಎಂದ ಪ್ರಶ್ನೆಗೆ ಉತ್ತರವಾಗಿ ಮೆನ್ನನೆಂದ :

"ವಿಚಾರಣೆ ಮುಗಿದ್ಮೇಲೆ ದಂಡು ಮಹಾ ಅರ್ಚಕರ ನೇತೃತ್ವದಲ್ಲಿ ನೀರಾನೆ ಪ್ರಾಂತದ ಮೇಲೆ ಏರಿಹೋಗಬೇಕೂಂತ ಸೆಡ್ ಉತ್ಸವಕ್ಕೆ ಮುಂಚೆಯೇ ತೀರ್ಮಾನವಾಗಿತ್ತು...."

"ದಂಡು ಸೈನ್ಯ ಗಡಿಯಲ್ಲಿ...."

"ಉತ್ಸವಕ್ಕೇಂತ ಇನ್ನೂರು ಜನರನ್ನು ಕರೆಸಿಕೊಂಡಿದ್ರು."

"ಮಹಾ ಅರ್ಚಕ ಅಂದಿರಾ ?"

"ಹೌದು. ವಿಸ್ಮಯಕರ ಅಲ್ಲವೆ ? ಇದು ಧರ್ಮದಿಗ್ವಿಜಯದ ಸೋಗು. ಇಡೀ ಐಗುಪ್ತಕ್ಕೇ ನೀರಾನೆ ಪ್ರಾಂತ ಪಾಠವಾಗಲಿ—ಅಂತ."

ಸೆಮನೆಂದ :

"ರಾಜಕೀಯದ ಚೌಕಮಣೆ ಆಟದಲ್ಲಿ ಮಹಾ ಅರ್ಚಕರ ಕೈ ಮೇಲಾಗಿದೆ."

"ಜನರನ್ನು ಸುಲಿಯೋದಕ್ಕೆ ಪೆರೋ, ಮಹಾ ಅರ್ಚಕ, ಭೂಮಾಲಿಕರು ಒಂದಾಗಿದ್ದಾರೆ ಅನ್ನಬಹುದು."

ಇದ್ದಕ್ಕಿದ್ದಂತೆ ಸೆಬೆಕ್ಖು ಕೂಗಿ ನುಡಿದ :

"ಇದು ಪಾಪಕಾರ್ಯ !"

ಸೆನು ಕೇಳಿದ :

"ಅವರ ದಂಡು ಬರ್‍ತಿದೆಯೋ ಹಾಗಾದರೆ ?"

ಬಟಾ ತುಟಿ ತೆರೆದ :

"ನಮಗೂ ಅವರಿಗೂ ಅರ್ಧ ರಾತ್ರಿ ಅರ್ಧ ಹಗಲಿನ ಅಂತರ. ನಾವು ವೇಗವಾಗಿ ಬಂದ್ವಿ. ಅವರೂ ವೇಗವಾಗಿಯೇ ಬೆನ್ನು ಹತ್ತಿರ್‍ತಾರೆ."

ಬಿಸಿಯುಸಿರು ಬಿಡುತ್ತ ಖ್ನೆಮ್‌ಹೊಟೆಪ್ ಗಟ್ಟಿಯಾದ ಸ್ವರದಲ್ಲಿ ಕೇಳಿದ :

[ಜನರ ಶೋಕ ವಾತಾವರಣವನ್ನು ತುಂಬಿತ್ತು. ಹಲವು ಕಂಠಗಳಿಂದ ಹೊರಟು ಒಂದಾಗಿ ರೂಪುಗೊಳ್ಳುತ್ತಿದ್ದ ರೋದನ ಪ್ರಮುಖರ ಸಂಭಾಷಣೆಗೆ ಹಿನ್ನೆಲೆ ಧ್ವನಿಯಾಯಿತು.]

"ಹೇಳಿ ! ಈಗೇನು ಮಾಡ್ಬೇಕು ?"

ಹೆಮ್‌ಟಿ : "ಇವತ್ತು ಕತ್ತಲಾಗೋ ಹೊತ್ತಿಗೆ ಅವರ ದಂಡು ಸೇರ ಬಹುದು."

ಮೆನ್ನ : "ಅದಕ್ಕೂ ಮುಂಚೆ ಬಂದರೂ ಬಂತೇ. ಮುಂದಿನ ಕೆಲಸ ವಿಲಂಬವಿಲ್ಲದೆ ಆಗಬೇಕು."

ಸೆನು : "ನಾಯಕರಿಗೆ ಅಂತ್ಯವಿಧಿ...."

ಬಟಾ : "ಮೆನ್ನಯ್ಯ ನೆರವೇರಿಸ್ತಾರೆ. ಅವರ ಸೂಚನೆ ಪ್ರಕಾರ ಏರ್ಪಾಟು."

ಹೆಮೊನ್ : "ಹಾಗೆ ಆಗಲಿ."

ಹೆಮ್‌ಟಿ : "ಮಧ್ಯಾಹ್ನದ ಹೊತ್ತಿಗೆ ಸ್ವರಕ್ಷಣೆಯ ಯುದ್ಧಕ್ಕೆ ನಾವು ಸಿದ್ಧರಾಗ್ಬೇಕು."

ಥಾನಿಸ್ : "ನಾಯಕರು ಮೆಂಫಿಸಿಗೆ ಹೊರಟದ್ದು ರಾಜಗೃಹದಿಂದ. ಈಗ—"

ಸ್ನೊಫ್ರು : "ದಾರಿಯಲ್ಲಿ ನೆಫಿಸಿಗೆ ತೋರಿಸಿ ರಾಜಗೃಹಕ್ಕೆ ಹೋಗೋಣ."

ಮೆನ್ನ: "ಒಂದು ಹಲಗೆ ತರಿಸಿ. ಎತ್ತಿಕೊಂಡು ಹೋಗೋದು ಸುಲಭವಾಗ್ತದೆ."

ಸೆಬೆಕ್ಖು: (ಜನರೆಡೆಗೆ ನೋಡಿ) "ಸೆತ್‌ನಾ ಓ ಅಲ್ಲಿದ್ದಾನೆ. ಶವ ಪೆಟ್ಟಿಗೆಯೂ ಬೇಕು ಅಲ್ಲವಾ?"

ಮೆನ್ನ: "ಹಲಗೆ ತಕ್ಷಣದ ಉಪಯೋಗಕ್ಕೆ. ಮುಚ್ಚಳ ಇಲ್ಲದ ಶವ ಪೆಟ್ಟಿಗೆ ಗೋರಿಗೆ ಹೋಗುವಾಗ. ಗೋರಿಗೆ ಇಳಿಸಿದ ಮೇಲೆ ಮುಚ್ಚಳದ ಹಲಗೆ."

ಸೆಬೆಕ್ಖು: "ದೋಣಿಕಟ್ಟೆಯ ಬದಿಗೋಡೆಯ ನಿರ್ಮಾಣಕ್ಕೇಂತ ಹಪು ಕಡಿಸಿರೋ ಎಂಟುನೂರು ಕಲ್ಲುಗಳಿವೆ."

ಹೆಮ್‌ಟಿ: "ಗೋರಿ ಕಟ್ಟೋದಕ್ಕೆ ಉಪಯೋಗಿಸೋಣ. ಆದರೆ ಕಲ್ಲುಗಳನ್ನು ಮಂದಿರದಾಚೆಗೆ—ಗೋರಿ ಪ್ರದೇಶಕ್ಕೆ—ಸಾಗಿಸೋದು ತಡ ವಾಗ್ತದೆ."

ಸ್ನೊಫ್ರು: "ವಸತಿ ಪ್ರದೇಶದ ಹತ್ತಿರದಲ್ಲೇ ಗುಂಡಿ ತೋಡಿ ಗೋರಿ ಕಟ್ಬೇಕು. ಮೇಲ್ಗಡೆಯ ನಿರ್ಮಾಣ ಆ ಮೇಲೆ ಮಾಡಿದರಾಯ್ತು."

ಬಟಾ ಸನ್ನೆ ಮಾಡಿದನೆಂದು ಸೆತ್‌ನಾ ಮತ್ತು ಇಪ್ಯುವರ್ ಪ್ರಮುಖರು ನಿಂತಿದ್ದಲ್ಲಿಗೆ ಬಂದರು. ವಿಷಯ ತಿಳಿದು ಸೆತ್‌ನಾ ಮನೆಯತ್ತ ಓಡಿದ.

ಸ್ನೊಫ್ರು ಮೆನ್ನನೊಡನೆ ಅಂದ:

"ಅಯ್ಯೊ. ನಮ್ಮ ಬುಡಕಟ್ಟಿನಲ್ಲಿ ಇಂಥ ಗೋರಿ ಇದು ಮೊದಲ್ನೇದು. ಸಾಮಾನುಗಳು ಏನೇನು ಬೇಕೋ ಹೇಳಿ. ರಾಜಗೃಹದ ಲೆಕ್ಕಿಗ ಇಪ್ಯುವರ್ ಒದಗಿಸ್ತಾರೆ."

ಕಿರಿಯ ವಯಸ್ಸಿನ ಮೆನ್ನನನ್ನು ಇಪ್ಯುವರ್ ಭಕ್ತಿಯಿಂದ ನೋಡಿದ.

ಅವನತ್ತ ತಿರುಗಿ ಮೆನ್ನನೆಂದ:

"ಗೋರಿ ವಾಸಕ್ಕೆ ಬುತ್ತಿ. ಹೂ ಹಣ್ಣುಗಳು. ಮೃತನ ಪುಟ್ಟ ಪ್ರತಿರೂಪ—ಕಾ—ಮರದಿಂದ ಮಾಡಿದ್ದು. ಆಟದ ಸಾಮಗ್ರಿ. ಬೇಟೆಯ ಸಾಮಗ್ರಿ. ಪಾದರಕ್ಷೆ, ನಡುವಸ್ತ್ರ, ಪುಕ್ಕಗಳ ಚಾಮರ, ಗೋರಿ ಪ್ರವೇಶಕ್ಕೆ ಮುನ್ನ ಬಾಯಿ ತೆರೆಯೋದಕ್ಕೆ ಚೂಪು ಕಲ್ಲು—"

ಸ್ನೊಫ್ರು ನಡುವೆ ನುಡಿದ:

"ಅಸ್ಪುವನ್ನು ಮಣ್ಣು ಮಾಡಿದಾಗ ಮೆನೆಪ್‌ಟಾ ಅರ್ಚಕರ ಕೈಲಿ 'ಬೆಳಕಿಗೆ ಆಗಮನ' ಪುಸ್ತಕ ಓದಿಸಿದ್ದ."

"ಒಂದು ಪ್ರತಿ ಇದೆಯಾ ?"

ಇಪ್ಯುವರ್ ಹೇಳಿದ :

"ಅರ್ಚಕರು ಮಾಡಿಸಿಟ್ಟಿದ್ದಾರೆ."

"ಒಳ್ಳೇದು. ಅದನ್ನು ತನ್ನಿ. ಓದಬೇಕಾದ್ದಿಲ್ಲ. ಗೋರಿಯಲ್ಲಿ ಇಟ್ಟ ರಾಯ್ತು. ಸರ–ಉಂಗುರ. ಹಣತೆ–ಎಣ್ಣೆ.... ಇಕ್ಕುಳ ತುದಿಯ ಕೋಲು. ಬೆಂಕಿ ಪಾತ್ರೆ...."

"ಗೊತ್ತಾಯ್ತು. ಗೊತ್ತಾಯ್ತು."

ಬಟಾನ ದೃಷ್ಟಿ ಹಪುವನ್ನು ಅರಸಿತು. ನೆಖೆನ್‌ನ ಹಿಂಬದಿಯಲ್ಲಿ ಆತ ನಿಂತಿದ್ದ. ಬಟಾ ತನ್ನೆಡೆಗೆ ನೋಡುತ್ತಿದ್ದಾನೆ ಎಂದು ಅವನಿಗೆ ಅನ್ನಿಸಿತು. ಬೆರಳ ಸನ್ನೆ ಕಂಡೊಡನೆ ಹಪು ಬಟಾನತ್ತ ಧಾವಿಸಿದ.

ಗೋರಿಯ ವಿಷಯ ಬಟಾ ತಿಳಿಸುತ್ತಿದ್ದಂತೆ ಸ್ನೊಫ್ರು ಅವರ ಬಳಿಗೆ ಬಂದು, "ನೆಲಮಾಳಿಗೆ ಗೋರಿ. ಹತ್ತು ಮೊಳ, ಆರು ಮೊಳ, ಆರು ಮೊಳ. ಮೇಲ್ಕಟ್ಟಡ ನಿಧಾನವಾಗಿ ಮಾಡೋಣ. ಇನ್ನು ಸ್ವಲ್ಪ ಹೊತ್ತಿನಲ್ಲೇ ಸಿದ್ಧ ವಾಗ್ಬೇಕು," ಎಂದ

ಮನಸ್ಸಿನಲ್ಲೆ ಲೆಕ್ಕ ಹಾಕುತ್ತ ಹಪು ಹೇಳಿದ :

"ನಮ್ಮಲ್ಲಿರೋದು ಎರಡು ಗೇಣು ಘನ ಅಳತೆಯ ಕಲ್ಲುಗಳು. ಆರು ನೂರು ಮತ್ತು ಇಪ್ಪತ್ತನಾಲ್ಕು ಬೇಕು. ಮೇಲೆ ಆಧಾರಕ್ಕೆ ತೊಲೆಗಳು ಹಲಗೆಗಳು ಬೇಕು."

ಆ ಮಾತು ಕೇಳಿಸಿದ ಇಪ್ಯುವರ್ ಅಂದ :

"ಹಲಗೆಗಳು ರಾಜಗೃಹದಲ್ಲಿವೆ. ಈ ಸಲ ಕೆಫ್ಟುನಿಂದ ಕೊಂಡದ್ದು. ತೊಲೆಗಳೂ ಇವೆ."

"ಒಬ್ಬೊಬ್ಬರು ಒಂದೊಂದು ಕಲ್ಲು ಎತ್ತಿಕೊಂಡರಾಯ್ತು."

ಮಾತುಕತೆ ದೀರ್ಘವಾಗುತ್ತಿದೆ ಎಂಬ ಚಿಂತೆ ಕಾಡತೊಡಗಿತ್ತು ಖ್ನೆಮ್ ಹೊಟೆಪ್ ನನ್ನು.

ಅದುರುವ ಗಂಟಲಲ್ಲಿ ಆತನೆಂದ :

"ಅದೆಷ್ಟರ ಕೆಲಸ ? ಎಲ್ಲ ವ್ಯವಸ್ಥೆ ಮಾಡುತ್ತೇನೆ. ಮೊದಲು ನಾಯಕರ ಮನೆಗೆ ಹೋಗೋಣ."

ಸೆನು ಹೇಳಿದ :

"ಹೂಂ. ಹೂಂ."

ಪುನಃ ಕಾಡಿದ ಕಂಬನಿಯನ್ನು ಅದರ ಪಾಡಿಗೆ ಹರಿಯಲು ಬಿಟ್ಟು ಖ್ನೆಮ್ ಜನಜಂಗುಳಿಗೆ ಮುಖ ಮಾಡಿ ನಿಂತ. ತಲೆಯನ್ನು ತುಸು ತಗ್ಗಿಸಿ, ಒಡೆದ ಧ್ವನಿಯಲ್ಲಿ ಅವನೆಂದ :

"ನಾಯಕರನ್ನು ಅವರ ಮನೆಗೆ ಕರಕೊಂಡು ಹೋಗಿ, ನೆಫಿಸ್ ಅಕ್ಕನಿಗೆ ತೋರಿಸಿ, ಅಲ್ಲಿಂದ ರಾಜಗೃಹಕ್ಕೆ ಒಯ್ಯಬೇಕು."

ಮುಂದುಗಡೆ ಇದ್ದವರಿಗೆ ಕೇಳಿಸಿತು. ಅದನ್ನು ಅವರು ತಮ್ಮ ಹಿಂದೆ ಇದ್ದವರಿಗೆ ತಿಳಿಸಿದರು. ಜನ ಸಾಲುಗಟ್ಟುತ್ತಿದ್ದಂತೆ ಜೋಡಿಸಿ ಮಾಡಿದ್ದ ಎರಡು ಮೊಳ ಅಗಲದ ಆಳುದ್ದದ ಹಲಗೆಯನ್ನು ಹೊತ್ತುಕೊಂಡು ಸೆತ್‌ನಾ ಓಡಿ ಬಂದ. ಲೇಪಿತ ಶವದ ಬಳಿ ಇರಿಸಿ ಅಳತೊಡಗಿದ.

ಮೆನ್ನನ ಸೂಚನೆಯಂತೆ ಬಟಾ ನಾಮೋಚ್ಚಾರ ಆರಂಭಿಸಿದ.

ಎಲ್ಲ ಕಂಠಗಳೂ ಹೇಳಿದುವು :

"ಓ ಒಸ್ಸೆರಿಸ್ ಓ ಒಸ್ಸೆರಿಸ್ ; ಓ ಮೆನೆಪ್‌ಟಾ ಓ ಮೆನೆಪ್ ಟಾ........"

ದಳಪತಿಯ ದೃಷ್ಟಿಯನ್ನು ಇದಿರಿಸಲು ಅಳುಕಿ ದೂರ ನಿಂತಿದ್ದ ಬೆಕ್–ಔಟರ ಬಳಿಗೆ ಖ್ನೆಮ್ ನಡೆದು, "ಬನ್ನಿ, ಎತ್ಕೊಳ್ಳಿ" ಎಂದ. ಧ್ವನಿಯ ಮೃದುತನ ಕೇಳಿ ಬೆಕ್ ಔಟರ ದೇಹಗಳಲ್ಲಿ ಜೀವಸಂಚಾರವಾದಂತಾಯಿತು. ಹಿರಿಯರು ಮೆನೆಪ್‌ಟಾನ ಕಳೇಬರವನ್ನೆತ್ತಿ ಹಲಗೆಯ ಮೇಲೆ ಮಲಗಿಸಿದರು. ಹಲಗೆಯನ್ನೆತ್ತಿ 'ಐವತ್ತರ ಶ್ರೇಷ್ಠ'ರ ತಲೆಯ ಮೇಲಿರಿಸಿದರು. (ಎದುರು ಔಟ, ಹಿಂಬದಿಯಲ್ಲಿ ಬೆಕ್.)

ಅಶ್ರುಧಾರೆಗಳನ್ನು ತಡೆಯುವ ಗೊಡವೆಗೆ ಹೋಗದೆ ಖ್ನೆಮ್‌ಹೊಟೆಪ್ ಮುಂದೆ ಸಾಗಿದ. (ಕಟಿಯಲ್ಲಿ ಕಠಾರಿಯಿಲ್ಲ. ಅಧಿಕಾರದ ಕೋಲಿಲ್ಲ, ಕೈಯಲ್ಲಿ.) ಅವನ ಹಿಂದೆ ಮೆನ್ನ. ಅವರ ಹಿಂದೆ ಶವ. ಅದನ್ನು ಹಿಂಬಾಲಿಸಿ

ಹಿರಿಯರು. ಅಳುತ್ತಿದ್ದ ಸ್ತ್ರೀಯರು ಹಿಂದಿನಿಂದ. ಬಳಿಕ ಸಾಲಾಗಿ ಬರುತ್ತಿದ್ದ ಪುರುಷ ಸಮುದಾಯ. (ಊರಿನ ಅರ್ಧಕ್ಕೂ ಹೆಚ್ಚು ಜನ ಅಲ್ಲಿದ್ದರು.) ಅವ ರೆಲ್ಲರ ಹಿಂದೆ, ತಲೆ ಬಗ್ಗಿಸಿಕೊಂಡು ನಿಧಾನವಾಗಿ ನಡೆದು ಬರುತ್ತಲಿದ್ದ, ನೆಖೆನ್.

ತಡೆತಡೆದು ಬಟಾ ಯೋಚಿಸಿದ :

'ಅಬ್ಬು ಯಾತ್ರೆಯಿಂದ ವಾಪಸಾದಾಗ ನಾಲ್ವತ್ತು ಜನ ಇದ್ದೆವು. ಈ ದಾರಿಯಲ್ಲೇ ನಡೆದು ಮನೆ ಸೇರಿದೆವು.... ಆ ಜನ ಇವತ್ತೂ ಇದ್ದಾರೆ. ಸಮುದಾಯದ ನಡುವೆ ಚೆದರಿ ಹೋಗಿದ್ದಾರೆ.... ಮೆನೆಪ್‌ಟಾ ನಾಯಕನಾದ ದಿವಸ—ರಾತ್ರಿ—ಬಂಧನದಿಂದ ಅವನನ್ನು ಬಿಡಿಸಿಕೊಂಡು, ಪೀಠಪಲ್ಲಕಿಯಲ್ಲಿ ಕುಳ್ಳಿರಿಸಿ, ಅವನ ಮನೆಗೆ ಮೆರವಣಿಗೆಯಲ್ಲಿ ಕರೆದೊಯ್ದೆವಲ್ಲ....ಆಗ ಪಲ್ಲಕಿಯ ಮುಂದೆ ನಾನು ಕುಣಿಯುತ್ತ ಹೋದೆ....ಈಗ ಅಣ್ಣ ಅಂಗಾತ ಮಲಗಿದ್ದಾನೆ. ನಾನೋ—ಸತ್ತಿದ್ದೇನೆ, ಕುಣಿಯಲಾರೆ.'

* * * *

[ರಾಮೆರಿಯ ಓರಗೆಯವರು ಮುಂದಾಗಿ ಓಡಿ ಬಂದು ತಿಳಿಸಿದರು :

"ಮೆರವಣಿಗೆ ಹೊರಟಿದೆ. ನಿಮ್ಮ ತಂದೇನ ಇಲ್ಲಿಗೆ ಕರಕೊಂಡು ಬರ್ತಿದ್ದಾರೆ."]

* * * *

....ತುಂಬಿದ ಬಸುರಿ ನೆಫಿಸ್ ಜತೆ ಆ ಮನೆಯಲ್ಲಿ ಮಲಗುತ್ತಿದ್ದವಳು ಅದೇ ಕೇರಿಯ ಒಬ್ಬಳು ವಯೋವೃದ್ಧೆ. ರಾತ್ರೆ ಅವಳಿಗೆ ಸರಿಯಾಗಿ ನಿದ್ದೆ ಬರುತ್ತಿರಲಿಲ್ಲ. ಆ ಬೆಳಗಿನ ಜಾವ ಬೀದಿಯಲ್ಲಿ ಜನ ಓಡಾಡಿದ ಸದ್ದು ಅವಳಿಗೆ ಕೇಳಿಸಿತು. ಬಳಿಕ ಬಾಗಿಲು ತಟ್ಟಿದ ಸಪ್ಪಳ. "ಸ್ನೊಫ್ರು ಮಾವ, ಸ್ನೊಫ್ರು ಮಾವ" ಎಂಬ ಕರೆ. ಎಚ್ಚರಗೊಂಡ ಸ್ನೊಫ್ರುವಿನ "ಯಾರು ಅದು ?" ಎಂಬ ಪ್ರಶ್ನೆ. 'ಯಾಕೆ ಇದೆಲ್ಲ ? ಬಟಾನ ದೋಣಿ ಬಂತೆ ? ನಾಯಕರು ಬಂದರೆ ?' ಎಂದು ಮುದುಕಿ ಮನಸ್ಸಿನಲ್ಲೆ ಗೊಣಗಿದಳು. ತಾನೂ ಎದ್ದಳು.

ಅಷ್ಟರಲ್ಲಿ "ನೆಫಿಸ್, ಎದ್ದಿಯಾ ?" ಎಂದು ನೆಜಮುಟಳ ಪ್ರಶ್ನೆ ಕೇಳಿಸಿತು. ವೃದ್ಧೆ ಬಾಗಿಲು ತೆರೆದಳು.

"ಬಂದರಾ ? ಬಂದರಾ ?" ಎಂದು ಕೇಳುತ್ತ ನೆಫಿಸ್ ಕಣ್ಣು ಹೊಸಕಿ ಕೊಂಡು ಎದ್ದಳು.

ಒಳಗೆ ಬಂದವಳು ನೆಜಮುಟ್.

"ದೋಣಿ ಬಂತಂತೆ ನೆಫಿಸ್. ದೇವರು ದಯಾಮಯ."

"ಬಂತಾ ? ಬಂತಾ ನನ್ನ ದೇವರೇ...." ಎನ್ನುತ್ತ ಪ್ರಯಾಸಪಟ್ಟು ನೆಫಿಸ್ ಎದ್ದಳು. ಮೂಲೆಯಲ್ಲಿರಿಸಿದ್ದ ಮೂರ್ತಿಗಳಲ್ಲಿಗೆ ನಡೆದಳು. ಐಸಿಸ್, ಬೆಸ್, ಥೊಎರಿಸ್. ಭಕ್ತಿಯಿಂದ ತಲೆಬಾಗಿ ನಮಿಸಿದಳು.

ಬೀದಿಯಲ್ಲಿ ಜನ ದೋಣಿಕಟ್ಟೆಗೆ ಓಡುತ್ತಿದ್ದ ಸಪ್ಪಳ ಕೇಳಿಸಿತು.

"ಎಲ್ಲರೂ ಕಟ್ಟೆಗೆ ಹೋಗ್ತಿದ್ದಾರೆ. ಸ್ವಾಗತಕ್ಕೆ ಇರಬೇಕು. ಅಲ್ವಾ ನೆಜ್ ?"

"ಹೂಂ. ಪ್ರಯಾಣ ಸುಸೂತ್ರವಾಗಿ ಆದಂತಿಲ್ಲ. ಏನೋ ಸ್ವಲ್ಪ ತೊಂದರೆ. ಗಂಡ ಹೋಗಿದ್ದಾನೆ," ಎಂದಳು ನೆಜಮುಟ್, ತನ್ನೊಳಗಿನ ಕಸಿವಿಸಿಯನ್ನು ಆದಷ್ಟು ಮೃದುವಾಗಿ ಹೊರಗೆಡವುತ್ತ.

"ಏನು ಹಾಗೆಂದರೆ ? ಯಾಕೆ ? ಏನಾಯ್ತು ?"

ನಾಲ್ಕೈದು ದಿನಗಳ ಹಿಂದೆ ನೆಫಿಸ್‌ಗೆ ಒಂದು ಕನಸು ಬಿದ್ದಿತ್ತು. ಗಂಡನ ಜತೆ ದೋಣಿವಿಹಾರ. ಮೆನೆಪ್‌ಟಾನೇ ಚುಕ್ಕಾಣಿ ಹಿಡಿದಿದ್ದ. ಅವರ ಪುಟ್ಟ ಪೆಪ್ಯೆರಸ್ ದೋಣಿ ನೀಲ ನದಿಯಲ್ಲಿ ದೊಡ್ಡ ವೃತ್ತ ರಚಿಸುತ್ತಿದ್ದಾಗ ಒಂದು ಮೊಸಳೆ ಬಂತು. ಮೆನೆಪ್‌ಟಾ "ಶ್ !" ಎಂದ. ಅದು ಹೊರಟೇ ಹೋಯಿತು. ಸ್ವಲ್ಪ ಹೊತ್ತಾದ ಮೇಲೆ ಅವಳಿಗೆ ನೋವು ಕಾಣಿಸಿಕೊಂಡಿತು. ಮೆನೆಪ್‌ಟಾ ವೇಗವಾಗಿ ದೋಣಿಯನ್ನು ದಂಡೆಗೆ ನಡೆಸಿದ. ಅಷ್ಟರಲ್ಲಿ ಎಚ್ಚರ....

ಆ ಕನಸನ್ನು ನೆಫಿಸ್ ವೃದ್ಧೆಗೆ ಹೇಳಿದ್ದಳು. ನೆಜಮುಟ್‌ಗೂ ತಿಳಿಸಿದ್ದಳು. ಯಾವ ಮಹತ್ವವನ್ನೂ ಆ ಸ್ವಪ್ನಕ್ಕೆ ಅವರು ನೀಡಿರಲಿಲ್ಲ.

"ಅದಕ್ಕೇನು ? ಪುಟ್ಟದು ಬಂದ ಮೇಲೆ ಗಂಡನ ಜತೆ ಒಮ್ಮೆ ವಿಹಾರಕ್ಕೆ ಹೋದರಾಯ್ತು," ಎಂದು ಹೇಳಿ ನೆಜಮುಟ್ ನಕ್ಕಿದ್ದಳು.

ಈಗ ತೊಂದರೆಯಾಯಿತು. ಎಲ್ಲಿ? ಯಾರಿಗೆ?

"ನೆಜಕ್ಕ ನಡಿ. ನಾವು ದೋಣಿಕಟ್ಟೆಗೆ ಹೋಗೋಣ," ಎಂದಳು ನೆಫಿಸ್.

ನಿಜ–ಸುಳ್ಳುಗಳ ಪರಿವೆ ಇಲ್ಲದ ನೆಜಮುಟ್ ಮಾತುಗಳನ್ನು ರೂಪಿಸಿದಳು:

"ನಿನಗೆ ಶ್ರಮವಾಗ್ತದೆ. ಅಲ್ಲಿಗೆ ನಡೆದು ಹೋಗೋದು ಸರಿಯಲ್ಲ. ಅಲ್ದೆ, ಇನ್ನೇನು ಅವರು ಬಂದೇ ಬರ್ತಾರೆ. ಅಕ್ಕಾ. ದೂರದಲ್ಲಿ ನಾಮೋಚ್ಚಾರ ಕೇಳಿಸ್ತಿದೆಯಾ?"

ಅಸ್ಪಷ್ಟವಾಗಿ ಕೇಳಿಸಿದ್ದು ಉತ್ಸಾಹವಿಲ್ಲದ ನಾಮೋಚ್ಚಾರ.

ದುಗುಡ ತುಂಬಿದ ಧ್ವನಿಯಲ್ಲಿ ನೆಫಿಸ್ ಹೇಳಿದಳು:

"ಇದು ಜಯಕಾರ ಅಲ್ಲವಲ್ಲ ನೆಜಮುಟ್...."

ನೆಜಮುಟ್ ಸಿಟ್ಟಾಗಿ ಅಂದಳು:

"ಅಲ್ಲದೆ ಮತ್ತೇನು? ನೀನು ಮುಖಕ್ಕೆ ನೀರು ಹಾಕಿಕೊಂಡು ಬಾ"

ಹಿಂಬದಿಯ ಹಿತ್ತಿಲಿಗೆ ಇಳಿದಾಗ, ಹೊರಗಿನ ಧ್ವನಿಗಳು ದೂರದಿಂದ ಅಲೆಯುತ್ತ ಬಂದು ಸ್ಫುಟವಾದುವು.... ನೆಫಿಸಳ ಮೆದುಳು ಧಿಮಿಗುಟ್ಟಿತು. ಗುಂಡಿಗೆಯ ಬಡಿತ ತೀವ್ರಗೊಂಡಿತು.

ಒದ್ದೆಗೊಳಿಸಿದ ಮುಖವನ್ನು ಅಂಗೈಯಿಂದ ಒರೆಸುತ್ತ ನೆಫಿಸ್ ಒಳಕ್ಕೆ ಓಡಿಬಂದಳು:

"ಅಕ್ಕ! ನಾವು ಹೋಗೋಣ! ಕಟ್ಟೆಗೆ ಹೋಗೋಣ!"

"ಬೇಡ ನೆಫಿ ಮೂರು ತಿಂಗಳೇ ಕಾದಿದೀಯಂತೆ. ಕಟ್ಟೆಯಿಂದ ಇಲ್ಲಿಗೆ ಅವರು ಬರೋತನಕ ತಡಕೊಳ್ಳೋದಕ್ಕೆ ಆಗೋದಿಲ್ಲವಾ?"

"ಬೀದಿ ಮೂಲೆಗೆ ಹೋಗಿ ಅವರು ಬರ್ತಿದ್ದಾರೋ ನೋಡ್ತೇನೆ," ಎಂದು ಹೇಳಿ ವೃದ್ಧೆ, ನೆಫಿಸಳ ಮೌನವೇ ಸಮ್ಮತಿ ಎಂದು ಬಗೆದು, ಹೊರಕ್ಕೆ ಇಳಿದಳು.

ದಾರಿಯಲ್ಲಿ ವೃದ್ಧೆ, ಜನ ಓಡುತ್ತ ಹೋಗುತ್ತಿದ್ದುದನ್ನು ನೋಡಿ, ತಾನೂ ನಡಿಗೆಯ ವೇಗ ಹೆಚ್ಚಿಸಿದಳು. ಎದುರು ದಿಕ್ಕಿನಿಂದ ರಾಮೆರಿ

ಬರುತ್ತಿದ್ದುದನ್ನು ಕಂಡಂತಾಯಿತು. ಅವನು ಮತ್ತು ಒಬ್ಬಳು ಹೆಂಗಸು. ಬೇಗಬೇಗನೆ ನಡೆಯುತ್ತಿದ್ದರು. ಹುಡುಗನನ್ನು ಹೆಸರು ಹಿಡಿದು ಕರೆಯೋಣ ಎನಿಸಿತು. ಆದರೂ ಆತ ನಾಯಕರ ಮಗ ಹೌದೋ ಅಲ್ಲವೋ ಎಂಬ ಶಂಕೆ ಮೂಡಿ ಸುಮ್ಮನಾದಳು. ಹಾಗೆಯೇ ಕಟ್ಟೆಯವರೆಗೂ ನಡೆದು, ವಿಷಯ ತಿಳಿದು, ಕೈಗಳಿಂದ ಹಣೆ ಚಚ್ಚಿ ಗಟ್ಟಿಯಾಗಿ ಅಳತೊಡಗಿದಳು.

....ಒಳಗೆ ಬಂದ ಮಗನನ್ನು ನೆಫಿಸ್ ಬರಸೆಳೆದು ತಬ್ಬಿಕೊಂಡಳು.

"ಅಪ್ಪ ಎಲ್ಲಿ ರಾಮೆರಿ ? ಏನಾಯ್ತು ರಾಮೆರಿ ?"

ವಯಸ್ಸಿಗೆ ಮೀರಿದ ಗಟ್ಟಿ ಗಂಟಲಲ್ಲಿ ಬಡಬಡನೆ ರಾಮೆರಿಪ್‌ಟಾ ಹೇಳ ತೊಡಗಿದ :

"ಅಪ್ಪನ್ನ ವಿಚಾರಣೆ ಆಯ್ತು ಅಮ್ಮ. ನಮ್ಮ ಜೊತೆ ಒಬ್ಬರು ಅಯ ಬಂದಿದ್ದಾರೆ ಅವರು ಎಲ್ಲಾ ಹೇಳಿದ್ರು. ಬೆಳಗ್ಗಿನಿಂದ ರಾತ್ರಿವರೆಗೆ ವಿಚಾರಣೆ ಅಯ್ಯ ಹೇಳ್ತಾರೆ: 'ವಿಚಾರಣೆ ಆದದ್ದು ನಾಯಕರದಲ್ಲ; ಪೆರೋ—ಮಹಾ ಅರ್ಚಕ—ಅಮಾತ್ಯರದು; ತೀರ್ಪುಕೊಟ್ಟದ್ದು ಮೆನೆಪ್‌ಟಾ—ಅವರಲ್ಲ.'"

"ಅಯ್ಯೋ ! ಅಯ್ಯೋ ! ಅಪ್ಪನಿಗೆ ಹೊಡೆದ್ರಾ ?"

ಮತ್ತಷ್ಟು ಗಟ್ಟಿಯಾಗಿ ರಾಮೆರಿಪ್‌ಟಾ ನುಡಿದ :

"ಇಲ್ಲ. ಹೊಡೀಲಿಲ್ಲ. ಅದು ಬೇರೆ ಶಿಕ್ಷೆ. ಅಪ್ಪ ಯಾರಿಗೂ ತಲೆ ಬಗ್ಗಿಸಿಲ್ಲ. ತುಟಿ ಪಿಟಕ್ ಮಾಡ್ಲಿಲ್ಲ. ನೂರಾರು ಯೋಧರು, ಬಕಿಲ,—ಟೆಹುಟಿ,—ಕಿರೀಟ ಇಟ್ಕೊಂಡ, ಕೋಲು ಹಿಡಕೊಂಡ, ಕ್ರೂರಿಗಳು ಪಾಪಿಗಳು ! ಅಪ್ಪ ಯಾರಿಗೂ ಹೆದರಲಿಲ್ಲ. ಸಾವಿರಾರು ಜನ ಬಡವರು ಇದ್ದರು. ಎಲ್ಲಾ ನಮ್ಮವರೇ...."

"ಅಯ್ಯೋ ! ಆ ಮೇಲೆ ಏನಾಯ್ತು ರಾಮೆರಿ ? ನೀವೆಲ್ಲ ಅಲ್ಲಿಂದ ಅಪ್ಪನನ್ನು ಕರಕೊಂಡು ಬಂದ್ರಾ ?"

ಮುಖ ಕಿವುಚಿಕೊಂಡಂತಾಯಿತು ರಾಮೆರಿಪ್‌ಟಾಗೆ. ಕಣ್ಣುಗಳಲ್ಲಿ ನೀರು.

"ಹ್ಞ ಅಮ್ಮ. ಕರಕೊಂಡು ಬಂದಿದ್ದೇವೆ.... ಇನ್ನು ಅಪ್ಪ ಇಲ್ಲ ಅಮ್ಮ."

"ಹಾ ? ಅಹೂರಾ ? ರಾಮೆರಿ ಏನು ಹೇಳ್ತಿದ್ದಾನೆ ?"

ಅಹೂರಾ ಉತ್ತರವೀಯಲಿಲ್ಲ. ರೋದಿಸತೊಡಗಿದಳು.

ಕೀರಲು ಧ್ವನಿಯಲ್ಲಿ ರಾಮೆರಿಪ್‌ಟಾನೆ ಮತ್ತೂ ಅಂದ :

"ಅಪ್ಪ ದೂರ ಹೋಗಿದ್ದಾನೆ. ಒಸೈರಿಸ್‌ನ ರಾಜ್ಯಕ್ಕೆ. ಮತ್ತೆ ಬರ್‍ತಾನೆ ಅಮ್ಮ, ಮತ್ತೆ ಬರ್‍ತಾನೆ."

ತಾಯಿಯ ಕಣ್ಣಾಲಿಗಳು ಅಡ್ಡಾದಿಡ್ಡಿಯಾಗಿ ತಿರುಗುತ್ತಿದ್ದುದನ್ನು, ಅವಳು ಬಾಯಿ ತೆರೆದುದನ್ನು, ದೇಹ ಅತ್ತಿತ್ತ ಓಲಾಡಿದುದನ್ನು ನೆಜಮುಟ್ ಭದ್ರವಾಗಿ ಅವಳನ್ನು ಹಿಡಿದುಕೊಂಡುದನ್ನು ರಾಮೆರಿಪ್‌ಟಾ ಕಂಡ.

ತಾಯಿ ರೋದಿಸುವಳೆಂದು ಭಾವಿಸಿ ಅವನೆಂದ :

"ಅಮ್ಮ ಮರೀಬೇಡ. ನೀನು ಮಹಾನ್ ನಾಯಕನ ಹೆಂಡತಿ. ನೀನು ಐಸಿಸ್ ದೇವತೆಗೆ ಸಮಾನ ಅಮ್ಮ."

ಕೊನೆಯ ಪದಗಳು ನೆಫಿಸ್‌ಗೆ ಕೇಳಿಸಲಿಲ್ಲ. ಅವಳಿಗೆ ಪ್ರಜ್ಞೆ ತಪ್ಪಿತ್ತು. ಅಹೂರಾಳು ಧಾವಿಸಿ ಬಂದು ಅವಳನ್ನು ಹಿಡಿದುಕೊಂಡಳು. ನೆಲದ ಮೇಲೆ ಮಲಗಿಸಿದರು. ಮುಖಕ್ಕೆ ನೀರೆರಚಿದರು. ಬಟ್ಟೆಯ ಚೂರಿನಿಂದ ಗಾಳಿ ಬೀಸಿದರು.

ರಾಮೆರಿಪ್‌ಟಾ ಕ್ಷೀಣಿಸುತ್ತ ಹೋದ ಧ್ವನಿಯಲ್ಲಿ "ಅಮ್ಮ, ಅಮ್ಮ" ಎನ್ನುತ್ತ ಗೋಡೆಗೊರಗಿ ನಿಂತ. ತಬಬುವಾ ಬಂದಳು. ಸಂಗತಿ ಗೊತ್ತಾದೊಡನೆ ಮನೆಯಿಂದ ನೇರವಾಗಿ ಹೊರಟು ಬಂದಿದ್ದಳು ಆಕೆ. ನದೀತಟದಿಂದ ನೆಫರುರಾ ಮತ್ತು ಅನ್ಪು ವೀರನ ವಿಧವೆ ಬಂದು ತಲಪಿದರು. ಅಳು ಒತ್ತರಿಸಿ ಬರುತ್ತಿದ್ದ ಗಂಟಲುಗಳೇ ಎಲ್ಲಾ. ಆದರೆ ನೆಫಿಸ್‌ಗೆ ಪ್ರಜ್ಞೆ ತಪ್ಪಿದುದನ್ನು ಗಮನಿಸಿ, ತಮ್ಮ ಸಂಕಟವನ್ನು ಅವರು ಅದುಮಿಹಿಡಿದು, ನೆಫಿಸಳ ಬಳಿ ಕುಳಿತರು.

"ಇನ್ನೇನು ಕಟ್ಟೆಯಿಂದ ಹೊರಡ್ತಾರೆ. ಮೊದಲು ಇಲ್ಲಿಗೇ ಬರ್‍ತಾರಂತೆ," ಎಂದಳು ಅನ್ಪುವಿನ ವಿಧವೆ, ಕಡಿಕಡಿದ ಸ್ವರದಲ್ಲಿ

ನೆಜಮುಟ್ ಅಗ್ಗಿಷ್ಟಿಕೆಯ ಮೂಲೆಯಲ್ಲಿದ್ದ ಮರಿಗೆಗಳಲ್ಲಿ ತಡಕಾಡಿ ಈರುಳ್ಳಿ ಹುಡುಕಿ ತೆಗೆದು, ಅದನ್ನು ಜಜ್ಜಿ ನೆಫಿಸಳ ಮೂಗಿನ ಬಳಿ ಹಿಡಿದಳು. ಕ್ರಮೇಣ ನೆಫಿಸ್‌ಗೆ ಪ್ರಜ್ಞೆ ಮರಳಿತು. ಕಣ್ಣುಗಳ ಜಡತೆ ಕರಗಿತು.

ಕೇಳಿಯೂ ಕೇಳಿಸದಂತಿದ್ದ ಧ್ವನಿಯಲ್ಲಿ ಅವಳೆಂದಳು :

"ಏನಾಯ್ತು ? ನಾನೆಲ್ಲಿದ್ದೇನೆ ? ಬಂದರಾ ?"

ಬಿಸುಸುಯ್ಯುತ್ತ ನೆಜಮುಟ್ ಅಂದಳು :

"ಏಳಬೇಡ. ಹಾಗೇ ಮಲಗಿರು. . ಇನ್ನೇನು ಕರಕೊಂಡು ಬರ್ತಾರೆ."

"ರಾಮೆರಿ...."

ಒಂದು ಹೆಜ್ಜೆ ಹತ್ತಿರ ಸರಿದು ರಾಮೆರಿಪ್‌ಟಾನೆಂದ :

"ಇಲ್ಲಿದ್ದೇನೆ ಅಮ್ಮ...."

ಮೆಲ್ಲಮೆಲ್ಲನೆ ಕಳೆದ ಅಸಹನೀಯ ಕ್ಷಣಗಳು....

ಧ್ವನಿ ಕೇಳಿಸತೊಡಗಿತು :

" ಓ ಒಸ್ಸೆರಿಸ್, ಓ ಒಸ್ಸೆರಿಸ್........ ಓ ಮೆನೆಸ್‌ಟಾ, ಓ ಮೆನೆಸ್‌ಟಾ...."

ಶೋಕಾಲಾಪನೆ ಬರಬರುತ್ತ ಬಲಗೊಂಡಿತು.

ನೆಫಿಸಳನ್ನು ನೋಡುತ್ತಿದ್ದ ನೆಫರುರಾ, "ಅಕ್ಕನಿಗೆ ಮತ್ತೆ ಪ್ರಜ್ಞೆ ತಪ್ಪಿದೆ," ಎಂದಳು. ನೆಜಮುಟ್ ನೆಲದ ಮೇಲಿರಿಸಿದ್ದ ಈರುಳ್ಳಿಯನ್ನು ಅಹೂರಾ ಎತ್ತಿಕೊಂಡು ನೆಫಿಸಳ ಮೂಗಿನ ಬಳಿ ಆಡಿಸಿದಳು.

ಪ್ರಜ್ಞೆ ಮರಳಿ, ಹೊರಗಿನಿಂದ ಬರುತ್ತಿದ್ದ ಶೋಕಾಲಾಪನೆ ಕಿವಿಗಳನ್ನು ಹೊಕ್ಕಂತೆ, ನೆಫಿಸ್ ಕಣ್ಣುಗಳನ್ನು ಅಗಲವಾಗಿ ತೆರೆದಳು. ಎದ್ದು ಕುಳಿತು ಕೊಳ್ಳಲು ನೆಜಮುಟ್ ಮತ್ತು ಅಹೂರಾ ಅವಳಿಗೆ ನೆರವಾದರು. ನಡುವಸ್ತ್ರ ಬಿಚ್ಚಿಹೋಗಿತ್ತು. ನೆಫರುರಾ ಅದನ್ನು ಸರಿಪಡಿಸಿದಳು.

ರಾಮೆರಿಪ್‌ಟಾ ಬಂದು ತಾಯಿಯ ಬೆನ್ನು ಹಿಂದೆ ನಿಂತ.

....ಜನಜಂಗುಳಿ ಮನೆ ಬಾಗಿಲಿಗೆ ಬಂತು. ಬಿಕ್ಕಳಿಸುವ ದುಃಖವೂ ಇತ್ತು ನಾಮೋಚ್ಚಾರದೊಂದಿಗೆ. ಒಮ್ಮೆಲೆ ಮೌನ. ಸ್ನೊಫ್ರು ನೀಡುತ್ತಿದ್ದ ನಿರ್ದೇಶಗಳನ್ನು ಪುನರುಚ್ಚರಿಸುತ್ತಿದ್ದ ಖ್ನೆಮ್‌ಹೊಟೆಪನ ಧ್ವನಿ.

ಸ್ನೊಫ್ರು ಒಳಗೆ ಬಂದ. ನೆಲ ನೋಡುತ್ತ ಕುಳಿತಿದ್ದ ನೆಫಿಸಳನ್ನು, ಅವಳನ್ನು ಹಿಡಿದುಕೊಂಡಿದ್ದ ನೆಜಮುಟ್ ಅಹೂರಾರನ್ನು, ನಿಂತಿದ್ದ ಅಸ್ಸಿ ವಿನ ವಿಧವೆ, ನೆಫರುರಾ, ರಾಮೆರಿಪ್‌ಟಾರನ್ನು ದಿಟ್ಟಿಸಿದ. ನೀಳ ಉಸಿರುಗಳ ನಡುವೆ ನಿಧಾನವಾಗಿ ಅವನೆಂದ :

"ನೆಫಿಸ್, ನಿನ್ನನ್ನು ತಂಗಿ ಅಂತ ಕರೆಯೋದಿಲ್ಲ. ನಮ್ಮ ಬುಡಕಟ್ಟಿನ ಮಹಾನ್ ನಾಯಕನ ಮಡದಿಯಾದ ನೀನು ಇನ್ನು ನಮ್ಮೆಲ್ಲರ ತಾಯಿ. ನಾವು ಅದೃಷ್ಟಹೀನರು. ನಿನ್ನ ವೈಯಕ್ತಿಕ ದುಃಖ ಇಡೀ ಸಮುದಾಯದ ಶೋಕ. ಏನೋ ಮಾಡಲು ಹೋಗಿ ಇನ್ನೇನೋ ಆಯಿತು. ನೀನು ವಿಧವೆಯಾದೆ. ನಾವೆಲ್ಲ ತಬ್ಬಲಿಗಳಾದೆವು. ಅಮ್ಮ, ಈ ಲೋಕದ ಮೇಲಿನ ಪುಟ್ಟ ಬದುಕಿನಲ್ಲಿ ನಿನ್ನ ಸಂಗಾತಿಯಾಗಿದ್ದವನನ್ನು ಕರೆದುಕೊಂಡು ಬಂದಿದ್ದೇವೆ. ಕಡೆಯ ಸಲ ನೋಡಿ ಬೀಳ್ಕೊಡು. ರಾಜಗೃಹಕ್ಕೆ ಒಯ್ದು, ಅಲ್ಲಿಂದ ಶಾಶ್ವತ ಮನೆಗೆ ಸಾಗಿಸ್ತೇವೆ."

ಮಾತುಗಳು. ಬಿಸಿಬಿಸಿಯಾಗಿ ನೆಫಿಸಳ ಕಿವಿಗಳನ್ನು ಹೊಕ್ಕು ಹೃದಯವನ್ನು ಹೆಪ್ಪು ಗಟ್ಟಿಸುತ್ತಿದ್ದ ಪದಗಳು.

ಖ್ನೆಮ್ ಬಾಗಿಲಲ್ಲಿ ನಿಂತಿದ್ದ. ಸ್ನೊಫ್ರು ಸನ್ನೆ ಮಾಡಿದೊಡನೆ ಬದಿಗೆ ಸರಿದ. ಆಗಲೇ ತಲೆಗಳ ಮೇಲಿಂದ ಕೆಳಕ್ಕಿಳಿಸಿದ್ದ ನಾಯಕನ ಕಳೇಬರವನ್ನು ಹಿರಿಯ ಸಮಿತಿ ಸದಸ್ಯರು ಎತ್ತಿಕೊಂಡು ಒಳಬಂದರು. ಜತೆಗಿದ್ದರು ಬಟಾ, ಮೆನ್ನ.

ಒಳ ತಂದುದನ್ನು ನಡುಮನೆಯಲ್ಲಿ ನೆಫಿಸಳ ಎದುರು ನೆಲದ ಮೇಲೆ ಇರಿಸಿದರು.

ಸ್ನೊಫ್ರು ಅಂದ:

"ಅಮ್ಮ, ನಾಯಕನನ್ನು ನಿಮ್ಮೆದುರು ಮಲಗಿಸಿದ್ದೇವೆ. (ಸ್ವಲ್ಪ ತಡೆದು) ಇಲ್ಲಿ ನೋಡು. ಇವರು ನಾಯಕನಿಗೆ ರಕ್ಷಿತ ಲೇಪ ಮಾಡಿದ ಅಯ್ಯ. ಮೆಂಫಿಸಿನಿಂದ ನಮ್ಮವರ ಜೊತೆ ಬಂದರು."

ನೆಫಿಸ್ ಕತ್ತನ್ನು ಮೇಲಕ್ಕೆ ಎತ್ತಿದಳು. ಕಣ್ಣುಗಳು ಮುಚ್ಚಿಯೇ ಇದ್ದುವು. ಅರೆತೆರೆದಳು. ದೃಷ್ಟಿ ಅಲ್ಲಿದ್ದವರನ್ನು ಗುರುತಿಸಲು ಯತ್ನಿಸಿತು. ಮೆನ್ನನ ಮೇಲೆ ತಂಗಿತು.

ಸಂತವಿಡುವ ಮಾತುಗಳನ್ನು ಆಡಲು ಮೆನ್ನ ಸಿದ್ಧನಿದ್ದ. ಆದರೆ ಈ ಐಸಿಸ್ ರೋದಿಸುತ್ತಲೇ ಇಲ್ಲವಲ್ಲ....

"ಹದಿನಾಲ್ಕು ಹೋಳು".... ಎಂದಳು ನೆಫಿಸ್, ಮೆಲ್ಲನೆ.

" ಒಸ್ಸೈರಿಸ್ ದೇವನನ್ನು ನೆನಸಿಕೊಳ್ತಿದ್ದಾಳೆ, " ಎಂದ ಮೆನ್ನ, ಹಿರಿಯರತ್ತ ತಿರುಗಿ.

"ನಮ್ಮ ಮೆನೆಪ್‌ಟಾನೂ ಒಸ್ಸೈರಿಸ್ ದೇವನೇ ಅಲ್ಲವೇ ?" ಎಂದ ಸ್ನೊಫ್ರು. ತುಸು ಗಟ್ಟಿಯಾದ ಸ್ವರದಲ್ಲಿ ನೆಫಿಸ್ ನುಡಿದಳು :

"ನನ್ನ ದೇವರನ್ನು ನಾನು ಮುಟ್ತೇನೆ."

ಕುಳಿತಲ್ಲಿಂದಲೇ ಅವಳು ತುಸು ಮುಂದಕ್ಕೆ ಸರಿದಳು. ಹಣೆ, ಕಣ್ಣು, ಮೂಗು, ತುಟಿಗಳನ್ನು, ಕಿವಿ ಭಾಗವನ್ನು ಸವರಿದಳು. ಕತ್ತನ್ನು ಮತ್ತೆ ಮತ್ತೆ ಮುಟ್ಟಿದಳು. ಬಸಿರು ಅಡ್ಡವಾಗುತ್ತಿದ್ದರೂ, ಶ್ರಮಪಟ್ಟು ತನ್ನ ತಲೆಯನ್ನು ವಕ್ಷಸ್ಥಲದ ಮೇಲೆ ಕ್ಷಣಕಾಲ ಇರಿಸಿದಳು. ಹಾಗೆಯೇ ಕೆಳಕ್ಕೆ ಸರಿದು, ಕಟಿ ಭಾಗದ ಕೆಳಗಡೆ ಹಣೆಯನ್ನಿಟ್ಟಳು. ಮತ್ತೆ ತಲೆ ಎತ್ತಿ, ಇನ್ನೂ ಕೊಂಚ ಕೆಳಕ್ಕೆ ಜರಗಿ ತೊಡೆ ಮೊಣಕಾಲು, ಪಾದಗಳವರೆಗೂ ಅಂಗೈಗಳಿಂದ ತಡವಿ ದಳು ಆಯಾಸಗೊಂಡ ಬಿಸಿಯುಸಿರು ಬಿಡುತ್ತ "ಅಯ್ಯೋ!" ಎಂದಳು.

ಸೊಫ್ರು ನಿಧಾನವಾಗಿ ಪದಗಳನ್ನು ಬಿಡಿಬಿಡಿಸಿ ಹೇಳಿದ :

"ನೆಫಿಸ್ ತಾಯಿ, ಇಡೀ ಬುಡಕಟ್ಟಿನ ಜನ ಸಮುದಾಯ ಹುತಾತ್ಮನ ಹೆಂಡತಿ ಅಂತ ನಿನ್ನನ್ನು ಈ ದಿನ ಗೌರವಿಸ್ತಿದೆ."

ನೆಫಿಸಳ ಗಂಟಲಿನಿಂದ ಪದಗಳು ದಾರಿ ಬಿಡಿಸಿಕೊಂಡು ಹೊರಬಂದುವು :

"ನೀವೆಲ್ಲ ಅವನನ್ನು ನಾಯಕನಾಗಿ ಮಾಡಿದಿರಿ. ಅವನು ದೊಡ್ಡವ ನಾದ. ನನ್ನಿಂದ ದೂರ—ಎತ್ತರಕ್ಕೆ— ಹೋದ. ಒಸ್ಸೈರಿಸ್ ದೇವನಾದ. ತಟ್ಟಿದ ಬಿಸಿರೊಟ್ಟಿ, ಒಣಗಿದ ಮೀನಿನ ಉಪ್ಪೇರಿ. ಇಷ್ಟನ್ನೇ ಆತ ನನ್ನಿಂದ ಬಯಸಿದ್ದು. ಅದು ಮಾಡು, ಇದು ಮಾಡು—ಅಂತ ಯಾವತ್ತೂ ಹೇಳಿದ ವನಲ್ಲ, ಹೊಡೆದವನಲ್ಲ, ಬಡಿದವನಲ್ಲ, ರಾಜಧಾನಿಯಿಂದ ಆಮಂತ್ರಣ ಬಂದಾಗ ನನಗೆ ದಿಗಲಾಯಿತು. 'ಅಲ್ಲಿ ಅಪಾಯ ಇರಬಹುದು; ಹುಷಾರಾ ಗಿರು'—ಎಂದೆ ಹೂಂ ಅಂದ. ಚಿಕ್ಕಮ್ಮನ ಹಳ್ಳಿಗೆ ಹೋಗಿ ಬರೋ ಒಂದು ಆಸೆ ಹಾಗೆಯೇ ಉಳಿದಿತ್ತು. 'ವಾಪಸಾದ್ಮೇಲೆ, ಕುಯಿಲು ಮುಗಿಸಿ, ಹೋಗಿ ಬರೋಣ' ಅಂದ. ಇಲ್ಲಿಂದ ಹೊರಡೋ ಹಿಂದಿನ ರಾತ್ರೆ ಸುಮ್ಮನೆ ಮಾತಾಡ್ತಾ ಮಲಗಿದ್ವಿ. 'ಇವತ್ತು ನಿನ್ನ ತೋಳೇ ನನಗೆ ದಿಂಬು, ಪ್ಟಾ ....ಕಣ್ಣೀರಿಂದ ತೋಯಿಸ್ಕೋಬೇಡ. ಜೊಲ್ಲು ಸುರಿಸಿ ಒದ್ದೆ ಮಾಡ್ತೇನೆ'—ಅಂತ ನಾನಂದೆ....ನನ್ನ ಗಂಡನನ್ನು ರಕ್ಷಿಸದೆ ಹೋದೆಯಲ್ಲ ಐಸಿಸ್. ಮಹಾದೇವ ಪ್ಟಾನೂ ನನ್ನ ಕೈ ಬಿಟ್ಟನಲ್ಲ....ಅಯ್ಯೋ!"

ಕುರಳು ಕತ್ತರಿಸುವ ಆಕ್ರಂದನವಲ್ಲ. ನೆಫಿಸ್ ಇಷ್ಟು ಸಂಯಮದಿಂದ ಮಾತನಾಡುತ್ತಿರುವಳಲ್ಲ ಎಂದು ಸ್ನೊಫ್ರುಗೆ ವಿಸ್ಮಯ—ಒಂದಿಷ್ಟು ಸಮಾಧಾನ ಕೂಡಾ.

ಸೆಮುನೆಂದ :

" ನಮ್ಮ ನಾಯಕರಿಗೆ ರಾಜಯೋಗ್ಯವಾದ ಅಂತ್ಯಕ್ರಿಯೆ ಏರ್ಪಡ್ತದೆ. ಮೆನೆಪ್‌ಟಾ ನಮ್ಮ ಬುಡಕಟ್ಟಿನ— ನೀರಾನೆ ಪ್ರಾಂತದ—ಸುಪುತ್ರ. ನಮ್ಮ ವರನ್ನ ವಿಮುಕ್ತರನ್ನಾಗಿ ಮಾಡಿದ ಮಹಾಪುರುಷ. ಆತ ಶಾಶ್ವತ ಮನೆಯಿಂದ ಮತ್ತೆ ಬರ್ತಾನೆ, ನಮ್ಮ ಸಮುದಾಯದ ನಾಯಕನಾಗ್ತಾನೆ. ಆವರೆಗೆ ಒಸ್ಸೈರಿಸ್ ದೇವನ ಹಾಗೆ ಅವನು ವಿಶ್ರಾಂತಿ ಪಡೀತಾನೆ.... "

ತಲೆಬಾಗಿಸಿ ನೆಫಿಸ್ ಯಾಚಕಿಯಾದಳು :

" ನನ್ನ ಒಂದು ಮಾತು ನಡೆಸಿಕೊಡಿ. ಶಾಶ್ವತ ಮನೆಯಲ್ಲಿ ನಾಯಕರ ಸೇವೆ ಮಾಡೋದಕ್ಕೆ ನನಗೆ ಸಮ್ಮತಿ ಕೊಡಿ. ಗೋರಿ ಪ್ರವೇಶಕ್ಕೆ ನನಗೆ ಅನುಮತಿ ಕೊಡಿ—"

" ಛಿ ! ಛಿ ! " ಎಂಬ ಉದ್ಗಾರ ಎಲ್ಲರಿಂದಲೂ.

ರಾಮೆರಿ ಕುಸಿಕುಳಿತು, ತಾಯಿಗೆ ಅಂಟಿಕೊಂಡ.

ಸೆಮು :

" ಇದು ಧರ್ಮಕ್ಕೆ ಸಂಬಂಧಿಸಿದ್ದು. ಅಯ್ಯನವರು ಹೇಳಬೇಕು. "

ಮೆನ್ನ ಖಚಿತ ವಾಕ್ಯಗಳನ್ನಾಡಿದ :

" ಬಹಳ ಹಿಂದೆ ಪೆರೋ ಸತ್ತಾಗ ಗೋರಿಯೊಳಕ್ಕೆ ಜೀವಂತ ವ್ಯಕ್ತಿಗಳನ್ನೂ ತಳ್ಳುವುದಿತ್ತು. ಮಹಾರಾಣಿಯರನ್ನಲ್ಲ. ದಾಸದಾಸಿಯರನ್ನು. ಮುಂದೆ ವ್ಯರ್ಥವಾಗಿ ಸೇವಕ ಜನ ಸಾಯ್ತಾರಲ್ಲ ಅಂತ, ಆ ನಷ್ಟ ತಪ್ಪಿಸೋದಕ್ಕೆ, ಅವರ ಗೊಂಬೆಗಳನ್ನಷ್ಟೇ ಇಡೋದು ಶುರು ಮಾಡಿದ್ರು. ಮೆನೆಪ್‌ಟಾ ಪ್ರಜಾಪೀಡಕ ಪೆರೋ ಅಲ್ಲ. ಕ್ರೂರಿಯಾದ ಮಹಾಅರ್ಚಕನಲ್ಲ. ಇವರು. ವಾತ್ಸಲ್ಯಮಯಿಯಾದ ಜನನಾಯಕ. ತಮ್ಮ ಕುಡಿಯನ್ನು ಬಸಿರಲ್ಲಿ ಹೊತ್ತಿರುವ ನಮ್ಮೆಲ್ಲರ ತಾಯಿಗೆ ಗೋರಿಪ್ರವ್ರೇಶಕ್ಕೆ ಮೆನೆಪ್‌ಟಾ ಅಣ್ಣ ಅನುಮತಿ ಕೊಡ್ತಿದ್ದರೆ ? ಧರ್ಮಸಮ್ಮತವಂತೂ ಇದು ಖಂಡಿತ ಅಲ್ಲ. ತಾಯಿಯವರು ಕ್ಷಮಿಸ್ಬೇಕು. "

ನೀಳವಾಗಿ ಉಸಿರು ಬಿಟ್ಟು, ನೆಫಿಸ್ ಅಂದಳು :

" ಕ್ಷಮಿಸ್ಬೇಕಾದ್ದು ನಾನಲ್ಲ. ನೀವು. ನನ್ನನ್ನು. ನಾನು ಪಾಪಿ. ನಿಮ್ಮ ನಾಯಕನಾಗಿ ನನ್ನ ಗಂಡ ಏರಿದ ಎತ್ತರವನ್ನು ನಾನು ಮುಟ್ಟಲಿಲ್ಲ."

ಸ್ನೊಫ್ರು : " ಹಾಗನ್ನಬಾರದು ನೆಫಿಸ್ ತಾಯಿ. "

ನೆಫಿಸ್ : " ಇನ್ನು ರಾಜಗೃಹಕ್ಕೆ ಕರಕೊಂಡು ಹೋಗ್ತೀರಾ ? "

ಸ್ನೊಫ್ರು : " ಹ್ಞ. "

ನೆಫಿಸ್ : " ನಾನೂ ಬರಲಾ ? ಗೋರಿಗೆ ಕಳಿಸುವಾಗ ನಾನೂ ಇರಲಾ ? "

ಸ್ನೊಫ್ರು : " ತಾಯಿ ನೆಫಿಸ್, ದಿನ ತುಂಬಿದೆ. ಈ ಪರಿಸ್ಥಿತಿಯಲ್ಲಿ ಅಂತ್ಯಕ್ರಿಯೆಗೆ ನೀವು ಬರಬಾರದು. "

ನೆಫಿಸ್ : " ಹಾಗಾದರೆ ಬರಿಯ ಪಾಪಿಯಲ್ಲ, ಕಡು ಪಾಪಿ ನಾನು. "

ಖ್ನೆಮ್‌ಹೊಟೆಪ್ ಕಾಣಿಸಿಕೊಂಡ.

ಸ್ನೊಫ್ರು : "ಅಮ್ಮ, ಅಪ್ಪಣೆ ಕೊಡು."

ನೆಫಿಸ್ : "ನನ್ನದೆ ಈ ಒಡವೆ ? ನಾನು ಬಿಟ್ಟುಕೊಡಬೇಕೆ ? ಶೋಕಾಲಾಪನೆ ಅಯ್ಯೋ ! ಅಯ್ಯೋ ! "

ರಾಮೆರಿಯೆಂದ :

" ಧೈರ್ಯವಾಗಿರು ಅಮ್ಮ. "

ನೆಫಿಸ್ ಮತ್ತೊಮ್ಮೆ ಪಾದಗಳಿಂದ ತಲೆಯತನಕ ಶವವನ್ನು ತಡವಿದಳು. ಸಂಕಟವನ್ನು ಹತ್ತಿಕ್ಕಲಾಗದೆ, ರಾಮೆರಿಪ್‌ಟಾನನ್ನು ತಬ್ಬಿಕೊಂಡು ಆರಂಭಿಸಿದಳು.

ಸ್ನೊಫ್ರು ಸನ್ನೆ ಮಾಡಿದ; ಖ್ನೆಮ್‌ಹೊಟೆಪ್ ಸೂಚನೆ ಇತ್ತ. ಹಿರಿಯರು ಹಲಗೆಗಳನ್ನೆತ್ತಿದರು. ಅವರು ಮುಂದಕ್ಕೆ ಹೆಜ್ಜೆ ಇಟ್ಟಂತೆ, ನೆಫಿಸ್‌ಳ ರೋದನಕ್ಕೆ ನೆಜಮುಟ್, ತಬುಬುವಾ, ಅಹೂರಾ, ನೆಫರುರಾ ಧ್ವನಿಗೂಡಿಸಿದರು.

ಹೊರಗೆ ಕೇಳಿಸಿತು ಜನಸಾಗರದ ಘೋರ್ಗರೆತ.

" ಓ ಒಸ್ಸೆರಿಸ್, ಓ ಒಸ್ಸೆರಿಸ್; ಓ ಮೆನೆಪ್‌ಟಾ, ಓ ಮೆನೆಪ್‌ಟಾ...."

* * * *

ಶೋಕದ ದಿನ ಅನ್ಪುವೀನ ಸ್ಮಾರಕ ಸ್ತಂಭವನ್ನು ಹೂಗಳಿಂದ ಅಲಂಕರಿಸಿರಲಿಲ್ಲ. ಬಯಲನ್ನು ದಾಟಿ, ಉದ್ಯಾನವನ್ನು ಹಾದು, ಮೆಟ್ಟಲುಗಳನ್ನೇರಿ, ಸಭಾಭವನವನ್ನು ಸಮೀಪಿಸಿ, ಔಟ ಬೆಕ್ ತಾವು ಹೊತ್ತಿದ್ದ ನಾಯಕನ ರಕ್ಷಿತ ಶವವನ್ನು ಇತರರ ನೆರವಿನಿಂದ ವೇದಿಕೆಯ ಮೇಲಿರಿಸಿದರು.

ಜನ ಬಯಲಿನಲ್ಲಿ ಅಲ್ಲಿ ಇಲ್ಲಿ ಗುಂಪುಗಳಾದರು. ಇನ್ನೂ ಅಂತ್ಯ ದರ್ಶನವಾಗದೇ ಇದ್ದವರು ಸಾಲಾಗಿ ನಿಂತು ವೇದಿಕೆಯನ್ನು ಬಳಸಿ ಹೋದರು. ಹಿರಿಯರು ಸಮಿತಿಯ ಸದಸ್ಯರು ಒಂದೆಡೆ ಕುಳಿತರು—ತುರ್ತು ನಿರ್ಧಾರಗಳನ್ನು ಕೈಗೊಳಲು.

ಸೆಬೆಕ್ಬುಗೊಂದು ಆಸೆ ಇತ್ತು:

" ಇಡೀ ನೀರಾನೆ ಪ್ರಾಂತದ ಜನರನ್ನು ಕರೆಸಿ ಅಂತ್ಯಕ್ರಿಯೆ ನಡೆಸೋದು ಸಾಧ್ಯ ಇದ್ದಿದ್ದರೆ........"

ಅಳಿಯ ಖ್ನೆಮ್ ಕೂಗಾಡಿದ :

" ರಾ ಆಗಲೇ ಎರಡು ಮಾರು ಬಂದ. ಅವನು ನೆತ್ತಿಗೆ ಬರೋದರೊಳಗೆ ಸಂಸ್ಕಾರ ಮುಗೀಬೇಕು. ಪೆರೋನ ದಂಡು ತಗೊಂಡು ಮಹಾ ಅರ್ಚಕ ಬರ್‍ತಿರೋದನ್ನು ಮರೆತಿರಾ ? "

ಗೋರಿಗೆ ನಿವೇಶನ ತೀರ್ಮಾನವಾಯಿತು. ಹಪುವಿನ ಮನೆಯಿಂದ ನೂರು ಮಾರು ಹಿಂಬದಿಗೆ.

ಆಗಬೇಕಾದ ಕೆಲಸವನ್ನು ಖ್ನೆಮ್‌ಹೊಟೆಪ್ ಗಟ್ಟಿಯಾಗಿ ಸಾರಿದುದೇ ತಡ, ಜನರ ಇರುವೆ ಸಾಲುಗಳು ಸಿದ್ಧವಾದುವು. ನದೀತಟದಿಂದ ಕಲ್ಲುಗಳು ನಿವೇಶನಕ್ಕೆ ಬಂದುವು. ಐವತ್ತು ಅರುವತ್ತು ಕಲ್ಲುಕುಟಿಗರು ಕಲ್ಲಗಳ ಅರೆಕೊರೆಗಳನ್ನು ತಿದ್ದಿದರು. ಕಲ್ಲಿನ ಕೆಲಸಗಾರರು ಹತ್ತಡಿ ಆರಡಿ ಆರಡಿ ಗುಣಿ ಅಗೆದರು. ಛಾವಣಿಯ ಕಲ್ಲು ಹಾಸಿಗೆ ಆಧಾರವಾಗಲು ಮರದ ದಿಮ್ಮಿಗಳೂ ಹಲಗೆಗಳೂ ಬಂದುವು.

ಶವದ ಜತೆ ಗೋರಿಯೊಳಗಿಡಬೇಕಾದ ಸಾಮಗ್ರಿಗಳನ್ನು ಇಪ್ಯುವರ್ ಜೋಡಿಸತೊಡಗಿದ. ಗೋರಿವಾಸಕ್ಕೆ ಬೇಕಾದ ಬುತ್ತಿಯೂಟವನ್ನು ನೆಫರುರಾ ಸಿದ್ಧಗೊಳಿಸಿದರೆ ಚೆನ್ನಾಗಿರುತ್ತದೆ ಎನಿಸಿತು ಇಪ್ಯುವರ್‌ಗೆ. ಆದರೆ ಆಕೆ ನೆಫಿಸ್‌ಳ ಮನೆಯಲ್ಲಿದ್ದಳು. ಸಾಧ್ಯವೆ ? ಎಂದು ಕೇಳಲು ದೂತನನ್ನು ಅಟ್ಟಿದ.

ನೆಫಿಸಳ ಜತೆ ನೆಜಮುಟ್, ತಬುಬುನಾ, ಅನ್ಪುವಿನ ವಿಧವೆ, ಅಹೂರಾ ಇದ್ದರಲ್ಲ ? ಬುತ್ತಿ ಕಟ್ಟಿ, ಗೋರಿಗೆ ಮುಟ್ಟಿಸಿ, ಬೇಗನೆ ಮರಳಿದರಾಯಿತೆಂದು ನೆಫರುರಾ 'ಹೂಂ' ಅಂದಳು. ನೆಫಿಸಳ ಮನೆಯಿಂದ ಹೊರಬಿದ್ದಳು. ಸ್ನೊಫ್ರುವಿನ ಅಚ್ಚುಮೆಚ್ಚಿನ ಶಿಷ್ಯ ಮೆನೆಪ್‌ಟಾನ ಕಾ ರೂಪವನ್ನು ಮರದಲ್ಲಿ ಕೆತ್ತತೊಡಗಿದ. ಕೌತುಕದ ವಿಶಿಷ್ಟ ಸಾಮಗ್ರಿಗಳನ್ನು ರಚಿಸುತ್ತಿದ್ದ ಕುಶಲ ಕರ್ಮಿಯೊಬ್ಬ ಬಣ್ಣದ ಪುಕ್ಕಗಳಿಂದ ಮಾಡಿದ್ದ ಬೀಸಣಿಗೆಯನ್ನು ತಂದೊಪ್ಪಿಸಿ, ಗದ್ಗದ ಕಂಠದಲ್ಲಿ "ಇದು ನನ್ನ ಕಾಣಿಕೆ" ಎಂದ. ಖಿವವ ತಯಾರಿಸುವವರ ತಂಡ ಶ್ರೇಷ್ಠತಮ ಖಿವವ ತುಂಬಿದ ಚೀಲವನ್ನು ನೀಡಿತು.

ಅಂತ್ಯಕ್ರಿಯೆ ಆದಮೇಲೆ ರಾಜಗೃಹದ ಬಯಲಿನಲ್ಲಿ ಸಾವಿನ ಊಟ.

ಬಟಾನೊಡನೆ ಇಪ್ಯುವರ್ ಮೆಲ್ಲನೆ, "ಅರ್ಚಕರಲ್ಲಿಗೆ ಹೋಗಿ 'ಬೆಳಕಿಗೆ ಆಗಮನ' ಪುಸ್ತಕ ತರಬೇಕಲ್ಲ" ಎಂದ.

ಅಂತ್ಯಕ್ರಿಯೆಗೆ ಅಪೆಟ್‌ನನ್ನು ಕರೆಯಬಾರದು ಎಂಬುದು ಹಿರಿಯರ ಸಮಿತಿಯ ಸದಸ್ಯರ ಅಭಿಪ್ರಾಯವಾಗಿತ್ತು.

"ಅಪೆಟ್ ಅಲ್ಲಿಯೇ ಇರಲಿ. ಸತ್ತ ನಾಯಕರ ನೆನಪಿಗಾಗಿ ಸಾಯಂಕಾಲ ಮಂದಿರದಲ್ಲಿ ವಿಶೇಷ ಪೂಜೆ ಮಾಡಲಿ," ಎಂದ ಸೆನು.

ಗೋರಿ ಕೆಲಸದ ಉಸ್ತುವಾರಿಗಾಗಿ ಸ್ನೊಫ್ರು ಹೊರಟುಹೋದ.

ಸಶಸ್ತ್ರರಾದ ಐವತ್ತು ಜನ ಯೋಧರನ್ನು ಒಕೆನ ವಶಕ್ಕೆ ಒಪ್ಪಿಸಿ, ಅವರನ್ನು ನದಿಯ ದಂಡೆಯ ಕಾವಲಿಗೆ ಖ್ನೆಮ್‌ಹೊಟೆಪ್ ಕಳುಹಿದ.

ತಾನು ಹೋಗಿ 'ಬೆಳಕಿಗೆ ಆಗಮನ' ಪುಸ್ತಕ ತರೋಣ—ಎನಿಸಿತು ಬಟಾನಿಗೆ. ನಿಜವೊ, ಸುಳ್ಳೊ—ಅಪೆಟ್ ನಾಯಕರ ವಿರುದ್ಧ ಬರೆದ ಒಂದು ಪತ್ರವನ್ನು ನ್ಯಾಯಸ್ಥಾನದಲ್ಲಿ ಇನೇನಿ ಓದಿದನೆಂದು ಮೆನ್ನಯ್ಯ ಹೇಳಿರಲಿಲ್ಲವೆ? ತಾನು ಮಂದಿರಕ್ಕೆ ಹೋದರೆ ಆ ಮಾತು ಬಂದೇ ತೀರಬೇಕು. ಈಗ ಯಾಕೆ ವಾಗ್ವಾದ ? ಹೀಗಾಗಿ ಅವನೆಂದ :

"ಖ್ನೆಮು. ನೀನೇ ಹೋಗಿ ಆ ಪುಸ್ತಕ ತಂದ್ಬಿಡಪ್ಪ."

"ಅವನು ಹೊರಗೆ ತಲೆ ಹಾಕದ ಹಾಗೆ ಇಬ್ಬರು ಯೋಧರನ್ನು ಬಿಟ್ಟು ಬರಲಾ ?"

" ಹೂಂ. "

....ಆ ಬೆಳಿಗ್ಗೆ ಅಪೆಟ್‌ನನ್ನು ಎಬ್ಬಿಸಿದ ಅವನ ಹೆಂಡತಿ, " ದೋಣಿ ಕಟ್ಟೆಯಿಂದ ಏನೋ ಗಜಿಬಿಜಿ ಕೇಳಿಬರ್ತಿದೆ." ಎಂದಳು.

ರಾಜಧಾನಿಯಲ್ಲಿ ಮೆನೆಪ್‌ಟಾಗೆ ಬುದ್ಧಿ ಕಲಿಸ್ತಾರೆ ಎಂದು ಅಪೆಟ್‌ನ ಒಳದನಿ ಹೇಳಿತ್ತು. ಆ ರೀತಿ ಆಗಲಿ ದೇವರೇ—ಎಂದು ಅವನು ಪ್ರಾರ್ಥಿಸಿದ್ದ. ಚಾಪೆಯಿಂದ ಗಡಬಡಿಸಿ ಏಳುತ್ತ, ದೋಣಿಕಟ್ಟೆಯಿಂದ ಗಜಿಬಿಜಿ ಎಂದರೆ, ಈ ನಾಯಕ ವಾಪಸು ಬಂದೇ ಬಿಟ್ಟನೋ ಕಡೆಗೂ —ಎಂದು ಗೊಣಗಿದ.

ಕೊಳದಲ್ಲಿ ಮುಳುಗಿ ಎದ್ದಾಗ, ವಿಶೇಷ ಚಟುವಟಿಕೆಯೇನೂ ಕೆಳಗೆ ಊರಲ್ಲಿ ಇದ್ದಂತೆ ತೋರಿಬರಲಿಲ್ಲ. ಆದರೆ ಇನ್ನೂ ಬೆಳಕು ಸರಿಯಾಗಿ ಹರಿದಿರ ಲಿಲ್ಲವಲ್ಲ ? ಮಗನನ್ನು ಎಬ್ಬಿಸಿ, " ಕಟ್ಟೆಯವರೆಗೆ ಹೋಗಿ ಬಾ, " ಎಂದು ಕಳಿಸಿದ.

ಪ್‌ಟಾ ಮೂರ್ತಿಗೆ ನಿಧಾನವಾಗಿ ಅಭ್ಯಂಜನ ಮಾಡಿಸಿ ಮಡಿ ಉಡಿಸಿ ಸ್ತೋತ್ರ ಆರಂಭಿಸುವ ಹೊತ್ತಿಗೆ ಏದುಸಿರು ಬಿಡುತ್ತ ಹುಡುಗ ಬಂದ, ತನ್ನ ವರದಿಯೊಡನೆ.

ಅಪೆಟ್ ಮಂತ್ರಪಠಣವನ್ನು ಬಿಟ್ಟು ಪೂಜೆಯನ್ನು ಅರ್ಧಕ್ಕೆ ನಿಲ್ಲಿಸಿದ. ಆಶ್ಚರ್ಯ ! ಮಹದಾಶ್ಚರ್ಯ ! ಹೇಗೆ ಸತ್ತ ? ಮೆದುಳು ಸಿಡಿಯಿತೊ ? ಗುಂಡಿಗೆ ಬಿರಿಯಿತೊ ? ಮರಣ ದಂಡನೆಯೊ ? ಶವಲೇಪನ ಆಗಿರುವುದಂತೂ ಅದ್ಭುತವೇ ! ಪ್ರಾಂತಪಾಲನನ್ನು ಓಡಿಸಿ ಗದ್ದುಗೆ ಏರಿದವನು ಪೆರೋನೇ ಆದ ನಲ್ಲ ! ತಾನು ಊರೊಳಕ್ಕೆ ಹೋದರೆ ವಿಷಯ ತಿಳೀತದೆ. ಹೇಗೂ ಅಂತ್ಯ ಕ್ರಿಯೆಗಾಗಿ ಕರೆಯಲು ಬರ್‍ತಾರೆ. ಅನ್ಪುವಿಗೆ ಮಾಡಿದ ಹಾಗೆ ಇವನಿಗೂ ' ಬೆಳಕಿಗೆ ಆಗಮನ ' ಪುಸ್ತಕ ಓದಬೇಕೇನೊ ? ತಾನು ಇಲ್ಲಿ ತಾಳ್ಮೆಯಿಂದಿದ್ದು ಅವರ ದಾರಿ ನೋಡುವುದೇ ಮೇಲು.

ಪೂಜೆ ಮುಂದುವರಿಯಿತು, ಹೆಚ್ಚು ಉತ್ಸಾಹದಿಂದ.

ಮೆರವಣಿಗೆ; ಮೆನೆಪ್‌ಟಾನ ಮನೆಯ ಮುಂದೆಯೇ ಇರಬೇಕು—ಅದು ನಿಂತುದು, ರಾಜಗೃಹಕ್ಕೆ ಮುಂದುವರಿದುದು ಕಂಡಿತು.... ಬಿಸಿಲು ಹೆಚ್ಚಿತು. ' ಯಾರೂ ಬರಲಿಲ್ಲವಲ್ಲ. ಗೋರಿಪ್ರದೇಶದ ಕಡೆ ಯಾರೂ ಹೋದಂತಿಲ್ಲ. ಏನಾಗುತ್ತಿದೆ ಎಂದು ತಿಳಿದು ಬರಲು ಮತ್ತೆ ಮಗನನ್ನು ಪುನಃ ಕಳುಹಿಸಲೆ ?'

ಎಂದು ಅಪೆಟ್ ಯೋಚಿಸಿದ. ಮಗನಿಗೇನಾದರೂ ಅಪಾಯ ತಟ್ಟೀತು' ಎಂದು ತೀರ್ಮಾನಿಸಿದ.

ಮತ್ತೂ ಸ್ವಲ್ಪ ಹೊತ್ತಾದ ಮೇಲೆ ಬಂದರು ಖ್ನೆಮ್‌ಹೊಟೆಪ್ ಮತ್ತು ಇಬ್ಬರು ಯೋಧರು,

" ಅರ್ಚಕರಿಗೆ ವಂದನೆ, " ಎಂದ ಖ್ನೆಮ್ ಸ್ವರ ಕರ್ಕಶವಾಗಿತ್ತು.

ಆಶೀರ್ವದಿಸುವವನಂತೆ ಅಪೆಟ್ ತೋಳನ್ನೆತ್ತಿದ. ಚಿಂತೆ ಅಡರಿದ ನೋಟ ಬೀರುತ್ತ ಅವನೆಂದ :

" ಏನಾಯಿತಪ್ಪ ? ಶೋಕಾಲಾಪನೆ ಕೇಳಿ ಬರ್‍ತಿದೆ."

" ಹಿರಿಯರ ಸಮಿತಿ ನಿಮಗೆ ಇಷ್ಟನ್ನು ತಿಳಿಸಲು ನನಗೆ ನಿರ್ದೇಶ ನೀಡಿದ್ದಾರೆ : ನಾಯಕರು ರಾಜಧಾನಿಯಲ್ಲಿ ನಿಧನರಾದರು. ಇವತ್ತು ಇಲ್ಲಿ ಅವರ ಶವಸಂಸ್ಕಾರ. ನಿಮ್ಮಲ್ಲಿರುವ 'ಬೆಳಕಿಗೆ ಆಗಮನ' ಗ್ರಂಥವನ್ನು ನೀವು ಕೊಡಬೇಕು."

" ಓಹೋ. ಹಾಗೊ ? ನಾನು ಬರುವುದು ಬೇಡವೊ ? ವಾಚನಕ್ಕೆ ತಾನೆ ಗ್ರಂಥ ?"

" ರಾಜಧಾನಿಯಿಂದಲೇ ಒಬ್ಬ ಅಯ್ಯ ಬಂದಿದ್ದಾರೆ. ಧಾರ್ಮಿಕ ವಿಧಿಗಳನ್ನು ಅವರೇ ಮಾಡ್ತಾರೆ."

ಅಪೆಟ್‌ಗೆ ವಿಸ್ಮಯ. ಹೊಸ ಸಂಗತಿ. ಬೆಳಿಗ್ಗೆ ಕಟ್ಟೆಗೆ ಹೋದ ತನ್ನ ಹುಡುಗನಿಗೆ ಅದು ಗೊತ್ತಾಗಿರಲಿಲ್ಲ.

" ಸರಿ. ಆದರೆ ನಾನು ಬರುವುದು....ಹಿರಿಯರ ಸಮಿತಿಯ ಆಜ್ಞೆ ಆಗಿಲ್ಲವೆ ?"

" ಇಲ್ಲ. ನೀವು ಮಂದಿರದಲ್ಲಿಯೇ ಇರಬೇಕಂತೆ. ಕಾವಲಿಗೆ ಇಬ್ಬರು ಯೋಧರನ್ನು ಬಿಟ್ಟು ಹೋಗ್ತೇನೆ."

" ಯೋಧರು ? ಮಂದಿರದಲ್ಲಿ ?"

" ಹ್ಞ. 'ಬೆಳಕಿಗೆ ಆಗಮನ' ಕೊಡಿ."

" ನಾಯಕರೇ ಹಾಳೆ ಕೊಡಿಸಿದ್ರು. ಹೊಸ ಪ್ರತಿ ಸಿದ್ಧವಾಗಿದೆ."

" ಹೊಸದು ಹಳೇದು ಎರಡನ್ನೂ ಪೆಟಾರೀಲಿ ಇಟ್ಟು ಕೊಡಿ. ಅಯ್ಯ ಬೇಕಾದ್ದನ್ನು ಆರಿಸ್ತಾರೆ."

" ಓದಿ ಆದ್ಮೇಲೆ ಎರಡನ್ನೂ ತಂದ್ಕೊಡೀಪ್ಪಾ."

ಮಂದಿರದೊಳಗಿಂದ—ಗರ್ಭಗುಡಿಯ ಪಕ್ಕದಲ್ಲಿನ ಕೊಠಡಿಯಿಂದ—ಪೆಟಾರಿ ಬಂತು. ಅದನ್ನು ತೆಗೆದು, "ಇದು ಹಳೇದು, ಇದು ಹೊಸದು. ಪ್ರತಿ ಮಾಡಿರೋ ನನ್ನ ಮಗ ಆ ಒಂದು ಕೆಲಸಕ್ಕಾಗಿಯೇ ಈ ಮಂದಿರದ ಅರ್ಚಕ ನಾಗೋ ಅರ್ಹತೆ ಪಡೆದಿದ್ದಾನೆ," ಎಂದ ಅಪೆಟ್.

ಖ್ನೆಮ್ ಉತ್ತರವೀಯಲಿಲ್ಲ. ಪೆಟಾರಿಯನ್ನೆತ್ತಿ ತಲೆಯ ಮೇಲಿಟ್ಟು ಕೊಂಡು. "ಇಲ್ಲೇ ಕಾವಲಿರಿ" ಎಂದು ಯೋಧರಿಗೆ ಹೇಳಿ ಹೊರಟ.

" ನನ್ನ ಸಹಾಯ ಬೇಕಾದರೆ—"

ಅಪೆಟ್‌ನ ಮಾತನ್ನು ಅರ್ಧಕ್ಕೇ ತಡೆದು ದಳಪತಿ ಹೇಳಿದ :

"ನಾಯಕರ ನೆನಪಿಗಾಗಿ ರಾತ್ರಿ ವಿಶೇಷ ಪೂಜೆಗೆ ಏರ್ಪಾಟು ಮಾಡಿ."

ಮುಂದೇನಾಗುತ್ತದೆ ಎಂಬ ಬಗೆಗೆ ದೇವತಾಮೂರ್ತಿಯಿಂದೇನಾದರೂ ಸೂಚನೆ ಬರುವುದೇನೋ ಎಂದು ತಿಳಿಯಲು ಅರ್ಚಕ ಮತ್ತೆ ಗರ್ಭಗುಡಿಯನ್ನು ಪ್ರವೇಶಿಸಿದ. ಬಹಳ ಹೊತ್ತಾದ ಮೇಲೆ ದೇವತಾಮೂರ್ತಿಯ ತಲೆಯ ಮೇಲಣ ಹೂ ಹಣೆಯ ಮೇಲಿಂದ ಇಳಿದು ಕೆಳಕ್ಕೆ ಬಿತ್ತು.

" ಶುಭ ಸೂಚನೆ" ಎಂದುಕೊಂಡ.

ಹೊರಹೋಗಿ ಯೋಧರೆದುರು, "ಮುಖ್ಯವಾಗಿ ದೇವರಲ್ಲಿ ಭಕ್ತಿ ಬೇಕು. ಭಕ್ತಿ ಕಮ್ಮಿಯಾದರೆ—ಗೊತ್ತಾಯ್ತಲ್ಲ ಏನಾಗ್ತದೇಂತ...." ಎಂದ.

ಭಟರು ಆ ಕಡೆ ನೋಡಲಿಲ್ಲ. ಯಾವ ಉತ್ತರವನ್ನೂ ನೀಡಲಿಲ್ಲ,

* * * *

ಭೂಮಾಲಿಕ ಸಿನ್ಯುಹೆಯ ಮನೆಯಲ್ಲಿ ಒಂದು ಬಗೆಯ ಸಂತಸ. ಅಪೆಟ್ ನನ್ನು ಕಾಣಬೇಕು ಎನಿಸಿತು ಅವನಿಗೆ. ಧೈರ್ಯ ಸಾಲಲಿಲ್ಲ. 'ನಾಯಕ ಸತ್ತನಲ್ಲ ಇನ್ನು ಮೊದಲಿನಂತೆಯೇ ಆಗ್ತೇವೆ; ಗಂಡ ನುಟ್‌ಮೋಸ್ ಹಿಂದಿನಂತೆ ಆಗೊಮ್ಮೆ ಈಗೊಮ್ಮೆಯಾದರೂ ಮನೆಗೆ ಬರ್ತಾನೆ.' ಎಂದುಕೊಂಡಳು ನುಟ್ ಮೋಸನ ಮಡದಿ.

ಜೀತ ಮುಕ್ತ ದಾಸದಾಸಿಯರು ದುಃಖಿಗಳು. ಆದ ದುರಂತದ ಪೂರ್ಣ

ಅರ್ಥ ಆವರಿಗೆ ಆಗಲಿಲ್ಲ. ಹಿಂದಿನ ದಿನಗಳು ಮತ್ತೆ ಬಂದರೆ ಪುನಃ ತಾವು ತೊತ್ತುಗಳಾಗಬೇಕಾದೀತು—ಎಂಬ ವಿಷಯ ಅವರಿಗೆ ಹೊಳೆಯಲಿಲ್ಲ. ಅವರನ್ನೂ ದರಿದ್ರ ರೈತರನ್ನೂ ದುಡಿಯುವ ಎಲ್ಲ ಜನರನ್ನೂ ಇಂಥದೇ ಎನ್ನ ಲಾಗದ ಭಯ ಆವರಿಸಿತು ; ಕತ್ತು ಹಿಸುಕಿದ ಅನುಭವವಾಯಿತು.

ಗೋರಿ ಯಾತ್ರೆಗೆ ಸಿದ್ಧತೆ ನಡೆಯಿತು. ಸೆತ್‌ನಾ ಮುಚ್ಚಳವಿಲ್ಲದ ಶವಪೆಟ್ಟಿಗೆಯನ್ನು ತಂದ. ಮೆನೆಸ್‌ಟಾನ ಕಳೇಬರವನ್ನು ಅದರಲ್ಲಿರಿಸಿದರು.

ಅಂತಿಮ ವಿದಾಯ ಹತ್ತಿರವಾಯಿತೆಂದು ಆರ್ತನಾದದಂತಾಯಿತು ನಾಮೋಚ್ಚಾರ.

ಮೆನ್ನ ರಾಜಗೃಹದ ಪುಟ್ಟ ಕೊಳದಲ್ಲಿ ಮೈ ತೋಯಿಸಿಕೊಂಡ.

ಹೆಚ್ಚು ಕಡಿಮೆ ಊರಿನ ಜನವೆಲ್ಲ ಭಾಗವಹಿಸಿದ ಭಾರೀ ಸ್ಮಶಾನ ಯಾತ್ರೆ. ಮುಂಭಾಗದಲ್ಲಿ ಸಹಸ್ರಾರು ಶೋಕ ಸ್ತ್ರೀಯರು. ಅವರ ಹಿಂದೆ ಉರಿಯುತ್ತಿದ್ದ ಕೆಂಡಗಳಿದ್ದ ಪಾತ್ರೆಯನ್ನೆತ್ತಿಕೊಂಡು ಇನ್ನೊಂದು ಕೈಯಲ್ಲಿ ಇಕ್ಕುಳ ಮೊನೆಯ ಕೋಲು ಹಿಡಿದು, ಪಾದಗಳನ್ನು ಲಯಬದ್ಧವಾಗಿ ಇರಿಸಿ ಕುಣಿಯುತ್ತ ಕುಪ್ಪಳಿಸುತ್ತ ನಡೆಯುತ್ತಿದ್ದ ಮೆನ್ನ,-ಅವನನ್ನು ಹಿಂಬಾಲಿಸಿ ದವನು 'ಬೆಳಕಿಗೆ ಆಗಮನ'ದ ಪ್ರತಿಯನ್ನೊಳಗೊಂಡಿದ್ದ ಪೆಟಾರಿಯನ್ನು ಹೊತ್ತ ಖ್ನೆಮ್‌ಹೊಟೆಪ್. ("ಹಳೆಯ ಪ್ರತಿಯೇ ಇರಲಿ."ಎಂದಿದ್ದಮೆನ್ನಯ್ಯ.) ಶವಪೆಟ್ಟಿಗೆಯನ್ನು ಹೊತ್ತವರು ಹಿರಿಯ ಸಮಿತಿ ಸದಸ್ಯರು : ಸೆನು, ಹೆಮೊನ್, ಥಾನಿಸ್ ಮತ್ತು ಹೆಮ್‌ಟಿ. ಶವಪೆಟ್ಟಿಗೆಯನ್ನು ಸುತ್ತುವರಿದು ನಡೆದವರು ಅಬ್ಬು ಯಾತ್ರಿಕರು. ಅಹೂರಾ ಇರಲಿಲ್ಲ. ಆಕೆಯ ಗಂಡನಿದ್ದ. ಭುಜದ ಮೇಲೆ ಮಗುವನ್ನು ಹಾಕಿಕೊಂಡು. ಹಿಂದಿನಿಂದ, ಗೋರಿ ನಿರ್ಮಾಣದ ಉಸ್ತುವಾರಿ ಮುಗಿಸಿ ಮರಳಿದ್ದ ಸ್ನೊಫ್ರು, ಸೆಬೆಕ್ಕು. ಬಟಾ ಅವರ ಹಿಂದೆ. ಬಳಿಕ, ನೀರಿನ ಪಾತ್ರೆ ಹಿಡಿದಿದ್ದ ಇಪ್ಯುವರ್, ಔಟ, ಅಂಬಿಗರು—ಜನಜಂಗುಳಿ.

[" ನನ್ನ ದೇವರಿಗೆ ಬುತ್ತಿ" ಎಂದು ನೆಫಿಸ್ ಗೋಳಾಡಿದಳು. ಹಿಂದಿನ ದಿನವೇ ಮಾಡಿದ್ದ ರೊಟ್ಟಿಗಳಿದ್ದವು. ನೆಜಮುಟ್ ಅವನ್ನೇ ಬಿಸಿ ಮಾಡಿದಳು. ಒಣಗಿದ ಮೀನಿನ ಉಪ್ಪೇರಿಯನ್ನೂ ಈರುಳ್ಳಿಯನ್ನೂ ಇಟ್ಟು, ಅಪ್ಪುವಿನ ವಿಧವೆ ಕೊಟ್ಟಿದ್ದ ಬಟ್ಟೆಯನ್ನು ಹರಿದು ಅದರ ಒಂದು ತುಣುಕಿನಲ್ಲಿ ಅಷ್ಟನ್ನೂ ಕಟ್ಟಿದಳು.]

ಸ್ಮಶಾನಯಾತ್ರೆ ಬೀದಿಗಳಲ್ಲಿ ತುಂಬಿ ಹರಿಯುವ ನದಿಯಾಯಿತು. ಮಂದಿರದ ಬಾಗಿಲಲ್ಲಿ ನಿಂತು ನೋಡಿದ ಅಪೆಟ್‌ಗೆ ಅದು ಮೆಲ್ಲನೆ ತೆವಳುವ ಹೆಬ್ಬಾವಿನಂತೆ ಕಂಡಿತು. [ಅವನಿಗೆ ಕುತೂಹಲ : ಎಲ್ಲಿಗೆ ಒಯ್ಯುತ್ತಾರೆ ? ಮಣ್ಣು ಮಾಡುತ್ತಾರೋ ? ಗೋರಿಯಲ್ಲಿಡುತ್ತಾರೊ ? ಯಾವ ಗೋರಿಯ ನಿರ್ಮಾಣವೂ ಆಗಲಿಲ್ಲವಲ್ಲ ?]

ದಾರಿಯುದ್ದಕ್ಕೂ ಒಸ್ಸೆರಿಸ್ ಮೆನೆಪ್‌ಟಾರ ನಾಮೋಚ್ಚಾರ.

ಮೆನೆಪ್‌ಟಾನ ಮನೆಬಾಗಿಲಲ್ಲಿ ನೆಫಿಸ್ ಮಗನೊಡನೆ ನಿಂತಿದ್ದಳು. ಅವಳು ಹೊರ ಬರದಂತೆ ಬಾಗಿಲಿನ ಎಡ ಬಲಗಳಲ್ಲಿ ಕಾವಲಿದ್ದರು ಅಹೂರಾ ಮತ್ತು ಅನ್ಪುವಿನ ವಿಧವೆ. ಇದು ಸಾಲದೆಂದು, ಮೂರ್ಛಿತಳಾಗಿ ಬೀಳ ಬಾರದೆಂದು, ತೋಳುಗಳನ್ನು ಆ ಕಡೆ ಈ ಕಡೆ ಹಿಡಿದಿದ್ದರು—ನೆಜಮುಟ್ ಮತ್ತು ತಬಬುವಾ. ಅವರ ಹಿಂದಿದ್ದರು ಬಟಾನ ಪತ್ನಿ ಮತ್ತು ಮಕ್ಕಳು. ಕೆದರಿದ ಕೇಶರಾಶಿಯ ನೆಫಿಸ್ ಮೆರವಣಿಗೆ ಹತ್ತಿರ ಬಂದಂತೆ ಬಿರು ನೋಟ ಬೀರುತ್ತ ನೋಡಿದಳು. ನಡುಗುವ ಕಂಠದಲ್ಲಿ ತಾನೂ ಧ್ವನಿ ಗೂಡಿಸಿದಳು : "ಓ ಒಸ್ಸೆರಿಸ್, ಓ ಒಸ್ಸೆರಿಸ್....ಓ ಮೆನೆಪ್‌ಟಾ, ಓ ಮೆನೆಪ್‌ಟಾ...."

ಮೌನವಾಗಿ ಅಳುತ್ತ, ಬಲಗಡೆಗೆ ಹೊರಳಿ. "ನೆಜಕ್ಕ, ಬುತ್ತಿ ತಗೊಂಡು ಈಗ ರಾಮೆರಿ ಹೋಗಬೇಕು, ಅಲ್ಲವಾ ?" ಎಂದು ಕೇಳಿದಳು.

ನೆಜಮುಟ್ "ನೀನು ಹೊರಡು ರಾಮೆರಿ," ಎಂದಳು ಹುಡುಗನಿಗೆ.

"ಹೂಂ" ಎಂದ ಆತ. "ಜತೆಗೆ ನಿನ್ನ ಮಕ್ಕಳೂ ಹೋಗಲಿ. ನೀನೂ ಹೋಗು ಬೇಕಾದರೆ," ನೆಜಮುಟ್ ಎಂದಳು ಬಟಾನ ಹೆಂಡತಿಗೆ.

ರಾಮೆರಿಪ್‌ಟಾನನ್ನು ಹಿಂಬಾಲಿಸಿ ಅವರೆಲ್ಲ ಬೀದಿಗಿಳಿದರು. ರಾಮೆರಿಯ ಕೈಯಲ್ಲಿತ್ತು ಬುತ್ತಿಯ ಕಟ್ಟು. ಬಟಾ ಅವನನ್ನು ಹತ್ತಿರಕ್ಕೆ ಕರೆದು ಇನ್ನೊಂದು ಕೈಯನ್ನು ಹಿಡಿದುಕೊಂಡ. ಬಟಾನ ಮಕ್ಕಳು ತಾಯಿಯೊಂದಿಗೆ, ತಮ್ಮ ತಂದೆಯವರ ಹಿಂದೆ, ಬೀದಿಗಡ್ಡವಾಗಿ ಸಾಲಾಗಿ ನೆರೆದರು.

ನೆಫಿಸ್‌ಗೆ ಪ್ರಜ್ಞೆ ತಪ್ಪಲಿಲ್ಲ. ಪದಗಳನ್ನು ಅರ್ಧಕ್ಕರ್ಧ ನುಂಗುತ್ತ ಅವಳೆಂದಳು :

"ಮುಗಿಯಿತು....ಎಂಟೊಂಭತ್ತು ವರ್ಷಗಳ ಬಾಳ್ವೆ ಮುಗಿಯಿತು....

ನೀನು ಮಹಾ ನಾಯಕನಾದೆ. ನಾನು—ಬಡವಿಯಾಗಿಯೇ ಉಳಿದೆ....ನನ್ನನ್ನು ಬಿಟ್ಟು ಹೋಗ್ತೀಯಾ ಪ್ಟಾ....ರಾಮೆರಿಯ ಓ ತಂದೆ! ಈ ಇನ್ನೊಂದು ಕುಡಿಯನ್ನು ಹಿರಿಯರಿಗೊಪ್ಪಿಸಿ ನಾನೂ ಬಂದ್ಬಿಡ್ತೇನೆ ಪ್ಟಾ...."

ಮೆರವಣಿಗೆಯ ಕೊನೆಯಲ್ಲಿ ಒಂಟಿಯಾಗಿ ಸಾಗಿದ, ಶಿಲ್ಪಿ ನೆಖೆಸ್.

ಅವನನ್ನೂ ನೋಡಿಯಾದ ಮೇಲೆ ನೆಜ್‌ಮುಟ್ ಅಂದಳು:

"ಇನ್ನು ಒಳಗೆ ನಡಿ ನೆಫಿಸ್. ವಿಶ್ರಾಂತಿ ತಗೋ."

* * * *

ಎರಡು ಬೀದಿಗಳಲ್ಲಿ ಮೆರವಣಿಗೆ ಸಾಗಿತು. ನಿರ್ಮಾಣವಾಗಿದ್ದ ಗೋರಿಯ ಬಳಿ ಸಹಸ್ರ ಕೆಲಸಗಾರರು ಮತ್ತು ಹಪು ಮೆರವಣಿಗೆಯನ್ನು ಇದಿರುಗೊಂಡರು.

ಶವಪೆಟ್ಟಿಗೆಯನ್ನು ಗೋರಿಯ ಬಳಿ ನೆಲದ ಮೇಲಿಟ್ಟರು.

('ನೀವೆಲ್ಲ ಬಿರ್ರನೆ ಬಂದು ನೋಡ್ಕೊಂಡು ಹೋಗ್ಬೇಕಂತೆ'—ನದೀ ತಟದಲ್ಲಿದ್ದ ಬೆಕ್‌ಗೆ ಖ್ನೆಮು ಕಳುಹಿಸಿದ ಸಂದೇಶ.).

ಮೆನ್ನ ಶವಪೆಟ್ಟಿಗೆಯ ಹಾಗೂ ಗೋರಿಯ ಸುತ್ತ— [ತಲೆಯಮೇಲೆ ಕೆಂಡಪಾತ್ರೆ, ಕೈಯಲ್ಲಿ ಇಕ್ಕುಳ ಕೋಲು] ಶೋಕನರ್ತನ ಆರಂಭಿಸಿದ. ಬಾಯಿಯಲ್ಲಿ ಮಂತ್ರಪಠನ. ನಡುನಡುವೆ ರಾಗಾಲಾಪನೆ. ಶೋಕಸ್ತ್ರೀಯರ ರೋದನವಂತೂ ಗಗನಮುಟ್ಟಿತು.

ಗೋರಿಯ ಒಂದು ಮೂಲೆಯಲ್ಲಿ ಮೆಟ್ಟಿಲುಗಳಿದ್ದುವು. ಮೆನ್ನ ಮಂತ್ರ ಪಠಿಸುತ್ತ ಕೆಳಕ್ಕಿಳಿದು ಬೆಂಕಿ ಪಾತ್ರೆಯನ್ನೂ ಇಕ್ಕುಳ ಕೋಲನ್ನೂ ನೆಲಮನೆಯ ಒಂದು ಮೂಲೆಯಲ್ಲಿ ಇರಿಸಿ ಬಂದ. ಇಪ್ಯುವರನ ಕೈಯಿಂದ ನೀರಿನ ಪಾತ್ರೆಯನ್ನು ಇಸಕೊಂಡು ಮತ್ತೆ ಒಳಹೋಗಿ ಗೋರಿಯೊಳಗೆ ಜಲಪ್ರೋಕ್ಷಾಳನ ಮಾಡಿ, ಆ ಪಾತ್ರೆಯನ್ನೂ ಅಲ್ಲಿಯೇ ಇಟ್ಟು ಹೊರ ಬಂದು, ಹಿರಿಯರತ್ತ ನೋಡಿ ಹೇಳಿದ:

"ನಾಯಕರ ಒಡನಾಡಿಗಳಾಗಿದ್ದವರು ಬಂದು ಬೀಳ್ಕೊಡಲಿ."

[ಕೆಳಗಿನಿಂದ ನಾವೆಗಳ ಯಾವ ಸುಳಿವೂ ಇಲ್ಲವೆಂಬುದನ್ನು ಖಚಿತಪಡಿಸಿಕೊಂಡು ಬೆಕ್ ಓಡಿ ಬಂದಿದ್ದ, ತನ್ನ ಐವತ್ತು ಜನ ಭಟರೊಡನೆ. ನಾಯಕರಿಗೆ ನಮಿಸಿ ನದೀತಟಕ್ಕೆ ಮರಳಿ ಧಾವಿಸಲು ಅವನು ಆತುರ ತೋರಿದ. ದಳಪತಿಯು ಮಗ್ಗುಲಲ್ಲಿ ನಿಂತ.]

ಯಾರು ಮೊದಲು ? ಅನಿಶ್ಚಯತೆ ಅನರ್ಥಕಾರಿ. ವಿಲಂಬವಾಗ ಬಾರದು.

ಅಸಹನೆಯಿಂದ ಖ್ನೆಮ್ ನುಡಿದ :

" ಬೇಗ ! ಅಯ್ಯ ಹೇಳಿದಂತೆ ಮಾಡಿ. ಹಿರಿಯರು ಮುಂದಾಗಬೇಕು."

ಆ ನಾಲ್ವರು ಶವದ ಪಾದದ ಬಳಿ ನಿಂತು, ಮುಖವನ್ನು ನೋಡಿ ತಲೆ ಬಾಗಿ ನಮಿಸಿದರು. ಸ್ನೊಫ್ರು—ಸೆಬೆಕ್ಖು ಹಾಗೆಯೇ ಮಾಡಿದರು.

ಗಟ್ಟಿಯಾಗಿ ಅಳುತ್ತ ಬಟಾ ಬಂದ. ಖ್ನೆಮ್‌ಹೊಟೆಪ್, ಔಟ, ಬೆಕ್ ಒಟ್ಟಾಗಿ ನಿಂತು ನಮಿಸಿದರು. [ಅದಾದೊಡನೆಯೇ ಬೆಕ್, ಗುಂಪಾಗಿ ನಿಂತಿದ್ದ ತನ್ನ ಯೋಧರೊಡನೆ, ದಂಡಿಗೆ ಧಾವಿಸಿದ.] ಇಪ್ಯುವರ್ ಬಂದು ಕಳೇಬರದ ಪಾದಗಳ ಮೇಲೆ ತಲೆ ಇರಿಸಿ ಅತ್ತ. ಗಂಡಸರು, ಹೆಂಗಸರು—ಅಂತಿಮ ವಿದಾಯಕ್ಕೆ ಎಲ್ಲರೂ ಮುಂದಾದರು. ಖ್ನೆಮ್ ತೋಳುಗಳನ್ನಷ್ಟೇ ಚಾಚಿ ಜನರ ನೂಕು ನುಗ್ಗಲನ್ನು ಹತೋಟಿಯಲ್ಲಿಟ್ಟುಕೊಂಡ.

ಮೆನ್ನ ಸೆಮುನೊಡನೆ ಅಂದ :

" ನಾಯಕರಿಗೆ ಎಲ್ಲರೂ ಒಡನಾಡಿಗಳೇ. ಇವರು ಸಾಲುಗಟ್ಟಿ ನಮಿಸ್ತಾ ಇರ್‍ಲಿ. ಈ ಕಡೆಯಿಂದ ಗೋರಿ ವಾಸಕ್ಕೆ ಬೇಕಾದ ಸಾಮಗ್ರಿಗಳನ್ನಿಡುವ ಕೆಲಸ ಮಾಡಿ ಮುಗಿಸೋಣ."

ಆ ಸಾಮಗ್ರಿಗಳು ಮೊದಲೇ ಬಂದಿದ್ದುವು.

ಕಾ, ಹೊಲ ಉಳಲು ಮರದ ಪುಟ್ಟ ಹೋರಿಗಳು, ನೇಗಿಲು, ಬಾತು ಕೋಳಿಯ ಬೇಟೆಗೆ ಹೊಡೆಗೋಲು, ಪೆಪ್ಟೆರಸ್ ದೋಣಿಯ ಆಕೃತಿ, ಬಣ್ಣದ ಪುಕ್ಕಗಳ ಬೀಸಣಿಗೆ. ಜೊಂಡಿನ ಪಾದರಕ್ಷೆ, ನೀಲಿಕವಡೆ ಸರ, ಬೆಳ್ಳಿಯುಂಗುರ' ಖಿವವ ಚೀಲ. ಧೂಪದ್ರವ್ಯಗಳು, ಶುಭ್ರ ನಡುವಸ್ತ್ರ, ಹಣ್ಣಿನ ಬುಟ್ಟಿಗಳು, ಹೂವಿನ ರಾಶಿ....

ಚೂಪುಗಲ್ಲೊಂದು ಉಳಿಯಿತು.

ರಾಮೆರಿಪ್‌ಟಾನ ಕೈಯಲ್ಲಿ ಬುತ್ತಿ ಇದ್ದುದನ್ನು ಗಮನಿಸಿದ ಮೆನ್ನ ಅಂದ :

" ರಾಮೆರಿ, ಒಳಗೆ, ಹೋಗಿ ಬುತ್ತಿ ಇಟ್ಟು ಬಾ."

ಮರೆಯಲ್ಲಿ ನೆಫರುರಾ ಮುಖ ತೋರಿಸಿ, ಅಂಗಲಾಚುವ ಸ್ವರದಲ್ಲಿ,

"ರಾಮೆರಿ, ನನ್ನ ಬುತ್ತಿಯನ್ನೂ ತಗೊಂಡು ಹೋಗಪ್ಪ," ಎಂದಳು. ಅದರಲ್ಲಿ ದ್ದುವು ಬಿಸಿ ರೊಟ್ಟಿ, ಬೇಯಿಸಿದ ಮಾಂಸದ ತುಣುಕುಗಳು.

ಆ ಬುತ್ತಿಯನ್ನೂ ಪಡೆದುಕೊಂಡು ರಾಮೆರಿ ನಿಧಾನವಾಗಿ ಮೆಟ್ಟಿಲ ಗಳನ್ನಿಳಿದ.

[ಕತ್ತಲು ಬೆಳಕು ಒಳಗೆ. ಕಲ್ಲಿನ ಹಸಿವಾಸನೆ. ಅದಿನ್ನು ತನ್ನ ತಂದೆಯ– ಅವನ ಚೇತನದ ಹಾಗೂ ಬಾಹ್ಯರೂಪದ–ವಾಸಸ್ಥಾನ; ಆ ಚೇತನ ಮರಳಿ ಬರುವವರೆಗೆ,–ಪುನಃ ನೀರಾನೆ ಪ್ರಾಂತದ ನಾಯಕನಾಗಿ ಜನತೆಯನ್ನು ಮುನ್ನಡೆ ಸುವವರೆಗೆ....]

ಬುತ್ತಿಗಳನ್ನಿರಿಸಿ ಹಿಂದಿರುಗುವುದು ತಡವಾಯಿತೆಂದು ಮೇಲಿನಿಂದ ಬಟಾನ ಧ್ವನಿ ಕೇಳಿಸಿತು:

"ರಾಮೆರಿ...."

ರಾಮೆರಿಪ್‌ಟಾಗೆ ಒಂದು ರೀತಿಯ ಆಶ್ಚರ್ಯ. ಕರೆದುದು ಬಟಾ ಮಾವನೇ. ಆದರೆ ಗಂಟಲು ಅವರ ಗಂಟಲಿನಂತಿಲ್ಲ. ಹಾಗೆ ನೋಡಿದರೆ ಯಾರೊಬ್ಬರ ಸ್ವರವೂ ಅವರವರ ಸ್ವರದಂತಿಲ್ಲ. ಎಲ್ಲರದೂ ನೋವಿನ ಧ್ವನಿಯೇ ಒಂದೇ ತೆರೆ. ಒಂದೇ ತೆರ.

"ರಾಮೆರಿ...."

ಕರೆದುದು ಸ್ನೊಫ್ರು ಮಾವನಿರಬೇಕು. ಆದರೆ ಧ್ವನಿ ಮೊದಲು ಕರೇ ದಧ್ವನಿಯಂತೆಯೇ, ಹಣ್ಣಿನ ಬುಟ್ಟಿಗಳ ಪಕ್ಕದಲ್ಲಿ ಬುತ್ತಿಗಳನ್ನಿಟ್ಟ. ಯಾಕೆ ರೆಕ ಯುತ್ತಿದ್ದಾರೆ? ಬಹಳ ಹೊತ್ತಿನಿಂದ ಇಲ್ಲಿಯೇ ನಿಂತಿರುವೆನೇನೊ. ಈ ಬುಗರಿ....

ರಾಮೆರಿ ತನ್ನ ನಡುಬಟ್ಟೆಯ ಮಡಿಕೆಯಿಂದ ತನ್ನ ಬುಗರಿಯನ್ನು ಹೊರತೆಗೆದ. ("ನೀನು ಕೊಡಿಸಿದ್ದು ಅಪ್ಪ.") ಅದನ್ನು ತನ್ನ ಮನೆಯ ಬುತ್ತಿಯಬಳಿ ಇಟ್ಟ. (ರಾತ್ರೆ ಹೊತ್ತು ತಂದೆಯ ದೇಹದಿಂದ ಬಾ–ಬೆನ್ನುಪಕ್ಷಿ– ಅಲೆಯಲು ಹೊರಟಾಗ ಈ ಬುಗರಿಯನ್ನು ಅದು ಕಾಣಬೇಕು; ಸಂತೋಷ ಪಡಬೇಕು.)

ರಾಮೆರಿ ಮೆಟ್ಟಿಲುಗಳನ್ನೇರಿ ಮೇಲೆ ಬಂದ. ಮುಖ ನಿರ್ವಿಕಾರವಾಗಿತ್ತು. ಆದರೆ ಪ್ರಬುದ್ಧ ಕರೆಯಿತ್ತು ಅದರಲ್ಲಿ.

ಮೆನ್ನನೆಂದ :

"ಸಮುದಾಯಕ್ಕೆ ನಿವೇದಿಸುವಂಥಾದ್ದು ಏನಾದರೂ ಇದ್ದರೆ ಹೇಳಿಬಿಡಿ."

"ಬೇಗನೆ! ಬೇಗನೆ!" ಎಂದು ಖ್ನೆಮ್‌ಹೊಟೆಪ್ ಆವಸರಪಡಿಸಿದ.

ಚುಚ್ಚುತ್ತಿದ್ದ ರಣಬಿಸಿಲು ನೆರಳೆನ್ನುವಂತೆ ಜನ ನೀರವವಾಗಿ ನಿಂತರು. ಹಿರಿಯರ ಸಮಿತಿಯ ಹಿರಿಯ ಸದಸ್ಯ ಸೆಮುಸೆಂದ :

"ಬಂಧುಗಳೇ, ನಮ್ಮ ನಾಯಕರು ತಮ್ಮ ಜನರಿಗೆ ಹಿತವಾಗಬೇಕು ಅನ್ನೋ ಬಯಕೆಯಿಂದ ಫೆರೋನ ಅಮಂತ್ರಣ ಸ್ವೀಕರಿಸಿ ರಾಜಧಾನಿಗೆ ಹೋದ್ರು. 'ನಮ್ಮದು ಋಜು ಮಾರ್ಗ.. ಈವರೆಗೂ ಅಷ್ಟೆ. ಮುಂದೆಯೂ ಅಷ್ಟೆ. ನಮ್ಮ ಮಾತ್ ನಮ್ಮನ್ನು ಕಾಯ್ತದೆ. ಹೋಗಿ ಬರ್ತೇನೆ'—ಅಂದ್ರು ಅಲ್ಲಿ ಅರಮನೆ ಗುರುಮನೆಗಳ ನಡುವೆ ಚೌಕಮಣೆ ಆಟ ನಡೆದಿತ್ತು. ಆ ಜನ ನಮ್ಮ ನಾಯಕರಿಗೆ ನಂಬಿಕೆ ದ್ರೋಹ ಮಾಡಿದ್ರು. ತಮ್ಮ ಆಟದ ಕಾಯಿ ಯಾಗಿ ನಮ್ಮ ನಾಯಕರನ್ನು ಬಳಸಿದ್ರು. ಮೋಸ! ವಂಚನೆ! ನಮ್ಮ ನಾಯಕರನ್ನು ಮುಗಿಸಿಯೇ ಬಿಟ್ರು. ದೊಡ್ಡ ಮನುಷ್ಯ. ಬಹಳ ದೊಡ್ಡ ಮನುಷ್ಯ. ಇಂಥವನೇ ಇನ್ನೊಬ್ಬ ಈ ಐಗುಪ್ತದ ನೆಲದ ಮೇಲೆ ಮತ್ತೆ ಯಾವಾಗ ನಡೀತಾನೊ? (ಧ್ವನಿ ಕುಸಿಯತೊಡಗಿತು.) ನಾಯಕರು ಆಡಿದ ಮಾತನ್ನೇ ಹಿರಿಯ ಸಮಿತಿ ಪುನಃ ಹೇಳ್ತದೆ. 'ನಮ್ಮದು ಋಜುಮಾರ್ಗ. ಈವರೆಗೂ ಅಷ್ಟೆ. ಮುಂದೆಯೂ ಅಷ್ಟೆ. ನಮ್ಮ ಮಾತ್ ನಮ್ಮನು ಕಾಯ್ತದೆ.' ಅಂತ್ಯಕ್ರಿಯೆ ಮುಗಿದ ಮೇಲೆ ಸಾವಿನ ಊಟ. ರಾತ್ರೆ ಹಿರಿಯರ ಸಮಿತಿ ಸಭೆ ಸೇರಿ, ನಮ್ಮ ಪ್ರಾಂತಕ್ಕೆ ಸಂಬಂಧಿಸಿ ಮುಂದಿನ ಕಾರ್ಯವಿಧಾನ ಏನು ಅಂತ ನಿರ್ಧರಿಸ್ತದೆ....ಇಷ್ಟೆ, ಇಷ್ಟೆ...."

ಉಮ್ಮಳವನ್ನು ಪ್ರಯತ್ನಪೂರ್ವಕವಾಗಿ ಹತ್ತಿಕ್ಕಿ ಸೆಮು ಸ್ನೊಫ್ರು ವಿಗೆಂದ :

"ನೀನು ಏನಾದರೂ ಹೇಳು."

ನೆರೆದಿದ್ದ ಎಲ್ಲರೆಡೆಗೆ ಸೊಫ್ರು ದೃಷ್ಟಿಬೀರಿದ. ಬಾಯಿ ತೆರೆದ. ಮಾತು ಹೊರಡಲಿಲ್ಲ. ಉಗುಳು ನುಂಗಿದ. ಮತ್ತೊಮ್ಮೆ ಬಾಯಿತೆರೆದು, ಪದಗಳನ್ನು ರೂಪಿಸುತ್ತ ಹೊರಕ್ಕೆ ತಳ್ಳಿದ.

"ಅಬು ಯಾತ್ರೆಯಿಂದ....ವಾಪಸಾದ ರಾತ್ರೆ........ಮೆನೆಪ್‌ಟಾಗೆ

ಹೇಳಿದೆ :' ನ್ಯಾಯ ಸಮ್ಮತವಾಗಿ ನಡಕೊಳ್ಳಿ, ಸುಮ್ನೆ ಸುಮ್ನೆ ಸುಲೀಬೇಡಿ–ಅಂತ ಕಂದಾಯ ಅಧಿಕಾರಿಗೆ ಹೇಳ್ಬೇಕು. ನಮ್ಮ ಸಂಕಟ ತೋಡ್ಕೊಬೇಕು.... ನಮ್ಮಲ್ಲಿ ಬಹಳ ಜನರ ಅಭಿಪ್ರಾಯ ಇದು. ನೀನು ಬರಬೇಕು. ಮೆನೆಪ್‌ಟಾ.... ನೀನೇ ಮುಂದೆ ಇರಬೇಕು. ನೀನು ಯೋಚಿಸಿ ಮಾತಾಡ್ತೀಯಾ. ಸರಿಯಾಗಿ ವಾದಿಸ್ತೀಯಾ....? ...."ಹೂಂ, ಅಂದ. ಮಾರನೇ ದಿವಸ ಯೋಚಿಸಿ ಮಾತ ನಾಡಿದ. ಸರಿಯಾಗಿ ವಾದಿಸಿದ....ನಮ್ಮ ನಾಯಕನಾದ. (ಬಿಕ್ಕುತ್ತ) ನನ್ನ ನೆರೆಯವನು—ಬಹಳ ಎತ್ತರಕ್ಕೆ ಹೋದ....(ತಡೆತಡೆದು)....ಹಿಂದೆ ವರ್ತಕ ಕೆಪ್ಟು ಬಂದಾಗ, ಹೊಸ ಸಾಧ್ಯತೆಗಳ ಸುಂದರ ದ್ವೀಪವನ್ನು ಮಸಕು ಮಸಕಾಗಿ ಕಂಡ ಹಾಗಾಯ್ತು ನನಗೆ. ಆದರೆ ಈಗ, ಇವತ್ತು........ಇವತ್ತು.... (ಅಳು) ಬೇಡ. ಮಾತಾಡೋದಿಲ್ಲ. ಮಾತಾಡೋದು ನನ್ನಿಂದ ಸಾಧ್ಯವಿಲ್ಲ. ಸೆಮ ಅಣ್ಣ ಹಿಂದೆ ಹೇಳಿದ ಒಂದು ಮಾತನ್ನು ಪುನಃ ಇಲ್ಲಿ ಹೇಳಿ ಮುಕ್ತಾಯ ಗೊಳಿಸ್ತೇನೆ. (ಧ್ವನಿ ಏರಿಸಿ) ಈಪ್ರಾಂತದ ನಾವೆಲ್ಲ ಒಂದೇ ಬುಡಕಟ್ಟಿನವರು. ಎಲ್ಲರೂ ಒಟ್ಟಿಗೇ ಈಸೋಣ. ಮುಳುಗಿದರೆ ಒಟ್ಟಿಗೇ ಮುಳುಗೋಣ."

ಆ ಮಾತುಗಳು ಕೇಳಿದವರ ಮನಸ್ಸಿನ ಆಳಕ್ಕೆ ಇಳಿಯುತ್ತಿದ್ದಂತೆ ಬಟಾ ಪಕ್ಕಕ್ಕೆ ತಿರುಗಿದ. ಅಲ್ಲಿದ್ದ ತನ್ನ ಹಿರಿಯ ಮಗನಿಗೆ. "ಕಟ್ಟೆಗೆ ಓಡಿ, ದೋಣಿ ಯಿಂದ ಕೊಳಲು ತಾ," ಎಂದ. ಹುಡುಗ ದಾರಿ ಬಿಡಿಸಿಕೊಂಡು ಓಡಿದ.

ಜನಸಮುದಾಯ ಒಸೈರಿಸನ ಮೆನೆಪ್‌ಟಾನ ನಾಮೋಚ್ಚಾರ ಮಾಡಿದ ಬಳಿಕ ಮೆನ್ನ ಹೇಳತೊಡಗಿದ :

" ಮನುಷ್ಯನಾಗಿ ಜನಿಸಿದವನು ಮಾಡಬೇಕಾದದ್ದೇನು ? ಭೂಮಿಯ ಮೇಲಿದ್ದಷ್ಟು ಕಾಲ ನ್ಯಾಯವಾಗಿ ವರ್ತಿಸೋದು. ಮನುಷ್ಯ ಸತ್ತಮೇಲೂ ಬದುಕಿರ್ತಾನೆ. ಇದು ಐಗುಪ್ತ ಸಮಾಜದ ಕಲ್ಪನೆ. ಭೂಮಿಯ ಮೇಲೆ ಒಬ್ಬ ವ್ಯಕ್ತಿ ಮಾಡಿದ ಒಳ್ಳೇ ಕೆಲಸಗಳ ಆಧಾರದ ಮೇಲೆ ಅವನ ಮುಂದಿನ ಬದುಕನ್ನು ಒಸೈರಿಸ್‌ತೀರ್ಮಾನಿಸ್ತಾನೆ. ಗುಣವಂತ ಅನಂತಕಾಲ ಜೀವಿಸ ಬಹುದು. ಅಷ್ಟೇ ಅಲ್ಲ. ಯಾವ ಕೆಡುಕನ್ನೂ ಮಾಡದವನ ದೇವರಾಗಿ ರಾರಾಜಿಸಬಹುದು."

ರಾಗವಿಲ್ಲ. ರಂಜನೆ ಇಲ್ಲ. ಆದಷ್ಟು ಸರಳವಾಗಿ ತಿಳಿಯಹೇಳುವ ಯತ್ನ. ಮುಂದುವರಿಸುತ್ತ ಮೆನ್ನನೆಂದ :

"ಗೋರಿಗೆ ಹೋದವರು ಆ ಕತ್ತಲೆಯಿಂದ ಬೆಳಕಿಗೆ ಆಗಮಿಸ್ತಾರೆ ಅನ್ನೋದು ನಮ್ಮ ಸಮಾಜದ ತಿಳಿವಳಿಕೆ. ಈ ಭೂಮಿಯ ಮೇಲಿನ ವಿಚಾರಣೆ ಚಿಲ್ಲರೆ ವಿಷಯ. ಕಟುಕನೂ ವಿಚಾರಣೆ ನಡೆಸಿ ಕುರಿಯ ಕತ್ತು ಕುಯ್ಯಬಹುದು. ಆದರೆ ಪರಲೋಕದ ವಿಚಾರಣೆ ಮಹತ್ತರವಾದದ್ದು. ಧರ್ಮದೇವತೆ ಒಸೈರಿಸನ ನ್ಯಾಯಸ್ಥಾನದಲ್ಲಿ ಅದು ನಡೀತದೆ. ನಮ್ಮ ನಾಯಕ ಮೆನೆಪ್‌ಟಾ ಅಣ್ಣನನ್ನು ದೇವರು ವಿಚಾರಣೆಗೆ ಗುರಿಮಾಡುವ ಪ್ರಶ್ನೆಯೇ ಇಲ್ಲ. ಇವರನ್ನು ಕಂಡ ಕ್ಷಣ ಒಸೈರಿಸ್ ಎದ್ದು ಬಂದು, ಕೈ ಹಿಡಿದು ಕರೆದೊಯ್ದು, ತನ್ನ ಸಿಂಹಾಸನದಲ್ಲೇ ಸ್ಥಳ ನೀಡಿ ಒಟ್ಟಿಗೆ ಕೂಡಿಸಿಕೊಳ್ತಾರೆ. ಆದರೆ ನಮ್ಮ ಪ್ರಾಚೀನ ಅರ್ಚಕರ ಒಸೈರಿಸನ ನ್ಯಾಯಸ್ಥಾನದಲ್ಲಿ ನಡೆಯುವ ವಿಚಾರಣೆಗೆ ಸಹಾಯಕವಾಗ ಬೇಕೂಂತ 'ಬೆಳಕಿಗೆ ಆಗಮನ' ಅನ್ನೋ ಗ್ರಂಥ ರಚಿಸಿದ್ದಾರೆ. ಆ ಗ್ರಂಥವನ್ನು ಗೋರಿಯೊಳಗೆ ಶವದ ಮೇಲೆ ಇಡಬೇಕು. ಅದಕ್ಕೆ ಭಾರೀ ಮೌಲ್ಯ. ಶ್ರೀಮಂತ ಭೂಮಾಲಿಕರು ಅಂಥ ಮೌಲ್ಯ ಕೊಟ್ಟು ಆ ಗ್ರಂಥವನ್ನು ಕೊಳ್ತಾರೆ. ಅಂಥ ಗ್ರಂಥವನ್ನು ಎದೆಯ ಮೇಲಿಟ್ಟ ಕ್ಷಣ ಸತ್ತವನು ಮಾಡಿದ ಪಾಪಗಳೆಲ್ಲ ಮಾಯ ವಾಗ್ತವೆ ಎನ್ನುವುದು ಒಂದು ಭ್ರಮೆ. ಮೋಸ. ನನ್ನ ಅಭಿಪ್ರಾಯದಲ್ಲಿ ನಾಯಕರಿಗೆ ಅಂಥ ಗ್ರಂಥ ಬೇಕಾಗಿಲ್ಲ. ಆದರೆ ಊರಿನ ಮಂದಿರದಲ್ಲಿ ಹಿಂದೆ ಒಂದು ಪ್ರತಿ ಇತ್ತು. ಈಗ ಇನ್ನೂ ಒಂದಿದೆ. ಸರಿ. ಮೂಲಪ್ರತಿ ಇಲ್ಲಿ ಪೆಟಾರಿಯಲ್ಲಿದೆ. ಹೊರಕ್ಕೆ ತೆಗೆದು ಗೋರಿಗೆ ಕಳಿಸೋಣ. ಹೀಗೆ ಮಾಡಿದರೆ ನಿಮಗೆ ಸಂತೋಷವಾಗ್ತದೆ. ಎಲ್ಲಿ, ಮೃತ ಪರಿಶುದ್ಧ ಅಂತ ಮೂರು ಸಲ ಹೇಳಿ."

ಅನ್ಪುವೀರನ ಅಂತ್ಯಕ್ರಿಯೆ ನನೆಪಾಯಿತು, ಬಹ್ವಂಶ ಜನರಿಗೆ. ಅವರೆಂದರು :

"ಮೃತ ಪರಿಶುದ್ಧ! ಮೃತ ಪರಿಶುದ್ಧ! ಮೃತ ಪರಿಶುದ್ಧ!"

ಗುಂಪಿನಿಂದ ಮುಂದೆ ಬಂದವನು ನೆಖೆನ್. ಮೆನ್ನನಿಗೆ ಆತ ಹೇಳಿದ :

"ಅಯ್ಯ! ನಾನು ಪರದೇಶಿ ಶಿಲ್ಪಿ. ನಾಯಕರ ರೂಪವನ್ನು ಹೃದಯ ದಲ್ಲಿ ಅಚ್ಚೊತ್ತಿಕೊಳ್ಳಲಾ?"

ಉತ್ತರವನ್ನು ಖ್ನೆಮ್ ನೀಡಿದ :

"ಹೂಂ. ಬೇಗ, ಬೇಗ."

ನೆಖೆನ್ ಲೇಪಿತ ಶವದ ಬಳಿ ಮಂಡಿಯೂರಿ ಶಿರಸ್ಸು, ಕಿವಿ, ಕಣ್ಣು, ಮೂಗು, ಬಾಯಿ, ಕತ್ತು, ವಕ್ಷಸ್ಥಲ, ಬಾಹುಗಳು, ಹೊಟ್ಟೆ, ಕಟಿ, ತೊಡೆ, ಮಣಿಗಂಟು ಮೊಣಕಾಲಿನ ಪಾದಗಳು ಎಲ್ಲವನ್ನೂ ತಡವಿ ನೋಡಿದ.

ಗೋರಿಯೊಳಗೆ ಕಳುಹಲು ಸಿದ್ಧತೆಯೆಂದು ಮುಚ್ಚಳವಿಲ್ಲದ ಶವಪೆಟ್ಟಿಗೆಯನ್ನು ಎದ್ದು ನಿಲ್ಲಿಸಿದರು. ಮೆನೆಪ್‌ಟಾ ಜೀವ ತಳೆದು ನಿಂತಂತೆ ಭಾಸವಾಯಿತು. "ಓ ಮೆನೆಪ್‌ಟಾ ಓ ಮೆನೆಪ್‌ಟಾ !" ಎಂದರು ಜನ. ಶೋಕಾಲಾಪನೆಯಲ್ಲಿ, ಜಯಕಾರ.

ಹುಡುಗ ಆಗಲೇ ತಂದಿದ್ದ ಕೊಳಲನ್ನು ಕೈಯಲ್ಲಿ ಹಿಡಿದುಕೊಂಡಿದ್ದ ಬಟಾ ಮೆನ್ನನ ಬಳಿಗೆ ಬಂದು, "ಮೆನ್ನಯ್ಯ, ನಾಯಕರಿಗೆ ಪ್ರಿಯವಾಗಿದ್ದ ಒಂದು ಹಾಡು ಬಾರಿಸ್ತೇನೆ—ಆಮೇಲೆ—" ಎಂದ.

"ಹೂಂ ಅಣ್ಣ."

'ಬೇಗ' ಎನ್ನುವ ಪದ ಖ್ನೆಮ್‌ಹೊಟೆಪನ ಗಂಟಲಿನಿಂದ ಹೊರಬರಲೇ ಇಲ್ಲ.

ಕೊಳಲನ್ನು ಬಾಯಿಗಿರಿಸಿ, ಧ್ವನಿ ಹೊರಡಿಸಿ, ಸ್ವರಗಳನ್ನು ಪರೀಕ್ಷಿಸಿ ಬಟಾ ಬಾರಿಸಿದ :

"ನನ್ನ ನಲ್ಲೆಯ ಒಲವು ನಲಿದಿದೆ
ನದಿಯ ತಟದಲ್ಲಿ
ಕ್ರೂರ ಮೊಸಳೆಯು ಅವಿತು ಕುಳಿತಿದೆ
ನೆರಳ ಮರೆಯಲ್ಲಿ
ಹೆದರೆ ನಾ ಬೆದರೆ ನಾ
ನೀರಿಗಿಳಿದು ಈಸುವೆ
ನದಿಯಲಿ ನಾ ಧೀರ ಬಲು ಧೀರ
ಪಾದಕದು ನೀರಲ್ಲ—ನೆಲ
ಅವಳೊಲವೇ ನನ್ನ ಬಲ
ನಲ್ಲೆಯ ಕಂಡರೆ ನನಗೆ ಮುದ
ಬರಸೆಳೆಯಲು ನಾ ಸಿದ್ಧ

ನನ್ನ ನಲ್ಲೆಯ ಒಲವು ನಲಿದಿಡೆ
ನದಿಯ ತಟದಲ್ಲಿ
ಕೂರ್ರ ಮೊಸಳೆಯು ಅವಿತು ಕುಳಿತಿದೆ
ನೆರಳ ಮರೆಯಲ್ಲಿ ........
ನನ್ನ ನಲ್ಲೆಯ ಒಲವು ನಲಿದಿಡೆ
ನದಿಯ ತಟದಲ್ಲಿ........"

ತನ್ಮಯರಾಗಿ, ತಲೆಯಾಡಿಸುತ್ತ, ಜನ ಆಲಿಸಿದರು ; ನಾಯಕನ ಪ್ರೀತಿಯ ಹಾಡನ್ನು, ತಮ್ಮೆಲ್ಲರ ಒಲವಿನ ಪ್ರೇಮಗೀತವನ್ನು.

ಬಟಾ ಬದಿಗೆ ಸರಿದೊಡನೆ ಮೆನ್ನ ಇಪ್ಯುವರ್‌ನತ್ತ ತಿರುಗಿ "ಚೂಪುಗಲ್ಲು" ಎಂದ. ಇಪ್ಯುವರ್ ಅದನ್ನು ಎತ್ತಿಕೊಟ್ಟೊಡನೆ, ಲೇಪಿತ ಶವಬಾಯಿಗೆ ಕಲ್ಲಿನಿಂದ ಗೀರು ಹಾಕಿ, ಅದು ತುಸು ತೆರೆದುಕೊಳ್ಳುವಂತೆ ಮಾಡಿದ.

ಕಳೇಬರವನ್ನು ಮೆನ್ನನೂ ಹಿರಿಯರೂ ಗೋರಿಯೊಳಕ್ಕೆ ಇಳಿಸತೊಡಗಿದಂತೆ ಜನ ಅತ್ತ ನುಗ್ಗಲು ಯತ್ನಿಸಿದರು. ಖ್ನೆಮ್‌ಹೊಟೆಪ್ ತೋಳುಗಳನು ಅಡ್ಡ ಹಿಡಿದ. ಜನ ಹಿಂದಕ್ಕೆ ಸರಿದರು.

ಗೋರಿಯೊಳಗೆ ಮೆನೆಪ್‌ಟಾನನ್ನು ಮಲಗಿಸಿದರು. ಇಪ್ಯುವರ್‌ನ ತಂದುಕೊಟ್ಟ 'ಬೆಳಕಿಗೆ ಆಗಮನ' ಗ್ರಂಥವನ್ನು ಆತನ ಎದೆಯ ಮೇಲಿಟ್ಟರು. ಹಲಗೆಗಳಿಂದ ಶವದ ಪೆಟ್ಟಿಗೆಯನ್ನು ಮುಚ್ಚಿದರು. ಕಣ್ಣು ಒರೆಸಿಕೊಳ್ಳುತ್ತ ಹಿರಿಯರೂ ಮೆನ್ನನೂ ಹೊರಬಂದರು. ಮೆಟ್ಟಲುಗಳಿದ್ದ ಸ್ಥಳದ ಮೇಲೆ ಹಲಗೆ ಹಾಸಿ ಕಲ್ಲುಗಳನ್ನಿಡಲು ಹಪು ಮತ್ತು ಅವನ ಸಹಾಯಕರು ಮುಂದಾದರು.

ಒಸ್ಸೆರಿಸ್-ಮೆನೆಪ್‌ಟಾರ ನಾಮೋಚ್ಚಾರ ಕಿವಿಗಡಚಿಕ್ಕುತ್ತಿರಲು, ಬಟಾ ಇದ್ದಕ್ಕಿದ್ದಂತೆ ಗೋರಿಯತ್ತ ಓಡಿದ. ನೋಡುತ್ತಿದ್ದವರು "ಹೋ ಹೋ" ಎಂದು ಕಿರಿಚುತ್ತಿದ್ದಂತೆ ದಡದಡನೆ ಮೆಟ್ಟಲುಗಳನ್ನಿಳಿದ. "ಬಟಾ ! ಬಟಾ ! ಹೊರಗೆ ಬಾ " ಎಂದು ಕರೆದರು ಹಲವರು.

[ಒಳಗೆ ಬಟಾ ಇದ್ದುದು ಒಂದು ಕ್ಷಣ. ತನ್ನ ಕೊಳಲನ್ನು ಆತ ಶವಪೆಟ್ಟಿಗೆಯ ಬಳಿ ಇರಿಸಿದ. "ಅಣ್ಣಾ!" ಎಂದು ಕರೆದ. ಕಣ್ಣಿನಲ್ಲಿದ್ದ ಕೊನೆಯ

ಒಂದೆರಡು ಹನಿಗಳನ್ನು ತಲೆಯಾಡಿಸಿ ಕೊಡವಿದ. ಹೊರಬರಲು ಬೇಗಬೇಗನೆ ಮೆಟ್ಟಲುಗಳನ್ನೇರಿದ.]

ಮೊದಲ ಮೆಟ್ಟಲಿನ ಬಳಿ ರಾಮೆರಿಪ್‌ಟಾ ನಿಂತಿದ್ದ. ಮೆನ್ನ ಅವನನ್ನು ಹಿಡಿದುಕೊಂಡಿದ್ದ. [ಬಟಾ ಬರಿಗೈಯಲ್ಲಿ ಮೇಲೆ ಬಂದುದನ್ನು ಗಮನಿಸಿ ದವನು ಮೆನ್ನನೊಬ್ಬನೇ.]

ಹಪು ತನ್ನ ಸಹಾಯಕರಿಗೆ ಆಜ್ಞಾಪಿಸಿದ :

"ಹಲಗೆ ಹಾಸಿ. ಕಲ್ಲು–ಕಲ್ಲು...."

ಗೋರಿಯ ಪಕ್ಕದಲ್ಲಿ ನಿಂತು ಉಚ್ಚ ಕಂಠದಲ್ಲಿ ಮೆನ್ನನೆಂದ :

"ಕೇಳಿರಿ ! ಕೇಳಿರಿ ! ನಾಯಕರೀಗ ಭೂಮಿಯ ಮೇಲಿಲ್ಲ. ಅವರು ಆಕಾಶದಲ್ಲಿದ್ದಾರೆ ! ಕ್ರೌಂಚ ಪಕ್ಷಿಯ ಹಾಗೆ ಆಕಾಶದತ್ತ ಅವರು ಧಾವಿಸು ತ್ತಿದ್ದಾರೆ ! ಡೇಗೆಯ ಹಾಗೆ ಆಗಸವನ್ನು ಚುಂಬಿಸುತ್ತಿದ್ದಾರೆ ! ಹುಲ್ಲು ಮಿಡತೆಯಂತೆ ಬಾನಿನತ್ತ ಜಿಗಿದಿದ್ದಾರೆ !...."

"ಶಾಂತಿಯಲ್ಲಿ, ಶಾಂತಿಯಲ್ಲಿ ಮಹಾದೇವನೆಡೆಗೆ ಅವರು ಸಾಗಿದ್ದಾರೆ...."

ಮೆನ್ನ ಸುಮ್ಮನಾದೊಡನೆ, ಜನಸಮುದಾಯ ಹರ್ಷೋದ್ಗಾರ ಮಾಡಿತು.

ಸೆಮುನ ಸೂಚನೆಯಂತೆ ಖ್ನೆಮ್‌ಹೊಟೆಪ್, ಜನಜಂಗುಳಿಗೆ ಕೇಳಿಸುವ ಹಾಗೆ ಗಂಟಲಿನ ಶಕ್ತಿಯನ್ನೆಲ್ಲ ಬಳಸಿ, ನುಡಿದ :

"ಇಲ್ಲಿ ಕೇಳಿರಿ ! ಅಡುಗೆಯಾದ ಕೂಡಲೇ ರಾಜಗೃಹದ ಬಯಲಿನಲ್ಲಿ ಸಾವಿನೂಟ. ಎಲ್ಲರೂ ಅಲ್ಲಿಗೆ ಹೋಗಬೇಕು—ಅಲ್ಲಿಗೆ ಹೋಗಬೇಕು."

## ೧೬

ದಂಡೆಯಲ್ಲಿ ಕಾಯುತ್ತ ನಿಂತಿದ್ದ ಭಟರಲ್ಲಿ ತೀರಾ ಕೆಳಗಡೆ ಇದ್ದವನು ಕಟ್ಟೆಯ ಮೇಲಿದ್ದ ಬೆಕ್‌ನೆಡೆಗೆ ಓಡಿ ಬಂದ. ಉದ್ವಿಗ್ನಗೊಂಡ ಧ್ವನಿಯಲ್ಲಿ ಅವನೆಂದ :

"ಮೂರು ಹಾಯಿಗಳು ಕಾಣಿಸ್ತಿವೆ. ಈ ಕಡೆಯವಲ್ಲ. ದೊಡ್ಡ ನಾವೆಗಳು !"

ಬೆಕ್ ಯೋಚಿಸಿದ :

"ಎಲ್ಲ ನಾವೆಗಳೂ ಒಟ್ಟಿಗೇ ದಂಡೆ ಮುಟ್ಟುವಂತಿದ್ದರೆ ಸಹಾಯ ಬೇಕು. ಉಳಿದ ಐವತ್ತು ಜನ ಯೋಧರ ಜತೆ ಔಟ ಬರ್ಬೇಕು. ಖ್ನೆಮು ಅಣ್ಣನನ್ನೂ ಕರೀಬೇಕು....ಆ ದೋಣಿಗಳು ಕಟ್ಟೆ ಮುಟ್ಟದೆ ಕೆಳಗಡೆಯೇ ದಡ ತಲಪಿ ದರೊ ? ನಾವೂ ಅಲ್ಲಿಗೆ ಧಾವಿಸಬೇಕು. ನೋಡೋಣ, ನೋಡೋಣ...."

ಪ್ರತೀಕ್ಷೆ....ಹಾಯಿಗಳು ಸ್ಪಷ್ಟವಾಗಿ ಕಾಣಿಸಿದುವು. ಹಾಯಿಕಂಬಗಳ ನೀಳ ಗೆರೆಗಳು. ದೋಣಿ ಆಕೃತಿಗಳು. ಹುಟ್ಟುಗಳು ಕೂಡಾ. ಜನರು....

ಯಾಕಿದು ? ಎರಡು ದೋಣಿಗಳು ಹಿಂದುಳಿದುವಲ್ಲ ? ಮುಂದಿನ ದೊಂದರದೇ ವೇಗ ಚಲನೆ.

ಇದು ಕಟ್ಟೆಗೇ ಬರುತ್ತಿದೆ. ಬಟಾನ ದೋಣಿ ಕಟ್ಟೆಗೆ ತಗಲಿಕೊಂಡು ನಿಂತಿದ್ದರೂ, ಸ್ಥಳವಿದೆ. ಇವರ ನಾವೆ ದಂಡೆಗೆ ಬರಬಲ್ಲುದು. ಅದರ ಮೂತಿಯ ಬಳಿ ಇದೇನಿದು ? ಐದು ಮೊಳ ಎತ್ತರದ ಪ್ ಟಾ ದೇವತಾ ಮೂರ್ತಿ. ಮೂರ್ತಿಯ ಪಕ್ಕದಲ್ಲಿ ಇನೇನಿ. ಅದರ ಬೆನ್ನ ಹಿಂದೆ ನಿಂತಿರುವವನು ಮಹಾ ಅರ್ಚಕ, ಬಕಿಲ, ಆತನ ಹಿಂದೆ ನುಟ್‌ಮೋಸ್, ಕಿರಿಯ ದೇವಸೇವಕರು, ಬಿಲ್ಲಾಳುಗಳು.... ಆ ದೋಣಿಗಳು ಕೆಳಗಡಯೇ ದಡಮುಟ್ಟಬಹುದು. ಯೋಧರು ಅಲ್ಲಲ್ಲಿಯೇ ಇರಲಿ. ಇಲ್ಲ....ಯೋಧರೆಲ್ಲ ಕಟ್ಟೆಯ ಕಡೆಗೇ ಧಾವಿಸುತ್ತಿದ್ದಾರೆ !

ಬೆಕ್ ಬಿಲ್ಲನ್ನೆತ್ತಿ ಬಾಣ ಹೂಡಿದ. ಹತ್ತಿರಕ್ಕೆ ಬಂದ ಹಲವು ಯೋಧರೂ ಸಜ್ಜಾದರು. ಆದರೆ ದೋಣಿಯಿಂದ ದೇವತಾಮೂರ್ತಿಯ ಎದು ರಿನಲ್ಲಿ ನೀಲಿ ಬೆಳಕು ಚಿಮ್ಮಿತು. ಉಚ್ಚ ಕಂಠದಲ್ಲಿ ಪ್ ಟಾ ಸ್ತೋತ್ರ ಕೇಳಿಸಿತು. ('ಇವನು ಇನೇನಿ')....ಹಲವು ಕಂಠಗಳಿಂದ ಘೋಷ :

"ಸೃಷ್ಟಿಕರ್ತ ಪ್ ಟಾ ! ಮಹಾದೇವ ಪ್ ಟಾ !"

ಘಾತವಾಯಿತು, ಘಾತವಾಯಿತು.

ದೇವರ ಭವ್ಯಾಕಾರ ದಂಡೆಯನ್ನು ನೇರವಾಗಿ ಮುಟ್ಟಿದಂತೆ, ಯೋಧ ರೆಲ್ಲ ಮಂಡಿಯೂರಿದರು.

ಬೆಕ್ ಕೂಗಿ ನುಡಿದ :

"ಇದು ಮೋಸ....ಏಳಿ ! ಏಳಿ !"

ಮಂಡಿಯೂರಿದ್ದವರು ಕಕ್ಕಾವಿಕ್ಕಿಯಾದರು. ಏಳಲು ಹಿಂಜರಿದರು. ದೇವರ ಜಯಕಾರದೊಡನೆ ದೋಣಿಯಿಂದ ಬಾಣಗಳು ದಂಡೆಯ ಮೇಲೆ ಇದ್ದವರತ್ತ ಬಂದುವು.

ಈ ದೇವರ ಎದುರಲ್ಲೇ ಮಹಾ ಅರ್ಚಕನನ್ನೋ ಇನೇನಿಯನ್ನೋ ಬಕಿಲನನ್ನೋ ಬಲಿ ತೆಗೆದುಕೊಳ್ಳಬೇಕು, ತಾನು. ಕಾತರದಿಂದ ಬೆಕ್ ಬಾಣ ಬಿಟ್ಟ.

ಅದು ಹಾಯಿ ಕಂಬಕ್ಕೆ ನೆಟ್ಟಿತು.

ಬಕಿಲ ಅರಚಿದ :

"ಅವನಿಗೆ !"

ಮೂರು ಬಾಣಗಳು ಬೆಕ್‌ನ ಎದೆಗೆ ನೆಟ್ಟುವು. ನೀರಾನೆ ಶಿಲ್ಪಮೂರ್ತಿ ಯನ್ನಿರಿಸಿದ್ದ ಶಿಲಾಪೀಠಕ್ಕೆ ಮೊದಲು ಒರಗಿ, ಬೆಕ್ ಉರುಳಿದ.

ಆಗಲೇ ಉಳಿದೆರಡು ದೋಣಿಗಳೂ ಅಲ್ಲಲ್ಲಿ ದಡ ತಲಪಿದ್ದುವು. ಎರಡನೆಯ ದೋಣಿಯಲ್ಲಿದ್ದ ಯೋಧರು ದಡಕ್ಕೆ ಧುಮುಕಿದರು. ಬಿಲ್ಲು, ಈಟಿ, ಗದೆ, ಕಂಚಿನ ದುಂಡುಗತ್ತಿ, ಭರ್ಚಿಗಳು. ಮೂರನೆಯ ದೋಣಿ ದೇವರನ್ನು ಹೊತ್ತಿದ್ದ ಮೊದಲ ದೋಣಿಯ ಹತ್ತಿರಕ್ಕೆ ಬಂತು.

ನೀರಾನೆ ಪ್ರಾಂತದ ಯೋಧರಲ್ಲಿ ಕೆಲವರು ರಾಜಗೃಹಕ್ಕೆ ಧಾವಿಸಿದರು. ಕೆಲವರು ಹತರಾದರು. ಗಾಯಗೊಂಡವರ ಕೈಕಾಲುಗಳನ್ನು ಕಟ್ಟಿದರು. ಉಳಿದವರನ್ನು ಮುಖಾಮುಖಿ ಯುದ್ಧದಲ್ಲಿ ನಿರಾಯುಧರನ್ನಾಗಿ ಮಾಡಿದರು. ಎರಡೂ ಕೈಗಳನ್ನು ಮುಂದಕ್ಕೆ ತಂದು ಮೊಣಗಂಟುಗಳ ಬಳಿ ಕಟ್ಟಿದರು.

ಇನೇನಿ ಬೆಕ್‌ನನ್ನು ನೋಡಿ ಅಂದ :

"ಇವನು ಆ ಮೆನೆಪ್‌ಟಾನ ಅಂಗರಕ್ಷಕನಾಗಿ ಮೆಂಫಿಸಿನಲ್ಲಿದ್ದ. ಔಷಧಿ ಗೇಂತ ಒಂದು ಸಲ ಮಂದಿರಕ್ಕೆ ಬಂದಿದ್ದ. ಕಾರಾಗೃಹದಿಂದ ತಪ್ಪಿಸಿ ಕೊಂಡವನು."

ಬಕಿಲ ದಡಕ್ಕೆ ಹಾರಿ, ಬಿದ್ದಿದ್ದ ಬೆಕ್‌ನ ಎದೆಯಿಂದ ಬಾಣಗಳನ್ನು

ಒಂದೊಂದಾಗಿ ಎಳೆದು ತೆಗೆದ. ಗರಗರ ಸದ್ದು. ಕೊನೆಯ ಉಸಿರು. ಕಣ್ಣು ಗಳಲ್ಲಿ ಮಾತ್ರ ತಿರಸ್ಕಾರ. ಬಕಿಲ ಆತನಿಗೆ ಒದೆದ.

ನುಟ್‌ಮೋಸ್ ಅಂದ :

"ಇನ್ನು ಉಳಿದವನು ಔಟ. ಅವನ ಕೆಳಗೂ ಐವತ್ತು ಯೋಧರು ಇದ್ದಾರೆ. ಅನಂತರ ದಳಪತಿ. ಅವರು ಇಷ್ಟರಲ್ಲೇ ಬರಬಹುದು."

ಬಕಿಲ ಯೋಧರಿಗೆ ಆಜ್ಞಾಪಿಸಿದ :

"ಸಾಲಾಗಿ ನಿಂತು ಸಿದ್ಧರಾಗಿ."

ಕೊನೆಯ ದೋಣಿಯಲ್ಲಿದ್ದವರಿಗೆ ಅವನೆಂದ :

"ಹೇರು ಇಳಿಸಿ. ಕೈದಿಗಳಿಗೆ ಬಲೆ ಹೊದಿಸಿ. ಮಹಾ ಅರ್ಚಕರ ಪೀಠ ಪಲ್ಲಕಿಯನ್ನು ಕಟ್ಟೆಯ ಮೇಲಿಡಿ. ದಕ್ಷಿಣ ದಿಕ್ಕಿನಿಂದ ಯಾರೂ ಓಡಿ ಹೋಗದ ಹಾಗೆ ನೋಡೋದು ನಿಮ್ಮ ಜವಾಬ್ದಾರಿ."

ದೇವತಾ ಮೂರ್ತಿಯ ಮರೆಯಲ್ಲಿದ್ದ ಹೇಪಾಟ್ ಈಗ ತುಸು ಎದುರಿಗೆ ಬಂದ. ಅವನಿಗೆ ಅನಿಸಿತು : ಈ ಯುದ್ಧದ ಪರಿಶ್ರಮವನ್ನು ದಂಡನಾಯಕರಿಗೆ ಬಿಡಬೇಕು. ಹಟಕ್ಕೋಸ್ಕರ ಬಂದದ್ದಾಯಿತು. ತಾನು ಎಂಥ ಧೀರ ಎನ್ನುವುದು ಪೆರೋಗೆ ತಿಳಿಯಲಿ. ಧರ್ಮಗುರುವಿನ ಶಕ್ತಿ ಎಷ್ಟೆಂಬುದರ ಅರಿವು ಆ ಅಮಾತ್ಯನಿಗೂ ಆಗಲಿ. ಆದರೆ ತಾನು ಜತನದಿಂದಿರಬೇಕು. ಹಾಯಿಕಂಬಕ್ಕೆ ನೆಟ್ಟ ಬಾಣ ತಲೆಗೆ ತಗಲಿದ್ದರೊ ?

ಇನೇನಿ ಬಂದು ನಿವೇದಿಸಿದ :

"ಯಾವ ಭಯವೂ ಇಲ್ಲ. ಪ್‌ಟಾ ಮಹಾದೇವನೆದುರು ಎಲ್ಲ ಜನರೂ ಮಂಡಿಯೂರ್ತಾರೆ. ತಾವು ಸ್ವಲ್ಪ ಹೊತ್ತು ಭಾವಣಿಯ ಮರೆಯಲ್ಲಿ ವಿಶ್ರಾಂತಿ ಪಡೆಯುವುದು ಮೇಲು."

ಇನೇನಿ ಹೇಳದೇ ಇದ್ದರೂ ಹೇಪಾಟ್ ಭಾವಣಿಯ ಒಳಗೆ ಆಶ್ರಯ ಪಡೆಯುತ್ತಿದ್ದ. ಅವನೇ ನಿವೇದಿಸಿದ್ದರಿಂದ ಆಭಾಸವೆನಿಸುವುದು ತಪ್ಪಿತು.

ಹಿಂದಿನ ಸಲ ಬಕಿಲ ಬಂದಿದ್ದಾಗ ದೋಣಿಕಟ್ಟೆಯಲ್ಲಿ ಶಿಲಾಪೀಠವಿರಲಿಲ್ಲ. ಆದರೆ ಮೇಲೆ ಲಾಂಛನ ಇರಲಿಲ್ಲ. ಅದನ್ನು ಮಹಾ ಅರ್ಚಕನಿಗೆ ಆತ ಅರಿಕೆ ಮಾಡಿದ. ನುಟ್‌ಮೋಸ್ "ಇದು ಮೇರೆ ಇಲ್ಲದ ಅಹಂಕಾರ," ಎಂದ

ಬಿಲ್ಲುಬಾಣಗಳ ಗೊಂದಲದಲ್ಲಿ ಆ ಪೀಠವನ್ನು ಹೇಪಾಟ್ ಗಮನಿಸಿರಲಿಲ್ಲ. ಬಕಿಲ ಹೇಳಿದ ಮೇಲೆ, ಯಾವ ಪ್ರಾಂತದಲ್ಲೂ ಇಲ್ಲದ್ದು ಇಲ್ಲಿದೆಯಲ್ಲ—ಬಂಡಾಯದ ಸಂಕೇತ ಇದು—ಎನಿಸಿತು ಹೇಪಾಟ್‌ಗೆ.

ಆತ ಕೇಳಿದ:

"ಮೇಲಿರೋದು ನೀರಾನೆಯೊ?"

"ಕಲ್ಲಿನ್ದು."

"ಕಲ್ಲಿನ್ದೇ ನಾನು ಹೇಳಿದ್ದು. ಜೀವಂತ ನೀರಾನೆಯ ಗಾತ್ರ ಎಷ್ಟೂಂತ ನನಗೆ ಗೊತ್ತಿಲ್ಲ ಅಂದ್ಕೊಂಡೆಯಾ?"

"ತಪ್ಪಾಯ್ತು."

"ಆ ನೀರಾನೇನ ಉರುಳಿಸು!"

ಹೇರು ದೋಣಿಯಿಂದ ಕಂಚಿನ ಸನಿಕೆಗಳನ್ನೂ ಚೂಪುಗಲ್ಲುಗಳನ್ನೂ ಕಲ್ಲಿನ ಸುತ್ತಿಗೆಗಳನ್ನೂ ಹೊರತೆಗೆದರು. ಹತ್ತಿಪ್ಪತ್ತು ಜನ ಕಾರ್ಯೋನ್ಮುಖರಾದರು. ಹೊಡೆತಕ್ಕೆ ಪೀಠದ ಕಲ್ಲುಗಳು ಸಡಲಿದುವು. ಮೇಲಿನ ಶಿಲ್ಪ ಮೂರ್ತಿಯನ್ನು ತಳ್ಳಿದ ರಭಸಕ್ಕೆ ಕಟ್ಟೆಯ ಕಲ್ಲು ಹಾಸು ತಗಲಿ ಒಡೆಯುವುದರ ಬದಲು, ನೀರಾನೆ ಮೆದುಮಣ್ಣಿಗೆ ಬಿದ್ದು ಉರುಳಿ ನೀಲನದಿಯಲ್ಲಿ ಮುಳುಗಿ ಹೋಯಿತು.

ಜನರ ಕಲರವ ಕೇಳಿಸಿದೊಡನೆ ಇನೇನಿ, ರಂಜಕದ ಜಾಡಿಯ ಮುಚ್ಚಳ ತೆಗೆದು ದೇವತಾಮೂರ್ತಿಯ ಎಡ ಬಲಗಳಲ್ಲಿ ಇಷ್ಟಿಷ್ಟು ಪುಡಿ ಸುರಿದ. ಖ್ನೆಮ್ ಹೊಟೆಪ್ ಔಟ, ಐವತ್ತು ಯೋಧರು, ಬರಿಯ ಕೋಲು ಕೊರಡು ಹಿಡಿದ ನೂರಾರು ಜನ ಕಟ್ಟೆಯತ್ತ ಧಾವಿಸುತ್ತಿದ್ದಂತೆ ಉರಿಯ ತೊಡಗಿದ ರಂಜಕದ ನೀಲಪ್ರಭೆಯೂ ಅದರ ಧೂಮವೂ ಬಾಡುತ್ತಿದ್ದ ಬಿಸಿಲಿನೊಡನೆ ಬೆರೆತುವು.

ಖ್ನೆಮ್, ಔಟ ಇಬ್ಬರೂ ತಮ್ಮ ಜನರಿಗೆ ಕೂಗಿ ನುಡಿದರು:

"ಹೆದರಬೇಡಿ! ಹೆದರಬೇಡಿ!"

ಅವರು ಹಾಗೆ ಹೇಳಿದರೂ ಹೆಚ್ಚಿನ ಜನ. ದೇವರನ್ನು ದೂರದಿಂದ ಕಾಣುತ್ತಲೇ ಮಂಡಿಯೂರಿದರು. ಹೆದರದೆ ಇದ್ದ ಯೋಧರು ದಂಡೆಯುದ್ದಕ್ಕೂ ನಿಂತಿದ್ದ ಸೈನಿಕರತ್ತ ಬಾಣಬಿಟ್ಟರು; ಧಾವಿಸಿದರು. ಬರಿಗೈಯಿಂದ ಕೆಲ ಯೋಧರನ್ನು ನದಿಗೆ ತಳ್ಳಿದರು.

ಮಹಾ ಅರ್ಚಕ ದೋಣಿಯ ಛಾವಣಿಯೊಳಗೆ ಅವಿತಿರಬೇಕು ಎನಿಸಿತು. ಖ್ನೆಮ್ ಹೊಟೆಪನಿಗೆ. ಹೊರಗೆ ದೋಣಿಯಲ್ಲಿ ಕಾಣಿಸಿದವರು ನುಟ್ ಮೋಸ್ ಮತ್ತು ಇನೇನಿ. ಬಕಿಲನನ್ನಂತೂ ದಂಡೆಯ ಮೇಲೆಯೇ ಕಂಡ. ಅವನು ಬಿಲ್ಲನ್ನೆತ್ತಿಕೊಂಡ, ಬತ್ತಳಿಕೆಗೆ ಕೈಹಾಕಿದ. ಗುರಿಹಿಡಿಯಬೇಕು ಎನ್ನು ವಷ್ಟರಲ್ಲೆ—ಆ ಗದ್ದಲದಲ್ಲಿ ಹೇಗೆ ನುಗ್ಗಿ ಬಂದರೊ—ಬೀಸಿ ಬಂದ ಒಂದು ಬಲೆ ಖ್ನೆಮ್‌ಹೊಟೆಪ್‌ನನ್ನು ಮುಚ್ಚಿತು. ಹಿಂದಿದ್ದವರು ಜಗ್ಗಿದರು. ಆತ ಮುಗ್ಗರಿಸಿ ಬಿದ್ದ. ಏಳಲೆಂದು ಚಡಪಡಿಸಿದ. ಬಲೆಯನ್ನು ಸುರುಳಿಸುತ್ತಿ, ಕೈಗಳಿಗೆ ಕುಣಿಕೆ ಹಾಕಿದರು.

"ದಳಪತಿ ಸೆರೆಸಿಕ್ಕಿದ್ರು!"

ಅದು ಬರಸಿಡಿಲು.

ಔಟ, "ಹಿಮ್ಮೆಟ್ಟಬೇಡಿ! ಹಿಮ್ಮೆಟ್ಟಬೇಡಿ!" ಎಂದು ಗಂಟಲು ಬಿರಿಯುವಂತೆ ಕೂಗಿದ. ಜನರ ಹಾಹಾಕಾರದಲ್ಲಿ ಆ ಧ್ವನಿ ಮುಳುಗಿ ಹೋಯಿತು.

ದೇವತಾಮೂರ್ತಿಯ ಮರೆಯಲ್ಲಿ ಅವಿತು ನಿಂತಿದ್ದ ಇನೇನಿ ಕಟ್ಟೆಯ ಮೇಲಿದ್ದ ಬಕಿಲನಿಗೆ ಕೂಗಿ ನುಡಿದ. ಔಟನನ್ನು ಬೊಟ್ಟುಮಾಡಿ ತೋರಿ ಸುತ್ತ ಅಂದ:

"ಅವನೇ ಔಟ, ಮೆನೆಪ್‌ಟಾನ ಇನ್ನೊಬ್ಬ ಅಂಗರಕ್ಷಕ. ಕಾರಾಗೃಹ ದಿಂದ ತಪ್ಪಿಸಿಕೊಂಡವನು."

ಬಕಿಲನ ಒಕ್ಕಣ್ಣು ಔಟನನ್ನು ನೋಡಿತು. ತೋರು ಬೆರಳು ಅತ್ತ ಚಾಚಿತು. ಔಟ ಇನೇನಿಯತ್ತ ಬಾಣ ಬಿಡುತ್ತಿದ್ದಂತೆ ಮೂರು ಬಾಣಗಳು ಔಟನ ಎದೆಗೆ ನೆಟ್ಟುವು. ತನ್ನ ಬಾಣ ಇನೇನಿಯ ತೊಡೆಗಷ್ಟೇ ತಗಲಿದುದು ಔಟನಿಗೆ ಕಾಣಿಸಿತು. ಬತ್ತಳಿಕೆಯಿಂದ ಹಿರಿದಿದ್ದ ಮತ್ತೊಂದು ಬಾಣವನ್ನು ಕೈಯಲ್ಲಿ ಹಿಡಿದುಕೊಂಡೇ ಔಟ ನೆಲಕ್ಕುರುಳಿದ.

ಅಳಿದುಳಿದಿದ್ದ ಯೋಧರನ್ನು ಸುತ್ತುವರಿದು, ನಿಶ್ಶಸ್ತ್ರರನ್ನಾಗಿ ಮಾಡಿ ಕೈಗಳನ್ನು ಹಿಂದಕ್ಕೆ ಕಟ್ಟಿ ವಿಸ್ತಾರ ಬಲೆಯೊಳಕ್ಕೆ ತುರುಕುವುದು ಆಕ್ರಮಿಸಲು ಬಂದವರಿಗೆ ಕಷ್ಟವಾಗಲಿಲ್ಲ.

ನುಟ್‌ಮೋಸ್ ಮಹಾ ಅರ್ಚಕನಿಗೆ ಅರಿಕೆಮಾಡಿದ:

“ ನೂರೇ ಸೈನಿಕರು. ಬಂಡಾಯಗಾರರ ಪಡೆನುಚ್ಚುನೂರಾಯಿತು. ತಾವಿನ್ನು ಜನತೆಗೆ ದರ್ಶನವೀಯಬಹುದು. ಕೋಲು ಕೊರಡುಗಳನ್ನು ಕೆಳಗಿರಿಸಿ ಮಂಡಿಯೂರಿದ ಆ ಬಡಪಾಯಿಗಳು ನಿಮ್ಮ ಅಭಯವಿಲ್ಲದೆ ಏಳೋದಿಲ್ಲ.”

ನುಟ್‌ಮೋಸ್ ತನ್ನ ವಯಸ್ಸಿಗೆ ಮೀರಿದ ಲವಲವಿಕೆಯಿಂದ ಛಾವಣಿಯ ಕೆಳಗಿಂದ ಹೊರಬಂದು ದೋಣಿಯಿಂದಿಳಿದು, ಮಹಾ ಅರ್ಚಕ ಬೆಳ್ಳಿ ಹಿಡಿಯ ತನ್ನ ಅಧಿಕಾರ ಕೋಲನ್ನೂರಿ ಕೆಳಗಿಳಿಯಲು ನೆರವಾದ.

ಎದ್ದು, ದಿಗ್ಭ್ರಮೆಗೊಳಗಾಗಿ ಗುಂಪುಗೂಡಿ ನಿಂತಿದ್ದವರೆಡೆಗೆ ನೋಡ್ಡಿ ತೋಳನ್ನೆತ್ತಿ ಮಹಾ ಅರ್ಚಕನೆಂದ :

“ ಪ್‌ಟಾ ನಿಮ್ಮನ್ನು ಅನುಗ್ರಹಿಸಲಿ !”

ಅನುಗ್ರಹದ ಮಾತನ್ನು ಹೇಪಾಟ್ ಆಡುತ್ತಿದ್ದಂತೆಯೇ ಬಕಿಲನ ಸೂಚನೆಯಂತೆ ಹಲವು ಯೋಧರು ಆ ಜನರನ್ನು ಸುತ್ತುಗಟ್ಟಿದರು.

ದೇವತಾಮೂರ್ತಿಯನ್ನು ದೋಣಿಯಲ್ಲಿದ್ದ ಕಿರಿಯ ದೇವಸೇವಕರು ಹೊತ್ತುಕೊಂಡು ಕಟ್ಟೆಯನ್ನೇರಿದರು. ಹೇರು ದೋಣಿಯಿಂದ ಹೊರ ತೆಗೆದ ಪೀಠಪಲ್ಲಕಿಯಲ್ಲಿ ಹೇಪಾಟ್ ಕುಳಿತ. ಬೋಯಿಗಳು ಅದನ್ನೆತ್ತಿ ಅಣಿಯಾದರು.

ಇನೇನಿಯ ಗಾಯಗೊಂಡ ತೊಡೆಗೆ ಒಬ್ಬ ಕಿರಿಯ ದೇವಸೇವಕ ಸೆಣಬಿನ ಅರಿವೆ ಸುತ್ತಿದ.

ಇನೇನಿ ಗೋಳಿಟ್ಟ :

“ ನಾನು ನಡೀಲಾರೆ. ಸತ್ತು ಹೋದೇನು. ಈ ಸುಡುಗಾಡು ಊರಲ್ಲಿ ಪಲ್ಲಕಿ ಏನಾದರೂ ಇದ್ದರೆ ತಗೊಂಡು ಬನ್ನಿ. ಅಷ್ಟರವರೆಗೆ ದೋಣಿಯಲ್ಲೇ ಇರ್ತೇನೆ.”

ನುಟ್‌ಮೋಸ್ ಅವನನ್ನು ಸಮೀಪಿಸಿ ಅಂದ :

“ ರಾಜಗೃಹದಲ್ಲಿ ಪಲ್ಲಕಿ ಇದೆ. ಕಳಿಸ್ತೇವೆ ಅಯ್ಯ.”

ನೀರಾನೆ ಪ್ರಾಂತದ ಗಾಯಗೊಂಡ ಯೋಧರನ್ನು ಎಳೆದು ಒಂದೇ ಜಾಗದಲ್ಲಿ ಇರಿಸಿದರು. ಬಂಧಿತ ಯೋಧರನ್ನೂ ಸೆರೆಸಿಕ್ಕಿದ ಜನರನ್ನೂ ವಿಸ್ತಾರ ಬಲೆಯಲ್ಲಿ ಬೀಸಿ ಬಿಗಿದರು.

ಬೆಕ್ ಔಟರ ಶವಗಳನ್ನು ಮುರಿದಿಕ್ಕಿದ ಶಿಲಾಪೀಠದ ಬುಡದಲ್ಲಿಟ್ಟರು. ಬಲೆಯೊಳಗೆ ಚಡಪಡಿಸುತ್ತಿದ್ದ ಖ್ನೆಮ್‌ಹೊಟೆಪ್‌ನನ್ನೂ ಅಲ್ಲಿಗೆ ಎಳೆದು ತಂದರು.

ತಮ್ಮವನೇ ಒಬ್ಬ ಯೋಧನ ಕೈಯಿಂದ ಈಟಿ ತೆಗೆದುಕೊಂಡು ಖ್ನೆಮ್ ಹೊಟೆಪನ ಬಳಿಗೆ ಬಕಿಲ ಧಾವಿಸಿದ; ಮನುಷ್ಯನ ಮೇಲೆ ಎರಗುವ ಕಾಡು ಪ್ರಾಣಿಯಂತೆ ಅರಚಿದ.

ಅಂಗಾತ ಬಿದ್ದಿದ್ದ ಬಲೆಯ ಎಡೆಯಿಂದ ಖ್ನೆಮ್‌ಹೊಟೆಪ್ ನೋಡು ತ್ತಿದ್ದಂತೆ ಬಕಿಲ ಈಟಿಯಿಂದ ಖ್ನೆಮ್‌ನ ಕಣ್ಣುಗಳನ್ನು ಒಂದೊಂದಾ ಇರಿದ.

"ನಿನ್ನನ್ನು ಕೊಲ್ಲೋದಿಲ್ಲ. ನೀನು ಕುರುಡ ಭಿಕ್ಷುಕನಾಗಿ ಅಲೆದರೇ ನನಗೆ ಸಂತೋಷ" ಎಂದು ಹೇಳಿ, ಈಟಿಯನ್ನು ಯೋಧನಿಗೆ ಮರಳಿ ನೀಡಿ ಬಕಿಲ ಮಹಾ ಅರ್ಚಕನೆಡೆಗೆ ಸಾಗಿದ.

ಗುಂಪಿನಲ್ಲಿದ್ದ ಕೆಲವರು ಬಾಯಿ ಬಿಟ್ಟದ್ದರು ನುಟ್‌ಮೋಸ್ ನೊಡನೆ.

"ಮೆನೆಪ್‌ಟಾನನ್ನು ಮಣ್ಣು ಮಾಡಿದ್ದಾಯಿತು. ಅದಕ್ಕಾಗಿ ರಾಜಧಾನಿ ಯಿಂದಲೇ ಅಯ್ಯ ಬಂದಿದ್ರು."

ಹೇಪಾಟ್‌ಗೆ ತಕ್ಷಣ ಹೊಳೆಯಿತು: ಹುಚ್ಚ ಮೆನ್ನನೇ ಇರಬೇಕು. ಮನಸ್ಸಿನಲ್ಲಿ ಅಂದುಕೊಂಡ: "ಇರಲಿ, ಇವತ್ತು ಅವನಿಗೆ ಅಂತ್ಯ."

ಬಕಿಲ, ನುಟ್‌ಮೋಸರ ನಾಯಕತ್ವದಲ್ಲಿ ಸಶಸ್ತ್ರ ಯೋಧರು; ಅವರ ಹಿಂದೆ ನಿರಾಯುಧ ಸೆರೆಯಾಳುಗಳು; ಬಳಿಕ ದೇವತಾಮೂರ್ತಿ; ಹಿಂಬಾಲಿಸ ಮಹಾ ಅರ್ಚಕನಿದ್ದ ಪಲ್ಲಕಿ, ಮತ್ತೆ ಸಶಸ್ತ್ರ ಭಟರು.

ಘೋಷಗಳು:

"ಮಹಾದೇವ ಪ್‌ಟಾ! ಮಹಾದೇವ ಪ್‌ಟಾ!"

"ಮಹಾ ಅರ್ಚಕ ಹೇಪಾಟ್! ಮಹಾ ಅರ್ಚಕ ಹೇಪಾಟ್!"

* * * *

ನೀರಾನೆ ಪಟ್ಟಣದ ಜನಸಂಖ್ಯೆಯ ಮುಕ್ಕಾಲು ಪಾಲು ಜನ— ಸುಮಾರು ಹತ್ತು ಸಹಸ್ರದಷ್ಟು—ರಾಜಗೃಹದ ಬಯಲಿನಲ್ಲೂ ಅದರ ಪರಿಸರ

ದಲ್ಲೂ ನೆರೆದಿದ್ದರು, ಸಾವಿನ ಊಟಕ್ಕಾಗಿ. ಅವರಲ್ಲಿ ಒಂದೆರಡು ಸಾವಿರ ಜನರಿಗೆ ಊಟವನ್ನು ಬಡಿಸಿ ಆಗಿತ್ತು, ಅಂಗೈಗಳಿಗೆ, ಎರಡೆರಡು ರೊಟ್ಟಿ, ಗೆಡ್ಡೆಗಳ ಸಿಹಿ ಮತ್ತು ಖಾದ್ಯ ತುಣುಕುಗಳು ಭರದಿಂದ ಸಾಗಿತು ಅಡುಗೆ. ಒಲೆಗಳ ಮುಂದೆ ರೊಟ್ಟಿ ತಟ್ಟುತ್ತ ಹಲವು ನೂರು ಜನ ಮಹಿಳೆಯರು ಕುಳಿತಿದ್ದರು; ನೂರಾರು ಗಂಡಸರೂ ಇದ್ದರು. ನಾಯಕನಿಲ್ಲದ ರಾಜ್ಯ. ಶೋಕದ ಬೆಂಗಾಡು. ಹೃದಯದ ನೆಲದಲ್ಲಿ ಭಯದ ಬೀಜಗಳು ಹುದುಗಿ ತೀವ್ರಗತಿಯಿಂದ ಬೇಯುತ್ತಿದ್ದುವು.

ಅಷ್ಟರಲ್ಲಿ ಬಂದಿತು ವೈರಿ ದಂಡಿನ ಆಗಮನದ ಸುದ್ದಿ. ಹಾಯಿಗಳು ಕಾಣಿಸುತ್ತಿವೆ ಎಂಬ ವಾರ್ತೆ ಮಾತ್ರ. ಮುಂದೆ ಸ್ವಲ್ಪ ಹೊತ್ತಿನಲ್ಲೇ ಘರ್ಷಣೆಯ ವಿವರ ತಲಪಿತು. ದೇವರೇ ಬಂದಿದ್ದರು ದಂಡಿನೊಂದಿಗೆ !

ಹೆಮ್‌ಟೆ ಎಂದ :

"ಖ್ನೆಮು, ಉಳಿದರ್ಧ ದಂಡು ದಂಡೆಗೆ ಧಾವಿಸ್ಬೇಕು. ಅಲ್ಲಿಯೆ, ನಿರ್ಣಾಯಕ ಹೋರಾಟ. ಬೇಗ, ಬೇಗ !"

ಔಟನೂ ಅವನ ಐವತ್ತು ಯೋಧರೂ ಖ್ನೆಮ್‌ಹೊಟೆಪನೂ ಕೈಗೆ ದೊರೆತ ಕೋಲು ಕೊರಡುಗಳನ್ನೆತ್ತಿಕೊಂಡ ನೂರಾರು ಜನರೂ ಕಟ್ಟೆಯತ್ತ ಓಡಿದರು.

ರಾಜಗೃಹದ ಬಯಲಿನಿಂದ ಸಾವಿನ ಊಟ ಬೇಡವೆಂದು ಹೊರಟು ಹೋಗುವುದಕ್ಕೂ ಹಲವರು ಸಿದ್ಧರಾಗಿದ್ದರು. ಅವರಿಗೆ ಮನೆಯಲ್ಲಿ ಬಿಟ್ಟು ಬಂದ ಮಕ್ಕಳ ಯೋಚನೆ.... ಮುಂದೇನಾಗುವುದೋ ಎಂಬ ಭೀತಿ....

ನಿರ್ಣಾಯಕ ಯುದ್ಧ ಎಂದಿದ್ದ ಹೆಮ್‌ಟೆ. ಅದರಲ್ಲಿ ಸೋಲಾಯಿತೆಂಬ ವಾರ್ತೆ ಬಂತು.

ಹೆಮ್‌ಟೆ ಅಂದ :

"ನಿರಾಯುಧರಿಂದ, ಯುದ್ಧದ ತರಬೇತಿ ಇಲ್ಲದವರಿಂದ, ಪ್ರತಿಭಟನೆ ಹೇಗೆ ಸಾಧ್ಯ ?"

ಸೆನು ಕೇಳಿದ :

"ಈಗ ?"

ಹೆಮ್‌ಟೆ ಉತ್ತರಿಸಿದ :

"ಸಾಮಾನ್ಯವಾಗಿ ಇಂಥ ಪ್ರಸಂಗಗಳಲ್ಲಿ ಶರಣಾಗತಿ— ಮುಂದಿನ ಕ್ರಮ."

"ಅಯ್ಯೋ!" ಎಂದ ಬಟಾ.

ಸ್ನೊಫ್ರು ನಿಟ್ಟುಸಿರು ಬಿಟ್ಟ.

ಜನ ಚೆದರಬಾರದೆಂದು ಸೆಮು ಪುನಃ ಪುನಃ ಕೂಗಿ ನುಡಿದ :

"ಸಾವಿನ ಊಟ ಮುಗಿಸಿಕೊಂಡು ಹೋಗಿ. ನಾವೆಲ್ಲ ಒಂದೇ ಬುಡ ಕಟ್ಟಿನವರು. ಒಟ್ಟಿಗೆ ಈಸೋಣ ! ಒಟ್ಟಾಗಿರಿ !"

ಮೆನ್ನ ಮೆಲ್ಲನೆ ಬಟಾನಿಗೆ ಹೇಳಿದ :

"ಜನ ಒಸ್ಸೈರಿಸನ, ನಾಯಕರ ನಾಮೋಚ್ಚಾರ ಮಾಡಿದರೆ ಚೆನ್ನು."

ಆರ್ತನಾದದಂತೆ ಕೇಳಿಸಿತು ಬಟಾನ ಧ್ವನಿ :

"ಓ ಒಸ್ಸೈರಿಸ್ ! ಓ ಮೆನೆಪ್‌ಟಾ !"

ಜನ ಓಗೊಟ್ಟರು. ಮತ್ತೆ ಮತ್ತೆ ಆ ಹೆಸರುಗಳನ್ನು ಉಚ್ಚರಿಸಿದರು.

ಆಗ ಕಣ್ಣಿಗೆ ಬಿತ್ತು, ಮುಖ್ಯ ಬೀದಿಯಲ್ಲಿ ರಾಜಗೃಹದತ್ತ ಬರತೊಡಗಿದ್ದ ಮೆರವಣಿಗೆ.

ಸಹಸ್ರ ಸಹಸ್ರ ಜನರ ಕಾಲ್ತುಳಿತದಿಂದ ಏಳುತ್ತಿದ್ದ ಧೂಳಿನೊಡನೆ, ಪಶ್ಚಿಮಕ್ಕೆ ಬೇಗ ಬೇಗನೆ ತೆರಳುತ್ತಿದ್ದ ರಾನ ಹೊಂಗಿರಣಗಳು ಕಣ್ಣು ಮುಚ್ಚಾಲೆಯಾಡಿದುವು.

ಪಲ್ಲಕಿಯಲ್ಲಿ ಕುಳಿತಿದ್ದ ಹೇಪಾಟ್ ದೂರದಲ್ಲಿ ಗುಡ್ಡದ ಮೇಲಿದ್ದ ಮಂದಿರವನ್ನು ನೋಡಿದ. ಅರ್ಚಕನ ಗತಿ ಏನಾಗಿದೆಯೊ ? ಅವನನ್ನು ಕರೆಸಬೇಕು—ಎಂದುಕೊಂಡ. ಕತ್ತಲಾಗುವುದರೊಳಗೆ ಆಕ್ರಮಣ ಮುಗಿಯಿತಲ್ಲ ಸದ್ಯಃ ಎಂದು ಸಮಾಧಾನ ಪಟ್ಟ.

ಬಕಿಲ ಯೋಚಿಸಿದ : ಬಯಲಿನಲ್ಲಿರುವ ಜನಸಮುದಾಯವನ್ನು ದೇವತಾಮೂರ್ತಿಯೂ ಮಹಾ ಅರ್ಚಕರೂ ಮಣಿಸುತ್ತಾರೆ. ಅವರ ರಕ್ಷಣೆಗೆ ಕೆಲವರನ್ನು ಬಿಟ್ಟು ಉಳಿದೆಲ್ಲ ಸೈನಿಕರು ರಾಜಗೃಹವನ್ನು ಸುತ್ತುವರಿಯುವಂತೆ ಮಾಡಬೇಕು. ಅಲ್ಲಿ ಸಂಪತ್ತು ಇದ್ದೀತು....ಸಾಧ್ಯವಾದರೆ....ಕತ್ತಲಾದ ಮೇಲೆ ಮಹಾ ಅರ್ಚಕರನ್ನು ದೇವಮಂದಿರಕ್ಕೆ ಕಳುಹಿಸಿಬಿಡಬೇಕು.... ಆಗ—ಆಗ....

ನುಟ್‌ವೋಸ್ ಸಂತೃಪ್ತ. ಅಬ್ಬುಯಾತ್ರೆಯಲ್ಲಿ ಪೆರೋನ ಪಲ್ಲಕಿ ಹೊತ್ತು ಅದೃಷ್ಟಶಾಲಿಯಾದ ಮೇಲೆ ಒಂದು ವರ್ಷ ಕಾಯಬೇಕಾಯಿತು ಈ ಸುದಿನಕ್ಕಾಗಿ. ಮಹಾ ಅರ್ಚಕರನ್ನೇ ಈಗ ತಾನು ಆಶ್ರಯಿಸಬೇಕು: ಗೇಬು ಮತ್ತೆ ಇಲ್ಲಿಗೆ ಬರುವುದು ಸುಳ್ಳು. ತಾನೇ ಯಾಕೆ ಪ್ರಾಂತಪಾಲ ನಾಗಬಾರದು ?

ಎರಡು ಕಡೆಗಳ ಜಯಕಾರಗಳೂ ನಿಂತುವು. ದೇವತಾಮೂರ್ತಿಯ ಮುಂದೆಯೂ ಹಿಂದೆಯೂ ಸದ್ದಿಲ್ಲದೆ ನಡೆಯುತ್ತಿದ್ದ ರಾಜಭಟರನ್ನು ಕಂಡು, ಬಯಲಿನಲ್ಲಿದ್ದ ಜನಜಂಗುಳಿ ತೆಪ್ಪಗೆ ನಿಂತಿತು........

ಸೆನು, ಮತ್ತು ಸ್ನೊಫ್ರು ಬಟಾನನ್ನು ಹತ್ತಿರಕ್ಕೆ ಕರೆದರು. ಸೆನು ಅಂದ :

"ಹಿಂದಿನ ಬಾಗಿಲಿನಿಂದ ಓಡು. ನೆಫಿಸ್, ರಾಮೆರಿ ಇವರಿಗೆ ಸಿಗದಂತೆ ನೋಡಿಕೊ."

ಅಲ್ಲಿಯೇ ಇದ್ದ ಮೆನ್ನನನ್ನು ನೋಡಿ ಸ್ನೊಫ್ರು ನುಡಿದ :

"ಅಯ್ಯ, ಬಟಾನ ಜತೆ ನೀವೂ ಹೋಗಿ."

ಬಟಾ ಮತ್ತು ಮೆನ್ನ ಅವಸರ ಅವಸರವಾಗಿ ರಾಜಗೃಹವನ್ನು ಬಳಸಿ ಹಿತ್ತಿಲಬಾಗಿಲ ಕಡೆಗೆ ಹೋದುದನ್ನು ಬಟಾನ ಅಂಬಿಗರು ನೋಡಿದರು. ಅವರೂ ದೂರದಿಂದ ಆ ಇಬ್ಬರನ್ನು ಹಿಂಬಾಲಿಸಿದರು.

ರಾಜಗೃಹದ ಕೊಳದ ಬಳಿ ನಿಂತು ಎಲ್ಲವನ್ನೂ ನೋಡುತ್ತಿದ್ದ ಶಿಲ್ಪಿ ನೆಖೆನ್‌ನ ಗಮನಕ್ಕೆ ಇದು ಬಿತ್ತು. ಅಂಬಿಗರು ಹೋದ ದಿಕ್ಕಿನಲ್ಲಿ ಅವನೂ ಹೆಜ್ಜೆ ಇಟ್ಟ.

ಎರಡು ಕ್ಷಣ ತಡವಾಗಿದ್ದರೆ ಆ ಆವರಣದಿಂದ ಅವರು ಹೊರಬೀಳು ವುದು ಸಾಧ್ಯವಾಗುತ್ತಿರಲಿಲ್ಲ. ಬಕಿಲನ ಸೂಚನೆಯಂತೆ ಪೆರೋನ ಸೈನಿಕರು ರಾಜಗೃಹವನ್ನು ಸುತ್ತುಗಟ್ಟಿದರು.

ರಾಜಗೃಹದ ಎದುರಿಗಿದ್ದ ಉದ್ಯಾನ ನೋಡಿ ಹೇಪಾಟ್‌ಗೆ 'ಎಲಾ !' ಎನಿಸಿತು. ಶಿಸ್ತು ಸಾಧನೆ ಕಂಡು, "ಇವರು ಪ್ರಚಂಡರು" ಎಂದು ತೋರಿತು. ಆತನೆಂದುಕೊಂಡ : ಈಗಲೇ ಬಗ್ಗು ಬಡಿಯದೆ ಇದ್ದಿದ್ದರೆ ಇವರು ಒಂದೆರಡು

ವರ್ಷಗಳಲ್ಲೇ ಅದನ್ನುರಾಗ್ತಿದ್ದರು; ಇಡಿಯ ಐಗುಪ್ತವನ್ನೇ ವ್ಯಾಪಿಸುವಷ್ಟು ಉಗ್ರವಾಗಿತ್ತು ಈ ವಿಷ; ಐಗುಪ್ತ ಸಮಾಜವನ್ನು, ದೇಶವನ್ನು ತಾನು ರಕ್ಷಿಸಿ ದಂತಾಯಿತು ; ಮಹಾ ಅರ್ಚಕ ರಾಷ್ಟ್ರ ರಕ್ಷಕ....

ಎಲ್ಲರಿಗಿಂತ ಎತ್ತರದಲ್ಲಿ ಮೆರೆಯುತ್ತಿತ್ತು ಪ್‌ಟಾ ದೇವಮೂರ್ತಿಯ ಭವ್ಯಾಕಾರ. ಹೆಚ್ಚುಕಡಿಮೆ ಊರಿನ ದೇವಮಂದಿರದ ಮೂರ್ತಿಯದೇ ರೂಪ. ಆದರೆ ಅದಕ್ಕಿಂತ ದೊಡ್ಡದು. ಹೆಚ್ಚು ಸಮರ್ಥರಾದ ಬಡಗಿಗಳು ಕಡೆದದ್ದು.

ಮಹಾ ಅರ್ಚಕ ಪೀಠದಿಂದ ಇಳಿದ. ದೇವತಾಮೂರ್ತಿಯನ್ನೂ ರಾಜಗೃಹದ ಎದುರು ಕೆಳಗಿಡಲು ಹೇಳಿದ. ಪಿಸುದನಿ ಹಾವಾಗಿ ಬಯಲಿನಲ್ಲಿ ಹರಿಯಿತು : 'ಹೇಪಾಟ್ !' 'ಹೇಪಾಟ್ !'

ಇಡಿಯ್ಣ ಜನಸಮುದಾಯವೇ ಮಂಡಿಯೂರಿತು. ಹೇಪಾಟ್‌ಗೆ ಹರ್ಷ–ಸಿಟ್ಟು ಎರಡೂ. ತೊಡೆಗಿಸ್ಟು ಬಾಣ ತಗಲಿತೆಂದು ಕಳ್ಳ ಇನೇನಿ ದೋಣಿಯಲ್ಲೇ ಕುಳಿತ. ಅವನ ಮೂಲಕ ಹೇಳಿಸಬಹುದಾಗಿದ್ದ ಮಾತು ಗಳನ್ನು ಈಗ ತಾನೇ ಆಡಬೇಕಲ್ಲ....ಆ ಬಕಿಲನೋ ರಾಜಗೃಹವನ್ನು ಆಕ್ರಮಿ ಸಲು ಹೊರಟೇ ಬಿಟ್ಟ.

ನುಟ್‌ಮೋಸ್‌ಗೆ ಸನ್ನೆ ಮಾಡಿ ಕರೆದು ಹೇಪಾಟ್ ಅಂದ :

"ಆ ಇನೇನಿ ಬೇಕು. ತಕ್ಷಣ ಕರೆತಾ...."

"ಗೇಬು ಉಪಯೋಗಿಸ್ತಿದ್ದ ಒಂದು ಪಲ್ಲಕಿ ಇತ್ತು. ನೋಡ್ತೇನೆ...." ಎನ್ನತೊಡಗಿದ ನುಟ್‌ಮೋಸ್.

ಹೇಪಾಟ್ ಗದರಿದ :

"ಪಲ್ಲಕಿ ಇಲ್ಲವಾದರೆ ತಲೆಯಮೇಲೆ ಹೊತ್ಕೊಂಡು ಬಾ...."

ಇನೇನಿಯ ಭಾರ ಹೊತ್ತವನು ಕುಸಿದುಬಿದ್ದು ಸಾಯುವುದು ಖಂಡಿತ. ನುಟ್‌ಮೋಸ್ ರಾಜಗೃಹದೊಳಕ್ಕೆ ಧಾವಿಸಿದ. ಅದೃಷ್ಟಶಾಲಿ. ಪಲ್ಲಕಿ ಅಲ್ಲಿತ್ತು....

ಕಿರಿಯ ದೇವಸೇವಕರೆಲ್ಲ ಒಟ್ಟಿಗೆ ಪ್‌ಟಾ ಸ್ತೋತ್ರವನ್ನು ಹಾಡುವಂತೆ ಮಹಾ ಅರ್ಚಕ ಸೂಚಿಸಿದ.

ಸ್ತೋತ್ರ ಗಾನದ ಮಧುರ ಅಲೆಗಳಿಗೆ ಕಿವಿಗೊಡುತ್ತ ಮಂತ್ರಮುಗ್ಧ ರಂತೆ ಜನರು ಮಂಡಿಯೂರಿ ಹಾಗೆಯೇ ಇದ್ದರು. ಅವರಲ್ಲಿ ಹಲವರ ಕೈ ಗಳಲ್ಲಿನ್ನೂ ಸಾವಿನ ಊಟವಿತ್ತು. ಅದನ್ನವರು ನಡುವಸ್ತ್ರದ ಮಡಿಕೆಗಳ ಮರೆಗೆ ತಳ್ಳಿದರು.

ಸ್ತೋತ್ರಗಾನ ನಡೆದಿದ್ದಂತೆ ಹೇಪಾಟ್ ಬಕಿಲನನ್ನು ಕರೆದ; ಪಿಸುದನಿ ಯಲ್ಲಿ ನಿರ್ದೇಶಗಳನ್ನಿತ್ತ :

"ಹಿರಿಯರ ಸಮಿತಿ ಸದಸ್ಯರನ್ನೂ ಇತರ ಪ್ರಮುಖರನ್ನೂ ಹಿಡಿದು ಹಾಕು. ರಾ ಅಸ್ತಮಿಸಿದ ಮೇಲೆ ದೇವಮಂದಿರದಲ್ಲಿ ವಿಶೇಷ ಪೂಜೆ. ಊರಿನ ಎಲ್ಲ ಜನ ಅಲ್ಲಿಗೆ ಬರಬೇಕೂಂತ ಡಂಗುರ ಸಾರಿಸು. ಪೂಜೆಗೆ ಬಂದಾಗ ಹೃಷ್ಟ ಪುಷ್ಟರಾದ ಗಂಡಸರನ್ನೂ ಹೆಂಗಸರನ್ನೂ ಬೇರ್ಪಡಿಸಿ ಸೆರೆ ಹಿಡೀಬೇಕು. ಒಟ್ಟು ಹತ್ತು ಸಾವಿರ ದಾಸದಾಸಿಯರಾದರೂ ಇಲ್ಲಿಂದ ಗುರುಮನೆಗೆ ಸಿಗಬೇಕು."

ವಿನೀತನಾಗಿ ಬಕಿಲ ಕೇಳಿದ :

"ದಂಡಿಗೆ ಯೋಧರು ?"

"ನಾಳೆಯಿಂದ ಪ್ರಾಂತದ ಒಳನಾಡಿನಲ್ಲಿ ಸಂಚಾರಮಾಡಿ, ಬೇಕಾದವ ರನ್ನು ಆರಿಸಿಕೊ."

"ಎಲ್ಲರನ್ನೂ ಕ್ಷಮಿಸಿದ್ದೇವೆ ಅಂತ ತಾವು ಅಪ್ಪಣೆ ಕೊಡಿಸಿದರೆ ಪ್ರತಿ ಭಟನೆ ಇರೋದಿಲ್ಲ.

"ಹಹ್ಹ ! ರಾಜನೀತಿ ಪಾಠ ಹೇಳಿಕೊಡ್ತಿದೀಯೇನೊ ಭಡವಾ ?"

"ತಪ್ಪಾಯಿತು."

"ಯಾರೂ ಪ್ರತಿಭಟಿಸೋದಿಲ್ಲ. ಹೃಷ್ಟಪುಷ್ಟರನ್ನು ಬಂಧಿಸೋದಕ್ಕೆ ಅರ್ಧ ದಂಡು ದೇವಮಂದಿರದಲ್ಲಿ ಬಿಡು. ಕೆಲವರು ಇಲ್ಲಿರಲಿ. ಉಳಿದವರು ನೀರಾನೆ ಪಟ್ಟಣಕ್ಕೆ ಬೆಂಕಿ ಹಚ್ಚಲಿ. ಈ ಸಲದ ಫಸಲೂ ಅಷ್ಟೆ. ಇದು ಪಾಪದ ಬೆಳೆ. ಪಟ್ಟಣದ ಸುತ್ತ ಮತ್ತು ಒಳನಾಡಿನಲ್ಲಿ ಒಂದು ಹೊಲದಲ್ಲೂ ಕುಯಿಲು ಬೇಡ. ಬೆಂಕಿ ಹಚ್ಚಿ ಸುಟ್ಟುಬಿಡಿ."

"ಆಗಲಿ. ನುಟ್‌ಮೋಸ್ ತನಗೆ ಅದು ಬೇಕು ಇದು ಬೇಕು ಅಂತ ಕೇಳಬಹುದು."

"ತೆಪ್ಪಗಿರಬೇಕೂಂತ ಅವನಿಗೆ ಹೇಳು. ಭೂಮಾಲಿಕರ ರಾಸುಗಳು ಎಷ್ಟೂಂತ ವಿಚಾರಿಸಿ ಕೊಟ್ಟ್ಬಿಡು. ಹತ್ತು ಹತ್ತು ಜನ ಜೀತದವರನ್ನು ಕೊಡು. ಹ್ಞ. ಆ ನೀರಾನೆ ಕ್ರಿಮಿ ವಿಷಯ. ಶವಕ್ಕೆ ಭದ್ರ ಕಾವಲಿಡೋದು ಆ ಮೂರ್ಖ ಅಮಾತ್ಯನಿಂದ ಆಗದೆ ಹೋಯ್ತು. ಆ ಶವ ನನಗೆ ಬೇಕು. ಕತ್ತರಿಸಿ ಮೊಸಳೆಗಳಿಗೆ ಎಸೀಬೇಕು. ಹುಡುಕು. ಗೋರಿ ಪ್ರದೇಶದಲ್ಲಿ ಇದ್ದೀತು. ಆ ಹುಚ್ಚ ಮೆನ್ನ ಇಲ್ಲಿದ್ದಾನೇಂತ ತೋರ್ತ್ತದೆ. ಇನೇನಿ ಬಂದ್ರೂಕ್ಡ್ಲೆ ಹೇಳು. ಗುರುತಿಸ್ತಾನೆ. ಹಿಡೀಬೇಕು.... ಈ ಊರಿನ ಮಂದಿರದ ಅರ್ಚಕನ ಗತಿ ಏನಾಯ್ತು ? ಷತ್ತನೊ ? ಮಂದಿರಕ್ಕೆ ಸೈನಿಕರನ್ನು ಕಳಿಸು....ಹೋಗು....ಹೋಗು...."

ಬಕಿಲ ರಾಜಗೃಹದತ್ತ ಓಡುತ್ತಲೇ, ಹೇಪಾಟ್ ಕಿರಿಯ ದೇವಸೇವಕ ರತ್ತ ತಿರುಗಿ, "ಸ್ತೋತ್ರಗಾನ ನಿಲ್ಲಿಸ್ಬೇಡಿ. ಒಂದಾದ ಮೇಲೊಂದು ಹಾಡ್ತಾ ಹೋಗಿ," ಎಂದ.

ಮಂಡಿಯೂರಿ ತಲೆಬಾಗಿದವರು, ತಮ್ಮನ್ನು ಆವರಿಸಿದ ಮೋಡಿಯಿಂದ ಹೊರಬರಲಾಗದೆ ಹಾಗೆಯೇ ಕುಳಿತರು.

ದೇವತಾಮೂರ್ತಿಯ ಮುಗ್ಗುಲಲ್ಲಿ ಬೆಳ್ಳಿಯ ಹಿಡಿಯ ಅಧಿಕಾರದ ಕೋಲನ್ನು ಹಿಡಿದು ನಿಂತ ಹೇಪಾಟ್‌ಗೆ ತೋರಿತು :

'ಇದು ಭಕ್ತಿಯ ಕಾಳು ತಿನ್ನಲೆಂದು ಹೊಲಕ್ಕೆ ಎರಗಿರುವ ಹಕ್ಕಿಗಳ ಹಿಂಡು.'

*   *   *   *

ಅಪೆಟ್‌ನನ್ನು ಕರೆತರಲು ದೇವಮಂದಿರಕ್ಕೆ ಧಾವಿಸಿದ ಹತ್ತುಜನ ರಾಜ ಭಟರನ್ನು ಮಂದಿರದ ಮಹಾದ್ವಾರದಲ್ಲಿದ್ದ ನೀರಾನೆ ಪ್ರಾಂತದ ಯೋಧ ಧ್ವಯರು ಇದಿರಿಸಿದರು.

"ಯಾರು ನೀವು ?"

"ನೀವು ಯಾರು ?"

ಅಪೆಟ್ ತಲೆ ಹೊರಹಾಕಿ, "ನಾನು ಅರ್ಚಕ. ನನ್ನನ್ನು ಬಿಡಿಸ್ಕೊಳ್ಳಿ. ಬೆಳಗ್ಗೆಯಿಂದ ಬಂಧನದಲ್ಲಿದ್ದೇನೆ," ಎಂದು ಕೂಗಿ ಹೇಳಿದ. ರಾಜಬೀದಿ

ಯಿಂದಲೂ ರಾಜಗೃಹದಿಂದಲೂ ಕೇಳಿ ಬಂದಿದ್ದ ಸದ್ದುಗಳು, ಬಾಗಿಲ ಸಂದಿಯಿಂದ ಕಾಣಿಸಿದ ಇಣಿಕು ನೋಟ ಅಪೆಟ್‌ಗೆ ಹರ್ಷ ಉಂಟುಮಾಡಿದ್ದುವು. ಅಂಥ ದಿನ ಉಪವಾಸವೆ? ವಸತಿಯಲ್ಲಿ ಸಿದ್ಧವಾದ ಅಡುಗೆ ಪಾರ್ಶ್ವದಾರಿಯಾಗಿ ಗರ್ಭಗುಡಿಗೆ ಬಂತು. ಅದನ್ನು ದೇವರ ಪಾದಗಳ ಬಳಿ ಇಟ್ಟು ಅಪೆಟ್ ಊಟಮಾಡಿದ.

ಅಂತೂ ರಾಜಧಾನಿಯಿಂದ ವಿಮೋಚನೆಯ ದಂಡು ಬಂದೇಬಿಟ್ಟಿತು.

ಖ್ನೆಮ್‌ಹೊಟೆಪ್ ಬಿಟ್ಟುಹೋಗಿದ್ದ ಯೋಧರೆಂದರು :

"ಒಂದು ಹೆಜ್ಜೆ ಮುಂದಿಟ್ಟರೆ ಬಾಣಪ್ರಯೋಗಿಸ್ತೇವೆ."

"ಹತ್ತು ಬಿಲ್ಲುಗಳಿಗೆ ವಿರುದ್ಧವಾಗಿ ಎರಡು ಬಿಲ್ಲು? ಹುಚ್ಚಪ್ಪಗಳಿರಾ ದೇವರ ಮುಂದೆ ಕಾದಬೇಡಿ," ಎಂದ ಅಪೆಟ್.

ಹತ್ತು ಜನ ರಾಜಭಟರಲ್ಲಿ ಒಬ್ಬ ಅಪೆಟ್‌ಗೆಂದ :

"ಮಹಾ ಅರ್ಚಕರು ಕರೀತಿದ್ದಾರೆ. ನೀವು ತಕ್ಷಣ ರಾಜಗೃಹಕ್ಕೆ ಹೋಗ್ಬೇಕಂತೆ."

ಆ ಇಬ್ಬರು ದಿನವಿಡೀ ಅಲ್ಲಿ ನಿಂತಿದ್ದರು. ಬಿಸಿಲಲ್ಲಿ, ಮಂದಿರದ ನೆರಳಲ್ಲಿ. ಕೆಳಗೆ ಊರಲ್ಲಿ ಏನಾಯಿತೆಂಬುದನ್ನು ಪೂರ್ತಿಯಾಗಿ ಊಹಿಸಿಕೊಳ್ಳುವುದು ಅವರಿಂದ ಆಗಿರಲಿಲ್ಲ. ಆದರೂ ಹೊತ್ತು ಕಳೆದಂತೆ ಆಧೈರ್ಯ ಕಾಡತೊಡಗಿತು.

ಅಪೆಟ್‌ನ ಹೆಂಡತಿ "ರೊಟ್ಟಿ ಕೊಡ್ತೇನೆ. ಉಣ್ತೀರಾ?" ಎಂದಳು.

ಯೋಧರು ನಿರಾಕರಿಸಿದ್ದರು.

ರಾಜಭಟನೊಬ್ಬ ಅಂದ :

"ನಿಮ್ಮ ದಂಡು ನುಚ್ಚುನೂರಾಯ್ತು. ಐವತ್ತರ ಶ್ರೇಷ್ಠರು ಸತ್ತರು. ದಳಪತಿ ಸೆರೆಸಿಕ್ಕಿದ್ರು. ನೀವೀಗ ನಮಗೆ ಶರಣಾಗಿ!"

ಆ ಇಬ್ಬರು ಯೋಧರು ಶರಣಾಗತರಾಗಲಿಲ್ಲ. ಬಾಣಗಳನ್ನು ಪ್ರಯೋಗಿಸಿ ಆ ಹತ್ತು ಜನರಲ್ಲಿ ಇಬ್ಬರನ್ನು ನಾಶಗೊಳಿಸಿದರು. ಪ್ರತಿಯಾಗಿ ಬಂದ ಹತ್ತು ಬಾಣಗಳಿಗೆ ಬಲಿಯಾದರು.

ಅಪೆಟ್ ಅಂದ :

"ಛೆ! ಛೆ! ಇದೊಳ್ಳೇ ಫಜೀತಿ. ಈ ಸತ್ತವರನ್ನು ಇಲ್ಲಿಂದ ಎಳೆದು ಹಾಕೀಪ್ಪಾ. ಬಾಣ ತಗಲಿದವರಿಗೆ ನನ್ನ ಹೆಂಡತಿ ಶುಶ್ರೂಷೆ ಮಾಡ್ತಾಳೆ. ನನ್ನ ಮಗನಿಗೂ ವೈದ್ಯಿಕೆ ಬರ್ತದೆ. ನೀವು ಒಂದು ನಾಲ್ಕು ಜನ ನನ್ನ ಜತೆ ಬನ್ನಿ(ಪ್ಪಾ. ನನಗೇನೂ ಹೆದರಿಕೆ ಇಲ್ಲ. ಒಬ್ಬನೇ ಹೋಗಬಲ್ಲೆ. ಆದರೂ—"

ಅಪೆಟ್ ಬೇಗಬೇಗನೆ ರಾಜಗೃಹದತ್ತ ಹೆಜ್ಜೆ ಇರಿಸಿದ. ವೇಗ ಜಾಸ್ತಿಯಾಗಿ ಏದುಸಿರು ಬಿಡತೊಡಗಿದ. ನಿಧಾನಿಸಿದ. ಬಯಲು ಹತ್ತಿರ ಬಂದೊಡನೆ ಮತ್ತೆ ಓಡತೊಡಗಿ, "ಪೆರೋನ ಆಯುರಾರೋಗ್ಯ ವರ್ಧಿಸಲೀ!" ಎನ್ನುತ್ತ, ಮಹಾ ಅರ್ಚಕನ ಮುಂದೆ ಬೋರಲು ಬಿದ್ದು, ಒಂದು ಕೈಯಿಂದ ಹೇಪಾಟ್‌ನ ಪಾದವನ್ನೂ ಇನ್ನೊಂದರಿಂದ ಮಹಾ ಅರ್ಚಕನ ಅಧಿಕಾರದ ಕೋಲನ್ನೂ ಹಿಡಿದುಕೊಂಡ.

"ಏಳು," ಎಂದ ಹೇಪಾಟ್.

ಹರ್ಷಾಶ್ರು ಸುರಿಸುತ್ತ ಅಪೆಟ್ ಏಳುವುದಕ್ಕೂ ಪಲ್ಲಕಿಯಿಂದ ನಾಲ್ಕು ಹೆಜ್ಜೆ ದೂರದಲ್ಲೇ ಇಳಿದು ಇನೇನಿ ಮತ್ತು ನುಟ್‌ಮೋಸ್ ನಡೆದು ಬರುವುದಕ್ಕೂ ಸರಿ ಹೋಯಿತು.

ಇನೇನಿಯ ತೊಡೆಯಿಂದ ಇನ್ನೂ ರಕ್ತ ಒಸರುತ್ತಿದ್ದುದನ್ನು ಕಂಡು ಮಹಾ ಅರ್ಚಕನ ಸಿಟ್ಟು ತುಸು ತಣಿಯಿತು. ಇನೇನಿ ಮತ್ತು ಅಪೆಟ್ ಪರಸ್ಪರ ನೋಡದೆ ಅದೆಷ್ಟು ವರ್ಷಗಳಾಗಿದ್ದುವು! ರಾಜಧಾನಿಯಲ್ಲಿ ಮಹಾ ಅರ್ಚಕನಿಗೆ ಹತ್ತಿರದ ಪ್ರತಿಷ್ಠಿತನಾಗಿದ್ದ ಮಿತ್ರರ ಪಕ್ಕಕ್ಕೆ ಹೋಗಿ ಅಪೆಟ್ ಮೌನವಾಗಿ ನಿಂತ. ಕುಶಲ ಪ್ರಶ್ನೆಗಳನ್ನಾಡಲು ಯೋಗ್ಯ ಸನ್ನಿವೇಶ ಅದಲ್ಲವಲ್ಲ.

ಮಹಾ ಅರ್ಚಕನಿಂದ ಆಜ್ಞಪ್ತನಾಗಿ ಇನೇನಿ ಜನಸ್ತೋಮವನ್ನು ಉದ್ದೇಶಿಸಿ ನುಡಿದ :

"ಇಲ್ಲಿ ಕೇಳಿ! ನಮ್ಮ ದೇಶದ ಶ್ರೇಷ್ಠತಮ ಧರ್ಮಗುರು ಹೇಪಾಟ್‌ರವರು ನೀರಾನೆ ಪ್ರಾಂತದ ಪ್ರಜೆಗಳ ದೈವಭಕ್ತಿಯನ್ನು ಕಂಡು ಪರಮ ಸಂತುಷ್ಟರಾಗಿದ್ದಾರೆ."

ಹೇಪಾಟ್ ಬಲತೋಳನ್ನೆತ್ತಿದ. ಇನೇನಿ ಮುಂದುವರಿದ :

"ಮಹಾ ಅರ್ಚಕರು ನಿಮ್ಮನ್ನೆಲ್ಲ ಆಶೀರ್ವದಿಸಿದ್ದಾರೆ. ನೀವೆಲ್ಲ ಇನ್ನು ಏಳಬಹುದು."

ಜನಸಮುದಾಯ ಎದ್ದು ನಿಂತು ಉಸಿರಾಡಿತು.

ಅಪೆಟ್‌ನನ್ನು ಕರೆದು ಇಳಿದನಿಯಲ್ಲಿ ಹೇಪಾಟ್ ಕೆಲವು ಸೂಚನೆಗಳ ನ್ನಿತ್ತ. ಅವುಗಳನ್ನು ಆಧರಿಸಿ ಅಪೆಟ್ ಗಟ್ಟಿ ಧ್ವನಿಯಲ್ಲಿ ಅಂದ:

"ನಮ್ಮೆಲ್ಲರ ಮಹಾ ಕುರುಬನೇ ಇಲ್ಲಿಗೆ ಬರುವುದರ ಬದಲು ಮಹಾ ಅರ್ಚಕರು ದಯಮಾಡಿಸಿದ್ದಾರೆ. ಇದು ಧರ್ಮಸಂಸ್ಥಾಪನಾ ಕಾರ್ಯ. ಸ್ವಲ್ಪ ಕಾಲ ಸೆತ್‌ನ ಆರಾಧನೆಯನ್ನು ನಾವು ಮಾಡಿದ್ದು ನಿಜ. ನಮ್ಮ ಆ ತಪ್ಪುಗಳನ್ನು (ಜನಸಮುದಾಯದಲ್ಲಿ ಹಲವರಿಗೆ 'ಯಾವ ತಪ್ಪುಗಳು?' ಎಂದು ಕೇಳಬೇಕೆನ್ನಿಸಿತು. ಆದರೆ ಗಂಟಲು ಕಟ್ಟಿದಂತಾಗಿ ಮಾತು ಇಂಗಿತು.) ಮಹಾ ಅರ್ಚಕರು ದೊಡ್ಡ ಮನಸ್ಸು ಮಾಡಿ ಮನ್ನಿಸಿದ್ದಾರೆ. ಮಹಾದೇವ ಪ್ಟಾನ ಜತೆ ನಮ್ಮೂರಿನ ಬಡ ದೇವಮಂದಿರದಲ್ಲಿ ಮಹಾ ಅರ್ಚಕರು ಈ ರಾತ್ರೆ ಮತ್ತು ನಾಳೆ ವಸತಿ ಮಾಡ್ತಾರೆ. ಮಂದಿರದಲ್ಲಿ ಈ ರಾತ್ರೆ ವಿಶೇಷ ಪೂಜೆ. ನೀರಾನೆ ಪಟ್ಟಣದ ಭಕ್ತಾದಿಗಳಿಗೆಲ್ಲ ಅವರು ಹಿತವಚನ ಹೇಳ್ತಾರೆ. ದೈವಭೀರುಗಳಾದ ಸಜ್ಜನರಾದ ನೀವು ಯಾರೂ ರಾಜಧಾನಿಯ ದಂಡಿಗೆ ಹೆದರಬೇಕಾಗಿಲ್ಲ. ನಮ್ಮೂರಿಗೆ ಪರಿಚಿತರಾದ ಬಕಿಲರೇ ದಂಡನಾಯಕರಾಗಿ ಬಂದಿದ್ದಾರೆ.

ಹೇಪಾಟ್ ಮತ್ತೊಮ್ಮೆ ತೋಳನ್ನೆತ್ತಿ, "ನೀವಿನ್ನು ಹೊರಡಬಹುದು" ಎಂದ.

"ನೀವಿನ್ನು ಚೆದರಬಹುದು," ಎಂದು ಅಪೆಟ್ ಗಟ್ಟಿಯಾಗಿ ಪುನರುಚ್ಚರಿಸಿದ....

ಬಯಲು ನಿರ್ಜನವಾಗತೊಡಗಿತು. ಬಕಿಲ ಬಂದು ಅರಿಕೆ ಮಾಡಿದ:

"ಹಿರಿಯರ ಸಮಿತಿಯ ಸೆಮ, ಹೆಮೊನ್, ಥಾನಿಸ್ ಮತ್ತು ಹೆಮ್ಟಿ ಇವರನ್ನು ಬಂಧಿಸಿದ್ದೇನೆ. ಹೆಮ್ಟಿ ನಿವೃತ್ತ ಸೈನಿಕ. ಇಲ್ಲಿನವರಿಗೆ ಯುದ್ಧ ವಿದ್ಯೆ ಕಲಿಸಿದವನು. ಅವನಿಗೆ ತಮ್ಮ ಅನುಮತಿ ಇಲ್ಲದೆಯೇ ಕೊಠಡಿಯಲ್ಲಿ ಕೂಡ ಹಾಕಿ ಚಾವಟಿಯ ರುಚಿ ತೋರಿಸಿದ್ದೇನೆ. ಕ್ಷಮಿಸಬೇಕು. ಬೇರೆ

ಮುಖ್ಯಸ್ಥರು : ಕುಶಲ ಕರ್ಮಿ ಸ್ನೊಫ್ರು ಮತ್ತು ರ್‍ಸೈತ ಸೆಬೆಕ್ಪು. ಅವರನ್ನೂ ಲೆಕ್ಕಿಗ ಇಪ್ಯುವರ್‌ನನ್ನೂ ಕಟ್ಟಿಹಾಕಿದ್ದೇನೆ."

ಹೇಪಾಟ್ ನುಟ್‌ಮೋಸ್‌ನನ್ನು ತೋರಿಸಿ ಅಂದ :

"ಭೂಮಾಲಿಕರ ಸಲಹೆ ಪಡೆದು ಬಂಡಾಯಗಾರರು ಬೇರೆ ಯಾರ್‍ನಾದರೂ ಇದ್ದರೆ ಅವರನ್ನು ಹಿಡಿ."

"ಬಟಾ ಒಬ್ಬ ಸಿಕ್ಕಿಲ್ಲ."

"ದೋಣಿಕಾರ ಹುಂ! ಹುಡುಕು! ಆ ನಾಯಕನ ಗೋರಿ ?"

ಅದರ ಶೋಧೆಯನ್ನೂ ನಡೆಸಿದ್ದೇನೆ."

" ನಾವು ದೇವಮಂದಿರಕ್ಕೆ ಹೋಗ್ತೀವೆ. ಆಗ ಹೇಳಿದ್ದೆಲ್ಲ ನೆನಪಿನಲ್ಲಿದೆಯಾ ? "

" ಇದೆ. "

" ಒಳ್ಳೇದು. ನೀನಿಲ್ಲೇ ಇರು.... ಸಂಪತ್ತು ಗಿಂಪತ್ತು ಕಣ್ಣಿಗೆ ಬಿದ್ದಾಗ ಅದೆಲ್ಲಾ ಅರಮನೆ–ಗುರುಮನೆಗಳಿಗೆ ಸೇರಿದ್ದು ಅನ್ನೋದು ನೆನಪಿರಲಿ...."

ಇದ್ದ ಒಂದು ಕಣ್ಣನ್ನೇ ತುಸು ಕಿರಿದುಗೊಳಿಸಿ ಬಕಿಲನೆಂದ :

" ಅಪ್ಪಣೆ........"

*  *  *  *

ಡಂಗುರದವನು ಸಾರಿದ :

" ಮಹಾ ಅರ್ಚಕರು ರಾಜಧಾನಿಯಿಂದ ಬಿಜಯ ಮಾಡಿಸಿದ್ದಾರೆ. ಪ್ ಟಾ ದೇವರಿಗೆ ವಿಶೇಷ ಪೂಜೆ. ಇದು ರಾಜಾಜ್ಞೆಯೆಂದೇ ಪರಿಗಣಿಸಿ ಪ್ರತಿಯೊಬ್ಬರೂ ಕತ್ತಲಾದ ಮೇಲೆ ದೇವಮಂದಿರಕ್ಕೆ ಬರಬೇಕು. "

ರಾಜಗೃಹದ ಸಮೀಪದಲ್ಲಿದ್ದ ತಾಳೆಮರಗಳನ್ನು ಬಕಿಲ ದಿಟ್ಟಿಸಿದ. ಆ ರಾತ್ರಿ ಆ ಮರಗಳಲ್ಲಿ ಒಂದನ್ನೇರಿ ಆ ಮೋಸಗಾರ ತನ್ನದೊಂದು ಕಣ್ಣನ್ನು ಕಿತ್ತಿಟ್ಟ. ಇನ್ನು ಆ ಕುರುಡನೆಂದೂ ಮರ ಏರಲಾರ.

ಈ ಸಿಂಹ ನೀರು ಕುಡಿಯಲೆಂದು ಹಿಂದೆ ಉಳಿದ ಕಿರಿಯ ದೇವಸೇವಕನೊಬ್ಬ ಹೇಳಿದ್ದ: " ಒಕ್ಕಣ್ಣು ಕುರುಡ ಸಿಂಹಕ್ಕೆ ಬಕಿಲ ಅಂತ ಹೆಸರಿಟ್ಟಿದ್ದಾರೆ 'ಖ್ನೆಮ್‌ಹೊಟೆಪ್ ಹೊಡೆದದ್ದು' ಅಂತ ಕೆಳಗೆ ಬರೆದಿದೆ. "

‘ ಖ್ನೆಮ್‌ಹೊಟೆಪ್ ಹೊಡೆದದ್ದು’ ಎಂಬುದನ್ನು ಅಳಿಸಲು ಬಕಿಲ ಆಜ್ಞೆ ಇತ್ತ. ಸಿಂಹದ ಹೆಸರು ಬಕಿಲನೇ. ಯಾಕಿರಬಾರದು ? ಉದ್ಯಾನ ದಿಂದ ಬಗೆ ಬಗೆಯ ಹೂಗಳನ್ನು ಕಿತ್ತು ತಂದು ಹಾರಕಟ್ಟಿ ಸಿಂಹದ ಕೊರಳಿಗೆ ಹಾಕಲು ಆದೇಶವಿತ್ತ.

ಮೇಲುಮಾಳಿಗೆಯ ಮುಖಮಂಟಪದ ತೊಲೆಗೆ ತೂಗಿಕೊಂಡು ಜೇನು ಗಳು ಕಟ್ಟಿದತೊಟ್ಟಿ ಇಳಿಮುಖವಾಗಿ ದೊಡ್ಡದಾಗಿ ಬೆಳೆದಿತ್ತು. ಜೇನು ಹಿಂಡು ವುದರಲ್ಲಿ ನಿಷ್ಣಾತನಾದ ಯೋಧನೊಬ್ಬ, ಸಣ್ಣರಂಧ್ರದ ಬಲೆ ತಂದು ತೊಟ್ಟಿಗೆ ಸುತ್ತಿ, ಇಡೀ ತೊಟ್ಟಿಯನ್ನು ಕಿತ್ತು ತೆಗೆದು, ನೊಣಗಳನ್ನು ಸಾಯಿಸಿ ಜೇನನ್ನು ಹಿಂಡಿ, ಬಿಸಿ ಆರುವುದಕ್ಕೆ ಮುನ್ನವೆ ಬಟ್ಟಲಲ್ಲಿ ಬಕಿಲನಿಗೆ ತಂದು ಕೊಟ್ಟ. ಬಾಯಿ ಚಪ್ಪರಿಸುತ್ತ ಚಪ್ಪರಿಸುತ್ತ ಬಕಿಲ ಅದನ್ನು ಕುಡಿದ. ಬೇಗನೆ ಮತ್ತೇರಿತು.

* * * *

ಹೇಪಾಟ್ ತನ್ನ ಪರಿವಾರದೊಡನೆ ಮಂದಿರ ತಲಪುವ ವೇಳೆಗೆ ರಾ ಪಶ್ಚಿಮ ದಿಗಂತದಾಚೆಗೆ ಮರೆಯಾಗುವ ಸಿದ್ಧತೆಯಲ್ಲಿದ್ದ. ಮಹಾ ಅರ್ಚಕ ಬೇಗನೆ ಪವಿತ್ರ ಕೊಳದಲ್ಲಿ ಮಿಂದು ಸಂಜೆಯ ಪ್ರಾರ್ಥನೆ ಸಲ್ಲಿಸಿ ರಾನನ್ನು ಬೀಳ್ಕೊಟ್ಟ.

ಕಿರಿಯ ದೇವಸೇವಕರು ದುಡಿದರು, ಸೈನಿಕರು ನೆರವಾದರು. ರಾಜಗೃಹ ದಿಂದ ಎಣ್ಣೆ ಹೇರಳವಾಗಿ ಬಂತು. ದೀಪಾಲಂಕಾರದಿಂದ ದೇಗುಲ ಝಗ ಝಗಿಸಿತು.

[ ಮಡಿದಿದ್ದ ಯೋಧರನ್ನಾಗಲೇ ಹಗ್ಗಕಟ್ಟಿ ಗೋರಿಪ್ರದೇಶಕ್ಕೆ ಎಳೆದು ಎಸೆದಿದ್ದರು —ತೋಳ ನರಿಗಳಿಗೆ ಆಹಾರವಾಗಲೆಂದು. ]

ಮೆನೆಪ್‌ಟಾನ ಕಳೇಬರವನ್ನು ಹುಡುಕುತ್ತಿದ್ದವರಿಗೆ ಅಸೆಟ್ ಅಂದ :

“ ನನ್ನನ್ನು ಬಂಧನದಲ್ಲಿರಿಸಿದ್ರಿಂದ ಏನೂ ತಿಳೀದೇ ಹೋಯಿತು ಗೋರಿ ಪ್ರದೇಶಕ್ಕಂತೂ ಅವರ ಮೆರವಣಿಗೆ ಬರಲಿಲ್ಲ. ಎಲ್ಲೋ ಕೇರಿ ಮಧ್ಯ ದಲ್ಲೇ ಮಾಡಿರ್ಬೇಕು. ”

ಮಹಾ ಅರ್ಚಕನ ಹಾಗೆ ಆ ಶವ ದೊರೆತೇ ತೀರಬೇಕೆನ್ನುವ ಹಟ ಬಕಿಲ ನಿಗಿರಲಿಲ್ಲ. ಅರಮನೆಯ ವಧಸ್ಥಾನದಲ್ಲಿ ಈಟಿಎತ್ತಿ ಸನ್ನೆಮಾಡಿ ಆ ನಾಯಕನ ತಲೆ ಕಡಿಸಿದಾಗ ಅವನಿಗೆ ಪೂರ್ತಿ ತೃಪ್ತಿ ದೊರೆತಿತ್ತು. ಜೇನು ಕುಡಿದು ಮತ್ತ ನಾಗಿದ್ದ ಬಕಿಲ, " ಈ ಮಹಾ ಅರ್ಚಕರು ಒಮ್ಮೊಮ್ಮೆ ಅನಗತ್ಯವಾಗಿ ಅತಿ ರೇಕಕ್ಕೆ ಹೋಗ್ತಾರೆ, " ಎಂದು ಗೊಣಗಿದ. " ಊರನ್ನು ಸುಟ್ಟಾಗ ಶವದ ಕಥೆಯೂ ಮುಗೀತದೆ, " ಎಂದ.

ರಾಜಧಾನಿಯ ದಂಡಿನ ನೂರರ ದಳಪತಿಗಳಿಗೆ ಆ ಮಾತು ಕೇಳಿಸಿತು.

ಅವರಲ್ಲಿ ಒಬ್ಬನೆಂದ :

"ದಂಡನಾಯಕರೇ, ಪ್ರತಿ ಮನೆಯನ್ನೂ ಶೋಧಿಸ್ಬೇಕು. "

ಇನ್ನೊಬ್ಬನೆಂದ :

"ಒಳ ನಾಡಿನ ಸಂಚಾರ, ಮರುಪ್ರಯಾಣ—ಇನ್ನೂ ಹತ್ತು ದಿನ ಹಿಡಿಯೋದಿಲ್ವೆ? ಸೈನಿಕರಿಗೆ ಸ್ತ್ರೀ ಸುಖ ಬೇಕು. ಮರೀಬೇಡಿ. ಸೆರೆ ಹಿಡಿದ ಮೇಲೆ ಹೆಂಗಸರನ್ನು ಪ್ರತ್ಯೇಕವಾಗಿಟ್ಟು ಸಂಗಕ್ಕೆ ಅವಕಾಶ ಕೊಟ್ರೂ ಸಾಕು."

"ಹೂಂ. ಹೂಂ. ಜೇನು ಉಳಿದಿರ್ಬೇಕು. ನೀವೂ ಸ್ವಲ್ಪ ತಗೊಳ್ಳಿ."

ಸಿನ್ಯುಹೆ, ತನ್ನ ಹೆಸರು ಹೇಳಿಕೊಂಡು, "ನಾನು ಭೂಮಾಲಿಕ," ಎನ್ನುತ್ತ ಒಳಬಂದ.

ಕಂದಾಯ ವಸೂಲಿಗೆಂದು ಬಂದಿದ್ದಾಗ ನಡೆದಿದ್ದ ಸಭೆಯಲ್ಲಿ ಟೆಹುಟಿ ಕುಳಿತಿದ್ದ ಭಂಗಿಯಲ್ಲೇ ಬಕಿಲ ಈಗ ಆಸೀನನಾಗಿದ್ದ. ಬಂದವನ ಮುಖ ಅಪರಿಚಿತವಾಗಿ ತೋರಲಿಲ್ಲ. ಅವನೆಂದ :

"ನುಟ್‌ಮೋಸ್ ಮಹಾ ಅರ್ಚಕರ ಜತೆ ಮಂದಿರದಲ್ಲಿದ್ದಾರೆ. ನೀವೂ ಅಲ್ಲಿಗೆ ಹೋಗಿ."

"ನನ್ನ ಹೊಲ—ರಾಸು...."

"ನಾಳೆ. ಎಲ್ಲ ನಾಳೆ. ಮಹಾ ಅರ್ಚಕರು ಅದರ ಏರ್ಪಾಟು ಮಾಡ್ತಾರೆ."

ನುಟ್‌ಮೋಸ್ ಬಂದಿದ್ದಾನೆ ಎಂದು ತುಸು ಧೈರ್ಯ ಸಿನ್ಯುಹೆಗೆ. ಆತ ಮಂದಿರದೆಡೆಗೆ ಸಾಗಿದ.

ಆಕ್ರಮಣಕಾರರ ಮುಂದಿನ ಕಾರ್ಯಕ್ರಮ ಏನೆಂಬುದು ಸಭಾಮಂದಿರದ ಮೂಲೆಯ ಕೊಠಡಿಗೆ ತಳ್ಳಲ್ಪಟ್ಟ ಹಿರಿಯರಿಗೆ, ಸ್ನೊಫ್ರು–ಸೆಬೆಕ್ಖು–ಇಪ್ಯುವರ್‌ರಿಗೆ ಸ್ವಲ್ಪ ಸ್ವಲ್ಪವಾಗಿ ತಿಳಿಯಿತು.

ಈಸುವುದು ಒಟ್ಟಿಗೆ; ಮುಳುಗುವುದಿದ್ದರೂ ಒಟ್ಟಿಗೆ. ಸೆಮನಿಗೆ ಅನಿಸಿತು: ಇದು ಮುಳುಗುವ ಹೊತ್ತು. ಹೆಮ್‌ಟೆಯ ಮೈಯಿಂದ ರಕ್ತ ಚಿಮ್ಮುತ್ತಿತ್ತು. ಇಪ್ಯುವರ್ ಅವನ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡ.

ಹೆಮ್‌ಟೆಗೆ ಹೊಡೆಯುತ್ತ ಬಕಿಲ ಕಿರಿಚಿದ್ದ :

“ನಿಮ್ಮ ದಳಪತಿಯ ಎರಡೂ ಕಣ್ಣೂ ಕಿತ್ತಿದ್ದೇನೆ. ಸೆತ್ ನನ್ನಗ !”

ಸೆಬೆಕ್ಖುವಿನ ಮುಖ ಕಪ್ಪಿಟ್ಟಿತು. ಅವನೆಂದುಕೊಂಡ : ‘ಖ್ನೆಮು ನನ್ನ ಅಳಿಯ ಎನ್ನುವುದು ಈ ಸೆತ್‌ಗೆ ತಿಳಿಯದು. ತಿಳಿದಿದ್ದರೆ ನನ್ನನುರ ಹೀಗಳೆದು ಇನ್ನಷ್ಟು ಕುಣಿದಾಡುತ್ತಿದ್ದ.’ ಸ್ವಂತದ ಬಗೆಗೆ ಅವನು ಯೋಚಿಸಲಿಲ್ಲ. ಆದರೆ, ತಬಬುವಾಳ ನೆನಪು ಗರಿಗೆದರಿತು. ನೆಫಿಸ್‌ಜತೆ ಇದ್ದಿಬಹುದು. ಖ್ನೆಮು ಮನೆಯಲ್ಲಿ ತನ್ನ ಮಗಳು ಒಬ್ಬಳೇ ಇರುವಳೇನೊ ? ಅವರಿಗೇನಾದರೂ ಅಪಾಯ ? ಸೆಬೆಕ್ಖು ಒಬ್ಬನೇ ಅಲ್ಲ, ಉಳಿದ ಯಾರೂ ಸ್ವಂತದ ಚಿಂತೆಯಿಂದ ತೊಳಲಲಿಲ್ಲ. ಸೆಮನ ಮಗ—ಆಗಲೇ ಮಧ್ಯ ವಯಸ್ಸು ದಾಟಿದವನು—ಒಳನಾಡಿನಲ್ಲಿ ರೈತನಾಗಿದ್ದ. ಸೆಮನ ವೃದ್ಧ ಪತ್ನಿ ಅವನೊಂದಿಗಿದ್ದಳು. ಹೆಮೊನ್–ಥಾನಿಸರ ಪತ್ನಿಯರೂ ವಯಸ್ಸಾದವರು. ಮಕ್ಕಳು ದೊಡ್ಡವರು. ಉಳಿದ ಜನತೆಗೆ ಒದಗಿದ ಕಷ್ಟ ಇವರಿಗೂ. ಸ್ನೊಫ್ರು ಹಂಬಲಿಸಿದ : ನೆಜಮುಟ್ ನೆಫಿಸ್ ಜತೆಗೇ ಇರಲಿ. ಅಹೂರಾ, ಅನ್ಪುವಿನ ವಿಧವೆ, ನೆಫರುರಾ—ಅವರೂ ಅಲ್ಲಿದ್ದಾರೆ ಪುಟ್ಟ ರಾಮೆರಿ ಕೂಡಾ.... ಅವರನ್ನೆಲ್ಲ ಬಟಾ ರಕ್ಷಿಸುವುದು ಸಾಧ್ಯವಾದರೆ—....ಇವರು ಊರಿಗೆ ಬೆಂಕಿ ಹಚ್ಚುತ್ತಾರೆ. ಹೊಲಗಳನ್ನು ಸುಡುತ್ತಾರೆ. ಅದಕ್ಕೆ ಮುಂಚೆ—ಅದಕ್ಕೆ ಮುಂಚೆ—....ಇಪ್ಯುವರ್‌ನ ತಾಯಿ, ಹೆಂಡತಿ, ತಂಗಿ, ಮಕ್ಕಳು—ಎಲ್ಲರೂ ಬಯಲಿನಲ್ಲಿ ಸಾವಿನ ಊಟದ ರೊಟ್ಟಿ ತಟ್ಟಲು ಕುಳಿತಿದ್ದರು. ಅವರನ್ನೆಲ್ಲ ಈಗ ಹಿಡಿದು ಕಟ್ಟಿರಬಹುದು. ದಂಡೆಯ ಮೇಲೆ ಮೂಡಿದರಂತಲ್ಲ ? ಹಾಗೆ

ಬಲೆಗಳಡಿಯಲ್ಲಿ ಇಟ್ಟಿರಬಹುದು. ....ಬೆಳಿಗ್ಗೆ ಮೆನೆಪ್‌ಟಾ ಅಣ್ಣನ ಲೇಪಿತ ಶವವನ್ನು ಕಂಡು ತಾನು ರೋದಿಸಿದ ಕ್ಷಣದಿಂದ ಈ ಮುಚ್ಚಂಜೆಯ ವರೆಗೆ ಎಷ್ಟೊಂದು ಘಟನೆಗಳಾದುವು ! ಎಷ್ಟೊಂದು—ಒಂದೇ ಹಗಲಿನಲ್ಲಿ....!

ಬಕಿಲನಿಗೆ ಇವತ್ತು ಇರುಳಿನ ಭಯವಿಲ್ಲ. ಆದರೂ—ರಾಜಗೃಹದ ತುಂಬ ದೊಡ್ಡ ಸಣ್ಣ ದೀಪಗಳನ್ನು ಉರಿಸಲು ಆತ ಆಜ್ಞೆ ಇತ್ತ.

ತನ್ನ ವಿಶಿಷ್ಟ ಬಂದಿಗಳಿದ್ದ ಕೊಠಡಿಯ ಬಾಗಿಲಲ್ಲಿ ನಿಂತು ಬಕಿಲ ಕೇಳಿದ :

"ಸಂಪತ್ತು ಎಲ್ಲಿಟ್ಟಿದ್ದೀರಿ ?"

ಇಪ್ಯುವರ್ ಹೆಮ್‌ಟೆಯ ಕೆನ್ನೆಯನ್ನು ತನ್ನ ಅಂಗೈಯಿಂದ ಮುಚ್ಚಿ ಉತ್ತರವಿತ್ತ :

"ಸ್ವಲ್ಪ ಕೆಳಗಿದೆ, ಸ್ವಲ್ಪ ಮೇಲ್ಮಾಳಿಗೆಯಲ್ಲಿದೆ. ಸಂಪತ್ತು ಅಂದರೆ ಧಾನ್ಯ ಕಣಜಗಳು, ಎಣ್ಣೆಗಳು, ಕೆಫ್ಟು ವರ್ತಕ ಕೊಟ್ಟ ಕಾಣಿಕೆ, ಪೆಪ್ಪೈರಸ್ ಹಾಳೆಗಳು, ವಿಕ್ರಯಕ್ಕೆಂತ ಶೇಖರಿಸಿರುವ ಸಾಮಗ್ರಿಗಳು, ಕೊಂಡುಕೊಂಡ ವಸ್ತುಗಳು.... ಲೆಕ್ಕದ ಹಾಳೆಗಳು ಮೇಲೆ ಪೆಟಾರಿಯಲ್ಲಿವೆ."

"ಹುಚ್ಚ ! ಅದಲ್ಲ ಸಂಪತ್ತು. ಬಂಗಾರ ಬೆಳ್ಳಿ ಆಭರಣ...."

ಸ್ನೊಫ್ರು ಅಂದ :

"ದಂಡನಾಯಕರೇ ! ಇದು ಕೊಳ್ಳೆ ಹೊಡೆಯುವವರ, ಗೋರಿಕಳ್ಳರ ರಾಜ್ಯವಲ್ಲ !"

"ಏಯ್ ಮುಚ್ಚುಬಾಯಿ !"

ಹೆಮ್‌ಟೆಯು ಗಂಟಲಿನಿಂದ ವಿಚಿತ್ರ ಸದ್ದುಗಳು ಬರತೊಡಗಿದುವು. ಇಪ್ಯುವರ್ ಗಾಬರಿಗೊಂಡ.

"ಸ್ನೊಫ್ರು ಅಣ್ಣ....ಕೇಳಿಸಿತಾ? ಹೆಮ್‌ಟೆ ಮಾವ ನಮ್ಮನ್ನು ಬಿಟ್ಟು ಹೋಗ್ತಿದ್ದಾರೆ."

ಉಳಿದವರೆಲ್ಲ ಇಪ್ಯುವರ್‌ನ ಬಳಿ ಸಾರಿದರು.

ಬಕಿಲ ಗರ್ಜಿಸಿದ :

"ಏನದು ?"

ಹೆವ್ಮ್‌ಟಿಯ ಎರಡು ಕೈಗಳೂ ನೀಳವಾಗಿ ಚಾಚಿಕೊಂಡವು. ಬಾಯಿ ತೆರೆದುಕೊಂಡಿತು. "ರಾ," ಎಂದಂತಾಯಿತು ಆತ.

ಸೆಬೆಕ್ಕು ಕೂಗಾಡಿದ:

"ಸೆತ್! ಸೆತ್! ನಮ್ಮ ಹೆವ್ಮ್‌ಟೀನ ಬಲಿ ತಗೊಂಡೆ!"

"ಜೋಕೆ! ನಿನ್ನನ್ನೂ ಈಗ ಮುಗಿಸೇನು!" ಎಂದು ಅರಚಿ, ಬಕಿಲ ದೂರ ಸರಿದ.

ಅಗಲಿದ ಬಂಧುವನ್ನು ನೆಲದ ಮೇಲೆ ಮಲಗಿಸಿದರು. ಹೆಪ್ಪುಗಟ್ಟಿದ ಎಲ್ಲರ ಶೋಕ ತುಸು ದ್ರವಿಸಿತು. ಆ ಹನಿಗಳು ಹೆವ್ಮ್‌ಟಿಯ ಮೈಗೆ ಕಾಣಿಕೆ ಯಾದುವು.

ಅನುಜ್ಞೆಗಳಿಗೆ ಸೈನಿಕರ ಓಡಾಟಗಳಿಗೆ ಬಹಳ ಹೊತ್ತು ಕಿವಿಗೊಟ್ಟ ಮೇಲೆ ಸ್ನೊಫ್ರು ಅಂದ:

"ಮಂದಿರದಲ್ಲೀಗ ದಾಸದಾಸಿಯರನ್ನಾಗಿ ಮಾಡಲು ನಮ್ಮವರನ್ನು ಸೆರೆಹಿಡೀತಾರೆ. ಬಲೆಗಳ ಒಳಗಿನ ಹಕ್ಕಿಗಳಾಗ್ತಾರೆ ನಮ್ಮ ಜನ. ನಾವೂ ಅವರ ಜತೆ ಇರಬೇಕಾಗಿತ್ತು....ಅವರೀಗ ಸಾಮಾನ್ಯ ಬಂದಿಗಳಾಗ್ತಾರೆ. ನಾವೊ ರಾಜಬಂದಿಗಳೆನಿಸಿಕೊಳ್ತೀವೆ. ಹೀಗಾಗಬಾರದು....ನಾಳೆಯಾದರೂ ಸರಿಯೆ ಹೇಗಾದರೂ ಮಾಡಿ ನಾವು ಅವರನ್ನು ಸೇರಿಕೊಳ್ಬೇಕು.

ಎಲ್ಲರಿಗೂ ಸಮ್ಮತವಾದ ವಿಚಾರಗಳೇ. ಯಾರೂ ಹೂಂ ಎನ್ನ ಬೇಕಾಗಿರಲಿಲ್ಲ.

* * * *

ವಿಶೇಷ ಪೂಜೆ ಮಂದಿರದಲ್ಲಿ ನಡೆಯುತ್ತಿದ್ದಂತೆ, ರಾಜಧಾನಿಯ ಸೈನಿಕ ರಿಂದ ಕೊಳ್ಳೆ ಹೊಡೆಯುವ ಅತ್ಯಾಚಾರ ನಡೆಸುವ ಆಟ ಆರಂಭವಾಯಿತು. ಆದರೆ ಕತ್ತಲು. ಪಂಜು ಹಿಡಿದುಕೊಂಡು ನೆಗೆದಾಡಿದರು. ಒಂದೆಡೆ ಯಿಂದ ಮನೆಗಳ ಶೋಧೆ ಮುಗಿದಂತೆ ಭಾವಣಿಗಳಿಗೆ ಕೊಳ್ಳಿ ಇಡತೊಡ ಗಿದರು.

ಕೆಡವಿದ ಪ್ರಾಣಿಯನ್ನು ಬೇಯಿಸುತ್ತ ಆ ಬೆಂಕಿಯ ಸುತ್ತಲೂ ನಡೆದ ಕಿರಾತ ನರ್ತನವಾಯಿತು ಅದು.

* * * *

ಬಟಾ ಮೆನ್ನನೊಡನೆ ಮೆನೆಪ್‌ಟಾನ ಮನೆಗೆ ಬಂದಾಗ ಚೆನ್ನಾಗಿ ಕತ್ತಲಾಗಿತ್ತು. ಹೋರಾಟದ, ಪರಾಭವದ, ಅನರ್ಥ ಪರಂಪರೆಯ ಸುದ್ದಿಗಳು ಬಂದು ತಲಪಿದ್ದುವು. ಯಾರಾದರೂ ಬರಬಹುದೆಂಬ ಆಸೆಯಿಂದ ರಾಮೆರಿಪ್‌ಟಾ ಬಾಗಿಲ ಸಂದಿಯಿಂದ ನೋಡುತ್ತ ನಿಂತಿದ್ದ. ಹೆಂಗಸರೆಲ್ಲ ತಾವಿನ್ನು ಬಂದಿಗಳಾಗ್ತೇವೆ ಎಂದುಕೊಂಡಿದ್ದರು. ಆಕ್ರಮಣಕಾರರ ಬರವಿಗಾಗಿ ಕಾದಿದ್ದರು.

ಆದರೆ ಬಂದುದು ಬಟಾ, ಮೆನ್ನಯ್ಯ....

ಬಟಾನೆಂದ : "ಹೊರಡಿ, ಬಟ್ಟೆಗಳನ್ನು ಹೊದ್ದುಕೊಳ್ಳಿ. ನನ್ನ ಹಿಂದೆ ಬನ್ನಿ.

ನೆಫಿಸ್, ಅಹೂರಾ, ಅವಳ ಹೆಣ್ಣುಮಗು, ರಾಮೆರಿ, ನೆಜಮುಟ್, ನೆಫರುರಾ, ತಬಬುವಾ ಅವರ ಮಗಳು (ಕರೆದುಕೊಂಡು ಬಂದಿದ್ದಳು), ಅನ್ಪುವಿನ ವಿಧವೆ, ಬಟಾನ ಹೆಂಡತಿ, ಮಕ್ಕಳಲ್ಲಿ ಒಬ್ಬ ಹುಡುಗ ಒಬ್ಬಳು ಹುಡುಗಿ (ಓ! ಓ!)....

ಮತ್ತೆ ಬಟಾ ಅಂದ :

"ಹೊರಡಿ! ಹೊರಡಿ!"

ಹೊರಗಿನ ಕತ್ತಲಲ್ಲಿ ಸಂದಿ ಗೊಂದಿಗಳನ್ನು ಹಾದು, ಹೊಲಗಳನ್ನು ದಾಟಿ ನದಿಯ ದಂಡೆಗೆ.

ಈ ತಂಡಕ್ಕೆ ಹಿಂದಿನಿಂದ ರಕ್ಷಕರಾಗಿ ಬಂದರು ಬಟಾನ ಅಂಬಿಗರು.... ದೂರದಲ್ಲಿದ್ದ ನೆಖೆನ್.

ಹಪುವಿನ ಮನೆ ಉರಿಯುತ್ತಿತ್ತು. ಅದರಾಚೆಗಿನ ಸಾಲಿಗೂ ಬೆಂಕಿ ಬಿದ್ದಿತ್ತು. ಮೆನೆಪ್‌ಟಾನ ಗೋರಿಯ ಸುತ್ತಲೂ ಬೆಂಕಿಯ ನಾಲಿಗೆಗಳು.

ಉರಿಯ ಪ್ರಭೆಯಿಂದ ಆದಷ್ಟು ದೂರ ಕತ್ತಲೆಯಲ್ಲೇ ಇರುತ್ತ ದಕ್ಷಿಣಾಭಿಮುಖವಾಗಿ ಈ ಜನ ನಡೆದರು. ಹೊಲಗಳನ್ನು ದಾಟಿದರು. ನದಿಯ ದಂಡೆಯನ್ನು ಮುಟ್ಟಿದರು.

ಬಟಾ ಅಂದ :

"ಈ ಕತ್ತಲೇಲಿ ಬಚ್ಚಿಟ್ಟುಕೊಳ್ಳಿ. ಮೆನ್ನ ನಿಮ್ಮ ಜತೆ ಇರ್‍ತಾನೆ. ನಾನೂ ಅಂಬಿಗರೂ ದೋಣಿಕಟ್ಟೆಗೆ ಹೋಗಿ ನಮ್ಮ ದೋಣಿ ತರ್‍ತೇವೆ...."

ಎತ್ತರದ ಆಕೃತಿ ಬಟಾನನ್ನು ಸಮಿಾಪಿಸಿತು.

ನೆಖೆನ್ ಕೇಳಿದ :

“ ಈ ಪ್ರಾಂತದಲ್ಲಿ ನಾನು ಮಾಡುವಂಥದು ಈಗ ಏನೂ ಉಳಿದಿಲ್ಲ ನೀವು ಹೋಗುವಲ್ಲಿಗೆ ನಾನೂ ಬರಲಾ ? ”

ಆತನಿಗೆ ಉತ್ತರವೀಯದೆ ನೆಫಿಸಳಿಗೆ ಬಟಾನೆಂದ :

“ನೆಫಿಸ್ ಅತ್ತಿಗೆ, ನೆಖೆನ್ ಮಾವನೂ ಮೆನ್ನಯ್ಯನ ಜತೆ ಇಲ್ಲಿ ಇರ್ತಾರೆ. ನಾವು ಬಂದ್ಬಿಡ್ತೇವೆ. ”

ದೋಣಿಕಟ್ಟೆಯ ದಿಕ್ಕಿಗೆ, ಉತ್ತರಕ್ಕೆ, ಬಟಾನೂ ಅಂಬಿಗರೂ ನಡೆದರು.. ಕಟ್ಟೆಯಲ್ಲಿ ಎರಡು ದೊಡ್ಡ ದೋಣಿಗಳಿದ್ದುದು ಮಸಕಾಗಿ ದೂರದಿಂದ ಕಂಡಿತು. ಅವುಗಳ ಮಧ್ಯೆ ಇರಬೇಕು ಅವರ ದೋಣಿ.

ಬಟಾ ಮತ್ತು ಅಂಬಿಗರು ನೀರಿಗಿಳಿದರು. ನಡುನದಿಯವರೆಗೂ ಈಸಿ ಹೋದರು. ಪ್ರವಾಹವನ್ನು ಅನುಸರಿಸಿದರು. ಕಟ್ಟೆ ಇದ್ದಲ್ಲಿಗೆ, ಎಡಕ್ಕೆ ಹೊರಳಿದರು....

ಮಹಾ ಅರ್ಚಕರ ದೋಣಿ ಬರಿದಾಗಿತ್ತು. ಅದನ್ನು ಕಟ್ಟೆಯ ಕಂಬಕ್ಕೆ ಕಟ್ಟಿದ್ದರು. ಮೇಲುಗಡೆ ದಂಡೆಗೆ ತಗಲಿದ್ದುದು ಹೇರುದೋಣಿ. ದೂರದಲ್ಲಿ ಯಾರೋ ಮರದ ಕೆಳಗೆ ಕುಳಿತು ಮಾತನಾಡುತ್ತಿದ್ದರು. ಅರ್ಥವಾಗದ ಧ್ವನಿಗಳು.

ಬಟಾ ತನ್ನ ದೋಣಿಯ ಮಗ್ಗುಲಿಗೆ ಬಂದು,ತೆವಳಿ ಮೇಲಕ್ಕೇರಿದ. ಒಬ್ಬ ಅಂಬಿಗನನ್ನು ಕರೆದಕೊಂಡ. ಆವನು ಇನ್ನೊಬ್ಬನನ್ನು. ಬಟಾ ಮತ್ತಿಬ್ಬರನ್ನು. ಇನ್ನು ಹುಟ್ಟು ಹಾಕಬೇಕು....

ಮರದ ಕೆಳಗಿಂದ ಗದರಿಕೆಯ ಧ್ವನಿ ಬಂತು :

“ ಯಾರಪ್ಪಾ ಅದು ದೋಣಿ ಮುಟ್ತಿರೋದು ? ”

ಬಟಾನ ಉಸಿರಾಟ ನಿಂತಿತು. ಅಂಬಿಗರು ಕಂಗಾಲಾದರು.

ಅಷ್ಟರಲ್ಲಿ ಕಟ್ಟೆಯ ಸಮಿಾಪದಿಂದಲೆ ಪ್ರಶ್ನೆಗೆ ಉತ್ತರ ಬಂತು.

“ ನಾನು ಕಣಪ್ಪೋ. ಈ ಸುಡುಗಾಡು ದೋಣಿ ಒಂದು ಅಡ್ಡವಾಗಿದೆ. ಆಚೆಗೆ ಸರಿಸ್ತಿದ್ದೇನೆ. ”

ಬಟಾಗೆ ಆಶ್ಚರ್ಯ ! ಯಾರಿದು ? ಏನಿದು ?

ಕರಿಯ ಆಕೃತಿ ಹತ್ತಿರ ಬಂತು. ಅಂಬಿಗ ಗೂಟದಿಂದ ಕಟ್ಟು ಬಿಚ್ಚು ತ್ತಿದ್ದುದನ್ನು ಒಂದು ಕೈ ತಡೆಯಿತು.

ಅಡ್ಡಿಮಾಡುತ್ತಿದ್ದಾನೆ. ಬಟಾ ಅತ್ತ ಸರಿದ. ಅವನ ಗಂಟಲು ಹಿಚುಕಲೆ ?

ಕೇಳಿಯೂ ಕೇಳಿಸದ ಪಿಸುದನಿ ನುಡಿಯಿತು :

"ನಿಮ್ಮ ದಳಪತೀನ ಇಲ್ಲಿ ಬಯಲಲ್ಲಿ ಕೆಡವಿದ್ದಾರೆ. ಜೀವ ಇದೆ. ತಗೊಂಡು ಹೋಗಿ."

ಬಟಾಗೆ ದಿಗ್ಭ್ರಮೆ; ಹರ್ಷಾತಿರೇಕ. ಮಾತನಾಡುವಂತಿಲ್ಲ. ಆತ ತೋಳು ಗಳನ್ನು ಚಾಚಿದ. ಕರಿಯ ಆಕೃತಿ ಪ್ರಯಾಸಪಟ್ಟು ಏನನ್ನೋ ಹೊತ್ತು ತಂದಿತು. ಬಟಾನೂ ಅಂಬಿಗರೂ ಅದನ್ನು ಪಡೆದರು. ಬಲೆಯೊಳಗಿದ್ದುದು ಮಿಸುಕಿತು.

ಆ ಆಕೃತಿಯೇ ಗೂಟಕ್ಕೆ ಕಟ್ಟಿದ್ದ ಹಗ್ಗವನ್ನು ಬಿಚ್ಚಿತು. ಪುನಃ ಮೊದಲಿನಂತೆಯೇ ಪಿಸುನುಡಿಯಿತು :

"ಅಮನ್ ದೇವರು ಕಾಪಾಡ್ತಾನೆ. ಹೋಗಿ.... ನಾನು ಶೀಬಾಳ ಗಂಡ...."

ಅವನನ್ನು ತಬ್ಬಿಕೊಳ್ಳಬೇಕು, ಅಳಬೇಕು ಎನಿಸಿತು ಬಟಾಗೆ. ಅಂಬಿ ಗರು ಕನಿಷ್ಠ ಸದ್ದಾಗುವಂತೆ ಹುಟ್ಟುಹಾಕಿದರು. ದೋಣಿ ನಡುನೀರನ್ನು ತಲಪಿ ದಕ್ಷಿಣಕ್ಕೆ ಹೊರಳಿತು.

ನಕ್ಷತ್ರಗಳ ಮಬ್ಬು ಬೆಳಕು.

ಅವರು ಕಾಯುತ್ತ ಕುಳಿತಿದ್ದರು. ದೋಣಿ ದಡ ಮುಟ್ಟಿದೊಡನೆ ನೆಫಿಸ್‌ಳನ್ನು ಎಚ್ಚರಿಕೆಯಿಂದ ಅದರೊಳಕ್ಕೆ ಇಳಿಸಿದರು. ಉಳಿದವರೂ ಇಳಿದರು. ಹಾಯಿಯನ್ನು ಏರಿಸಿದ್ದಾಯಿತು. ನಾಯಕನ ಕಳೇಬರವನ್ನು ಮಲಗಿಸಿದ್ದ ಜಾಗದಲ್ಲಿದ್ದ ದಳಪತಿ. ಬಟಾ ದೋಣಿಯ ಸಾಮಾನುಗಳ ಮೂಲೆಯಲ್ಲಿದ್ದ ಬಾಕು ಬಳಸಿ ಬಲೆಯನ್ನು ಕತ್ತರಿಸಿದ. ಖ್ನೆಮು ಕೈಕಾಲು ಗಳನ್ನು ಚಾಚುವುದು ಸಾಧ್ಯವಾಯಿತು. ಪಿಸುದನಿಗಳು. ಕನಸಿನ ಮಾತು ಗಳು. ಮೂರ್ಛೆ ತಿಳಿದು ಎದ್ದವನಂತೆ ಖ್ನೆಮು, "ನೀರು, ನೀರು" ಎಂದ. ಅಂಗೈಯನ್ನು ಬೊಗಸೆಮಾಡಿ ನದಿಯಿಂದ ನೀರನ್ನೆತ್ತಿ ಬಟಾ ಖ್ನೆಮ್ ಹೊಟೆಪ್‌ಗೆ ಕುಡಿಸಿದ.

ಧ್ವನಿಯನ್ನು ಗುರುತಿಸಿದ ಖ್ನೆಮ್‌ಹೊಟೆಪನ ಹೆಂಡತಿ "ಅಮ್ಮ, ಅಮ್ಮ" ಎಂದಳು. ತಬಬುವಾಗೂ "ನೀರು" ಎಂದವನು ತನ್ನ ಅಳಿಯನಲ್ಲವೆ ಎನಿಸಿತ್ತು.

ಬಟಾನೆಂದ :

"ನಮ್ಮ ಖ್ನೆಮು. ನಿದ್ರಿಸಲಿ. ಅವನಿಗೆ ವಿಶ್ರಾಂತಿ ಬೇಕು. ತಂಗಿ, ನಿನ್ನ ಗಂಡನ ತಲೇನ ತೊಡೆಯ ಮೇಲಿಟ್ಟುಕೋ."

* * * *

ಊರನ್ನು ಬಿಟ್ಟು ದೂರ ಹೋಗುತ್ತಿದ್ದವರು ಹೊರಳಿನೋಡಿದರು. ಪಟ್ಟಣದಿಂದ ಅಗ್ನಿಜ್ವಾಲೆಗಳು ಆಕಾಶಕ್ಕೆ ಏರುತ್ತಿದ್ದಂತೆ ಕಂಡಿತು. ಸುತ್ತಲಿನ ಹೊಲಗಳೂ ಉರಿಯುತ್ತಿದ್ದುವು. ಉರಿದು ಕರಕಾಗುತ್ತಿದ್ದುವು. ತೆನೆಭಾರ ದಿಂದ ಬಾಗಿದ್ದ ಸಸಿಗಳು.

ತಬಬುವಾಳ ಮಗಳು ಗಂಡ ದೊರೆತನೆಂದು ಹರ್ಷಿತಳಾದರೂ, ಉರಿಯು ತ್ತಿದ್ದ ಊರನ್ನು ಕಂಡು ಅತ್ತಳು.

"ನಮ್ಮ ಯಾವ ದುಃಖವೂ ಅತ್ತು ಮುಗಿಯುವಂಥದೇ ಅಲ್ಲ," ಎಂದ ಬಟಾ.

ಹಾಯಿ ಕಂಬಕ್ಕೊರಗಿ ನಿಂತು ಮೆನ್ನ ಹೇಳಿದ :

"ಬಾನನ್ನು ಮೋಡ ಆವರಿಸಿದೆ. ನಕ್ಷತ್ರಗಳು ಕೆಳಕ್ಕೆ ಸುರಿಯುತ್ತಿವೆ. ಬಾಣಗಳನ್ನು ಎಸೆಯುತ್ತಿದ್ದಾರೆ. ಭೂಮಿದೇವತೆಯ ಮೂಳೆಗಳು ಕಂಪಿಸು ತ್ತಿವೆ. ಬಾನಿನ ಬಾಗಿಲುಗಳನ್ನು ಮುಚ್ಚಿರೋ ಮುಚ್ಚಿರಿ !"

ಧ್ವನಿಯಲ್ಲಿ ಇಂಗದ ಅಳಲು, ಕೊನೆಗಾಣದ ಯಾತನೆ.

ನೆಖೆನ್ ಉಗುಳುನುಂಗಿದ.

## ೧೭

ಬಳಲಿಕೆಯನ್ನು ಅರಿಯದ ಅಂಬಿಗರು, ಬಟಾನ ಸಹಾಯಕರು. ತುಂಬಿ ಕೊಂಡ ಹಾಯಿ. ವೇಗವರ್ಧನಕ್ಕಾಗಿ ದುಡಿದ ಹುಟ್ಟುಗಳು.

ಬಟಾ ಹಾಯಿಕಂಬವನ್ನು ಸಮೀಪಿಸಿ, ಮೆನ್ನನ ಹತ್ತಿರ ನಿಂತ. ಕೈಯಿಂದ ತಮ್ಮ ದೋಣಿಯನ್ನು ಹೊರತರಲು, ಶೀಬಾಳ ಗಂಡ ನೆರವಾದುದನ್ನು ಮೆನ್ನನಿಗೆ ತಿಳಿಸಿದ.

ಇಳಿದನಿಯ ಮಾತುಕತೆ.

"ತಾವು ನೋಡೋಕೂ ಮುಂಚೆಯೇ ಶೀಬಾಳಿಗೆ ನಾಯಕರು 'ಮಹಾತಾಯಿ' ಅಂತ ಹೆಸರಿಟ್ಟಿದ್ರು," ಎಂದ ಮೆನ್ನ.

"ಖ್ನೆಮುವನ್ನು ಎತ್ತಿಕೊಟ್ಟದ್ದೂ ಶೀಬಾಳ ಗಂಡನೇ."

"ಹೋರಸ್‌ನ ಬಲವಿರಬೇಕು ಅವನ ತೋಳುಗಳಲ್ಲಿ."

"ಈ ಸಲ ನಮ್ಮ ಪಯಣದ ಸುಳಿವು ಯಾರಿಗೂ ಸಿಗೋದಿಲ್ಲ. ಬೆಂಕಿಯಲ್ಲಿ ನಾವೆಲ್ಲ ಸುಟ್ಟು ಹೋದೆವೂಂತ ಅವರು ತಿಳಕೋತಾರೆ."

"ಶರೀರ ನಷ್ಟವಾದರೂ ಮತ್ತೆ ರೆಕ್ಕೆ ಬಡಿಯುವ ಬೆನ್ನು ಪಕ್ಷಿಗಳು ನಾವು...."

ಮೌನ. ನಿಟ್ಟುಸಿರು. ಪುನಃ—

"ಖ್ನೆಮು ಕಣ್ಣಿನ ವಿಷಯ...."

"ಬೆಳಿಗ್ಗೆ ಎಲ್ಲಾದರೂ ನಿಲ್ಲಿಸ್ತೇವಲ್ಲ.... ಆಗ ಕಣ್ಣುಗಳಿಗೆ ಔಷಧಿ ಹಾಕೋಣ. ಗಾಯ ಬೇಗನೆ ಗುಣವಾಗ್ತದೆ."

"ದೃಷ್ಟಿ."

"ತ್ರಿವಿತದ ಆಳ ತೀಕ್ಷ್ಣತೆ ಎರಡೂ ನೋಡಿದ್ಮೇಲೆ ಹೇಳ್ತೇನೆ."

ಮತ್ತೆ ಸುಮ್ಮನಿದ್ದ ಬಳಿಕ....

"ಅಣ್ಣನ ಗೋರಿ ಅವರು ಕಂಡುಹಿಡೀಲಾರರು."

"ಅಗ್ನಿಗೆ ಆಹುತಿಯಾದ ಊರಿನಲ್ಲಿರೋ ಗೋರಿ. ಹೌದು. ಅವರ ಕಣ್ಣಿಗೆ ಅದು ಬೀಳಲಾರದು."

"ಅಯ್ಯ! ಶವಲೇಪನದ ವಿಷಯ ತಿಳಿದಾಗ ಮಹಾ ಅರ್ಚಕನಿಗೋ ಆ ಇನೇನಿಗೋ ನಿಮ್ಮ ಮೇಲೆ ಸಂಶಯ ಬರಬಹುದು."

"ಹೀಗಾಯಿತಲ್ಲಾ ಅಂತ ಇನ್ನು ತಮಗೆ ತಾವೇ ಬರೆ ಎಳೆದುಕೊಳ್ಳಿ! ....ಅಂದಹಾಗೆ ಬಟಾ ಅಣ್ಣ. ಇನ್ನು ಈ ಅಯ್ಯತನ ಸಾಕು. ನನ್ನನ್ನು ಬರೇ ಮೆನ್ನ ಅಂತ ಕರಿ."

"ನಾನು ಒಬ್ಬ ಹಾಗೆ ಕರೆದು ಏನು ಪ್ರಯೋಜನ ? ಹೆಂಗಸರು ನಿಮ್ಮನ್ನು ಮೆನ್ನ ಅಂತ ಕರೆದಾರಾ ? ನೀವು ಮಂತ್ರ ಹೇಳೋದು ಬಿಟ್ಟರೂ ನಮಗೆಲ್ಲ ನೀವು ಮೆನ್ನಯ್ಯನೇ—ಯಾವಾಗಲೂ ಮೆನ್ನಯ್ಯನೇ."

ಮಂಪರು—ನಿದ್ದೆಗಳ ನಡುವೆ ಖ್ನೆಮ್‌ಹೊಟೆಪನ ನರಳಾಟ ಕೇಳಿಸುತ್ತಿತ್ತು. ಜತೆಗೆ ಅವನ ಪತ್ನಿಯ ಸಂತೈಸುವ ಧ್ವನಿ....

ಅಹೂರಾಳ ಮಾತು ಕೇಳಿಸುತ್ತಿತ್ತು :

"ನೆಫಿಸ್ ಅಕ್ಕ. ಮುಜುಗರ ಆಗ್ತಿದ್ಯಾ ? ಬೇಕಾದರೆ ಆ ಕಡೆ ತಿರುಗಿ ಮಲಕ್ಕೋ. ಹೀಗೆ ಒರಗಿಕೋ."

ನೆಫಿಸ್ ಕನಸು–ನೆನಪುಗಳ ಮಾಲೆ ಪೋಣಿಸುತ್ತಿದ್ದಳು ಅವ್ಯಾಹತವಾಗಿ.

ತಾಯಿಯ ಸಾವು, ಚಿಕ್ಕಮ್ಮನ ಹಳ್ಳಿಯಲ್ಲಿ ಕಂದಾಯ ವಸೂಲಿ. 'ಎಲ್ಲಿ ನಿನ್ನಮ್ಮ ?' 'ನನ್ನಮ್ಮ ಸತ್ಹೋದ್ಲು.' ಅಬ್ಟುವಿನಲ್ಲಿ ಕರಡಿ ಜತೆ ಕುಣಿದ ಆ ಹುಡುಗಿ.... ಸಹ ಯಾತ್ರಿಕರಿಗೆ ತಾನು ತೆರೆದು ತೋರಿಸಿದ ಲಿಪಿ ಸುರುಳಿ. 'ಒಂದು ಬಾತುಕೋಳಿ, ಒಂದು ರೊಟ್ಟಿ, ಒಂದು ಚೀಲ ಕೊಟ್ಟಿ.' ತಮ್ಮ ಬದುಕಿನಲ್ಲಿ ಸಿರಿವಂತಿಕೆಯ ಖರೀದಿ ಎಂದರೆ ಅದೊಂದೇ. ತಮ್ಮ ಹೊಲ ಉಳಲು ತಮ್ಮದೇ ಆದ ಒಂದು ಜತೆ ಹೋರಿ. ಯಾವುದರಲ್ಲೂ ಅವಸರವಿಲ್ಲ ಮೆನೆಪ್‌ಟಾಗೆ.... ನಾಳೆ–ನಾಳೆ.... ಐಸಿಸ್ ದೇವತೆಯ ನಕ್ಷತ್ರವಾದ ಸೊಥಿಸ್ ಉದಿಸಿದ ಆ ರಾತ್ರೆ.... ಸಾರವತ್ತಾದ ತನ್ನ ನೆಲ. ಅವನು ಬಿತ್ತಿದ ಬೀಜ. ಮಹಾಪೂರ.... ಮುಂದೆ ರಾಜಧಾನಿಗೆ ಹೋದ. ಎಲ್ಲರೂ ಅಂದರು : 'ಕುಯಿಲಿನ ಹೊತ್ತಿಗೆ ನಾಯಕರು ಬಂದ್ಬಿಡ್ತಾರೆ.' 'ಹೆರಿಗೆಯ ವೇಳೆಗೆ ಬರಬೇಕು.' ಆದರೆ ನೀನು ಬರಲಿಲ್ಲ, ಬರಲೇ ಇಲ್ಲ. ಪ್‌ಟಾ.... ಪ್‌ಟಾ.... ಊ ಊ ಊ.'

ನೆಫಿಸ್ ನರಳಿದಳೆಂದು ಅಹೂರಾಗೆ ಆತಂಕ. ಅವಳ ತೋಳನ್ನು ಸವರುತ್ತ ಮೆಲ್ಲನೆ ಕರೆದಳು :

"ಅಕ್ಕಾ, ಅಕ್ಕಾ...."

ಉತ್ತರವಿಲ್ಲ. ನಿದ್ದೆಯಲ್ಲಿ ನರಳುತ್ತಿದ್ದಾಳೆಂದು ಸುಮ್ಮನಾದಳು.

ಅಹೂರಾಗೂ ಯೋಚನೆ ಇತ್ತು. ಗಂಡನದು. ಖ್ನೆಮ್‌ಹೊಟೆಪ್ ಮತ್ತು ಔಟ ದಳದೊಡನೆ ಹೊರಟಾಗ ಅಬ್ಟು ಯಾತ್ರಿಕರೂ ಕೋಲನ್ನೋ

ಕೊರಡನ್ನೋ ಹಿಡಿದು ಅವರನ್ನು ಹಿಂಬಾಲಿಸಿದ್ದರು. ನೆಜಮುಟ್ ಸ್ನೊಫ್ರು ವನ್ನು ನೆನೆದಳು ; ತಬಬುವಾ ಸೆಬೆಕ್ಖುವನ್ನು.

ನೆಫರುರಾ ಗತಕಾಲದಿಂದ ವರ್ತಮಾನ ಕಾಲಕ್ಕೆ ಇಲ್ಲಿಂದ ಅಲ್ಲಿಗೆ ಮನ ಬಂದಂತೆ ಅಲೆಯುತ್ತ ಕುಳಿತಿದ್ದಳು. ದಾಸಿಯಾಗಿದ್ದೆ ; ಅಣ್ಣ ಸ್ವಾತಂತ್ರ್ಯ ನೀಡಿದ ; ಪುನಃ ಬಂಧನಕ್ಕೆ ಸಿಗಲಿಲ್ಲ ; ವಿಮುಕ್ತ ಜೀವಿಯಾಗಿಯೇ ಇದ್ದೇನೆ. ನೀರಾನೆ ಪಟ್ಟಣದ ದಂಡೆಯ ಮೇಲೊಂದು ಭೋಜನ ಮಂದಿರ. ಬರೇ ಕನಸುಗಳು, ಅಲ್ಲ ? ಹಿಂದೆ ನರ್ತನ ಕಲಿಯತೊಡಗಿದಾಗ ಕನಸುಗಳನ್ನು ಕಂಡಿದ್ದಳು ಮುಂದೆ ಕನಸುಗಳಿಗೆ ಅರ್ಥವಿಲ್ಲ—ಎಂದಿತು ಬದುಕಿನ ಕಠೋರತೆ. ಎಲ್ಲರನ್ನೂ ಮನುಷ್ಯರಂತೆ, ಸರಿಸಮಾನರಂತೆ ಕಂಡ ಮೆನೆಪ್‌ಟಾ ಅಣ್ಣನ ಸೇವೆ ಮಾಡಬೇಕು ಎಂಬ ಹಂಬಲ ಉದಿಸಿತ್ತು, ಒಮ್ಮೆ. ಅದು ಅಲ್ಲಿಗೇ ಕಮರಿತು. ಈಗಿನ ಆಸೆ—ನೆಫಿಸಳ ಬಸಿರಲ್ಲಿರುವ ಮೆನೆಪ್‌ಟಾನ ಕುಡಿಗೆ ತಾನು ದಾದಿಯಾಗಬೇಕು. ಆ ಮಗುವಿನ ಮತ್ತು ತಾಯಿಯ ಆರೈಕೆಯಲ್ಲಿ ದೇಹ ಸವೆಸಬೇಕು....

ನೇಕಾರ ಅನ್ಪು ಹುತಾತ್ಮನಾದ ಮೇಲೆ, ನೀರಾನೆ ಪ್ರಾಂತದ ಅವರ ಬುಡಕಟ್ಟು ಹೊಸ ಬದುಕನ್ನು ಆರಂಭಿಸಿದ ಬಳಿಕ, ಅವರ ವಿಧವೆ ಜನ ಮನ್ನಣೆಗೆ ಪಾತ್ರಳಾಗಿದ್ದಳು. ಶಿಲ್ಪಿ ನೆಖೆನ್ ತನ್ನ ಪತಿಯ ಶಿಲ್ಪಾಕೃತಿ ಯನ್ನೇ ನಿರ್ಮಿಸಲು ಹೊರಟಿದ್ದನಲ್ಲ ? ಇನ್ನು ತಾನು ದುಡಿತ ನಿಲ್ಲಿಸಿ ವಿಶ್ರಾಂತಿ ಸುಖ ಅನುಭವಿಸಬೇಕು ; ಹಿರಿಯ ಮಗನಿಗೆ ಮದುವೆ ಮಾಡಿಸಿ ಬಿಟ್ಟರೆ ಇದು ಸಾಧ್ಯ ; ಇನ್ನು ಹುಡುಗರೇ ದುಡಿಯಲಿ—ಎಂದುಕೊಂಡಿದ್ದಳು. ಆದರೆ ಇದ್ದಕ್ಕಿದ್ದಂತೆ.... ನಾಡಿನ ಹಿರಿಯ ಮನುಷ್ಯನ ಮಡದಿ ನೆಫಿಸಳೇ ವಿಧವೆಯಾದಳಲ್ಲ.... ಕಳೆದ ಒಂದು ಹಗಲಿನಲ್ಲಿ, ಆ ಹಗಲು ಇರುಳಾದ ಮೇಲೆ, ಎಷ್ಟೊಂದು ಜನ ವಿಧವೆಯರಾದರೊ.... ನೆಫಿಸಳ ಮನೆಗೆ ತಾನು ಹೋಗದೆ ಇದ್ದಿದ್ದರೆ ತನ್ನನ್ನೂ ಬಂಧಿಸುತ್ತಿದ್ದರು, ಮಕ್ಕಳ ಜತೆ. ಸಾವಿನೂಟದ ಬಯಲಿನಲ್ಲೇ ತನ್ನ ಮಕ್ಕಳನ್ನು ಹಿಡಿದರೇನೋ.... ಅಥವಾ ಆಮೇಲೆಯೊ ? ಇನ್ನು ತೊತ್ತುಗಳಾಗಿ ಇವರು ಬೆಳೆಯಬೇಕು. ಮಹಾಮಂದಿರದಲ್ಲೋ ಮಹಾಮನೆಯಲ್ಲೋ ಸೇವೆ. ಚಿನ್ನದ ಗಣಿಯಲ್ಲಿ ಕೆಲಸ. ಇಲ್ಲವೆ ಗೋರಿ ನಿರ್ಮಾಣಕ್ಷೇತ್ರದಲ್ಲಿ....

ಬಟಾನ ಹೆಂಡತಿಗೆ ನದಿಯೇ ಗಂಡ. ಕೈ ಹಿಡಿದಾಗ ಸಾಮಾನ್ಯ ಅಂಬಿಗನಾಗಿದ್ದ. ಬಾಹುಗಳನ್ನು ದಣಿಸಿ ದಣಿಸಿ ವೆಸಿಯಿಂದ ಒಂದು ದೋಣಿ ಕೊಂಡು ತರಲು ಶಕ್ತನಾದ. ದುಡಿಮೆಗೆ ನಾಲ್ವರನ್ನು ನೇಮಿಸಿಕೊಂಡ. ಅವರ ಒಡೆಯ ತಾನು ಎಂಬಂತೆ ಬಟಾ ನಾಲ್ಕು ದಿನ ವರ್ತಿಸಿದ್ದು ನೆನಪು ನಾಲ್ಕೇ ದಿನ. ಯಜಮಾನನ ಪಾತ್ರ ಬೇಡವೆನಿಸಿರಬೇಕು. ಆ ಅಂಬಿಗರ ಹಿರಿಯಣ್ಣನಾದ, ಸಹೋದ್ಯೋಗಿಯಾದ. ಹೀಗೆ ಸಾಮಾನ್ಯ ಅಂಬಿಗನಾಗ ಬೇಕಾಗಿದ್ದ ತನ್ನ ಗಂಡ ಅಸಾಮಾನ್ಯ ದೋಣಿಕಾರನಾದ. ಅದೆಷ್ಟು ವರ್ಷಗಳಿಂದ ಅದೆಷ್ಟು ಜನ ಅವನ ದೋಣಿಯಲ್ಲಿ ಅಬ್ಟು ಯಾತ್ರೆಗೆ ಹೋಗಿ ಬಂದಿದ್ದರು! [ತಾನೊಬ್ಬಳು ಹೋಗಿಲ್ಲ. ಮಕ್ಕಳನ್ನೂ ಕರೆದುಕೊಂಡು ಹೋಗಬೇಕು; ಮುಂದಿನ ಸಲ ಹೋಗೋಣ—ಮುಂದಿನ ಸಲ, ಎನ್ನುತ್ತ ಕಾಲ ಕಳೆದುಬಿಟ್ಟಿತ್ತು] ಈಗ ಜತೆಯಲ್ಲಿ ಕರೆದುಕೊಂಡು ಬರಲು ಆಗದೇ ಹೋದ ಮಕ್ಕಳು ಮುಂದೆ ಏನಾಗುವರೊ? ಊರು ಉರಿದ ಮೇಲೆ ಉಳಿಯುವುದೇನು? ಮುಂದಿನ ವರ್ಷ ಸೊಥಿಸ್ ಉದಿಸಿದಾಗ ನದಿಯಲ್ಲಿ ನೀರು ತುಂಬಿ, ಉಕ್ಕಿ, ಹೊಲಗಳು ಅಣಿಯಾದಾಗ ಮತ್ತೆ ಬದುಕು ಆರಂಭವಾಗುವುದಿಲ್ಲವೆ? ಆದರೆ ಹೇಗೆ? ಪುನಃ ಭೂಮಾಲಿಕರದೇ ಯಾಜಮಾನ್ಯವಾದರೆ ಏನು ಪ್ರಯೋಜನ? ಬಡವರ ಸಂಕಷ್ಟ ಹಿಂದೆ ಇದ್ದಂತೆಯೇ ಮುಂದೆಯೂ ಇರುತ್ತದಲ್ಲ? ಜನ ನಾಯಕನಾದ, ನೆಫಿಸಳ ಗಂಡ. ದಳಪತಿಯಾಗಿ ಈ ಖ್ನೆಮ್ ಅದ್ಭುತ ಕೆಲಸ ಮಾಡಿದ. ತನ್ನ ಪತಿ ನೀರಾನೆ ಪ್ರಾಂತದ ಸಾರಿಗೆ ಮುಖ್ಯಸ್ಥನಾದ. ಅದ ಕ್ಕಿಂತಲೂ ಹೆಚ್ಚಾಗಿ ಮೆನೆಪ್‌ಟಾ ಅಣ್ಣನ ಆತ್ಮೀಯ ಬಂಧುವಾದ.

ರಾಮೆರಿಪ್‌ಟಾನ ಪಾಲಿಗೆ ದುಃಸ್ವಪ್ನ ಮುಗಿದಿತ್ತು. ಇದು ಜಾಗೃತಾ ವಸ್ಥೆ. ಇನ್ನು ಯಾವಾಗಲೂ ಎಚ್ಚರವೇ. ಆಟಕ್ಕಿನ್ನು ನೀರಾನೆ ಪಟ್ಟಣದ ಜತೆಗಾರರಿಲ್ಲ. ಅಂಥ ಆಟವೇ ಇಲ್ಲ. ಇಪ್ಯುವರ್ ಗುರುವಿನ ಪಾಠವಿಲ್ಲ. ಮೆಲುದನಿಯ ತಂದೆಯೊಡನೆ ಪ್ರಿಯವಾದ ಸಂವಾದವಿಲ್ಲ. ಮೆಂಫಿಸಿನ ಅರ ಮನೆಯ ಆವರಣದಲ್ಲಿ ವಧಸ್ಥಾನದಲ್ಲಿ ಇದು 'ನನಗೊಬ್ಬನಿಗೇ ಸಂಬಂಧಿಸಿದ ದುರಂತ' ಎನಿಸಿತ್ತು. ಈಗ ಸ್ಪಷ್ಟವಾಗಿದೆ. ಇದು ಎಲ್ಲರ ದುರಂತ. ಇಡಿಯ ಬಡಜನತೆಯ ದುರಂತ.... ತಾನಿನ್ನು ಬೇಗ ಬೇಗನೆ ಬೆಳೆಯಬೇಕು. ಎಲ್ಲ ವಿದ್ಯೆಗಳನ್ನೂ ಕಲಿಯಬೇಕು. ತಂದೆಯ ಹಾಗೆ ಯೋಚಿಸಿ ಮಾತನಾಡ

ಬೇಕು. ನ್ಯಾಯದ ಪಕ್ಷ ವಹಿಸಬೇಕು. ಹೆದರಬಾರದು ಯಾರಿಗೂ. ಅಪ್ಪ ಅಂದಿದ್ದ: 'ಅಮ್ಮನ ಹತ್ತಿರ ಇರು.' ತನಗೊಬ್ಬ ತಮ್ಮ ಬರುತ್ತಾನೆ; ಇಲ್ಲವೆ, ತಂಗಿ ಬರುತ್ತಾಳೆ. ಬಸಿರು ದೊಡ್ಡದಾಗುವುದರ ಅರ್ಥ ಇದು. ಆ ತಮ್ಮನೋ ತಂಗಿಯೋ ನಮ್ಮ ತಂದೆಯನ್ನು ನೋಡಿಯೇ ಇರುವುದಿಲ್ಲ. ಅಪ್ಪನ ವಿಷಯ ಅಣ್ಣನಾದ ತಾನು ಹೇಳಿಕೊಡಬೇಕು.

ದೋಣಿಯ ಹಿಂಭಾಗದ ಮೂಲೆಯಲ್ಲಿ, ಅಂಬಿಗರ ಹಿಂದೆ ದೋಣಿಯ ಒಳಮೈಗೆ ಒರಗಿ, ನೆಫೆರ್ ಕುಳಿತಿದ್ದ. ಆದುದು ಏನೆಂಬುದನ್ನು ಎವೆ ಮುಚ್ಚಿ, ನಿಧಾನವಾಗಿ ಅರ್ಥ ಮಾಡಿಕೊಳ್ಳಲು ಅವನು ಯತ್ನಿಸಿದ. ಎವೆಗಳು ಮಾತ್ರ ಒಂದಕ್ಕೊಂದು ಅಂಟಲು ನಿರಾಕರಿಸಿದುವು. ಬದುಕಿನ ಪಯಣದ ಕೊನೆಗೆ ತಾನು ಬಂದಂತಾಯಿತೆ? ಅಥವಾ, ಎಲ್ಲವೂ ಮುಗಿದಂತಾಯಿತು ಎನಿಸುತ್ತಿರುವಾಗ, ಹೊಸ ಬದುಕು ಆರಂಭವಾಗುತ್ತಿದೆಯೆ? ಇವರು ಎಲ್ಲಿಗೆ ಹೋಗುತ್ತಿದ್ದಾರೆ? ಒಂದು ಮುಷ್ಟಿಯಿಂದ ಪಾರಾಗಿ ಇನ್ನೊಂದಕ್ಕೆ? ಹತ್ತು ದೇಶ ಸುತ್ತಿದ್ದೇನೆ. ಸುಲಿಯುವ ವಿಧಾನ ಎಲ್ಲ ಕಡೆಗಳಲ್ಲೂ ಒಂದೇ. ಸುಲಿಗೆ ಇಲ್ಲದ ಸಮಾಜ ಇಲ್ಲಿತ್ತು. ಅದನ್ನು ಧ್ವಂಸ ಮಾಡಿದರು. ಮತ್ತೆ ಇನ್ನೊಂದನ್ನು ಕಟ್ಟಬೇಕು. ಯಾರು ಕಟ್ಟುವವರು? ತನಗೆ ತಿಳಿಯದು. ತನಗೆ ತಿಳಿದಿರುವುದು ಒಂದೇ ವಿದ್ಯೆ. ಕಲ್ಲಿನ ಮೂರ್ತಿಗಳನ್ನು ಕೊರೆಯುವುದು. ಹಪುವಿನ ಒಬ್ಬ ಮಗ ಶಿಲ್ಪಿಯಾಗಲು ಬಯಸಿದ್ದ. ಆ ಹುಡುಗ ಏನಾದನೋ? ಅನ್ಪುವೀರನ ಚಿತ್ರವೀಗ—ಬಟ್ಟೆಯ ಮೇಲೆ ತಾನು ರಚಿಸಿದ ಆಧಾರ ಕೃತಿ ಹಪು ಮನೆಯಲ್ಲಿ ಸುಟ್ಟುಹೋದರೂ—ಮನಸ್ಸಿನಲ್ಲಿ ಅಚ್ಚೊತ್ತಿದೆ. ಹಾಗೆಯೇ ಜನನಾಯಕ ಮೆನೆಪ್‌ಟಾನೂ ತನಗೆ ಈಗ ಪರಿಚಿತ. ಅದು ಮರೆಯಲಾಗದ ಭವ್ಯ ಆಕೃತಿ. ಲೇಪಿತ ಶವದ ರೂಪವನ್ನೇ ಕೊರೆಯಬಹುದು. ಅಥವಾ ನಿಜರೂಪವನ್ನೇ ಕಲ್ಪಿಸಿಕೊಂಡು ಸೃಷ್ಟಿಬಹುದು. ಹೀಗೆಯೇ ಮುಂದೆಹೋದರೆ ಈ ದೋಣಿ ಸ್ಯೆನೆಯನ್ನು ಮುಟ್ಟುತ್ತದೆ. ಅಲ್ಲಿ ಶಿಲೆಗಳು ಹೇರಳವಾಗಿವೆ. ಉತ್ಕೃಷ್ಟವಾದುದನ್ನೇ ಆರಿಸಬಹುದು....ಆದರೆ ಈ ಜನ–ನಾನು ಕೂಡಾ— ಐಗುಪ್ತದಾಚೆಗೆ ಹೋಗಬೇಕು. ಬೇರೆ ದೇಶಕ್ಕೆ, ಆ ದೇಶ ಎಂಥದೇ ಇರಲಿ ತಾನು ಈ ಜನರ ಜತೆಯಲ್ಲೇ ಇರಬೇಕು....

ಹಾಯಿಕಂಬದ ಬಳಿ ಮತ್ತೆ ಮಾತುಕತೆ.

ಮೆನ್ನ : "ಬೆಳಗಾಗುವ ಹೊತ್ತಿಗೆ ನಾವು ಜಿಂಕೆ ಪ್ರಾಂತದ ದಕ್ಷಿಣ ಭಾಗದಲ್ಲಿರ್ತೇವೆ. ಸಂಜೆಯೊಳಗೆ ಅಬ್ಟು ತಲಪ್ತೇವೆ."

ಮೆನ್ನ : "ಅಬ್ಟುವಿನ ಒಸೈರಿಸನ ಪವಿತ್ರ ಉತ್ಸವದಿಂದಲೇ ನ್ಯಾಯದ ಬೆಳಕನ್ನು ಹಿಡಿದು ತಂದಿರಿ, ಅಲ್ಲವೆ ?"

ಬಟಾ : "ಹ್ಞ. ಇನ್ನೊಂದು ವಾರದೊಳಗೆ ಮತ್ತೆ ಅಬ್ಟು ಯಾತ್ರೆ. ಆ ವೇಳೆಗೆ ಮಹಾ ಅರ್ಚಕ ಮೆಂಫಿಸಿಗೆ ಹೊರಟಾನು. ಈ ಸಲ ಅವನಾಗಲೀ ಪೆರೋನಾಗಲೀ ಅಬ್ಟುಗೆ ಬರಲಾರರು. ಸೆಡ್ ಉತ್ಸವವಾಗಿದೆ ; ಐಗುಪ್ತದಲ್ಲಿ ಶಾಂತಿ ನೆಲೆಸಿದೆ. ಇನ್ನು ಒಂದೆರಡು ವರ್ಷ ಒಸೈರಿಸನನ್ನು ಅವರು ಮರೆತರೂ ಮರೀಬಹುದು. ಹೌದಲ್ಲವಾ ಮೆನ್ನ ?"

ಮೆನ್ನ : "ನಿಜ.... ಅಬ್ಟು ದಾಟಿದ ಮೇಲೆ ಎಂದರೆ. ಅಲ್ಲಿ ಹಾಥೊರ್ ದೇವತೆಯ ದೇಗುಲ ಇದೆ. ಆಮೇಲೆ ವೆಸಿ, ಆಮನ್ ದೇವಸ್ಥಾನ. ಹೀಗೆ ರಾತ್ರೆ, ಹಗಲು ; ಮತ್ತೊಂದು ರಾತ್ರೆ ಕಳೆದ ಮೇಲೆ ಎಡ್ಫು. ಹೋರಸ್ ಮಂದಿರ. ಆ ಅಪರಾಹ್ನ ಸ್ವೆನೆ. ಫಿಲೆದ್ವೀಪ ಬರೋದರೊಳಗೆ ನಮ್ಮ ಪಯಣ ಮುಕ್ತಾಯವಾಗ್ತದೆ ಅಲ್ಲವೆ ?"

ಬಟಾ : "ನಾನೂ ಹಾಗೆಯೇ ಅಂದ್ಕೊಂಡಿದ್ದೇನೆ ಮೆನ್ನಯ್ಯ. ಕತ್ತಲಾಗೋದರೊಳಗೆ ಎಡಕ್ಕೆ ಉಪನದಿಯೊಳಕ್ಕೆ ಹೋಗಿಬಿಡೋಣ. ನಿಧಾನವಾಗಿ ಹೋದರಾಯ್ತು. ಬೆಳಕು ಹರಿಯುವಾಗ ಐಗುಪ್ತದಾಚೆ ನುಬಿಯದಲ್ಲಿರ್ತೇವೆ."

ಮೆನ್ನ : "ಹ್ಞ. ಮುಂದೆ ಕತ್ತೆಗಳು ಒಂದೆರಡಾದರೂ ಬೇಕು. ಒಳನಾಡಿನ ಪ್ರವಾಸಕ್ಕೆ."

ಬಟಾ : "ಪರದೇಶಿಗಳಾಗಿ, ಯಾವುದಾದರೂ ಹಳ್ಳಿಯಲ್ಲಿ ನೆಲೆಸೋಣ. ನಾಡಿನ ಕರೆ ಪುನಃ ಬರುವ ತನಕ."

ಮೆನ್ನ : "ಆಶಾವಾದ ಆರೋಗ್ಯಕ್ಕೆ ಒಳ್ಳೇದು."

ಬಟಾ : "ಮೆನ್ನಯ್ಯ. ನೀವು ನಮ್ಮನ್ನು ಬಿಟ್ಟು ಹೋಗೋದಿಲ್ಲ, ಅಲ್ಲವಾ ?"

ಮೆನ್ನ : "ನನ್ನ ಕನಸು ಮುರೀತು. ಆದರೆ ಅದರ ನೆನಪು ನನಗಿಷ್ಟ.

ನಿಮ್ಮೊಂದಿಗಿದ್ದು ಆಗಾಗ್ಗೆ ಅದನ್ನು ನೆನೀತೇನೆ. "

ಬಟಾ · " ಚಿಕ್ಕವರಿಗೆ ಪಾಠ ಹೇಳಿ ಬೆಳೆಸಬೇಕಾದವರು ನೀವೇ...."

ಮೆನ್ನ : " ಲಿಪಿಕಾರನಾಗಿ ಇರ್ತೇನೆ ಬಟಾ. ಮಂತ್ರತಂತ್ರಗಳ ಕಳ್ಳ ಅಯ್ಯನಲ್ಲ. "

ಅವರು ಮಾತನಾಡುತ್ತಿದ್ದಂತೆ ನೆಖೆನ್ ಎದ್ದು ಅಲ್ಲಿಗೆ ನಡೆದು ಬಂದ.

ನೆಖೆನ್ : " ಕರೆಯದೆ ಬಂದೆ. ಮುದುಕನನ್ನು ಕ್ಷಮಿಸಿ. "

ಮೆನ್ನ : " ಮಹಾಶಿಲ್ಪಿ, ನಿಮ್ಮ ನೀರಾನೆ ಮೂರ್ತೀನ ಬೆಳಿಗ್ಗೆ ನೀರಾನೆ ಪ್ರಾಂತದ ದೋಣಿಕಟ್ಟೇಲಿ ಕಂಡೆ. ಅದ್ಭುತ ಶಿಲ್ಪ. ನಿಮ್ಮ ಕೃತೀನ ಒಡೆಯೋದಕ್ಕೆ ಹೇಪಾಟ್ ಆಜ್ಞೆ ಕೊಟ್ಟನಂತೆ. ಪೀಠದಿಂದ ಸಡಿಲಿದ ನೀರಾನೆ ಇಳಿಜಾರು ಮಣ್ಣಿಗೆ ಬಿದ್ದು ಉರುಳಿ ನದಿಯಲ್ಲಿ ಮುಳುಗಿತಂತೆ. "

ನೆಖೆನ್ : " ಹೂಂ ! ಅಲ್ಲಿಂದ ತಪ್ಪಿಸಿಕೊಂಡು ಬಂದ ಯೋಧರು ಹೇಳ್ತಿದ್ರು. ನನಗೂ ಕೇಳಿಸ್ತು. "

ಮೆನ್ನ : " ಇಲ್ಲಿ ಕೇಳಿ, ಮಹಾಶಿಲ್ಪಿ. ಆ ನೀರಾನೆ ನದಿಯ ಆಳದಿಂದ ಮತ್ತೆ ಎದ್ದು ಬರ್ತದೆ.... "

ನೆಖೆನ್ : " ನನಗೂ ಆ ದಿವಸದವರೆಗೆ ಬದುಕೋ ಆಸೆ ಅಯ್ಯ."

ಮೆನ್ನ : " ನೀವು ವಯೋವೃದ್ಧರು. ನೀವಾದರೂ ನನ್ನನ್ನು ಬರೀ ಮೆನ್ನ ಅಂತ ಕರೀರಿ. "

ನೆಖೆನ್ : " ಆಗಲಿ ಮೆನ್ನ .... ಬಟಾ, ಓ ನನ್ನ ಅಳಿಯ ಬಟಾ, ಅಲ್ಲಿಂದ ಹೊರಡ್ತಿದ್ದಾಗ ' ನಾನೂ ಬರಲಾ ' ? ಅಂತ ಕೇಳ್ದೆ. ' ಎಲ್ಲಿ ನೆಲೆಸೋದಕ್ಕೆ ನೀವು ಇಷ್ಟು ಪಡ್ತೀರೋ ಅಲ್ಲೇ ನಾನೂ ಇರಲಾ ? ' ಅಂತ ಈಗ ಕೇಳ್ತಿದ್ದೇನೆ. "

ಮೆನ್ನ : " ಬಟಾ ಅಣ್ಣ, ತಕ್ಷಣ ಒಪ್ಕೊಳ್ಬೇಡಿ. ನನ್ನದೊಂದು ಶರತ ಇದೆ. ಇವರ ಚಾಣ ಮಸೆಯೋದು ಮೊನೆ ಮಾಡೋದು ನನ್ನ ಜವಾಬ್ದಾರಿ. ಇವರು ಒಪ್ಪೋದಾದ್ರೆ ನಮ್ಮ ಜತೆ ಇರಲಿ. "

ನೆಖೆನ್ : " ಸಮೂಹದ ಸಂಕಟದ ನಡುವಿನಲ್ಲೂ ಸುಕ್ಕುಗಟ್ಟಿದ ಈ ಮುಖಕ್ಕೆ ಮೆರುಗಿನ ಲೇಪನ ಮಾಡ್ತಿದೀರಲ್ಲ ಮೆನ್ನ. ನೀವು ಎಂಥ

ಯಾತನೆಯನ್ನೂ ಹಗುರಗೊಳಿಸುವ ಅಪ್ರತಿಮ ವೈದ್ಯ."

ದಟ್ಟವಾಗಿದ್ದ ಇರುಳು ಆಗಲೇ ತಿಳಿಯಾಗತೊಡಗಿತ್ತು.

ಖ್ನೆಮ್‌ಹೊಟೆಪ್ ಎಚ್ಚೆತ್ತಿದ್ದ.

ಸಹಿಸಲಾಗದ ನೋವು. "ಬಟಾ ಅಣ್ಣ," ಎಂದು ಅವನು ಕ್ಷೀಣ ಧ್ವನಿಯಲ್ಲಿ ಕರೆದ.

"ಬಟಾ ಮಾವ, ಕರೀತಾರೆ; ಬನ್ನಿ," ಎಂದಳು ಖ್ನೆಮ್‌ನ ಹೆಂಡತಿ, ತುಸು ಕಾತರದ ಧ್ವನಿಯಲ್ಲಿ.

ಬಟಾ ಹತ್ತಿರ ಬಂದೊಡನೆ ಖ್ನೆಮ್‌ಹೊಟೆಪನ ಕೈ ಬಟಾನನ್ನು ಮುಟ್ಟಲು ಯತ್ನಿಸಿತು. ಬಟಾ ಆ ಅಂಗೈಯನ್ನು ಹಿಡಿದುಕೊಂಡ.

ನಿಧಾನವಾಗಿ ಖ್ನೆಮ್ ಕೇಳಿದ:

"ಊರಿನ....ಗತಿ....ಏನಾಯ್ತು?"

"ಅದರ ಚಿಂತೆ ಈಗ ಬೇಡ ಖ್ನೆಮು. ....ನೀನು ವಿಶ್ರಾಂತಿ ತಗೋ. ಬೆಳಿಗ್ಗೆ ಕಣ್ಣುಗಳಿಗೆ ಔಷಧೋಪಚಾರ ಮಾಡೋಣ."

"ನಾವು ತಪ್ಪಿಸಿಕೊಂಡು ಬಂದೆವಾ?"

"ಹ್ಞ. ನೆಫಿಸ್ ಅತ್ತಿಗೆ, ರಾಮೆರಿ, ನೆಜಮುಟ್ ಅಕ್ಕ, ನಿನ್ನತ್ತೆ–ಹೆಂಡತಿ, ಅಹೂರಾ, ಮಗು, ನೆಫರುರಾ, ಅನ್ಪುವಿನ ಮಕ್ಕಳ ತಾಯಿ, ನನ್ನ ಹೆಂಡತಿ–ಇಬ್ಬರು ಮಕ್ಕಳು....ಮೆನ್ನಯ್ಯ, ನೆಖೆನ್‌ಮಾವ, ನನ್ನ ಅಂಬಿಗ ಬಂಧುಗಳು...."

"ನನಗೆ ಗೊತ್ತು. ನಾವು ಸೋತೆವು. ಹಿರಿಯರನ್ನು ಹಿಡಿದ್ರು.... ಗುಲಾಮ ಚಾಕರಿಗಾಗಿ ಜನರನ್ನು ಬಂಧಿಸಿದ್ರು....ಪೈರನ್ನೂ ಮನೆಗಳನ್ನೂ ಸುಟ್ರೇನೊ? ಆ ಮಹಾ ಅರ್ಚಕ, ನುಟ್‌ಮೋಸ್, ಬಕಿಲ ಆ ಮೂವರನ್ನು ನಾನು ಬಲಿ ತಗೋಬೇಕಾಗಿತ್ತು. ಆಗಲಿಲ್ಲ. ಬಕಿಲನಂತೂ ಸೇಡು ತೀರಿಸ್ಕೊಂಡ."

"ಮಾತಾಡ್ಬೇಡ. ಆಯಾಸವಾಗ್ತದೆ. ಕಣ್ಣಿನಿಂದ ರಕ್ತಸ್ರಾವವಾಗ್ತದೆ."

"ಇಡೀ ಸಮುದಾಯದ ರಕ್ತಪ್ರವಾಹದ ಎದುರಲ್ಲಿ ಇದೇನು ಲೆಕ್ಕ ಬಟಾ ಅಣ್ಣ?"

ಇದೊಂದು ವಿಷಯದಲ್ಲಿ ಸಮಸ್ಯೆ ಜಟಿಲವಾಗಲಿಲ್ಲ. ಎಡ್ಫು ಹತ್ತಿರವಾಗುತ್ತಿದ್ದಂತೆ ಕತ್ತಲಾಯಿತು. ನೆಫಿಸ್‌ಗೆ ನೋವು ಆರಂಭವಾಯಿತು. ನೆಜಮುಟ್ "ಎರಡನೇ ಹೆರಿಗೆ. ಬಹಳ ತಡವೇನೂ ಆಗುವುದಿಲ್ಲ." ಎಂದಳು. ಊರಿನ ಸಹವಾಸ ಬೇಡವೆಂದು ದೋಣಿಯನ್ನು ಎಡಬದಿಯಿಂದ ಮುಂದಕ್ಕೆ ಒಯ್ದರು.

ಒಬ್ಬ ಅಂಬಿಗನೆಂದ :

" ಅಗೋ !"

ಬಲದಂಡೆಯಲ್ಲಿ ಕಲ್ಲುಗಳ ನೈಸರ್ಗಿಕ ಕಟ್ಟೆ ಇದ್ದಲ್ಲಿ ಹತ್ತಾರು ದೀಪಗಳನ್ನು ಹಚ್ಚಿ ಇಟ್ಟಿದ್ದ ದೊಡ್ಡ ನಾವೆ ಇತ್ತು.

ಕೆಫ್ಟುವಿನ ವರ್ತಕನಾವೆ.

" ಎಲ್ಲೂ ನಿಲ್ಲಿಸಬೇಡಿ, ನೇರ ಹೋಗಿ," ಎಂದ ಬಟಾ.

ನೆಫಿಸಳ ನರಳಾಟ ಹೆಚ್ಚಿತು. ನೆಜಮುಟ್ ಚಡಪಡಿಸಿದಳು ಆಹೂರಾ ನೆಫರುರಾ ಕತ್ತಲೆಯಲ್ಲೇ ಆಕೆಗೆ ನೆರವಾದರು.

ಮೆನ್ನ " ಓ ಒಸ್ಸೆರಿಸ್ ಓ ಒಸ್ಸೆರಿಸ್," ಎಂದ.

ದೋಣಿಯಲ್ಲಿದ್ದವರು ಆ ದೇವನ ಹೆಸರನ್ನು ಉಚ್ಚರಿಸುತ್ತಿದ್ದಂತೆ, ಎಡ್ಫು ದೇವರನ್ನು ನೆನೆಯುತ್ತ, ಮೆನ್ನ "ಓ ಹೋರಸ್ ಓ ಹೋರಸ್," ಎಂದ.

ಇತರರೂ ಅಂದರು :

" ಓ ಹೋರಸ್ ಓ ಹೋರಸ್"

ದೋಣಿ ಎಡ್ಫುವನ್ನು ದಾಟುತ್ತಿದ್ದ ಕೆಲವೇ ಕ್ಷಣಗಳಲ್ಲಿ ನೆಫಿಸ್‌ಗೆ ಪ್ರಸವವಾಯಿತು. ಮಗು ಅತ್ತಿತು. ಎಲ್ಲರೂ ಸಮಾಧಾನದ ನಿಟ್ಟುಸಿರು ಬಿಟ್ಟರು. ನೆಜಮುಟ್ ತಾಯ ಮಾಸು ಎಳೆದು ತೆಗೆಯುತ್ತಿದ್ದಂತೆ ಮಗುವನ್ನೆತ್ತಿಕೊಂಡು ನೆಫರುರಾ, ಆ ಕತ್ತಲೆಯಲ್ಲೂ ಅಗತ್ಯದ ಪರೀಕ್ಷೆ ಮುಗಿಸಿ, " ಗಂಡು ಮಗು !" ಎಂದಳು.

ತಬುಬುವಾ ಅಂದಳು :

" ರಾಮೆರಿ, ನಿನಗೊಬ್ಬ ತಮ್ಮ ಬಂದ !"

ದೂರ, ದೋಣಿಯ ಮೂತಿಯ ಬಳಿ ಇದ್ದ ಮೆನ್ನನಲ್ಲಿಗೆ ರಾಮೆರಿಪ್‌ಟಾ ಹೋದ.

ಜಿಂಕೆ ಪ್ರಾಂತದಲ್ಲಿ ಕುಯಿಲು ಮುಗಿದಿತ್ತು. ದಾಟಿ ಮುಂದಕ್ಕೆ ಹೋದರು. ಅಲ್ಲಿಯೂ ಹೊಲಗಳಲ್ಲಿ ದುಡಿಮೆ ಮುಕ್ತಾಯವಾಗಿತ್ತು.

ಬಟಾ ಮೆನ್ನನೊಡನೆ ಅಂದ :

" ನಮ್ಮದೇ ಆಗಿದ್ದ ಹಿಡಿಧಾನ್ಯವೂ ನಮಗೆ ದಕ್ಕಲಿಲ್ಲ...."

" ಹುಂ ? ಹೌದು," ಎಂದ ಮೆನ್ನ. ಸಂಜೆಯ ವೇಳೆಗೆ ತಲಪಲಿದ್ದ ಅಬ್ಬುವನ್ನು ಕುರಿತು ಆತ ಯೋಚಿಸುತ್ತಿದ್ದ.

ಕಳೆದ ಬಾರಿ ಐಸಿಸ್ ಪಾತ್ರಧಾರಿಣಿ ದೇವಸೇವಕಿಯ ಹೆರಳನ್ನು ಮುಟ್ಟಿ ಮಹಾ-ಅರ್ಚಕ ಆಶೀರ್ವದಿಸುತ್ತಿದ್ದಾಗ ತಾನು ಗರ್ಭಗುಡಿಯ ಬಳಿಗೆ ಬಂದೆ ಎಂದಲ್ಲವೆ ಆತ ಕೂಗಾಡಿದ್ದು—ರೇಗಾಡಿದ್ದು ?

ಮೆನ್ನನಿಗೆ ನಗು ಬಂತು. ತನ್ನಷ್ಟಕ್ಕೆ ಸಣ್ಣನೆ ನಕ್ಕ. ತನಗೂ ಆ ಬದುಕಿಗೂ ಸಂಬಂಧವಿಲ್ಲ, ಇನ್ನು. ಪಿಶಾಚಬಣದ ಪಾಪದ ಕೂಳನ್ನು ತಾನು ಮುಟ್ಟಬೇಕಾಗಿಲ್ಲ. ಸರಿಕಂಡಂತೆ ವರ್ತಿಸುವ, ನಂಬಿದ್ದನ್ನು ಸಾರುವ ಸ್ವಾತಂತ್ರ್ಯವಿದೆ ತನಗೆ.

....ಸಂಜೆಗೆ ಅಬ್ಬು ಬಂತು.

ಖ್ನೆಮ್‌ನ ಹೊರತಾಗಿ ದೋಣಿಯಲ್ಲಿದ್ದವರೆಲ್ಲ—ನೆಫಿಸ್ ಕೂಡಾ—ದೂರದ ಗುಡ್ಡವನ್ನು, ಅದರೆ ಮೇಲಿನ ದೇವಮಂದಿರವನ್ನು ದಿಟ್ಟಿಸಿದರು. ಖ್ನೆಮ್‌ನನ್ನೂ ಒಳಗೊಂಡು ಅವರೆಲ್ಲ " ಓ ಒಸ್ಸೆರಿಸ್ ಓ ಒಸ್ಸೆರಿಸ್ " ಎಂದರು. ರಾಮೆರಿಪ್‌ಟಾ ದೃಷ್ಟಿಹೀನ ವೃದ್ಧ ಹಾಡಿದ್ದುದನ್ನು ಜ್ಞಾಪಿಸಿಕೊಂಡ. ತಾವೆಲ್ಲರೂ ಉಣ್ಣುತ್ತಿದ್ದಾಗ ಅವನು ತಂತಿ ಮಿಾಟಿದ್ದ.

" ಯೋ ಯೋ ಯೋ
ಹೇಳುವೆ ಕೇಳಿ ಸೃಷ್ಟಿಯ ಕಥೆಯ
ಈ ಲೋಕದ ಆದಿ ಅನಾದಿಯ ಕಥೆಯ
ಯೋ ಯೋ ಯೋ"

ರಾಮೆರಿಗೆ ಚಿಂತೆ : ಖ್ನೆಮ್‌ಮಾವ ಕೂಡಾ ಮುಂದೆ ಹೀಗೆ ಹಾಡು ಹೇಳುತ್ತ ತಿರುಗಬೇಕಾಗುವುದೆ ? ಆಗ ಅವನನ್ನು ಕೈಹಿಡಿದು ನಡೆಸುವವರು ಯಾರು ? ತಾನು ?

* * * *

ಮತ್ತೆ ಬೆಳಗಾದಾಗ ಅವರು ನಿಂತ ಕಡೆ ಪೆಪ್ಪೈರಸ್ ಮೆದೆಗಳಿದ್ದವು. ಕಾಡು ಬಾತು ಕೋಳಿಗಳ ಹಿಂಡೇ ಇತ್ತು. ಬಟಾನ ಅಂಬಿಗರು ದಂಟುಗಳನ್ನು ಮುರಿದು ಹೊಡೆಕೋಲುಗಳನ್ನು ಸಿದ್ಧಗೊಳಿಸಿ ಬೇಟೆಯಾಡಿದರು. ಎರಡು ಬಾತುಕೋಳಿಗಳನ್ನು ಹಿಡಿದರು. ಎಳೆಯರಿಗೆ ಆನಂದ. ಉಳಿದವರಿಗೂ.

ಕುಳಿತಲ್ಲಿಂದಲೆ ಖ್ನೆಮು ಅಂದ :

" ಬಟಾ ಅಣ್ಣ. ಈ ಎರಡು ಈಟಿಗಳೂ ನಮ್ಮಲ್ಲೇ ಇರಲಿ. ಬಾತು ಕೋಳಿಗಳನ್ನು ಕೊಟ್ಟು ರೊಟ್ಟಿ ಪಡೆಯೋಣ."

" ಹ್ಞ. ಹ್ಞ."

ರಾಮೆರಿಗೆ ನೆನಪಿತ್ತು. ಅಬ್ಟು ಯಾತ್ರೆಯಲ್ಲಿ ಲಿಪಿಸುರುಳಿಗಾಗಿ ಒಂದು ಬಾತು ಕೋಳಿ ಕೊಟ್ಟಿತ್ತು. ಈಟಿಗಳು ಬೇಕು ಅನ್ತಾನೆ ಖ್ನೆಮು ಮಾವ. ನಮಗೆಲ್ಲ ಈಟಿ ತಿವಿಯೋದನ್ನು, ಎಸೆಯೋದನ್ನು ಹೇಳಿಕೊಡ್ತಾನೇನೊ ? ಕಣ್ಣುಗಳನ್ನು ಮುಚ್ಚಿಕೊಂಡೂ ಶಸ್ತ್ರಾಸ್ತ್ರ ಪ್ರಯೋಗಿಸುವ ಸಮರ್ಥರಿಲ್ಲವೆ ?"

ತಬಬುವಾ, ನೆಜಮುಟ್, ಅಹೂರಾ, ಅಸ್ಸುವಿನ ವಿಧವೆ, ನೆಫರುರಾ— ಎಲ್ಲರೂ ನೆಫಿಸ್‌ಳನ್ನು ಆಗಾಗ್ಗೆ ಕೇಳುವವರೇ :

" ಏನಾದರೂ ನೋವು ತೋರ್ತಿದೆಯಾ ? ನೋವು ಕಂಡ್ಕೊಡ್ಲೆ ಹೇಳು....ದಡಕ್ಕೆ ಹೋಗೋಣ."

ಒಮ್ಮೆ ನೆಫಿಸ್ ಕೇಳಿದಳು :

" ಇನ್ನೇನೂ ಭಯ ಇಲ್ಲವಾ ? ವೈರಿಗಳು ಯಾರೂ ಅಟ್ಟಿಸಿಕೊಂಡು ಬರೋದಿಲ್ಲವಾ ?"

ನೆಜಮುಟ್ ಉತ್ತರವಿತ್ತಳು :

" ಇಲ್ಲ. ನಿನಗ್ಯಾಕೆ ಅದರ ಯೋಚನೆ ? ನಾವಿಲ್ಲವಾ ಇಷ್ಟೊಂದು ಜನ ?"

* * * *

ದೆಂದೆರೆಯಲ್ಲಿ ಹಾಥೊರ್ ದೇವಸ್ಥಾನ. ನದಿಯ ಎಡದಂಡೆಯಲ್ಲಿ.

ಕೋಡುಗಳಿರುವ ಹಸು ರೂಪದ ಪ್ರೇಮದೇವತೆ—ಹಾಥೊರ್. ಸುಖ, ಸಂಗೀತ, ನೃತ್ಯಗಳ ದೇವತೆ ಕೂಡಾ. ಮಗು ಹುಟ್ಟಿದೊಡನೆ ಏಳು

ಹಾಥೊರ್ ದೇವತೆಗಳು ಬಂದು ಮಗುವಿನ ಸುತ್ತಲೂ ಕುಳಿತು ಅದರ ಭವಿಷ್ಯ ವನ್ನು ನಿರ್ಧರಿಸುತ್ತವೆಂಬುದು ಸಮಾಜದಲ್ಲಿನ ನಂಬಿಕೆ.

ದೇಗುಲಕ್ಕೆ ಹೋದರು. ಖ್ನೆಮ್‌ನನ್ನೂ ಕರೆದೊಯ್ದರು. (ಕಾಲುಗಳಿಗೆ ಶಕ್ತಿ ಬಂದಿತ್ತು. ಕಣ್ಣಿನ ನೋವು ಕಡಿಮೆಯಾಗಿತ್ತು.)

ನೆಫಿಸ್‌ಗೆ ಹುಟ್ಟಲಿದ್ದ ಮಗುವನ್ನು ನೋಡಿಕೋ—ಎಂಬುದೇ ಹಿರಿಯ ರೆಲ್ಲ ಸಲ್ಲಿಸಿದ ಪ್ರಾರ್ಥನೆ.

ರಾಮೆರಿಪ್‌ಟಾ ಮೆನ್ನನೆಡೆಗೆ ನೋಡಿದ. ಎಲ್ಲರಿಗಿಂತ ಹಿಂದೆ ದೇವಾ ಲಯದ ಒಂದು ಕಂಬಕ್ಕೊರಗಿ ಅವನು ನಿಂತಿದ್ದ. ಅವನ ತುಟಿಗಳು ಚಲಿಸಿ ದಂತೆ ತೋರಲಿಲ್ಲ.

....ಮುಂದೆ ಎಡದಂಡೆಯಲ್ಲಿ ವೆಸಿ. ದೊಡ್ಡ ಹಳ್ಳಿಯತಿಂದ್ದ ಊರು. ಅಮನ್ ದೇವಾಲಯ, ಈಗ ಯಾತ್ರಿಕರ ದೇವರು. ದೋಣಿಕಾರರ ಸಂಗಾತಿ. ದಂಡಿನಲ್ಲಿ ದುಡಿಯುವ ಬಡ ರೈತರ ಪ್ರೀತಿಪಾತ್ರ....ಎಲ್ಲರೂ ಇಳಿಯುವುದು ಬೇಡವೆಂದು ಬಟಾ ಮತ್ತು ಅಂಬಿಗರು ಹೋದರು. ದೇಗುಲದ ಹತ್ತಿರವಿದ್ದ ಅಂಗಡಿಯಲ್ಲಿ ಬಾತುಕೋಳಿಗಳನ್ನು ಕೊಟ್ಟು ಹನ್ನೆರಡು ರೊಟ್ಟಿ ಪಡೆದರು.

* * * *

ಕೆಫ್ಟು ವರ್ತಕನ ನಾವೆ ಎಲ್ಲಿಯೂ ಕಣ್ಣಿಗೆ ಬಿದ್ದಿರಲಿಲ್ಲ. ಎಡ್ಫು—ಸ್ಯೆನೆಗಳ ಮಧ್ಯೆ ಎಲ್ಲೋ ಇರಬೇಕು—ಎಂದು ಬಟಾನ ಊಹೆ. ಆತ ತಮ್ಮನ್ನು ನೋಡಬಾರದು, ಮೆಂಫಿಸಿಗೋ ಇನ್ನೆಲ್ಲಿಗೋ ಆತ ಸುದ್ದಿಯ ವಾಹಕನಾಗ ಬಾರದು—ಎಂಬ ಕಾತರ ಬಟಾನಿಗೆ. ಈ ವಿಷಯವನ್ನು ಆತ ಅಂಬಿಗರಿಗೆ ಹೇಳಿದ್ದ, ಮೆನ್ನನಿಗೂ ತಿಳಿಸಿದ್ದ.

ಕೆಫ್ಟು ಮೆಂಫಿಸಿನಲ್ಲಿ ಆಡಿದ್ದ ನುಡಿ ಮೆನ್ನನಿಗೆ ನೆನಪಿತ್ತು :

'ನಾಯಕರು ನಿಶ್ಚಿಂತೆಯಾಗಿರ್‍ಲಿ ಎಲ್ಲ ಸರಿಹೋಗ್ತದೆ.'

ವರ್ತಕನೇನೋ ತನ್ನ ಮಾತ್‌ನಂತೆ ವರ್ತಿಸಿದ್ದ. ಆದರೆ ಪರಿಸ್ಥಿತಿ ಬೇರೆ ರೂಪ ತಳೆದಿತ್ತು. ಮೆನ್ನ ಬಲ್ಲ ; ಈಗ ಕಂಡರೂ ನವುರು ಮಾತನ್ನೇ ಆಡುತ್ತಾನೆ. ಸಹಾಯವೇನಾದರೂ ಬೇಕೆ ?—ಎಂದು ಕೇಳುತ್ತಾನೆ, ನೀಡು ತ್ತಾನೆ. ಬಳಿಕ ಮೆಂಫಿಸಿಗೆ ಹೋಗಿ "ಅವರೆಲ್ಲ ಆ ಕಡೆ ಹೋಗ್ತಿದ್ರು...." ಎನ್ನುತ್ತಾನೆ.

ಬಟಾ ಇನ್ನೊಂದು ಅಂಗೈಯಿಂದ ಖ್ನೆಮ್‌ಹೊಟೆಪನ ಭುಜವನ್ನು ತಟ್ಟಿದ, ಸಂತೈಸಲೆಂದು.

* * * *

ಮೆನ್ನ ಖ್ನೆಮ್‌ಹೊಟೆಪನ ಕಣ್ಣುಗಳನ್ನು ಪರೀಕ್ಷಿಸಿದ. ದೃಷ್ಟಿಯ ಆಸೆ ಇಲ್ಲ—ಎಂದು ಕೈಸನ್ನೆಯಿಂದ ಬಟಾನಿಗೆ ತಿಳಿಸಿದ. ದೋಣಿಯನ್ನು ದಂಡೆಗೊಯ್ದರು. ಅಲೆದಾಡಿ ಗಿಡ ಪೊದೆಗಳಲ್ಲಿ ಹುಡುಕಿ, ಔಷಧೀಯ ಎಲೆಗಳನ್ನು ಮೆನ್ನ ತಂದ. ಎರಡು ಕಲ್ಲುಗಳನ್ನು ಹೊಂದಿಸಿ ಜಜ್ಜಿ ಅರೆದು, ಒಂದೊಂದೇ ಬಿಂದು ರಸವನ್ನು ಖ್ನೆಮ್‌ಹೊಟೆಪನ ಕಣ್ಣುಗಳಿಗೆ ಬಿಟ್ಟ. ಸೆಣಬಿನ ವಸ್ತ್ರದ ಒಂದು ಪಟ್ಟಿಯನ್ನು ಶುಚಿಗೊಳಿಸಿ, ನೊಣಗಳು ಮುತ್ತದಂತೆ ಕಣ್ಣುಗಳಿಗೆ ಕಟ್ಟಿದ.

ದೋಣಿಯಲ್ಲಿ ಏನಿದೆಯೆಂದು ಲೆಕ್ಕ ಹಾಕಿದರು. ಎರಡು ಮೂರು ಬರಿದು ಪಾತ್ರೆಗಳಿದ್ದವು. ಬಹಳ ಹಳೆಯದಾದ ಬುತ್ತಿ ಸ್ವಲ್ಪ ಇತ್ತು. ಹಲ್ಲುಗಳಿಗೆ ಒಣರೊಟ್ಟಿಯ ತುಣುಕುಗಳನ್ನು ಜಗಿಯುವ ಕೆಲಸ.

ಬಟಾ ಅಂದ :

" ಇವತ್ತಿಗೆ ಸಾಕು. ಅಬ್ಬು ದಾಟೋಣ. ನಾಳೆ ದೆಂದೆರೆಯಲ್ಲೋ ವೆಸಿಯಲ್ಲೋ ಒಂದಿಷ್ಟು ಆಹಾರ ಸಂಗ್ರಹಿಸ್ಬೇಕು. ರಾಜಧಾನಿಯಲ್ಲಿ ಸಂಪಾದಿಸಿದ ಎರಡು ಈಟಿಗಳು ಇಲ್ಲಿವೆ. ಒಂದು ಆತ್ಮರಕ್ಷಣೆಗೆ ಇರಲಿ. ಇನ್ನೊಂದನ್ನು ವಿನಿಮಯವಾಗಿ ಕೊಡಬಹುದು. ಎಷ್ಟು ರೊಟ್ಟಿ ಸಿಗ್ತದೋ ನೋಡೋಣ. ಬಟ್ಟೆಗಳು ದೊಡ್ಡದು ಚಿಕ್ಕವು ಚಿಂದಿ ಇಷ್ಟಿವೆ, ನೆಜಮುಟಕ್ಕ. ನಿಮಗೆ ಬೇಕಾದೀತು ನೋಡ್ಕೊಳ್ಳಿ."

ಪತಿ ಅಂಧನಾದನೆಂದು ಅವನ ಹೆಂಡತಿಗೆ ಯಾತನೆ. ತಬುಬುವಾ ಮಗಳ ಕಿವಿಯಲ್ಲಿ ಉಸುರಿದಳು :

" ನೀನು ಅಳೋದು ಗಿಳೋದು ಮಾಡಬಾರ್ದು. ಧೈರ್ಯವಾಗಿರು. ಸಮಾಧಾನದಿಂದ ಇದ್ದರೆ ಅವನಿಗೆ ಬೇಗನೆ ಗುಣವಾಗ್ತದೆ."

* * * *

" ಏಳು ಹಾಥೊರ್ ದೇವತೆಗಳು ಈಗ ಬರ್‍ತಾವಾ ?" ಎಂದು ಕೇಳಿದ.

" ಅದೊಂದು ಕಲ್ಪನೆ, ರಾಮೆರಿ."

" ನಮಗೆ ಕಾಣಿಸೋದಿಲ್ಲ, ಅಲ್ಲವಾ ?"

" ಊಹೂಂ."

" ಹಾಗಾದರೆ ಭವಿಷ್ಯತ್ತಿನಲ್ಲಿ ಮಗು ಏನಾಗ್ತದೇಂತ ಹೇಳೋದು ಯಾರು ?"

" ಅರ್ಚಕರು. ಆದರೆ ಅವರ ಗುಟ್ಟು ನನಗೆ ಗೊತ್ತು. ಯಾರಿಗೂ ಹೇಳೋದಿಲ್ಲ ಅಂತ ಮಾತು ಕೊಡು. ತಿಳಿಸ್ತೇನೆ."

" ಹೂಂ. ಮಾತುಕೊಟ್ಟಿದ್ದೇನೆ."

" ಕೇಳು, ಇದು ಎಡ್ಫು. ಇಲ್ಲಿರೋದು ಹೋರಸ್ ದೇವರು. ಹೋರಸ್ ಯಾರು ಗೊತ್ತಾ ?"

" ಒಸೈರಿಸನ ಮಗ. ತಂದೆ ಆ ಕಥೆ ಹೇಳಿದ್ದಾರೆ."

" ಹೋರಸ್ ಚಿಕ್ಕವನಾಗಿದ್ದಾಗ ಅವನ ತಂದೆ ಏನ್ಮಾಡ್ತಿದ್ದ ಗೊತ್ತೆ ?"

" ಇಲ್ಲ. ಅದನ್ನು ಅಪ್ಪ ಹೇಳಿಲ್ಲ."

" ಹಂ ! ಕೇಳು ! ತೀರಿಕೊಂಡ ಮೇಲೆ ಒಸೈರಿಸ್ ನ್ಯಾಯಲೋಕಕ್ಕೆ ಹೋದನಲ್ಲ ? ಬೆಳೀತಿದ್ದ ಮಗನನ್ನು ನೋಡ್ಹೋದಕ್ಕೆ ಅವನು ಆಗಾಗ್ಗೆ ಬರ್‍ತಿದ್ದ."

" ಹೂಂ."

" ಬಂದು, ಮಗನನ್ನು ಕೇಳ್ತಿದ್ದ : 'ಒಬ್ಬ ಮನುಷ್ಯ ಮಾಡಬಹುದಾದಂಥ ಉದಾತ್ತ ಕೆಲಸ ಯಾವುದು, ಹೇಳು ಮಗ....' ಮಗ ಉತ್ತರ ಕೊಡ್ತಿದ್ದ : 'ತಂದೆ ತಾಯಿ ಅನುಭವಿಸಿದ ದೌರ್ಜನ್ಯಕ್ಕೆ ಪ್ರತೀಕಾರ ಮಾಡೋದು'...."

" ಹೂಂ. "

" ಸೆತ್ ಸೋತ ಸುದ್ದಿ ತಿಳಿದಾಗ ರಾ ದೇವ ಹೇಳಿದ : 'ಶಿಕ್ಷೆ ವಿಧಿಸೋದಕ್ಕೆ ಅವನನ್ನು ಹೋರಸ್‌ನ ವಶ ಕೊಡಿ. ಒಸೈರಿಸ್‌ಗೆ ಸೆತ್ ಏನು ಮಾಡಿದನೋ ಅದನ್ನೇ ಸೆತ್‌ಗೆ ಹೋರಸ್ ಮಾಡ್ಲಿ.' ಆಗ ಇಡೀ ಗಣ ' ಅದೇ ಸರಿ,' ಎಂದಿತು. ಅದು ತಿಳಿದೊಡನೆ ಹೋರಸ್ ಒರೆಯಿಂದ ಖಡ್ಗ

ಹಿರಿದು, ಸೆತ್‌ನ ದುರ್ನಾತದ ತಲೆೀನ ಕತ್ತರಿಸಿದ. ತನ್ನ ತಂದೆಗೆ ಸೆತ್ ಮಾಡಿದ್ದ ಹಾಗೆ, ಅವನ ದೇಹವನ್ನೂ ಹದಿನಾಲ್ಕು ಹೋಳು ಮಾಡಿದ."

"ಹೂಂ."

"ಆಗ ಎಡ್ಫು ಊರಲ್ಲಿ ಡಂಗುರ ಸಾರಿದ್ರು: 'ಎಡ್ಫು ನಿವಾಸಿಗಳೇ ಸಂತೋಷಪಡಿ! ಸ್ವರ್ಗಗಳ ಅಧಿಪತಿಯಾದ ಮಹಾನ್ ದೇವ ಹೋರಸ್ ಒಸೈರಿಸನ ವೈರಿಯನ್ನು ಸಂಹರಿಸಿದ್ದಾರೆ. ತಮ್ಮ ತಂದೆಯ ಕೊಲೆಯ ಸೇಡು ತೀರಿಸಿದ್ದಾರೆ! ಸತ್ತವನ ಮಾಂಸವನ್ನು ತಿನ್ನಿ, ಆ ಕೆಂಪು ಘೇಂಡಾಮೃಗದ ರಕ್ತವನ್ನು ಕುಡೀರಿ, ಅವನ ಮೂಳೆಗಳನ್ನು ಬೆಂಕಿಯಲ್ಲಿ ಸುಡಿರಿ! ಹೋಳುಗಳನ್ನು ಚೂರು ಚೂರು ಮಾಡಿ ಬೆಕ್ಕುಗಳಿಗೆ ಎಸೀರಿ! ಅಮೇಧ್ಯವನ್ನು ಉರಗಾದಿಗಳು ತಿನ್ನಲಿ!"

"ಹೂಂ."

"ಆಗ ಜನರು ಜಯಘೋಷ ಮಾಡಿದ್ರು: 'ಸೇಡು ತೀರಿಸಿದ ವೀರ ಬಾಹು ಹೋರಸ್ ಉಘೇ' ಅಂತ."

"ಅಯ್ಯ—"

"ಅಲ್ಲ, ಮೆನ್ನ—"

"ಮೆನ್ನಯ್ಯ, ಇದು ಯಾವಾಗ ನಡೀತು ?"

"ಹತ್ತು ಸಲ ಹತ್ತು ಎಂದರೆ ನೂರು; ನೂರು ಸಲ ನೂರು ಅಂದರೆ ಸಾವಿರ...."

"ಇಪ್ಯುವರ್ ಗುರು ಹೇಳ್ಕೊಟ್ಟಿದ್ದಾರೆ."

"ಹ್ಞ. ಅಂಥ ಎಷ್ಟೋ ಸಾವಿರ ವರ್ಷಗಳ ಹಿಂದೆ."

"ಇರಬೇಕು. ಎಡ್ಫು ದೇವಸ್ಥಾನ ಕಟ್ಟೋದಕ್ಕೆ ಹುಡುಗನಾಗಿದ್ದಾಗ ನನ್ನ ತಂದೆಯೂ ಅವರ ತಂದೆಯೂ ಬಂದಿದ್ರಂತೆ. ಆಗ ಹಾಡುಗಾರರು ಬಂದು ಒಂದು ಹಾಡು ಹೇಳಿದ್ರಂತೆ."

"ನೆನಪಿದೆಯಾ ?"

"ಇದೆ.

ವೀರರ ವೀರ ಹೋರಸ್ ಉಘೇ
ತಂದೆಯ ಕೊಂದವನ ಮಣ್ಣು ಮುಕ್ಕಿಸಿದ ಧೀರ ಉಘೇ
ದುರುಳನ ತರಿದ ಮಹಾಶೂರ ಉಘೇ...."

"ಸೊಗಸಾದ ಹಾಡು. ಇದನ್ನು ಬೇರೆ ಬೇರೆ ರೀತಿ ಐಗುಪ್ತದಲ್ಲೆಲ್ಲಾ ಹಾಡ್ತಾರೆ."

"ನಾನು ಕೇಳಿದ ಪ್ರಶ್ನೆ—"

"ಭವಿಷ್ಯತ್ತಿನಲ್ಲಿ ಮಗು ಏನಾಗ್ತದೆ ಅಂತಲೆ?"

"ಹೌದು."

"ನಿಮ್ಮ ತಂದೆ ಈ ಕಾಲದ ಒಸ್ಸೈರಿಸ್. ನೀನು ನಿನ್ನ ತಮ್ಮ ಇಬ್ಬರೂ ಒಸ್ಸೈರಿಸ್ ಸಂತಾನ—ಹೋರಸ್ ವೀರರು."

ರಾಮೆರಿ ಮೌನ ತಳೆದ. ಕಂಠ ಉಮ್ಮಳಿಸಿತು.

ಮೆನ್ನ ಕೇಳಿದ:

"ಅಳ್ತಿದ್ದೀಯಾ?"

"ಇಲ್ಲ, ಇಲ್ಲ. ನನಗೆ ಸಂತೋಷವಾಗಿದೆ."

* * * *

ನೆಜಮುಟ್ ಅಂದಳು:

"ಮಗು ಹಾಲು ಚೀಪ್ತಿದೆ. ನೆಫಿಸ್‌ಗೆ ನಿದ್ದೆ ಬಂದಿದೆ. ದೋಣಿ ನಿಲ್ಲಿಸೋದು ಬೇಡ. ಹೀಗೆಯೇ ಹೋಗ್ತಾ ಇರಲಿ."

ರಾ ಕಾಣಿಸಿಕೊಂಡಾಗ ಎಚ್ಚರ.

ಹೃಷ್ಟ ಪುಷ್ಟ ಮಗು. ಕೆಂಪು ಕೆಂಪು ಬಣ್ಣ. ದೋಣಿ ದಂಡೆ ಮುಟ್ಟಿದಾಗ ನೆಫಿಸ್ ಎದ್ದು ಮಗುವನ್ನೆತ್ತಿಕೊಂಡು ಎರಡು ಹೆಜ್ಜೆ ನಡೆದಳು. ಮೆನೆಪ್‌ಟಾನ ಮಗನಿಗೆ ರಾ ದರ್ಶನ ಮಾಡಿಸಿದಳು.

"ಅಮ್ಮ, ಏಳು ಹಾಥೋರ್ ದೇವತೆಗಳು ಬಂದು ಕತ್ತಲೇಲಿ ಮಗುವನ್ನು ಸುತ್ತುಗಟ್ಟಿ ಏನು ಹೇಳಿದುವೂಂತ ನನಗೆ ಗೊತ್ತು."

"ಏನು ಹೇಳಿದುವಪ್ಪ?"

"ಅವನು ಹೋರಸ್ ಆಗ್ತಾನೆ ಅಂತ. ನನ್ನ ಹಾಗೆಯೇ, ನನ್ನ ಹಾಗೆಯೇ."

....ಮುಂದೆ ಸೈನೆ. ಎಷ್ಟು ಕಲ್ಲುಗಳು, ಕಲ್ಲು ಹಾಸುಗಳು!

ನೆಖೆನ್ ಆಸೆಯ ದೃಷ್ಟಿಯಿಂದ ಅವನ್ನು ನೋಡಿದ.

ಷೆನ್ನ ಕೇಳಿದ :

"ಜಾಣಗಳನ್ನು ಹೊರಗೆ ತೆಗೀಬೇಕೂಂತ ಆಸೆಯಾಗ್ತದಾ ?"

"ಹ್ಞ. ಒಂದು ದಿನ ಯಾವತ್ತಾದರೂ ಇಲ್ಲಿಗೆ ಬಂದೇನು. ಅನ್ಪು ವೀರನ, ಜನನಾಯಕರ ಬೃಹತ್ ಶಿಲ್ಪಗಳನ್ನು ಕಡೆದೇನು."

"ಆಗ ನಿಮ್ಮ ಜಾಣಗಳನ್ನು ಮಸೆದುಕೊಟ್ಟು ಅವರ ಕತೆ ಬರೀತಾ, ಹಾಡುಕಟ್ತಾ ನಾನಿಲ್ಲಿ ಕೂತ್ಕೋತೇನೆ ನಿಮ್ಮ ಜತೆ."

....ಇನ್ನೂ ಮುಂದೆ ಹೋದರೆ ನೀಲ ನದಿ ಧುಮ್ಮಿಕ್ಕುವ ಫಿಲೇ ದ್ವೀಪ. ದೋಣಿ ಪ್ರವಾಸದ ಅಂತ್ಯ.

ಎಡಕಾಲುವೆಯೊಂದನ್ನು ಬಟಾ ಅಂಬಿಗರಿಗೆ ತೋರಿಸಿದ.

"ಈ ಕಡೆ ಹೊರಳೋಣ. ಹಾಯಿ ಬಿಚ್ಚಿ. ಅವಸರವಿಲ್ಲ. ನಿಧಾನ ವಾಗಿ ಹೋಗೋಣ. ಬೆಳಕು ಹರಿಯುವಾಗ ನಾವು ಮಹಾಪ್ರಭು, ಮಹಾ ಅರ್ಚಕ—ಅಮಾತ್ಯರ—ಪಾಳೆಯಗಾರರ ದೇಶದಲ್ಲಿರೋದಿಲ್ಲ.

* * * *

ಬೆಳಗಾಯಿತು. ಅದು ನುಬಿಯ.

ಖ್ನೆಮ್‌ಹೊಟೆಪನ ಕಣ್ಣುಗಳ ಪಟ್ಟಿ ಬಿಚ್ಚಿದರು. ಕುರುಡು. ಆದರೆ ಗಾಯ ಗುಣವಾಗಿತ್ತು.

ಮತ್ತೂ ಮುಂದೆ ಹೋದರು. ಒಂದು ಹಳ್ಳಿ ಬಂತು.

"ಒಳಕಾಲುವೆಗಳೂ ಇವೆ. ಕೆಲ ಹಳ್ಳಿಗಳಿವೆ. ಬಳಸುದಾರಿ. ಮರಳು ಗಾಡನ್ನು ಹೀಗೆಯೇ ನೇರವಾಗಿ ದಾಟಿದರೆ ಹತ್ತಿರ. ಈ ಕಡೆ ನೆಲೆಸ್ಬೇಕೂಂತಿ ದ್ದೀರಾ ?"

"ಬೆಂಕಿ ಹಬ್ಬಿ ನಮ್ಮ ತಂಡದವರೆಲ್ಲಾ ತೀರಿಹೋದ್ರು. ದುಡಿದು ಬದುಕೋದಕ್ಕೆ ಯಾವ ನೆಲವಾದರೇನು ?"

"ಪಾಪ ! ಪಾಪ ! ಹೊಟ್ಟೆಗೆ ಏನಾದರೂ ಆಗಿದೆಯಾ ? ಹಸು ಗೂಸು ಬೇರೆ ಇದೆ...."

ಇವರು ಆತಿಥ್ಯ ಸ್ವೀಕರಿಸಿದರು.

"ನಡೆದು ಹೋದರೆ ಹಳ್ಳಿಗಳಿಗೆ ಎಷ್ಟು ದೂರ ?"

"ಒಂದು ಹಗಲಿನ ದಾರಿ."

"ಒಂದು ಉಪಕಾರವಾಗಬೇಕಲ್ಲ ? ಎರಡು ಕತ್ತೆ ಬೇಕು ವಿನಿಮಯಕ್ಕೆ ಈ ದೋಣಿ ಕೊಡ್ತೇವೆ."

ಆತ ಯೋಚಿಸಿದ. ಇನ್ನೂ ಕೆಲವರನ್ನು ಕರೆದು ಸಲಹೆ ಕೇಳಿದ.

ಕೊಟ್ಟಿಗೆಂಪಲ್ಲಿದ್ದ ಎರಡು ಕತ್ತೆಗಳನ್ನು ಬಿಚ್ಚಿಕೊಟ್ಟ.

ಬಾಣಂತಿಗೂ ಮಗುವಿಗೂ ಕತ್ತೆ. ಖ್ನೆಮ್‌ಹೊಟೆಪ್ ನಡೆಯುತ್ತೇನೆ ಎಂದ—ಈಟಿಯನ್ನು ಊರುಗೋಲು ಮಾಡಿಕೊಂಡು. ಬಟಾನ ಇಬ್ಬರು ಮಕ್ಕಳು, ಅಹೂರಾಳ ಮಗಳು, ರಾಮೆರಿಪ್‌ಟಾರಿಗೆ ಕತ್ತೆ ಸವಾರಿ ಎಂದು ಹಂಚಿಕೆ. ರಾಮೆರಿಪ್‌ಟಾ ಒಪ್ಪಲಿಲ್ಲ. ನಡೆಯುವ ಹಟ.

"ಬಹಳ ಆಯಾಸವಾದಾಗ ನನ್ನ ಹೆಗಲ ಮೇಲೆ ಕೂತ್ಕೊ. ಕತ್ತೆಗಿರೋವಷ್ಟೇ ಬುದ್ಧಿಯೇ ನನಗೆ ಕೂಡಾ," ಎಂದ ಬಟಾ.

ನೆಲೆಗೊಳ್ಳುವುದಕ್ಕೆ ಮುನ್ನ ಒಂದು ಆ ಹಗಲಿನ ಪಯಣ.

೧೮

ಎರಡು ತಿಂಗಳ ಬಳಿಕ, ಹರಿದ ನಡುವಸ್ತ್ರದ, ಭುಜದ ಮೇಲಿಂದ ಚಿಂದಿಚಾದರ ಇಳಿಬಿಟ್ಟಿದ್ದ, ಊರಿ ಊರಿ ಬುಡ ಜಜ್ಜಿ ಹೋಗಿದ್ದ ಪೆಪ್ಪೆರಸ್ ದಂಟು ಹಿಡಿದಿದ್ದ, ಸೊರಗಿದ ಮೈಯ, ತಲೆಯ ನರೆಗೂದಲು ನೀಳವಾಗಿ ಬೆಳೆದಿದ್ದ, ಅಷ್ಟೇ ನರೆತ ಗಡ್ಡ ಜೋಲಾಡುತ್ತಿದ್ದ ಮನುಷ್ಯನೊಬ್ಬ ಬಟಾ ಮತ್ತಿತರರು ನೆಲೆಸಿದ್ದ ತಾಣಕ್ಕೆ ಬಂದ.

ಆತ ಬಂದಾಗ ಬಟಾನೂ ಅವನ ಪತ್ನಿಯೂ ಅಹೂರಾ–ತಬುಬುವಾರೂ ಪುಟ್ಟದೊಂದು ಹೊಲದಲ್ಲಿ ರೆಂಟೆ ಹೊಡೆಯುತ್ತಿದ್ದರು.

ಬಿಸಿಲ ಮರೆಗೆಂದು ಕಟ್ಟಿದ್ದ ಚಪ್ಪರದ ಕೆಳಗೆ ಹುಡುಗರಿಗೆ ಮೆನ್ನ ಪಾಠ ಹೇಳಿಕೊಡುತ್ತಿದ್ದ.

ಕೊಂಡಗಳನ್ನು ತೋಡಿ ಕಂಬಗಳನ್ನು ನೆಟ್ಟು ಒಂದು ಮನೆ ಕಟ್ಟಲು ತನ್ನ ಹೆಂಡತಿಗೂ ನೆಜಮುಟ್‌ಗೂ ಖ್ನೆಮ್ ಹೊಟೆಪ್ ನೆರವಾಗುತ್ತಿದ್ದ.

ಇನ್ನೊಂದು ಚಪ್ಪರದ ಕೆಳಗೆ ನೆಖೆನ್ ಕುಳಿತು ಸಣ್ಣ ಸಣ್ಣ ಶಿಲಾ ಮೂರ್ತಿಗಳನ್ನು ಕೊರೆಯುವ ಕೆಲಸದಲ್ಲಿ ಮಗ್ನನಾಗಿದ್ದ—ಹುಲಿ, ಚಿರತೆ, ಸಿಂಹ, ನೀರಾನೆ, ಕುಳ್ಳ ಮನುಷ್ಯ, ಕುಣಿಯುವ ಹೆಣ್ಣು, ಕರಡಿ....

ಅಲ್ಲೇ ಮೂಲೆಯಲ್ಲಿ ಕುಳಿತು ನೀಳಕಡ್ಡಿಗಳಿಂದ ಒಂದು ತಟಿಕೆ ಹೆಣೆಯುತ್ತಿದ್ದಳು ಅನ್ಪುವಿನ ವಿಧವೆ.

ನೆಫರುರಾ ಆಕಾಶದ ಕೆಳಗೊಂದು ಒಲೆ ರಚಿಸಿ, ಕುಟ್ಟಿ ಪುಡಿ ಮಾಡಿದ ಹಿಟ್ಟನ್ನು ಒಂದು ಹಲಗೆಯಲ್ಲಿ ತಟ್ಟಿ ಕೆಂಡಗಳ ಮೇಲೆ ಅದನ್ನು ಬೇಯಿಸುತ್ತ ಕುಳಿತಿದ್ದಳು, ಅವರೆಲ್ಲರಿಗಾಗಿ.

ಸುಂಟರಗಾಳಿ ಬೀಸದಂತೆ ಮಣ್ಣಿನ ಗೋಡೆಗಳನ್ನು ರಚಿಸಿ, ತಾಳೆಯ ಸೋಗೆಗಳಿಂದ ಛಾವಣಿ ರಚಿಸಿದ್ದ ಕೊಠಡಿಯಲ್ಲಿ ನೆಫಿಸ್ ಇದ್ದಳು—ಹಸು ಗೂಸಿಗೆ ಮೊಲೆಯೂಡಿಸುತ್ತ.

ಅಪರಿಚಿತನೊಬ್ಬ ಬಂದನೆಂದು ಅವರಿಗೆ ಕುತೂಹಲ. ಅವರನ್ನು ಕಂಡೆನಲ್ಲಾ ಎಂದು ಆತನಿಗೆ ಹರ್ಷ.

"ಬಟಾ! ಖ್ನೆಮ್! ನೆಜಮುಟ್ ಅಕ್ಕಾ! ಅಕ್ಕ ತಬಬುವಾ!"

ಧ್ವನಿಯಿಂದ ಗುರುತು ಹಿಡಿದರು: ಬಡಗಿ ಸೆತ್‌ನಾ.

"ಓ ಸೆತ್‌ನಾ!"

—"ಓ ಓ!"

—"ಬಾ ಬಾಂಧವ!"

ಬೇರೆ ಬೇರೆ ಉದ್ಗಾರಗಳು. ಎಲ್ಲರೂ ಕೆಲಸ ಬಿಟ್ಟರು. ನೆಖೆನ್‌ನ ಚಪ್ಪರಕ್ಕೆ ಬಂದರು. ಒಂದು ಕಲ್ಲು ಸೆತ್‌ನಾಗೆ ಪೀಠವಾಯಿತು.

ಬಟಾನೆಂದ:

"ನಮ್ಮ ಶ್ರೇಷ್ಠ ಬಡಗಿಗೆ ಎಂಥ ಕುರ್ಚಿ ಕೊಡ್ತಿದ್ದೇವೆ ನೋಡು!"

ಸೆತ್‌ನಾ ಮುಖಕ್ಕೂ ಪಾದಗಳಿಗೂ ನೀರು ಹನಿಸಿಕೊಂಡ.

"ರಾತ್ರಿ ಎಲ್ಲಿದ್ದೆ?"

"ಒಂದು ಮರದ ಕೆಳಗೆ."

ನಾವು ಇಲ್ಲಿರೋದು ಹ್ಯಾಗೆ ಗೊತ್ತಾಯ್ತು?"

ಆನಂದೋದ್ವೇಗದಿಂದ ಒದ್ದೆಯಾದ ಕಣ್ಣುಗಳನ್ನು ಸೆತ್‌ನಾ ಒರೆಸಿಕೊಂಡ.

"ಒಂದು ತಿಂಗಳಾಯ್ತು ಊರು ಬಿಟ್ಟು. ಭಿಕ್ಷೆ ಬೇಡಲಿಲ್ಲ. ಅಲ್ಲಿ ಇಲ್ಲಿ ಸಣ್ಣ ಪುಟ್ಟ ಕೆಲಸ ಮಾಡ್ಕೊಟ್ಟು ರೊಟ್ಟಿ ಸಂಪಾದಿಸ್ತಾ ಸ್ನೈನೆ ತಲಪಿದೆ. ನೀರಾನೆ ಪ್ರಾಂತದವನೂಂತ ಯಾರಿಗೂ ಹೇಳಲಿಲ್ಲ. ನಮ್ಮಲ್ಲಿ ನಡೆದದ್ದು ಐಗುಪ್ತದಲ್ಲಿ ಈಗ ಎಲ್ಲರಿಗೂ ಗೊತ್ತು. ಒಂದು ರಾತ್ರೆ ದೋಣಿಕಾರರ ಜತೆ ಮಾತಾಡ್ತಿದ್ದಾಗ, ಎಡ ಕಾಲುವೇಲಿ ಒಂದು ಹಳ್ಳೀಲಿ ಯಾವುದೋ ಪರದೇಶಿ ಕುಟುಂಬ ಒಂದು ದೋಣಿ ಕೊಟ್ಟು ಎರಡು ಕತ್ತೆ ಕೊಡ್ತೂಂತ ತಿಳೀತು. ಮರದ ಸೂಕ್ಷ್ಮ ಬಿಟ್ಟು ಇನ್ನೇನು ಗೊತ್ತಾಗ್ತದೆ. ನನ್ನ ಈ ತಲೆಗೆ ? ಆದರೂ ಯೋಚ್ನೆ ಮಾಡಿ, ಆ ಕುಟುಂಬ ನಮ್ಮ ಕಡೇದೇ ಇರಬೇಕು ಅನ್ನೋ ತೀರ್ಮಾನಕ್ಕೆ ಬಂದೆ. ಆ ದಾರಿ ಹಿಡ್ದೆ. ದಾರಿ ತಪ್ತು. ಆದರೂ ಬಿಡಲಿಲ್ಲ. ಸಿಕ್ಕಿದ್ರಿ. ದೇವಾದಿಗಳಿಗೆಲ್ಲ ನಾನು ಧನ್ಯವಾದ ಅರ್ಪಿಸ್ಬೇಕು."

"ಖಿವಪ ಹರಿಸದೆ ಅದೆಂಥ ಧನ್ಯವಾದ ? ಆದರೆ ಅದಕ್ಕೆ ಆರು ತಿಂಗಳಾದರೂ ಕಾಯ್ಬೇಕು. ಬೀಜ ಬಿತ್ತಿ, ಯವೆ ಬೆಳೆಸಿ, ಧಾನ್ಯ ಅರೆದು, ಭಟ್ಟಿ ಇಳಿಸಬೇಕಲ್ಲ !" ಎಂದ ಬಟಾ.

ರಾಮೆರಿಪ್‌ಟಾನೆಂದ :

"ಅಷ್ಟು ಹೊತ್ತಿಗೆ ಖಿಪವದ ರುಚಿಯೇ ಮರೆತು ಹೋಗ್ತದೆ ಬಟಾ ಮಾವನಿಗೆ !"

"ನೀನಿದೀಯಲ್ಲ ಅಳಿಯ—ಶುರು ಮಾಡುವೆಯಂತೆ."

ನೆಜಮುಟ್ ಕೇಳಿದಳು :

"ಊರಿನ ಕಥೆ ಹೇಳು."

* * * *

ಮಹಾ ಅರ್ಚಕನ ಆಜ್ಞೆಯಂತೆ ಬಕಿಲ ಒಟ್ಟು ಹತ್ತು ಸಹಸ್ರ ಜನರನ್ನು ಸೆರೆಹಿಡಿದ. ಕಣ್ಣಿಗೆ ಬಿದ್ದ ದೋಣಿಗಳನ್ನೆಲ್ಲ ವಶಪಡಿಸಿಕೊಂಡು ಅವುಗಳಲ್ಲಿ ಬಂದಿಗಳನ್ನು ಮೆಂಫಿಸಿಗೆ ಸಾಗಿಸಿದ್ರು. ಇವರಲ್ಲಿ ಎರಡು ಸಹಸ್ರ ಮಕ್ಕಳು.

"ಹೆಮ್‌ಟೇನ ಮೊದಲ್ನೇ ದಿನವೇ ಹೊಡೆದು ಸಾಯಿಸಿದ್ರು." "ಅಯ್ಯೋ! ಅಯ್ಯೋ!" (ನಾಯಕರಿಗೆ ಬಿದ್ದ ಕನಸಿನ ನೆನಪು ಬಟಾನೆ.) ಪ್ರಮುಖರೆಲ್ಲ ರಾಜ ಬಂದಿಗಳು. ಅರಮನೆಯ ಕಾರಾಗೃಹಕ್ಕಂತೆ. ಬಟಾ ಮತ್ತು ಮೆನ್ನಯ್ಯ ಬೇಕೂಂತ ಬಹಳ ಹುಡುಕಿದ್ರು. ಶವಪೆಟ್ಟಿಗೆ ನಿರ್ಮಿಸಿಕೊಟ್ಟ ಬಡಗಿ ಸೆತ್‌ನಾಗಾಗಿ ಶೋಧನೆ ನಡೆಯಿತು. "ಒಳ ನಾಡಿಗೆ ಹೋದೆ. ಹಳ್ಳಿಯಿಂದ ಹಳ್ಳಿಗೆ ಅಲೆದೆ. ಬಕಿಲನೇ ಪ್ರಾಂತಪಾಲ ಅಂತ ಖಚಿತವಾದ್ಮೇಲೆ ತಲೆ ಮರೆಸಿಕೊಂಡು ಪ್ರಾಂತ ಬಿಟ್ಟೆ." ಗೇಬು ಕುಟುಂಬದ ಆಭರಣ ಇತ್ಯಾದಿ ಇಲ್ಲವೇ ಇಲ್ಲ ಎಂದು ಬಕಿಲ ಸಾಧಿಸಿ, ಅವನ್ನು ವಶಪಡಿಸಿಕೊಂಡ—ಸ್ವಂತಕ್ಕಾಗಿ. "ಸತೇಕ ನಖ್ತ್, ಸೆನ್‌ಉಸರ್ಟ್, ಹೆಜಿರೆ—ಎಲ್ಲ ವಾಪಸ್." ಅವರ ಮೆರೆ ದಾಟವೇ ಮೆರೆದಾಟ. ಆಪೆಟ್‌ನದಂತೂ ಭಾರೀ ಆರ್ಭಟ. "ಆದರೆ ಇವರೆಲ್ಲ ಬಕಿಲನಿಗೆ ಹೆದರ್ತಾರೆ." ಮಹಾ ಅರ್ಚಕರು ಒಳನಾಡಿನಲ್ಲಿ ಸಂಚರಿಸಿ, ಮೊಸಳೆ ಪ್ರಾಂತಕ್ಕೆ ಹೋದರು, ಧರ್ಮದಿಗ್ವಿಜಯಕ್ಕೆ. "ಈ ಸಲ ಸೈನ್ಯಕ್ಕೆ ಭರ್ತಿ ಆಗಲಿಲ್ಲ. ಆ ಕೆಲಸ ಬಕಿಲ ನಿಧಾನವಾಗಿ ಮಾಡ್ತಾನಂತೆ." ಊರು ಸುಡುವುದಕ್ಕೆ ಮುಂಚೆ ಹೊರಗೆ ಅಟ್ಟಿದ್ದ ರಾಸುಗಳಲ್ಲಿ ಕಾಲಂಶ ಭೂಮಾಲಿಕ ರಿಗೆ ಮುಕ್ಕಾಲಂಶ ರಾಜಗೃಹಕ್ಕೆ. "ಸ್ಮಾರಕ ಕಂಬ ಸುಟ್ರು. ಪುನಃ ರಾಜಗೃಹದ ಸುತ್ತಲೂ ಗೋಡೆ ಎಬ್ಬಿಸಿದ್ದಾರೆ. ಈ ಸಲ ಎರಡಾಳೆ ತ್ತರದ್ದು...." ಖ್ನೆಮ್‌ಹೊಟೆಪ್ ಮತ್ತು ಬಟಾ ಏನಾದರೂಂತ ಬಕಿಲ ಬಹಳ ಆಕ್ರೋಶ ಮಾಡಿದ. ತಪ್ಪಿಸಿಕೊಂಡು ಹೋಗಲು ಸಹಾಯ ಮಾಡಿರಬಹುದೆಂಬ ಸಂಶಯದ ಮೇಲೆ ಅವರದೇ ಹೇರು. ದೋಣಿಯ ನಾವಿಕರು, ಸೇವಕರು, ಸೈನಿಕರಿಗೆಲ್ಲ ನೂರು ನೂರು ಛಡಿ ಏಟು ಬಿತ್ತು. ನೆಫಿಸ್ ತಾಯಿ ಮತ್ತು ಪ್ರಮುಖರ ಪತ್ನಿಯರೆಲ್ಲ ಸುಟ್ಟು ಹೋಗಿರಬೇಕು ಅಂತ ಅಭಿಪ್ರಾಯ. ಸುಟ್ಟ ಮನೆಗಳಿಗೆ ಹೊಸ ಛಾವಣಿ ಹಾಕುತ್ತಿದ್ದಾರೆ. ಅಂತೂ ಪುನಃ ಆರಂಭವಾಗುತ್ತಿದೆ ದಾಸ್ಯ ಜೀವನ....

* * * *

ಬಡಗಿ ಸೆತ್‌ನಾ ಆ ಬಳಗದ ಒಬ್ಬನಾದ.
ವರ್ಷಗಳು ಕಳೆದರೂ ಶವಪೆಟ್ಟಿಗೆ ನಿರ್ಮಿಸುವ ಅಗತ್ಯ ಬೀಳಲಿಲ್ಲ.

ಮೆನ್ನ ಪೆಪ್ಪೈರಸ್ ಹಾಳೆಗಳನ್ನು ತರಿಸಿಕೊಂಡು, ನೀರಾನೆ ಪ್ರಾಂತದ ಕ್ರಾಂತಿಯ ಕಥೆಯನ್ನು ಬರೆದ. ಹಾಡುಗಳನ್ನು ರಚಿಸಿದ.

ಕೊಳಲು ಬಟಾನ ಕೈಗಳನ್ನು ಮತ್ತೆ ಅಲಂಕರಿಸಲಿಲ್ಲ. ಆದರೆ ಆತ ಹೊಸ ಗೀತಗಳ ಹಾಡುಗಾರನಾದ.

ಬಟಾನ ಒಬ್ಬ ಹುಡುಗ ಶಿಲ್ಪಿ ನೆಖೆನ್‌ನ ನೆಚ್ಚಿನ ಶಿಷ್ಯನಾದ.

ಮೆನೆಪ್‌ಟಾನ ಮಕ್ಕಳಿಬ್ಬರಿಗೂ ಖ್ನೆಮ್ ಹೊಟೆಪ್ ಶಸ್ತ್ರಾಭ್ಯಾಸ ಮಾಡಿಸಿದ.

ಆಗಾಗ್ಗೆ ಮೆನ್ನ ಹೇಳಿದ :

"ಕತ್ತಲಾದ ಮೇಲೆ ಬೆಳಕು ಹರೀತದೆ. ಇದು ಸಾಮಾನ್ಯ ಅಂತ ತೋರುವ ಅಸಾಮಾನ್ಯ ವಿಷಯ. ನೆನಪಿಡಿ."

---

